15(i4)  2225 xxx

# ಶ್ರೀ

# ಭಾಷ್ಯಾಮೃತಸಾರ

THE ACADEMY OF SANSKRIT RESEARCH
MELKOTE
KARNATAKA STATE



ಬರೆದವರು :
ವೇದಾನ್ತ ವಿದ್ವಾನ್, ವಿದ್ವನ್ಮಣಿ, ವೇದಾನ್ತಸಾರಜ್ಞ, ಕೋಟಿಕನ್ಯಾದಾನಂ
**ಕೆ. ಎಸ್. ಕೃಷ್ಣತಾತಾಚಾರ್**, ಬಿ.ಎ.

ಪ್ರಥಮ ಮುದ್ರಣ : 1983

ಪ್ರತಿಗಳು : 1,000

**ಪುಸ್ತಕ ದೊರೆಯುವ ಸ್ಥಳ :**
**ಕೆ. ಎಸ್. ಕೃಷ್ಣತಾತಾಚಾರ್**
62, 7ನೇ ಮುಖ್ಯ ರಸ್ತೆ, 2ನೇ ಬ್ಲಾಕ್
ಜಯನಗರ, ಬೆಂಗಳೂರು-560 011

ಶ್ರೀಃ

## ದಾನಿಗಳು

| ಶ್ರೀಯುತರುಗಳಾದ | ರೂ. |
|---|---|
| ಎಂ. ಆರ್. ಸಂಪತ್ಕುಮಾರ ಭಟ್ಟಾಚಾರ್ಯ | 1000 |
| ಗಾಡಿ ಪಾರ್ಥಸಾರಥಿ ಶೆಟ್ಟಿ | 1000 |
| ಭೂಪಾಲಂ ಕುಪ್ಪಯ್ಯ ಶೆಟ್ಟಿ | 1000 |
| ವೈ. ಎಚ್. ಕುಟುಂಬದವರಿಂದ | 1000 |
| ವಿ. ಆರ್. ವಸಂತ ರಾಘವ ಭಟ್ಟರ್ | 1000 |
| ಸಂಪಂಗಿ ರಾಮಯ್ಯ ಶೆಟ್ಟಿ | 1000 |
| ವಿಜಯಂ ಕೃಷ್ಣಮೂರ್ತಿ | 1000 |
| ಕೆ. ಎಸ್. ವಾಸುದೇವ ತಾತಾಚಾರ್ | 1000 |
| ಎಂ. ಆರ್. ಶ್ರೀನಿವಾಸ ಭಟ್ಟರ್ | 500 |
| ಎಲ್. ಎನ್. ಶ್ರೀನಿವಾಸ ಭಟ್ಟರ್ | 500 |
| ಖೋಡೆ ಕೃಷ್ಣಾ ಸಾ | 500 |
| ಬಿ. ಆರ್. ರಂಗನಾಥ ಭಟ್ಟರ್ | 500 |
| ಕೆ. ಎಸ್. ಚಕ್ರಪಾಣಿ | 250 |
| ರಂಗರಾಜು ಶೆಟ್ಟಿ | 250 |

# ಶ್ರೀ ಭಾಷ್ಯಾಮೃತಸಾರ

WITH BEST COMPLIMENTS
From · Indian Books Centre

INDIAN BOOKS CENTRE
Book-Sellers
40/5 Shakti Nagar,
DELHI-110 007 (India)

ಬರೆದವರು :

ವೇದಾನ್ತ ವಿದ್ವಾನ್, ವಿದ್ವನ್ಮಣಿ, ವೇದಾನ್ತಸಾರಜ್ಞ, ಕೋಟಿಕನ್ಯಾದಾನಂ

**ಕೆ. ಎಸ್. ಕೃಷ್ಣತಾತಾಚಾರ್, ಬಿ.ಎ.**

ಸಂಪಾದಕರು :

ಆಗಮ ವಿದ್ವಾನ್, ತಿರುಮಲೆ ದೇವಸ್ಥಾನದ ಆಸ್ಥಾನ ವಿದ್ವಾನ್,
ಆಗಮತ್ರಯ ಮಂಡಲಿ ಸಂಚಾಲಕರು

**ಎಂ. ಆರ್. ಸಂಪತ್‌ಕುಮಾರ ಭಟ್ಟಾಚಾರ್ಯ**

ಪ್ರಕಾಶಕರು :

**ಶ್ರೀಮತಿ ರೋಸ್ ಚಿಂತಾಮಣಿ**

೪೪೭, ೩೩ನೇ ಕ್ರಾಸ್, ೪ನೇ ಬ್ಲಾಕ್, ಜಯನಗರ, ಬೆಂಗಳೂರು–೫೬೦ ೦೧೧

SRI BHASHYAMRITSARA

By Vedanta Vidwan, Vidvanmani, Vedanta Saragnya K.S. Krishnatatachar, B.A.
Bangalore

pp Lxvi + 408

© K. S. KRISHNATATACHAR

*Publisher:*

Mrs. ROSE CHINTAMANI

477, 33rd Cross, 4th Block, Jayanagar, Bangalore-560 011




Price : Rs. 57-50

Printed at : THE EASTERN PRESS, BANGALORE-560 029.

ಶ್ರೀಃ

# ಸಂಪಾದಕರ ಮಾತು

"ಯಥಾಲೋಕಂ ಯಥಾವೇದಂ ಲೌಕಿಕೇ ವೈದಿಕೇಽಪಿವಾ ।
ಯೋ ವಕ್ತಾ ಸಪರಿಗ್ರಾಹ್ಯಃ ಪ್ರಾಕ್ತನೋಽದ್ಯತನೋಽಪಿವಾ ॥"

ಎಂಬ ಶ್ರೀನ್ಯಾಯ ಪರಿಶುದ್ಧಿ ಶ್ರೀಸೂಕ್ತಿಯಂತೆ ಲೋಕ-ವೇದಗಳೆರಡಕ್ಕೂ ಅನುಕೂಲವಾದುದೆಂದು ಸುವಿದಿತವಾದ ಮತ ಭಗವದ್ರಾಮಾನುಜೀಯವೆಂದು ಪ್ರಸಿದ್ಧವಾದ ಶ್ರೀ ವಿಶಿಷ್ಟಾದ್ವೈತ ಮತ. ಈ ಸಿದ್ಧಾಂತದ ವಿಜಯ ಧ್ವಜವಾಗಿ ಬೆಳಗುತ್ತಿರುವುದು ಈ ಆಚಾರ್ಯರು ರಚಿಸಿರುವ ಶ್ರೀ ಭಾಷ್ಯವೆಂಬ ಅತ್ಯುಜ್ವಲ ಕೃತಿ. "ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ" --ಎಂದು ಶ್ರೀಗೀತಾಚಾರ್ಯನು ಗಾನ ಮಾಡಿರುವ ಪವಿತ್ರ ಜ್ಞಾನದ ವಿಷಯದಲ್ಲಿ ಇದರ ಮಹಿಮೆ ಅಪರಿಚ್ಛೇದ್ಯ. ಮಹಾಮಹಾ ಜ್ಞಾನಿಗಳಿಗೆ ಅವರವರ ಜ್ಞಾನಕ್ಕೆ ತಕ್ಕಂತೆ ಅನುಭಾವ್ಯವಾದುದಿದು. ಇಂತಹ ಅದ್ಭುತ ಗ್ರಂಥದ ಮುಖ್ಯ ಪ್ರಮೇಯಗಳನ್ನು ಸಂಕ್ಷೇಪವಾಗಿಯಾದರೂ ತಿಳಿಯಬಯಸುವ ಇತರರಿಗೂ ಯಥಾಶಕ್ತಿ ಪರಿಚಯ ಸೌಕರ್ಯಕ್ಕಾಗಿ ಏರ್ಪಟ್ಟಿರುವುದು ಪ್ರಕೃತ ಶ್ರೀ ಭಾಷ್ಯಾಮೃತಸಾರವೆಂಬ ಕೃತಿ. ಇದರ ಕರ್ತೃ—ಭಗವತ್ಪ್ರಸಾದಿತ ಪೂರ್ವಾಚಾರ್ಯ ಶ್ರೀಸೂಕ್ತಿ ಸಂಶೀಲನರಾದ—ವಿದ್ವನ್ಮಣಿ ವೇದಾಂತ ಸಾರಜ್ಞ ಕೋಟಿಕನ್ಯಾದಾನಂ—ಶ್ರೀ ಕೃಷ್ಣತಾತಾಚಾರ್ಯ ಸ್ವಾಮಿಗಳು.

"ನಾಥೋಪಜ್ಞಂ ಪ್ರವೃತ್ತಂ"—ಎಂದು ಪ್ರಖ್ಯಾತವಾದ ಮಹಾ ಕುಲದಲ್ಲಿ ಜನಿಸಿ, "ವಿದ್ಯಯಾ ಜನ್ಮನಾ ಚ" ಎಂದು ಉಭಯ ವಿಧಗಳಿಂದಲೂ ಆ ಸದಾಚಾರ್ಯ ಪರಂಪರೆಯಲ್ಲಿ ಬೆಳೆದು ಬಂದಿರುವ ವೈಶಿಷ್ಟ್ಯ ಇವರದು. "ಅಧ್ಯಾತ್ಮಗ್ರಂಥನಿರ್ಮಾಣಂ, ಪಾತ್ರೇಷು ಪ್ರತಿಪಾದನಂ", —ಎಂದು ಸ್ವಾಮಿದತ್ತವಾದ ಶ್ರೇಷ್ಠ ಸ್ವನಿಷ್ಠೆಯಲ್ಲಿಯೇ ಇವರಿಗೆ ಪ್ರಾವಣ್ಯ. ಇದರ ಫಲವಾಗಿ ಹೊರಟುಬಂದಿರುವ ಸತ್ಕೃತಿಗಳಲ್ಲಿ ಪ್ರಸಕ್ತ ಗ್ರಂಥವೂ ಒಂದು. ನಿವೃತ್ತಿಮಾರ್ಗೈಕ ನಿರತರಾಗಿ ಪ್ರವೃತ್ತಿ ಮಾರ್ಗಾವಲಂಬಿಯಾದ ಆರ್ಥಿಕ ವ್ಯವಹಾರದಲ್ಲಿ ತಲೆಯಿಡದವರಾದ್ದರಿಂದ ಈ ಕೃತಿ ಇವರ ಹಸ್ತಪ್ರತಿ ನಿರ್ಮಾಣದೊಂದಿಗೇ ಕೆಲವು ಕಾಲ ನಿಂತುಹೋಗಿದ್ದಿತು.

ಕರ್ತೃವೈಲಕ್ಷಣ್ಯ, ವಿಷಯ ವೈಲಕ್ಷಣ್ಯಗಳುಳ್ಳ ಈ ಕೃತಿ ಹೀಗೆ ಬೆಳಕಿಗೇ ಬರದಿರುವುದು.-

"ಸರ್ವದೇಶ ದಶಾಕಾಲೇಷ್ವವ್ಯಾಹತ ಪರಾಕ್ರಮಾ ।
ರಾಮಾನುಜಾಚಾರ್ಯ ದಿವ್ಯಾಜ್ಞಾ ವರ್ಧತಾಮಭಿ ವರ್ಧತಾಂ ॥"—ಎಂದು

ಪೂರ್ವರು ಮಾಡಿರುವ ಮಂಗಳಾಶಾಸನಕ್ಕೆ ದೊಡ್ಡ ವ್ಯತಿರೇಕ ಮತ್ತು ತದೀಯ ಸಮಾಜಕ್ಕೂ ನಷ್ಟ. ಇದರ ಪ್ರಕಟನಾದಿ ಪುಣ್ಯ ಕಾರ್ಯಕ್ಕೆ ಯಾರಾದರೂ ಮುಂದೆ ಬಂದೆರಗಿದಲ್ಲಿ, ಈಗಿನ ಸನ್ನಿವೇಶದಲ್ಲಿ ಬಹು ದ್ರವ್ಯವ್ಯಯಸಾಧ್ಯವಾದ ಇದಕ್ಕೆ ತದೀಯ ಮತ್ತು ಇತರ ಮಹನೀಯರ ಬಲವೂ ನೆರವೂ ದೊರಕದಿರದೆಂಬ ಸುದೃಢ ಭರವಸೆಯಿಂದ, ತದೇಕ ದೃಷ್ಟಿಯಿಂದ ನಾವಿಬ್ಬರು ಮೂವರು ಕೂಡಿ ಆಚಾರ್ಯರ ಅನುಮತಿ ಪಡೆದು ಈ ಸಾಹಸ ಕಾರ್ಯಕ್ಕೆರಗಲು ನಿಶ್ಚಯಿಸಿದೆವು. ನಮ್ಮೊಳಗೆ ಒಬ್ಬರಾದ, ಅಡ್ವೊಕೇಟ್, ಶ್ರೀಮಾನ್ ಸಿ. ಬಿ. ಶ್ರೀನಿವಾಸನ್‌ರವರ ಮುಂದಾಳುತನದಿಂದ ಇವರಿಗೆ ಸೌಲಭ್ಯವಿರುವ ಇಲ್ಲಿಯ 'ಈಸ್ಟರ್ನ್ ಪ್ರೆಸ್'ನ ಮುಖ್ಯಸ್ಥರಾದ ಶ್ರೀಮತಿ ರೋಸ್ ಚಿಂತಾಮಣಿಯವರ ಉದಾರ ಪುರಸ್ಕಾರ ದೊರಕಿ ಅವರ ಪ್ರೆಸ್‌ನಲ್ಲಿಯೇ ಈ ಗ್ರಂಥದ ಮುದ್ರಣಾದಿ ಸಕಲ ಕಾರ್ಯಗಳೂ ಮುದ್ದಾಗಿ

ಸಾಗಿ ಈಗಿನ ಪ್ರಕಾಶನ ಸಮಾರಂಭಕ್ಕೆ ಅನುಕೂಲಿಸಿತು. ನಮ್ಮ ಕೋರಿಕೆಯ ಮೇರೆ ಶ್ರೀಮತಿಯವರು ತಾವು ಇದಕ್ಕೆ ಪ್ರಕಾಶಕರಾಗಲೂ ಸಮ್ಮತಿಸಿದರು. ಇದಕ್ಕಾಗಿ ಇವರಿಗೂ ಮತ್ತು, ಈ ಮಹತ್ಕಾರ್ಯದಲ್ಲಿ ಅನ್ವಯಿಸಿದ ಪ್ರೆಸ್‌ನವರೆಲ್ಲರಿಗೂ ಕೂಡ ನಾವು ಚಿರಋಣಿಗಳು.

ನಮ್ಮ ಕೋರಿಕೆಯ ಮೇರೆ ಇಷ್ಟೊಂದು ಕಾರ್ಯಕಲಾಪಗಳನ್ನು ಭಾರದಿಂದ ವಹಿಸಿಕೊಂಡು ಸಮರ್ಪಕವಾಗಿ ನಡೆಸಿಕೊಟ್ಟುದಕ್ಕಾಗಿ ಮುದ್ರಣಾಲಯಕ್ಕೆ ನಮ್ಮಿಂದ ಸಂದಾಯವಾಗಬೇಕಾದ ಹಣವನ್ನು ಬೇಗ ಪಾವತಿ ಮಾಡಬೇಕಾದುದು ನಮ್ಮ ಆದ್ಯಕರ್ತವ್ಯ. ಇದಕ್ಕೆ ನಮ್ಮ ಸದಸ್ಯರವರೆಲ್ಲರ ಉದಾರ ನೆರವನ್ನು ಈ ಮೂಲಕ ಕೋರಲಾಗಿದೆ.

"ರಾಮಾನುಜಾಚಾರ್ಯ ದಿವ್ಯಾಜ್ಞಾ ಪ್ರತಿವಾಸರಮುಜ್ಜ್ವಲಾ ।
ದಿಗಂತ ವ್ಯಾಪಿನೀ ಭೂಯಾತ್ ಸಾಹಿಲೋಕ ಹಿತೈಷಿಣೀ॥"

ಇತಿ,

31–3–1983

M. R. ಸಂಪತ್ಕುಮಾರಭಟ್ಟಾಚಾರ್ಯ
ಸಂಪಾದಕ

## ಶ್ರೀ ವಿಶಿಷ್ಟಾದ್ವೈತ ದರ್ಶನ ಸ್ಥಾಪನಾಚಾರ್ಯರಾದ ಭಗವದ್ರಾಮಾನುಜರು



ಪುಣ್ಯಾಂ ಭೋಜವಿಕಾಸಾಯ ಪಾಪಧ್ವಾನ್ತಕ್ಷಯಾಯ ಚ ।
ಶ್ರೀಮಾನ್ ಆವಿರಭೂದ್ಭೂಮೌ ರಾಮಾನುಜ ದಿವಾಕರಃ ॥

# ನಿವೇದನೆ

ನಮ್ಮ ಪೂಜ್ಯ ಗುರುಗಳಾದ ಶ್ರೀ ಕೃಷ್ಣತಾತಾಚಾರ್ಯ ಸ್ವಾಮಿಗಳವರು ತಾವು ಬರೆದಿರುವ 'ಶ್ರೀ ಭಾಷ್ಯಾಮೃತಸಾರ'ವೆಂಬ ಈ ಕೃತಿಯ ಬಗೆಗೆ ಎರಡು ಮಾತನ್ನು ಬರೆಯಬೇಕೆಂದು ಅಪ್ಪಣೆ ಮಾಡಿದುದು ನನ್ನನ್ನು ಅಧೀರನನ್ನಾಗಿಸಿದೆ. ಅವರ ಅಪ್ಪಣೆಯನ್ನು ಮೀರಲಾಗದ ಕಾರಣ ಈ ಎರಡು ಮಾತುಗಳನ್ನು ವಿನಂತಿಸುತ್ತಿದ್ದೇನೆ.

'ಶಾರೀರಕ ಸೂತ್ರ'ಗಳೆಂದೂ 'ನಯ ಸೂತ್ರ'ಗಳೆಂದೂ ವಿಖ್ಯಾತವಾದ ಬ್ರಹ್ಮಸೂತ್ರಗಳು ವೇದಾಂತ ದರ್ಶನದ ಮೂರು ಪರಮಾಧಾರಗಳಲ್ಲಿ ಒಂದಾಗಿ 'ಸೂತ್ರಪ್ರಸ್ಥಾನ'ವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇದನ್ನು ರಚಿಸಿದ ಬಾದರಾಯಣರೂ ಕೃಷ್ಣದ್ವೈಪಾಯನ ವ್ಯಾಸರೂ ಒಬ್ಬರೇ ಎಂದು ಸಾಂಪ್ರದಾಯಿಕರೆಲ್ಲರೂ ನಂಬಿದ್ದಾರೆ. ಶ್ರುತಿ ಮತ್ತು ಸ್ಮೃತಿಗಳ ಪ್ರಮಾಣದೊಡನೆ' ಉಪನಿಷದರ್ಥಗಳನ್ನು ಅನುಮಾನ ಪ್ರಮಾಣದ ಆಧಾರದ ಮೇಲೆಯೂ ಸ್ಥಾಪಿಸುತ್ತವೆ ಈ ಸೂತ್ರಗಳು. ಒಂದೊಂದು ಸೂತ್ರವೂ ಸಹ ಪಕ್ಷ, ಸಾಧ್ಯ, ಹೇತು ಇವುಗಳನ್ನು ಸೂಚಿಸುವುದಾಗಿ ಒಂದೊಂದು ತಾರ್ಕಿಕ ಪ್ರಯೋಗವೇ ಆಗಿದೆ. ವೇದಾಂತ ದರ್ಶನವನ್ನು ಕುರಿತಂತೆ ರಚಿತವಾದ ಸೂತ್ರಗಳಲ್ಲಿ ನಮಗೆ ಉಪಲಬ್ಧವಾಗಿರುವುದು ಬಾದರಾಯಣರ 'ಬ್ರಹ್ಮಸೂತ್ರ'ಗಳು ಮಾತ್ರವೇ. ಈ ಸೂತ್ರಗಳನ್ನು ಎಲ್ಲ ವೇದಾಂತಿಗಳೂ ಪರಮ ಪ್ರಮಾಣವೆಂದು ಅಂಗೀಕರಿಸಿದ್ದಾರೆ. ಇವುಗಳಿಗೆ ಭಾಷ್ಯಗಳನ್ನು ರಚಿಸಿ ತಮ್ಮ ತಮ್ಮ ಸಿದ್ಧಾಂತಗಳನ್ನೇ ಸೂತ್ರಗಳು ಪ್ರತಿಪಾದಿಸುವುವೆಂದು ಸಮರ್ಥಿಸಿದ್ದಾರೆ.

ಬ್ರಹ್ಮಸೂತ್ರಗಳಿಗೆ ಬಹಳ ಹಿಂದಿನ ಕಾಲದಿಂದಲೂ ಅನೇಕರು ಭಾಷ್ಯಗಳನ್ನೂ ವೃತ್ತಿಗಳನ್ನೂ ಬರೆದಿದ್ದರೆಂದು ತಿಳಿದುಬರುತ್ತದೆ. ಈಗ ಉಪಲಬ್ಧವಾಗಿರುವ ಭಾಷ್ಯಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾದುದು ಶ್ರೀ ಶಂಕರಾಚಾರ್ಯರ ಭಾಷ್ಯ. ಅವರು ತಮಗೂ ಹಿಂದಿನವರಾದ ಒಬ್ಬರು ವೃತ್ತಿಕಾರರನ್ನೂ, ದ್ರಾವಿಡಾಚಾರ್ಯರನ್ನೂ ಉಲ್ಲೇಖಿಸುತ್ತಾರೆ. ಶ್ರೀಮದ್ಯಾಮುನಾಚಾರ್ಯರು ತಮ್ಮ ಆತ್ಮಸಿದ್ಧಿ ಗ್ರಂಥದ ಆರಂಭದಲ್ಲಿ ಅನೇಕ ಪ್ರಾಚೀನ ಭಾಷ್ಯಕಾರರ ಹೆಸರನ್ನು ತಿಳಿಸಿದ್ದಾರೆ. "ಯದ್ಯಪಿ ಭಗವತಾ ಬಾದರಾಯಣೇನ ಇದಮರ್ಥಾನ್ಯೇವ ಸೂತ್ರಾಣಿ ಪ್ರಾಣೀತಾನಿ । ವಿವೃತಾನಿಚ ತಾನಿ ಪರಿಮಿತಗಂಭೀರಭಾಷಿಣಾ ದ್ರಮಿಡಭಾಷ್ಯಕೃತಾ । ವಿಸ್ತೃತಾನಿಚ ತಾನಿ ಗಂಭೀರನ್ಯಾಯಸಾಗರ ಭಾಷಿಣಾ ಭಗವತಾ ಶ್ರೀವತ್ಸಾಂಕಮಿಶ್ರೇಣಾಪಿ। ತಥಾಪಿ ಆಚಾರ್ಯ ಟಂಕ ಭರ್ತೃ ಪ್ರಪಂಚ–ಭರ್ತೃಮಿತ್ರ–ಭರ್ತೃಹರಿ–ಬ್ರಹ್ಮದತ್ತ–ಶಂಕರ–ಶ್ರೀವತ್ಸಾಂಕ–ಭಾಸ್ಕರಾದಿ ವಿರಚಿತ ಸಿತಾಸಿತ ವಿವಿಧ ನಿಬಂಧನ ಶ್ರದ್ಧಾ ವಿಪ್ರಲಬ್ಧ ಬುದ್ಧಯಃ"—ಎಂದು ತಮಗಿಂತ ಹಿಂದಿನವರಾದ ವಿವಿಧ ಸಂಪ್ರದಾಯಗಳ ಭಾಷ್ಯಕಾರರುಗಳ ಬಗೆಗೆ ಸೂಚಿಸಿದ್ದಾರೆ. ಭಗವದ್ರಾಮಾನುಜರು ವೇದಾರ್ಥ ಸಂಗ್ರಹದಲ್ಲಿ— 'ಭಗವದ್ಬೋಧಾಯನ–ಟಂಕ ದ್ರಮಿಡ–ಗುಹದೇವ–ಕಪರ್ದಿ–ಭಾರುಚಿ ಪ್ರಭೃತ್ಯವಿಗೀತ ಶಿಷ್ಟಪರಿಗೃಹೀತ ಪುರಾತನ ವೇದ ವೇದಾಂತ ವ್ಯಾಖ್ಯಾನ ಸುವ್ಯಕ್ತಾರ್ಥ ಶ್ರುತಿನಿಕರ ದರ್ಶಿತೋಽಯಂ ಪಂಥಾಃ' ಎಂದು ನಿರೂಪಿಸಿ ಈ ಆಚಾರ್ಯರುಗಳ ಮತಕ್ಕನುಸಾರವಾಗಿ ತಾವು ವಿವರಿಸಿರುವುದಾಗಿ ತಿಳಿಸಿದ್ದಾರೆ. ಇದೆಲ್ಲದರಿಂದ ಈ ಸೂತ್ರಗಳು ಭೇದಾಭೇದಾದಿ ಸಕಲ ಸಿದ್ಧಾಂತಗಳವರಿಗೂ ಮಾನ್ಯವಾಗಿದ್ದವೆಂಬುದು ತಿಳಿದುಬರುತ್ತದೆ.

ಶ್ರೀ ಶಂಕರಾಚಾರ್ಯರ ಭಾಷ್ಯವು ನಿರ್ವಿಶೇಷಾದ್ವೈತವನ್ನು ಸಮರ್ಥಿಸುತ್ತದೆ. ಪ್ರಪಂಚವನ್ನು ತೋರಿಕೆ ಎಂದು ಹೇಳಿ ಬ್ರಹ್ಮಾತ್ಮೈಕ್ಯಜ್ಞಾನದಿಂದಲೇ ಮೋಕ್ಷವೆಂದು ತಿಳಿಸುತ್ತದೆ. ಬ್ರಹ್ಮಸೂತ್ರಗಳು ಈ ಸಿದ್ಧಾಂತವನ್ನೇ ಪ್ರತಿಪಾದಿಸುತ್ತವೆ ಎಂದು ಅವರು ಹೇಳಿದುದು ಅನೇಕ ವೇದಾಂತಿಗಳಿಗೆ

ಒಪ್ಪಿಗೆಯಾಗಲಿಲ್ಲ. ಭಾಸ್ಕರರ ಭಾಷ್ಯವಾದರೋ ಭೇದಾಭೇದವಾದವನ್ನು ಪ್ರತಿಪಾದಿಸುತ್ತದೆ, ಜಗತ್ತಿನ ಸತ್ಯತ್ವವನ್ನು ಅಂಗೀಕರಿಸಿ ಯಾವುದೋ ಉಪಾದಿಯ ಕಾರಣ ಬ್ರಹ್ಮವು ಜೀವನಾಗಿರುವ ನೆಂದು ಹೇಳಿ ಮೋಕ್ಷಾವಸ್ಥೆಯಲ್ಲಿ ಜೀವಬ್ರಹ್ಮೈಕ್ಯವೆಂದು ಸಾರಿ, ಕರ್ಮಜ್ಞಾನ ಸಮುಚ್ಚಯವು ಮೋಕ್ಷೋಪಾಯವೆಂದು ನಿರೂಪಿಸುತ್ತದೆ ವೇದೋಪದೇಶಕ್ಕನುಸಾರವಾಗಿ ಬಹಳ ಹಿಂದಿನ ಕಾಲದಿಂದಲೂ ಬಕ್ತಿ ಪಂದವು ಬೆಳೆದು ಬರುತ್ತಾ ಇದ್ದು ಭಗವಂತನಲ್ಲಿ ಅನನ್ಯವಾದ ಭಕ್ತಿಯನ್ನು ಮಾಡುವುದೇ ಮೋಕ್ಷಕ್ಕೆ ಮಾರ್ಗವೆಂಬುದನ್ನು ತೋರಿಸಿಕೊಡುತ್ತಾ ಇದ್ದುದನ್ನು ಈ ಮೇಲಿನ ಸಂಪ್ರದಾಯಗಳು ಎಣಿಸಲಿಲ್ಲ ಇತಿಹಾಸ, ಪುರಾಣಗಳು ವೇದಾರ್ಥವನ್ನು ವಿಶದೀಕರಿಸುವುವಾಗಿ ಆ ವೇದಗಳ ಪರಮಾರ್ಥವಾದ ಭಕ್ತಿಮಾರ್ಗವನ್ನು ಪ್ರತಿಪಾದಿಸುತ್ತವೆ ಆಗಮಗಳೂ ಸಹ ಗಮನಾರ್ಹವಾದ ರೀತಿಯಲ್ಲಿ ಜೀವ–ಪರಮರ ಬೇದವನ್ನೂ ಆ ಪರಮಾತ್ಮನಲ್ಲಿ ಮಾಡುವ ಭಕ್ತಿ ಅದವಾ ಶರಣಾಗತಿ ಮೋಕ್ಷೋಪಾಯವೆಂಬುದನ್ನೂ ನಿರೂಪಿಸುತ್ತವೆ ಭಕ್ತಿ ಪರವಶರಾದ ಆಳ್ವಾರರು ಗಳು ತಮ್ಮ ದಿವ್ಯಾನುಬವಗಳನ್ನು ತಮ್ಮ ದಿವ್ಯ ಪ್ರಬಂಧಗಳಲ್ಲಿ ಹೇಳಿಕೊಂಡಿದ್ದಾರೆ. ಇವೆಲ್ಲವೂ ಉಪನಿಷದರ್ಥಗಳಿಗನುಗುಣವಾಗಿಯೇ ಇರುತ್ತಿರುವ ಕಾರಣ ಇವುಗಳಿಗನುಸಾರವಾಗಿ ಉಪನಿಷದ-ರ್ಥಗಳನ್ನು ನಿಶ್ಚಯಿಸುವುದು ಯುಕ್ತವಾಗುವುದು ಆಗಮಗಳು, ಇತಿಹಾಸ ಪುರಾಣಗಳು, ಯೋಗಿಗಳ ದಿವ್ಯಾನುಬವಗಳು, ಅವಿಚ್ಛಿನ್ನವಾದ ಪರಂಪರೆಯಿಂದ ಬಂದ ಸಂಪ್ರದಾಯಗಳು ಇವುಗಳೆಲ್ಲವನ್ನೂ ಸಮನ್ವಯಗೊಳಿಸಿ ಬ್ರಹ್ಮಸೂತ್ರಗಳಿಗೆ ಸಮರ್ಥವೂ ಸಮಗ್ರವೂ ಆದ ಬಾಷ್ಯವೊಂದರ ರಚನೆ ಆಗ ಬೇಕೆಂಬ ಹೆಬ್ಬಯಕೆ ಶ್ರೀಮದ್ಯಾಮುನಾಚಾರ್ಯರವರಿಗೆ ಇತ್ತು ಆ ಆಶಯವನ್ನು ಭಗವದ್ರಾಮಾನುಜರು ಪೂರ್ಣಗೊಳಿಸಿ ಶ್ರೀಭಾಷ್ಯವನ್ನು ನಿರ್ಮಾಣ ಮಾಡಿದರು

ಬ್ರಹ್ಮಸೂತ್ರಗಳು ಅತ್ಯಂತ ದುರವಗಾಹವೂ ಗೂಡವೂ ಆದವು ಕೆಲವು ಸೂತ್ರಗಳನ್ನು ಬಿಟ್ಟರೆ ಉಳಿದವುಗಳು ವಿವೇಚಿಸುವ ವಿಷಯವಾವುದು, ಅಲ್ಲಿ ಪ್ರಸ್ತುತವಾಗಿರುವ ವಿಷಯ ವಾಕ್ಯ ಯಾವುದು, ಅವುಗಳಿಗಿರುವ ಸಂಗತಿ ಏನು ಎಂಬುವುದನ್ನು ಭಾಷ್ಯ ಸಂಪ್ರದಾಯದ ಅರಿವಿಲ್ಲದೆ ತಿಳಿಯುವುದು ಕಷ್ಟಕರ ಅವಿಚ್ಛಿನ್ನವಾಗಿ ಬಂದ ವ್ಯಾಖ್ಯಾನ ಸಂಪ್ರದಾಯದ ಸಹಾಯದಿಂದಲೇ ಈ ಸೂತ್ರಗಳನ್ನು ಅರ್ಥೈಸಬೇಕು ಇಂಥ ದೃಢವಾದ ಸಂಪ್ರದಾಯವನ್ನು ತಾವು ಅನುಸರಿಸಿರುವುದಾಗಿ ರಾಮಾನುಜರು ಶ್ರೀಬಾಷ್ಯದ ಉಪಕ್ರಮದಲ್ಲಿಯೇ—'ಭಗವದ್ಬೋಧಾಯನ ಕೃತಾಂ ವಿಸ್ತೀರ್ಣಾಂ ಬ್ರಹ್ಮಸೂತ್ರ ವೃತ್ತಿಂ ಪೂರ್ವಾಚಾರ್ಯಾಃ ಸಂಚಿಕ್ಷಿಪುಃ । ತನ್ಮತಾನುಸಾರೇಣ ಸೂತ್ರಾಕ್ಷರಾಣಿ ವ್ಯಾಖ್ಯಾಸ್ಯಂತೇ ।' ಎಂದು ತಿಳಿಸುತ್ತಾರೆ.

ಬ್ರಹ್ಮಸೂತ್ರಗಳನ್ನು ಕುರಿತಂತೆ ಭಗವದ್ರಾಮಾನುಜರು ಮೂರು ಕೃತಿಗಳನ್ನು ರಚಿಸಿದ್ದಾರೆ. ವೇದಾಂತಸಾರ, ವೇದಾಂತ ದೀಪ ಮತ್ತು ಶ್ರೀಭಾಷ್ಯ ಎಂಬುವು ಅವು. ವೇದಾಂತ ಸಾರವು ಸೂತ್ರಾರ್ಥ ಗಳನ್ನು ಮಾತ್ರ ಸಂಗ್ರಹವಾಗಿ ತಿಳಿಸುವ ಗ್ರಂಥ. ವೇದಾಂತ ದೀಪವು ಇನ್ನೂ ಸ್ವಲ್ಪ ವಿಸ್ತಾರವಾಗಿ ಪೂರ್ವಪಕ್ಷ–ಸಿದ್ಧಾಂತಗಳ ಚೌಕಟ್ಟನ್ನು ಒದಗಿಸಿಕೊಂಡತ್ತದೆ. ಶ್ರೀಭಾಷ್ಯವಾದರೋ ವಿಸ್ತಾರವಾದ ಹಾಗೂ ಸ್ವಯಂ ಪರಿಪೂರ್ಣವಾದ ವಿವರಣೆಯಾಗಿದೆ. ಈ ಗ್ರಂಥದ ಹಿರಿಮೆಯನ್ನು ಸ್ವಯಂ ಸರಸ್ವತೀದೇವಿಯೇ ಒಪ್ಪಿಕೊಂಡು 'ಶ್ರೀಭಾಷ್ಯ'ವೆಂಬ ಅಬಿಧಾನವನ್ನಿತ್ತು ಕೊಂಡಾಡಿದಳೆಂಬ ಐತಿಹ್ಯವಿದೆ.

ಶ್ರೀಭಾಷ್ಯವನ್ನು ರಚಿಸುವಲ್ಲಿ ಭಗವದ್ರಾಮಾನುಜರು ತಮಗೆ ಉಪಲಬ್ಧವಾದ ಎಲ್ಲ ಆಧಾರ ಗಳನ್ನೂ ಪ್ರಮಾಣಗಳನ್ನೂ ಕೂಲಂಕಷವಾಗಿ ಪರಿಶೀಲಿಸಿದ್ದಾರೆಂಬುದು ಗಮನಿಸಬೇಕಾದ ಅಂಶ. ಸಾಂಪ್ರದಾಯಿಕವಾಗಿ ಬಂದ ತತ್ತ್ವಗಳನ್ನು ಯಾಮುನರ ಕೃತಿಗಳಿಂದಲೂ, ಅವರ ಸಾಕ್ಷಾಚ್ಛಿಷ್ಯರು ಗಳಿಂದಲೂ ಅವರು ಪಡೆದುಕೊಂಡರು. ವೇದೋಪನಿಷತ್ತುಗಳನ್ನೂ ಇತಿಹಾಸ ಪುರಾಣಗಳನ್ನೂ ಗಾಢವಾಗಿ ಅಧ್ಯಯನ ಮಾಡಿ ಅವುಗಳ ಹೃದಯವನ್ನು ಮನಗಂಡರು. ಸಾಂಖ್ಯ, ಯೋಗ, ನ್ಯಾಯ,

ವೈಶೇಷಿಕ, ಪೂರ್ವಮೀಮಾಂಸಾ ದರ್ಶನಗಳನ್ನೂ, ಜೈನ, ಬೌದ್ಧ, ಪಾಶುಪತ ಮತಗಳನ್ನೂ ಚೆನ್ನಾಗಿ ಪರಿಚಯ ಮಾಡಿಕೊಂಡು ಅವುಗಳ ಸ್ವರೂಪವನ್ನು ನಿಶ್ಚಯಿಸಿಕೊಂಡರು. ಅದ್ವೈತ ವೇದಾಂತದ ಬೇರೆ ಬೇರೆ ಪ್ರಕಾರಗಳನ್ನು ಪ್ರತಿಪಾದಿಸುತ್ತಿದ್ದ ಶಂಕರ, ಭಾಸ್ಕರ, ಯಾದವ ಪ್ರಕಾಶರ ಕೃತಿಗಳನ್ನು ಪರಿಶೀಲಿಸಿ ಅವುಗಳ ಮೇಲೆ ಪ್ರಭುತ್ವವನ್ನು ಹೊಂದಿದುದೇ ಅಲ್ಲದೆ ಅದ್ವೈತ ದರ್ಶನವನ್ನು ಬೆಳೆಸಿ ಪ್ರತಿಪಾದಿಸಿದ ಮಂಡನಮಿಶ್ರ, ಸುರೇಶ್ವರ, ವಾಚಸ್ಪತಿಮಿಶ್ರ, ವಿಮುಕ್ತಾತ್ಮನ್ ಪ್ರಕಾಶಾತ್ಮನ್ ಮೊದಲಾದವರ ವಾದಗಳ ಸಾರಾಂಶವನ್ನು ಕರಗತಮಾಡಿಕೊಂಡರು. ಪಾಂಚರಾತ್ರಾದಿ ಆಗಮಗಳು, ಶ್ರೀ ಪರಾಂಕುಶ ಪರಕಾಲಾದಿ ಆಳ್ವಾರರುಗಳ ದಿವ್ಯ.ಪ್ರಬಂಧಗಳು ಮೊದಲಾದುವುಗಳನ್ನು ಅಧ್ಯಯನ ಮಾಡಿ ಅವುಗಳ ಸಾರಾಂಶವನ್ನು ಗ್ರಹಿಸಿದರು. ಹೀಗೆ ಸರ್ವತೋಮುಖವಾಗಿ ವಿಷಯಗಳನ್ನು ಗ್ರಹಿಸಿ, ಅವುಗಳನ್ನೆಲ್ಲಾ ಮನನ ಮಾಡಿ, ಅವುಗಳ ಗುಣದೋಷಗಳನ್ನು ಗುರುತಿಸಿ, ಸಮಂಜಸವೂ ಮಂಜುಲವೂ ಆದ ರೀತಿಯಲ್ಲಿ ಯಾವ ಪೂರ್ವಾಪರ ವಿರೋಧವೂ ಇಲ್ಲದಂತೆ ತಮ್ಮ ಸಿದ್ಧಾಂತವನ್ನು ಗಂಭೀರವಾಗಿಯೂ ಖಚಿತವಾಗಿಯೂ ಪ್ರತಪಾದಿಸಿದರು. ಆಪಾತತಃ ವಿರುದ್ಧವಾಗಿ ತೋರುವ ಶ್ರುತಿವಾಕ್ಯಗಳಿಗೆಲ್ಲ ಸಾಮಂಜಸ್ಯವನ್ನು ತೋರಿಸಿದರು. ಬಾದರಾಯಣರು ಸೂತ್ರಗಳಲ್ಲಿ ಪ್ರತಿಪಾದಿಸಿ ರುವ ತತ್ತ್ವವು ಶ್ರುತಿ ಸ್ಮೃತೀತಿಹಾಸ ಪುರಾಣಗಳು, ಆಗಮಗಳುಹಾಗೂ ದಿವ್ಯಪ್ರಬಂಧಗಳು ಇವುಗಳಿಗನುಸಾರವಾಗಿರುವುದೆಂಬುದನ್ನು ಸಮರ್ಥಿಸಿದರು. 'ತಸ್ಮೈರಾಮಾನುಜಾರ್ಯಾಯ ನಮಃ ಪರಮಯೋಗಿನೇ । ಯಃ ಶ್ರುತಿಸ್ಮೃತಿಸೂತ್ರಾಣಾಂ ಅಂತರ್ಜ್ವರಂ ಅಶೀಶಮತ್ ॥' ಎಂದೂ 'ಅವಿಸ್ತೃತಾಃ ಸುಗಂಭೀರಾಃ ರಾಮಾನುಜ ಮುನೇರ್ಗಿರಃ' ಎಂದೂ ನಿರ್ಮತ್ಸರರಿಂದ ಸ್ತೋತ್ರ ಪಾತ್ರರಾದರು.

ಅಖಿಲಹೇಯ ಪ್ರತ್ಯನೀಕ ಕಲ್ಯಾಣೈಕತಾನ ಸ್ವರೂಪನಾದ ಪರಮಾತ್ಮನ ಸ್ವರೂಪವನ್ನೂ ಅವನಿಗೆ ಶೇಷರಾದ ಜೀವರುಗಳ ಮತ್ತು ಜಗತ್ತಿನ ಸತ್ಯತ್ವವನ್ನೂ, ಆ ಪರಮಾತ್ಮನನ್ನೇ ಅಮೃತತ್ವ ಪ್ರಾಪ್ತಿಗಾಗಿ ಉಪಾಸನೆ ಮಾಡಬೇಕೆಂಬುದನ್ನೂ ಕರ್ಮಯೋಗ ಜ್ಞಾನಯೋಗಗಳಿಂದ ಉದಿ ಸುವ ಭಕ್ತಿರೂಪವಾದ ಜ್ಞಾನವು ಮೋಕ್ಷೋಪಾಯವೆಂಬುವನ್ನೂ ಸಕಲ ಪ್ರಮಾಣಗಳ ಆಧಾರ ದಿಂದ ಆಚಾರ್ಯರು ಸ್ಥಾಪಿಸಿದ್ದಾರೆ. ಭಗವದ್ರಾಮಾನುಜರು ಈ ಮಹತ್ಕೃತಿಯಲ್ಲಿ ತಮ್ಮ ದರ್ಶನದ ಎಲ್ಲ ಮುಖ್ಯಾಂಶಗಳನ್ನೂ ನಿಷ್ಕೃಷ್ಟವಾಗಿ ನಿರೂಪಿಸಿದ್ದಾರೆ. ಸತ್ಕಾರ್ಯವಾದ, ಸಾಮಾನಾಧಿಕರಣ್ಯ, ಶರೀರ–ಶರೀರಿಭಾವ ಮೊದಲಾದವುಗಳನ್ನು ಪುರಸ್ಕರಿಸಿ ತತ್ವನಿಶ್ಚಯವನ್ನು ಮಾಡಿದ್ದಾರೆ.

ರಾಮಾನುಜರು ತಮ್ಮ ಶ್ರೀಭಾಷ್ಯದಲ್ಲಿ ಅದ್ವೈತದರ್ಶನವನ್ನು ವಿಸ್ತಾರವಾಗಿ ಪರೀಕ್ಷಿಸಿ ಅವರು ಹೇಳುವ ನಿರ್ವಿಶೇಷ ಬ್ರಹ್ಮವಾದವನ್ನೂ ಮಾಯಾವಾದವನ್ನೂ ನಿರಾಕರಿಸಿದ್ದಾರೆ. ರಾಮಾನುಜರು ಪೂರ್ವಪಕ್ಷವನ್ನು ವಿಸ್ತಾರವಾಗಿಯೂ ವ್ಯಾಪಕವಾಗಿಯೂ ನಿರೂಪಿಸಿ ಅಷ್ಟೇ ಪ್ರಭಾವಪೂರ್ಣವಾಗಿ ಅವುಗಳನ್ನು ನಿರಾಕರಣೆ ಮಾಡುತ್ತಾರೆ. ಪ್ರಮಾಣಗಳನ್ನು ಶ್ರುತಿಗಳಿಂದಲೂ ಪುರಾಣಗಳಿಂದಲೂ ಹೇರಳವಾಗಿ ಒದಗಿಸುತ್ತಾರೆ ಅವರು. ಶ್ರುತಿ ಸ್ಮೃತೀತಿಹಾಸ ಪುರಾಣಗಳ ಮೇಲೆ ಅವರ ಪ್ರಭುತ್ವ ಅಷ್ಟು ವ್ಯಾಪಕವಾದುದು. ಇತರ ದಾರ್ಶನಿಕರು ಸರ್ವಸಮ್ಮತಿಯಿಂದ ಒಪ್ಪಿರುವ ಪ್ರಮಾಣಗಳನ್ನೇ ಅವರು ಉಲ್ಲೇಖಿಸುವುದರಿಂದ ದ್ರಾವಿಡ ಪ್ರಬಂಧಗಳ ಪ್ರಮಾಣವನ್ನು ಎಲ್ಲಿಯೂ ಅವರು ಕೊಡಲಿಲ್ಲ. ಒಂದು ಸಿದ್ಧಾಂತದ ಸಿಂಧುತ್ವವನ್ನು ನಿರ್ಣಯಿಸುವಾಗ ಅದು ವೇದೋಪದೇಶಕ್ಕೆ ಅನುಗುಣವಾ ಗಿದೆಯೋ ಇಲ್ಲವೋ ಎಂಬುದನ್ನು ನೋಡಬೇಕು. ಹಾಗೂ ವೇದೋಪದೇಶಕ್ಕೆ ವಿರುದ್ಧವಾದುದನ್ನು ಬಿಡಬೇಕು ಎಂಬ ಸಮನ್ವಯ ಸೂತ್ರವನ್ನು ಆಚಾರ್ಯರು ಪ್ರತಿಪಾದಿಸಿದ್ದಾರೆ.

ಶ್ರುತಿಗಳು ಹೇಗೆ ಚಿದಚಿದೀಶ್ವರರಿಗೆ ಭೇದವುಂಟು ಎಂಬುದನ್ನೂ, ಚೇತನಾಚೇತನಗಳು ಪರಮಪುರುಷನ ಶರೀರವಾಗಿ ಅವನಿಂದ ನಿಯಾಮ್ಯವಾಗಿವೆ ಎಂಬುದನ್ನೂ, ಚಿದಚಿದ್ವಸ್ತು ಗಳನ್ನು ಪ್ರಕಾರವನ್ನಾಗಿ ಹೊಂದಿರುವ ಪರಮಪುರುಷನೇ ಕಾರ್ಯಾವಸ್ಥೆ ಮತ್ತು ಕಾರಣಾವಸ್ಥೆ

ಗಳಲ್ಲಿ ಜಗದ್ರೂಪವಾಗಿರುವನೆಂಬುದನ್ನು ತಿಳಿಸುವುದೆಂಬುದನ್ನೂ ಪ್ರತಿಪಾದಿಸಿ ಭೇದಾಭೇದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲವೆಂಬುದನ್ನು ರಾಮಾನುಜರು ತಿಳಿಸಿದ್ದಾರೆ. 'ಅಚಿದ್ವಸ್ತುನಃ ಚಿದ್ವಸ್ತುನಃ ಪರಸ್ಯಚ ಬ್ರಹ್ಮಣೋ ಭೋಗ್ಯತ್ವೇನ ಭೋಕ್ತೃತ್ವೇನ ಚೇಶಿತೃತ್ವೇನ ಚ ಸ್ವರೂಪ ವಿವೇಕಮಾಹುಃ ಕಾಶ್ಚನ ಶ್ರುತಯಃ।'

'ಏವಂ ಭೋಕ್ತೃ ಭೋಗ್ಯರೂಪೇಣಾವಸ್ಥಿತಯೋಃ ಸರ್ವಾವಸ್ಥಾವಸ್ಥಿತಯೋಃ ಚಿದಚಿತೋಃ ಪರಮಪುರುಷ ಶರೀರತಯಾ ತನ್ನಿಯಾಮ್ಯತ್ವೇನ ತದಪೃಥಕ್ಸ್ಥಿತಿಂ ಪರಮಪುರುಷಸ್ಯಚ ಆತ್ಮತ್ವಮಾಹುಃ ಕಾಶ್ಚನ ಶ್ರುತಯಃ॥'

'ಏವಂ ಸರ್ವಾವಸ್ಥಾವಸ್ಥಿತ ಚಿದಚಿದ್ವಸ್ತುಶರೀರತಯಾ ತತ್ಪ್ರಕಾರಃ ಪರಮಪುರುಷಏವ ಕಾರ್ಯಾವಸ್ಥಃ ಕಾರಣಾವಸ್ಥಃ ಜಗದ್ರೂಪೇಣಾವಸ್ಥಿತಃ ಇತೀಮಮರ್ಥಂ ಜ್ಞಾಪಯಿತುಂ ಕಾಶ್ಚನ ಶ್ರುತಯಃ ಕಾರ್ಯಾವಸ್ಥಂ ಕಾರಣಾವಸ್ಥಂ ಜಗತ್ಸ ಏವ ಇತ್ಯಾಹುಃ।'. ..

ಶ್ರೀ ಭಾಷ್ಯ–೧–೧–೧

ಸಂಸಾರ ಬಂಧವು ಹುಸಿಯಲ್ಲವಾದುದರಿಂದ ಇದರ ನಿವೃತ್ತಿಯು ಭಗವಂತನ ಅನುಗ್ರಹದಿಂದ ಆಗಬೇಕು. ಅದಕ್ಕಾಗಿ ಅವನನ್ನು ಉಪಾಸನೆ ಮಾಡಬೇಕು. 'ಬಂಧಸ್ಯ ಪಾರಮಾರ್ಥಿಕತ್ವೇನ ಜ್ಞಾನನಿವರ್ತ್ಯತ್ವಾಭಾವಾತ್। ಪುಣ್ಯಾಪುಣ್ಯರೂಪ ಕರ್ಮ ನಿಮಿತ್ತ ದೇವಾದಿ ಶರೀರ ಪ್ರವೇಶ ತತ್ಪ್ರಯುಕ್ತ ಸುಖದುಃಖಾನುಭವ ರೂಪಸ್ಯ ಬಂಧಸ್ಯ ಮಿಥ್ಯಾತ್ವಂ ಕಥಮಿವ ಶಕ್ಯತೇ ವಕ್ತುಂ। ಏವಂ ರೂಪ ಬಂಧನಿವೃತ್ತಿಃ ಭಕ್ತಿರೂಪಾಪನ್ನ ಉಪಾಸನ ಪ್ರೀತ ಪರಮಪುರುಷ ಪ್ರಸಾದ ಲಭ್ಯಾ।'

ಶ್ರೀ ಭಾಷ್ಯ–೧–೧–೧

ಮೋಕ್ಷದ ಸ್ವರೂಪವನ್ನು ಆಚಾರ್ಯರು 'ತ್ರಯ್ಯಂತ ನಿಷ್ಣಾತಾಸ್ತು ನಿಖಿಲಜಗದೇಕಕಾರಣಸ್ಯ ಅಶೇಷ ಹೇಯ ಪ್ರತ್ಯನೀಕಾನಂತ ಜ್ಞಾನಾನಂದೈಕಸ್ವರೂಪಸ್ಯ ಸ್ವಾಭಾವಿಕಾನವಧಿಕಾತಿಶಯಾ ಸಂಖ್ಯೇಯ ಕಲ್ಯಾಣ ಗುಣಾಕರಸ್ಯ ಸಕಲೇತರ ವಿಲಕ್ಷಣಸ್ಯ ಸರ್ವಾತ್ಮಭೂತಸ್ಯ ಪರಸ್ಯಬ್ರಹ್ಮಣಃ ಶರೀರತಯಾ ಪ್ರಕಾರ ಭೂತಸ್ಯ ಅನುಕೂಲಾಪರಿಚ್ಛಿನ್ನಜ್ಞಾನಸ್ವರೂಪಸ್ಯ ಪರಮಾತ್ಮಾನುಭವೈಕರಸಸ್ಯ ಜೀವಸ್ಯ ಅನಾದಿಕರ್ಮರೂಪಾವಿದ್ಯಾತಿರೋಹಿತಸ್ವರೂಪಸ್ಯ ಅವಿದ್ಯೋಚ್ಛೇದಪೂರ್ವಕ ಸ್ವಾಭಾವಿಕ ಪರಮಾತ್ಮಾನುಭವಮೇವ ಮೋಕ್ಷಂ ಆಚಕ್ಷತೇ' (ಶ್ರೀ ಭಾಷ್ಯ–೧–೩–೧೨) ಎಂದು ಖಚಿತವಾಗಿ ನಿರೂಪಿಸಿದ್ದಾರೆ. ತತ್ವ–ಹಿತ–ಪುರುಷಾರ್ಥ ಸ್ವರೂಪದ ಸಮಗ್ರವಾದ ನಿರೂಪಣೆ ಇಲ್ಲಿದೆ.

ಶ್ರೀಭಾಷ್ಯದ ಅರ್ಥಗಳನ್ನರಿಯಲು ಶ್ರೀಸುದರ್ಶನ ಸೂರಿಗಳ ಶ್ರುತಪ್ರಕಾಶಿಕೆ' ಅತ್ಯುಪಯುಕ್ತವೂ ಅನಿವಾರ್ಯವೂ ಆಗಿದೆ. ಶ್ರೀಮನ್ನಿಗಮಾಂತ ಮಹಾದೇಶಿಕರವರು ಬರೆದಿರುವ ತತ್ತ್ವಟೀಕೆ ಪೂರ್ಣವಾಗಿ ಉಪಲಬ್ಧವಾಗಿಲ್ಲದಿರುವುದು ನಮ್ಮ ದುರ್ದೈವ. ಶ್ರೀಭಾಷ್ಯದ ಅಧಿಕರಣಾರ್ಥಗಳನ್ನು 'ಅಧಿಕರಣಸಾರಾವಲೀ ಎಂಬ ಗ್ರಂಥದಲ್ಲಿ ಶ್ರೀಮನ್ನಿಗಮಾಂತ ಮಹಾದೇಶಿಕರರವರು 500 ಶ್ಲೋಕಗಳಲ್ಲಿ, ಪೂರ್ವಪಕ್ಷ ಸಿದ್ಧಾಂತಗಳ ನಿರೂಪಣೆಯೊಡನೆ ಸಂಗ್ರಹಿಸುವ ಪವಾಡವನ್ನು ಸಾಧಿಸಿದ್ದಾರೆ.

ನಮ್ಮ ಗುರುಗಳು ರಚಿಸಿರುವ 'ಶ್ರೀಭಾಷ್ಯಾಮೃತಸಾರ' ವೆಂಬ ಪ್ರಕೃತ ಗ್ರಂಥದಲ್ಲಿ ಶ್ರೀಭಾಷ್ಯದ ಎಲ್ಲ ಅಧಿಕರಣಗಳ ಅರ್ಥಗಳನ್ನು ಅಧಿಕರಣಸಾರಾವಳಿಯ ನಿರೂಪಣೆಗನುಗುಣವಾಗಿ ವಿವರವಾಗಿ ಪ್ರತಿಪಾದಿಸಿದೆ. ಒಂದೊಂದು ಅಧಿಕರಣಕ್ಕೂ ಸಂಗತಿಯನ್ನೂ ವಿಷಯವಾಕ್ಯವನ್ನೂ ತೋರಿಸಿರುವುದಲ್ಲದೆ ಪ್ರತಿಯೊಂದು ಸೂತ್ರಕ್ಕೂ ಪ್ರತಿಪದಾರ್ಥವನ್ನೂ ವಿವರಣೆಯನ್ನೂ ಒದಗಿಸಿದ್ದಾರೆ. ಅತ್ಯುಪಯುಕ್ತವೂ ಅಪೂರ್ವವೂ ಆದ ವಿಶೇಷಾಂಶಗಳನ್ನು ತಿಳಿಸಿಕೊಟ್ಟಿದ್ದಾರೆ. ಅವತರಣಿಕೆಯಲ್ಲಿ

ಶ್ರೀಭಾಷ್ಯದ ಹಿರಿಮೆಯನ್ನು ಪರಿಚಯಿಸಿದ್ದಾರೆ. ಈ ಕೃತಿಯು ಕನ್ನಡ ಭಾಷೆಯಲ್ಲಿರುವ ದರ್ಶನ ವಾಙ್ಮಯಕ್ಕೆ ವಿಶಿಷ್ಟವೂ ಅಮೂಲ್ಯವೂ ಆದ ಕೊಡುಗೆಯಾಗಿದೆ.

ಖ್ಯಾತಿಲಾಭ ಪೂಜೆಗಳಿಗೆ ಹಂಬಲಿಸದೆ ಜೀವನವನ್ನು ಒಂದು ಯೋಗವನ್ನಾಗಿ ನಡೆಸುತ್ತಿರುವ ನಮ್ಮ ಗುರುಗಳು ಜಿಜ್ಞಾಸುಗಳಿಗೆ ಉಪಯೋಗವಾಗಲೆಂದು ಬರೆದಿರುವ ಈ ಕೃತಿಯನ್ನು ಎಲ್ಲರೂ ಅಧ್ಯಯನ ಮಾಡಿ ಮನನ ಮಾಡಿ ಕೃತಾರ್ಥತೆಯನ್ನು ಹೊಂದುವಂತಾಗಲೆಂದು ಆಶಿಸುತ್ತೇನೆ.

ಬೆಂಗಳೂರು
6-11-82

**ಎನ್. ಎಸ್. ಅನಂತರಂಗಾಚಾರ್ಯ**

ಶ್ರೀಮತೇ ಹಯಗ್ರೀವಾಯನಮಃ

# ಮುನ್ನುಡಿ

ಭಾರತದ ಪ್ರಜ್ಞಾ ಶಿಖರವಾಗಿರುವ ವೇದಾನ್ತದರ್ಶನಕ್ಕೆ ಪರಮ ಪ್ರಮಾಣವಾಗಿರುವ ದಿವ್ಯ ಗ್ರಂಥಗಳು ಉಪನಿಷತ್ತು, ಬ್ರಹ್ಮಸೂತ್ರ ಮತ್ತು ಭಗವದ್ಗೀತೆ. ಇವುಗಳನ್ನು ಪ್ರಸ್ಥಾನತ್ರಯ ಎನ್ನುತ್ತಾರೆ. ಈ ಎಲ್ಲ ಗ್ರಂಥಗಳೂ ಮಹರ್ಷಿಗಳ ದಿವ್ಯಾನುಭವ ಮತ್ತು ಉದಾತ್ತ ವಿಚಾರಗಳಿಂದ ಓತಪ್ರೋತವಾಗಿದ್ದರೂ ಅವುಗಳಲ್ಲಿ ಬ್ರಹ್ಮಸೂತ್ರವು ವಿಚಾರಪ್ರಧಾನವಾಗಿದೆ. ಗ್ರಂಥಕಾರರಾದ ಬಾದರಾಯಣವ್ಯಾಸರು ಅದರಲ್ಲಿ ಉಳಿದ ಎಲ್ಲ ಪ್ರಸಿದ್ಧ ಆಸ್ತಿಕ-ನಾಸ್ತಿಕ ದರ್ಶನಗಳ ಗುಣಾವಗುಣ-ಗಳನ್ನು ವಿಮರ್ಶಿಸಿ ವೇದಾನ್ತದರ್ಶನವೇ ಅನವದ್ಯ ಸಿದ್ಧಾಂತವೆಂಬುದನ್ನು ಯುಕ್ತಿಯುಕ್ತವಾಗಿ ಸಮರ್ಥಿಸಿದ್ದಾರೆ

ಸೂತ್ರಶೈಲಿ ಮತ್ತು ವಿಷಯ ಗಾಂಭೀರ್ಯಗಳ ಕಾರಣಗಳಿಂದ ದುರ್ಬೋಧವಾಗಿರುವ ಆ ಗ್ರಂಥ ರತ್ನಕ್ಕೆ ನಿರ್ವಿಶೇಷಾದ್ವೈತ ಸವಿಶೇಷಾದ್ವೈತ (ವಿಶಿಷ್ಟಾದ್ವೈತ) ದ್ವೈತ–ಇತ್ಯಾದಿ ನಾನಾ ದೃಷ್ಟಿಗಳಿಂದ ಆಚಾರ್ಯರು ಭಾಷ್ಯಗಳನ್ನು ಮಂಡಿಸಿ ಜ್ಞಾನ ದೀವಿಗೆಯನ್ನು ಬೆಳಗಿಸಿದ್ದಾರೆ. ಹಾಗೆ ಬ್ರಹ್ಮ ಸೂತ್ರವನ್ನಧಿಕರಿಸಿದ ಭಾಷ್ಯ ಗ್ರಂಥಗಳಲ್ಲಿ ವಿಶಿಷ್ಟಾದ್ವೈತ ಪರವಾಗಿರುವ ವಿಶಿಷ್ಟ ಗ್ರಂಥವು ಯತಿ ರಾಜ ಭಗವದ್ರಾಮಾನುಜರಿಂದ ವಿರಚಿತವಾದ "ಶ್ರೀಭಾಷ್ಯ". ಸುದರ್ಶನಸೂರಿಗಳ "ಶ್ರುತ ಪ್ರಕಾಶಿಕಾ" ಮತ್ತು ವೇದಾನ್ತಮಹಾದೇಶಿಕರ "ತತ್ತ್ವಟೀಕಾ" ಮುಂತಾದ ವಿವರಣ ಗ್ರಂಥಗಳು ಇದಕ್ಕೆ ಮತ್ತೂ ಮೆರುಗು ಕೊಟ್ಟು ಬುದ್ಧಿ ಪ್ರಪಂಚವನ್ನು ಉಜ್ವಲಗೊಳಿಸಿವೆ

ಭಗವದ್ರಾಮಾನುಜರು ಚಿತ್ (ಜೀವ) ಮತ್ತು ಅಚಿತ್ (ಪ್ರಕೃತಿ) ಇವುಗಳಿಂದ ವಿಶಿಷ್ಟ ವಾಗಿರುವ ಅದ್ವೈತ ತತ್ತ್ವ ಪರಬ್ರಹ್ಮ ಪುರುಷೋತ್ತಮ ಶ್ರೀಮನ್ನಾರಾಯಣನಲ್ಲಿಯೇ ಬ್ರಹ್ಮ ಸೂತ್ರಕಾರರಿಗೆ ತಾತ್ಪರ್ಯವೆಂಬುದನ್ನು ಶ್ರುತಿ ಸ್ಮೃತಿ ಪುರಾಣೇತಿಹಾಸ, ಆಗಮ, ಪೂರ್ವಾಚಾರ್ಯ ವ್ಯಾಖ್ಯಾವಿವೃತಿ, ಯುಕ್ತಿ ಮತ್ತು ಅನುಭವಗಳ ಆಧಾರದಿಂದ ಇಲ್ಲಿ ಸಿದ್ಧಾಂತ ಮಾಡಿದ್ದಾರೆ. ಮಹರ್ಷಿ ವ್ಯಾಸರ ನಿಕಟ ಶಿಷ್ಯರಾಗಿ ಸ್ವಯಂ ಮಹರ್ಷಿಗಳಾಗಿದ್ದ ಬೋಧಾಯನರ ವೃತ್ತಿಯನ್ನೇ ಅನುಸರಿಸಿ ಬರೆದ ಭಾಷ್ಯ ಇದು. ಇದರ ಶಾಸ್ತ್ರಯೋಜನೆಯಲ್ಲಿ ಅದ್ವೈತ ಶ್ರುತಿ ಮತ್ತು ದ್ವೈತ ಶ್ರುತಿ ಇವೆರಡಕ್ಕೂ ಸಮಾನವಾದ ಪ್ರಾಧಾನ್ಯ, "ಘಟಕಶ್ರುತಿ'ಗಳು ಅವುಗಳನ್ನು ಸಮನ್ವಯಗೊಳಿಸುತ್ತವೆ. ನಿರ್ಗುಣ ಶ್ರುತಿ ಮತ್ತು ಸಗುಣ ಶ್ರುತಿಗಳಲ್ಲಿ ಮೊದಲನೆಯದು ಹೇಯಗುಣಗಳ ನಿಷೇಧವನ್ನೂ ಮತ್ತು ಎರಡನೆಯದು ಸಮಸ್ತ ಕಲ್ಯಾಣಗುಣಗಳ ವಿಧಾನವನ್ನೂ ಮಾಡುವುದರಿಂದ ಅವೆರಡಕ್ಕೂ ಸಮಾನ ವಾದ ಗೌರವ, ಪರಬ್ರಹ್ಮವೂ ಸತ್ಯ, ಅದರ ವಿಭೂತಿಗಳೂ ಸತ್ಯ, ಸಂಕಲ್ಪಗಳೂ ಸತ್ಯ, ಕಲ್ಯಾಣ ಗುಣಗಳೂ ಸತ್ಯ. ಉಪಾಸನ ಮಾರ್ಗಗಳೂ ಸತ್ಯ-ಉಪೇಯ ಮತ್ತು ಉಪಾಯ ಎಲ್ಲವೂ ಸತ್ಯವೇ, ಪರಮಾರ್ಥ ಸತ್ಯವೇ ಎಂಬುದು ಈ ವೇದಾನ್ತದರ್ಶನದ ಡಿಂಡಿಮ.

ಈ ಅನವದ್ಯವಾದ ಸಿದ್ಧಾಂತವನ್ನು ವಿದ್ಯಾಧಿದೇವತೆಯೂ, ಆಕೆಯ ಸುಪುತ್ರರೂ ಮೆಚ್ಚು ವಂತೆ ಪ್ರಸನ್ನ ಗಂಭೀರವೂ ರಮಣೀಯವೂ ಆದ ಭಾಷಾಶೈಲಿಗಳಿಂದ ಮಂಡಿಸಿರುವ ಭಗವದ್ರಾಮಾನು ಜರ ಬ್ರಹ್ಮಸೂತ್ರ ಭಾಷ್ಯವು "ಶ್ರೀಭಾಷ್ಯ" "ಸತ್ಯೈಕಾಲಂಬಿಭಾಷ್ಯ" ಎಂದು ಮನೀಷಿಗಳು ಕೊಂಡಾಡಿ

ದ್ದಾರೆ. "ಭಗವಂತನಿಗೆ ಸರ್ವಾತ್ಮನಾ ಶೇಷಭೂತನಾಗಿ ಬ್ರಹ್ಮಿಷ್ಠನಾಗಿರುವ ಆದಿಶೇಷನೇ ಶ್ರೀ ಪತಂಜಲಿ ಮಹರ್ಷಿಗಳ ರೂಪದಲ್ಲೂ ಭಗವದ್ರಾಮಾನುಜರ ರೂಪದಲ್ಲೂ ಅವತಾರ ಮಾಡಿ ವ್ಯಾಕರಣ ಸೂತ್ರ ಭಾಷ್ಯವನ್ನೂ ಬ್ರಹ್ಮಸೂತ್ರ ಭಾಷ್ಯವನ್ನೂ ಅನುಗ್ರಹಿಸಿದ. ಅವುಗಳಲ್ಲಿ ಮೊದಲ ನೆಯದು **ಮಹಾ ಭಾಷ್ಯ** ಮತ್ತು ಎರಡನೆಯದು "**ಶ್ರೀಭಾಷ್ಯ**". ಹೀಗೆ ಅನ್ವರ್ಥವಾದ ಉಪಪದ ಗಳಿಂದ ಕೂಡಿರುವ ಈ ಭಾಷ್ಯರತ್ನವು ವಿರಾಜಿಸುತ್ತಿರುವಾಗ ಆ ಉಪಪದಗಳಿಂದ ಶೂನ್ಯವಾಗಿರುವ ಇತರ ಭಾಷ್ಯಗಳು ಹೇಗೆ ತಾನೇ ಶೋಭಿಸಿಯಾವು? ಅವುಗಳಿಂದ ವಾಕ್ಯಾರ್ಥ ಪೂರಣವಾದರೂ ಹೇಗೆ ಆದೀತು? ''ಕಿಂತೈರ್ವಾಕ್ಯಾರ್ಥಪೂರಣಂ"? ಎಂದೂ ಶಿಷ್ಯವರ್ಗದವರು ಸ್ತುತಿಸಿದ್ದಾರೆ.

ಸಂಸ್ಕೃತಭಾಷೆಯನ್ನಲಂಕರಿಸಿರುವ ಈ ಶ್ರೀಭಾಷ್ಯವನ್ನೂ ಅದರ ಸಂಕ್ಷಿಪ್ತರೂಪವಾಗಿ ಶ್ರೀಮದಾ ಚಾರ್ಯರೇ ಅನುಗ್ರಹಿಸಿರುವ "ವೇದಾನ್ತ ದೀಪ", "ವೇದಾನ್ತಸಾರ"ಗಳನ್ನೂ ಕನ್ನಡ ಜನರಿಗೆ ಪರಿಚಯಮಾಡಿಕೊಡಲು ಸರ್ವಶ್ರೀ ವಿಜಯರಾಘವಾಚಾರ್ಯರು, ಓ. ಎನ್. ಎಸ್. ಅಯ್ಯಂಗಾರ್ಯರು ನಾಥಮುನಿ ಅಯ್ಯಂಗಾರ್ಯರು ಇವರೇ ಮುಂತಾದ ಅನೇಕ ಮಹನೀಯರು ಸ್ತುತ್ಯವಾದ ಪ್ರಯತ್ನ ಮಾಡಿದ್ದಾರೆ. ಆ ಶ್ರೇಣಿಯಲ್ಲಿ ಶ್ರೀಭಾಷ್ಯದ ಅಭಿಪ್ರಾಯದ ಸಾರವಾಗಿ ಸೂತ್ರ ವಿವರಣೆಯನ್ನು ಮಂಡಿಸಿರುವ ಗಣ್ಯಗ್ರಂಥ ವೇದಾನ್ತವಿದ್ವಾನ್, ವೇದಾನ್ತಸಾರಜ್ಞ, ಕೋಟಿಕನ್ಯಕಾದಾನಂ ಕೃಷ್ಣತಾತಾಚಾರ್ಯ ಸ್ವಾಮಿಗಳ ಈ ಶ್ರೀಕೋಶ, ಶ್ರೀಭಾಷ್ಯವನ್ನು ಅರ್ಥಮಾಡಿಕೊಂಡು ಆತ್ಮೋ ಜ್ಜೀವನ ಮಾಡಿಕೊಳ್ಳುವ ಉತ್ಕಟವಾದ ಅಭಿಲಾಷೆಯಿದ್ದರೂ ಆ ಮಹಾ ಮೂಲಗ್ರಂಥವನ್ನಾಗಲಿ ಅದರ ಸಾಕ್ಷಾತ್ ಕನ್ನಡ ಅನುವಾದವನ್ನಾಗಲೀ, ಗ್ರಹಿಸಲು ಬೇಕಾದ ಬುದ್ಧಿ ವೈಭವ ಮತ್ತು ಕಾಲಾವ ಕಾಶಗಳಿಲ್ಲದ ಜನಸಾಮಾನ್ಯರಿಗೆ ಇದು ಪರೋಪಕಾರಕವಾಗುವುದರಲ್ಲಿ ಯಾವ ಸಂಶಯವೂ ಇಲ್ಲ. ಇದು ಶ್ರೀಭಾಷ್ಯಕಾರರ ಆಶಯದ ಎಳೆಯನ್ನು ತಪ್ಪಿಲ್ಲ. ಕಳೆಯನ್ನು ಕಳೆದುಕೊಂಡಿಲ್ಲ. ಸಾರಗ್ರಹಣದ ಗುಣವನ್ನು ಕೂಡಿಸಿಕೊಂಡಿದೆ, ಪೂರ್ವಸೂರಿಗಳ ಸನ್ಮಾರ್ಗದಲ್ಲಿ ನಡೆದು ಅವರ ಶ್ರೀಸೂಕ್ತಿಗಳನ್ನೂ ಆವಶ್ಯಕಸ್ಥಳಗಳಲ್ಲಿ ಉದ್ಧರಿಸುತ್ತದೆ. ಶಾಸ್ತ್ರ ಪರಿಭಾಷೆಯ ನ್ಯಾಯಗಳನ್ನು ಸಂಕ್ಷೇಪವಾಗಿ ವಿವರಿ ಸುತ್ತದೆ. ಸಂಗತಿಗಳನ್ನು ಮಂಡಿಸುತ್ತದೆ. ಅನುವಾದ ಮತ್ತು ವಿವರಣೆಗಳ ಭಾಷೆಯಲ್ಲಿ ಅತಿಕ್ಲಿಷ್ಟವೂ ಅಲ್ಲದೆ ಪೇಲವವೂ ಅಲ್ಲದಿರುವ ಮಧ್ಯಮಾರ್ಗವನ್ನನುಸರಿಸಿ ಆದರಣೀಯವಾಗಿದೆ.

ಇಂತಹ ಗ್ರಂಥವನ್ನು ಬರೆಯುವವರಿಗೆ ಶಾಸ್ತ್ರದ ಅರ್ಥವು ಪರಿಚಯವಾಗಿರುವುದಷ್ಟೇ ಸಾಲದು ಪಾಠ ಪ್ರವಚನಗಳನ್ನು ಅನೇಕ ಬಾರಿ ಮಾಡಿರುವ ಅನುಭವವೂ ಇರಬೇಕು, ಲೇಖನದ ಪ್ರತಿಭೆಯೂ ಬೇಕು. ಶ್ರದ್ಧಾಭಕ್ತಿ ನಿಷ್ಠೆಗಳು ಬೇಕು. ಆಚಾರ್ಯಾನುಗ್ರಹ ಬೇಕು. ಇವೆಲ್ಲಾ ಸಂಪತ್ತೂ ಇರುವ ಮಹನೀಯರು ಶ್ರೀ ಕೃಷ್ಣತಾತಾಚಾರ್ಯರು.

ಇವರ ಈ ಸದ್ಗ್ರಂಥವು ಸಂಸ್ಕೃತ ಕನ್ನಡ ಉಭಯ ಭಾಷಾ ಸರಸ್ವತೀಭಂಡಾರಗಳಿಗೆ ಕಾಣಿಕೆ ಯಾಗಿ ವೇದಾನ್ತದರ್ಶನದ ಅಭ್ಯಾಸಿಗಳಿಗೆ ಅಮೂಲ್ಯ ಕೊಡುಗೆಯಾಗಲೆಂದು ನಮ್ಮ ಹಾರೈಕೆ.

ಬೆಂಗಳೂರು
ದುಂದುಭಿ–ತುಲಾಕೃಷ್ಣನವಮಿ
9-11-82

**ತಿರುಮಲೈ-ಸತ್ಯಾಗಾಲಂ ವರದದೇಶಿಕಾಚಾರ್ಯರಂಗ ಪ್ರಿಯ**

ಶ್ರೀಃ

ಶ್ರೀಮದ್ವರದಯೋಗೀಂದ್ರ ಶ್ರೀನಿವಾಸ ಗುರೂತ್ತಮೌ ।
ವಂದೇ ಭಾಗವತಾನ್ ಸರ್ವಾನ್ ಭಾಷ್ಯಸಾರಾರ್ಥಸಿದ್ಧಯೇ ॥

ಪ್ರಪದ್ಯೇ ಪ್ರಣವಾಕಾರಂ ಭಾಷ್ಯಂ ರಂಗಮಿವಾಪರಂ ।
ಪರಸ್ಯ ಬ್ರಹ್ಮಣೋ ಯತ್ರ ಶೇಷಿತ್ವಂ ಸ್ಫುಟಮೀಕ್ಷ್ಯತೇ ॥

ಸಮ್ಯಗ್‌ನ್ಯಾಯ ಕಲಾಪೇನ ಮಹತಾಭಾರತೇನಚ ।
ಉಪಬೃಂಹಿತವೇದಾಯ ನಮೋ ವ್ಯಾಸಾಯ ವಿಷ್ಣವೇ ॥

ಅಸ್ಮದ್ಗುರು ಪರಂಪರಾಯೈ ನಮಃ

# ಬಿನ್ನಹ

"ನ ಕಶ್ಚಿನ್ನಾಪರಾಧ್ಯತಿ"—ಎಂಬಂತೆ ಅನಾದಿ ಕಾಲದಿಂದ ಅನವರತ ನಡೆಸುತ್ತಿರುವ ಪರಮ ಪುರುಷ ನಿಯಮನಾತಿಕ್ರಮಣದಿಂದ ಅವನ ನಿಗ್ರಹ ಸಂಕಲ್ಪಕ್ಕೆ ವಿಷಯರಾಗಿ, ಸರಭಸ ಪ್ರತಿಕೂಲ ವಾತದ ಹೊಡೆತಕ್ಕೆ ಸಿಕ್ಕಿದ ನೌಕಾಯಾತ್ರಿಕರಂತೆಯೂ, ದಹ್ಯಮಾನ ಕಾಷ್ಠದೊಳಗಿನ ಕೀಟಗಳಂತೆಯೂ ಸರ್ಪಾಧಿಷ್ಠಿತ ಭವನವಾಸಿಗಳಾದ ಕುಟುಂಬಿಗಳಂತೆಯೂ, ಮಹಾ ಪ್ರವಾಹ ಮಧ್ಯಗತ ಜಂಬುಕ ಗಳಂತೆಯೂ ಭವಭಯಾಭಿತಪ್ತರಾದ ಚೇತನರನ್ನು ನೋಡಿ, ನಿರವಧಿಕರುಣಾದ್ರ್ರಹೃದಯರೂ,

"ಅನಂತಃ ಪ್ರಥಮಂ ರೂಪಂ ದ್ವಿತೀಯಂ ಲಕ್ಷ್ಮಣಸ್ತಥಾ ।
ಬಲಭದ್ರಃ ತೃತೀಯಸ್ತು ಕಲೌ ರಾಮಾನುಜಃ ಸ್ಮೃತಃ ॥"—ಎಂಬ ಬೃಹನ್ನಾರದೀಯ ವಚನದಂತೆ ಜನ್ಮತ್ರಯದಿಂದ ರೂಢಮೂಲವಾಗಿ ಬಂದ ಭಗವತ್ಕೈಂಕರ್ಯಲಕ್ಷ್ಮೀಸಂಪನ್ನರೂ, "ಯಸ್ಸ್ವಾಪಕಾಲೇಕರುಣಾಕರಸ್ಸನ್ ಭವಿಷ್ಯದಾಚಾರ್ಯವರಸ್ಯ ರೂಪಂ । ಸಂದರ್ಶಯಾಮಾಸ ಮಹಾ ಭಾವಂ ತಂಕಾರಿಸೂನುಂ ಶರಣಂ ಪ್ರಪದ್ಯೇ॥" — ಎಂಬ ಶ್ರೀಮನ್ನಾಥ ಮುನಿಗಳ ಅನುಸಂಧಾನ ದಂತೆ ಅವರಿಗೆ ಶ್ರೀ ನಮ್ಮಾಳ್ವಾರ್ರವರಿಂದ ಪ್ರದರ್ಶಿಸಲ್ಪಟ್ಟ ತಮ್ಮ ಭವಿಷ್ಯದಾಚಾರ್ಯರೂಪವುಳ್ಳ ವರೂ, ಪಿತಾಮಹರಿಗೂ ಪಿತಾಮಹರೆನಿಸಿದ ಶ್ರೀಶೈಲಪೂರ್ಣರ ಪ್ರಿಯಭಾಗಿನೇಯ ಮತ್ತು ಶಿಷ್ಯ ವರೇಣ್ಯರೂ ಆಗಿ "ನಾಥೋಪಜ್ಞಂ ಪ್ರವೃತ್ತಂ"—ಎನಿಸಿರುವ ನಮ್ಮ ಸಿದ್ಧಾಂತಕ್ಕೆ ಪ್ರಥಮ ಪ್ರವರ್ತಕ ರಾದ ಶ್ರೀಮನ್ನಾಥಮುನಿಗಳ ಶಿಷ್ಯಪರಂಪರೆಗೆ "ವಿದ್ಯಯಾ ಜನ್ಮನಾ ಚ"—ಎಂದು ಉಭಯಧಾಪಿ ಸುಸಂಬದ್ಧರೂ "ತ್ರಾತಂ ಸಮ್ಯಕ್ ಯತೀಂದ್ರೈಃ ಅಖಿಲ ತಮಃ ಕರ್ಶನಂ ದರ್ಶನಂ ನಃ"—ಎಂಬಂತೆ ನಮ್ಮ ಅಖಿಲ ತಮಃ ಕರ್ಶನ ದರ್ಶನದ ಸ್ಥಾಪನಾಚಾರ್ಯರೂ, ಪರಮಹಂಸ ಪರಿವ್ರಾಜಕಾಚಾರ್ಯರೂ ಹಾರೀತ ಕುಲಜಲಧಿರಾಕಾಶಶಾಂಕರಾದ ಶ್ರೀ ಕೇಶವ ಸೋಮಯಾಜಿಗಳ ತನೂಜರೂ, ಶ್ರೀಕಾಂತಿ ಮತ್ಯಾತ್ಮಜರೂ, ಶ್ರೀ 'ಪೆರಿಯನಂಬಿ'—ಗಳೇ ಮುಂತಾದ ಪಂಚಾಚಾರ್ಯರುಗಳ ಪದಾಶ್ರಯರೂ,

"ಪುಣ್ಯಾಂ ಭೋಜವಿಕಾಸಾಯ ಪಾಪಧ್ವಾನ್ತಕ್ಷಯಾಯಚ ।
ಶ್ರೀಮಾನಾವಿರಭೂತ್ ಭೂಮೌ ರಾಮಾನುಜ ದಿವಾಕರಃ ॥"—ಎಂಬ ತಮ್ಮ ಅವತಾರ ವೈಲಕ್ಷಣ್ಯದಿಂದ "ವಿಶ್ವಂಭರಾ ಪುಣ್ಯವತೀ"—ಎಂಬಂತೆ ಈ ಭೂಮಿಯನ್ನು ಪುಣ್ಯವತಿಯಾಗಿಸಿದವರೂ ಆದ ಭಗವದ್ಭಾಷ್ಯಕಾರರು—ಪರಮಪುರುಷನ ಪ್ರಸಾದವೊಂದೇ ಈ ಚೇತನರಿಗಿರುವ ದುಸ್ತರ ಸಂಸೃತಿ ನಿಸ್ತರಣೋಪಾಯ, ಅದು ತನ್ನಿಗ್ರಹಸಂಕಲ್ಪಶಾಂತಿ ಪೂರ್ವಕ, ಆ ಶಾಂತಿ "ಭಕ್ತ್ಯಾಪರಮ ಯಾವಾಪಿ ಪ್ರಪತ್ತ್ಯಾವಾ ಮಹಾ ಮುನೇ । ಪ್ರಾಪ್ಯೋಽಹಂನಾನ್ಯಥಾ ಪ್ರಾಪ್ಯಃ ಮಾಮೇವ ಯೇ



ಲೇಖಕರ ತಂದೆಯವರಾದ ಏಟ್ಟೂರಿಮ್ಮಡಿ ತಿರುಮಲೈ ಲಕ್ಷ್ಮೀಕುಮಾರ
ಕೋಟಿಕನ್ಯಾದಾನಂ — ಪೂಜ್ಯ ಶ್ರೀ ಶ್ರೀನಿವಾಸತಾತಾಚಾರ್ಯರವರು

ಪ್ರಪದ್ಯನ್ತೇ ಮಾಯಾಮೇತಾಂ ತರನ್ತಿತೇ''—ಇತ್ಯಾದಿ ಪ್ರಮಾಣಗಳಲ್ಲಿ ಹೇಳಿರುವಂತೆ ತಚ್ಚರಣಾರ-ವಿಂದಗಳಲ್ಲಿ ಮಾಡಬೇಕಾದ ಭಕ್ತಿ ಅಥವಾ ಪ್ರಪತ್ತಿಜನ್ಯ. ತದನುಷ್ಠಾನವು ಆ ಪರಮ ಪುರುಷನ ಸ್ವರೂಪ–ರೂಪ–ಗುಣ–ವಿಭವ–ವಿದ್ಯಾಸ್ವರೂಪ–ತದ್ಭೇದತದಿತಿ ಕರ್ತವ್ಯತಾ ಜ್ಞಾನಾಧೀನ—ಎಂದು ಆಲೋಚಿಸಿ, ಅಪೇಕ್ಷಿತ ನಿಖಿಲಾರ್ಥವಬೋಧಕವಾದ ಶ್ರೀಭಾಷ್ಯವೆಂಬ ಪ್ರಬಂಧವನ್ನು ರಚಿಸಿ ಅನುಗ್ರಹಿಸಿದರು. ಇದರ ಪ್ರಭಾವವನ್ನು

''ಆಕರ್ಷಣಾನಿ ನಿಗಮಾನ್ತಸರಸ್ವತೀನಾಂ
ಉಚ್ಚಾಟನಾನಿ ಬಹಿರಂತರುಪಪ್ಲವಾನಾಂ ।
ಪಥ್ಯಾನಿ ಘೋರ ಭವಸಂಜ್ವರ ಪೀಡಿತಾನಾಂ
ಹೃದ್ಯಾನಿ ಭಾಂತಿ ಯತಿರಾಜಮುನೇರ್ವಚಾಂಸಿ ॥''—ಇತ್ಯಾದಿಯಾಗಿ ಶ್ರೀಮದಾಚಾರ್ಯ ಪಾದರು ಕೊಂಡಾಡಿದ್ದಾರೆ.

ಭಗವದ್ಭಾಷ್ಯಕಾರರು ದಿಗ್ವಿಜಯ ಮಾಡುತ್ತಾ ಕಾಶ್ಮೀರಕ್ಕೆ ಬಿಜಯಮಾಡಿದಾಗ, ಅಲ್ಲಿಯ ವಿದ್ಯಾಪೀಠದಲ್ಲಿದ್ದ ಶ್ರೀ ಸರಸ್ವತೀದೇವಿಯು ಸಕಲ ಭಾಷ್ಯಲಕ್ಷಣಗಳಿಂದ ಕೂಡಿ ಮಹರ್ಷಿಮತಾನು ಸಾರಿಣಿಯೂ, ಸಮ್ಯಕ್‌ಜ್ಞಾನವಿವರ್ಧಿನಿಯೂ ಆದ ಇವರ ಈ ಕೃತಿಯನ್ನು ಕೇಳಿ ಪರಮಾಶ್ಚರ್ಯ ಗೊಂಡು—ಇದಕ್ಕೆ ಶ್ರೀಭಾಷ್ಯವೆಂದು ಹೆಸರಿತ್ತು, ಆಚಾರ್ಯರನ್ನು ತನ್ನ ಪೀಠದಲ್ಲಿ ಕೂರಿಸಿ, 'ಶ್ರೀಭಾಷ್ಯ ಕಾರರ್'—ಎಂಬ ಪದವಿಯಲ್ಲಿ ಅಭಿಷೇಕಿಸಿ, ತನ್ನಲ್ಲಿದ್ದ ರುಚಿರತಮವಾದ ಶ್ರೀತುರಂಗಾನನ ದಿವ್ಯ ಮೂರ್ತಿಯನ್ನೂ ಕೊಟ್ಟು ಸನ್ಮಾನಿಸಿದುದಾಗಿ ಪ್ರತೀತಿಯಿದೆ. ಇದರಿಂದ ಈ ಶ್ರೀಭಾಷ್ಯ ಅತ್ಯಂತ ಆದರ್ಶಪ್ರಾಯವೆಂಬುದು ಸುಸ್ಪಷ್ಟ. ಶ್ರೀಪಾರಾಶರ್ಯ ಮಹರ್ಷಿಯ ಬ್ರಹ್ಮಸೂತ್ರಗಳಿಗೆ ಇವರು ರಚಿಸಿರುವ ವ್ಯಾಖ್ಯೆಯೇ ಈ ಶ್ರೀಭಾಷ್ಯವೆಂಬುದು. ಇತರ ವ್ಯಾಖ್ಯಾತೃಗಳು ಮಹರ್ಷಿಮತವನ್ನು ಅತಿಲಂಘಿಸಿ ರುವುದು ''ಸರ್ವತ್ರ ಪ್ರಸಿದ್ಧೋಪದೇಶಾತ್'' ''ಭೂಮಾಸಂಪ್ರಸಾದಾದಧ್ಯುಪದೇಶಾತ್'' ''ದಹರ ಉತ್ತರೇಭ್ಯಃ''—ಇತ್ಯಾದಿ ಅನೇಕ ಸ್ಥಳಗಳಲ್ಲಿ ಎದ್ದು ಕಾಣುತ್ತದೆ. ಅಲ್ಲದೆ ಉಪನಿಷತ್ಪ್ರಭವ ಸಿದ್ಧಾಂತಗಳು ಮೂರು. ಅವು ಶಂಕರ–ಮಾಧ್ವ–ರಾಮಾನುಜ ಸಿದ್ಧಾಂತಗಳೆಂಬವು. ಇವುಗಳೊಳಗೆ ನೂರಕ್ಕೆ ನೂರುಪಾಲು ಉಪನಿಷತ್ಪ್ರಭವತ್ವವಿರುವುದು ಶ್ರೀ ರಾಮಾನುಜಸಿದ್ಧಾಂತದಲ್ಲಿ ಮಾತ್ರವೇ. ವೇದ ಅಪೌರುಷೇಯ—ಆದ್ದರಿಂದ ಅದರಲ್ಲಿ ಪುರುಷ ದೋಷ ಮಷೀಮಾಲಿನ್ಯಕ್ಕೆ ಲೇಶವೂ ಆಸ್ಪದ ವಿಲ್ಲ. ತತ್ಪ್ರಭವವಾದ ಈ ಸಿದ್ಧಾಂತದಲ್ಲಿಯೂ ಆಮಾತು ನೂರಕ್ಕೆ ನೂರರಷ್ಟು ಸತ್ಯ. ಮತ್ತೆರಡು ಸಿದ್ಧಾಂತಗಳು ವೇದದಲ್ಲಿರುವ ಸಗುಣ–ನಿರ್ಗುಣ ಭೇದಾಭೇದಾದಿ ವಾದಗಳಲ್ಲಿ ಒಂದೊಂದನ್ನು ಮಾತ್ರ ಪರಿಗ್ರಹಿಸಿ ಮಿಕ್ಕವನ್ನು ಕೈಬಿಟ್ಟಿರುವುದರಿಂದಲೂ, ಪರಿಗ್ರಹಿಸಿರುವ ಆ ಕೆಲವು ವಾಕ್ಯ ಗಳಲ್ಲಿಯೂ ಅವರೊಳಗೆ ಏಕಾಭಿಪ್ರಾಯವಾಗಲಿ, ಮೂಲಕ್ಕೆ ಅವಿರುದ್ಧವಾದ ಅಭಿಪ್ರಾಯವಾಗಲಿ ಇಲ್ಲದುದರಿಂದಲೂ ಅವುಗಳನ್ನು ಸಂಪೂರ್ಣವಾಗಿ ಉಪನಿಷತ್ಪ್ರಭವಗಳೆನ್ನಲಾಗದು. ಅಲ್ಲದೆ ಉಪನಿಷತ್ಪ್ರಭವ ವೇದಾಂತ ಪರಂಪರೆಗಳು ಎರಡು. ಅವು ಸಂಸ್ಕೃತ ಮತ್ತು ದ್ರಾವಿಡ ಬ್ರಹ್ಮ ಸಂಹಿತೆ ಗಳೆಂಬವು. ಮತ್ತೆರಡು ಸಿದ್ಧಾಂತಗಳು ದ್ರಾವಿಡ ಬ್ರಹ್ಮ ಸಂಹಿತೆಯನ್ನು ಪ್ರಮಾಣವನ್ನಾಗಿ ಅಂಗೀ ಕರಿಸಿಲ್ಲ. ಉಭಯ ಪರಂಪರೆ ಗಳನ್ನೂ ಪ್ರಮಾಣವನ್ನಾಗಿ ಅಂಗೀಕರಿಸಿ ಅವೆರಡೂ ಶ್ರೀಯಃಪತಿ ಯೊಬ್ಬನೇ ಪರತತ್ತ್ವ—ಪರಮಕಾರಣ ಪರಮ ಪ್ರಾಪ್ಯ–ಪ್ರಾಪಕ–ಸರ್ವಶೇಷೀ—ಎಂಬ ಒಂದೇತತ್ತ್ವ ವನ್ನೇ ಪ್ರತಿಪಾದಿಸುತ್ತವೆಯೆಂದು ಅವುಗಳಿಗೆ ಐಕಕಂಠ್ಯವನ್ನು ಸಾಧಿಸಿರುವವರು ಶ್ರೀ ರಾಮಾನುಜರು ಮಾತ್ರವೇ.

ವಸ್ತುವನ್ನು ಒಂದು ಕಣ್ಣಿನಿಂದ ನೋಡಿ ಅನುಭವಿಸುವುದಕ್ಕೂ ಎರಡು ಕಣ್ಣುಗಳಿಂದ ನೋಡಿ ಅನುಭವಿಸುವುದಕ್ಕೂ ಎಷ್ಟು ವ್ಯತ್ಯಾಸವುಂಟೋ, ಪರತತ್ತ್ವವನ್ನು ಒಂದು ವೇದಾನ್ತದಿಂದ ತಿಳಿದು ಅನುಭವಿಸುವುದಕ್ಕೂ ಎರಡು ವೇದಾಂತಗಳಿಂದ ತಿಳಿದು ಅನುಭವಿಸುವುದಕ್ಕೂ ಸಹ ಅಷ್ಟೇ ವ್ಯತ್ಯಾಸ

ವಿದೆ. ದೇವರು ಎರಡು ಕಣ್ಣುಗಳನ್ನು ಅನುಗ್ರಹಿಸಿರುವಂತೆಯೇ ಎರಡು ವೇದಾಂತಗಳನ್ನು ಅನುಗ್ರಹಿಸಿದ್ದಾನೆ. ಅಷ್ಟೇ ಅಲ್ಲ; ದ್ರಾವಿಡ ವೇದಾಂತದಿಂದ ತತ್ತ್ವವು ಮತ್ತಷ್ಟು ವಿಶದವಾಗಿ ಅವಭಾಸವಾಗುವುದರ ಜತೆಗೆ ನಿರತಿಶಯಭೋಗ್ಯವೂ ಚಿತ್ತರಂಜಕ ತಮವೂ ಆಗಿದೆ.

''ಪುರಾಸೂತ್ರೈರ್ವ್ಯಾಸಃ ಶ್ರುತಿಶತ ಶಿರೋಽರ್ಥಂ ಗ್ರಥಿತವಾನ್
ವಿವವ್ರೇತಚ್ಛ್ರಾವ್ಯಂ ವಕುಳಧರತಾ ಮೇತ್ಯಸ ಪುನಃ ।
ಉಭಾವೇತೌ ಗ್ರಂಥೌ ಘಟಯಿತು ಮಲಂ ಯುಕ್ತಿಭಿರಸೌ
ಪುನರ್ಜಜ್ಞೇ ರಾಮಾವರಜ ಇತಿ ಸ ಬ್ರಹ್ಮ ಮುಕುರಃ ॥''—ಎಂಬ ಶ್ರೀ ಈಡುಮುಪ್ಪಿನ

ತ್ತಾರಾಯಿರಪ್ಪಡಿ''ಯಲ್ಲಿ ಅನುಗೃಹೀತವಾಗಿರುವ ಶ್ಲೋಕವೂ ಈ ಅರ್ಥದಲ್ಲಿ ಅನುಸಂಧೇಯ. ಹೀಗೆಯೇ— ''ಪೊಯ್‌ಕೈಮುನಿಪೂದತ್ತಾರ್ ಪೇಯಾಳ್ವಾರ್, ತಣ್

ಪೊರುನಲ್ ವರುಂ ಕುರುಕೇಶನ್ . . . . . .
. . . . . ಮಂಗೈಯರ್ ಕೋನ್ . . ಎನ್ರಿವರ್
. . . . . . . ಪಾಡುಂ ಶೆಯ್ಯ ತಮಿಳ್‌ಮಾಲೈ ಕಳ್
ನಾಮ್ ತೆಳಿಯವೋದಿ, ತ್ತೆಳಿಯಾದ ಮರ್ರೈ ನಿಲಂಗಳ್ ತೆಳಿಕಿನ್ರೋಮೇ''—ಎಂಬ

ಶ್ರೀ ದೇಶಿಕ ಶ್ರೀಸೂಕ್ತಿಯೂ ಇಲ್ಲಿ ಅನುಸಂಧೇಯ. ಪೊಯ್‌ಕೈಮುನಿ ಮುಂತಾದ ದಿವ್ಯ ಸೂರಿಕೃತ ಪ್ರಬಂಧಗಳನ್ನು ಅರ್ಥಸಹಿತ ಅಧ್ಯಯನ ಮಾಡಿ ಗಹನವಾದ ವೇದಾಂತಾರ್ಥಗಳನ್ನು ವಿಶದವಾಗಿ ನಿರ್ಣಯಿಸಿದುದಾಗಿ ಆಚಾರ್ಯಪಾದರು ಇದರಲ್ಲಿ ಅನುಭವಿಸಿದ್ದಾರೆ. ಹೀಗೆ ಬ್ರಹ್ಮಸಂಹಿತಾದ್ವಯಾದ್ವೈತ ಸಿದ್ಧಾಂತವೂ ಇದಾಗಿದೆ. ಇದೂ, ಉಪನಿಷತ್ಪ್ರಭವಸಿದ್ಧಾಂತಗಳಲ್ಲಿ ಶ್ರೀ ರಾಮಾನುಜ ಸಿದ್ಧಾಂತಕ್ಕಿರುವ ವಿಶಿಷ್ಟತೆ.

ಭಗವದ್ರಾಮಾನುಜರು ಅತ್ಯುತ್ಕೃಷ್ಟವಾದ ಒಂಭತ್ತು ಧರ್ಮಗ್ರಂಥಗಳನ್ನು ರಚಿಸಿ ಶ್ರೀ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಅಮೋಘ ಸೇವೆಯನ್ನು ಸಲ್ಲಿಸಿದ್ದಾರೆ. ಇವುಗಳಲ್ಲಿ ಶ್ರೀಭಾಷ್ಯವು ಅತಿ ಮುಖ್ಯವಾದುದು. ಚೇತನರ ಘೋರಭವ ಸಂಜ್ವರಕ್ಕೆ ಮಾತ್ರವಲ್ಲದೆ ಶ್ರುತಿ–ಸ್ಮೃತಿ–ಸೂತ್ರಗಳ ಅಂತರ್ಜ್ವರಕ್ಕೂ ಪಥ್ಯವೂ ಹೃದ್ಯವೂ ಆದ ಶಾಮಕವಿದು—ಎಂಬ ಅರ್ಥದಲ್ಲಿ—

''ತಸ್ಮೈ ರಾಮಾನುಜಾರ್ಯಾಯನಮಃ ಪರಮಯೋಗಿನೇ ।
ಯಃ ಶ್ರುತಿ ಸ್ಮೃತಿ ಸೂತ್ರಾಣಾಂ ಅಂತರ್ಜ್ವರಮಶೀಶಮತ್ ॥''—ಇತ್ಯಾದಿಯಾಗಿ ಉಲ್ಲಿಖಿತವಾಗಿದೆ.

''ನಚೇದ್ರಾಮಾನುಜೇತ್ಯೇಷಾ ಚತುರಾ ಚತುರಕ್ಷರೀ ।
ಕಾಮವಸ್ಥಾಂ ಪ್ರಪದ್ಯನ್ತೇ ಜನ್ತವೋಹನ್ತಮಾದೃಶಃ ॥''—ಇತ್ಯಾದಿಯಾಗಿ ಶ್ರೀರಾಮಾನುಜರ ದಿವ್ಯ ಪ್ರಭಾವ ವರ್ಣಿತವಾಗಿದೆ.

ಘೋರ ಭವ ಸಂಜ್ವರ ಪೀಡಿತರಿಗೆ ಪಥ್ಯವೂ ಹೃದ್ಯವೂ ಎಂದು ಓದಲ್ಪಟ್ಟ ಶ್ರೀಭಾಷ್ಯ ಶ್ರೀಸೂಕ್ತಿಗಳ ಸಾರಾರ್ಥಾನುಸಂಧಾನಸೌಕರ್ಯಕ್ಕಾಗಿ ಅವನ್ನು ಕನ್ನಡಿಸಬೇಕೆಂದು ಕೆಲವು ಆಸ್ತಿಕಮಿತ್ರರು ಸಲಹೆಯಿತ್ತರು. ಅಪೇಕ್ಷಿತಪ್ರಜ್ಞೆ, ಶಕ್ತಿ, ಸಾಮಗ್ರಿಗಳ ಅತಿ ಪರಿಮಿತಿಯಿಂದ ಸ್ವಲ್ಪ ಕಾಲ ಸ್ತಬ್ಧನಾಗಿದ್ದೆ. ಮತ್ತೆಯೂ ಅವರು ಅದನ್ನು ಜ್ಞಾಪಿಸಿದರು. ಇದು

''ಸ್ವಾಪೋದ್ಬೋಧವ್ಯತಿಕರನಿಭೇ ಭೋಗಮೋಕ್ಷಾಂತರಾಳೇ
ಕಾಲಂ ಕಂಚಿತ್ ಜಗತಿ ವಿಧಿನಾ ಕೇನ ಚಿತ್‌ಸ್ಥಾಪ್ಯಮಾನಾಃ ।
ತತ್ತ್ವೋಪಾಯ ಪ್ರಭೃತಿ ವಿಷಯೇ ಸ್ವಾಮಿದತ್ತಾಂ ಸ್ವನಿಷ್ಠಾಂ
ಶೇಷಾಂ ಕೃತ್ವಾ ಶಿರಸಿ ಕೃತಿನಃ ಶೇಷಮಾಯುರ್ನಯನ್ತಿ ॥''

—ಎಂಬ ಶ್ರೀಮದಾಚಾರ್ಯಪಾದರ ಶ್ರೀ ಸ್ವನಿಷ್ಠಾಭಿಜ್ಞಾನಾಧಿಕಾರದ ಅಂತಿಮ ಶ್ಲೋಕವನ್ನೂ ಜ್ಞಾಪಕಕ್ಕೆ ತಂದಿತು. ಭಗವಂತನು ಪ್ರಪನ್ನರನ್ನು ಅವರ ಪ್ರಾರಬ್ಧ ಕರ್ಮವಶದಿಂದ ಸಂಸಾರ — ಮೋಕ್ಷಗಳ ಅಂತರಾಳದಲ್ಲಿ ಸ್ವಲ್ಪಕಾಲ ಈ ಭೂಮಿಯಲ್ಲಿ ಇಟ್ಟಿರುವನು. ಈ ಆಂತರಾಳಿಕ ಕಾಲವನ್ನು ಅರ್ಚಾವಿಗ್ರಹಪ್ರೇಮ–ಕಾಲಕ್ಷೇಪಾದ್ಯಭಿ ರುಚಿಗಳಿಂದ ಕಳೆಯಬೇಕಾದುದು ಇವರಿಗೆ ಸ್ವಾಮಿದತ್ತವಾದ ಸ್ವನಿಷ್ಠೆ "ಸ್ವನಿಷ್ಠಾಭಿಜ್ಞಾನಂ ಸುಭಗಮಪವರ್ಗಾದುಪನತಾತ್"–ಎಂಬಂತೆ ಈ ನಿಷ್ಠೆಯು ಸ್ವನಿಷ್ಠಾಭಿಜ್ಞ ಮುಮುಕ್ಷುಗಳಿಗೆ ಮೋಕ್ಷಕ್ಕಿಂತ ಮಿಗಿಲಾಗಿ ಆನಂದ ಜನಕ.

"ಅಧ್ಯಾತ್ಮಗ್ರಂಥ ನಿರ್ಮಾಣಂ ಪಾತ್ರೇಷುಪ್ರತಿಪಾದನಂ ।
ಅರ್ಚಾವಿಗ್ರಹ ಸೇವಾಚ. ತೇಷಾ ಮೇತನ್ಮಹತ್ಫಲಂ ॥"—

"ಕಾರ್ ಕಲನ್ದ ಮೇನಿಯಾನ್ ಕೈಕಲನ್ದ ಆಳಿಯಾನ್
ಪಾರ್ ಕಲನ್ದ ಪಲ್‌ವಯಿತ್ತಾನ್ ಪಾಂಬಣೈಯಾನ್, ಶೀರ್ ಕಲನ್ದ
ಶೊಲ್ ನಿನ್ನೈನ್ದು ಪೋಕ್ಕಾರೇಲ್ ಶೂಳ್‌ವಿನ್ಯೆಯಿನ್ ಆಳ್‌ತುಯರೈ
ಎನ್ ನಿನೇನ್ದು ಪೋಕ್ಕುವರ್ ಇಪ್ಪೋದು" [ಶ್ರೀ ಪೆರಿಯತಿರುವಂದಾದಿ–86]—

ಇತ್ಯಾದಿ ಶ್ರೀಸೂಕ್ತಿಗಳೂ ಅನುಸಂಧಾನಕ್ಕೆ ಬಂದವು. ಆದುದರಿಂದ ಮೇಲೆ ಹೇಳಿದ ಒಬ್ಬಿಬ್ಬ ಮಿತ್ರರ ಪ್ರೇರಣೆಯನ್ನು "ಬಲವಂತಮಾಘುಸ್ನಾನ —ವೆಂದು ಸನ್ಮಾನಿಸಿ ಈ ಪುಣ್ಯಕರವಾದ ಮಹತ್ಕಾರ್ಯಕ್ಕೆ ಒಡಂಬಟ್ಟೆ.

ಸಹಜ ಬಹುಗುಣಗಳುಳ್ಳ ಪ್ರಸಕ್ತ ಶ್ರೀಭಾಷ್ಯ ಶ್ರೀಸೂಕ್ತಿಗಳ ಗುಣಮಹಾಂಭೋಧಿಯಲ್ಲಿ ಹೆಚ್ಚು ಆಳಕ್ಕೆ ಇಳಿಯದೆ ಸಾಧ್ಯವಾದಷ್ಟು ತಟಸ್ಥನಾಗಿದ್ದುಕೊಂಡೇ ಇದಕ್ಕೆ ತೊಡಗುವುದು ಕ್ಷೇಮ ವೆಂದು ನಿಶ್ಚೈಸಿ, ಸ್ವಾಚಾರ್ಯ ಸಂಸ್ಮರಣ ಪೂರ್ವಕವಾಗಿ ಈ ಗ್ರಂಥ ನಿರ್ಮಾಣಕ್ಕೆ ತೊಡಗಿದೆ. ಶ್ರೀ ಮದ್ವೇದಾಂತಾಚಾರ್ಯ ಚಿಂತನವಿಲ್ಲದ ಶ್ರೀರಾಮಾನುಜ ಚಿಂತನವು ಶ್ರೀರಾಮಾನುಜರಿಗೆ ಪ್ರಿಯವಲ್ಲ. ಶ್ರೀ ರಾಮಾನುಜ ಚಿಂತನವಿಲ್ಲದ ಶ್ರೀವೇದಾಂತಾಚಾರ್ಯ ಚಿಂತನವು ವೇದಾಂತಾಚಾರ್ಯರಿಗೆ ಪ್ರಿಯವಲ್ಲ; ಇವರಿಬ್ಬರ ಚಿಂತನವಿಲ್ಲದ ಭಗವಚ್ಚಿಂತನವು ಭಗವಂತನಿಗೆ ಪ್ರಿಯವಲ್ಲ—ಎಂಬುದನ್ನೂ ನೆನೆದು ಈ ಮೂವರ ಪ್ರೀತಿಗಾಗಿಯೂ ಶ್ರೀಮದಾಚಾರ್ಯಪಾದರ ಶ್ರೀಮದಧಿಕರಣ ಸಾರಾವಳಿಯ ಜಾಡನ್ನು ಹಿಡಿದು ಪ್ರಕೃತ ಗ್ರಂಥ ರಚನೆಗೆ ತೊಡಗಿದೆ. ಈ ಯೋಜನೆಯ ಪ್ರಕಾರ ಮೂಲವಾದ ಶ್ರೀಭಾಷ್ಯದ ಜಿಜ್ಞಾಸಾಧಿಕರಣವೇ ಮುಂತಾದರೊಳಗೆ ವಿಸ್ತೃತವಾದ ಕೆಲವು ಮುಖ್ಯವಾದಗಳು ಬಿಟ್ಟುಹೋಗುವುದು ಮುಂದೆ ಕಾಣಿಸಿತು.

ಆಗ "ಏಕಂ ತತ್ಸರ್ವ ಸಿದ್ಧ್ಯೈ ಕಲಯತ
ಹೃದಯೇ ತತ್ತ್ವ...ಮುಕ್ತಾ ಕಲಾಪಂ"—

ಎಂಬ ಆಚಾರ್ಯ ಪಾದರ ಶ್ರೀಸೂಕ್ತಿಯು ಮನಸ್ಸಿಗೆ ಬಂದು—ಇಲ್ಲಿ ಪ್ರಕೃತವಾದ ಅಂತಹ ಕೆಲವು ವಾದಗಳನ್ನು ಆ ಬೃಹದ್ ಗ್ರಂಥದಿಂದ ತೆಗೆದು ಪ್ರಸಕ್ತ ಗ್ರಂಥದ ಪ್ರಾಸ್ತಾವಿಕೆಯಲ್ಲಿ ಸೇರಿಸಲಾಗಿದೆ. ಈ ಸಂದರ್ಭದಲ್ಲಿ ಆ ಗ್ರಂಥದ ಕನ್ನಡ ಅನುವಾದಕರಾದ ಪಂಡಿತ ರತ್ನಂ ಶ್ರೀಮಾನ್ ಕೊತ್ತಮಂಗಲಂ ವರದಾಚಾರ್ಯಸ್ವಾಮಿಗಳಿಗೂ ಸ್ವಲ್ಪಮಟ್ಟಿಗೆ ಋಣಿಯಾಗಿದ್ದೇನೆ. ಇದಕ್ಕಾಗಿ ನನ್ನ ವಂದನೆಗಳು ಅವರಿಗೆ ಸಲ್ಲತಕ್ಕದ್ದಾಗಿದೆ. ತರಣಿ ದರ್ಶನಕ್ಕಿಂತ ಕಿರಣದ ಅನುಭವ ಸುಲಭವಷ್ಟೆ.

ಮೂಲದಲ್ಲಿಯ ವಿಷಯಗಳು ಬಹುಪ್ರೌಢ ಮತ್ತು ಕಠಿಣ, ಅಲ್ಲಲ್ಲಿ ಬಂದಿರುವ ಶಾಸ್ತ್ರೀಯ ಶಬ್ದಗಳ ವಿವರಣೆಯನ್ನೂ ಕೊಟ್ಟಿದೆ. ಕನ್ನಡೀಕರಣದಲ್ಲಿ ಸರಳತೆ ಸಾಲದೆಂದು ತೋರುವುದು ಸಾಮಾನ್ಯರಲ್ಲಿ ಸಹಜ. ಸಾಲದುದಕ್ಕೆ ನನ್ನ ಅಭ್ಯಸ್ತ ಶೈಲಿಯೂ ಅಂತಹದೇ. ಅತಿ ಸರಳೀಕರಣಕ್ಕೆ

ತೊಡಗಿದಲ್ಲಿ ಗ್ರಂಥವೂ ಬಹುದೊಡ್ಡದಾಗುವುದು. ಆ ಬಿಗಿಯೂ ಇರದು. ಸ್ವಲ್ಪ ಮಟ್ಟಿಗೆ ಶಾಸ್ತ್ರ ಸಂಸ್ಕಾರದ ತಳಹದಿ ಮತ್ತು ಶ್ರದ್ಧೆ ಇರುವವರನ್ನು ಮನಸ್ಸಿನಲ್ಲಿಟ್ಟುಕೊಂಡು ಕನ್ನಡಿಸಲಾಗಿದೆ. ನಿವೇದನೆ, ಮುನ್ನುಡಿ ಬಿನ್ನಹ, ಪ್ರಾಸ್ತಾವಿಕ, ಬ್ರಹ್ಮಸೂತ್ರಗಳು, ಅಧಿಕರಣಗಳ ಅನುಕ್ರಮಣಿಕೆ, ಬ್ರಹ್ಮ ವಿದ್ಯೆಗಳ ನಿರೂಪಣೆ–ಉಪೋದ್ಘಾತ–ಶಾಸ್ತ್ರಾವತಾರ–ಶ್ರೀಭಾಷ್ಯಾಮೃತಸಾರ ಈ ಕ್ರಮದಲ್ಲಿ ಗ್ರಂಥ ಸಾಗಿದೆ. ಪ್ರತ್ಯಧಿಕರಣಕ್ಕೂ ಸಂಗತಿ, ವಿಷಯವಾಕ್ಯ, ಸೂತ್ರಾರ್ಥ, ವಿವರಣೆ, ಪೂರ್ವಪಕ್ಷ, ಸಿದ್ಧಾಂತ ಗಳನ್ನು ಪ್ರತಿಪಾದಿಸಲಾಗಿದೆ. ಕಡೆಯದಾಗಿ—

"ನ ಖ್ಯಾತಿಲಾಭಪೂಜಾರ್ಥಂ ಗ್ರಂಥೋಽಸ್ಮಾಭಿರುದೀರ್ಯತೆ ।

ಸ್ವಬೋಧ ಪರಿಶುದ್ಧ್ಯರ್ಥ್ಯಂ ಬ್ರಹ್ಮವಿನ್ನಿಕಷಾಶ್ಮಸು ॥"—ಎಂಬ ಸುರೇಶ್ವರಾಚಾರ್ಯರ ಸೂಕ್ತಿ ಯಂತೆ, ಕೀರ್ತಿ, ಹಣ, ಬಹುಮಾನ ಮುಂತಾದುವುಗಳಿಗಾಗಿ ಈ ಗ್ರಂಥವನ್ನು ಬರೆದಿಲ್ಲ. ಪ್ರಕೃತ ಗ್ರಂಥದ ವಿಷಯವನ್ನು ಕುರಿತು ನಾನು ತಿಳಿದುಕೊಂಡಿರುವುದು ಸರಿಯಾದ ತಿಳಿವಳಿಕೆಯೇ—ಎಂಬು ದನ್ನು ಬ್ರಹ್ಮವೇತ್ತರ ವಿಮರ್ಶೆಯೆಂಬ ಒರೆಗಲ್ಲಿನಲ್ಲಿ ಸ್ವರ್ಣ ಪರೀಕ್ಷೆ ಮಾಡಿಸಿ ನೋಡುವುದೇ ಇದರ ಉದ್ದೇಶ. ಅಂತಹ ಬ್ರಹ್ಮವೇತ್ತೃಗಳಾದ ಸಂಸ್ಕೃತ ಪ್ರೊಫೆಸರ್ ಶ್ರೀಮಾನ್ ಎಚ್. ಎಸ್. ವರದ ದೇಶಿಕಾಚಾರ್ಯರವರು ಮತ್ತು ಡಾ॥ ಎನ್. ಎಸ್. ಅನಂತರಂಗಾಚಾರ್ಯರವರುಗಳು ನನ್ನ ಕೋರಿಕೆ ಯಂತೆ ಶ್ರಮವಹಿಸಿ ಕೊಟ್ಟ ವಿದ್ವತ್ಪೂರ್ಣ ಮುನ್ನುಡಿಗಳಿಗಾಗಿ ಅವರುಗಳಿಗೆ ಹೃತ್ಪೂರ್ವಕ ಅಭಿವಂದನೆಗಳನ್ನು ಈ ಮೂಲಕ ಅರ್ಪಿಸುತ್ತಿದ್ದೇನೆ.

ಪ್ರಕೃತ ಗ್ರಂಥ ರಚನೆಯಲ್ಲಿ, ಪ್ರವೃತ್ತಿಮಾರ್ಗದಲ್ಲಿ ಎಂದೂ ಕಾಲೇ ಇಡದವನಾದ ನನ್ನ ಮಾಮೂಲು ಪಾತ್ರ ಇದರ ಹಸ್ತಪ್ರತಿ ನಿರ್ಮಾಣದವರಿಗೆ ಮಾತ್ರವೇ. ಅಪೇಕ್ಷಿತ ಪ್ರಕಟನೆ, ಪ್ರಕಾಶನ ಮುಂತಾದ ಇದರ ಮುಂದಿನ ವ್ಯಾಪಾರಗಳೆಲ್ಲವೂ ನನ್ನ ಈ ಅಲ್ಪ ವ್ಯಾಪಾರದಿಂದ ಪ್ರೀತನಾಗಿ

"ಸಂಕಲ್ಪಾದೇವ ಭಗವಾನ್ ತತ್ತ್ವತೋ ಭಾವಿತಾತ್ಮನಾಂ ।

ವ್ರತಾಂತ ಮುಖಿಲಂ ಕಾಲಂ ಸೇಚಯತ್ಯಮೃತೇನ ತು॥"—ಎನ್ನಲ್ಪಟ್ಟಿರುವ ಭಗವಂತನದೇ. ತತ್ಪ್ರೇರಣೆಯಿಂದ, ಸಾಹಿತ್ಯ–ಸಂಸ್ಕೃತಿ ಅಭಿವೃದ್ಧಿ ಇಲಾಖೆಯಿಂದ 2000/ ರೂ.ಗಳ ನೆರವನ್ನು ದೊರಕಿಸಿ ಇದಕ್ಕೆ ಅಂಕುರಾರ್ಪಣೆ ಮಾಡಿದವರು ಆಪ್ತತಮರಾದ ಶ್ರೀಮಾನ್ ಡಾ॥ ಎನ್. ಎಸ್. ಅನಂತರಂಗಾಚಾರ್ಯರು. ಅನಂತರ ಅದರ ಮುಂದಿನ ವೆಚ್ಚವೆಲ್ಲಕ್ಕೂ ಪೂರ್ಣವಾಗಿ ಸ್ವಹಸ್ತಪರಹಸ್ತ ಗಳಿಂದ ಅತ್ಯುತ್ಸಾಹದಿಂದ ನೆರವಿಗೆ ನಿಂತವರು ಆಪ್ತವರೇಣ್ಯರೂ, ದಕ್ಷರೂ, ಶ್ರೀಮದ್ಭಟ್ಟಕುಲಾ ಗ್ರಣಿಗಳೂ, ತಿರುಮಲೆ ತಿರುಪತಿ ದೇವಸ್ಥಾನದ ಆಸ್ಥಾನ ವಿದ್ವಾಂಸರೂ ಆದ ಮಾನ್ಯ ಶ್ರೀ ಎಂ. ಆರ್ ಸಂಪತ್ಕುಮಾರ ಭಟ್ಟಾಚಾರ್ಯರವರು. ತರುವಾಯ ಗ್ರಂಥದ ಹಸ್ತ ಪ್ರತಿಯನ್ನು ತಮ್ಮ ವಿಶ್ವಾಸ ಪಾತ್ರವಾದ 'ಈಸ್ಟರ್ನ್ ಪ್ರೆಸ್' ಗೆ ಒಯ್ದು ಅಲ್ಲಿಯವರಿಂದ ಅಕ್ಷರ ಮುದ್ರಣಾದಿ ಸಕಲ ವ್ಯಾಪಾರ ಗಳನ್ನೂ ಸಾಂಗವಾಗಿ ಸುಲಲಿತವಾಗಿ, ಅಚ್ಚುಕಟ್ಟಾಗಿ ಪರಿಷ್ಕಾರಗೊಳಿಸಿ ಗ್ರಂಥವನ್ನು ಪ್ರಕಾಶನಕ್ಕೆ ಸಿದ್ಧಗೊಳಿಸಿ ಉದ್ಧಕ್ಕೂ ಇದರ ಜೀವನಾಡಿಯಾಗಿರುವವರು—ಈಚೆಗೆ ನನ್ನಲ್ಲಿ ಕಾಲಕ್ಷೇಪಕ್ಕೆ ಬರುತ್ತಿ ರುವವರೂ,ಮುಗ್ಧರೂ, ಸ್ನಿಗ್ಧರೂ, ವಿದಗ್ಧರೂ, ಉತ್ಸಾಹಿಗಳೂ ಆದ ಅಡ್ವೋಕೇಟ್, ಶ್ರೀಮಾನ್ ಸಿ. ಬಿ. ಶ್ರೀನಿವಾಸನ್‌ರವರು. ಇದರ ಉದ್ದಕ್ಕೂ ಹೀಗೆ ಸಂನಿಪತ್ಯೋಪಕಾರರುಗಳಾದ ಈ ಮೂವರಿಗೂ, ಉದ್ದಕ್ಕೂ ಉದಾರವರ್ತನೆಯನ್ನು ತೋರಿ ಇದಕ್ಕೆ ಪಬ್ಲಿಷರ್ ಆಗಿಯೂ ನಿಂತಿರುವ ಮೇಲಣ ಪ್ರೆಸ್ ನವರಾದ ಶ್ರೀಮತಿ ರೋಸ್ ಚಿಂತಾಮಣಿಯವರಿಗೂ, ಮುದ್ರಣಕಾರರುಗಳಿಗೂ, ಸಾಹಿತ್ಯ–ಸಂಸ್ಕೃತಿ ಅಭಿವೃದ್ಧಿ ಇಲಾಖೆಯವರಿಗೂ, ಪ್ರತ್ಯಕ್ಷ–ಪರೋಕ್ಷವಾಗಿ ನೆರವು ನೀಡಿರುವ ಇನ್ನೂ ಇತರ ಮಹನೀಯರೆಲ್ಲರಿಗೂ ಸಹ ನಾನು ಚಿರಋಣಿ.

"ಗಂಭೀರೇ ಬ್ರಹ್ಮಭಾಗೇ ಗಣಯಿತುಮಖಿಲಂ ಕಃ ಪ್ರವೀಣಃ ಪ್ರಮೇಯಂ ।
ದಿಙ್ಮಾತ್ರಂ ದರ್ಶಯನ್ನಸ್ಪೃಹ ಮಿಹ ನಿಪುಣೈಃ ಪ್ರಾರ್ಥ್ಯಮಧ್ಯಕ್ಷಣೀಯಃ ॥"

ಎಂದು ಪ್ರಾಜ್ಞ ಸಹೃದಯರಲ್ಲಿ ಬಿನ್ನವಿಸಿ, ಮೇಲ್ಕಂಡವರೆಲ್ಲರಿಗಾಗಿಯೂ, ಸ್ವಂತಕ್ಕಾಗಿಯೂ ಸಹ ನನ್ನ ಹೃತ್ಪೂರ್ವಕ ಶ್ರೇಯಃಪ್ರಾರ್ಥನೆ—

"ತದ್ಭಾಷ್ಯಂ ಸ ಚ ಭಾಷ್ಯಕೃತ್ ಸ ಚ ಹರಿಃ ಸಮ್ಯಕ್ ಪ್ರಸೀದನ್ತು, ನಃ"—ಎಂಬುದೊಂದೇ.

ಓಂ ನಮೋ ಗುರುಭ್ಯಃ

ಇತಿ ಶ್ರೀರಾಮಾನುಜಾಂಘ್ರಿಶರಣನೂ ಸಾಧುಕಟಾಕ್ಷ ಕೇಳಿ ನಿಲಯನೂ ಆದ ಲೇಖಕ.

20-11-82

**ಕೆ. ಎಸ್. ಕೃಷ್ಣತಾತಾಚಾರ್**

ಶ್ರೀಃ

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ

ಚಿದಚಿತ್ಪರ ತತ್ತ್ವಾನಾಂ ತತ್ತ್ವಯಾಥಾರ್ಥ್ಯ ವೇದಿನೇ ।
ರಾಮಾನುಜಾಯ ಮುನಯೇ ನಮೋ ಮಮ ಗರೀಯಸೇ ॥

# ಭೂಮಿಕೆ

ಮನುಷ್ಯನ ಸಕಲ ಕ್ಲೇಶಗಳಿಗೂ ದೇಹಾತ್ಮಭ್ರಮ, ಮತ್ತು ಸ್ವತಂತ್ರಾತ್ಮಭ್ರಮವೇ ಕಾರಣ. ಚಿದಚಿದೀಶ್ವರ ತತ್ತ್ವಜ್ಞಾನದಿಂದ ಈ ಭ್ರಮೆಗಳೆರಡೂ ನಿರ್ಮೂಲವಾಗುವುದರಿಂದ ಈ ತತ್ತ್ವತ್ರಯ ಜ್ಞಾನವೇ ಮೋಕ್ಷಕ್ಕೆ ಸಾಧನ. [ಚಿತ್ = ಚೇತನ; ಅಚಿತ್ = ಅಚೇತನ ; ಈಶ್ವರ = ಪರಮಾತ್ಮ.] ಇವುಗಳ ಸ್ವರೂಪ-ಸ್ವಭಾವ ಮುಂತಾದುವನ್ನು ಒಬ್ಬೊಬ್ಬರು ಒಂದೊಂದು ವಿಧದಲ್ಲಿ ಹೇಳಿರುವುದರಿಂದ ಜಿಜ್ಞಾಸುಗಳಿಗೆ ಸಂಶಯ ಬರುವುದು ಸಹಜ. ಆದ್ದರಿಂದ ಪ್ರತಿಪಕ್ಷಗಳ ವಾದಗಳನ್ನು ನಿರಾಕರಿಸಿ ಸಿದ್ಧಾಂತವನ್ನು ನಿರೂಪಿಸುವುದರಿಂದ ಮುಮುಕ್ಷುಗಳು ತತ್ತ್ವತ್ರಯದ ಯಥಾವತ್ತಾದ ಜ್ಞಾನವನ್ನು ಸುಲಭವಾಗಿ ಪಡೆಯಲೆಂಬ ಉದ್ದೇಶದಿಂದ ಶ್ರೀಭಾಷ್ಯಕಾರರು ಶ್ರೀಭಾಷ್ಯವೆಂಬ ದೊಡ್ಡ ಗ್ರಂಥವನ್ನು ಅನುಗ್ರಹಿಸಿದ್ದಾರೆ. ಇದರಂತೆ ವಸ್ತುಸ್ಥಿತಿ ಇಷ್ಟೇ ಎಂದು ನಿಶ್ಚಯವಾದ ಮೇಲೆ ಮುಂದೆ ಬರಬಹುದಾದ ಪ್ರತಿಪಕ್ಷಗಳ ವಾದಗಳು ನಮ್ಮ ನಿಲುವನ್ನು ಕದಲಿಸಲಾರವು, ಇದನ್ನು '' ಪುಂಸ್ತ್ವೇ ತತ್ತ್ವೇನ ದೃಷ್ಟೇ ಪುನರಪಿ ನಖಲು ಪ್ರಾಣಿತಾಸ್ಥಾಣುತಾದಿಃ'' ಎಂಬುದರಿಂದ ಶ್ರೀಮದಾಚಾರ್ಯರು ತಿಳಿಸಿದ್ದಾರೆ. ಅಂದರೆ, ದೂರದಲ್ಲಿ ನಿಂತಿರುವ ವಸ್ತುವೊಂದನ್ನು ನೋಡಿದಾಗ ಅದು ಮನುಷ್ಯನೇ, ಅಥವಾ ಸ್ಥಾಣು (ಮೋಟುಮರ) ವೇ? ಎಂಬ ಸಂಶಯವುಂಟಾಗುತ್ತದೆ. ಹತ್ತಿರ ಹೋಗಿ 'ಇದು ಮನುಷ್ಯನೇ'—ಎಂದು ದೃಢಮಾಡಿಕೊಂಡ ಮೇಲೆ ಮುಂದೆ ಎಷ್ಟು ಪ್ರತಿಪಕ್ಷಗಳು ಹುಟ್ಟಿದರೂ ಅವು ನಮ್ಮ ಬುದ್ಧಿಯನ್ನು ಕದಲಿಸಲಾರವು. (ಮುಂದಿನ ಪುಟ ನೋಡಿ)

ಅಬಾಧಿತವಾದ ವಸ್ತುವೇ ತತ್ತ್ವ. ರಜ್ಜು (ಹಗ್ಗ)ವಿನಲ್ಲಿ ಸರ್ಪವೆಂಬ ಭ್ರಮೆ ಬಂದಾಗ ಅನಂತರ, ಇದು ಸರ್ಪವಲ್ಲ. ರಜ್ಜು—ಎಂಬ ಬಾಧಜ್ಞಾನ ಬರುವುದರಿಂದ, ರಜ್ಜುವಿನಲ್ಲಿ ಸರ್ಪವೆಂಬುದು ಅತತ್ತ್ವ. ರಜ್ಜುವೆಂಬುದೇ ತತ್ತ್ವ. ಹೀಗೆಯೇ ಇಂತಹ ಬಾಧಜ್ಞಾನ ಯಾವುದಕ್ಕೆ ಬರುವುದಿಲ್ಲವೋ ಅದು ತತ್ತ್ವ. ಘಟಾದಿ ವಸ್ತುಗಳು ಇವೆಯೆನ್ನುವುದಕ್ಕೆ ನಮ್ಮ ಜ್ಞಾನವೇ ಪ್ರಮಾಣ. ಆದರೆ, 'ನಾನು'—ಎಂಬ ಆತ್ಮನು ತನ್ನ ಇರುವಿಕೆಗೆ ಬೇರೆ ಪ್ರಮಾಣವನ್ನು ಅಪೇಕ್ಷಿಸುವುದಿಲ್ಲ. ಆದ್ದರಿಂದ ಘಟಾದಿಗಳು ಜಡ, ಆತ್ಮಾದಿಗಳು ಅಜಡ. (ಸ್ವಪ್ರಕಾಶ).

ಅವಸ್ಥಾಶ್ರಯತ್ವವೆಂಬುದು ದ್ರವ್ಯ ಸಾಮಾನ್ಯ ಲಕ್ಷಣ, ಅವಸ್ಥೆಯೆಂಬುದು ಆಗಂತುಕವೂ ಅಪೃಥಕ್ಸಿದ್ಧವೂ ಆದ ಧರ್ಮ. ಬಂದು ಹೋಗುವ ಮತ್ತು ದ್ರವ್ಯದಿಂದ ಬೇರ್ಪಡಿಸಲಾಗದ ಧರ್ಮವೇ ಅವಸ್ಥೆ—ಎಂದರ್ಥ.

ಸತ್ತ್ವ, ರಜಸ್, ತಮಸ್—ಎಂಬ ಗುಣಗಳಿಂದ ಕೂಡಿರುವುದೇ ಪ್ರಕೃತಿಯೆನಿಸಿದೆ.

ಘಳಿಗೆ, ದಿವಸ, ಪಕ್ಷ–ಮಾಸ–ಸಂವತ್ಸರ ಮುಂತಾದ ಪರಿಣಾಮಗಳನ್ನುಳ್ಳದ್ದು ಕಾಲವೆನಿಸಿದೆ. ಅಣುವಾಗಿಯೂ ಚೇತನನಾಗಿಯೂ ಇರುವವನು ಜೀವಾತ್ಮಾ.

ಜೀವಾತ್ಮನಿಗಿಂತಲೂ ಬೇರೆಯಾದ ಚೇತನನೇ ಈಶ್ವರ.

ಪ್ರಕೃತಿಗಿಂತ ಭಿನ್ನವಾಗಿ ಸ್ವತಃ ಕೇವಲ ಸತ್ತ್ವಗುಣವನ್ನು ಮಾತ್ರ ಉಳ್ಳದ್ದು ನಿತ್ಯವಿಭೂತಿ. ಚೇತನರಿಗೆ ಆಗುವ ಘಟಾದಿ ಪದಾರ್ಥಗಳ ಪ್ರಕಾಶವೇ ಧರ್ಮಭೂತಜ್ಞಾನ. ಅಂದರೆ ಸವಿಷಯಕ ಪ್ರಕಾಶತ್ವವು ಧರ್ಮಭೂತಜ್ಞಾನದ ಲಕ್ಷಣವೆಂದರ್ಥ.

ಈ ತತ್ತ್ವತ್ರಯ ಜ್ಞಾನಕ್ಕೆ ತಳಹದಿಯಾಗಿರುವುದು ಕೆಳಗೆ ಕಾಣಿಸಿರುವ ತತ್ತ್ವತ್ರಯ ವಿಭಾಗ:—




ಚಿದಚಿದೀಶ್ವರ ತತ್ತ್ವಜ್ಞಾನವೇ ಮೋಕ್ಷಕ್ಕೆ ಸಾಧನವೆಂಬುದಾಗಿ—

"ಪೃಥಗಾತ್ಮಾನಾಂ ಪ್ರೇರಿತಾರಂ ಚ ಮತ್ವಾ ಜುಷ್ಟಸ್ತತಸ್ತೇನಾಮೃತತ್ವಮೇತಿ"—ಇತ್ಯಾದಿ ಶ್ರುತಿಯಿಂದ ವಿಹಿತವಾಗಿದೆ.

ಮತ್ತೊಂದು ತತ್ತ್ವಕ್ಕೆ ಕಾರಣವಾಗಿರುವ ತತ್ತ್ವವನ್ನು 'ಪ್ರಕೃತಿ'—ಎಂದೂ, ಹಾಗೆ ಕಾರಣವಾಗದ ತತ್ತ್ವವನ್ನು 'ವಿಕೃತಿ'—ಎಂದೂ ಹೇಳುವರು ಸಿದ್ಧಾಂತ ರೀತಿಯಲ್ಲಿ ಪ್ರಕೃತಿ, ಮಹತ್, ಅಹಂಕಾರ, ಪಂಚತನ್ಮಾತ್ರೆಗಳು, ಆಕಾಶ, ವಾಯು, ಅಗ್ನಿ, ಜಲ,—ಈ 12 ತತ್ತ್ವಗಳು ಮತ್ತೊಂದು ತತ್ತ್ವಕ್ಕೆ ಕಾರಣವಾಗುವುವು ಆದ್ದರಿಂದ ಇವು ಪ್ರಕೃತಿಗಳೆನಿಸಿವೆ 11 ಇಂದ್ರಿಯಗಳು, ಪೃಥಿವೀ ಈ 12 ತತ್ತ್ವಗಳು ಮತ್ತೊಂದು ತತ್ತ್ವಕ್ಕೆ ಕಾರಣವಾಗದುದರಿಂದ ವಿಕೃತಿಗಳೆನಿಸಿವೆ. ಹೀಗೆ ಸಿದ್ಧಾಂತದಲ್ಲಿ ಪ್ರಕೃತಿಗಳು 12, ವಿಕೃತಿಗಳೂ 12

ಸೃಷ್ಟಿಯಲ್ಲಿ ಮುಂದಿನ ತತ್ತ್ವಗಳಿಗೆ ಹಿಂದಿನ ತತ್ತ್ವಗಳು ಕಾರಣವಾಗುವುದಾದರೆ, ಸರ್ವ ಜಗತ್ತಿಗೂ ಪರಮಾತ್ಮನೇ ಕಾರಣನೆಂಬ ಸಿದ್ಧಾಂತವೇನಾಗುವುದು? ಎಂದಲ್ಲಿ ಆ ಪರಮಾತ್ಮನು ಕಾರಣಗಳಾದ ಹಿಂದಿನ ತತ್ತ್ವಗಳಿಗೆ ಅಂತರ್ಯಾಮಿಯಾಗಿರುತ್ತಾ ಕಾರ್ಯಭೂತವಾದ ತತ್ತ್ವಗಳೆಲ್ಲವನ್ನೂ ಸೃಷ್ಟಿಸುತ್ತಾನೆ, ಆಯಾ ಕಾರ್ಯಗಳಿಗೆ ಅಂತರ್ಯಾಮಿಯಾಗಿಯೂ ಆಗುತ್ತಾನೆ ಆದ್ದರಿಂದಲೇ ಇವನು 'ವಿಶ್ವರೂಪಿ'—ಯೆಂದು ಪ್ರಸಿದ್ಧನಾಗಿದ್ದಾನೆ ಆದ್ದರಿಂದ ಪ್ರಕೃತಿತತ್ತ್ವ, ವಿಕೃತಿ ತತ್ತ್ವ—ಎಲ್ಲವೂ ಪರಮಾತ್ಮನ ಅಧೀನವಾಗಿಯೇ ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತವೆ

"ವಿಶಿಷ್ಟಾದ್ವೈತ"—ಪದದಲ್ಲಿ ಎರಡರ್ಥ ಅಡಗಿದೆ 'ವಿಶಿಷ್ಟೇ ಅದ್ವೈತಂ'—ಚಿದಚಿದ್ವಿಶಿಷ್ಟನಾದ ಪರಮಾತ್ಮನು ಒಬ್ಬನೇ ಎಂಬುದು ಒಂದರ್ಥ "ವಿಶಿಷ್ಟಯೋಃ ಅದ್ವೈತಂ'—ಪರಮಾತ್ಮನೇ ಕಾರಣರೂಪನಾಗಿಯೂ ಕಾರ್ಯರೂಪನಾಗಿಯೂ ಆಗಿರುವನು ಎಂಬುದು ಮತ್ತೊಂದರ್ಥ. ಪರಮಾತ್ಮನು ಸರ್ವ ವಸ್ತುಗಳಲ್ಲೂ ಅಂತರ್ಯಾಮಿಯಾಗಿರುವುದರಿಂದ ಸರ್ವವಸ್ತುಗಳೂ ಅವನ ಶರೀರವಾಗುತ್ತವೆ. ಇದರಿಂದ ಅವನು 'ವಿಶ್ವರೂಪಿ'ಯೆನಿಸಿಕೊಳ್ಳುತ್ತಾನೆ. • ಆದ್ದರಿಂದ ತೇಜಸ್ಸಿನಿಂದ ಜಲ ಹುಟ್ಟುತ್ತದೆಯೆಂದರೆ ತೇಜಶ್ಶರೀರಕನಾದ ಪರಮಾತ್ಮನು ಜಲ ಶರೀರಕನಾದನೆಂದರ್ಥ ಹೀಗೆಯೇ ಪರಮಾತ್ಮನೇ ವಾಸ್ತವಿಕವಾಗಿ ಸರ್ವ ಕಾರಣನು

## ಪಂಚೀಕರಣ ಪ್ರಕ್ರಿಯೆಯ ವರ್ಣನೆ

ಹೀಗೆ ಸಮಷ್ಟಿ ಸೃಷ್ಟಿಯ ನಂತರ ನಡೆಯುವುದು ವ್ಯಷ್ಟಿ ಸೃಷ್ಟಿ. ಇದಕ್ಕೆ ತಳಹದಿಯಾಗಿರುವುದು ಪಂಚೀಕರಣ. ಇದರ ಪ್ರಕ್ರಿಯೆಯಾದರೋ—




ಮೇಲೆ ಚಿತ್ರಿಸಿರುವಂತೆ ಆಕಾಶಾದಿ ಪಂಚಭೂತಗಳನ್ನು ಎರಡಾಗಿ ವಿಭಜಿಸಿ ಮತ್ತೆಯೂ ಅದರ ಒಂದರ್ಧವನ್ನು ನಾಲ್ಕು ಭಾಗಗಳಾಗಿ ವಿಭಜಿಸುತ್ತಾನೆ. ಹೀಗೆ ವಿಭಜಿಸಲ್ಪಟ್ಟ ಪ್ರತಿಯೊಂದು ಭೂತದ ಆ

ಎಂಟನೆಯ ಒಂದಾದ ನಾಲ್ಕು ಭಾಗಗಳಿಂದ ಮತ್ತೊಂದು ಪ್ರತಿಯೊಂದು ಭೂತದ ಅರ್ಧಭಾಗ ವನ್ನು ಮಿಶ್ರಣಮಾಡುತ್ತಾನೆ. ಹೀಗೆ ಪಂಚೀಕರಣ ಮಾಡಲ್ಪಟ್ಟ ಆ ಪಂಚಭೂತಗಳಿಂದ ಆ ಪರಮಾತ್ಮನು ಬ್ರಹ್ಮಾಂಡ ಮೊದಲಾದ ಎಲ್ಲ ಕಾರ್ಯಗಳನ್ನೂ ಸೃಷ್ಟಿಸುತ್ತಾನೆ. ಮೇಲ್ಕಂಡಿರುವಂತೆ ಒಂದೊಂದರಲ್ಲೂ ಎಲ್ಲವೂ ಮಿಶ್ರವಾಗಿದ್ದರೂ,''ಪ್ರಧಾನೇನ ವ್ಯಪದೇಶಾಃ ಭವನ್ತಿ'—ಎಂಬ ನ್ಯಾಯ ದಿಂದ ಆಯಾ ಪ್ರಧಾನಾಂಶಕ್ಕೆ ಅನುಸಾರವಾಗಿ 'ಆಕಾಶ, ವಾಯು, ಅಗ್ನಿ, ಜಲ, ಪೃಥಿವೀ'—ಎಂಬ ಪ್ರತ್ಯೇಕ ಹೆಸರಿದೆ. ಇದೇ ಪಂಚೀಕರಣವೆಂಬುದು.

ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿರುವ ತ್ರಿವೃತ್ಕರಣ ಶ್ರುತಿಯು ಸಮಷ್ಟಿ ಸೃಷ್ಟಿಗೆ ಸಂಬಂಧಿಸಿದ್ದಲ್ಲ. ವ್ಯಷ್ಟಿಸೃಷ್ಟಿಯ ಅನಂತರ ಮನುಷ್ಯನ ಶರೀರದಲ್ಲಾಗುವ ಪರಿಣಾಮವನ್ನು ಅದು ಹೇಳುತ್ತದೆ.

ಹೀಗೆ ಪರಮಾತ್ಮನೇ ಎಲ್ಲೆಡೆಯಲ್ಲೂ ಅಂತರ್ಯಾಮಿಯಾಗಿದ್ದುಕೊಂಡು ಜಗತ್ತಿಗೆ ಉಪಾದಾನ ಕಾರಣನಾಗುತ್ತಾನೆಯೆಂದು ಹೇಳಿದ ಮೇಲೆ ಪರಮಾತ್ಮನು ಜಗತ್ತಿಗೆ ನಿಮಿತ್ತ ಕಾರಣನು ಮಾತ್ರ. ಪರಮಾಣುಗಳೇ ಜಗತ್ತಿಗೆ ಉಪಾದಾನ ಕಾರಣ—ಎಂದು ಹೇಳುವ ವೈಶೇಷಿಕರ ಸಿದ್ಧಾಂತವನ್ನು ಪ್ರಸಕ್ತ ಭಾಷ್ಯದಲ್ಲಿ ಭಾಷ್ಯಕಾರರು ನಿಪುಣವಾಗಿ ನಿರಾಕರಿಸಿದ್ದಾರೆ.

ಸವಿಶೇಷಾದ್ವೈತ ಅಥವಾ ವಿಶಿಷ್ಟಾದ್ವೈತ—ಎಂಬ ಪದದಲ್ಲಿ ಎರಡು ಅರ್ಥಗಳು ಅಡಗಿವೆ. ಸವಿಶೇಷೇ ಅಥವಾ ವಿಶಿಷ್ಟೇ + ಅದ್ವೈತಂ—ಅಂದರೆ—ಚೇತನಾಚೇತನ ವಿಶಿಷ್ಟನಾದ ಪರಮಾತ್ಮ ಒಬ್ಬನೇ ಎಂಬುದು ಒಂದರ್ಥ. ಸವಿಶೇಷಯೋಃ ಅಥವಾ ವಿಶಿಷ್ಟಯೋಃ + ಅದ್ವೈತಂ = ವಿಶಿಷ್ಟಾದ್ವೈತಂ—ಅಂದರೆ, ಪರಮಾತ್ಮನು ಒಬ್ಬನೇ ಕಾರಣರೂಪನಾಗಿಯೂ ಕಾರ್ಯರೂಪನಾಗಿಯೂ ಆಗಿರುವನು ಎಂಬುದು ಮತ್ತೊಂದರ್ಥ. ಪರಮಾತ್ಮನು ಸಕಲ ವಸ್ತುಗಳಲ್ಲಿಯೂ ಅಂತರ್ಯಾಮಿ ಯಾಗಿರುವುದರಿಂದ ಸರ್ವವಸ್ತುಗಳೂ ಅವನ ಶರೀರವಾಗುತ್ತವೆ. ಆದುದರಿಂದ ಅವನು ವಿಶ್ವರೂಪಿ ಎನಿಸಿದ್ದಾನೆ. ಆದ್ದರಿಂದ ''ಅಗ್ನೇರಾಪಃ''—ಎಂದು ಅಗ್ನಿಯಿಂದ ಜಲ ಹುಟ್ಟುತ್ತದೆಯೆಂದರೆ ಅಗ್ನಿ 'ಶರೀರಕ ಪರಮಾತ್ಮ ಜಲ ಶರೀರಕನಾದನೆಂದರ್ಥ. ಹೀಗೆ ಎಲ್ಲೆಲ್ಲೂ ಅವನೇ ಕಾರಣವಾಗಿರುವುದ ರಿಂದಲೇ 'ತೇಜಐಕ್ಷತ''—(ತೇಜಸ್ಸು ಸಂಕಲ್ಪಿಸಿತು) ಇತ್ಯಾದಿ ನಿರ್ದೇಶಗಳು ಕಂಡುಬರುತ್ತವೆ. ಆದ್ದರಿಂದ, ಪರಮಾತ್ಮನೇ ವಾಸ್ತವಿಕವಾಗಿ ಎಲ್ಲಕ್ಕೂ ಕಾರಣನೆಂಬುದು ಉಪಪನ್ನವಾಗುತ್ತದೆ

''ದೇಹೇಂದ್ರಿಯಮನಃ ಪ್ರಾಣಧೀಭ್ಯೋಽನ್ಯೋಽನನ್ಯಸಾಧನಃ ।''—ಎಂಬಂತೆ ಶರೀರ, ಇಂದ್ರಿಯ, ಮನಸ್ಸು, ಪ್ರಾಣ, ಮತ್ತು ಬುದ್ಧಿ—ಇವುಗಳಿಂಗಿಂತಲೂ ಜೀವನು ಬೇರೆ. ಇದಕ್ಕೆ ಪ್ರಮಾಣ:— ಮೊದಲು ಶರೀರಕ್ಕಿಂತಲೂ ಜೀವನು ಬೇರೆಯಾದವನೆಂದು ''ನನ್ನ ಕೈ'' ''ನನ್ನ ಕಾಲು'',—ಎಂದಾಗ 'ನಾನು'—ಎಂಬ ಜೀವಾತ್ಮನಿಗಿಂತಲೂ, ಕೈ ಕಾಲು, ಮುಂತಾದ ಅವಯವಗಳ ಭಿನ್ನವಾಗಿರುವಂತೆ 'ನನ್ನ ಶರೀರ''—ಎಂಬ ಅನುಭವವೂ ಬರುವುದರಿಂದ, ಅವಯವಗಳು ಸಮುದಾಯ ರೂಪವೇ ಶರೀರವಾಗಿರುವುದರ ಕಾರಣ, ಅಂತಹ ಶರೀರಕ್ಕಿಂತಲೂ ಬೇರೆಯಾಗಿ ಯಾವನು ತೋರುತ್ತಿರುವನೋ ಅವನೇ ಒಬ್ಬ ಅಖಂಡ ಜೀವ. ಇದೇ ರೀತಿಯಲ್ಲಿ ಇಂದ್ರಿಯಾದಿಗಳಿಗಿಂತಲೂ ಭಿನ್ನನೆಂದು ನಿರೂಪಿಸ ಬಹುದು.

ಶರೀರವೇ ಜೀವ ಎಂದಲ್ಲಿ, ಶರೀರದ ಅವಯವಗಳಲ್ಲಿ ಪ್ರತಿಯೊಂದರಲ್ಲೂ ಚೈತನ್ಯವುಂಟೆ, ಇಲ್ಲವೆ? ಪ್ರತಿಯೊಂದು ಅವಯವದಲ್ಲೂ ಚೈತನ್ಯವುಂಟೆಂದರೆ, ಚೈತನ್ಯವುಳ್ಳವನೇ ಚೇತನ ಅಥವಾ

ಜೀವನಾದ್ದರಿಂದ, ಈ ಲೋಕ ವ್ಯವಹಾರಗಳಲ್ಲಿ ಒಂದು ಶರೀರದಲ್ಲಿ ಅನೇಕ ಜೀವರನ್ನು ಒಪ್ಪಬೇಕಾಗಿ ಬರುವುದು. ಆದ್ದರಿಂದ, ಒಂದು ರಾಜ್ಯದಲ್ಲಿ ಅನೇಕ ರಾಜರಿದ್ದಂತೆ ಪರಸ್ಪರ ಭಿನ್ನಾಭಿಪ್ರಾಯ ಗಳಿಂದ ಸದಾ ಪರಸ್ಪರ ಜಗಳ ಅನಿವಾರ್ಯವಾಗುವುದು. ಪರಸ್ಪರ ರಾಗದ್ವೇಷಾದಿಗಳಿಲ್ಲದುದರಿಂದ, ಅಭಿಪ್ರಾಯ ಭೇದವಾಗಲಿ, ತನ್ಮೂಲಕವಾದ ಜಗಳಗಳೇ ಆಗಲಿ ಬರುವುದಿಲ್ಲವೆಂದರೆ, ರಾಗಾದಿಗಳೇ ಪ್ರವೃತ್ತಿಗೆ ಕಾರಣವಾದ್ದರಿಂದ ಅವು ಇಲ್ಲದಿದ್ದರೆ, ಜನ್ಮವೂ ಸಂಭವಿಸುವುದಕ್ಕಿಲ್ಲ, ಜನ್ಮ ಎತ್ತಿರುವು ದರಿಂದ ರಾಗಾದಿಗಳು ಇದ್ದೇ ಇರಬೇಕು. ''ವೀತರಾಗೋಽನಜಾತಃ''—ಎಂದಿದೆಯಷ್ಟೆ! ತನ್ಮೂಲಕ ಜಗಳವೇ ಮುಂತಾದ್ದು ಅನಿವಾರ್ಯವೇ.

ಅವಯವಗಳಿಗೆ ಪ್ರತ್ಯೇಕ ಚೈತನ್ಯವನ್ನು ಒಪ್ಪದೆ, ಅವಯವಿಯಾದ ಶರೀರದಲ್ಲಿ ಮಾತ್ರ ಅದನ್ನು ಒಪ್ಪಿ ಈ ದೋಷವನ್ನು ಪರಿಹರಿಸಬಹುದೆಂದರೂ, ಪ್ರತ್ಯೇಕ ಅವಯವಗಳಲ್ಲಿ ಇಲ್ಲದಿರುವ ಒಂದು ಗುಣ ಅವಯವ ಸಮುದಾಯ ರೂಪವಾದ ಅವಯವಿಯಲ್ಲಿ ಬರಲು ಸಾಧ್ಯವಿಲ್ಲ. ಆದ್ದರಿಂದ ಶರೀರದಲ್ಲೂ, ಚೈತನ್ಯ ಇಲ್ಲದೇ ಹೋಗಬೇಕಾಗುತ್ತೆ.

ಅವಯವಗಳಿಗಿಂತಲೂ ಅವಯವಿ ಅತಿರಿಕ್ತನೆಂದು ಒಪ್ಪಿದರೂ, ಅವಯವಿಯ ಗುಣಕ್ಕೆ ಅವಯವ ಗುಣವೇ ಕಾರಣವಾದ್ದರಿಂದ, ಅವಯವಗಳಲ್ಲಿ ಇಲ್ಲದಿರುವ ಒಂದು ಗುಣವು ಅತಿರಿಕ್ತ ವಾದ ಅವಯವಿಯಲ್ಲೂ ಕಾಣಿಸಿಕೊಳ್ಳುವುದು ಸಾಧ್ಯವಿಲ್ಲ. ಅಲ್ಲದೆ ಆ ಶರೀರವು ಸಂಘಾತ ರೂಪ ವಾಗಿರುವುದೇ ಮುಂತಾದ ಕಾರಣಗಳಿಂದ ಘಟದಂತೆ ಅಚೇತನವೇ ಆಗಬೇಕಾಗುತ್ತದೆಯೇ ಹೊರತು ಚೇತನವಾಗಲಾರದು. ''ನನ್ನ ಶರೀರ''—ಎಂಬ ಅನುಭವದಿಂದ, ಶರೀರಕ್ಕಿಂತಲೂ 'ನಾನು'—ಎಂಬ ಜೀವ ಬೇರೆಯಾದರೆ, ''ನನ್ನ ಆತ್ಮರು''—ಎಂಬ ಅನುಭವವು ಇರುವುದರಿಂದ 'ನಾನು'—ಎಂಬ ವನು ಆತ್ಮನು ಆಗಲಾರನೆಂದರೆ, ಶರೀರವೇ ಆತ್ಮಾ ಎಂಬ ಪಕ್ಷದಲ್ಲೂ ಈ ಅನುಭವ ಹೊಂದುವು ದಿಲ್ಲವಾದ್ದರಿಂದ ''ನನ್ನ ಆತ್ಮನು''—ಎಂಬ ಪ್ರತೀತಿಯನ್ನು ಇಬ್ಬರೂ ಗೌಣವೆಂದು ಒಪ್ಪಬೇಕಾಗು ವುದು ಅನಿವಾರ್ಯವಾದ್ದರಿಂದ ಉತ್ತರ ಇಬ್ಬರಿಗೂ ಸಮಾನ, ಅಂದರೆ ಇಲ್ಲಿ 'ಆತ್ಮನು'—ಎಂಬುದಕ್ಕೆ ಮನಸ್ಸು ಎಂದೇ ಅರ್ಥವೇ ಹೊರತು 'ಜೀವ' ಎಂದರ್ಥವಲ್ಲ. ಅಥವಾ 'ನನ್ನ'—ಎಂಬ ಷಷ್ಠೀ ವಿಭಕ್ತಿಗೆ ''ರಾಹೋಃ ಶಿರಃ''—ಇತ್ಯಾದಿಗಳಲ್ಲಿಯಂತೆ ಇಲ್ಲೂ ಅಭೇದವೇ ಅರ್ಥವಾಗಲು ತಡೆಯಿಲ್ಲ, ಆದ್ದರಿಂದ ಜೀವನು ಶರೀರಕ್ಕಿಂತಲೂ ಭಿನ್ನನೇ, ಅಲ್ಲದೆ ಶ್ರುತಿಯಲ್ಲಿ ಹೇಳಿರುವ ಪುನರ್ಜನ್ಮವೇ ಮುಂತಾದ ವೃತ್ತಾಂತಾದಿಗಳು, ಶರೀರಕ್ಕಿಂತಲೂ ಬೇರೆಯಾದ ಆತ್ಮನಿಲ್ಲದಿದ್ದರೆ ಸಾಧ್ಯವಿಲ್ಲವೆಂಬ ಕಾರಣದಿಂದಲೂ, ನಿರ್ದೋಷವಾದ ಸ್ಪಷ್ಟ ಶ್ರುತಿಗಳಿಂದಲೂ ಈ ದೇಹ ಹೋದರೂ ಮತ್ತೊಂದು ದೇಹವನ್ನು ಸೇರುವಂತಹ ಜ್ಞಾನಾನಂದರೂಪಿಯಾದ ದೇಹಾತಿರಿಕ್ತ ಆತ್ಮನು ಇರುವನೆಂದು ನಿಶ್ಚಿತ ವಾಗಿದೆ.

ಶಾಸ್ತ್ರಗಳಲ್ಲಿ 'ಪುಣ್ಯಃ ಪುಣ್ಯೇನ ಕರ್ಮಣಾ ಭವತಿ, ಪಾಪಃ ಪಾಪೇನ'—ಎಂದು ಪುಣ್ಯ ಮಾಡಿದ ವನು ಪುಣ್ಯ ಜನ್ಮವೆತ್ತುತ್ತಾನೆ, ಪಾಪ ಮಾಡಿದವನು ಪಾಪ ಜನ್ಮವನ್ನೆತ್ತುತ್ತಾನೆ ಎಂದು ಪುಣ್ಯ ಪಾಪಗಳನ್ನು ವರ್ಣಿಸಿದೆ. ಶರೀರವೇ ಆತ್ಮವೆಂದರೆ ಈ ಅರ್ಥ ಹೊಂದುವುದಿಲ್ಲ. ಆದ್ದರಿಂದ ಶರೀರ ಕ್ಕಿಂತಲೂ ಆತ್ಮನು ಅತಿರಿಕ್ತನೆಂಬುದು ಶಾಸ್ತ್ರಸಿದ್ಧ.

ಹೀಗೆಯೇ ಆತ್ಮ ಇಂದ್ರಿಯಗಳಿಗಿಂತಲೂ ಅತಿರಿಕ್ತನೆಂಬುದೂ ಶಾಸ್ತ್ರಸಿದ್ಧ. ಇಂದ್ರಿಯಗಳು ಬಾಹ್ಯೇಂದ್ರಿಯ, ಅಂತರಿಂದ್ರಿಯಗಳೆಂದು ಎರಡು ವಿಧ. ಇವುಗಳಲ್ಲಿ ಚಕ್ಷುರಿಂದ್ರಿಯದಿಂದ ನೋಡಿ ದ್ದನ್ನು ತ್ವಗಿಂದ್ರಿಯದಿಂದ ಮುಟ್ಟಿದಾಗ, 'ನೋಡಿದ್ದನ್ನೇ ಮುಟ್ಟುತ್ತಿದ್ದೇನೆ'—ಎಂಬ ಪ್ರತ್ಯಭಿಜ್ಞೆ ಯನ್ನು ಪಡೆಯುವವನು ಒಬ್ಬನೇ ಆಗಬೇಕಾಗುವುದರಿಂದ ಚಕ್ಷುರಾದಿ ಬಾಹ್ಯೇಂದ್ರಿಯಗಳಿಗಿಂತಲೂ ಆತ್ಮ ಭಿನ್ನನು. ಯಾವನು ನೋಡುವನೋ ಅವನಿಗೇ ಸ್ಮರಣೆ ಬರುತ್ತದೆ. ನೋಡುವವನೊಬ್ಬನು,

ನೆನೆಸಿಕೊಳ್ಳುವವನೊಬ್ಬನು ಎಂಬುದನ್ನು ಯಾರೂ ಒಪ್ಪುವುದಿಲ್ಲ. "ನೋಡಿದ್ದನ್ನೇ ಮುಟ್ಟುತ್ತೇನೆ"—ಎಂಬಲ್ಲಿ, ನೋಡುವವನು, ಮುಟ್ಟುವವನು ಇಬ್ಬರೂ ಒಬ್ಬರೇ ಎಂಬುದು ಸ್ಪಷ್ಟ. ಇಂದ್ರಿಯವೇ ಆತ್ಮನಾದರೆ ಇವರಿಬ್ಬರಿಗೂ ಐಕ್ಯ ಪ್ರತ್ಯಭಿಜ್ಞೆ ಬರಲು ಸಾಧ್ಯವೇ ಇಲ್ಲ. ಆದ್ದರಿಂದ ಬಾಹ್ಯೇಂದ್ರಿಯ ಗಳಿಗಿಂತಲೂ ಆತ್ಮನು ಬೇರೆಯೆಂಬುದು ಸ್ಪಷ್ಟ.

ಮನಸ್ಸು ಆತ್ಮನಿಗೆ ಸ್ಮೃತಿ ಮುಂತಾದ ಕಾರ್ಯಗಳಿಗೆ ಕರಣವೆಂದೇ ಪ್ರಮಾಣದಿಂದ ಸಿದ್ಧ ವಾದುದರಿಂದ ಆತ್ಮನಿಗಿಂತಲೂ ಮನಸ್ಸು ಭಿನ್ನವೇ ಆಗಬೇಕಾಗುತ್ತದೆ. ಕರಣವಾಗಿಯೇ ಪ್ರಮಾಣ ಸಿದ್ಧವಾದ ಮನಸ್ಸನ್ನು ಕರ್ತೃವಾದ ಆತ್ಮನೆನ್ನಲು ಹೇಗೆ ಸಾಧ್ಯ?

ಪಂಚ ಪ್ರಾಣಗಳೆಂದು ಪ್ರಸಿದ್ಧವಾದ ಪ್ರಾಣ ವಾಯುಗಳೂ ಸಹ, "ಶರೀರವೇ ಆತ್ಮನು"—ಎಂಬ ಪಕ್ಷದಲ್ಲಿ ಪ್ರತಿಪಾದಿತವಾದ "ಪ್ರತ್ಯೇಕ ಚೈತನ್ಯವೆ?"—"ಸಮುದಾಯದಲ್ಲಿ ಚೈತನ್ಯವೆ?"—ಎಂಬಿದೇ ಮುಂತಾದ ನ್ಯಾಯದಿಂದಲೇ ಖಂಡಿತವಾಗಿಯೂ ಚೇತನನಾಗಲಾರವು.

ಜ್ಞಾನವಂತು ಜ್ಞಾತಾವಾದ ಆತ್ಮನ ಧರ್ಮ. ಅದು ಹೇಗೆ ಆತ್ಮನಾಗಲು ಸಾಧ್ಯ? ಅಲ್ಲದೆ ವಿಜ್ಞಾನವನ್ನೇ ಆತ್ಮನೆಂದು ಹೇಳುವ ಬೌದ್ಧರಿಗೆ ಅದು ಕ್ಷಣಿಕ ! ಆದ್ದರಿಂದಲೂ ಈ ಜ್ಞಾನ ಆತ್ಮನಾಗಲು ಸಾಧ್ಯವಿಲ್ಲ. ವಾಸ್ತವಿಕವಾಗಿ "ನಾನು ಅರಿಯುತ್ತೇನೆ"—ಇತ್ಯಾದಿಯಾಗಿ ಆತ್ಮನು ಜ್ಞಾನಕ್ಕೆ ಆಶ್ರಯನೇ ಹೊರತು ಕೇವಲ ಜ್ಞಾನವೇ ಆತ್ಮನಾಗಲಾರದು. ಸಿದ್ಧಾಂತದಲ್ಲಿ ಆತ್ಮನನ್ನು ಜ್ಞಾನಸ್ವರೂಪನೆಂದು ಒಪ್ಪಿದರೂ ಅವನು, ಜ್ಞಾನಕ್ಕೆ ಆಶ್ರಯನೂ ಸಹ ಎಂದು ಒಪ್ಪುವುದರಿಂದ ಈ ದೋಷ ಬರುವುದಿಲ್ಲ. ಹೀಗೆ ಆತ್ಮನು ದೇಹ-ಇಂದ್ರಿಯ-ಮನಸ್ಸು-ಪ್ರಾಣ-ಬುದ್ಧಿಗಳಿಗಿಂತಲೂ ಭಿನ್ನನೆಂದು ಸಿದ್ಧವಾಯಿತು.

ಜೀವಾತ್ಮನು ಅಣುಪರಿಮಾಣ—ಇದಕ್ಕೆ ಪ್ರಮಾಣ—ತನ್ನ ಶರೀರದ ಒಳಗಡೆಯಲ್ಲಿ ಮಾತ್ರವೇ ತನ್ನ ಇರುವಿಕೆಯನ್ನು ಪ್ರತಿಯೊಬ್ಬರೂ ಸ್ಪಷ್ಟವಾಗಿ ಅನುಭವಿಸುತ್ತಿರುವುದರಿಂದಲೂ, ಮರಣ ಕಾಲದಲ್ಲಿ, "ಏಷ ಆತ್ಮಾ ನಿಷ್ಕ್ರಾಮತಿ"—ಇತ್ಯಾದಿ ಶ್ರುತಿಗಳಲ್ಲಿ ಪ್ರಾಣಾದಿಗಳಂತೆ ಜೀವಾತ್ಮನಿಗೂ ಪ್ರತ್ಯೇಕವಾಗಿ ಈ ಶರೀರದಿಂದ ಹೊರಡುವುದನ್ನು ಹೇಳಿರುವುದರಿಂದಲೂ, ಅನೇಕ ಶ್ರುತಿಗಳಿಗೆ ಅನುಸಾರವಾಗಿಯೂ, "ಏಷಮ ಆತ್ಮಾ ಅನ್ತಹೃದಯೇಽಣೀಯಾನ್"—ಎಂದು ಪರಮಾತ್ಮನನ್ನು 'ಅಣು'—ಎಂದು ಹೇಳಿದರೂ, "ಅನ್ತರ್ಹೃದಯೇ"—ಎಂದು ಹೃದಯದೊಳಗೆ ಇರುವುದರಿಂದ ಪರಮಾತ್ಮನು ಅಣುವಾಗಿರುವನೆಂದು ಅಣುತ್ವವನ್ನು ಔಪಾಧಿಕವೆಂದು ಹೇಳಿರುವಂತೆ ಜೀವಾತ್ಮನ ಅಣುತ್ವಕ್ಕೆ ಉಪಾಧಿಯನ್ನು ಹೇಳದೆ ಇರುವುದರಿಂದ ಅದು ಸಹಜವೆಂದು ಗೊತ್ತಾಗುವುದರಿಂದಲೂ, "ಆರಾಗ್ರಮಾತ್ರಃ"—ಇತ್ಯಾದಿ ಶ್ರುತಿಯಿಂದ ಪರಮಾತ್ಮನಿಗಿಂತಲೂ ಜೀವಾತ್ಮನಿಗೆ ಅಣುತ್ವದಿಂದ ವೈಲಕ್ಷಣ್ಯವನ್ನು ಹೇಳಿರುವುದರಿಂದಲೂ, "ಪುರೀತತಿ ಶೇತೇ"—ಇತ್ಯಾದಿ ವಾಕ್ಯಗಳಿಂದ "ನಿದ್ರಾಕಾಲದಲ್ಲಿ ಜೀವನು ಪುರೀತನ್ನಾಡಿಯಲ್ಲಿ ಸೇರಿರುತ್ತಾನೆ"—ಎಂದು ಶರೀರದೊಳಗೂ ಚಲನೆಯನ್ನು ಹೇಳಿರುವುದರಿಂದಲೂ, "ಸ ಚಾನಂತ್ಯಾಯ ಕಲ್ಪತೇ"—ಎಂದು ಜೀವನಿಗೆ ಹೇಳಿರುವ ವಿಭುತ್ವ ಜೀವ ಜಾತಿಯ ವಸ್ತು ಎಲ್ಲೆಡೆಯಲ್ಲಿಯೂ ಇರುವುದರಿಂದಲೂ, ಅವನ ಧರ್ಮವಾದ ಜ್ಞಾನವು ಸರ್ವವನ್ನೂ ವ್ಯಾಪಿಸಬಲ್ಲದ್ದಾದ್ದರಿಂದ ಅತಿ ಸೂಕ್ಷ್ಮವಾದ ಅವನು ಎಲ್ಲಿಯೂ ತಡೆಯಿಲ್ಲದೇ ಪ್ರವೇಶಿಸಬಲ್ಲನೆಂಬ ಅರ್ಥದಲ್ಲೂ ಗ್ರಹಿಸತಕ್ಕದ್ದು. "ಜಗತ್ತಿನಲ್ಲಿ ಎಲ್ಲೆಡೆಯಲ್ಲಿಯೂ ಮಾನವನಿರುತ್ತಾನೆ" ಎಂದಲ್ಲಿ ಮಾನವನ ವಿಭುತ್ವ ತೋರದೆ ಮಾನವ ಜಾತಿಯವನು ಯಾವನಾದರೂ ಒಬ್ಬನು ಎಲ್ಲೂ ಇದ್ದೇ ಇರುತ್ತಾನೆಯೆಂದಿ ಹೇಗೆ ಅರ್ಥವಾಗುತ್ತದೆಯೋ ಹಾಗೆಯೇ "ತಸ್ಮಾತ್ಪರದೇಹೇಷು ಸತೋಽಪಿ"—(ಈ ದೇಹ ಆ ದೇಹ ಎಲ್ಲದರಲ್ಲೂ ಅವನಿದ್ದರೂ)—ಇತ್ಯಾದಿ ವಾಕ್ಯಗಳಿಗೆ ಜೀವ ಜಾತಿಯ ವಸ್ತು ಎಲ್ಲಾ ಶರೀರದಲ್ಲೂ ಇರುತ್ತದೆಯೆಂದರ್ಥ.

"ಸ ಚಾನಂತ್ಯಾಯ ಕಲ್ಪತೇ"—ಎಂಬುದು ಅವನ ಧರ್ಮವಾದ ಜ್ಞಾನ ಎಲ್ಲವನ್ನೂ ವ್ಯಾಪಿಸ ಬಲ್ಲದ್ದು ಎಂಬ ಅರ್ಥದಲ್ಲಿ ಬಂದದ್ದು. "ನಿತ್ಯಸ್ಸರ್ವಗತಃ"—ಎಂಬಲ್ಲಿ ಅವನು ಗಾಜಿನಲ್ಲೂ ಪ್ರವೇಶಿಸ ಬಲ್ಲ ಎಂಬರ್ಥದಲ್ಲಿ "ಸರ್ವದಲ್ಲೂ ಇರುವವನು"—ಎಂದು ಹೇಳಿದೆ. ಆದ್ದರಿಂದ ಜೀವಾತ್ಮನು ಅಣುವೇ ಹೊರತು ವಿಭುವಲ್ಲ.

"ಜೀವಾತ್ಮನು ನಿರ್ವಿಕಾರನು"—ಎಂದಿರುವ ಶ್ರುತಿವಿರುದ್ಧವಾದ್ದರಿಂದ ಜೀವಾತ್ಮನು ಶರೀರಕ್ಕೆ ತಕ್ಕಂತೆ ಪರಿಮಾಣವನ್ನು ಹೊಂದುವವನಲ್ಲ. ಆ ಜೀವನು ದೇಹವೇ ತಾನು ಎಂದು ಭ್ರಮಿಸಿರು ವುದರಿಂದಲೇ, 'ನಾನು ದಪ್ಪವಾಗಿದ್ದೇನೆ', 'ನನ್ನ ತಲೆಯಲ್ಲಿ ಸುಖವಾಗಿದೆ. ಕಾಲಿನಲ್ಲಿ ನೋವಾಗಿದೆ' —ಇತ್ಯಾದಿ ಅನುಭವವಾಗುತ್ತೆ. ಆತ್ಮನು ದಪ್ಪನಾಗದಿದ್ದರೂ ಆತ್ಮನ ಧರ್ಮವಾದ ಸುಖಾದಿಗಳು ಶಿರಸ್ಸು ಪಾದಾದಿಗಳಲ್ಲಿ ಬರಲು ಸಾಧ್ಯವಲ್ಲದಿದ್ದರೂ, 'ಶರೀರವೇ ತಾನು—ಎಂದು ಭ್ರಮಿಸಿರುವುದ ರಿಂದ ಈ ವ್ಯವಹಾರಗಳು ನಡೆಯುತ್ತವೆ.

ಜೀವನು ಶರೀರದಷ್ಟು ಪರಿಮಾಣವನ್ನುಳ್ಳವನಾದಾಗ ಒಬ್ಬ ಯೋಗಿ ತನ್ನ ಯೋಗ ಪ್ರಭಾವ ದಿಂದ ಅನೇಕ ಶರೀರಗಳನ್ನು ಸ್ವೀಕರಿಸಿದಾಗ ಇವನು ಅನೇಕ ಖಂಡಗಳಾಗಿ ಆಗಬೇಕಾಗುತ್ತದೆ. ಇದಲ್ಲದೆ ಮುಕ್ತಿ ಕಾಲದಲ್ಲಿ ದೇಹ ಕಳೆದು ಹೋಗುವುದರಿಂದ ಇವನ ಪರಿಮಾಣ ದೇಹಕ್ಕೆ ತಕ್ಕಂತೆ ಆಗುವು ದಾದರೆ ಇವನು ಯಾವ ಪರಿಮಾಣವೂ ಇಲ್ಲದವನಾಗಬೇಕಾಗುತ್ತದೆ. ಆತ್ಮನು ದ್ರವ್ಯ ವರ್ಗಕ್ಕೆ ಸೇರಿರುವುದರಿಂದ ಪರಿಮಾಣ ರಹಿತನಾಗಲು ಸಾಧ್ಯವಿಲ್ಲ.

ಸಂಸಾರ ದಶೆಯಲ್ಲಿ ಜೀವನ ಪರಿಮಾಣ ಅವನ ಶರೀರಕ್ಕೆ ತಕ್ಕಂತೆ ಇದ್ದರೂ ಮತ್ತ ಮುಕ್ತಿ ಕಾಲ ದಲ್ಲಿ ಅವನು ವಿಭುವಾಗಿ ಆಗಲಿ—ಎಂದರೆ "ಸತತೋರ್ಧ್ವಗಮನವೇ ಮುಕ್ತಿ"—ಎಂದು ಹೇಳುವ ಆ ಮತದಲ್ಲಿ ಮುಕ್ತಾತ್ಮನು ವಿಭುವಾದರೆ ವಿಭು ಪದಾರ್ಥಕ್ಕ ಚಲನಾದಿ ಕ್ರಿಯೆಗಳು ಬರಲು ಸಾಧ್ಯ ವಿಲ್ಲವಾದ್ದರಿಂದ ಅವನು ಹೇಗೆ ಸತತವಾಗಿ ಮೇಲಕ್ಕೆ ಹೋಗುತ್ತಿರಲು ಸಾಧ್ಯ?

ಇದಕ್ಕಾಗಿಯೇ ಆಗಲೂ ಒಂದು ದೇಹ ಅವನಿಗೆ ತಪ್ಪಿದ್ದಲ್ಲವೆಂದರೆ ಆಗ ಆ ಶರೀರದ ಪರಿಮಾ ಣವೇ ಇವನಿಗೆ ಇರಬೇಕಾಗುತ್ತದೆ, ವಿಭುತ್ವ ಬರಲು ಹೇಗೆ ಸಾಧ್ಯ? ಮುಕ್ತನು ತನ್ನ ಪರಿಮಾಣವನ್ನು ಸಂಪಾದಿಸಿಕೊಳ್ಳುವುದಕ್ಕಾಗಿಯೇ ತನ್ನ ಇಷ್ಟದಂತೆ ಒಂದು ಶರೀರವನ್ನು ಪರಿಗ್ರಹಿಸುವನೆಂಬುದು ಹಾಸ್ಯಾಸ್ಪದ.

ಶರೀರವು ಸ್ವತಃ ಪುರುಷಾರ್ಥವಾಗದು—ಸುಖಾದಿ ಭೋಗಕ್ಕಾಗಿ ಶರೀರ ಸ್ವೀಕಾರವು ಯುಕ್ತ ವಾದರೂ ಮುಕ್ತಿಯಲ್ಲಿ ಸುಖಾದಿಗಳನ್ನು ಒಪ್ಪದಿರುವವರಿಗೆ, ಪರಿಮಾಣಕ್ಕಾಗಿ ಶರೀರವನ್ನು ಪರಿ ಗ್ರಹಿಸುತ್ತಾನೆಂಬುದೂ ಹಾಸ್ಯಾಸ್ಪದ.

ಆದ್ದರಿಂದ ಮುಕ್ತಿಯಲ್ಲೂ ಉಳಿಯುವಂತೆ ಒಂದು ಸ್ಥಿರವಾದ ಪರಿಮಾಣವನ್ನು ಜೀವಾತ್ಮನಲ್ಲಿ ಒಪ್ಪಬೇಕೇ ಹೊರತು ಶರೀರಾನುಗುಣ ಪರಿಮಾಣವನ್ನು ಒಪ್ಪುವುದು ಯುಕ್ತವಲ್ಲ.

ಈ ಸಂಸಾರದಲ್ಲಿ ತಾನು ಮಾಡಿದ ಕರ್ಮದಿಂದ ಅವಿದ್ಯೆ ಇದರಿಂದ ರಾಗದ್ವೇಷಾದಿಗಳು ಇದರಿಂದ ಮತ್ತೆ ಕರ್ಮಗಳು ಎಂದು ಈ ಚಕ್ರ ಪ್ರತಿಯೊಬ್ಬರಿಗೂ ಜೀವಿಗೂ ಅನಾದಿ ಕಾಲದಿಂದ ವಿಚಿತ್ರ ರೀತಿಯಲ್ಲಿ ಪ್ರವಹಿಸುತ್ತಿದ್ದರೂ, ಈ ಕರ್ಮಗಳ ವಿಚಿತ್ರ ಪರಿಪಾಕವನ್ನು ಎಲ್ಲಾ ಸಿದ್ಧಾಂತ ದವರೂ ಒಪ್ಪುವುದರಿಂದ, ಕಾಲ ವಿಶೇಷದಲ್ಲಿ ಕರ್ಮ ಪರಿಪಕ್ವವಾಗಿ ಮುಮುಕ್ಷುವಾಗಲು ಸಾಧ್ಯ ವಷ್ಟೆ! ಹೀಗೆ ಒಬ್ಬ ವಿವೇಕಿ ಒಂದು ಸಮಯ ಮುಮುಕ್ಷುವಾಗಲು, ಇದಕ್ಕಾಗಿಯೇ ಕಾಯುತ್ತಿದ್ದ

ಕರುಣಾಸಾಗರನಾದ ಪರಮಗುರುವಾದ ಪರಮಾತ್ಮನ ಕೃಪೆಗೆ ಅವನು ಪಾತ್ರನಾಗಿ ಕ್ರಮ ಕ್ರಮವಾಗಿ ಪರಮಪುರುಷಾರ್ಥವಾದ ಮೋಕ್ಷ ಪರ್ಯಂತ ಸುಖವನ್ನು ಹೊಂದುವವನಾಗುತ್ತಾನೆ.

ವಿಚಿತ್ರ ಕರ್ಮ ಪ್ರವಾಹದಲ್ಲಿ ಯಾವುದೋ ಒಂದು ಪುಣ್ಯ ವಿಶೇಷದಿಂದ ಸಂಸಾರಿ ಜೀವನಿಗೆ ಸತ್ಸಹವಾಸಾದಿಗಳು ದೊರೆಯುತ್ತವೆ. ಇದರಿಂದ, ಮತ್ತಷ್ಟು ಪುಣ್ಯ ಸಂಚಯವಾಗಿ ಪರಮಾತ್ಮನ ಕೃಪೆಗೆ ಪಾತ್ರನಾಗುತ್ತಾನೆ. ಇದರಿಂದ ಅವನು ಬ್ರಹ್ಮವಿದ್ಯೆಯಲ್ಲಿ ನಿಷ್ಠನಾಗುತ್ತಾನೆ. ಕೊನೆಗೆ ಪರಮಾತ್ಮ ಸಾಕ್ಷಾತ್ಕಾರದಿಂದ ಸಂಚಿತ ಕರ್ಮಗಳು ನಾಶವಾಗಿ ಮುಂದಿನ ಕರ್ಮಗಳಿಂದ ನಿರ್ಲಿಪ್ತನಾಗಿ, ಪ್ರಾರಬ್ಧ ಕರ್ಮ ಮುಗಿಯುತ್ತಾ, ಸರ್ವಕರ್ಮಬಂಧಗಳಿಂದಲೂ ಇವನು ಮುಕ್ತನಾಗುತ್ತಾನೆ.

ಮೋಕ್ಷದಲ್ಲಿ ಕರ್ಮಗಳಿಂದ ಸಂಪೂರ್ಣ ಬಿಡುಗಡೆಯಾಗುವುದರಿಂದಲೂ ಇದೇ ಇವನ ಅಮೂಲ್ಯ ಸುಖರೂಪವಾಗಿರುವುದರಿಂದಲೂ, "ಮುಕ್ತೈಶ್ವರ್ಯ ಸಂಪನ್ನಿಧಿರಪಿಭವಿತಾ ಕಶ್ಚಿದಿತ್ಥಂ ವಿಪಶ್ಚಿತ್"—ಎಂದಿದ್ದಾರೆ ಶ್ರೀಮದಾಚಾರ್ಯರು.

ಹೇಗೋ ಮಹಾ ಕ್ಲೇಶದಿಂದ ಪ್ರಳಯ ಕಾಲದ ಕಾರ್ಗತ್ತಲೆ ರೂಪವಾದ ಅನರ್ಥಗಳು ತೊಲಗಿ ಜಗತ್ಸೃಷ್ಟಿಯಿಂದಾಗಿ ಈ ಸ್ಥೂಲ ಶರೀರವನ್ನು ಹೊಂದಿ ಸ್ವಲ್ಪಮಟ್ಟಿಗೆ ಚೈತನ್ಯವಿಕಾಸವನ್ನು ಪಡೆದ ಈ ಸಂಸಾರಿ ಜೀವನಿಗೆ ಜಾಗ್ರತ್-ಸ್ವಪ್ನ-ಸುಷುಪ್ತಿ ಮರಣಾವಸ್ಥೆ—ಮೂರ್ಛಾವಸ್ಥೆ ಮುಂತಾದವುಗಳು ಅಲೆಗಳಂತೆ ಬರುತ್ತಲೇ ಇರುತ್ತವೆ, ಈ ಸಂಸಾರದಲ್ಲಿ ಸುಖವಾದರೂ ಮಿನುಕು ಹುಳುವಿನ ಪ್ರಕಾಶಕ್ಕೆ ಸಮಾನವಾಗಿದ್ದು ದುಃಖದ ಭಾಗವೇ ಹೆಚ್ಚಾಗಿರುವುದು, ಹೀಗೆ ಪರಿಶುದ್ಧಾಂತಃಕರಣರಾದ ವಿವೇಕಿಗಳು ಈ ದುಃಖರಾಶಿ ಮಿಶ್ರವಾದ ಅತ್ಯಲ್ಪ ಸುಖವನ್ನು ತ್ಯಜಿಸಿ ಅಪರಿಮಿತ ಸುಖರೂಪವಾದ ಮೋಕ್ಷವನ್ನು ಪಡೆಯಲು ಇಚ್ಛಿಸುತ್ತಾರೆ. ಇವರೇ ಮುಮುಕ್ಷುಗಳು.

ದರ್ಶನಾಕಾರವನ್ನು ತಾಳಿದ ವಿಶಿಷ್ಟಸ್ಮೃತಿರೂಪವಾದ ಉಪಾಸನಾತ್ಮಕ ಭಕ್ತಿಯೇ ಮೋಕ್ಷ ಸಾಧನವೆಂದು ಶಾಸ್ತ್ರವಿಹಿತವಾಗಿದೆ. "ಭಕ್ತಿಯೇ ಮೋಕ್ಷಸಾಧನ"—ಎಂಬ ಈ ಸಿದ್ಧಾಂತಕ್ಕೆ ವಿರುದ್ಧವಾಗಿ ಧ್ಯಾನನಿಯೋಗವಾದಿಗಳು, 'ತತ್ತ್ವಮಸಿ'—ಎಂದು ತನಗೂ ಬ್ರಹ್ಮಕ್ಕೂ ಅಭೇದ ಧ್ಯಾನದಿಂದ ಹುಟ್ಟಿದ ಅದೃಷ್ಟ ವಿಶೇಷದಿಂದ ಉತ್ಪನ್ನವಾದ ಬ್ರಹ್ಮಸಾಕ್ಷಾತ್ಕಾರವೇ "ಈ ವಿಶ್ವವೆಲ್ಲ ಮಿಥ್ಯೆ"—ಎಂದು ಜ್ಞಾನವನ್ನು ಹುಟ್ಟಿಸುತ್ತದೆ, ಇದೇ ಮೋಕ್ಷವೆನ್ನುತ್ತಾರೆ. ಹೀಗೆಂದರೆ, ಆ ಸಾಕ್ಷಾತ್ಕಾರಕ್ಕೆ ಸಮಾನವಾದ "ತತ್ತ್ವಮಸಿ"—ಎಂಬ ವಾಕ್ಯದಿಂದ ಹುಟ್ಟಿದ ಬ್ರಹ್ಮಾಭೇದ ಜ್ಞಾನವೇ ಆ ಜ್ಞಾನಕ್ಕೆ ಮೊದಲೇ ಈ ಪ್ರಪಂಚ ಭ್ರಮವನ್ನು ಏತಕ್ಕೆ ಹೋಗಲಾಡಿಸಲಿಲ್ಲ? ಆದುದರಿಂದ ಆಧ್ಯಾನವೇ ವ್ಯರ್ಥವೆಂದಾಗುವುದಿಲ್ಲವೆ?—ಇತ್ಯಾದಿಯಾಗಿ ಸಿದ್ಧಾಂತಿಯು ಈ ವಾದವನ್ನು ನಿರಾಕರಿಸಿದ್ದಾರೆ. ಜ್ಞಾನಮಾತ್ರದಿಂದಲೇ ಭ್ರಮ ನಿವೃತ್ತಿಯಾಗಬೇಕಾಗಿರುವುದರಿಂದ ಮನನ, ನಿದಿಧ್ಯಾಸನಗಳ ಆವಶ್ಯಕತೆಯೇನು?—ಎಂದರೆ ಇಲ್ಲಿ ಅದ್ವೈತಿಗಳಲ್ಲಿ ಧ್ಯಾನನಿಯೋಗವಾದ, ನಿಷ್ಪ್ರಪಂಚೀಕರಣ ನಿಯೋಗವಾದ, ವಾಕ್ಯಾರ್ಥಾಪರೋಕ್ಷಜ್ಞಾನವಾದ, ಎಂದು ಮೂರು ಪಕ್ಷಗಳು ಹುಟ್ಟಿಕೊಂಡಿವೆ. ಮೊದಲನೆಯ ಪಕ್ಷದಲ್ಲಿ 'ತತ್ತ್ವಮಸಿ"—ಎಂಬ ವಾಕ್ಯಜನ್ಯಜ್ಞಾನ ತತ್‌ಕ್ಷಣ ಮೋಕ್ಷಸಾಧನವಲ್ಲ. "ನಿದಿಧ್ಯಾಸಿತವ್ಯಃ"—ಎಂದಿರುವ ಧ್ಯಾನ ವಿಧಿಯಿಂದ ತೋರಿಬರುವ "ನಿಯೋಗ"ದಿಂದ ಹುಟ್ಟುವ ಆತ್ಮಾಪರೋಕ್ಷಜ್ಞಾನವೇ ಮೋಕ್ಷಸಾಧನ. "ಅಗ್ನಿಹೋತ್ರಂಜುಹುಯಾತ್ ಸ್ವರ್ಗಕಾಮಃ"—ಎಂದು ವಿಧಿಸಿರುವ ಯಾಗಾದಿಗಳ ಆಚರಣೆಯಿಂದ, "ನಿಯೋಗ"—ಎಂಬ ಒಂದು ವಿಶಿಷ್ಟ ಪದಾರ್ಥ ಹುಟ್ಟುತ್ತದೆ. ಇದೇ ಸ್ವರ್ಗಕ್ಕೆ ಸಾಧನ; ನಶ್ವರಕ್ರಿಯಾರೂಪವಾದ ಯಾಗವಲ್ಲ, ನವೀನ ಮೀಮಾಂಸಕರು ಇದನ್ನು 'ಅಪೂರ್ವ'—ಎನ್ನುವರು. ಇದರಂತೆ ಧ್ಯಾನದಿಂದ ಹುಟ್ಟುವ ಒಂದು ಅದೃಷ್ಟ ವಿಶೇಷ (ನಿಯೋಗ)ದಿಂದ ಆತ್ಮಾಪರೋಕ್ಷಜ್ಞಾನ ಹುಟ್ಟುತ್ತದೆ. ಇದೇ ಧ್ಯಾನ ನಿಯೋಗ ವಾದ.

ಜ್ಞಾನ ಅದೃಷ್ಟ ಮೂಲಕ ಮೋಕ್ಷಸಾಧನವಾದರೆ ಪ್ರಪಂಚ ಮಿಥ್ಯೆಯಾಗಲಾರದು—ಎಂಬುದೇ ಇಲ್ಲಿ ಪ್ರಧಾನ ದೂಷಣ.

ಪ್ರಾಚೀನ ಮೀಮಾಂಸಕರ ಮಿತ್ರರಾದ ನಿಷ್ಪ್ರಪಂಚೀಕರಣ ನಿಯೋಗವಾದಿಗಳು ಹೇಳಿದ ನಿಷ್ಪ್ರಪಂಚೀಕರಣ ನಿಯೋಗವೂ ಸಹ ವೇದದಲ್ಲಿ ಎಲ್ಲೂ ಕಂಡುಬರುವುದಿಲ್ಲ. "ಸಪ್ರಪಂಚವಾಗಿ ತೋರುತ್ತಿರುವ ಬ್ರಹ್ಮವನ್ನು ನಿಷ್ಪ್ರಪಂಚವಾಗಿ ಮಾಡು? ಎಂಬುದೇ ಬ್ರಹ್ಮೋಪಾಸನೆಯನ್ನು ವಿಧಿಸುವ ಶ್ರುತಿಗಳೆಲ್ಲದರ ತಾತ್ಪರ್ಯ. ಇದು ಸಾಧಿತವಾಗಬೇಕಾದರೆ ನಿಷ್ಪ್ರಪಂಚ ಬ್ರಹ್ಮಧ್ಯಾನ ಮಾಡಬೇಕು. ಪ್ರಪಂಚದ ಭ್ರಮೆ ತೋರಿಕೆಗೆ ಅಧಿಷ್ಠಾನವಾಗಿರುವ ಬ್ರಹ್ಮವೇ ಸಪ್ರಪಂಚ ಬ್ರಹ್ಮ. ಈ ತೋರಿಕೆ ನಿವೃತ್ತಿಯಾದರೆ ಆ ಬ್ರಹ್ಮ ಪ್ರಪಂಚ ಭ್ರಮಕ್ಕೆ ಅಧಿಷ್ಠಾನವಾಗಿರುವುದಿಲ್ಲವಾದ್ದರಿಂದ ಅದನ್ನು ನಿಷ್ಪ್ರಪಂಚ ಬ್ರಹ್ಮವೆನ್ನುತ್ತಾರೆ. ಪ್ರಪಂಚ ಭ್ರಮ ನಿವೃತ್ತಿಯೇ ಮೋಕ್ಷ. ಬ್ರಹ್ಮೋಪಾಸನಾ ವಿಧಿಗೂ ಬ್ರಹ್ಮವನ್ನು ಪ್ರಪಂಚ ಭ್ರಮಾಧಿಷ್ಠಾನತೆಯಿಂದ ನಿವೃತ್ತಿಗೊಳಿಸುವುದೆಂಬ ನಿಷ್ಪ್ರಪಂಚೀಕರಣವೇ ಅರ್ಥ. ಶ್ರುತಿಯಲ್ಲಿ ವಿಧಿ ಇರುವುದರಿಂದಲೂ ನಿಯೋಗ ವಿಧ್ಯರ್ಥವಾಗುವುದರಿಂದಲೂ, ಈ ವಾದವನ್ನು "ನಿಷ್ಪ್ರಪಂಚೀಕರಣ ನಿಯೋಗ"—ವಾದವೆನ್ನುತ್ತಾರೆ.

"ಸಪ್ರಪಂಚಂ ಬ್ರಹ್ಮ ನಿಷ್ಪ್ರಪಂಚಂ ಕುರ್ಯಾತ್"—ಎಂಬ ವಿಧಿ ಎಲ್ಲೂ ಕಂಡುಬರದಿರುವಾಗ, "ಉಪಾಸೀತ"—ಇತ್ಯಾದಿ ಶ್ರುತಿಗಳಿಗೆ ಆ ಅರ್ಥವನ್ನು ಹೇಳುವುದಕ್ಕೆ ಯಾವ ಆಧಾರವೂ ಇಲ್ಲ ಎಂಬುದೇ ಇಲ್ಲಿ ವಿಶೇಷ ದೂಷಣ.

ಪೂರ್ವಕಾಂಡದಲ್ಲಿ "ಜುಹುಯಾತ್"—ಇತ್ಯಾದಿಗಳಲ್ಲಂತೆ ಇಲ್ಲೂ "ಉಪಾಸೀತ", ಇತ್ಯಾದಿ ವಿಧಿಯೇ ಅದಕ್ಕೆ ಪ್ರಮಾಣವೆಂದು ಹೇಳಿದರೂ, ಕರ್ಮಕಾಂಡದಲ್ಲಂತೆ ಇಲ್ಲೂ ಈ ನಿಯೋಗಕ್ಕೆ ಸಾಧ್ಯ-ಸಾಧನ ಅಂಗಾದಿಗಳನ್ನು ಹೇಳಬೇಕಾಗುತ್ತದೆ ಇದು ಸಾಧ್ಯವಲ್ಲ. "ಸ್ವರ್ಗಕ್ಕಾಗಿ ಅಗ್ನಿಹೋತ್ರದಿಂದ ನಿಯೋಗವನ್ನು ಸಾಧಿಸಬೇಕು"—ಎಂಬಲ್ಲಿ ಸ್ವರ್ಗವು ನಿಯೋಗಕ್ಕೆ ಫಲ, ಯಾಗ ನಿಯೋಗಕ್ಕೆ ಸಾಧನ. ಅದರ ಹೋಮಾದಿಗಳು ಅಂಗ ಕಲಾಪಗಳು. ಅದರಂತೆ "ಸಪ್ರಪಂಚಂ ಬ್ರಹ್ಮ ನಿಷ್ಪ್ರಪಂಚಂ ಕುರ್ಯಾತ್"—ಎಂಬಲ್ಲಿ ಪ್ರಪಂಚ ನಿವೃತ್ತಿ ಸಾಧ್ಯವಾಗಲು ಶಕ್ಯವಿಲ್ಲ. ಏತಕ್ಕೆಂದರೆ ಆಗ ನಿಷ್ಪ್ರಪಂಚ ಬ್ರಹ್ಮವೆಂಬ ಫಲವೂ ಸಾಧನವೂ ಒಂದೇ ಆಗುತ್ತೆ, ಸಾಧನವೂ ಫಲವೂ ಎಲ್ಲೂ ಒಂದೇ ಆಗಲು ಶಕ್ಯವಿಲ್ಲ, ಇದಲ್ಲದೆ ಪ್ರಪಂಚ ನಿವೃತ್ತಿರೂಪ ಮುಕ್ತಿ ನಿಯೋಗದಿಂದ ಸಾಧ್ಯವಾದರೆ ಜಗತ್ತು ಸತ್ಯವೂ ಸ್ವರ್ಗಾದಿಗಳಂತೆ ಮುಕ್ತಿ ಅನಿತ್ಯವೂ ಆಗಬೇಕಾಗುತ್ತೆ. ಆದುದರಿಂದ ಈ ನಿಷ್ಪ್ರಪಂಚೀಕರಣ ನಿಯೋಗ ವಾದವೂ ಸಮರ್ಥನೀಯವಲ್ಲ.

ಮೂರನೆಯದಾದ ವಾಕ್ಯಾರ್ಥಾಪರೋಕ್ಷ ಜ್ಞಾನವಾದವು ಶಾಂಕರರಿಗೂ ಸಮ್ಮತ. "ತತ್ತ್ವಮಸಿ" ಎಂಬ ವಾಕ್ಯದಿಂದ ಹುಟ್ಟಿದ ಅರ್ಥಜ್ಞಾನವೇ ಮೋಕ್ಷಸಾಧನವೆಂದು ಹೇಳುವವರಿವರು. ಆದರೆ ಈ ಉಪದೇಶವನ್ನು ಪಡೆದ ಇವರು ಮುಕ್ತರಾಗುವರೆ?—ಹೌದೆಂದರೆ ಇದು ಪ್ರಮಾಣ ವಿರುದ್ಧ. ಏತಕ್ಕೆಂದರೆ ಆ ಉಪದೇಶವನ್ನು ಪಡೆದಾತನು ಉಪದೇಶವನ್ನು ಪಡೆದ ಮೇಲೂ ಸಾಂಸಾರಿಕ ದುಃಖಗಳನ್ನು ಮೊದಲಿನಂತೆಯೇ ಅನುಭವಿಸುತ್ತಲೇ ಇರುತ್ತಾನೆ, ಶ್ರವಣಜನ್ಯ ಜ್ಞಾನವೇ ವಾಕ್ಯಾರ್ಥ ಜ್ಞಾನವಾದ್ದರಿಂದ, ಆಗ "ಶ್ರೋತವ್ಯಃ"—ಎಂಬುದೇ ಸಾಕಾಗಿತ್ತು. "ಮನ್ತವ್ಯಃ ನಿದಿಧ್ಯಾಸಿತವ್ಯಃ"—ಎಂಬ ಮನನ–ಧ್ಯಾನ ವಿಧಾನಗಳು ನಿರರ್ಥಕವಾಗುತ್ತವೆ. ಅದು ಯುಕ್ತವಲ್ಲ. ಅವರಿಗೆ ಸಮ್ಮತವೂ ಅಲ್ಲ.

ಮುಕ್ತಿಯ ವಿಷಯದಲ್ಲಿ ಶ್ರುತ್ಯಾದಿ ವಿರುದ್ಧಗಳಾದ ಪ್ರತಿ ಪಕ್ಷಗಳನ್ನು ಕೆಳಗೆ ಸಂಗ್ರಹಿಸಲಾಗಿದೆ.

೧. ಪರಿಪೂರ್ಣ ಸ್ವತಂತ್ರತೆಯೇ ಮುಕ್ತಿಯೆಂದು ಸಿದ್ಧಸಂಪ್ರದಾಯದವರೆನ್ನುವರು.

೨. ಬ್ರಹ್ಮದೊಂದಿಗೆ ಐಕ್ಯವೇ ಮುಕ್ತಿಯೆಂದು ವಿವರ್ತಾದ್ವೈತವಾದಿಗಳು.

೩. ಮುಕ್ತಾತ್ಮರೂ ಪಶುಪತಿಗೆ ಸಮರೆಂದು—ಪಾಶುಪತರು.

೪. ಕ್ಷಣಿಕ ವಿಜ್ಞಾನಸಂತಾನ ಉಳಿಯುತ್ತದೆ—ಅದರ ವಾಸನೆಗಳೆಲ್ಲವೂ ತೊಲಗುತ್ತವೆ ಯೆಂದು ಯೋಗಾಚಾರ ಬೌದ್ಧರು.

೫. ಆ ವಿಜ್ಞಾನ ಸಂತತಿಯ ನಾಶವೇ ಮೋಕ್ಷವೆಂದು ಮಾಧ್ಯಮಿಕೈಕದೇಶಿಯಾದ ಬೋಧಿ ಚರ್ಯಾವತಾರಕಾರನಾದ ಪ್ರಜ್ಞಾಕರಮತಿ.

೬. ತನ್ನ ಸ್ವಾಭಾವಿಕವಾದ ನಿತ್ಯಜ್ಞಾನ ನಿತ್ಯಸುಖಗಳ ಅಭಿವ್ಯಕ್ತಿಯೇ ಮುಕ್ತಿಯೆಂದು ನೈಯಾಯಿಕೈಕದೇಶಿಗಳಾದ ಭೂಷಣಕಾರರ ಪಕ್ಷ.

೭. ತನ್ನ ನಿತ್ಯ ಸುಖಸ್ವರೂಪದ ಮಾನಸಿಕಾನುಭವವೇ ಮುಕ್ತಿಯೆಂದು ಮೀಮಾಂಸಕೈಕದೇಶಿ ಗಳಾದ ಕುಮಾರಿಲಭಟ್ಟರು.

೮. ಪಾಷಾಣಕಲ್ಪವೇ ಮುಕ್ತಿ—ಎಂದು ವೈಶೇಷಿಕರು.

೯. ಸತತೋರ್ಧ್ವಗಮನವೇ ಮುಕ್ತಿ—ಎಂದು ಜೈನರು.

೧೦. ಶೂನ್ಯಾದ್ವೈತವೇ ಮುಕ್ತಿಯೆಂದು ಶೂನ್ಯವೇ ತತ್ತ್ವವೆನ್ನುವ ಮಾಧ್ಯಮಿಕರು.

ಮುಕ್ತಿಯ ಬಗ್ಗೆ ಹೀಗೆ ಮನಸ್ಸು ಬಂದಂತೆ ಹೇಳುವ ಈ ಪಕ್ಷಗಳೆಲ್ಲವೂ ಶ್ರುತ್ಯಾದಿ ಪ್ರಮಾಣ ವಿರುದ್ಧಗಳು.

ಶ್ರುತಿಯಲ್ಲಿ ''ಇಮಾ ಸ್ಸರ್ವಾಃ ಪ್ರಜಾಸ್ಸದಾಯತನಾಃ''—ಎಂದು ಜಗತ್ತೆಲ್ಲವೂ ಪರಮಾತ್ಮನಿಗೆ ಅಧೀನವೆಂದು ಹೇಳಿದೆ. ಈ ಪರಮಾತ್ಮಾಧೀನತೆಯೇ 'ಶೇಷತ್ವ'—ವೆಂಬುದು. 'ಶೇಷ'—ಎಂದರೆ ಮತ್ತೊಬ್ಬರಿಗಾಗಿಯೇ ಇರುವುದೆಂದರ್ಥ. ಪರಮಾತ್ಮನ ಆನಂದಕ್ಕಾಗಿಯೇ ಸಕಲ ಚೇತನಾಚೇತನವೂ ಇರುತ್ತದೆ. ತನ್ನ ಆನಂದವಾದರೋ ಅನುಷಂಗಿಕವೆಂಬುದು ಭಕ್ತಿಮಾರ್ಗದವರ ನಿರ್ಣಯ. ತನ್ನ ಅಹಂಕಾರವನ್ನು ನಿರ್ಮೂಲ ಮಾಡಿಕೊಳ್ಳುವುದಕ್ಕೆ ಈ ಶೇಷತ್ವಾನುಸಂಧಾನವು ತುಂಬಾ ಸಹಕಾರಿ.

ಭಕ್ತಿಸ್ವರೂಪ—ಧ್ಯಾನವೇ ಮುಂತಾದ ಶಬ್ದಗಳಿಂದ ಸ್ಮೃತಿ ಸಂತತಿ ರೂಪವಾದ ಉಪಾಸ ನೆಯೇ ಮೋಕ್ಷಕ್ಕೆ ಸಾಧನವೆಂದು "ಸ್ಮೃತಿಲಂಭೇ ಸರ್ವ ಗ್ರಂಥೀನಾಂ ವಿಪ್ರ ಮೋಕ್ಷಃ''—ಇತ್ಯಾದಿಯಾಗಿ ಶಾಸ್ತ್ರಗಳಿಂದ ವಿಹಿತವಾಗಿದೆ. ಮುಕ್ತಿಗೆ ಕಾರಣವಾದ ಆ ಸ್ಮೃತಿಯೇ ಸುಸ್ಪಷ್ಟಾಕಾರವನ್ನು ತಾಳಿದಾಗ ದರ್ಶನ ರೂಪವನ್ನು ತಾಳುವುದರಿಂದ, "ದ್ರಷ್ಟವ್ಯಃ''—ಎಂಬುದೂ ಸಂಗತವಾಗುತ್ತದೆ. ಹಾಗೆಯೇ ಆ ಸ್ಮೃತಿ ಪರಮಾತ್ಮನ ಸೇವಾರೂಪವೂ ಆಗುವುದರಿಂದ ಸಮಾನವಾದ ಫಲವುಳ್ಳದ್ದಾಗಿ "ಉಪಾಸನೆ''— ಎಂದೆನಿಸಿಕೊಳ್ಳುತ್ತದೆ. ಒಂದು ಕಡೆ "ಉಪಾಸನೆ''—ಯೆಂಬುದಕ್ಕೆ 'ವೇದ' ಎಂದೂ ವೇದಕ್ಕೆ "ಉಪಾಸೀತ''—ಎಂದೂ ಬದಲಿಸಿ ಬದಲಿಸಿ ಹೇಳಿರುವುದರಿಂದ 'ಜ್ಞಾನ' 'ಉಪಾಸನೆ'—ಎಲ್ಲವೂ ಒಂದೇ ಎಂಬುದು ಸ್ಪಷ್ಟ.

ಸಂವರ್ಗ ವಿದ್ಯೆಯೇ ಮುಂತಾದ ಒಂದೇ ಪ್ರಕರಣದಲ್ಲಿ "ಯಸ್ತದ್ವೇದ, ಯತ್ಸವೇದ''—ಎಂದು ಜ್ಞಾನವೆಂಬ ಅರ್ಥವುಳ್ಳ "ವೇದ''—ಎಂಬ ಶಬ್ದದಿಂದ ಉಪಕ್ರಮಿಸಿ, "ಯಾಂ ದೇವತಾಮುಪಾಸ್ಸೇ'' ಎಂದು 'ಉಪಾಸನೆ'—ಶಬ್ದವನ್ನೂ ಪ್ರಯೋಗಿಸಿರುವುದರಿಂದ ಮೋಕ್ಷಕ್ಕೆ ಕಾರಣವಾದ ಜ್ಞಾನ ಉಪಾಸನೆ—ಎರಡೂ ಒಂದೇ, ಎಂಬುದು ಸ್ಪಷ್ಟವಲ್ಲವೆ! ಜ್ಞಾನ ಒಂದೇ ಮೋಕ್ಷ ಹೇತುವೆಂದಲ್ಲಿ ಇಂತಹ ವಾಕ್ಯಗಳೆಲ್ಲವೂ ಅರ್ಥವಿಲ್ಲದೆ ಹೋಗಬೇಕಾಗುತ್ತದೆ. ಆದ್ದರಿಂದ ಹೀಗೆ ದರ್ಶನಾಕಾರವನ್ನು ಹೊಂದಿದ ವಿಶಿಷ್ಟ ಸ್ಮೃತಿ ರೂಪವಾದ ಉಪಾಸನೆ ರೂಪವಾದ ಜ್ಞಾನ ಮೋಕ್ಷಕ್ಕೆ ಹೇತುವೆಂದು ಶಾಸ್ತ್ರ ವಿಧಿಸಿದೆ.

ಈ ಪಕ್ಷದಲ್ಲೇ ಸಕಲ ಶ್ರುತಿಸ್ಮೃತಿಗಳ ಹೊಂದಿಕೆ ಸಾಧ್ಯ. ತೈಲ ಧಾರೆಯಂತೆ ಒಂದೇ ಸಮನಾಗಿರುವ ಸ್ಮೃತಿ ಪರಂಪರೆಯೇ ಉಪಾಸನೆ. ಸ್ಮೃತಿಯೂ ಜ್ಞಾನ ವಿಶೇಷ. ಈ ಸ್ಮೃತಿಯು ತನಗೆ ಅತ್ಯಂತ

ಪ್ರಿಯವಾದ ವಸ್ತುವಿನಲ್ಲಿ ಗಾಢವಾದಾಗ ದರ್ಶನ ಸಮಾನವಾದ ಆಕಾರವನ್ನೇ ತಾಳುವುದು ಲೋಕದಲ್ಲಿ ಕಂಡಿದೆ. ಹೀಗೆ "ದರ್ಶನದಿಂದಲೇ ಮೋಕ್ಷ" "ಸ್ಮೃತಿಯಿಂದಲೇ ಮೋಕ್ಷ" "ಜ್ಞಾನದಿಂದಲೇ ಮೋಕ್ಷ"— "ಉಪಾಸನೆಯಿಂದಲೇ ಮೋಕ್ಷ"—"ಧ್ಯಾನದಿಂದಲೇ ಮೋಕ್ಷ"—ಎಂದಿವೇ ಮುಂತಾದ ನಾನಾ ಬಗೆಯ ಶ್ರುತಿಗೂ ವಿರೋಧ ಬರುವುದಿಲ್ಲ. ಅಷ್ಟೇ ಅಲ್ಲದೆ ಸಕಲ ಶ್ರುತಿಗಳೂ ಸಮನ್ವಯವೂ ಆಗುವುದು. ಆದ್ದರಿಂದ ಭಕ್ತಿಯೇ ಮೋಕ್ಷ ಸಾಧನ

ಪ್ರಾಪ್ಯವಾದ ಪರಬ್ರಹ್ಮವೂ ಒಂದೇ ಆಗಿ ಇದಕ್ಕೆ ಸಾಧನವೂ ಒಂದೇ ಆದರೆ, ಉಪನಿಷತ್ತುಗಳಲ್ಲಿ ನಾನಾ ವಿಧ ಬ್ರಹ್ಮವಿದ್ಯೆಗಳನ್ನು ಏಕೆ ಹೇಳಿದೆ?—ಎಂದರೆ ಉಪಾಸನೆಯಲ್ಲಿ ಉಪಾಸ್ಯನಾದ ಪರಬ್ರಹ್ಮ ಒಬ್ಬನೇ ಆದರೂ, ಅವನು ಅನಂತ ಗುಣಸಾಧಕನು. ಎಲ್ಲಾ ಗುಣಗಳನ್ನೂ ಅರಿಯಲು ಯಾರಿಗೂ ಸಾಧ್ಯವಿಲ್ಲ ಪರಿಪೂರ್ಣ ಬ್ರಹ್ಮೋಪಾಸನೆ ಅಥವಾ ಜ್ಞಾನದಿಂದಲೇ ಪರಿಪೂರ್ಣ ಬ್ರಹ್ಮಪ್ರಾಪ್ತಿಯಾಗುವುದಾದರೆ ಅದು ಯಾರಿಗೂ ಸಾಧ್ಯವಿಲ್ಲ. ಆದ್ದರಿಂದ ಅವರವರ ಶಕ್ತಿ ಅಭಿರುಚಿ ಮುಂತಾದುವುಗಳಿಗೆ ತಕ್ಕಂತೆ ಕೆಲ ಕೆಲ ಗುಣಗಳನ್ನು ಮುಂದಿಟ್ಟುಕೊಂಡೇ ಅವನನ್ನು ಉಪಾಸಿಸಬೇಕು ಇದರಿಂದ ಬ್ರಹ್ಮವಿದ್ಯೆಗಳು ಅನೇಕಗಳಾಗುತ್ತವೆ. ಎಲ್ಲದರಲ್ಲೂ ಉಪಾಸ್ಯ ಪರಮಾತ್ಮನೇ ಆದುದರಿಂದ ಎಲ್ಲರೂ ಅವನನ್ನೇ ಸೇರುತ್ತಾರೆ ಇದೇ ಮುಕ್ತಿ. ಆದ್ದರಿಂದ ಈ ಬ್ರಹ್ಮವಿದ್ಯೆಗಳೆಲ್ಲಕ್ಕೂ ಫಲ ಒಂದೇ ಆಗುತ್ತದೆ. ಆದ್ದರಿಂದಲೇ ಯಾವುದಾದರೊಂದು ಉಪಾಸನೆಯನ್ನು ಮಾಡಿದರೆ ಸಾಕು. ಎಲ್ಲಾ ಬಗೆಯ ಉಪಾಸನೆಗಳನ್ನೂ ಪ್ರತಿಯೊಬ್ಬರೂ ಮಾಡಬೇಕಾಗಿಲ್ಲ

ಮೊದಲು ಕರ್ಮಯೋಗ ಜ್ಞಾನಯೋಗಗಳನ್ನು ನಡೆಯಿಸಿ ಆತ್ಮಾವಲೋಕನವೆಂಬ ಹಂತವನ್ನು ಪಡೆದಿರುವವನೇ ಈ ಪರಬ್ರಹ್ಮೋಪಾಸನೆಯನ್ನು ಮಾಡುವುದಕ್ಕೆ ಅರ್ಹನಾಗುತ್ತಾನೆ. ಈ ಎಲ್ಲಾ ಅವಸ್ಥೆಗಳಲ್ಲೂ ವರ್ಣಾಶ್ರಮ ಧರ್ಮಗಳು ಆಯಾ ಯೋಗಕ್ಕೆ ಅಂಗವಾಗಿ ಇದ್ದೇ ಇರುತ್ತವೆ.

ಈ ಉಪನಿಷತ್ತುಗಳಲ್ಲಿ ಹೇಳುವ ಯಾವ ಬ್ರಹ್ಮವಿದ್ಯೆಯಲ್ಲಿ ಸ್ವರೂಪತಃ ಪರಬ್ರಹ್ಮವೇ ಆಗಲಿ, ಚೇತನ ಅಥವಾ ಅಚೇತನ ಶರೀರಕ ಪರಬ್ರಹ್ಮವೇ ಆಗಲಿ ಉದ್ದೇಶವಾಗಿರುವುದೋ, ಆ ವಿದ್ಯೆಯೇ ವಿರಕ್ತನಿಗೆ ಸಂಸಾರ ಭಯವನ್ನು ನೀಗಿಸಿ ಮುಕ್ತಿಯನ್ನು ಕೊಡುವ ಪರಬ್ರಹ್ಮ ವಿದ್ಯೆಯಾಗುತ್ತದೆ.

ಯಾವನು ಬ್ರಹ್ಮವ್ಯತಿರಿಕ್ತವಾದ ಎಲ್ಲಾ ವಸ್ತುಗಳನ್ನೂ ಬ್ರಹ್ಮಭಾವನೆಯಿಂದಾಗಲಿ, ಆ ಭಾವನೆ ಇಲ್ಲದೇ ಕೇವಲ ಆಯಾ ವಸ್ತುಗಳನ್ನಾಗಲಿ, ಶಾಸ್ತ್ರದಲ್ಲಿ ಹೇಳಿರುವಂತೆ ಉಪಾಸಿಸುವನೋ ಇವನಿಗೆ ಬ್ರಹ್ಮನಾಡೀದ್ವಾರಾ ಶರೀರದಿಂದ ನಿರ್ಯಾಣವೂ ಇಲ್ಲ, ಅರ್ಚಿರಾದಿ ಮಾರ್ಗವೂ ಇಲ್ಲ, ಮೋಕ್ಷವೂ ಇಲ್ಲ. ಅವನು ಆಯಾ ಉಪಾಸನೆಗೆ ತಕ್ಕ ಫಲವನ್ನು ಪಡೆಯುತ್ತಾನೆ.

ಉಪನಿಷತ್ತುಗಳಲ್ಲಿ ಪ್ರತಿಪಾದ್ಯವಾದ ಉಪಾಸನೆಗಳು ಮೋಕ್ಷಾರ್ಥೋಪಾಸನೆಗಳು, ಕಾಮ್ಯೋಪಾಸನೆಗಳು—ಎಂದು ಎರಡು ವಿಧವಾಗಿವೆ. ಮೊದಲನೆಯದನ್ನು ಬ್ರಹ್ಮವಿದ್ಯೆಗಳೆನ್ನುತ್ತಾರೆ. ಇದು ಕೇವಲ ಪರಮಾತ್ಮನ ಉಪಾಸನೆ, ಚೇತನ ಶರೀರಕ ಪರಮಾತ್ಮತ್ಮೋಪಾಸನೆ ಅಚೇತನ ಶರೀರಕ ಪರಮಾತ್ಮೋಪಾಸನೆ ಎಂದು ಮೂರು ವಿಧ. ಈ ಮೂರು ವಿಧ ಉಪಾಸನೆಯನ್ನು ಮಾಡುವವರಿಗೂ ಸುಷುಮ್ನಾ ನಾಡಿ ಮೂಲಕ ನಿರ್ಯಾಣ, ಅರ್ಚಿರಾದಿ ಮಾರ್ಗ ಪರಮಾತ್ಮ ಪ್ರಾಪ್ತಿರೂಪ ಮೋಕ್ಷ ಇವೆಲ್ಲವೂ ಸಮಾನ. ಇತರ ಫಲಾರ್ಥಕ ಉಪಾಸಕರಿಗೆ ಈ ಮೂರೂ ಇರುವುದಿಲ್ಲ.

### ಜ್ಞಾನ ಕರ್ಮಸಮುಚ್ಚಯ ವಾದದ ವಿಮರ್ಶೆ

ಭಕ್ತಿಯೋಗರೂಪವಾದ ಬ್ರಹ್ಮವಿದ್ಯೆಗೆ ವರ್ಣಾಶ್ರಮ ಧರ್ಮಗಳು ಅಂಗವಾಗುತ್ತವೆ. ಹೇಗೆಂದರೆ:—ಅಂತಃಕರಣದ ತಮಸ್ಸಿನಿಂದ ಹುಟ್ಟಿದ ಪಾಪವನ್ನು ಹೋಗಲಾಡಿಸುವುದರಿಂದ

ವರ್ಣಾಶ್ರಮ ಧರ್ಮಗಳೆಲ್ಲವೂ ಭಕ್ತಿಯೋಗ ನಿಷ್ಠನಿಗೆ ಶಮದಮಾದಿ ಗುಣಗಳಂತೆ ಭಕ್ತಿಯೋಗವನ್ನು ಪೋಷಿಸುತ್ತವೆ.

"ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋ ಭಯಗ್ಂಸಹ ।
ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತಮಶ್ನುತೇ ॥"

—ಎಂಬ ಈಶೋಪನಿಷತ್ತಿನ ಮಂತ್ರವೂ ಉಳಿದ ಅನೇಕ ವಾಕ್ಯಗಳಿಂದ ಸಿದ್ಧವಾದ ಈ ಅರ್ಥವನ್ನು ಹೇಳುತ್ತದೆ. ಕೆಲವು ಕಡೆಯಲ್ಲಿ, "ಹತಂಜ್ಞಾನಂ ಕ್ರಿಯಾಹೀನಂ ಹತಾಚಾಜ್ಞಾನಿನಾಂ ಕ್ರಿಯಾ ॥"—ಇತ್ಯಾದಿ ವಾಕ್ಯಗಳು ಜ್ಞಾನ ಕರ್ಮ ಎರಡನ್ನೂ ಒಟ್ಟಾಗಿ ಅವಶ್ಯಕವೆಂದು ಹೇಳಿದರೂ ಆ ವಾಕ್ಯಕ್ಕೆ ಜ್ಞಾನ ಮಾತ್ರ ಸಾಲದು, ಜ್ಞಾನಕ್ಕೆ ಕರ್ಮ ಅಂಗವಾದ ಕಾರಣ ಅತ್ಯಾವಶ್ಯಕ ಎಂಬ ಅಭಿಪ್ರಾಯವೇ ಹೊರತು ಎರಡೂ ಸಮಾನವಾಗಿ ಮೋಕ್ಷ ಕಾರಣವೆಂದರ್ಥವಲ್ಲ.

ಮೋಕ್ಷಸಾಧನ ವಿಚಾರದಲ್ಲಿ ಮುಖ್ಯವಾಗಿ ಒಂದು ವಿವಾದವಿದೆ. ಜ್ಞಾನ ಮಾತ್ರವೇ ಮೋಕ್ಷ ಸಾಧನ, ಕರ್ಮಕ್ಕೂ, ಮೋಕ್ಷಕ್ಕೂ ಯಾವ ಸಂಬಂಧವೂ ಇಲ್ಲ. ಪ್ರತ್ಯುತ ವಿರುದ್ಧವೂ ಹೌದು —ಎಂಬುದು ಶಾಂಕರರ ಪಕ್ಷ. ಕರ್ಮ ಮತ್ತು ಜ್ಞಾನ ಎರಡೂ ಒಟ್ಟಾಗಿ ಮೋಕ್ಷಸಾಧನ—ಎಂಬುದು ಭಾಸ್ಕರರ ಪಕ್ಷ. ಇದನ್ನು ಸಮ ಸಮುಚ್ಚಯ ಪಕ್ಷವೆನ್ನುವರು. ಕರ್ಮದಿಂದ ಪ್ರತಿಬಂಧಕ ರೂಪವಾದ ಪಾಪ ನಿವೃತ್ತಿಯಾಗುತ್ತದೆ; ಜ್ಞಾನದಿಂದ ಮೋಕ್ಷ ಬರುತ್ತದೆ—ಎಂಬುದು ಯಾದವ ಪ್ರಕಾಶರ ಪಕ್ಷ. ಇದನ್ನು ಸಾಧ್ಯದ್ವಿಕ-ಸಾಧನದ್ವಿಕ ಪಕ್ಷವೆನ್ನುವರು. ಜ್ಞಾನವೇ ಮೋಕ್ಷ ಸಾಧನ, ಆದರೆ ಪರ ಮಾತ್ಮ ಸಾಕ್ಷಾತ್ಕಾರಾನಂತರ ಮಾಡುವ ಕರ್ಮಗಳಿಂದ ಮುಕ್ತಿಯ ಆನಂದದಲ್ಲಿ ಹೆಚ್ಚು ವಿಕಾಸ ವುಂಟಾಗುತ್ತದೆ—ಎಂಬುದು ದ್ವೈತಿಗಳ ಪಕ್ಷ.

ಸಿದ್ಧಾಂತದಲ್ಲಿ ಜ್ಞಾನವೇ ಮೋಕ್ಷ ಸಾಧನ; ಆದರೆ ಜ್ಞಾನಕ್ಕೆ ಕರ್ಮ ಅಂಗವಾಗುತ್ತದೆ. ಇದನ್ನು ಅಂಗಾಂಗಿ ಭಾವ ಸಮುಚ್ಚಯ ಪಕ್ಷವೆನ್ನುತ್ತಾರೆ. ಕರ್ಮಗಳಿಂದ ಚಿತ್ತ ಶುದ್ಧಿಯಾಗುತ್ತದೆ—ಎಂದು ಹೇಳಿದರೂ ಚಿತ್ತ ಶುದ್ಧಿಯೂ ಜ್ಞಾನವೂ ಅವಿನಾಭೂತಗಳಾದ್ದರಿಂದ ಕೊನೆಯವರೆಗೂ ಕರ್ಮಗಳು ಅನಿವಾರ್ಯಗಳೇ ಆಗುತ್ತವೆ.

ನಿರೀಶ್ವರವಾದಿಗಳಾದ ಪೂರ್ವಮೀಮಾಂಸಕರಾದರೋ—ಉಪನಿಷದ್ಭಾಗಕ್ಕೆ ಪ್ರತ್ಯೇಕವಾದ ಸ್ಥಾನವೇ ಇಲ್ಲ. ಪೂರ್ವಕಾಂಡದಲ್ಲಿ ಹೇಳಿರುವ ಯಜ್ಞಾದಿ ಕರ್ಮಗಳನ್ನು ಮಾಡುವ ಚೇತನರ ಸ್ವರೂಪವನ್ನು ಇದು ಪ್ರತಿಪಾದಿಸುತ್ತದೆ. ಪರಬ್ರಹ್ಮಾದಿಪದಗಳೂ ಸಹ ಅನೇಕ ಕರ್ಮಾನುಷ್ಠಾನಗಳಿಂದ ಉನ್ನತ ಸ್ಥಾನವನ್ನು ಗಳಿಸಿದ ಜೀವಾತ್ಮನನ್ನೇ ಹೇಳುತ್ತವೆಯೇ ಹೊರತು ಪ್ರತ್ಯೇಕವಾದ ಪರಮಾತ್ಮ ನಿರುವುದನ್ನು ಹೇಳುವುದಿಲ್ಲ. ಇದರಿಂದ ತನ್ನ ನಿಜ ಸ್ವರೂಪ ಪರಿಜ್ಞಾನದೊಂದಿಗೆ ಕರ್ಮಗಳನ್ನು ಮಾಡಬೇಕೆಂಬುದು ಉಪನಿಷತ್ತುಗಳ ತಾತ್ಪರ್ಯ. ಆದ್ದರಿಂದ ಆತ್ಮಜ್ಞಾನವು ಕರ್ಮಕರ್ತನಾದ ಜೀವನಿಗೆ ಒಂದು ವಿಧವಾದ ಸಂಸ್ಕಾರ ವಿಶೇಷ ಎನ್ನುವರು.

ಸಿದ್ಧಾಂತದಲ್ಲಿ ಪೂರ್ವೋತ್ತರ ಮೀಮಾಂಸೆಗಳನ್ನು ಒಂದೇ ಶಾಸ್ತ್ರವೆಂದು ಹೇಳಿದರೂ ಉತ್ತರ ಭಾಗಕ್ಕೆ ಪೂರ್ವಭಾಗ ಅಂಗವಾಗಬಹುದೇ ಹೊರತು ಪೂರ್ವಭಾಗಕ್ಕೆ ಉತ್ತರ ಭಾಗವು ಅಂಗವಾಗಲು ಸಾಧ್ಯವಿಲ್ಲ. ಉತ್ತರಭಾಗ ಪ್ರತಿಪಾದ್ಯವಾದ ಪರಮಾತ್ಮನ ಸ್ವರೂಪ ಕರ್ಮ ಕರ್ತೃವಾದ ಜೀವಾತ್ಮ ನಿಗಿಂತಲೂ, ಅತ್ಯಂತ ವಿಲಕ್ಷಣವೆಂದೂ ಸ್ವಯಂ ಪುರುಷಾರ್ಥ ರೂಪವೆಂದೂ ಸಮನ್ವಯಾಧಿ ಕರಣದಲ್ಲಿ ಸಮರ್ಥಿಸಲಾಗಿದೆ. ಆದ್ದರಿಂದ ಉಪನಿಷತ್ತಿನಲ್ಲಿ ಪ್ರತಿಪಾದ್ಯವಾದ ಆತ್ಮನು ಕರ್ಮ ಶೇಷಭೂತನೂ ಅಲ್ಲ, ಕರ್ಮಗಳು ಜ್ಞಾನಕ್ಕೆ ಹೇಗೆ ಅಂಗ? ಎಂದಲ್ಲಿ,

ಮೋಕ್ಷ ಧರ್ಮದಲ್ಲಿ, "ತೇಷಾಮೇಕಾನ್ತಿನಃ ಶ್ರೇಷ್ಠಾಃ ತೇ ಚೈವಾನನ್ಯದೇವತಾಃ |"—ಇತ್ಯಾದಿಗಳಲ್ಲಿ ಪರಮಾತ್ಮನೊಬ್ಬನಲ್ಲೇ ನಿಷ್ಠೆಯುಳ್ಳವರಿಗೆ ಮಾತ್ರವೇ ಮೋಕ್ಷ ದೊರಕುವುದೆಂದು ಅಡಿಗಡಿಗೂ ಹೇಳಿದೆ. ಆದ್ದರಿಂದ, ಇಂದ್ರ, ಅಗ್ನಿ, ಸೂರ್ಯ, ಮುಂತಾದ ಅನೇಕ ದೇವತಾರಾಧನ ರೂಪವಾದ ವರ್ಣಾಶ್ರಮ ಧರ್ಮಗಳು ಪರಮಾತ್ಮ ಭಕ್ತಿರೂಪವಾದ ಬ್ರಹ್ಮವಿದ್ಯೆಗೆ ಅಂಗವಾಗಲು ಸಾಧ್ಯವಿಲ್ಲವೆನ್ನುವುದೂ ಸರಿಯಲ್ಲ—ಏಕೆಂದರೆ, ಐಂದ್ರೀನ್ಯಾಯ ಮತ್ತು ಪ್ರತರ್ದನವಿದ್ಯಾನ್ಯಾಯ ಮುಂತಾದ ಪ್ರಸಿದ್ಧ ನ್ಯಾಯಗಳ ತತ್ತ್ವವನ್ನು ಬಲ್ಲವನಿಗೆ ಅಗ್ನಿ, ಇಂದ್ರ, ಇತ್ಯಾದಿ ಶಬ್ದಗಳು ಸರ್ವಾಂತರ್ಯಾಮಿಯಾದ ಪರಮಾತ್ಮನನ್ನೇ ಬೋಧಿಸುತ್ತವೆಯೆಂಬ ಅರಿವು ಇರುವುದರಿಂದ ಇವರು ಮಾಡುವ ಸಕಲ ಕರ್ಮಗಳಿಂದಲೂ ಸರ್ವಾಂತರ್ಯಾಮಿಯಾದ ಆ ಪರಮಾತ್ಮನೊಬ್ಬನೇ ಆರಾಧ್ಯನಾಗುತ್ತಾನೆ, ಆಯಾ ದೇವತಾ ಆರಾಧನೆಯಾಗಿ ಆಗುವುದಿಲ್ಲ. ಬ್ರಹ್ಮೋಪಾಸಕರಲ್ಲದವರಿಗೆ ಮಾತ್ರ ಅಗ್ನಿ ಪೂಜೆ, ಅಗ್ನಿ ಪೂಜೆಯೇ ಆಗುತ್ತದೆ. ಪರಮಾತ್ಮನ ಪೂಜೆಯಾಗುವುದಿಲ್ಲ ಆದ್ದರಿಂದ ಅವರಿಗೆ ಆಯಾ ದೇವತಾ ಪೂಜೆಯ ಫಲ ದೊರೆಕುತ್ತದೆ, ಮೋಕ್ಷವಲ್ಲ ಹೀಗೆ ವರ್ಣಾಶ್ರಮ ಧರ್ಮಗಳು ಅಧಿಕಾರಿ ಭೇದದಿಂದ ಇತರ ಫಲಕವೂ ಬ್ರಹ್ಮವಿದ್ಯಾಂಗವೂ ಆಗುವುದರಲ್ಲಿ ಅಡ್ಡಿಯಿಲ್ಲ.

ಶ್ರೀ ಗೀತೆಯಲ್ಲಿ "ಯೋಗಾರೂಢಸ್ಯತಸ್ಯೈವ ಶಮಃ ಕಾರಣಮುಚ್ಯತೇ"—ಎಂಬುದಕ್ಕೂ ಸಮಾಧಿಯಲ್ಲಿ ನೆಲಸಿದವನಿಗೆ ಆ ಸಮಯದಲ್ಲಿ ಕರ್ಮಕಳಚಿ ಬಿದ್ದರೂ, ಕರ್ಮಗಳು ವಿದ್ಯೆಯ ಅಂಗವಾದ್ದರಿಂದ ಅಂಗಿಯಾದ ಬ್ರಹ್ಮವಿದ್ಯೆಯ ಫಲಾನುಭವದಲ್ಲಿ ಅವನು ಮುಳುಗಿರುವ ಕಾರಣ ಅದು ಸಹ್ಯ

ಶ್ವೇತಾಶ್ವತರ ಶ್ರುತಿಯಲ್ಲಿ "ಅತ್ಯಾಶ್ರಮಿ" ಎಂಬ ಪದವು ವರ್ಣಾಶ್ರಮಗಳನ್ನು ಬಿಟ್ಟಿರುವವರು—ಎಂಬ ಅರ್ಥವನ್ನು ಕೊಡುವುದರಿಂದ ಬ್ರಹ್ಮವಿದ್ಯೆಗೆ ವರ್ಣಾಶ್ರಮ ಧರ್ಮ ಅಂಗವಲ್ಲ—ವೆಂದರೆ ಅದು ಸರಿಯಲ್ಲ, "ಅತ್ಯಾಶ್ರಮೇಭ್ಯ" ಎಂದಿದ್ದಲ್ಲಿ ಅದಕ್ಕೆ ಆ ಅರ್ಥ ಬರುತ್ತಿತ್ತು. ಆದರೆ "ಅತ್ಯಾಶ್ರಮಿಭ್ಯಃ"—ಎಂದಿರುವುದರಿಂದ—ಅತಿಶಯಿತಃ + ಆಶ್ರಮಃ = ಅತ್ಯಾಶ್ರಮಃ ಸಃ ಏಷಾಂ ಅಸ್ತೀತಿಅತ್ಯಾಶ್ರಮಿಣಃ"—ಎಂಬ ವ್ಯುತ್ಪತ್ತಿಯಿಂದ ಅತ್ಯಾಶ್ರಮಿಗಳು ಎಂದರೆ ಸನ್ಯಾಸಿಗಳು ಎಂದೇ ಅರ್ಥ. ಆದುದರಿಂದ ವರ್ಣಾಶ್ರಮ ತ್ಯಾಗವು ಶಾಸ್ತ್ರ ಸಮ್ಮತವಲ್ಲ.

ಶ್ರೀ ಭಗವದ್ಗೀತೆಯ 18ನೆಯ ಅಧ್ಯಾಯದಲ್ಲಿ

"ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ |
ಮೋಹಾತ್ತಸ್ಯ ಪರಿತ್ಯಾಗಃ ತಾಮಸಃ ಪರಿಕೀರ್ತಿತಃ ||"—ಎಂದು ನಿತ್ಯ ಕರ್ಮಗಳ ತ್ಯಾಗವನ್ನು ತಾಮಸತ್ಯಾಗವೆಂದು ಹೇಳಿ,

"ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕುರುತೇಽರ್ಜುನ |
ಸಂಗಂತ್ಯಕ್ತ್ವಾ ಫಲಂ ಚೈವ ಸತ್ಯಾಗಃ ಸಾತ್ತ್ವಿಕೋ ಮತಃ ||—ಎಂದು, 'ನಾನು ಕರ್ತಾ' ಎಂಬ ಭಾವನೆಯನ್ನೂ ಫಲದಲ್ಲಿ ಆಸಕ್ತಿಯನ್ನೂ ಬಿಡಬೇಕೇ ಹೊರತು ಕರ್ಮವನ್ನು ಬಿಡಬಾರದೆಂದು ಸಾತ್ತ್ವಿಕ ತ್ಯಾಗವನ್ನು ಹೇಳಿದೆ, ಇದೇ ಭಗವಂತನಿಗೆ ಸಮ್ಮತವೆಂದು "ಯಜ್ಞ ದಾನ ತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ | ಮೇಮತಮುತ್ತಮಂ ||" ಎಂದು ಸ್ಪಷ್ಟವಾಗಿ ಹೇಳಿದೆ, ಆದುದರಿಂದ ವರ್ಣಾಶ್ರಮ ಧರ್ಮಗಳು ಬ್ರಹ್ಮವಿದ್ಯೆಗೆ ಅಂಗವಾದುದರಿಂದ ಬದುಕಿರುವವರೆಗೂ ಮಾಡಲೇಬೇಕಾದವು.

ಎಲ್ಲಾ ಆಶ್ರಮದವರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಸಮಾನ. ಛಾಂದೋಗ್ಯದಲ್ಲಿ, "ಕುಟುಂಬೇ ಶುಚೌ ದೇಶೇ ಸ್ವಾಧ್ಯಾಯಮಧೀಯಾನಃ ಧಾರ್ಮಿಕಾನ್ ವಿದಧತ್"—ಎಂದು ಪ್ರಾರಂಭಿಸಿ, "ಸ ಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕಮಭಿ ಸಂಪದ್ಯತೇ ನ ಚ ಪುನರಾವರ್ತತೇ"—ಎಂದು ಕೊನೆಯವರೆಗೂ ಗೃಹಸ್ಥಾಶ್ರಮದಲ್ಲೇ ಇರುವವನೂ ಮುಕ್ತಿಯನ್ನು ಪಡೆಯುತ್ತಾನೆ, ಮರಳಿ ಬರುವುದಿಲ್ಲವೆಂದು ಸ್ಪಷ್ಟವಾಗಿ ಹೇಳಿದೆ, "ಗೃಹಸ್ಥೋಽಪಿ ವಿಮುಚ್ಯತೇ"

—ಇತ್ಯಾದಿ ಸ್ಮೃತಿಗಳಲ್ಲೂ ಹೀಗೆಯೇ ಹೇಳಿದೆ. ಆದ್ದರಿಂದ ಸನ್ಯಾಸಿಗೆ ಮಾತ್ರವೇ ಬ್ರಹ್ಮ ವಿದ್ಯೆಯಲ್ಲಿ ಅಧಿಕಾರವೆಂಬುದು ಸರಿಯಲ್ಲ.

"ಯಸ್ಯತು ಸಂಸ್ಕಾರಾಣಾಂ ಏಕದೇಶೋಽಪಿ ಅಥ ಚಾಷ್ಟಾವಾತ್ಮಗುಣಾಃ ಸ ಬ್ರಹ್ಮಣಃ ಸಾಯುಜ್ಯಂ ಸ ಲೋಕತಾಂ ಗಚ್ಛತಿ"—ಎಂದು ಆತ್ಮ ಗುಣಗಳೇ ಮುಖ್ಯವಾಗಿ ಮೋಕ್ಷಕ್ಕೆ ಕಾರಣ ವೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಆಶ್ರಮಕ್ಕೂ ಮೋಕ್ಷಕ್ಕೂ ಯಾವ ಸಂಬಂಧವೂ ಇಲ್ಲ.

ಹಾಗಾದರೆ ಸನ್ಯಾಸಾಶ್ರಮಕ್ಕೆ "ಮೋಕ್ಷಾಶ್ರಮ"—ಎಂಬ ಹೆಸರೇಕೆ ಬಂತು?—ಎಂದರೆ ಕೊನೆಯ ಆಶ್ರಮವಾದ ಸನ್ಯಾಸಾಶ್ರಮದಲ್ಲಿ ಮಿಕ್ಕ ಆಶ್ರಮಗಳಿಗಿಂತಲೂ ಅರ್ಹತೆ ಹೆಚ್ಚಾಗಿದೆ ಯೆಂದಲ್ಲಿ ಅಡ್ಡಿಯಿಲ್ಲ. ಸನ್ಯಾಸಿಗಳಿಗೆ ಬೇರೆ ಕರ್ತವ್ಯಗಳಿಲ್ಲದ್ದರಿಂದ ಬ್ರಹ್ಮವಿದ್ಯೆಯ ಸಾಧನೆಗೆ ಬಾಹ್ಯ ಅನುಕೂಲವಿದೆ. ಆದ್ದರಿಂದ, ಮೋಕ್ಷಾಶ್ರಮವೆಂದಿದೆ, ಅಲ್ಲದೆ ಬ್ರಹ್ಮವಿದ್ಯೆಯು ಬಾಹ್ಯಕ್ಕಿಂತಲೂ ಆಂತರ ಅನುಕೂಲ್ಯಗಳನ್ನೇ ಹೆಚ್ಚು ಅವಲಂಬಿಸಿ ಇರುವುದರಿಂದ ಆ ಅನುಕೂಲ್ಯವಿರುವವರೆಲ್ಲರಿಗೂ ಬ್ರಹ್ಮ ವಿದ್ಯಾರ್ಹತೆ ಮತ್ತು ಮೋಕ್ಷ ಪ್ರಾಪ್ತಿಯಲ್ಲಿ ಯಾವ ತಡೆಯೂ ಇಲ್ಲ.

ಎಲ್ಲಾ ವರ್ಣಾಶ್ರಮಿಗಳಿಗೂ ಮೋಕ್ಷಕ್ಕೆ ಅರ್ಹತೆಯಿದೆ. ಉಪನಿಷತ್ತುಗಳಲ್ಲಿ ಹೇಳಿರುವ ಬ್ರಹ್ಮವಿದ್ಯೆಗಳಲ್ಲಿ ಅಧಿಕಾರವಿಲ್ಲದಿದ್ದರೂ, ಅಹಿಂಸೆಯೇ ಮುಂತಾದ ಆತ್ಮಗುಣ ಪೂರ್ತಿಯನ್ನು ಸಂಪಾದಿಸಿಕೊಳ್ಳುವುದರಿಂದಲೂ, ಶರಣಾಗತಿಯಿಂದಲೂ, ತನ್ನ ತನ್ನ ವರ್ಣಾಶ್ರಮಾನುಷ್ಠಾನ ದಿಂದಲೂ ಯಾರು ಬೇಕಾದರೂ ಮೋಕ್ಷವನ್ನು ಪಡೆಯಬಹುದು.

"ಶರಣಂತ್ವಾಂ ಪ್ರಪನ್ನಾಯೇ ಧ್ಯಾನಯೋಗ ವಿವರ್ಜಿತಾಃ ।
ತೇಽಪಿ ಮೃತ್ಯುಮತಿಕ್ರಮ್ಯ ಯಾನ್ತಿ ತದ್ವೈಷ್ಣವಂ ಪದಂ ॥"—ಎಂಬುದು ಬ್ರಾಹ್ಮ ಪುರಾಣ ವಚನ. "ಸ್ವಕರ್ಮಣಾ ತಮ ಭ್ಯರ್ಚ್ಯಸಿದ್ಧಿಂ ವಿನ್ದತಿ ಮಾನವಃ॥"—ಎಂಬುದು ಶ್ರೀ ಭಗವದ್ಗೀತೆಯ ವಚನ.

ಹೀಗಾದರೆ ಜ್ಞಾನವೇ ಮೋಕ್ಷಸಾಧನ, ವರ್ಣಾಶ್ರಮ ಧರ್ಮಗಳು ಅಂಗ ಮಾತ್ರವೆಂಬ ಸಿದ್ಧಾಂತಕ್ಕೆ ವಿರೋಧವಿಲ್ಲವೆ?—ಎಂದಲ್ಲಿ, ಸರಿಯಾದ ರೀತಿಯಲ್ಲಿ ಮಾಡಿದ ವರ್ಣಾಶ್ರಮ ಧರ್ಮ ದಿಂದಲೇ ಜ್ಞಾನವು ಸಿದ್ಧಿಸುತ್ತದೆಯಾದ್ದರಿಂದ, ವಿರೋಧವಿಲ್ಲ, ಇದಲ್ಲದೆ ಈ ಸಿದ್ಧಾಂತದಲ್ಲಿ, ಬ್ರಹ್ಮ ವಿದ್ಯೆಗಳೂ ಪರಮಾತ್ಮನ ಅನುಗ್ರಹದ ಮೂಲಕವೇ ಮೋಕ್ಷಸಾಧನವಾದ್ದರಿಂದ ಅಂತಹ ಪರ ಮಾತ್ಮನ ಅನುಗ್ರಹಕ್ಕೆ ಬೇಕಾದ ಸ್ಥಿತಿಯನ್ನು ಬ್ರಹ್ಮವಿದ್ಯೆಗಳು ಕೊಡುವಂತೆ ಈ ವರ್ಣಾಶ್ರಮ ಧರ್ಮಗಳೂ ಕೊಡುವುದರಿಂದ ಯಾವ ಪ್ರಮಾಣಗಳಿಗೂ ವಿರೋಧವಿಲ್ಲ.

## ಪುಣ್ಯ ಪಾಪಗಳ ಸಂಕ್ರಮ ಸಮರ್ಥನೆ

ಬ್ರಹ್ಮಜ್ಞಾನಿಯು ಶರೀರವನ್ನು ಬಿಡುವಾಗ ಅವನ ಪುಣ್ಯಗಳು ಅವನ ಮಿತ್ರರಿಗೂ ಪಾಪಗಳು ಅವನ ಶತ್ರುಗಳಿಗೂ ಸೇರುತ್ತವೆಯೆಂದು "ಸುಹೃದಃ ಸಾಧು ಕೃತ್ಯಾಂ ದ್ವಿಷನ್ತಃ ಪಾಪ ಕೃತ್ಯಾಂ"— ಇತ್ಯಾದಿಯಾಗಿ ಉಪನಿಷತ್ತಿನಲ್ಲಿ ಹೇಳಿದೆ. ಇಲ್ಲಿ, ಒಂದು ಶಂಕೆ;— ಜ್ಞಾನ ಸಿದ್ಧಿಯಾದ ಕೂಡಲೇ ಅವನ ಪ್ರಾಚೀನ ಕರ್ಮಗಳು ನಾಶವಾಗುತ್ತವೆ. ಮುಂದೆ ಮಾಡುವುದು ಇವನಿಗೆ ಅಂಟುವುದಿಲ್ಲ ಎಂದಾದ ಮೇಲೆ ಬೇರೆಯವರಿಗೆ ಹಂಚಬೇಕಾದ ಕರ್ಮ ಯಾವುದೂ ಉಳಿಯುವು. ಇದಲ್ಲದೆ ಪುಣ್ಯ ಪಾಪಗಳು ಅದ್ರವ್ಯಗಳಾದ್ದರಿಂದ ಅವುಗಳಿಗೆ ಚಲನಾದಿ ಪ್ರಸಕ್ತಿಯೂ ಇಲ್ಲ. ಹೀಗಿರುವಲ್ಲಿ ಒಬ್ಬನಲ್ಲಿ ಹುಟ್ಟಿದ ಪುಣ್ಯಪಾಪಗಳು ಮತ್ತೊಬ್ಬನಿಗೆ ಸೇರಲು ಹೇಗೆ ಸಾಧ್ಯ?—ಎಂಬುದು. ಇದಕ್ಕೆ ಸಮಾಧಾನ:

ಪುಣ್ಯಪಾಪಗಳು ಭಗವಂತನ ಅನುಗ್ರಹ ಮತ್ತು ನಿಗ್ರಹದಲ್ಲಿ ಕೊನೆಗಾಣತಕ್ಕವು. ಬ್ರಹ್ಮ ಜ್ಞಾನಿಯ ಪ್ರಾಚೀನ ಕರ್ಮಗಳು ನಾಶವಾಗುತ್ತವೆ—ಎಂದರೆ, ಅದಕ್ಕೆ ಸಂಬಂಧಪಟ್ಟ ಪರಮಾತ್ಮನ

ಸಂಕಲ್ಪಗಳು ನಿವೃತ್ತವಾಗುತ್ತವೆಯೆಂದರ್ಥ. ಮುಂದಿನ ಕರ್ಮಗಳು ಅಂಟುವುದಿಲ್ಲವೆಂದರೆ ಅದಕ್ಕೆ ಸಂಬಂಧಪಟ್ಟ ಪರಮಾತ್ಮನ ಸಂಕಲ್ಪಗಳು ಹುಟ್ಟುವುದಿಲ್ಲವೆಂದರ್ಥ. ಅವನ ಅಂತಿಮ ಕಾಲದಲ್ಲಿ ಪರಮಾತ್ಮನು ತನ್ನ ಈ ಸಂಕಲ್ಪಕ್ಕೆ ತಕ್ಕಂತೆ ಬೇರೆ ಸಂಕಲ್ಪಗಳನ್ನು ಅವನ ಶತ್ರು-ಮಿತ್ರರ ವಿಷಯದಲ್ಲಿ ಮಾಡುತ್ತಾನೆ ಎಂದರ್ಥವೇ ಹೊರತು ಪುಣ್ಯ ಪಾಪಗಳಿಗೆ ಚಲನೆಯಿದೆಯೆಂದೂ ಅರ್ಥವಲ್ಲ. ಪರಮಾತ್ಮನೇ ಬ್ರಹ್ಮಜ್ಞಾನಿಗೆ ಮಾಡಿದ ಉಪಕಾರರೂಪವಾದ ಸತ್ಕರ್ಮದ ಫಲವನ್ನು ಅವನ ಮಿತ್ರರಿಗೂ, ಅವನಿಗೆ ಮಾಡಿದ ದುಷ್ಕರ್ಮದ ಫಲವನ್ನು ಅವನ ಶತ್ರುಗಳಿಗೂ ಕೊಡುತ್ತಾನೆ, ಲೋಕದಲ್ಲಿ ಉಪಕಾರ ಮತ್ತು ಅಪಕಾರಗಳಿಗೆ ತಕ್ಕ ಫಲವಿದ್ದೇ ಇರುತ್ತೆ. ಅದರಲ್ಲೂ ಈ ಉಪಕಾರ ಗಳನ್ನು ಪಡೆಯುವ ವ್ಯಕ್ತಿಗೆ ತಕ್ಕಂತೆ ಅದರ ಫಲದಲ್ಲೂ ವ್ಯತ್ಯಾಸವಿರುತ್ತದೆ. ಅಸತ್ಪಾತ್ರದಲ್ಲಿ ಅಥವಾ ಅಕಾಲದಲ್ಲಿ ಮಾಡಿದ ಉಪಕಾರಕ್ಕಿಂತಲೂ ಸತ್ಪಾತ್ರದಲ್ಲಿ ಸಕಾಲದಲ್ಲಿ ಮಾಡಿದ ಉಪಕಾರಕ್ಕೆ ಹೆಚ್ಚಿನ ಫಲ ಉಂಟು. ಬ್ರಹ್ಮಜ್ಞಾನಿಯು ಅಂತಹ ಉತ್ತಮ ಶ್ರೇಣಿಯವನು, ಅವನ ವಿಷಯದಲ್ಲಿ ಮಾಡಿದ ಅಪಕಾರಗಳಿಗೂ ಹೀಗೆಯೇ ಹೆಚ್ಚು ಪ್ರತಿಫಲವುಂಟು. ಇದನ್ನೇ ಬ್ರಹ್ಮಜ್ಞಾನಿಯ ಅಂತ್ಯಕಾಲದಲ್ಲಿ ಅವನ ಪುಣ್ಯ-ಪಾಪಗಳು ಅವನ ಮಿತ್ರ ಮತ್ತು ಶತ್ರುಗಳಿಗೆ ಸೇರುತ್ತವೆಯೆನ್ನುತ್ತಾರೆ, ಹೀಗೆ ಅವನು ಮಾಡಿದ ಕರ್ಮದ ಫಲವನ್ನೇ ಅವನು ಅನುಭವಿಸುವುದರಿಂದ ಕರ್ಮ ಸಿದ್ಧಾಂತಕ್ಕೆ ಯಾವ ಧಕ್ಕೆಯೂ ಇಲ್ಲ.

ಶರೀರತ್ಯಾಗಮಾಡಿ ಹೊರಡುವ ಜೀವರಿಗೆ ಮೂರು ವಿಧ ಮಾರ್ಗವನ್ನು ಹೇಳಿದೆ. ಪುಣ್ಯ ಲೋಕವಾದ ಸ್ವರ್ಗಾದಿಗಳ ಗತಿ, ಪಾಪಲೋಕವಾದ ನರಕಾದಿಗಳ ಗತಿ, ಮೋಕ್ಷವನ್ನು ಸೇರುವ ಗತಿ. ಪುಣ್ಯಲೋಕದ ಗತಿಯನ್ನು ಪಿತೃಯಾನವೆಂದೂ, ಮೋಕ್ಷಗತಿಯನ್ನು ದೇವಯಾನ ಅಥವಾ ಅರ್ಚಿ ರಾದಿಗತಿಯೆಂದೂ ಪಾಪ ಗತಿಯನ್ನು ತೃತೀಯ ಗತಿಯೆಂದೂ ಹೇಳುತ್ತಾರೆ. ಅರ್ಚಿರಾದಿ ಗತಿ ಯಿಂದ ಹೊರಟವರು ಮಾತ್ರ ಮತ್ತೆ ಈ ಲೋಕಕ್ಕೆ ಮರಳುವುದಿಲ್ಲ. ಉಳಿದ ಎರಡು ಮಾರ್ಗದಿಂದ ಹೊರಟವರು ಮತ್ತೆ ಇಲ್ಲಿಗೆ ಮರಳುತ್ತಾರೆ.

ಪುರುಷ ಪ್ರಯತ್ನದ ಸಾಫಲ್ಯ—ಪರಮಾತ್ಮನೇ ಸಕಲ ಕಾರ್ಯಗಳಿಗೂ ಕಾರಣವಾದರೆ ಚೇತನರ ಪ್ರಯತ್ನಕ್ಕೆ ಆವಶ್ಯಕತೆ ಏನಿದೆ?—ಎಂದು ಶಂಕಿಸಿದಲ್ಲಿ, (1) ಆಗಿಯೇ ಆಗುವುದು (2) ಆಗಲು ಸಾಧ್ಯವೇ ಇಲ್ಲದ್ದು, (3) "ನಾವು ಪ್ರಯತ್ನಿಸಿದರೇಯೇ ಆಗಬಲ್ಲದ್ದು" ಎಂದು ಕಾರ್ಯಗಳು ಮೂರು ವಿಧ. ಮೊದಲೆರಡರಲ್ಲಿ ಮನುಷ್ಯನ ಪ್ರಯ್ನತ್ನಗಳು ವ್ಯರ್ಥವಾದರೂ, ಮೂರನೆಯದರಲ್ಲಿ ಮನುಷ್ಯನ ಪ್ರಯತ್ನಕ್ಕೆ ಸ್ಥಾನವಿದ್ದೇ ಇದೆ. ಫಲದಿಂದಲೇ ಮನುಷ್ಯನು ಈ ವಿಷಯವನ್ನು ಅರಿಯಬೇಕಾಗಿರುವುದರಿಂದ ಅವನು ಸಹಜವಾಗಿಯೇ ಪ್ರಯತ್ನಶೀಲನಾಗುತ್ತಾನೆ. ಆದ್ದರಿಂದ ವಿಧಿವಾದದಲ್ಲಾಗಲೀ, ಪರಮಾತ್ಮಾಧೀನವಾದದಲ್ಲಿಯಾಗಲೀ ಯಾವ ದೋಷವೂ ಇಲ್ಲ.

ಜೀವನಾನಾತ್ವ ಸಮರ್ಥನೆ—ಜೀವ ಒಬ್ಬನೇ? ಅನೇಕವೆ?—ಎಂದಲ್ಲಿ, ಬುದ್ಧಿ, ಸ್ಮರಣೆ ಇಚ್ಛೆ, ಸುಖ, ದುಃಖ, ಜನನ, ಮರಣ, ಮುಂತಾದುವುಗಳು ಪ್ರತಿಯೊಬ್ಬರಿಗೂ ಬೇರೆ ಬೇರೆಯಾ ಗಿಯೇ ಇರುವುದರಿಂದ ಜೀವಾತ್ಮರೆಲ್ಲರೂ ಸ್ವತಃ ಬೇರೆ ಬೇರೆಯಾಗಿಯೇ ಇರುವರು. ದೇಹಾದಿ ಭೇದ, ಅಥವಾ ಅಂತರಿಂದ್ರಿಯವಾದ ಮನಸ್ಸೆಂಬ ಅಂತಃಕರಣ ಭೇದವೇ ಮುಂತಾದ ಉಪಾಧಿ ಯಿಂದಾಗಲೀ, ಈ ಭೇದ ಆಗುವುದೆಂದು ಹೇಳಲು ಸಾಧ್ಯವೇ ಇಲ್ಲ. ವೇದವೂ ಸಹ, "ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ॥" ಇತ್ಯಾದಿಯಲ್ಲಿ, ಜೀವಾತ್ಮರು ನಿತ್ಯರು, ಪರಸ್ಪರ ಭಿನ್ನರು ಎಂದು ಸ್ಪಷ್ಟವಾಗಿ ಹೇಳುತ್ತದೆ. ಅನೇಕತ್ವ ವ್ಯವಹಾರವು ಔಪಾಧಿಕವಾದರೆ ನಿತ್ಯತ್ವ ವ್ಯವಹಾರವೂ ಔಪಾಧಿಕವೆಂದು ಹೇಳಬೇಕಾಗುತ್ತದೆ. ಆಗ ಆತ್ಮನಿಗೆ ನಾಶವನ್ನು ಒಪ್ಪಬೇಕಾಗುತ್ತದೆ, ಆದ್ದರಿಂದ "ನಿತ್ಯಾನಾಂ ಬಹೂನಾಂ" ಎಂಬ ಎರಡನ್ನೂ ಸಹಜವೆಂದೇ ಒಪ್ಪಬೇಕಾದ್ದರಿಂದ ಆತ್ಮರು ಅನೇಕರು. "ಅಯಮಾತ್ಮಾ ಬ್ರಹ್ಮ"— "ತತ್ತ್ವಮಸಿ"— "ಅಹಂ ಬ್ರಹ್ಮಾಸ್ಮಿ"—ಇತ್ಯಾದಿಯಾಗಿ ಜೀವನಿಗೆ

ಬ್ರಹ್ಮಾಭೇದವನ್ನು ಶ್ರುತಿ ಹೇಳುವುದರಿಂದ ಒಬ್ಬನೇ ಆತ್ಮನಿರುವನೆಂದರೆ, ಈ ಅಭೇದ ನಿರ್ದೇಶ ಶರೀರ—ಶರೀರಿ ಭಾವ ಮೂಲಕವಾಗಿ ಬಂದಿದೆಯೆಂಬುದು ಅಲ್ಲಲ್ಲೇ ನಿಶ್ಚಿತವಾಗಿದೆ.

ಆಕಾಶ ಒಂದೇ ಆಗಿದ್ದರೂ ಘಟಾದಿಗಳ ಭೇದದಿಂದ ಭಿನ್ನ ಭಿನ್ನದಂತೆ ತೋರುತ್ತದೆ. ಘಟ ಒಡೆದು ಹೋದರೆ ಎಲ್ಲಾ ಆಕಾಶವೂ ಒಂದೇ ಆಗುತ್ತದೆ. ಇದರಂತೆ ಆತ್ಮನು ಒಬ್ಬನೇ ಆದರೂ ಅಂತಃಕರಣ ಭೇದದಿಂದಲೇ ಸುಖ ದುಃಖಾದಿ ವ್ಯವಸ್ಥೆಗಳನ್ನು ಸಮರ್ಥಿಸಬಹುದೆಂದು ಅದ್ವೈತಿಗಳೆನ್ನುವುದು ಸರಿಯಲ್ಲ. ಎಲ್ಲಕ್ಕಿಂತಲೂ ಮುಖ್ಯವಾಗಿ—ಆತ್ಮನು ಒಬ್ಬನೇ ಆದರೆ ಮೋಕ್ಷೋಪಾಯಾನುಷ್ಠಾನ, ತನ್ಮೂಲಕ ಮುಕ್ತಿ ಉಳಿದವರಿಗೆ ಸಂಸಾರ, ಇತ್ಯಾದಿ ಬಂಧ ಮೋಕ್ಷ ವ್ಯವಸ್ಥೆಯೇ ಇಲ್ಲದೆ ಹೋಗುತ್ತದೆ. ಆದ್ದರಿಂದ ಆತ್ಮರು ಸ್ವತಃ ಅನೇಕರಿದ್ದಾರೆ.

ಪೃಥಿವ್ಯಾದಿ ಭೂತಗಳಲ್ಲಿ ಪರಮಾಣುಗಳು ಸ್ವತಃ ಪರಸ್ಪರ ಭಿನ್ನವಾಗಿಯೂ ಮೂಲ ಪೃಥಿವಿಗಿಂತ ಭಿನ್ನವಾಗಿಯೂ ಇರುವಂತೆ ಈ ಜೀವರೂ ಸಹ ಸನ್ಮಾತ್ರರೂಪವಾದ ಬ್ರಹ್ಮನ ಅಂಶಗಳು ಮತ್ತು ಪರಸ್ಪರ ಭಿನ್ನರು. ಆದ್ದರಿಂದ ಸುಖ ದುಃಖಾದಿ ವ್ಯವಸ್ಥೆಗಳೂ ಬಂಧಮೋಕ್ಷಾದಿ ವ್ಯವಸ್ಥೆಗಳೂ ಸುವ್ಯವಸ್ಥಿತವೆಂಬ ಯಾದವ ಪ್ರಕಾಶರ ಪಕ್ಷವೂ ಯುಕ್ತವಲ್ಲ. ಜೀವ–ಜಗತ್ತಿಗೂ, ಬ್ರಹ್ಮನಿಗೂ ಭೇದದಂತೆ ಅಭೇದವೂ ಸುರಕ್ಷಿತವಾಗಿ ಇರುವುದರಿಂದ ಸದ್ರೂಪವಾದ ಬ್ರಹ್ಮದಲ್ಲಿ ಜೀವ ಮತ್ತು ಜಗತ್ತಿನಲ್ಲಿರುವ ಎಲ್ಲೆಯಿಲ್ಲದ ದೋಷಗಳು ಬರುತ್ತವೆ. ಸರ್ವ ಸತ್ಯತ್ವವನ್ನೂ ಒಪ್ಪಿರುವುದರಿಂದ ಜಗನ್ಮಿಥ್ಯಾತ್ವವನ್ನು ಹೇಳುವ ಪಕ್ಷಕ್ಕಿಂತಲೂ ಈ ಪಕ್ಷ ಹೇಯವೆಂದು ಪರಿಗಣಿತವಾಗಿದೆ. ಜಗನ್ಮಿಥ್ಯಾತ್ವ ವಾದದಲ್ಲಿ ದೋಷಗಳೆಲ್ಲವೂ ಮಿಥ್ಯೆಯಾದುದರಿಂದ ಬ್ರಹ್ಮನ ನಿತ್ಯ ಶುದ್ಧತ್ವ ರಕ್ಷಿತವಾಗುತ್ತದೆ. ಈ ಭೇದಾಭೇದವಾದದಲ್ಲಿ ಅದಕ್ಕೆ ಅವಕಾಶವಿಲ್ಲದ್ದರಿಂದ ಹೇಯವಾಗುತ್ತದೆ.

ಒಬ್ಬನೇ ಆತ್ಮನಿರುವನೆಂದು ಐಕಾತ್ಮ್ಯವಾದಿಗಳು ಹೇಳುತ್ತಾರೆ. ಇದರಲ್ಲಿ ಎರಡು ಪಕ್ಷಗಳಿವೆ:

1) ಅನೇಕ ಶರೀರಗಳಿದ್ದು ಎಲ್ಲಕ್ಕೂ ಒಬ್ಬನೇ ಆತ್ಮಾ ಎಂಬುದೊಂದು ಪಕ್ಷ.
2) ಒಂದೇ ಒಂದು ಶರೀರದಲ್ಲಿ ಒಬ್ಬ ಆತ್ಮನಿರುವನು. ಉಳಿದ ಶರೀರಗಳೆಲ್ಲವೂ ಕೇವಲ ತೋರಿಕೆ ಮಾತ್ರ—ಎಂಬುದು ಮತ್ತೊಂದು ಪಕ್ಷ.

ಮೊದಲನೆಯ ಪಕ್ಷದ ಪ್ರಕಾರ—"ವಿವಾದಕ್ಕೆ ಒಳಗಾಗಿರುವ ಎಲ್ಲಾ ಶರೀರಗಳೂ ಈ ನನ್ನ ದೇಹದಂತೆ ದೇಹವಾಗಿರುವುದರಿಂದ, ನನ್ನಿಂದಲೇ ಆತ್ಮವನ್ನು ಪಡೆದಿವೆ, ಮತ್ತೆಯೂ ಆತ್ಮರಾದ ಕಾರಣ ಸಕಲ ಆತ್ಮರೂ ನಾನೇ"—ಹೀಗಲ್ಲದಿದ್ದರೆ ಅನೇಕ ಆತ್ಮರನ್ನು ಒಪ್ಪುವುದರಿಂದ ಗೌರವ ದೋಷ ಬರುತ್ತದೆಯೆಂಬುದು ಅದರಲ್ಲಿಯ ವಾದ. ಇದು ಶಾಸ್ತ್ರ ಮತ್ತು ಪ್ರತ್ಯಕ್ಷ ವಿರುದ್ಧ. ಪ್ರತ್ಯಕ್ಷಾದಿ ವಿರೋಧವಿದ್ದರೂ ಲಾಘವ ತರ್ಕದಿಂದ ಎಲ್ಲಾ ಜೀವರೂ ಒಂದಾಗುವಂತೆ, ಅಲ್ಲಿರುವ ಘಟವೂ ಇಲ್ಲಿರುವ ಘಟವೂ ಘಟವಾಗಿರುವುದರಿಂದ ಒಂದೇ ಆಗುತ್ತದೆ ಎಂದೂ ಹೇಳಬಹುದಾದ್ದರಿಂದ ಎಲ್ಲಾ ಘಟಗಳೂ ಒಂದೇ ಆಗಬೇಕಾಗುತ್ತದೆ, ಇದನ್ನೂ ಒಪ್ಪಿದರೆ ಪಕ್ಷ, ಸಾಧ್ಯ, ಹೇತುಗಳಿಗೂ ಐಕ್ಯವನ್ನು ಒಪ್ಪಬೇಕಾಗುತ್ತದೆ, ಹೀಗೆ ಪಕ್ಷ ಸಪಕ್ಷ ಮುಂತಾದ ಭೇದಗಳೂ ಇಲ್ಲದೆ ಹೋಗುತ್ತೆ. ವಾದಿ ಪ್ರತಿವಾದಿಗಳಿಗೂ ಐಕ್ಯವನ್ನು ಒಪ್ಪಬೇಕಾಗುತ್ತದೆ. ಇದನ್ನೂ ಒಪ್ಪಿದರೆ ಪ್ರತಿವಾದಿಯನ್ನು ಜಯಿಸುವುದಕ್ಕೋಸ್ಕರವಾದ ವಾಗ್ಯುದ್ಧಾದಿಗಳೆಲ್ಲವನ್ನೂ ನಿಲ್ಲಿಸಬೇಕಾಗುತ್ತದೆ. ಒಬ್ಬನೇ ಆತ್ಮನಾದರೆ ವಾದಿ ಮತ್ತು ಪ್ರತಿವಾದಿಗಳೆಂಬ ಭೇದವೆಲ್ಲಿರುತ್ತೆ?

ಎರಡನೆಯ ಪಕ್ಷದಲ್ಲಿ—ಅವಿದ್ಯೆಯಿಂದ ಕೂಡಿದ ಬ್ರಹ್ಮವೇ ಜೀವನಾಗುತ್ತದೆ, ಬೇರೆಬೇರೆಯಾಗಿ ಅನೇಕ ಜೀವರುಗಳಿಲ್ಲ. ಒಬ್ಬ ತನ್ನ ಕನಸಿನಲ್ಲಿ ಕಲ್ಪಿತವಾಗಿ ಅನೇಕರನ್ನು ನೋಡುವಂತೆ ಲೋಕದಲ್ಲೂ ಕಲ್ಪಿತವಾಗಿಯೇ ಎಲ್ಲಾ ವ್ಯವಹಾರಗಳೂ ನಡೆಯುತ್ತವೆ. ಹೀಗೆ ಜೀವನು ಒಬ್ಬನೇ ಇರುವುದರಿಂದ ಇದಕ್ಕೆ ಮೊದಲು ಯಾರೂ ಮುಕ್ತಿಯನ್ನು ಪಡೆದಿಲ್ಲ. ಮುಂದೆಯೂ ಯಾವನೂ

ಮುಕ್ತಿಯನ್ನು ಹೊಂದುವುದೂ ಇಲ್ಲ ಸಂಸಾರ ಬಂಧ ಮೋಕ್ಷ ಇವೆಲ್ಲವೂ ಕೇವಲ ಮಾಯೆಯಿಂದ ತೋರಿಕೆ ಮಾತ್ರವೇ ಹೊರತು ವಾಸ್ತವಿಕವಾಗಿ ಇದು ಯಾವುದೂ ಇಲ್ಲ—ಎಂಬ ಈ ಪಕ್ಷವೂ ಸಹ ಸಕಲ ವಿಧ ಪ್ರಮಾಣಗಳಿಗೂ ವಿರುದ್ಧವಾದ್ದರಿಂದ ಸಮಂಜಸವಲ್ಲ

ಐಕಾತ್ಮ್ಯವಾದದಲ್ಲಿ ಉಪದೇಶವೂ ಉಪಪನ್ನವಾಗದು—ಗುರು-ಶಿಷ್ಯ ಭಾವವನ್ನು ಎಲ್ಲಾ ಪಕ್ಷದವರೂ ಒಪ್ಪಿದ್ದಾರೆ ಆತ್ಮನು ಒಬ್ಬನೇ ಇರುವನು ಎಂಬ ಈ ಪಕ್ಷದಲ್ಲಿ, ಅವಿದ್ಯೆಯಿಂದ ಜೀವ ನೆನಿಸಿಕೊಂಡಿರುವ ಉಪಹಿತ ಬ್ರಹ್ಮ, ಶುದ್ಧವಾದ ಬ್ರಹ್ಮ, ಅವಿದ್ಯೆ—ಎಂಬ ಮೂರರಲ್ಲಿ ಉಪದೇಶ ಮಾಡುವವನು ಯಾರು? ಜೀವನು ಒಬ್ಬನೇ ಆದ್ದರಿಂದ ಒಬ್ಬನು ತನಗೆ ತಾನೇ ಉಪದೇಶಮಾಡಿ ಕೊಳ್ಳಲಾರ! ಅವಿದ್ಯೆಯ ಸಂಬಂಧವೇ ಇಲ್ಲದಿರುವ ಪರಬ್ರಹ್ಮ ನಿಷ್ಕ್ರಿಯವಾದ ಕಾರಣ ಉಪದೇಶ ಮಾಡಲು ಸಾಧ್ಯವಿಲ್ಲ. ಅವಿದ್ಯೆ ಅಚೇತನವಾದ ಕಾರಣ ಉಪದೇಶಮಾಡಲು ಶಕ್ಯವಿಲ್ಲ ತನ್ನ ಶರೀರ ಕ್ಕಿಂತಲೂ ಬೇರೆ ಶರೀರದಲ್ಲಿ ಎಲ್ಲೂ ತನಗಿಂತಲೂ ಬೇರೆಯಾದ ಜೀವನಿಲ್ಲವೆನ್ನುವುದರಿಂದ, ಈ ದೇಹದಲ್ಲಿರುವವನಿಗೆ ಆ ದೇಹದಲ್ಲಿರುವವನು ಉಪದೇಶ ಮಾಡುತ್ತಾನೆಯೆಂದು ಹೇಳುವುದಕ್ಕೂ ಅವಕಾಶವಿಲ್ಲ. ಎಲ್ಲವೂ ಭ್ರಾಂತಿಸಿದ್ಧವೇ ಆದಾಗ್ಯೂ ಆ ಉಪದೇಶದಿಂದ "ಒಬ್ಬನು ನನಗೆ ತತ್ತ್ವ ವನ್ನು ಉಪದೇಶಿಸುತ್ತಾನೆ"—ಎಂಬ ಭ್ರಾಂತಿಯನ್ನು ಪಡೆದವನು ಮುಕ್ತನಾಗುತ್ತಾನೆಯೆಂದರೆ ಗುರು ಶಿಷ್ಯ ಪರಂಪರೆ ಅನಾದಿ ಕಾಲದಿಂದ ಸಿದ್ಧವಾದ್ದರಿಂದ ಇಂತಹ ಭ್ರಾಂತಿ ಒಂದೆಯೋ ಅನೇಕರಿಗೆ ಆಗಿಯೋ ಇರಬೇಕು. ಆವಾಗಲೇ ಈಗಿನ ಈ ಜೀವಾತ್ಮನು ಏತಕ್ಕೆ ಮುಕ್ತಿಯನ್ನು ಪಡೆಯಲಿಲ್ಲ? ಏಕಜೀವ ವಾದದಲ್ಲಿ ಆಗಿನ ಜೀವಾತ್ಮನಿಗೂ ಈಗಿನ ಜೀವಾತ್ಮನಿಗೂ ಭೇದವಿಲ್ಲದ್ದರಿಂದ ಆಗಲೇ ಇವನೂ ಮುಕ್ತನಾಗಿ ಬಿಟ್ಟಿರುವುದರಿಂದ, ಈಗ ಮತ್ತೆಯೂ ಆ ಭ್ರಾಂತಿಯ ಅವಶ್ಯಕತೆಯಾದರೂ ಏನಿದೆ? ಒಟ್ಟಿನಲ್ಲಿ ಏಕಜೀವವಾದದಲ್ಲಿ ಬಂಧಮೋಕ್ಷಾದಿ ವ್ಯವಸ್ಥೆ ಯಾವುದನ್ನೂ ಸಮರ್ಥಿಸಲಾಗುವುದಿಲ್ಲ

ಈ ದೋಷಗಳನ್ನು ಪರಿಹರಿಸುವ ಉದ್ದೇಶದಿಂದ ಜೀವನು ಪರಮಾತ್ಮನ ಪ್ರತಿಬಿಂಬ ನಿತ್ಯ ಶುದ್ಧವಾದ ಪರಬ್ರಹ್ಮ ಅನೇಕ ವಿಧ ಜಲಾಶಯಗಳಲ್ಲಿ ಚಂದ್ರನಂತೆ ಅನೇಕ ವಿಧ ಉಪಾಧಿಗಳಲ್ಲಿ ಪ್ರತಿಬಿಂಬಿತವಾಗಿ ವೈಲಕ್ಷಣ್ಯವನ್ನು ಹೊಂದುತ್ತದೆ ಆದ್ದರಿಂದ ಜೀವರೆಲ್ಲರೂ ಪರಬ್ರಹ್ಮನ ಪ್ರತಿಬಿಂಬ ರೂಪರು—ಎಂಬುದೂ ಅತ್ಯಂತ ಅಸಮರ್ಥನೀಯ. ಆಗ್ಗೆ ಜೀವಾತ್ಮನ ನಾಶವೇ ಅವನಿಗೆ ಮೋಕ್ಷ ವಾಗಬೇಕಾಗುತ್ತದೆ ಜೀವನು ಬ್ರಹ್ಮದೊಂದಿಗೆ ಐಕ್ಯ ಹೊಂದುವನೇ ಹೊರತು ನಾಶವಾಗುವುದಿಲ್ಲ ವೆಂದರೆ ಪ್ರತಿಬಿಂಬವೂ ಬಿಂಬವೂ ಒಂದು ಆಗುವುದೇ ಇಲ್ಲ. ಶುದ್ಧ ಪರಬ್ರಹ್ಮನಿಗೆ ಜ್ಞಾನಾದ್ಯನುಭವವೂ ಇಲ್ಲದ್ದರಿಂದ ಪ್ರತಿಬಿಂಬ ದರ್ಶನ ಅದಕ್ಕೆಬರಲು ಸಾಧ್ಯವಿಲ್ಲ ಆದ್ದರಿಂದ ಪ್ರತಿಬಿಂಬ ಕಲ್ಪನೆಯೂ ಶಕ್ಯವಿಲ್ಲ

ನಾನಾ ವಿಧವಾದ ಜಲಾಶಯಗಳಲ್ಲಿ ಚಂದ್ರ ಪ್ರತಿಬಿಂಬಿಸಿದಾಗ ಒಂದು ಚಂದ್ರ ಅನೇಕವಾಗಿ ಕಾಣುತ್ತಾನೆ. ಜಲಾಶಯಗಳ ಸ್ವಚ್ಛತೆಯ ತಾರತಮ್ಯಕ್ಕೆ ತಕ್ಕಂತೆ ಚಂದ್ರ ಕೆಲವಲ್ಲಿ ನಿಶ್ಚಲವಾಗಿಯೂ ಕೆಲವಲ್ಲಿ ಚಲಿಸುವವನಾಗಿಯೂ, ಕೆಲವಲ್ಲಿ ಸ್ವಚ್ಛವಾಗಿಯೂ ಕೆಲವಲ್ಲಿ ಮಲಿನವಾಗಿಯೂ ಅನೇಕ ವಿಧ ತಾರತಮ್ಯದಿಂದ ಆ ಪ್ರತಿಬಿಂಬಗಳಲ್ಲಿ ತೋರುತ್ತಾನೆ ಆಯಾ ಜಲಾಶಯಗಳು ಬತ್ತಿಹೋದಾಗ ಆ ಪ್ರತಿಬಿಂಬಗಳೂ ಮರೆಯಾಗುತ್ತವೆ. ಇದರಂತೆ ನಿತ್ಯ ಶುದ್ಧವಾದ ಪರಬ್ರಹ್ಮವೂ ಸಹ ಅನೇಕ ವಿಧವಿಚಿತ್ರ ಅಂತಃಕರಣಗಳಲ್ಲಿ ಪ್ರತಿಬಿಂಬಿತವಾಗಿ ಅನೇಕವೆನಿಸಿಕೊಳ್ಳುತ್ತದೆ. ಪರಸ್ಪರ ವಿಲಕ್ಷಣಗಳಾ ಗಿಯೂ ತೋರುತ್ತದೆ. ಇದೇ ಜೀವ ಪದಾರ್ಥ. ಉಪಾಧಿಗಳಾದ ಅಂತಃಕರಣಗಳು ನಶಿಸಿದಾಗ ಪ್ರತಿಬಿಂಬ ಬೇರೆಯಾಗಿ ಕಾಣಿಸಿಕೊಳ್ಳದೆ ಬಿಂಬದೊಂದಿಗೆ ಐಕ್ಯವನ್ನು ಹೊಂದುತ್ತದೆ ಇದೆ ಮುಕ್ತಿ ಯೆಂಬುದು ಈ ಪ್ರತಿಬಿಂಬ ವಾದದ ಸಾರ

ಆದರೆ ಉಪಾಧಿ ನಶಿಸಿದಾಗ ಪ್ರತಿಬಿಂಬವೂ ನಶಿಸುವುದು ಲೋಕಾನುಭವ ಸಿದ್ಧವೇ ಹೊರತು ಈ ಪ್ರತಿಬಿಂಬ ಎಲ್ಲೋ ಇರುವ ಬಿಂಬದೊಂದಿಗೆ ಹೋಗಿ ಐಕ್ಯವಾಗುತ್ತದೆಯೆಂಬುದು ಅನುಭವ

ವಿರುದ್ಧ. ಇದರಿಂದ ಉಪಾಧಿ ನಾಶವಾದಾಗ ಪ್ರತಿಬಿಂಬ ಜೀವನಾಶವೇ ಮೋಕ್ಷವೆಂದಾಗುತ್ತದೆ. ತನ್ನ ನಾಶಕ್ಕಾಗಿ ತಾನೇ ಯಾರೂ ಪ್ರಯತ್ನಪಡಲಾರರು.

ಪ್ರತಿಬಿಂಬವೆಂಬುದು ತೋರಿಕೆ ಮಾತ್ರವೇ ಆಗಿರುತ್ತೆ—ಆದ್ದರಿಂದ ಬೇರೆಯಾಗಿ ತೋರುತ್ತಿದ್ದ ಜೀವನು ಮುಕ್ತಿಯಲ್ಲಿ ಹಾಗೆ ತೋರುವುದಿಲ್ಲ. ಇದೇ ಐಕ್ಯದ ತಾತ್ಪರ್ಯವಾದ್ದರಿಂದ "ಜೀವನಾಶ"—ಎಂಬುದಕ್ಕೆ ಅವಕಾಶವಿಲ್ಲವೆಂದರೂ, ನಿರ್ವಿಶೇಷವಾದದಲ್ಲಿ ಈ ತೋರಿಕೆ ಯಾರಿಗೆ? ಹೇಗೆ?—ಎಂಬುದನ್ನು ನಿರೂಪಿಸಲಾಗುವುದಿಲ್ಲ. ಅದ್ವೈತ ವಾದದಲ್ಲಿ ಉಪದೇಶವೂ ಉಪಪನ್ನವಾಗುವುದಿಲ್ಲ. ಬ್ರಹ್ಮ ಒಂದೇ ಸತ್ಯವೆಂದು ಹೇಳುವ ಆ ಮತದಲ್ಲಿ ಗುರುವಿನಿಂದ, "ತತ್ತ್ವಮಸಿ'—ಎಂಬ ಉಪದೇಶವನ್ನು ಪಡೆಯುವ ಶಿಷ್ಯನೇ ಇಲ್ಲವೆ? ಭ್ರಾಂತಿ ಸಿದ್ಧನೆ? ಪ್ರಮಾಣ ಸಿದ್ಧನೆ?

ಶಿಷ್ಯನೆಂಬುವನೇ ಒಬ್ಬನಿಲ್ಲವೆಂಬ ಪಕ್ಷದಲ್ಲಿ ಇಲ್ಲದಿರುವವನಿಗೆ ಉಪದೇಶ ಮಾಡಲು ಹೇಗೆ ಸಾಧ್ಯ? ಶಿಷ್ಯನು ಭ್ರಾಂತಿಸಿದ್ಧನೆಂಬ ಪಕ್ಷದಲ್ಲಿ ಈ ನಿಶ್ಚಯ ಗುರುವಿಗೆ ಇದೆಯೆ? ಇಲ್ಲವೆ?—ಇಲ್ಲವೆಂದರೆ ಗುರುವಿಗೆ ಇನ್ನೂ ತತ್ತ್ವಜ್ಞಾನವೇ ಹುಟ್ಟಿಲ್ಲವೆಂದಾಗುತ್ತದೆ, ತತ್ತ್ವಜ್ಞಾನ ಶೂನ್ಯನಾದ ಗುರು ಹೇಗೆ ಉಪದೇಶಕನಾಗುತ್ತಾನೆ? ಶಿಷ್ಯನು ಭ್ರಾಂತಿಸಿದ್ಧನೆಂದು ಗುರುವಿಗೆ ತಿಳಿದಿದ್ದರೆ "ಶಿಷ್ಯನೆಂಬುವನಿಲ್ಲ"—ಎಂದು ನಿಶ್ಚಯವಿರುವುದರಿಂದ ಯಾರಿಗೆ ಇವನು ಉಪದೇಶಕನಾಗುತ್ತಾನೆ? ಪ್ರಮಾಣ ಸಿದ್ಧನೆಂಬ ಮೂರನೆಯ ಕಲ್ಪದಲ್ಲಿ ತನಗಿಂತಲೂ ಜೀವನು ಭಿನ್ನನೆಂದು ಪ್ರಮಾಣಸಿದ್ಧನೆ? ಅಭಿನ್ನನೆಂದು ಪ್ರಮಾಣಸಿದ್ಧನೆ? ತನಗಿಂತಲೂ ಭಿನ್ನನೆಂದು ಪ್ರಮಾಣಸಿದ್ಧನಾಗಿದ್ದರೆ ಭೇದವೇ ಪ್ರಾಮಾಣಿಕವೆಂದು ತಿಳಿದಿರುವ ಗುರು ಶಿಷ್ಯನಿಗೆ ಮಾತ್ರ 'ತತ್ತ್ವಮಸಿ'—ಎಂದು ಅಭೇದವನ್ನು ಹೇಗೆ ಉಪದೇಶಿಸುತ್ತಾನೆ? "ತನಗಿಂತಲೂ ಶಿಷ್ಯನು ಭಿನ್ನನಲ್ಲ, ತಾನೇ ಶಿಷ್ಯನು"—ಎಂದು ಗುರು ತಿಳಿದಿದ್ದಾನೆಯೆಂದರೆ "ಶಿಷ್ಯನು ಭಿನ್ನನಲ್ಲ ತಾನೇ ಶಿಷ್ಯನು"—ಎಂಬ ಐಕ್ಯಜ್ಞಾನವುಳ್ಳ ಗುರು ವಿಷಯ ತಿಳಿದ ತನಗೇನೇ ತಾನು ಉಪದೇಶಿಸಿಕೊಳ್ಳಬೇಕಾಗುತ್ತೆ. ಇದು ಹುಚ್ಚನ ವರ್ತನೆ ಆದ್ದರಿಂದ ಅದ್ವೈತವಾದದಲ್ಲಿ ಉಪದೇಶಾನುಪಪತ್ತಿ ದುಷ್ಪರಿಹರ.

ನಿರ್ವಿಶೇಷವಾದದಲ್ಲಿ ಉಪದೇಶಾನುಪಪತ್ತಿ—"ಬ್ರಹ್ಮವ್ಯತಿರಿಕ್ತವೆಲ್ಲವೂ ಮಿಥ್ಯೆ"—ಎಂಬ ನಿಶ್ಚಯವಿರುವುದರಿಂದ ಜೀವ–ಪರಮಾತ್ಮರಿಗೆ ಐಕ್ಯವನ್ನು ಬೋಧಿಸುವ ಈ "ತತ್ತ್ವಮಸಿ"—ಎಂಬ ಮೊದಲಿನ ವಾಕ್ಯದಂತೆ ಕೊನೆಯ ವಾಕ್ಯವೂ ಭ್ರಾಂತಿವಾಕ್ಯವೇ ಆದ್ದರಿಂದ, ಜಗದ್ಭ್ರಾನ್ತಿಯನ್ನು ನಿವೃತ್ತಿಗೊಳಿಸಲು ಸಮರ್ಥವಾಗುವುದಿಲ್ಲ. ಇದಕ್ಕೆ ದೃಷ್ಟಾಂತ—ಹಗ್ಗವನ್ನು ನೋಡಿ 'ಸರ್ಪ'—ಎಂದು ಭ್ರಮೆ ಬಂದಾಗ ಇದು ಸರ್ಪವಲ್ಲ ಹಗ್ಗವೇ"—ಎಂದು ಒಬ್ಬಾತನು ಹೇಳಿದರೂ "ಆ ಮಾತು ಭ್ರಾನ್ತನ ಮಾತೇ ಹೊರತು ಪ್ರಾಮಾಣಿಕವಾದುದಲ್ಲ"—ಎಂಬ ನಿಶ್ಚಯವಿರುವುದಾದರೆ ಮೊದಲು ಹುಟ್ಟಿದ ಭ್ರಮೆ ತೊಲಗೀತೇ?

ಕನಸಿನಲ್ಲಿ ಹಗ್ಗವನ್ನು ಹಾವೆಂದು ಭ್ರಮಿಸಿದಾಗ ಕನಸಿನಲ್ಲೇ ಮತ್ತೊಬ್ಬನು 'ಇದು ಹಾವಲ್ಲ ಹಗ್ಗ"—ಎಂದು ಹೇಳಿದರೆ, ಆ ಭ್ರಮೆ ಹೋಗುವುದಿಲ್ಲವೆ? ಕನಸಿನಲ್ಲಿ ಎಲ್ಲವೂ ಮಿಥ್ಯೆಯಾದರೂ ಎರಡನೆಯ ಜ್ಞಾನದಿಂದ ಮೊದಲನೆಯ ಜ್ಞಾನ ಮಿಥ್ಯೆಯಾದರೂ ಪ್ರಪಂಚ ಭ್ರಮವನ್ನು ನೀಗಿಸುವುದಲ್ಲವೆ? ಅದರಂತೆ ಇಲ್ಲೂ "ತತ್ತ್ವಮಸಿ"—ವಾಕ್ಯ ಜನ್ಯಜ್ಞಾನ ಮಿಥ್ಯೆಯಾದರೂ ಪ್ರಪಂಚ ಭ್ರಮವನ್ನು ನೀಗಿಸಬಹುದು—ಎಂದರೆ, ಸ್ವಪ್ನದಲ್ಲಿ ಹುಟ್ಟಿದ ಬಾಧಕ ಜ್ಞಾನದಲ್ಲಿ ಮಿಥ್ಯಾತ್ವ ಜ್ಞಾನ ಬಂದರೆ ಸ್ವಪ್ನದಲ್ಲಿ ಹುಟ್ಟಿದ ಸರ್ಪಭ್ರಮೆ ನೀಗುವುದೇನು?

ದೂರದಿಂದ ಸತ್ಯವಾದ ರಜತಜ್ಞಾನ ಬಂದಾಗ, ಪಕ್ಕದಲ್ಲಿದ್ದ ವಂಚಕನೊಬ್ಬನು "ಇದು ರಜತವಲ್ಲ, ಶುಕ್ತಿ"—ಎಂದು ಹೇಳಿದಾಗ ಮತ್ತೊಬ್ಬನು ಅದನ್ನು ನಂಬಿ, ಬಿಟ್ಟು ಹೋದಾಗ ಸತ್ಯವಾದ ರಜತಜ್ಞಾನ ಮಿಥ್ಯೆಯಾದ ಶುಕ್ತಿಜ್ಞಾನದಿಂದ ಬಾಧಿತವಾಗುವುದು ಅನುಭವಸಿದ್ಧ. ಆದ್ದರಿಂದ

ನಿವರ್ತಕಜ್ಞಾನ ಸತ್ಯವೇ ಆಗಿರಬೇಕೆಂದೂ ನಿವೃತ್ತಿಯಾಗುವ ಜ್ಞಾನ ಮಿಥ್ಯೆಯೇ ಆಗಿರಬೇಕೆಂದೂ ನಿಯಮವಿಲ್ಲ ಎಂದು ಪೂರ್ವಪಕ್ಷಿಗಳ ಅಭಿಪ್ರಾಯ.

ಆದರೆ, ನಿವರ್ತಕ ಜ್ಞಾನದಲ್ಲಿ ''ಇದು ಮಿಥ್ಯೆ'—ಎಂಬ ಜ್ಞಾನವಿಲ್ಲದಿದ್ದರೆ ಮಾತ್ರ ಅದು ಬಾಧಕವಾಗಲು ಸಾಧ್ಯ. ಪ್ರಕೃತದಲ್ಲಿ ಬ್ರಹ್ಮವ್ಯತಿರಿಕ್ತವೆಲ್ಲವೂ ಮಿಥ್ಯೆ ಎಂಬ ಜ್ಞಾನ ಬಂದಾಗ ''ತತ್ತ್ವಮಸಿ''—ವಾಕ್ಯಜನ್ಯ ಜ್ಞಾನವೂ ಮಿಥ್ಯೆಯೆಂಬ ಜ್ಞಾನ ಬರುವುದರಿಂದ ಈ ಜ್ಞಾನದಿಂದ ಪ್ರಪಂಚ ಭ್ರಮೆ ನಿವೃತ್ತಿಯಾಗಲು ಸಾಧ್ಯವಿಲ್ಲ. ಆದ್ದರಿಂದ ವಾಕ್ಯಾರ್ಥಜ್ಞಾನದಿಂದ ಮುಕ್ತಿಯನ್ನು ಹೇಳುವ ವಾದ ಸರಿಯಲ್ಲ.

'' ಅಸತ್ಯಾತ್ ಸತ್ಯ ಸಿದ್ಧಿ ''—ಎಂಬ ವಾದದ ನಿರಾಕರಣೆ—ಅಸತ್ಯವಾದ ಮುಖದ ಪ್ರತಿಬಿಂಬಾದಿಗಳಿಂದ ಸತ್ಯವಾದ ಮುಖದ ಜ್ಞಾನ ಬರುತ್ತಿಲ್ಲ ಮತ್ತೇನೆಂದರೆ—ಅಲ್ಲಿ ಪ್ರತಿಬಿಂಬದ ಜ್ಞಾನವೇ ಮುಖದ ಜ್ಞಾನಕ್ಕೆ ಕಾರಣ, ಪ್ರತಿಬಿಂಬವಲ್ಲ. ವಿಷಯವೇ ಇಲ್ಲದಿದ್ದಾಗ ಬರುವ ಜ್ಞಾನ ಸತ್ಯವಾಗಲು ಹೇಗೆ ಸಾಧ್ಯ?

''ಘಟವನ್ನು ಮಾಡಬೇಕು''—ಎಂಬ ಜ್ಞಾನದಿಂದ ಕುಂಬಾರನು ಅದನ್ನು ಮಾಡತೊಡಗುತ್ತಾನೆ. ಅವನ ಸಂಕಲ್ಪದಿಂದ ತೋರುವ ಘಟ ಇನ್ನೂ ಸಿದ್ಧವಾಗಿಲ್ಲ ಆದರೂ ಅದನ್ನು ಮನಸ್ಸಿನಲ್ಲಿ ಒಂದು ರೀತಿಯಾಗಿ ಭಾವಿಸಿಕೊಂಡು ಘಟವನ್ನು ಮಾಡಲು ತೊಡಗುತ್ತಾನೆ ಇಲ್ಲಿ ಕುಂಬಾರನ ಪ್ರವೃತ್ತಿಗೆ ಕಾರಣವಾಗಿ ಜ್ಞಾನದಲ್ಲಿ ವಿಷಯವಾಗಿ ತೋರುತ್ತಿರುವ ಘಟ, ಕೇವಲ ಕಾಲ್ಪನಿಕವೇ ಹೊರತು ವಾಸ್ತವಿಕವಾಗಿ ಆವಾಗ ಇರುವಂತಹದು ಅಲ್ಲ. ಆದರೂ ಆ ಜ್ಞಾನ ಭ್ರಾನ್ತಿಯಲ್ಲ. ಹೀಗೆ ವಸ್ತು ಸರ್ವಥಾ ಇಲ್ಲದಿದ್ದರೂ ಅದರ ಜ್ಞಾನ ಸತ್ಯವಾಗಿರುವುದೂ, ಅದರಿಂದ ಕಾರ್ಯದ ಉತ್ಪತ್ತಿಯೂ ಲೋಕಾನುಭವಸಿದ್ಧ. ಇದರಿಂದ ಜ್ಞಾನಕ್ಕೆ ವಿಷಯ ಸತ್ಯವಾಗಿರಬೇಕು ಎಂಬುದೂ, ವಿಷಯವಿದ್ದಾಗ ಬರುವ ಜ್ಞಾನವೇ ಸತ್ಯವಾಗುವುದೆಂಬುದೂ ನಿಯಮವಿಲ್ಲ. ವಿಷಯ ಮಿಥ್ಯೆಯಾದರೂ ಅದರ ಜ್ಞಾನ ಸತ್ಯವಾಗಲು ಸಾಧ್ಯ. ಪ್ರಕೃತದಲ್ಲೂ ಕನ್ನಡಿಯಲ್ಲಿ ತೋರುವ ಪ್ರತಿಬಿಂಬ ಮಿಥ್ಯೆಯಾದರೂ ಅದರ ಜ್ಞಾನವು ಸತ್ಯವಾಗಲು ತಡೆಯಿಲ್ಲ. ಇದಲ್ಲದೆ ಮುಕ್ತಿಹೇತುವಾದ ಜ್ಞಾನ ಕಾರ್ಯವಿಶೇಷ ರೂಪವಾಗಿರುವುದರಿಂದ ಘಟಾದಿಗಳಂತೆ ಸತ್ಯವಾದ ಕಾರಣದಿಂದಲೇ ಹುಟ್ಟಿರಬೇಕು—ಎನ್ನುವ ''ವಿಮತಾ ಶೇಮುಷೀ ಕಾರ್ಯಭಾವಾತ್ ಘಟ ಇವ ಸತ್ಯೇನೈವ ಪ್ರಸೂತಾ''—ಎಂಬ ಅನುಮಾನದಿಂದ ಮೋಕ್ಷಹೇತುವಾದ ಜ್ಞಾನ ಮತ್ತು ಅದಕ್ಕೆ ಕಾರಣವಾದ ವೇದ ಸತ್ಯವಾಗಿಯೇ ಇರಬೇಕಾಗುತ್ತದೆ. ಆದ್ದರಿಂದ ''ಸತ್ಯಾತ್ ಸತ್ಯಸಿದ್ಧಿಯೇ ಹೊರತು' ''ಅಸತ್ಯಾತ್ ಸತ್ಯಸಿದ್ಧಿ'' ಅಲ್ಲ. ರಜ್ಜುವಿನಲ್ಲಿ ಸರ್ಪಭ್ರಮೆ ಬಂದಾಗಲೂ ಭಯಾದಿ ಕಾರ್ಯಗಳಿಗೆ ಆ ಜ್ಞಾನ ಕಾರಣವೇ ಹೊರತು, ಮಿಥ್ಯೆಯಾದ ಸರ್ಪವು ಭಯಕ್ಕೆ ಕಾರಣವಲ್ಲ. ಇಲ್ಲದಿರುವ ಸರ್ಪ ಹೇಗೆ ಭಯಕ್ಕೆ ಕಾರಣವಾಗಬಲ್ಲದು. ಆದ್ದರಿಂದ ಅಲ್ಲಿ ಆ ಜ್ಞಾನವೇ ಭಯಾದಿಗಳಿಗೆ ಕಾರಣ.

ಕಾರಣತ್ವ ಮತ್ತು ಮಿಥ್ಯಾತ್ವ ಪರಸ್ಪರ ವಿರುದ್ಧವಾದ್ದರಿಂದ ಒಂದೇ ಕಡೆಯಲ್ಲಿ ಹೇಗೆ ಸೇರಲು ಸಾಧ್ಯ? ಕಾರಣತ್ವ ಕಾರ್ಯತ್ವ ಮುಂತಾದ ಧರ್ಮಗಳು ಸಿದ್ಧವಾದ ವಸ್ತುವಿನ ಧರ್ಮಗಳು. ಸಿದ್ಧ ಎಂದರೆ ಇರುವ ವಸ್ತು. ಮಿಥ್ಯೆಯಾದ ವಸ್ತು ಇಲ್ಲದಿರುವುದು. ಇಲ್ಲದಿರುವ ವಸ್ತುವಿನಲ್ಲಿ ಈ ಧರ್ಮಗಳಿರಲು ಹೇಗೆ ಸಾಧ್ಯ? ಆಧಾರವೇ ಇಲ್ಲದೆ ಧರ್ಮವಿರಲು ಸಾಧ್ಯವೇ ಇಲ್ಲ.

''ಅಸತ್ಯಾತ್ ಸತ್ಯಸಿದ್ಧಿ''—ವಾದದಲ್ಲಿ ಮತ್ತೊಂದು ದೋಷವೂ ಉಂಟು. ವೇದವಾಕ್ಯಜನ್ಯಜ್ಞಾನ ಅಸತ್ಯವಾದರೂ ಅದರಿಂದ ಸತ್ಯವಾದ ಮೋಕ್ಷ ಬರುವುದರಲ್ಲಿ ತಪ್ಪಿಲ್ಲ—ಎಂಬ ವಾದದಲ್ಲಿ ಪ್ರಪಂಚ ಭ್ರಮವನ್ನು ನಿವೃತ್ತಿಗೊಳಿಸಿದ ಮೇಲೆ ಆ ಜ್ಞಾನ ತಾನು ಉಳಿಯಬೇಕಾಗುವುದಿಲ್ಲವೆ? ಆ ಜ್ಞಾನ ಬ್ರಹ್ಮಭಿನ್ನವಾದ್ದರಿಂದ ಅದು ಉಳಿದರೆ ಪೂರ್ಣ ಮೋಕ್ಷ ಇಲ್ಲದಂತಾಗುವುದಿಲ್ಲವೆ?

ಅದರ ನಿವೃತ್ತಿಗೆ ಮತ್ತೊಂದು ಜ್ಞಾನವನ್ನು ಹುಡುಕಿದರೆ ಅನವಸ್ಥಾದೋಷ ಬರುವುದಿಲ್ಲವೆ? —ಇತ್ಯಾದಿ ಆಕ್ಷೇಪಗಳಿಗೆ ಅವರು ಕಾಡ್ಗಿಚ್ಚು ವನವನ್ನೆಲ್ಲಾ ಭಸ್ಮಮಾಡಿದ ಮೇಲೆ ತಾನೂ ಸ್ವತಃ ನಾಶವಾಗುವಂತೆ, ಆ ಜ್ಞಾನ ಪ್ರಪಂಚ ಭ್ರಮವನ್ನು ನೀಗಿಸಿ ತಾನೂ ಸಹ ತಾನಾಗಿಯೇ ನಾಶವಾಗುವುದು ಎಂದು ಉತ್ತರ ಹೇಳುವರು—ಇದು ಯುಕ್ತವಲ್ಲ. ಏತಕ್ಕೆಂದರೆ ,ಸಮಸ್ತ ಭೇದವನ್ನು ನಿರಸನ ಮಾಡುವ ವಾಕ್ಯಾರ್ಥಜ್ಞಾನ ತನಗೆ ತಾನಾಗಿಯೇ ನಾಶವಾಗದು. ಸುಡಬೇಕಾದ್ದನ್ನೆಲ್ಲ ಸುಟ್ಟ ಕಾಡ್ಗಿಚ್ಚೂ ಸಹ ಆ ಕ್ಷಣದಲ್ಲೇ ಗಾಳಿ ಮುಂತಾದ ಕಾರಣದಿಂದಲೇ ಅಡಗುವುದೇ ಹೊರತು ತಾನಾಗಿಯೇ ಅಲ್ಲ. ವಸ್ತುತಃ ಕಾಡ್ಗಿಚ್ಚು ಸತ್ಯವಸ್ತು. ಕಾರಣಜನ್ಯ–ಕಾರಣ ಮುಗಿದರೆ ಕಾರ್ಯವೂ ಮುಗಿಯಬಹುದು. ಆದರೆ ವಾಕ್ಯಾರ್ಥಜ್ಞಾನಮಿಥ್ಯೆಯಾದ್ದರಿಂದ ಬಾಧಕಜ್ಞಾನಾನಂತರ ಬರದೇ ನಿವೃತ್ತಿಯಾಗಲು ಸಾಧ್ಯವೇ ಇಲ್ಲ. ಹಾಗೆ ಒಂದು ಭ್ರಮ ಸ್ವತಃ ನಿವೃತ್ತಿ ಹೊಂದುವುದಾದರೆ ಪ್ರಪಂಚ ಭ್ರಮವೂ ಸ್ವತಃ ನಿವೃತ್ತಿಯನ್ನು ಹೊಂದಬಹುದು. ಕಾರಣವನ್ನು ಹುಡುಕಬೇಕಾಗಿಯೇ ಇಲ್ಲ. ಆದ್ದರಿಂದ "ಕಾಡ್ಗಿಚ್ಚು"—ಮೊದಲಾದ ದೃಷ್ಟಾಂತ ಪ್ರಕೃತಕ್ಕೆ ಹೊಂದುವುದೇ ಇಲ್ಲ. ಆದ್ದರಿಂದ ಆ ಜ್ಞಾನಕ್ಕೆ ನಿವರ್ತಕವಾಗಿ ಮತ್ತೊಂದು ಜ್ಞಾನವೇ ಬೇಕು; ಅದಕ್ಕೆ ಮತ್ತೊಂದು ನಿವರ್ತಕ ಆವಶ್ಯಕ. ಹೀಗೆ ಅನವಸ್ಥಾದೋಷ ಅಪರಿಹಾರ್ಯ. ಆ ಜ್ಞಾನ ನಿವರ್ತವೇ ಆಗದಿದ್ದರೆ ಬ್ರಹ್ಮವ್ಯತಿರಿಕ್ತವಾದ ಸಕಲವೂ ನಿವೃತ್ತವಾಗದೇ ಒಂದು ಉಳಿಯುವುದರಿಂದ ಮೋಕ್ಷ ಹೇಗೆ ಸಾಧ್ಯ, ಆದ್ದರಿಂದ ವಾಕ್ಯಾರ್ಥಜ್ಞಾನ ಮೋಕ್ಷಕ್ಕೆ ಸಾಧನವಾಗುವುದಿಲ್ಲ.

ಅದ್ವೈತವಾದದಲ್ಲಿ ಮೋಕ್ಷಹೇತುವಾದ ಜ್ಞಾನಕ್ಕೆ ವಿಷಯ ಯಾವುದೆಂಬ ಪ್ರಶ್ನೆಗೆ ಉತ್ತರವೇ ಸಾಧ್ಯವಿಲ್ಲ. (1) ವಿಶುದ್ಧವಾದ ಬ್ರಹ್ಮವೇ ವಿಷಯವೆಂದರೆ ಬ್ರಹ್ಮಕ್ಕೆ ವೇದ್ಯತ್ವವನ್ನು ಒಪ್ಪಬೇಕಾಗುತ್ತದೆ. ಇದರಿಂದ ಅಪಸಿದ್ಧಾಂತ ದೋಷ ಬರುತ್ತದೆ. (2) ಮಾಯಾ ಶಬಲಿತ ಬ್ರಹ್ಮವಾಗಲಿ (3) ಮಿಥ್ಯಾಭೂತವಾದ ಪ್ರಪಂಚವಾಗಲಿ ವಿಷಯವಾದರೆ ಈ ಎರಡೂ ಮಿಥ್ಯಾಭೂತವಾದ್ದರಿಂದ, ಮಿಥ್ಯಾಭೂತವಾದ ವಸ್ತುಗಳ ಜ್ಞಾನದಿಂದ ಮೋಕ್ಷ ಬರಲು ಸಾಧ್ಯವಿಲ್ಲ. (4) ಪ್ರಪಂಚ ಮಿಥ್ಯಾತ್ವವೇ ವಿಷಯವೆಂದರೆ—ಈ ಪ್ರಪಂಚ ಮಿಥ್ಯಾತ್ವವು ಸತ್ಯವೆ? ಅಸತ್ಯವೆ? ಪ್ರಪಂಚ ಮಿಥ್ಯಾತ್ವವು ಸತ್ಯವಾದರೆ ಬ್ರಹ್ಮಕ್ಕಿಂತಲೂ ಭಿನ್ನವಾದ ಸತ್ಯವಸ್ತು ಸಿದ್ಧಿಸುವುದರಿಂದ ಎರಡು ಸತ್ಯವಸ್ತು ಸಿದ್ಧಿಸಿ ಅದ್ವೈತಕ್ಕೇ ಹಾನಿಯುಂಟಾಗುತ್ತೆ. ಅದಲ್ಲದೆ ಪ್ರಪಂಚದಲ್ಲಿರುವ ಮಿಥ್ಯಾತ್ವ ಮಿಥ್ಯೆಯಾದರೆ ಪ್ರಪಂಚ ಸತ್ಯವಾಗಬೇಕಾದುದರಿಂದ ಮೋಕ್ಷಕ್ಕೆ ಕಾರಣವಾದ ಜ್ಞಾನವೇ ಮಿಥ್ಯಾಜ್ಞಾನವಾಗಬೇಕಾಗುತ್ತದೆ (5) ಯಾವುದೂ ವಿಷಯವಾಗುವುದಿಲ್ಲವೆಂಬಲ್ಲಿ ಜ್ಞಾನ ನಿರ್ವಿಷಯವಾಗಿ ಘಟಾದಿಗಳಂತೆ ಇರಲು ಶಕ್ಯವಿಲ್ಲವಾದ್ದರಿಂದ ಆ ಜ್ಞಾನವು ಜ್ಞಾನವೆಂದೆನಿಸಿಕೊಳ್ಳಲು ಸಾಧ್ಯವಿಲ್ಲ.

ನಿರ್ವಿಶೇಷಾದ್ವೈತಿಗಳಿಗೆ ತತ್ತ್ವ ಜ್ಞಾನದಿಂದ ಆಗುವ ಸರ್ವಭ್ರಮನಿವೃತ್ತಿರೂಪವಾದ ಮುಕ್ತಿಯೂ ಬ್ರಹ್ಮಸ್ವರೂಪವೇ? ಬ್ರಹ್ಮಕ್ಕಿಂತಲೂ ಭಿನ್ನವೆ?—ಬ್ರಹ್ಮಸ್ವರೂಪವೆಂದಲ್ಲಿ, ಈ ಬ್ರಹ್ಮಸ್ವರೂಪ ಮೊದಲೇ ಇದ್ದುದರಿಂದ, ಮುಕ್ತಿಯೂ ಮೊದಲೇ ಸಿದ್ಧವಾಗಿದ್ದುದರಿಂದ, ಅದಕ್ಕಾಗಿ ಪ್ರಯತ್ನಪಡಬೇಕಾಗಿಯೇ ಇಲ್ಲ. ಬ್ರಹ್ಮಕ್ಕಿಂತಲೂ ಭಿನ್ನವೆಂಬ ಮೇಲ್ಕಂಡ ಎರಡನೇ ಪಕ್ಷವನ್ನು ಒಪ್ಪಿದರೆ, ಬ್ರಹ್ಮಕ್ಕಿಂತ ಭಿನ್ನವಾದುದೆಲ್ಲ ಮಿಥ್ಯೆಯಾದ್ದರಿಂದ ಸರ್ವಮಿಥ್ಯಾನಿವೃತ್ತಿಯಾಗದುದರಿಂದ ಎಂದೂ ಮೋಕ್ಷ ಅಸಂಭವ. ಸರ್ವಭ್ರಮನಿವೃತ್ತಿ ಬ್ರಹ್ಮಕ್ಕಿಂತಲೂ ಭಿನ್ನವಾದ ಕಾರಣ ಅದೂ ನಿವೃತ್ತಿಯಾಗಿಬಿಡುತ್ತೆಯಾದ್ದರಿಂದ ಸರ್ವಮಾಯಾ ನಿವೃತ್ತಿರೂಪ ಮೋಕ್ಷ ಸಿದ್ಧಿಸುತ್ತದೆ—ಎಂದರೆ ಸರ್ವಭ್ರಮ ನಿವೃತ್ತಿ ನಿವೃತ್ತಿಯಾದರೆ ಮತ್ತೆ ಮೊದಲಿನಂತೆ ಪ್ರಪಂಚ ಭ್ರಮ ಏಳಬೇಕಾಗುತ್ತದೆ. ಸರ್ವಭ್ರಮ ನಿವೃತ್ತಿ ನಿವೃತ್ತಿಯಾಗುವುದಿಲ್ಲವೆಂದರೆ ಅದು ಸತ್ಯವಾಗಬೇಕಾಗುತ್ತೆ. ಅಲ್ಲಿಗೆ ಬ್ರಹ್ಮ ಮತ್ತೊಂದು ಸತ್ಯವನ್ನು ಪಡೆದಂತಾಗಿ ಅದ್ವೈತ ಉಳಿಯದೇ ಹೋಗುತ್ತದೆ. ಒಟ್ಟಿನಲ್ಲಿ ಬ್ರಹ್ಮ ಒಂದೇ ಸತ್ಯ ಎಂಬ ಅದ್ವೈತವಾದದಲ್ಲಿ ಮೋಕ್ಷರೂಪ ಫಲ ನಿರೂಪಣೆ ಸಮಂಜಸವಾಗುವುದಿಲ್ಲ.

ಅನುಮಾನದಿಂದ ಈಶ್ವರನನ್ನು ಸಾಧಿಸಲು ಶಕ್ಯವಿಲ್ಲ. ಹೇಗೆಂದರೆ:—[''ಪೃಥಿವ್ಯಾದಿಕಂ ಸಕರ್ತೃಕಂ ಕಾರ್ಯತ್ವಾತ್, ಘಟವತ್'']—ಎಂಬ ಅನುಮಾನದಿಂದ ಪೃಥಿವ್ಯಾದಿ ಕಾರ್ಯಗಳ ರಚನೆಗೆ ಬೇಕಾದ ಜ್ಞಾನ ಶಕ್ತ್ಯಾದಿಗಳು ಮಾತ್ರ ಪ್ರಕೃತ ಪಕ್ಷವಾದ ಈಶ್ವರನಲ್ಲಿ ಸಿದ್ಧಿಸಬಹುದೇ ಹೊರತು ಪ್ರಕೃತ ಕಾರ್ಯಕ್ಕೆ ಸಂಬಂಧವಿಲ್ಲದ ಕರ್ಮವಶ್ಯತ್ವಾದಿಗಳು ಸಿದ್ಧಿಸಲು ಸಾಧ್ಯವಿಲ್ಲ. ಕಾರ್ಯ ರಚನೆಗೆ ಬೇಕಾಗಿರುವುದು ಜ್ಞಾನ ಶಕ್ತ್ಯಾದಿಗಳೇ ಹೊರತು ಕರ್ಮವಲ್ಲ. 'ಕರ್ತ'—ಎಂದರೆ 'ಪ್ರಯತ್ನವಾನ್''—ಎಂದು ಮಾತ್ರವೇ ಅರ್ಥ. ಪ್ರಯತ್ನ ಜ್ಞಾನಜನ್ಯ. ಜ್ಞಾನಕ್ಕೆ ಕರ್ಮ ಕಾರಣವಲ್ಲ. ಆದುದರಿಂದ ಇಷ್ಟು ಮಾತ್ರವೇ ಈಶ್ವರನಿಗೆ ಸಿದ್ಧಿಸುವುದೇ ಹೊರತು, ಕರ್ಮವಶ್ಯತ್ವ ಸಿದ್ಧಿಸುವಂತಿಲ್ಲ.—ಹೀಗೆಂದರೆ—ಇದು ಸರಿಯಲ್ಲ. ಏತಕ್ಕೆಂದರೆ, ಪ್ರಯತ್ನಕ್ಕೆ ಕಾರಣವಾಗಿ ಜ್ಞಾನ ಹೇಗೆ ಆವಶ್ಯಕವೋ ಹಾಗೆಯೇ, ಜ್ಞಾನಕ್ಕೆ ಇಂದ್ರಿಯ, ಅದಕ್ಕೆ ಆಶ್ರಯವಾಗಿ ದೇಹ. ಇದಕ್ಕೆಲ್ಲಾ ಮೂಲ ಕಾರಣವಾಗಿ ಕರ್ಮ—ಎಲ್ಲವೂ ಆವಶ್ಯಕವಾದ್ದರಿಂದ, ಆ ಅನುಮಾನದಿಂದ ಇವೆಲ್ಲವೂ ಸಿದ್ಧಿಸಲೇ ಬೇಕು. ಇಲ್ಲದಿದ್ದರೆ ಪ್ರಯತ್ನಕ್ಕಿಂತಲೂ ಅತಿರಿಕ್ತವಾಗಿ ಜ್ಞಾನವೂ ಸಿದ್ಧಿಸಲಾರದು.

ಪರಮಾತ್ಮನ ಜ್ಞಾನ ನಿತ್ಯ ಮತ್ತು ಕೆಲ ವಸ್ತು ವಿಷಯವಾಗದೇ ಸರ್ವ ವಿಷಯಕವಾದ್ದರಿಂದ ಜ್ಞಾನದ ಉತ್ಪತ್ತಿಗಾಗಲಿ ವಿಷಯ ಸಂಬಂಧಕ್ಕಾಗಲಿ ಕಾರಣವಾಗಿ ಇಂದ್ರಿಯಾದಿಗಳ ಅಪೇಕ್ಷೆ ಬರುವುದಿಲ್ಲವೆಂದರೆ—ಇದು ಸರಿಯಲ್ಲ. ಲೋಕದಲ್ಲಿ ಎಲ್ಲೂ ಇಂತಹ ನಿತ್ಯವಾದ, ಸರ್ವವಿಷಯಕವಾದ ಜ್ಞಾನವನ್ನು ಯಾರೂ ಎಂದೂ ಅರಿಯದಿರುವುದರಿಂದ ವ್ಯಾಪ್ತಿ ಗ್ರಹಣ ಕಾಲದಲ್ಲಿ ಈ ಅಂಶ ತೋರಲು ಸಾಧ್ಯವಿಲ್ಲದ ಕಾರಣ ಲೋಕಾನುಭವವಿರುದ್ಧವಾಗಿ ನಿತ್ಯವಾದ ಜ್ಞಾನಾದಿಗಳೂ ಆ ಅನುಮಾನದಿಂದ ಸಿದ್ಧಿಸಲು ಸಾಧ್ಯವಿಲ್ಲ.

ಲೋಕಾನುಭವವಿರುದ್ಧವಾದುದನ್ನೂ ಅನುಮಾನ ಬಲದಿಂದ ಸಾಧಿಸುವುದಾದರೆ. ಅವರು ನಿರಾಕರಿಸಿರುವ 'ನಿತ್ಯಸಂಯೋಗ'ವನ್ನೂ ಒಪ್ಪುವುದರಲ್ಲಿಯೂ ಯಾವ ತಪ್ಪೂ ಇಲ್ಲವೆಂದಾಗುವುದು. ವಿಭುದ್ರವ್ಯ ನಿತ್ಯವಾದ್ದರಿಂದ ಅವುಗಳ ಸಂಯೋಗವೂ ನಿತ್ಯವಾಗಬೇಕಾಗುತ್ತದೆ. ಲೋಕದಲ್ಲಿ ಕಂಡುಬರುವ ಸಂಯೋಗವೆಲ್ಲವೂ ಅನಿತ್ಯವಾಗಿಯೇ ಇರುವುದರಿಂದ ನಿತ್ಯವಾದ ಸಂಯೋಗ ಇರಲು ಸಾಧ್ಯವಿಲ್ಲ. ಸಂಬಂಧ ನಿತ್ಯವಾದರೆ ಅದು ಸಮವಾಯ ಸಂಬಂಧವೆನಿಸಿಕೊಳ್ಳಬೇಕಾಗುತ್ತದೆ. ಅವಯವಾವಯವಿ ವಿಭಾಗವಿಲ್ಲದ ಎರಡು ದ್ರವ್ಯಗಳಿಗೆ ಸಮವಾಯ ಸಂಬಂಧ ಬರಲು ಸಾಧ್ಯವಿಲ್ಲವೆಂಬುದೇ ಅದನ್ನು ಒಪ್ಪದಿರಲು ಕಾರಣ. ಆದ್ದರಿಂದ ಪರಮಾತ್ಮನಿಗೆ ಕರ್ಮವಶ್ಯತೆ ಸಿದ್ಧಿಸುವುದು ಅನಿವಾರ್ಯ. ಇಲ್ಲದಿದ್ದರೆ ಪ್ರಯತ್ನ ಮಾತ್ರ ಸಿದ್ಧಿಸುವುದೇ ಹೊರತು ಜ್ಞಾನ ಮತ್ತು ಇಚ್ಛೆ ಈ ಅನುಮಾನದಿಂದ ಸಿದ್ಧಿಸುವಂತಿಲ್ಲ.

ಈಶ್ವರನ ಪ್ರಯತ್ನದಲ್ಲಿ ವಿಷಯ ವ್ಯವಸ್ಥೆಗಾಗಿ ಜ್ಞಾನ ಆವಶ್ಯಕವೆಂದಲ್ಲಿ, ಈಶ್ವರಾನುಮಾನದಿಂದ ಸಾಕ್ಷಾತ್ ಪ್ರಯತ್ನ ಮಾತ್ರವೇ ಸಿದ್ಧಿಸಿದರೂ, ಈಶ್ವರನ ಪ್ರಯತ್ನದಲ್ಲಿ ವಿಷಯ ಸಮರ್ಪಣೆಗಾಗಿ ಜ್ಞಾನ ಮತ್ತು ಇಚ್ಛೆ ಆವಶ್ಯಕ. ಜ್ಞಾನ ಯಾವ ವಿಷಯಕವೋ ಆ ವಿಷಯಕವೇ ಪ್ರಯತ್ನವೂ ಆಗುತ್ತದೆಯೆಂಬುದು ಅನುಭವ. ಉದಾಸೀನ ವಸ್ತುವಿಷಯಕವಾಗಿ ಜ್ಞಾನ ಬಂದರೂ, ಪ್ರಯತ್ನ ಬರದೇ ಇರುವುದರಿಂದ ಪ್ರಯತ್ನಕ್ಕೆ ಇಚ್ಛೆಯೂ ಆವಶ್ಯಕ. ಹೀಗೆ ಜ್ಞಾನ ಮತ್ತು ಇಚ್ಛೆ ಎರಡು ಮಾತ್ರವೇ ಅನುಮಾನದಿಂದ ಸಿದ್ಧಿಸುವುದೆಂಬುದೂ ಸರಿಯಲ್ಲ.

ಪ್ರಕೃತದಲ್ಲಿ ಈಶ್ವರನ ಪ್ರಯತ್ನದಲ್ಲಿ ವಿಷಯ ವ್ಯವಸ್ಥೆಗೆ ಜ್ಞಾನೇಚ್ಛೆಗಳ ಅಪೇಕ್ಷೆ ಇಲ್ಲದಿದ್ದರೂ ಹಾನಿಯಿಲ್ಲ—ಹೇಗೆಂದರೆ, ''ಈಶ್ವರನ ಜ್ಞಾನ ಕಾರಣ ಜನ್ಯವಲ್ಲ ಸ್ವತಸ್ಸಿದ್ಧ''— ಎನ್ನುವವರಿಗೆ ಅದರಂತೆಯೇ ಈಶ್ವರನ ಪ್ರಯತ್ನ ಸ್ವತಃ ಸವಿಷಯಕವಾಗಲಿ, ಇದಕ್ಕಾಗಿ ಜ್ಞಾನದ ಅಪೇಕ್ಷೆ ಏತಕ್ಕೆ? ಲೋಕದಲ್ಲಿ ಹಾಗಿಲ್ಲವೆಂದರೆ, ನಿತ್ಯವಾದ ಜ್ಞಾನವೂ ಲೋಕದಲ್ಲಿಲ್ಲ. ಲೋಕ ವಿಲಕ್ಷಣವಾಗಿ ಹೇಳುವು

ದಾದರೆ. ಇದನ್ನೂ ಹಾಗೆಯೇ ಹೇಳಬಹುದು. ಆದ್ದರಿಂದ ಈಶ್ವರಾನುಮಾನದಿಂದ ಪ್ರಯತ್ನ ಮಾತ್ರ ಸಿದ್ಧಿಸುವುದೇ ಹೊರತು ಜ್ಞಾನೇಚ್ಛೆಗಳು ಸಿದ್ಧಿಸುವಂತಿಲ್ಲ ಲೋಕಾನುಭವವನ್ನು ಅನುಸರಿಸಿ ಅದನ್ನೂ ಒಪ್ಪುವುದಾದರೆ ಕರ್ಮವಶ್ಯತೆಯನ್ನೂ ಒಪ್ಪಬೇಕಾಗುತ್ತದೆ.

ಪ್ರಯತ್ನವು ಸ್ವತಃ ಸವಿಷಯಕವಾದರೆ ಅದು ಜ್ಞಾನವೆನಿಸಿಕೊಳ್ಳಬೇಕಾಗುತ್ತದೆ, ಆದ್ದರಿಂದ ಅದಕ್ಕೆ ಸ್ವತಃ ಸವಿಷಯಕತ್ವವನ್ನು ಹೇಳುವಂತಿಲ್ಲ—ವೆಂಬ ಈ ನಿಯಮವೆಲ್ಲಿ ಅನುಭವಸಿದ್ಧ? ಜೀವನ ಯೋನಿ ಪ್ರಯತ್ನದಲ್ಲಿ ನೀವೂ ಸ್ವತಃ ಸವಿಷಯಕತ್ವವನ್ನು ಒಪ್ಪಿರುವುದರಿಂದ, ಅದರಂತೆ ಈ ಪ್ರಯತ್ನ ಸ್ವತಃ ಸವಿಷಯಕವಾಗಬಹುದು.

ಜ್ಞಾನದಿಂದಲೇ ಪ್ರಯತ್ನಕ್ಕೆ ವಿಷಯ ವ್ಯವಸ್ಥೆಯನ್ನು ಹೇಳಿದರೂ, ಪ್ರಕೃತದಲ್ಲಿ ನಮ್ಮ ಮತದಲ್ಲಿ ನಿತ್ಯವಾದ ಈಶ್ವರನ ಪ್ರಯತ್ನವನ್ನು ಜ್ಞಾನ ಹುಟ್ಟಿಸಲು ಪ್ರಸಕ್ತಿಯಿಲ್ಲದಿರುವಾಗ, ಜ್ಞಾನದಿಂದ, ಪ್ರಯತ್ನದ ವಿಷಯವ್ಯವಸ್ಥೆಯಾದರೂ ಹೇಗೆ ತಾನೇ ಸಮರ್ಥನೀಯ.

ಈಶ್ವರನಿಗೆ ಜ್ಞಾನಾದಿಗಳನ್ನು ಅನುಮಾನದಿಂದ ಸಾಧಿಸಲು ಶಕ್ಯವಿಲ್ಲದಿದ್ದರೂ ಈಶ್ವರ ಸಿದ್ಧಿಗೆ ತಡೆಯಿಲ್ಲವಷ್ಟೆ!—ಎಂದು ಶಂಕಿಸಿದಲ್ಲಿ–ಜಗತ್ಕರ್ತಾರನನ್ನು ಅನುಮಾನದಿಂದ ಸಾಧಿಸಲು ಹೊರಟಿರುವ ನಿಮಗೆ, ಜೀವಾತ್ಮನಲ್ಲಿರುವ ಅದೃಷ್ಟವಿಶೇಷದಿಂದ ಆಗುವ ಉಸಿರಾಟ ಮುಂತಾದ ಜೀವನ ಯೋನಿ ಪ್ರಯತ್ನ ನ್ಯಾಯವೇ ಜಗತ್ಸೃಷ್ಟಿ ವಿಷಯದಲ್ಲೂ ಆಗಲಿ.

ಬುದ್ಧಿಪೂರ್ವಕ ಪ್ರಯತ್ನ, ಅಬುದ್ಧಿಪೂರ್ವಕ ಪ್ರಯತ್ನವೆಂದು ಪ್ರಯತ್ನಗಳೆರಡು ವಿಧ. ಮೊದಲನೆಯದು ಸರ್ವಾನುಭವಸಿದ್ಧ. ಎರಡನೆಯದು ಉಸಿರಾಡುವುದು ಮುಂತಾದುವಕ್ಕೆ ಕಾರಣವಾದ ಪ್ರಯತ್ನಗಳು, ನಿದ್ರೆಯ ಸಮಯದಲ್ಲೂ ಉಸಿರಾಡುವುದು ತನಗೆ ತಾನಾಗಿಯೇ ನಡೆಯುವುದರಿಂದ ಇದಕ್ಕೆ ಅವನ ಅದೃಷ್ಟವೇ ಕಾರಣ, ಜ್ಞಾನ ಕಾರಣವಲ್ಲ. ಇದನ್ನು "ಜೀವನ ಯೋನಿ ಯತ್ನ"—ವೆನ್ನುವರು ಎಂದು ನೈಯಾಯಿಕರು ಹೇಳುವರು.

ಜ್ಞಾನವಿಲ್ಲದಿದ್ದರೂ ಅದೃಷ್ಟದಿಂದಲೇ ಕಾರ್ಯಗಳಾಗುವುದಾದರೆ, ಜಗತ್ಸೃಷ್ಟ್ಯಾದಿಗಳೂ ಅದೃಷ್ಟ ವಿಶೇಷದಿಂದಲೇ ಆಗಬಹುದಾದ್ದರಿಂದ ಜ್ಞಾನಾದಿ ವಿಶಿಷ್ಟನಾದ ಈಶ್ವರನು ಆ ಅನುಮಾನದಿಂದ ಸಿದ್ಧಿಸುವಂತಿಲ್ಲ.

ಕಾರ್ಯಸಾಮಾನ್ಯಕ್ಕೂ ದೇಶ ಕಾಲೇಶ್ವರಾದೃಷ್ಟಗಳು ಕಾರಣವಾಗುವುದರಿಂದ ಜೀವಾತ್ಮರಲ್ಲಿರುವ ಅದೃಷ್ಟಗಳೂ ಜಗತ್ಸೃಷ್ಟಿಗೆ ಸಹಕಾರಿಗಳಾಗುತ್ತವೆ. ಅದೃಷ್ಟ ಜಡವಾದ್ದರಿಂದ ಅದೃಷ್ಟಕ್ಕಿಂತಲೂ ಅತಿರಿಕ್ತವಾಗಿ ಅದೃಷ್ಟ ಪ್ರೇರಕನಾದ ಈಶ್ವರನನ್ನು ಅನುಮಾನದಿಂದ ಸಾಧಿಸುತ್ತೇವೆ—ಎಂದರೆ ಈಶ್ವರನ ಅಪೇಕ್ಷೆಯೇ ಇಲ್ಲದೆ ಕೇವಲ ಅದೃಷ್ಟಗಳಿಂದಲೇ ಸರ್ವಕಾರ್ಯಗಳೂ ಆಗಲಿ! ಅದೃಷ್ಟಗಳು ನಿರಾಧಾರವಾಗಿರಲು ಸಾಧ್ಯವಿಲ್ಲವೆಂದರೆ. ಹಾಗಾದರೂ ಅದೃಷ್ಟಗಳಿಗೆ ಕರ್ತೃಗಳಾದ ಜೀವಾತ್ಮರೇ ತಮ್ಮ ಅದೃಷ್ಟಗಳಿಂದ ಜಗತ್ಸೃಷ್ಟಿಗೆ ಕಾರಣವಾಗಬಹುದಾದ್ದರಿಂದ ಜೀವಾತ್ಮರಿಂದ ಸಿದ್ಧಸಾಧನ ದೋಷ ಬರುತ್ತದೆ. ಇಷ್ಟನ್ನೂ ಮೀರಿ ಜಗತ್ಕಾರಣನಾದ ಪರಮಾತ್ಮನನ್ನು ಆ ಅನುಮಾನದಿಂದ ಸಿದ್ಧಿಗೊಳಿಸಿದರೆ ನಿಮ್ಮ ದೃಷ್ಟಾಂತವಾದ ಘಟಾದಿಗಳಿಗೆ ಕುಂಬಾರ ಮತ್ತು ಈಶ್ವರ ಇಬ್ಬರೂ ಕರ್ತರಾಗಬೇಕಾಗುತ್ತದೆ.

ಈಶ್ವರನು ಸರ್ವಜಗತ್ಕಾರಣನಾದ್ದರಿಂದ ಇದು ನಮಗೆ ಸಮ್ಮತವೇ, ಎಂದರೆ ಘಟಾದಿಗಳ ದೃಷ್ಟಾಂತದಿಂದಲೇ ಪೃಥಿವ್ಯಾದಿಗಳಿಗೂ ಒಬ್ಬನು ಕರ್ತನಿರುವನೆಂದು ಸಾಧಿಸಲು ಹೊರಟಿರುವುದರಿಂದ ಘಟಾದಿಗಳಲ್ಲಿ ಸಿದ್ಧವಾದ ಇಬ್ಬರಿಗಿಂತಲೂ ಅತಿರಿಕ್ತನಾದ ಮತ್ತೊಬ್ಬ ಕರ್ತನು ಅನುಮಾನ

ದಿಂದ ಸಿದ್ಧಿಸಬೇಕಾಗುತ್ತೆ. ಅನುಮಾನದಿಂದ ಸಿದ್ಧನಾದ ಚೇತನನು ಸರ್ವಜಗತ್ಕಾರಣನಾದ್ದರಿಂದ ಘಟಕ್ಕೂ ಅವನು ಕಾರಣನಾಗಬೇಕಾಗುತ್ತೆ. ಇಂತಹ ತ್ರಿಕರ್ತೃಕವಾದ ಘಟದ ದೃಷ್ಟಾಂತದಿಂದ ಮತ್ತೆ ಅತಿರಿಕ್ತ ಮತ್ತೊಬ್ಬ ಚೇತನನೇ ಆ ಅನುಮಾನದಿಂದ ಸಿದ್ಧಿಸಬೇಕಾಗುತ್ತೆ. ಅವನೂ ಸರ್ವ ಕಾರಣನಾದುದರಿಂದ ಓಂದೆ ಹೇಳಿದ ಕ್ರಮದಲ್ಲಿ ಕೊನೆಯಿಲ್ಲದೆ ಅನವಸ್ಥೆಯೊದಗುವುದು.

ಇಂತಹ ಅನೇಕ ಸರ್ವಕಾರಣರು ಅನಾವಶ್ಯಕವಾದ್ದರಿಂದ ಒಬ್ಬ ಈಶ್ವರನೇ ಸಾಕು ಎಂದರೆ ಹಾಗಾದರೆ ಜೀವರ ಅದೃಷ್ಟದಿಂದಲೇ ಎಲ್ಲಾ ಕಾರ್ಯಗಳೂ ನಡೆಯಲಿ, ಮೊದಲನೆಯವನಾದ, ಈಶ್ವರನೂ ಬೇಕಾಗಿಲ್ಲವೆಂದು, ಆ ಅನುಮಾನದಿಂದ ಈಶ್ವರ ಸಿದ್ಧಿಯಾಗುವಂತಿಲ್ಲ.

ಅನುಮಾನಸಿದ್ಧನಾದ ಈಶ್ವರನು ಸರ್ವಜ್ಞನಾಗಲಾರ. ಹೇಗೆಂದರೆ—ಈ ಅನುಮಾನದಿಂದ ಸಾಧ್ಯನಾದ ಈಶ್ವರನು ಜಗತ್ಸೃಷ್ಟಿಗೆ ಬೇಕಾದ ಸಹಕಾರಿಕಾರಣ, ಫಲ, ಮುಂತಾದ ಕೆಲ ವಿಷಯಗಳ ಜ್ಞಾನ ಮಾತ್ರವನ್ನು ಪಡೆದಿರುವನೆ? ಸಂಪೂರ್ಣವಾಗಿ ಸಕಲ ವಿಷಯಗಳ ಜ್ಞಾನವನ್ನು ಪಡೆದಿರುವನೆ? ಕೆಲ ವಿಷಯಗಳ ಜ್ಞಾನವನ್ನು ಮಾತ್ರ ಪಡೆದಿರುವನೆಂಬ ಮೊದಲನೆಯ ಕಲ್ಪದಲ್ಲಿ ಸರ್ವಜ್ಞನಾದ ಈಶ್ವರನು ಆ ಅನುಮಾನದಿಂದ ಸಾಧಿಸಲಾಗುವುದಿಲ್ಲ. ಎರಡನೆಯ ಕಲ್ಪದಲ್ಲಿ ಘಟಾದಿ ದೃಷ್ಟಾಂತಗಳಲ್ಲಿ ಸರ್ವಜ್ಞ ಕರ್ತೃಕತ್ವವಿಲ್ಲದಿರುವುದರಿಂದ ಎಲ್ಲೂ ವ್ಯಾಪ್ತಿ ಗ್ರಹಣವಾಗಲು ಸಾಧ್ಯವಿಲ್ಲ. ''ಪೃಥಿವ್ಯಾದಿಕಂ ಕರ್ತೃಜನ್ಯಂ, ಕಾರ್ಯತ್ವಾತ್, ಘಟವತ್''—ಎಂಬ ಅನುಮಾನದಲ್ಲಿ ಸಾಧ್ಯಕೋಟಿಯಲ್ಲಿ ಇರುವ ಕರ್ತೃತ್ವವನ್ನು ಸಾಮಾನ್ಯ ರೂಪದಲ್ಲಿ ಸೇರಿಸಿದರೆ ಮೇಲೆ ಹೇಳಿದ ದೋಷ ಬರುವುದಿಲ್ಲ. ದೃಷ್ಟಾಂತವಾದ ಘಟಾದಿಗಳ ಕರ್ತನು ಅದಕ್ಕೆ ತಕ್ಕಂತೆ ಜ್ಞಾನಾದಿಗಳನ್ನು ಪಡೆದಿರುವಂತೆ ಪೃಥಿವ್ಯಾದಿಗಳ ಕರ್ತನು ಅದಕ್ಕೆ ತಕ್ಕ ಜ್ಞಾನಾದಿಗಳನ್ನು ಪಡೆದಿರುತ್ತಾನೆ. ಪಕ್ಷದಲ್ಲಿ ಸಾಧ್ಯ ಸಿದ್ಧಿಸುವಾಗ ಅದಕ್ಕೆ ತಕ್ಕಂತೆ ಸಿದ್ಧಿಸುವುದನ್ನು ''ಪಕ್ಷಧರ್ಮತಾ ಜ್ಞಾನ ಪ್ರಮಾಣ ಲಭ್ಯ''—ವೆಂದು ಹೇಳುವರು. ಇದರಿಂದ ಈಶ್ವರನ ಸರ್ವಜ್ಞತ್ವ ಸಿದ್ಧಿಸುವುದೆಂದರೆ—ಅದು ಸಾಧ್ಯವಿಲ್ಲ. ಏತಕ್ಕೆಂದರೆ ಸಾಧ್ಯ ಪಕ್ಷದಲ್ಲಿ ಸಿದ್ಧಿಸುವಾಗ ಬರುವ ''ಪಕ್ಷ ಧರ್ಮತ್ವ''—ಜ್ಞಾನದಿಂದ ಸಾಧ್ಯಕ್ಕೂ ಪಕ್ಷಕ್ಕೂ ಇರುವ ಆಧಾರಾಧೇಯಭಾವ ಮಾತ್ರ ಸಿದ್ಧಿಸುವುದೇ ಹೊರತು ಅದಕ್ಕಿಂತಲೂ ಹೆಚ್ಚಿನ ವಿಶೇಷ ಸಿದ್ಧಿಸಲು ಶಕ್ಯವಿಲ್ಲ.

ಪ್ರಕೃತದಲ್ಲೂ ಅನುಮಾನದಿಂದ ಪೃಥಿವ್ಯಾದಿಗಳಿಗೆ ಒಬ್ಬ ಕರ್ತನು ಸಿದ್ಧಿಸುವನೇ ಹೊರತು ಆ ಕರ್ತನು ಸರ್ವಜ್ಞನೆಂಬುದು ಸಿದ್ಧಿಸುವಂತಿಲ್ಲ. ಅನುಮಾನ ಸ್ಥಳದಲ್ಲಿ ಹೇತು ಪಕ್ಷದಲ್ಲಿರುವುದು ಪ್ರತ್ಯಕ್ಷಾದಿ ಪ್ರಮಾಣಸಿದ್ಧವಾಗುತ್ತದೆ. ಹೇತುವಿಗೂ ಸಾಧ್ಯಕ್ಕೂ ಇರುವ ವ್ಯಾಪ್ತಿ ಓಂದೆಯೇ ಗೃಹೀತವಾಗಿರುತ್ತೆ. ಸಾಧ್ಯಕ್ಕೂ ಪಕ್ಷಕ್ಕೂ ಇರುವ ಸಂಬಂಧ ಯಾವ ಪ್ರಮಾಣದಿಂದ ಗೃಹೀತವಾಗುತ್ತೆ? ಆ ಅನುಮಾನದಿಂದಲೇ ಅದೂ ಸಿದ್ಧವಾಗುತ್ತದೆಯೆನ್ನಲು ಸಾಧ್ಯವಿಲ್ಲ. ಆಗ ಆ ಅನುಮಾನದಿಂದ ಸಾಧ್ಯ ಮತ್ತು ಸಾಧ್ಯಸಂಬಂಧ ಎರಡೂ ಸಾಧ್ಯವಾಗಬೇಕಾಗುತ್ತದೆ. ಒಂದು ಅನುಮಾನದಲ್ಲಿ ಒಂದು ಹೇತುವಿನಿಂದ ಒಂದು ಸಾಧ್ಯ ಸಿದ್ಧಿಸುವುದೇ ಹೊರತು ಎರಡು ಸಾಧ್ಯ ಸಿದ್ಧಿಸುವಂತಿಲ್ಲ. ಇದಲ್ಲದೆ ಸಾಧ್ಯವೇ ಸಿದ್ಧಿಸದಿದ್ದಾಗ ಸಾಧ್ಯಸಂಬಂಧವನ್ನು ಆವಾಗಲೇ ಸಾಧಿಸಿದರೆ ಆತ್ಮಾಶ್ರಯಾದಿ ದೋಷವೂ ಬರುವುದು. ಆದುದರಿಂದ ಪಕ್ಷಧರ್ಮತಾಜ್ಞಾನ ಬಲದಿಂದಲೇ ಪಕ್ಷಕ್ಕೆ ಸಾಧ್ಯಸಂಬಂಧ ಸಿದ್ಧಿಸುತ್ತದೆಯೆಂದು ತಾರ್ಕಿಕರೆನ್ನುವರು. ಸಾಧ್ಯಕ್ಕೂ ಪಕ್ಷಕ್ಕೂ ಸಂಬಂಧ ಮಾತ್ರ ಇದರಿಂದ ಸಿದ್ಧಿಸುವುದೇ ಹೊರತು ಸಾಧ್ಯದಲ್ಲಿರುವ ಹೆಚ್ಚಿನ ವಿಶೇಷಗಳು ಸಿದ್ಧಿಸಲಾರವು. ಆದ್ದರಿಂದ ಲೋಕದಲ್ಲಿ ಎಲ್ಲೂ ಕಂಡರಿಯದ ಸರ್ವಜ್ಞತ್ವ ಈಶ್ವರನಲ್ಲಿ ಸಿದ್ಧಿಸಲು ಶಕ್ಯವಿಲ್ಲ.

ಘಟ ದೃಷ್ಟಾಂತದಲ್ಲಿ ಕರ್ತನಾಗಿರುವ ಕುಂಬಾರನೇ ಎಲ್ಲ ಕಾರ್ಯಗಳಲ್ಲೂ ಕರ್ತನೆಂದು ಆ ವ್ಯಾಪ್ತಿಗೆ ಅರ್ಥ ಇಲ್ಲ. ಆಯಾ ಕಾರ್ಯಕ್ಕೆ ತಕ್ಕ ಜ್ಞಾನ ಶಕ್ತ್ಯಾದಿಗಳು ಆ ಅನುಮಾನದಿಂದ ಸಿದ್ಧಿಸುತ್ತದೆ. ಪ್ರಕೃತದಲ್ಲೂ ಜಗತ್ಸೃಷ್ಟಿಗೆ ಬೇಕಾದ ಜ್ಞಾನ ಶಕ್ತ್ಯಾದಿಗಳು ಸಿದ್ಧಿಸುವುದರಲ್ಲಿ ತಡೆಯೇನು?—ಎಂದರೆ,

ಆಯಾ ಕಾರ್ಯಕ್ಕೆ ತಕ್ಕ ಶಕ್ತಿಯುಳ್ಳ ಕರ್ತನು ಅದರಿಂದ ಸಿದ್ಧಿಸುವುದರಲ್ಲಿ ತಡೆಯಿಲ್ಲ. ಆದರೆ ಈ ಲೋಕದಲ್ಲಿ ಎಲ್ಲೂ ಕಾಣದ ನೀನು ಹೇಳುವ ಸರ್ವಜ್ಞತ್ವ ಸಿದ್ಧಿಸಲು ಶಕ್ಯವಿಲ್ಲ. ಆಯಾ ಕಾರ್ಯಕ್ಕೆ ತಕ್ಕ ಜ್ಞಾನ ಶಕ್ತಿಗಳೇ ಪ್ರಕೃತದಲ್ಲಿ ಸರ್ವಜ್ಞತ್ವ ಸರ್ವಶಕ್ತತ್ವರೂಪವಾಗುತ್ತದೆಯೆಂದರೆ—ಅಂತಹ ಒಬ್ಬ ಜಗತ್ಕರ್ತನನ್ನು ಆ ಅನುಮಾನದಿಂದ ಸಾಧಿಸಿದರೂ ವಿಶ್ವಾಮಿತ್ರಚತುರ್ಮುಖಾದಿ ಜೀವ ವಿಶೇಷಗಳಲ್ಲಿ ವಿಲಕ್ಷಣಜ್ಞಾನಶಕ್ತ್ಯಾದಿಗಳು ಸರ್ವಸಮ್ಮತವಾಗಿರುವುದರಿಂದ ಅವರಂತೆ ಈಶ್ವರನೂ ಒಬ್ಬ ಜೀವ ವಿಶೇಷರೂಪನೆಂದು ಅನುಮಾನದಿಂದ ಸಿದ್ಧಿಸುವುದೇ ಹೊರತು ಜೀವವಿಲಕ್ಷಣನಾದ ಈಶ್ವರನು ಆ ಅನುಮಾನದಿಂದ ಸಿದ್ಧಿಸಲು ಸಂಭವವೇ ಇಲ್ಲ.

ಕಾರ್ಯಗಳೆಲ್ಲವೂ ಕರ್ತೃಜನ್ಯವೆಂಬ ನಿಯಮವೂ ಇಲ್ಲ. ಆದ್ದರಿಂದ ಮೇಲೆ ಹೇಳಿದ ಅನುಮಾನ ಅಪ್ರಯೋಜಕ. ಕರ್ತನಿಲ್ಲದಿದ್ದರೂ ಇತರ ಕಾರಣಗಳಿಂದಲೇ ಕಾರ್ಯವಾಗಬಹುದು. ಕಾರ್ಯದ ಪೂರ್ವಾವಧಿಯೇ ಕಾರಣವಷ್ಟೆ! [ಇಲ್ಲಿ ಕಾರಣ = ಅವಧಿ]. ಲೋಕದಲ್ಲಿ ಒಂದು ಕಾರ್ಯಕ್ಕೆ ಉಪಾದಾನಕಾರಣ, ಸಹಕಾರಿ ಕಾರಣ ಮುಂತಾದ ಅನೇಕ ಕಾರಣಗಳು ಅವಶ್ಯಕ. ಆದರೂ ಧ್ವಂಸಕ್ಕೆ ಉಪಾದಾನ ಕಾರಣವಿಲ್ಲವೆಂದು ತಾರ್ಕಿಕರೆನ್ನುವರು. ಇದರಂತೆ ಕರ್ತೃವಿಲ್ಲದೆಯೇ ಪೃಥಿವ್ಯಾದಿ ಕಾರ್ಯಗಳೂ ಆಗಬಹುದಾದ್ದರಿಂದ ಆ ಅನುಮಾನದಿಂದ ಈಶ್ವರ ಸಿದ್ಧಿಯಾಗುವುದಿಲ್ಲ.

ಕಾರ್ಯ ಸಾಮಾನ್ಯಕ್ಕೆ ದೇಶ, ಕಾಲ, ಅದೃಷ್ಟ ಮತ್ತು ಈಶ್ವರ ಕಾರಣವೆಂಬುದು ಪ್ರಸಿದ್ಧ. ಈಶ್ವರನಿಲ್ಲದೆಯೇ ಕಾರ್ಯವಾಗುವುದಾದರೆ ಕಾಲಾದಿಗಳಿಲ್ಲದೆಯೂ ಕಾರ್ಯವಾಗಬಹುದೆಂದೂ ಒಪ್ಪಬೇಕಾಗುತ್ತೆ—ಎಂದರೆ ಈಶ್ವರನು ಕಾಲಪದಾರ್ಥದಂತೆ ಸರ್ವಸಂಮತನಲ್ಲವಷ್ಟೆ! ಆದ್ದರಿಂದ ಈಶ್ವರನನ್ನು ಒಪ್ಪದಿದ್ದರೆ ಕಾಲವೂ ಬೇಡವೆನ್ನುವಂತಿಲ್ಲ. ಜಗತ್ತಿಗೆ ಕಾರಣನಾಗಿ ಈಶ್ವರನನ್ನೊಪ್ಪದಿದ್ದರೆ ಚೇತನನ ಪ್ರೇರಣೆ ಇಲ್ಲದೆ ಜಡವಾದ ಕಾಲಾದಿಗಳು ಕಾರ್ಯಕಾರಿಯಾಗಲು ಸಾಧ್ಯವಿಲ್ಲದ್ದರಿಂದ ಈಶ್ವರ ಆವಶ್ಯಕವೆಂದರೆ, ಆ ಕಾಲಾದಿಗಳು ಅದೃಷ್ಟದ ಪ್ರೇರಣೆಯಿಂದಲೇ ಕಾರ್ಯವನ್ನು ಮಾಡಬಹುದಾದ್ದರಿಂದ ಈಶ್ವರನ ಆವಶ್ಯಕತೆ ಬರುವುದಿಲ್ಲ.

ಅದೃಷ್ಟವೂ ಜಡವಾದ್ದರಿಂದ ಚೇತನ ಪ್ರೇರಣೆಯಿಲ್ಲದೆ ಕಾರ್ಯಕಾರಿಯಾಗಲು ಹೇಗೆ ಸಾಧ್ಯ?—ಎಂದರೆ, ಆ ಅದೃಷ್ಟವಂತು ಪ್ರಯತ್ನಕ್ಕೆ ಮತ್ತೊಂದು ಪ್ರಯತ್ನದ ಆವಶ್ಯಕತೆಯಿಲ್ಲದಂತೆ ಮತ್ತೊಬ್ಬರ ಪ್ರೇರಣೆಯಿಲ್ಲದಿದ್ದರೂ ತನ್ನ ಕೆಲಸವನ್ನು ಮಾಡಬಹುದು.

ಒಂದು ಕಾರ್ಯವಾಗಬೇಕಾದರೆ ಪ್ರಯತ್ನವು ಆವಶ್ಯಕ. ಪ್ರಯತ್ನಕ್ಕೆ ಮತ್ತೊಂದು ಪ್ರಯತ್ನದ ಅಪೇಕ್ಷೆ ಇಲ್ಲದೆಯೇ ಕಾರ್ಯಕಾರಿಯಾಗಬಹುದಾದ್ದರಿಂದ ಅದೃಷ್ಟ ಪ್ರೇರಣೆಗಾಗಿಯೂ ಈಶ್ವರನ ಆವಶ್ಯಕತೆ ಬರುವುದಿಲ್ಲ.

ಹೀಗೆ ಒಂದೊಂದಾಗಿ ಕೈಬಿಟ್ಟರೆ ಕಾರಣವಿಲ್ಲದೆಯೇ ಕಾರ್ಯವಾಗಬಹುದೆಂಬ ವಾದ ಏಳುವುದಿಲ್ಲವೆ?—ಎಂದರೆ, ಧ್ವಂಸ ಕಾರ್ಯವಾದರೂ ಸಮವಾಯಿ ಕಾರಣವಿಲ್ಲದೆಯೇ ಅದು ಬರುವಂತೆ ಒಂದು ಕಾರಣವನ್ನು ನಿರಾಕರಿಸಿದ ಮಾತ್ರಕ್ಕೆ, "ಕಾರಣವಿಲ್ಲದೆಯೇ ಕಾರ್ಯ ಬರಲಿ"—ಎಂಬ ಆಪಾದನೆಗೆ ಅವಕಾಶವಿಲ್ಲ. ಆದ್ದರಿಂದ ಕಾರಣವಿಲ್ಲದೆ ಕಾರ್ಯ ಬರುವುದಿಲ್ಲವೆಂದಿಷ್ಟು ಮಾತ್ರ ಹೇಳಲು ಶಕ್ಯ. ಆಯಾ ಕಾರ್ಯವಿಶೇಷಗಳಿಗೆ ತಕ್ಕಂತೆ ಕಾರಣಗಳನ್ನು ವಿಶೇಷ ರೂಪದಲ್ಲೇ ಹೇಳಬೇಕು. ಕಾರ್ಯ—ಕಾರಣ ಶಬ್ದಗಳು ಸಾಮಾನ್ಯವಾಚಕ. ಘಟಪಟಾದಿಗಳು ಕಾರ್ಯ ವಿಶೇಷ. ಮಣ್ಣು, ದಾರ ಮುಂತಾದುವು ಕಾರಣ ವಿಶೇಷ. ಕರ್ತನೂ ಸಹಕಾರಣ ವಿಶೇಷವೇ "ಕಾರಣವಿಲ್ಲದೆ ಕಾರ್ಯವಿಲ್ಲ"—ಎಂದು ಹೇಳಬಹುದು. ಇದು ಸಾಮಾನ್ಯವ್ಯಾಪ್ತಿ. ವಿಶೇಷ ವ್ಯಾಪ್ತಿಯನ್ನು ಹೇಳುವಾಗ, "ದಾರಗಳಿಲ್ಲದೆ ಪಟವಿಲ್ಲ"—ಎಂದು ಹೇಳಬಹುದೇ ಹೊರತು, ದಾರಗಳಿಲ್ಲದೆಯೇ ಘಟ ಬರುವುದರಿಂದ, "ದಾರ

ಗಳಿಲ್ಲದೇ ಕಾರ್ಯವಿಲ್ಲ"—ಎನ್ನುವಂತಿಲ್ಲ. ವ್ಯಾಪ್ತಿಯಲ್ಲಿ ಸಾಮಾನ್ಯ-ವಿಶೇಷಗಳನ್ನು ಮಿಶ್ರಣ ಮಾಡುವುದು ತಪ್ಪಾಗುತ್ತೆ. ಇದರಂತೆ ಕರ್ತೃವೂ ಸಹ ಕಾರಣ ವಿಶೇಷವಾದ್ದರಿಂದ, "ಕರ್ತೃವಿಲ್ಲದೇ ಕಾರ್ಯವಿಲ್ಲ"—ಎಂಬುದು ಸರಿಯಲ್ಲ. ಆದ್ದರಿಂದ ಕರ್ತೃವಿಲ್ಲದಿದ್ದರೂ ಪೃಥಿವ್ಯಾದಿ ಕಾರ್ಯಗಳು ಬರಬಹುದಾದ್ದರಿಂದ ಆ ಅನುಮಾನದಿಂದ ಈಶ್ವರನನ್ನು ಸಾಧಿಸಲು ಸಾಧ್ಯವಿಲ್ಲ.

ಈಶ್ವರನು ಜಗತ್ಕಾರಣನೆಂದು, "ಯತೋವಾ ಇಮಾನಿ ಭೂತಾನಿ ಜಾಯನ್ತೇ"—ಇತ್ಯಾದಿ ಶ್ರುತಿಗಳಲ್ಲಿ ಹೇಳಿರುವುದರಿಂದ, ಅದರ ಬಲದಿಂದ, "ಈಶ್ವರಾನುಮಾನ ಎತಕ್ಕೆ ಪ್ರಮಾಣವಾಗ ಲಾರ"ದೆಂದರೆ, ಹೀಗೆ ಶ್ರುತಿಯಿಂದಲೇ ವ್ಯಾಪ್ತಿಯನ್ನು ಹೇಳುವುದಾದರೆ ಆ ಶ್ರುತಿಯಿಂದಲೇ ಈಶ್ವರನ ಇರುವಿಕೆಯನ್ನು ಅರಿಯಬಹುದಾದ್ದರಿಂದ ಅನುಮಾನ ವ್ಯರ್ಥ. ಶ್ರುತಿ, ಅನುಮಾನ, ಎರಡು ಪ್ರಮಾಣವೂ ಪ್ರವೃತ್ತಿಸಲಿ—ಎಂದರೆ, ಎರಡು ಪ್ರಮಾಣಗಳಿಂದ ಒಂದನ್ನು ಸಾಧಿಸುವುದು ವ್ಯರ್ಥವೇ ಆಗುತ್ತದೆ. ಶಾಸ್ತ್ರವನ್ನು ಬಿಟ್ಟು ಅನುಮಾನದಿಂದಲೇ ಈಶ್ವರನನ್ನು ಸಾಧಿಸಲು ಶಕ್ಯವಾದರೆ ಶಾಸ್ತ್ರ ವ್ಯರ್ಥವಾಗುವುದರಿಂದ ಪ್ರಾಪ್ತವಾದ ಎರಡು ದೋಷಗಳ ಪರಿಹಾರಕ್ಕಾಗಿಯೇ "ಶಾಸ್ತ್ರ ಯೋನಿತ್ವಾಧಿಕರಣ"—ಪ್ರವೃತ್ತವಾಗಿದೆ. ಶಾಸ್ತ್ರವನ್ನು ಬಿಟ್ಟು ಕೇವಲ ಅನುಮಾನದಿಂದಲೇ ಈಶ್ವರನನ್ನು ಸಾಧಿಸಲು ಹೊರಟರೆ ಜೀವ ವಿಲಕ್ಷಣನಾದ ಈಶ್ವರ ಸಿದ್ಧಿಸಲಾರ. ಅಲ್ಲದೆ ಪ್ರೌಢ ಕುತಾರ್ಕಿಕನೊಬ್ಬನು ಕುಯುಕ್ತಿಗಳಿಂದ ಅದನ್ನು ಖಂಡಿಸಿದಾಗ ಅದು ಕೂಡ ದುರ್ಬಲವಾಗಿಬಿಡಬಹುದು. ಆದ್ದರಿಂದ ವೈದಿಕರಿಗೆ ಈಶ್ವರನ ಇರುವಿಕೆಯಲ್ಲಿ ಅನುಮಾನವು ಪ್ರಮಾಣವಾಗಲಾರದು. ಶಾಸ್ತ್ರವೇ ಪ್ರಮಾಣ. ಈಶ್ವರಾನುಮಾನ ನಿರಾಸ ಬ್ರಹ್ಮಸೂತ್ರಕ್ಕೆ ವಿರುದ್ಧವಲ್ಲ. ಅನುಮಾನದಿಂದ ಈಶ್ವರನನ್ನು ಸಾಧಿಸಲೂ ಸಾಧ್ಯವಿಲ್ಲ. ನಿಷೇಧಿಸಲೂ ಸಾಧ್ಯವಿಲ್ಲ—ಎಂಬುದೇ ಸೂತ್ರಕಾರರ ಪರಮ ತಾತ್ಪರ್ಯ. ಇದರಲ್ಲಿ ಮೊದಲನೆಯದು ಶಾಸ್ತ್ರಯೋನಿತ್ವಾಧಿಕರಣದಿಂದ ಸಿದ್ಧ. ಮತ್ತೊಂದು ರಚನಾನುಪಪತ್ತ್ಯಧಿ ಕರಣಸಿದ್ಧ. ಬ್ರಹ್ಮಸೂತ್ರಗಳಲ್ಲಿ "ತರ್ಕಾಪ್ರತಿಷ್ಠಾನಾತ್"—ಎಂಬಲ್ಲಿ ಕೇವಲ ತರ್ಕಕ್ಕೆ ಯಾವ ಸ್ಥಾನವೂ ಇಲ್ಲವೆಂದು ಸ್ಥಾಪಿಸಲಾಗಿದೆ

ಹೀಗೆ ನೈಯಾಯಿಕರ ಈಶ್ವರಾನುಮಾನವನ್ನು ನಿರಾಸ ಮಾಡಿ ಪರಮಾತ್ಮನು ಜಗತ್ತಿಗೆ ನಿಮಿತ್ತ ಕಾರಣನುಮಾತ್ರ ಎಂಬ ಅವರ ಮತ್ತೊಂದು ವಾದವನ್ನು ನಿರಾಸ ಮಾಡುತ್ತಾರೆ. ಅತ್ಯ ದ್ಭುತ ಶಕ್ತಿಯುಳ್ಳವನೂ ಸರ್ವಜಗತ್ತಿಗೂ ನಿಮಿತ್ತಕಾರಣನೂ ಆದ ಈ ಪರಮಾತ್ಮನೇ ಈ ಜಗತ್ತಿಗೆ ಉಪಾದಾನ ಕಾರಣನೂ ಆಗುವುದರಲ್ಲಿ ವಿರೋಧವೇನೂ ಇಲ್ಲ. ಪರಮಾತ್ಮನು ಉಪಾದಾನ ಕಾರಣನಾದರೆ ವಿಕಾರವುಳ್ಳವನಾಗಬೇಕಾಗುತ್ತದೆ—ಎಂಬ ಶಂಕೆಯನ್ನು ಪರಿಹರಿಸುತ್ತಾರೆ. ಸೂಕ್ಷ್ಮ ಚಿದಚಿತ್ತುಗಳನ್ನು ಶರೀರವಾಗಿಯುಳ್ಳ ಪರಮಾತ್ಮನೇ ಸ್ಥೂಲ ಚಿಚಿಚ್ಛರೀರಕನಾಗಿ ಅನೇಕ ವಿಧ ರೂಪವುಳ್ಳವನಾಗುತ್ತಾನೆ.

ಪ್ರಳಯಕಾಲದಲ್ಲಿ ಚಿತ್ ಮತ್ತು ಅಚಿತ್ ವಸ್ತುಗಳು ಸೂಕ್ಷ್ಮಾವಸ್ಥೆಯಲ್ಲಿದ್ದು, ಸೃಷ್ಟಿಯ ಅನಂತರ ಸ್ಥೂಲವಾದ ನಾಮ ಮತ್ತು ರೂಪಗಳನ್ನು ಹೊಂದುತ್ತವೆ. ಇವುಗಳ ಅಂತರ್ಯಾಮಿ ಯಾಗಿರುವ ಪರಮಾತ್ಮನಿಗೆ ಇವು ಶರೀರವಾಗಿರುವುದರಿಂದ ಪ್ರಳಯ ಕಾಲದಲ್ಲಿ ಸೂಕ್ಷ್ಮ ಚಿದಚಿಚ್ಛ ರೀರಕನಾದ ಪರಮಾತ್ಮನು ಸೃಷ್ಟಿಕಾಲದಲ್ಲಿ ಸ್ಥೂಲ ಚಿದಚಿಚ್ಛರೀರಕನಾಗುತ್ತಾನೆ.

ಇವುಗಳಲ್ಲಿ ಅಚಿತ್ತಿಗೆ ಸಾಕ್ಷಾತ್ತಾಗಿ ಸ್ವರೂಪದಲ್ಲೇ ಪರಿಣಾಮವೂ, ಚಿತ್ತಿಗೆ ಧರ್ಮಭೂತ ಜ್ಞಾನದಲ್ಲಿ ಪರಿಣಾಮವೂ ಬರುತ್ತವೆ. ಹೀಗೆ ಮೂರರಲ್ಲೂ ಅದರದರ ಸ್ವರೂಪಕ್ಕೆ ತಕ್ಕಂತೆ ಪರಿ ಣಾಮ ಬರುವುದರಿಂದ ಸರ್ವಶರೀರಿಯಾದ ಪರಮಾತ್ಮನೇ ಎಲ್ಲಕ್ಕೂ ಉಪಾದಾನ ಕಾರಣನಾಗುತ್ತಾನೆ.

ಬ್ರಹ್ಮವೆಂಬುದು ಒಂದು ದೃಷ್ಟಿಯಿಂದ ಅಖಂಡ ತತ್ತ್ವವಾದರೂ ಸವಿಶೇಷವಾದ ದೃಷ್ಟಿಯಲ್ಲಿ ಅದು ಸಖಂಡವೂ ಆಗುತ್ತದೆ. ಕೇವಲ ಪರಬ್ರಹ್ಮತತ್ತ್ವ ನಿರ್ಲಿಪ್ತ ಸ್ವಭಾವದ ಕಾರಣ ಜಗತ್ಕಾರಣ

ವಾಗದು. ಕೇವಲ ಜಡವಾದ ಪ್ರಕೃತಿಯೂ ಜಗತ್ಕಾರಣವಾಗಲಾರದು. ಚೇತನಾ ಚೇತನ ವಿಶಿಷ್ಟ ವಸ್ತುವೇ ಜಗತ್ಕಾರಣ. ಇದೇ ಬ್ರಹ್ಮಪದಾರ್ಥ. ಇದರಲ್ಲಿ ವಿಶೇಷ್ಯಾಂಶವೇ ಸಚ್ಚಿದಾನಂದ ಪರಬ್ರಹ್ಮ. ಚೇತನಾ ಚೇತನಗಳು ವಿಶೇಷಣ ವಿಶೇಷ್ಯವಾದ ಪರಮಾತ್ಮನಲ್ಲಿ ಅಂತರ್ಯಾಮಿತ್ವ ರೂಪದಲ್ಲಿ ಪರಿಣಾಮ ಬಂದರೂ ವಿಕಾರದ ಪ್ರಸಕ್ತಿಯಿಲ್ಲ. ವಿಶೇಷಣವಾದ ಚೇತನಾ ಚೇತನಗಳಲ್ಲಿ ವಿಕಾರಗಳುಂಟು. ಹೀಗೆ ವಿಕಾರಗಳು ಸಾಕ್ಷಾತ್ತಾಗಿ ಚೇತನಾ ಚೇತನಗಳಿಗೆ ಬರುತ್ತವೆ. ಪರಮಾತ್ಮನು ಇವುಗಳ ಅಂತರ್ಯಾಮಿಯಾದ್ದರಿಂದ ಅವನೂ ಇವುಗಳೊಡನೆ ಉಪಾದಾನನಾಗುತ್ತಾನೆ. ಚೇತನಾ ಚೇತನಗಳು ಸೂಕ್ಷ್ಮಾವಸ್ಥೆಯಲ್ಲಿದ್ದಾಗ ಪರಮಾತ್ಮನು ಸೂಕ್ಷ್ಮ ಚಿದಚಿದಂತರ್ಯಾಮಿಯಾಗುತ್ತಾನೆ. ಅವು ಸ್ಥೂಲಾವಸ್ಥೆಯನ್ನು ಹೊಂದಿದಾಗ, ಪರಮಾತ್ಮನೂ ಸಹ ಸೂಕ್ಷ್ಮಾಂತರ್ಯಾಮಿತ್ವವನ್ನು ಬಿಟ್ಟು ಸ್ಥೂಲಾಂತರ್ಯಾಮಿತ್ವವನ್ನು ಪಡೆಯುತ್ತಾನೆ. ಅವಸ್ಥಾಂತರವನ್ನು ಹೊಂದುವುದು ಸಮಾನ ವಾದ್ದರಿಂದ ಪರಮಾತ್ಮನಿಗೂ ಉಪಾದಾನತ್ವ ಸಾಕ್ಷಾತ್ತಾಗಿಯೇ ಬರುತ್ತದೆ. ಪರಿಣಾಮಗಳೆಲ್ಲವೂ ವಿಕಾರವಾಗುವುದಿಲ್ಲ. ಮುದ್ದೆಯಾಗಿದ್ದ ಮಣ್ಣು ಘಟವಾದಾಗ ಪೂರ್ವರೂಪವನ್ನು ಕೆಡಿಸಿಕೊಂಡು ಉತ್ತರರೂಪವನ್ನು ತಾಳುವುದರಿಂದ ಇದು ವಿಕಾರವಾಗುತ್ತದೆ. ಪರಮಾತ್ಮನ ಈ ಅಂತರ್ಯಾಮಿ ತ್ವಾವಸ್ಥೆಯಿಂದ ಮೂಲರೂಪಕ್ಕೆ ಯಾವ ಧಕ್ಕೆಯೂ ಇಲ್ಲವಾದ್ದರಿಂದ ನಿರ್ವಿಕಾರತ್ವಕ್ಕೆ ಯಾವ ತೊಂದರೆಯೂ ಇಲ್ಲ. ಹೀಗೆ ಪರಮಾತ್ಮನಿಗೆ ನಿರ್ವಿಕಾರತ್ವವೂ ಉಪಾದಾನತ್ವವೂ ಹೊಂದುತ್ತದೆ.

ಲೋಕದಲ್ಲಿ ಘಟಾದಿಗಳಲ್ಲಿ ಮಣ್ಣು ಉಪಾದಾನವಾಗಿಯೂ ಕುಂಬಾರನು ನಿಮಿತ್ತವಾಗಿಯೂ ಇರುವುದು. ಪ್ರಕೃತದಲ್ಲಿ ಪರಮಾತ್ಮನೊಬ್ಬನೇ ನಿಮಿತ್ತಕಾರಣವಾಗಿಯೂ, ಉಪಾದಾನ ಕಾರಣ ವಾಗಿಯೂ ಆಗಲು ಸಾಧ್ಯವೆ?—ಎಂದರೆ .ನಿಮಿತ್ತ ಕಾರಣನಾಗಿರುವ ಚೇತನನೇ ತನ್ನ ಪ್ರಯತ್ನದಿಂದ ತಾನು ಪಡೆದ ಸುಖಾದಿ ಗುಣಗಳಿಗೆ ತಾನೇ ಉಪಾದಾನ ಕಾರಣನೂ ಆಗುತ್ತಾನೆ. ಈಶ್ವರನೂ ಸಹ ವಿಭುವಾದ್ದರಿಂದ ಮೂರ್ತವಾದ ಘಟ-ಪಟಾದಿಗಳೊಂದಿಗೆ ತನ್ನ ಸಂಯೋಗವನ್ನು ತಾನೇ ಮಾಡುವು ದರಿಂದ ಹೀಗೆಂಯೇ ಘಟೇಶ್ವರ ಸಂಯೋಗಕ್ಕೆ ನಿಮಿತ್ತವೂ ಉಪಾದಾನವೂ ಆಗುತ್ತಾನೆ.

ಪರಮಾತ್ಮನೇ ಸರ್ವಜಗತ್ತಿಗೂ ಉಪಾದಾನನೆಂದು "ತದಾತ್ಮಾನಂ ಸ್ವಯಂ ಅಕುರುತ"— ಇತ್ಯಾದ್ಯುಪನಿಷತ್ತುಗಳಲ್ಲಿ ಪ್ರಸಿದ್ಧ. "ನಿರವದ್ಯಂ ನಿರಂಜನಂ"—ಎಂದು ಪರಮಾತ್ಮನು ಸಕಲ ದೋಷಗಳಿಗೂ ದೂರನೆಂಬುದೂ ಪ್ರಸಿದ್ಧ. ಈ ಎರಡನ್ನೂ ಸಮನ್ವಯಗೊಳಿಸುವ ದೃಷ್ಟಿಯಿಂದ ಪರಮಾತ್ಮನು ಚೇತನಾ ಚೇತನ ಶರೀರಕನಾಗಿರುವುದರಿಂದ ಅವನೇ ಎಲ್ಲಕ್ಕೂ ಉಪಾದಾನ ಕಾರಣನೆಂದು ಆಚಾರ್ಯರು ಹೇಳಿರುವರು. ಇದರಿಂದ ವಿಕಾರಾದಿಗಳು ಪರಮಾತ್ಮನ ಶರೀರವಾದ ಅಚಿತ್ತಿನಲ್ಲಿ ಉಳಿಯುತ್ತವೆ. ಪರಮಾತ್ಮನು ಅಂತರ್ಯಾಮಿಯಾಗಿರುವುದರಿಂದ ಹಿಂದೆ ಹೇಳಿದ ರೀತಿಯಲ್ಲಿ ಅದರ ಉಪಾದಾನನೂ ಆಗುತ್ತಾನೆ. ಹೀಗೆ ಸರ್ವಶ್ರುತಿ ಸಮನ್ವಯ ಈ ಸಿದ್ಧಾಂತದಲ್ಲೇ ಸಾಧ್ಯ.

ಪರಮಾತ್ಮನಿಗೆ ಜಗದುಪಾದಾನತ್ವವನ್ನು ಹೇಳಬೇಕಾದರೆ ಇಂತಹ ಮಾಧ್ಯಮ ಎಲ್ಲರಿಗೂ ಅವಶ್ಯಕ. ಕೆಲವರು ಬ್ರಹ್ಮ ಅವಿದ್ಯಾವಿಶಿಷ್ಟವಾಗಿರುವುದೆಂದೂ, ಮತ್ತೆ ಕೆಲವರು ಬ್ರಹ್ಮ ಅವಿದ್ಯೆ ಯಿಂದ ಉಪಹಿತವಾಗಿರುವುದೆಂದೂ, ಬೇರೆ ಕೆಲವರು ಬ್ರಹ್ಮ ಮೂರು ಶಕ್ತಿಗಳಿಂದ ಕೂಡಿರುವು ದೆಂದೂ, ಅಂಗೀಕರಿಸಿ "ಏಕಮೇವಾದ್ವಿತೀಯಂ"—ಇತ್ಯಾದಿಯಾದ ಐಕ್ಯಶ್ರುತಿ ಆ ಅವಿದ್ಯಾದಿ ವಿಶಿಷ್ಟವಾದ ಬ್ರಹ್ಮನ ಏಕತ್ವವನ್ನು ಬೋಧಿಸುತ್ತದೆ ಎಂದು ಹೇಳಿರುವರು.

ಇದರಲ್ಲಿ ಮೊದಲನೆಯದು ನಿರ್ವಿಶೇಷಾದ್ವೈತಿಗಳಾದ ಶಾಂಕರರ ಪಕ್ಷ. ಶುದ್ಧ ಬ್ರಹ್ಮ ನಿರ್ವಿಕಾರವಾದುದರಿಂದ ಅದಕ್ಕೆ ಜಗದುಪಾದಾನತ್ವ ಸ್ವತಃ ಬರುವಂತಿಲ್ಲ. ಅವಿದ್ಯೆಯಿಂದ ಕೂಡಿದ ಬ್ರಹ್ಮವೇ ಉಪಾದಾನವೆಂದು ಅವರು ಹೇಳುವರು.

ಎರಡನೆಯ ಪಕ್ಷ ಭಾಸ್ಕರಾಚಾರ್ಯರದು—ಇವರಲ್ಲಿ ಜಡವಾದ ಉಪಾಧಿ ಸತ್ಯವೆಂಬುದು ಮೊದಲನೆಯ ಪಕ್ಷಕ್ಕಿಂತಲೂ ವಿಶೇಷ

ಮೂರನೆಯ ಪಕ್ಷ ಯಾದವ ಪ್ರಕಾಶರದು—ಬ್ರಹ್ಮದಲ್ಲಿ ಶಕ್ತಿತ್ರಯವಿರುವುದೆಂದೂ ಚಿಚ್ಛಕ್ತಿ ವಿಶಿಷ್ಟಾಂಶ ಚಿದಾಕಾರವಾಗಿಯೂ, ಅಚಿಚ್ಛಕ್ತಿ ವಿಶಿಷ್ಟಾಂಶ ಅಚಿದಾಕಾರವಾಗಿಯೂ, ಈಶ್ವರ ಶಕ್ತಿ ವಿಶಿಷ್ಟಾಂಶ ಈಶ್ವರಾಕಾರವಾಗಿಯೂ ಪರಿಣಮಿಸುತ್ತದೆ ಹೀಗೆ ಶಕ್ತಿತ್ರಯ ವಿಶಿಷ್ಟ ಬ್ರಹ್ಮ ಜಗತ್ತಿಗೆ ಉಪಾದಾನ ಎಂದು ಅವರು ಹೇಳುವರು.

ಒಟ್ಟಿನಲ್ಲಿ ಶುದ್ಧ ಬ್ರಹ್ಮಕ್ಕೆ ಜಗದುಪಾದಾನತ್ವ ಬರಲು ಸಾಧ್ಯವಿಲ್ಲವೆಂಬುದೂ, ಇದಕ್ಕಾಗಿ ಬ್ರಹ್ಮಕ್ಕೆ ಸತ್ಯ ಅಥವಾ ಮಿಥ್ಯೆಯಾದ ಮತ್ತೊಂದು ವಸ್ತು ಆವಶ್ಯಕವೆಂಬುದೂ, ಹೀಗೆ ಮತ್ತೊಂದು ವಸ್ತುವನ್ನು ಒಪ್ಪಿದ್ದರೂ, "ಏಕಮೇವ"—ಇತ್ಯಾದಿ ಶ್ರುತಿಗಳಿಗೆ ವಿರೋಧವಿಲ್ಲವೆಂಬುದೂ ಎಲ್ಲರಿಗೂ ಸಮಾನ.

ಹೀಗಿರುವಾಗ ಶಾಸ್ತ್ರದಲ್ಲಿ ಹೇಳಿದಂತೆ ಚೇತನಾಚೇತನ ವರ್ಗವೆಲ್ಲವೂ ನಿತ್ಯ ಮತ್ತು ಪರಮಾತ್ಮನ ಶರೀರಭೂತ, ಜಗತ್ಸೃಷ್ಟ್ಯವಾದ ಪರಮಾತ್ಮನು ಚೇತನಾ ಚೇತನರ ವಿಲಕ್ಷಣ ಪರಿಣಾಮಗಳೆಲ್ಲಕ್ಕೂ ಕಾರಣ. ಇಂತಹ ಚಿದಚಿದ್ವಿಶಿಷ್ಟನಾಗಿಯೇ ಅವನು ಇರುವನು ಇತ್ಯಾದಿಯಾಗಿ ಶಾಸ್ತ್ರಸಿದ್ಧವಾದ್ದನ್ನು ತಳ್ಳಿಹಾಕದೆ ಶಾಸ್ತ್ರೋಕ್ತವೆಲ್ಲವನ್ನೂ ಪೂರ್ತಿಯಾಗಿ ಒಪ್ಪಿ ಸಮನ್ವಯಪಡಿಸಿರುವ ಸಿದ್ಧಾಂತ ನಮ್ಮದು. ಉಳಿದವರು ಶಾಸ್ತ್ರೋಕ್ತವನ್ನು ಅಂಶತಃ ಒಪ್ಪಿದ ಹಾಗಾಯಿತು ಮೇಲೆ ಹೇಳಿದ ಮತಗಳಲ್ಲಿ ಯಾದವ ಪ್ರಕಾಶರು ಆಯಾ ಶಕ್ತಿವಿಶಿಷ್ಟವಾಗಿರುವ ಪರಬ್ರಹ್ಮವು ನಿಜಸ್ವರೂಪದಿಂದಲೇ ಚಿದಚಿದೀಶ್ವರ ರೂಪವಾಗಿ ಪರಿಣಮಿಸುತ್ತದೆಂದು ಹೇಳಿರುವರು. ಇದು ಯುಕ್ತವಲ್ಲ. ಏಕೆಂದರೆ, ಚಿದಚಿದೀಶ್ವರ—ಎಂಬ ತತ್ತ್ವತ್ರಯದಲ್ಲಿ ಅಡಗಿರುವ ಈಶ್ವರ ತತ್ತ್ವಕ್ಕಿಂತಲೂ ಬೇರೆಯಾದ ಪರಬ್ರಹ್ಮತತ್ತ್ವವಿಲ್ಲವೆಂತಲೂ, ಆ ಈಶ್ವರನು ಸಕಲ ದೋಷದೂರನೂ ನಿರ್ವಿಕಾರನೂ ಆಗಿರುವನೆಂದೂ ಶ್ರುತಿ ಸಿದ್ಧವಾಗಿದೆ. ಆದ್ದರಿಂದ ಈ ಮೂರಕ್ಕಿಂತಲೂ ಬೇರೆ ಪರಬ್ರಹ್ಮವೂ ಇಲ್ಲ ಅದು ಪರಿಣಾಮಿಯೂ ಅಲ್ಲ. ಬ್ರಹ್ಮಕ್ಕಿಂತಲೂ ಭಿನ್ನವಾದ ಅದರ ಶಕ್ತಿಯೇ ಪರಿಣಮಿಸುವುದರಿಂದ ಬ್ರಹ್ಮ ನಿರ್ವಿಕಾರವಾಗಿಯೇ ಉಳಿಯುವುದೆಂದರೆ, ಆಗ ಜಗತ್ತಿಗೆ ಬ್ರಹ್ಮನ ಶಕ್ತಿ ಉಪಾದಾನವೇ ಹೊರತು ಬ್ರಹ್ಮ ಜಗತ್ತಿಗೆ ಉಪಾದಾನವಲ್ಲವೆಂದಾಗುತ್ತೆ. ಬ್ರಹ್ಮಕ್ಕೂ ಬ್ರಹ್ಮ ಶಕ್ತಿಗೂ ಭೇದವಿರುವಂತೆ ಅಭೇದವೂ ಇರುವುದರಿಂದ ಬ್ರಹ್ಮಶಕ್ತಿ ಉಪಾದಾನವಾದರೆ ಬ್ರಹ್ಮವೂ ಉಪಾದಾನವಾಗುತ್ತದೆಯೆಂದು ಪರಸ್ಪರ ವಿರುದ್ಧವಾದ ಭೇದಾಭೇದವನ್ನೊಪ್ಪಿದರೆ "ಸಪ್ತಭಂಗೀ"—ಎಂಬ ಜೈನರ ನೀತಿಯನ್ನು ಖಂಡಿಸುವಂತೆಯೇ ಇಲ್ಲ.

ಇವರ ರೀತಿಯಾಗಿ—ಪ್ರಪಂಚವೆಲ್ಲವೂ ಬ್ರಹ್ಮದಿಂದ ಹುಟ್ಟಿದ್ದರಿಂದ ಬ್ರಹ್ಮದ ಚೈತನ್ಯವೂ ಅದರಲ್ಲಿ ಇದ್ದೇ ಇರುವುದು. ಆದರೂ ಆ ಚೈತನ್ಯ ಅವ್ಯಕ್ತವಾಗಿರುವುದರಿಂದ ಪಾರ್ಥಿವ ಪದಾರ್ಥವಾದ ರತ್ನದಲ್ಲಿ ಪೃಥಿವಿಯ ಗುಣವಾದ ಗಂಧ ಕಾಣದಿರುವಂತೆ ಕಾಣದೇ ಇರುತ್ತದೆ. ಚಿತ್, ಅಚಿತ್, ಈಶ್ವರ ಮೂರೂ ಬ್ರಹ್ಮ ಎಂದು "ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮ ಏತತ್"—ಎಂದು ಶ್ರುತಿಯೂ ಸಹ ಹೇಳುತ್ತದೆ. "ಬ್ರಹ್ಮ ದಾಶಾಃ ಬ್ರಹ್ಮದಾಸಾಃ ಬ್ರಹ್ಮೇಮೇ ಕಿತವಾ ಉತ"—ಎಂಬ ಶ್ರುತಿ ಬೆಸ್ತರು ಮುಂತಾದವರೂ ಬ್ರಹ್ಮವೇ ಎಂದೂ ಹೇಳುತ್ತದೆ. ಆದ್ದರಿಂದ ಅನೇಕ ವಿಧ ಅಚಿನ್ತ್ಯಪರಿಣಾಮಗಳನ್ನು ಹೊಂದಬಲ್ಲ ಬ್ರಹ್ಮ ಎಲ್ಲ ವಸ್ತುಗಳಲ್ಲೂ ಅನುವೃತ್ತವಾಗಿಯೇ ಇರುವುದು—ಎಂಬ ಇವರ ಈ ವಾದ-ಬ್ರಹ್ಮ ಪ್ರತ್ಯಕ್ಷಾತೀತವಾದ್ದರಿಂದ ಬ್ರಹ್ಮಕ್ಕೂ ಜಗತ್ತಿಗೂ ಅನೇಕ ವೈಲಕ್ಷಣ್ಯಗಳನ್ನು ಹೇಳುವ ಎಲ್ಲ ಶ್ರುತಿಗಳಿಗೂ ವಿರುದ್ಧವಾದ್ದರಿಂದ ಸಮಂಜಸವಲ್ಲ. ಬ್ರಹ್ಮ ಪ್ರತ್ಯಕ್ಷಾತೀತವೆಂದು ಎಲ್ಲರೂ ಒಪ್ಪಿರುವುದರಿಂದ ಸದ್ರೂಪವಾದ

ಬ್ರಹ್ಮವನ್ನು ಚಕ್ಷುರಾದಿ ಇಂದ್ರಿಯಗಳಿಂದ ಗ್ರಹಿಸಲು ಹೇಗೆ ಶಕ್ಯ? ಇದರಂತೆಯೇ ಜಗನ್ಮಿಥ್ಯಾತ್ವ ಸಾಧನೆ ಮಾಡುವ ರಭಸದಲ್ಲಿ ಶಾಂಕರರು ಪ್ರತಿಪಾದಿಸಿದ, "ಸನ್ಮಾತ್ರಗ್ರಾಹಿ ಪ್ರತ್ಯಕ್ಷಂ"—ಎಂಬ ವಾದವೂ ನಿರಸನೀಯ.

ಪ್ರಾಚೀನರ ಸ್ವರೂಪ ಪರಿಣಾಮವಾದದ ಭಂಗ ಆ ಪ್ರಾಚೀನ ಮತರೀತ್ಯಾ, ನಿರವಯವ ದ್ರವ್ಯವಾದ ಪ್ರಕೃತಿಯ ಏಕದೇಶದಿಂದ ಮಹದಾದಿ ಪೃಥಿವ್ಯಂತವಾಗಿ ಅನೇಕ ಪರಿಣಾಮಗಳಾಗುತ್ತವೆ. ಪರಸ್ಪರ ವಿಚಿತ್ರವಾದ ಅವು ಕೊನೆಯಲ್ಲಿ ಪ್ರಕೃತಿಯಲ್ಲೇ ಲಯವಾಗುತ್ತವೆ. ಹೀಗೆಯೇ ಬ್ರಹ್ಮ ಸಹ ಲೀಲಾರಸಾನುಭವಕ್ಕಾಗಿ ಜೀವ ರೂಪವಾಗಿ ಪರಿಣಮಿಸುತ್ತದೆಯೆಂಬುದೂ ಅಸಾರ. ಹೇಗೆಂದರೆ— ಬ್ರಹ್ಮವು ತನ್ನ ಅನಂತ ಕಷ್ಟಗಳಿಗೆ ತಾನೇ ಪ್ರವರ್ತಿಸುತ್ತದೆಯೆಂದಾಗುವುದರಿಂದ, ಪರಮಾತ್ಮನಿಗೆ ಸದೋಷಾಕರತ್ವ ಬಂದು ಎಲ್ಲ ಶಾಸ್ತ್ರಗಳ ವಿರೋಧ ಪ್ರಾಪ್ತವಾಗುತ್ತದೆ.

**ಭಾಸ್ಕರರ ಉಪಾಧಿಪರಿಣಾಮವಾದದ ನಿರಸನ,** ಅವಿದ್ಯೆಯೆಂಬ ಸತ್ಯವಾದಉಪಾಧಿಯಿಂದ ಅನೇಕವಾದ ಪರಬ್ರಹ್ಮ ಜೀವರಾಗಿ ಅನೇಕ ವಿಧವಾದ ಸುಖ ದುಃಖಗಳನ್ನು ಅನುಭವಿಸುತ್ತದೆ. ಆ ಉಪಾಧಿಯೂ ಸಹ ಅನಾದಿಕಾಲದಿಂದಲೂ ಇರುವುದು. ಆ ಜಡವಾದ ಉಪಾಧಿಯು ಬ್ರಹ್ಮಕ್ಕಿಂತಲೂ ಅತ್ಯಂತ ಭಿನ್ನವಲ್ಲ. ಭಿನ್ನಾಭಿನ್ನ ಎಂಬ ಭಾಸ್ಕರರ ಮತದಲ್ಲಂತು ದುಃಖ ಸಾಕ್ಷಾತ್ತಾಗಿ ಬ್ರಹ್ಮದಲ್ಲೇ ಪ್ರಾಪ್ತವಾಗುತ್ತದೆ. ಸೌಭರಿಯೇ ಮುಂತಾದವರು—ಅನೇಕ ಶರೀರವನ್ನು ತಾಳಿದಾಗ ಶರೀರಾದಿ ರೂಪವಾದ ಉಪಾಧಿ ಭಿನ್ನಾಭಿನ್ನವಾಗಿದ್ದರೂ, ಸುಖಾದ್ಯನುಭವ ಮಾತ್ರ ಆ ಶರೀರ ಒಂದರಲ್ಲೇ ಆಗದೆ ಆ ಒಬ್ಬರಿಗೇ ಎಲ್ಲಾ ಶರೀರದ ಸುಖಾನುಭವ ಹೇಗೆ ಆಗುತ್ತಿತ್ತು? ಅದರಂತೆ ಉಪಾಧಿ ಭೇದವಿದ್ದರೂ ಅನುಭವ ಮಾತ್ರ ಒಬ್ಬನಿಗೆ ಆಗಬೇಕಾದುದರಿಂದ ಬ್ರಹ್ಮಕ್ಕೆ ದುಃಖ ಅನಿವಾರ್ಯ. ಪರಮಾತ್ಮನ ಅವತಾರಗಳಲ್ಲೂ ಶರೀರ ಭೇದವಿದ್ದರೂ, ಎಲ್ಲ ವ್ಯವಹಾರಗಳೂ ಪರಮಾತ್ಮನಿಗೇ ಸೇರಿವೆಯಷ್ಟೆ! ಸರ್ವಜ್ಞನಾದ ಪರಮಾತ್ಮನು, "ನಾನೊಬ್ಬನೇ ಇರುವನು. ಜೀವ ಬೇರೆಯಲ್ಲ"— ಎಂದು ತಿಳಿಯುವನಾದ್ದರಿಂದ, ಜೀವ ರೂಪದಲ್ಲಿ ಆಗುವ ಸಕಲ ದುಃಖಗಳಿಂದ ತಾನು ದುಃಖಿಸದೇ ಹೇಗೆ ಇರುವನು? ಆದ್ದರಿಂದ ದುಃಖ ಅನಿವಾರ್ಯ.

**ಬ್ರಹ್ಮವಿವರ್ತವಾದವೆಂದು ಪ್ರಸಿದ್ಧವಾದ ಶಾಂಕರರ ನಿರ್ವಿಶೇಷವಾದದ ನಿರಾಸ—** ಅವಿದ್ಯೆಯಿಂದ ತಿರೋಹಿತವಾದ ಬ್ರಹ್ಮದಲ್ಲಿ ಈ ಜಗತ್ತೆಲ್ಲವೂ ಆರೋಪಿತವಾಗಿದೆ.—ಯೆಂಬುದೂ ಸರಿಯಲ್ಲ. ಬ್ರಹ್ಮದ ಪ್ರಕಾಶದಿಂದಲೇ ಬಾಧಿತವಾಗುವ ಆ ಅವಿದ್ಯೆ ಆ ಪರಬ್ರಹ್ಮನಲ್ಲಿ ಇರಲು ಹೇಗೆ ಸಾಧ್ಯ?

ಹಗ್ಗವನ್ನು ನೋಡಿ 'ಹಾವು'—ಎಂದು ಭ್ರಮಿಸಿದಾಗ ಆ ಭ್ರಮಕ್ಕೆ ಹಗ್ಗ ಆಧಾರವಾಗಿರುತ್ತೆ. ಹಾವು ಆರೋಪಿತವಾಗಿರುತ್ತೆ. ಈ ತೋರುವಿಕೆಗೆ ದೃಷ್ಟಿ ದೋಷಗಳೇ ಕಾರಣ. ಇದರಂತೆ ನಿತ್ಯ ಶುದ್ಧ ಬುದ್ಧ ಮುಕ್ತ ಸ್ವರೂಪವುಳ್ಳ ಪರಬ್ರಹ್ಮಕ್ಕಿಂತಲೂ ಬೇರೆ ಯಾವ ವಸ್ತುವೂ ಇಲ್ಲ. ಆ ಪರ ಬ್ರಹ್ಮ ಅವಿದ್ಯೆಯಿಂದ ಮರೆಯಾಗಿ ಜಗತ್ತೆಲ್ಲವೂ ಅದರಲ್ಲಿ ಅಧ್ಯಸ್ತವಾಗಿ ತೋರುತ್ತದೆ. ಆದ್ದರಿಂದ ಜಗತ್ತಾಗಲಿ ಜೀವಾತ್ಮನಾಗಲಿ ವಾಸ್ತವಿಕವಾಗಿ ಇಲ್ಲವೇ ಇಲ್ಲ. ಎಂದು ಅವರು ಹೇಳುವರು.

ಆದರೆ, ಅಧಿಷ್ಠಾನ ಜ್ಞಾನವೇ ಭ್ರಮ ನಿವರ್ತಕ ಎಂಬುದು ಸರ್ವರಿಗೂ ವಿದಿತ. ಪ್ರಕೃತದಲ್ಲಿ ಅಧಿಷ್ಠಾನವಾದ ಬ್ರಹ್ಮ ಸದಾ ಸ್ವಪ್ರಕಾಶಸ್ವರೂಪ. ಇಂತಹ ನಿತ್ಯಶುದ್ಧ ಸ್ವಪ್ರಕಾಶವಾದ ಬ್ರಹ್ಮದಲ್ಲಿ ಅವಿದ್ಯೆ ಇರಲು ಹೇಗೆ ಸಾಧ್ಯ? ಅದು ಆ ಬ್ರಹ್ಮವನ್ನು ಮರೆಮಾಡುವುದಾದರೂ ಹೇಗೆ?

ನಿರ್ವಿಶೇಷವಾದ ಈ ಬ್ರಹ್ಮದಲ್ಲಿ ಅವಿದ್ಯೆಯನ್ನು ನಿವೃತ್ತಿಗೊಳಿಸುವಂತಹ ವೃತ್ತಿರೂಪ ಜ್ಞಾನಕ್ಕೆ ವಿಷಯವಾಗುವ ತನ್ನ ಸ್ವರೂಪಕ್ಕಿಂತಲೂ ಅಧಿಕವಾದ ಯಾವ ವಿಶೇಷವೂ ಇಲ್ಲವಷ್ಟೆ!

ಭ್ರಮೆ ಬರಬೇಕಾದರೆ ಅಧಿಷ್ಠಾನ ಗೊತ್ತಿರಬೇಕು. ಸರ್ಪಭ್ರಮೆಗೆ ಅಧಿಷ್ಠಾನವಾದ ಹಗ್ಗವೇ ಕಣ್ಣಿಗೆ ಕಾಣದಿದ್ದರೆ ಸರ್ಪಭ್ರಮೆ ಬರಲು ಹೇಗೆ ಸಾಧ್ಯ? ಪರಬ್ರಹ್ಮ ಜಗದ್ಭ್ರಮೆಗೆ ಅಧಿಷ್ಠಾನವಾದುದರಿಂದ ಅದರ ಪ್ರಕಾಶ ಭ್ರಮೆಗೆ ಕಾರಣವೇ ಹೊರತು ಭ್ರಮೆಗೆ ವಿರೋಧಿಯಲ್ಲ. ಎಂದರೆ, ಹಾಗಾದರೆ ಆ ಭ್ರಮೆಯನ್ನು ಯಾವ ಜ್ಞಾನ ನೀಗಿಸುತ್ತದೆ? ಪರಬ್ರಹ್ಮವಿಷಯಕವಾದ ವೃತ್ತಿರೂಪ ಜ್ಞಾನವೇ ನಿವರ್ತಕವೆಂದರೆ, ಬ್ರಹ್ಮ ನಿರ್ವಿಶೇಷವಾದ್ದರಿಂದ ಅದರ ಸ್ವರೂಪ ಪ್ರಕಾಶಕ್ಕಿಂತಲೂ ಅಧಿಕವಾದ ಯಾವ ಅಂಶ ವೃತ್ತಿಜ್ಞಾನದಲ್ಲಿ ವಿಷಯವಾಗಲು ಸಾಧ್ಯ? ಹಾಗಾದ ಮೇಲೆ ವೃತ್ತಿಜ್ಞಾನ ಹೇಗೆ ಭ್ರಮನಿವರ್ತಕವಾದೀತು?

ರಜ್ಜು ಸರ್ಪ ಭ್ರಮಾದಿಗಳಲ್ಲಿ ರಜ್ಜುವಿನಲ್ಲಿ ಮೊದಲು ಸಾಮಾನ್ಯಾಕಾರ ಮಾತ್ರ ತೋರುತ್ತದೆ. "ರಜ್ಜುತ್ವ"—ರೂಪ ವಿಶೇಷ ತೋರುವುದಿಲ್ಲ. ಆದುದರಿಂದ ಭ್ರಮೆ ಬರುತ್ತೆ. ಆ "ರಜ್ಜುತ್ವ" ಗೃಹೀತವಾದಾಗ ಭ್ರಮೆ ನಿವೃತ್ತವಾಗುತ್ತೆ. ನಿರ್ವಿಶೇಷವಾದ ಬ್ರಹ್ಮದಲ್ಲಿ ಮೊದಲು ತೋರದೇ ಇದ್ದು ಅನಂತರ ತೋರುವ ಆಕಾರ ಯಾವುದೂ ಇರಲು ಸಾಧ್ಯವಿಲ್ಲವಾದ್ದರಿಂದ ಭ್ರಮೆ ಬರಲೂ, ಅಥವಾ ನಿವೃತ್ತಿಯಾಗಲೂ ಸಾಧ್ಯವಿಲ್ಲ.

ವೃತ್ತಿಜ್ಞಾನ ಅಧಿಕ ವಿಷಯಕವಾಗಿರುವುದರಿಂದ ಭ್ರಮನಿವರ್ತಕವಲ್ಲ. ಔಷಧಿಗಳು ವ್ಯಾಧಿಯನ್ನು ನಿವರ್ತಿಸುವಂತೆ ತನ್ನ ಸ್ವರೂಪಮಾತ್ರದಿಂದಲೇ ನಿವೃತ್ತಿಗೊಳಿಸುತ್ತದೆಯೆಂದರೆ, ಆವಾಗ ಜಗತ್ತು ರಜ್ಜು ಸರ್ಪದಂತೆ ಜ್ಞಾನ ನಿವರ್ತ್ಯವಾಗುತ್ತೆ ಎಂಬುದು ತಪ್ಪಾಗುತ್ತದೆ. ಇದರಿಂದ ಜಗತ್ತು ವ್ಯಾಧ್ಯಾದಿಗಳಂತೆ ಸತ್ಯವಾಗಬೇಕಾಗುತ್ತೆ. ಆದಕಾರಣ ಬ್ರಹ್ಮವಿವರ್ತವಾದ ಯುಕ್ತವಲ್ಲ.

**ತಿರೋಧಾನಾನುಪಪತ್ತಿ**—ಕೇವಲ ಪ್ರಕಾಶ ಮಾತ್ರ ಸ್ವರೂಪವಾದ ಬ್ರಹ್ಮಕ್ಕೆ ತಿರೋಧಾನವಾದರೆ ಬ್ರಹ್ಮವೇ ಇಲ್ಲದಾಗುತ್ತೆ. ಹೇಗೆಂದರೆ, ಭಾವರೂಪವಾದ ಪದಾರ್ಥ ತೋರದೇ ಇರಬೇಕಾದರೆ ಅದಕ್ಕೆ ಎರಡೇ ಕಾರಣಗಳು. ಒಂದು ಅದರ ತೋರಿಕೆ ಇಲ್ಲದಿರಬೇಕು, ಅಥವಾ ಅದು ಉತ್ಪನ್ನವಾಗದಿರಬೇಕು. ಸ್ವಪ್ರಕಾಶವಾದ ಬ್ರಹ್ಮ ತೋರದಿರಲು ಸಾಧ್ಯವಿಲ್ಲ. ಬ್ರಹ್ಮನಿತ್ಯವಾದ್ದರಿಂದ ಎರಡನೆಯ ಪಕ್ಷವೂ ಅಂಗೀಕರಿಸತಕ್ಕದ್ದಲ್ಲ. ಆದ್ದರಿಂದ ಬ್ರಹ್ಮವೇ ಅಪ್ರಾಮಾಣಿಕವೆಂದಾಗುತ್ತೆ.

ಮಿಥ್ಯಾಭೂತವಾದ ದೋಷದಿಂದ ಪರಬ್ರಹ್ಮಕ್ಕೆ ಜಗತ್ತಿನ ಭ್ರಮೆ ಬರುತ್ತೆ—ಎಂದು ಹೇಳಿದರೆ, ಆವಾಗ ಬ್ರಹ್ಮ ಸತ್ಯವಾಗಬೇಕಾದ ನಿಯಮವೇನು?

ಬ್ರಹ್ಮವೇ ಅವಿದ್ಯೆಯಿಂದ ಜೀವ ಜಗದೀಶ್ವರಾದಿ ಭ್ರಮೆಗಳನ್ನು ಅನುಭವಿಸುತ್ತದೆ. ಈ ಅವಿದ್ಯೆಗೆ ಎರಡು ಶಕ್ತಿಯಿದೆ. ಒಂದು ಬ್ರಹ್ಮ ಸ್ವರೂಪವನ್ನು ಮರೆಮಾಡುವುದು. ಮತ್ತೊಂದು ವಿಶ್ವಭ್ರಮೆಯನ್ನು ಹುಟ್ಟಿಸುವುದು—ಎಂದು ಬ್ರಹ್ಮ ವಿವರ್ತವಾದಿಗಳು ಹೇಳುವರು. ಇದು ಯಾವುದೂ ಸರಿಯಲ್ಲ. ಭ್ರಮೆ ಬರಬೇಕಾದರೆ, ಅಧಿಷ್ಠಾನ ಜ್ಞಾನ, ಸಾಧಾರಣ ಧರ್ಮಜ್ಞಾನ, ಆರೋಪಿತವಾಗುವ ವಸ್ತುವಿನ ಸ್ಮರಣೆ, ದೋಷ ಇವು ಆವಶ್ಯಕ. ರಜ್ಜುವಿನಲ್ಲಿ ಸರ್ಪಭ್ರಮೆ ಬಂದಾಗ, ರಜ್ಜು ಅಧಿಷ್ಠಾನ, ಉದ್ದವಾಗಿರುವಿಕೆ ಸಾಧಾರಣಧರ್ಮ ಸರ್ಪ ಆರೋಪಿತ, ಬೆಳಕಿನ ಕೊರತೆ ಮುಂತಾದವು ದೋಷ. ಈ ನಾಲ್ಕೂ ಸತ್ಯವಾಗಿದ್ದರೆ ಮಾತ್ರ ರಜ್ಜು ಸರ್ಪಭ್ರಮೆ ಬರುತ್ತೆ. ಇದರಲ್ಲಿ ಅಧಿಷ್ಠಾನ ಮಾತ್ರ ಸತ್ಯ. ಉಳಿದದ್ದೆಲ್ಲವೂ ಮಿಥ್ಯೆ ಎಂದು ಯಾರೂ ಹೇಳರು. ಪ್ರಕೃತದಲ್ಲಿ ಬ್ರಹ್ಮ ಒಂದೇ ಸತ್ಯ. ಅವಿದ್ಯೆ ಮುಂತಾದುದೆಲ್ಲವೂ ಅಸತ್ಯವೆಂದು ಅವರು ಹೇಳುತ್ತಾರೆ. ದೋಷವಾದ ಅವಿದ್ಯೆ ಮಿಥ್ಯೆಯಾದರೂ ಭ್ರಮೆ ಬರಬಹುದಾದ್ದರಿಂದ ಬ್ರಹ್ಮವನ್ನು ಸತ್ಯವೆಂದು ಏಕೆ ಒಪ್ಪಬೇಕು?

ಅಧಿಷ್ಠಾನವಾದ ಬ್ರಹ್ಮ ಮಿಥ್ಯೆಯಾದರೆ, ಆ ಬ್ರಹ್ಮ ಅಧ್ಯಸ್ತವಾಗಬೇಕಾಗುತ್ತದೆ. ಆ

ಅಧ್ಯಾಸಕ್ಕೆ ಮತ್ತೊಂದು ಅಧಿಷ್ಠಾನ ಬೇಕಾಗುತ್ತದೆ. ಹೀಗೆ ಅನವಸ್ಥಾದೋಷ ಬರುವುದರಿಂದ ಅಧಿಷ್ಠಾನವನ್ನು ಮಿಥ್ಯೆಯೆನ್ನಲು ಸಾಧ್ಯವಿಲ್ಲವೆಂದರೆ, ಭ್ರಮೆಗೆ ಕಾರಣವಾದ ಅವಿದ್ಯೆ ಮಿಥ್ಯೆಯಾದರೆ ಅದನ್ನು ಕಲ್ಪಿಸಿಕೊಳ್ಳಲು ಮತ್ತೊಂದು ಅವಿದ್ಯೆಬೇಕಾಗುತ್ತೆ ಎಂದು ಅವಿದ್ಯೆಯಲ್ಲೂ ಅನವಸ್ಥೆ ಸಮಾನ. ಅವಿದ್ಯೆಯ ಪ್ರಭಾವ ವಿಶೇಷದಿಂದ ಮತ್ತೊಂದು ಅವಿದ್ಯೆಯಿಲ್ಲದೆಯೇ ಅವಿದ್ಯೆ ಮಿಥ್ಯೆ ಯಾಗಲು ಸಾಧ್ಯವಾದರೆ ಇದರಂತೆ ಮತ್ತೊಂದು ಅಧಿಷ್ಠಾನವಿಲ್ಲದೆಯೇ ಆ ಅಧಿಷ್ಠಾನವಾದ ಬ್ರಹ್ಮ ಮಿಥ್ಯೆಯಾಗಬಹುದಾದ್ದರಿಂದ ಅನವಸ್ಥಾದೋಷ ಬರುವುದಿಲ್ಲ. ಹೀಗೆ ಬ್ರಹ್ಮ ಮಿಥ್ಯೆಯಾದರೂ ಯಾವ ಅನರ್ಥವೂ ಇಲ್ಲವಾದ್ದರಿಂದ ಮಾಧ್ಯಮಿಕ ಶೂನ್ಯವಾದದಲ್ಲೇ ಪರ್ಯವಸಾನ ಅನಿವಾರ್ಯ.

**ಅವಿದ್ಯಾಕಲ್ಪನಾನುಪಪತ್ತಿ**—ಅವಿದ್ಯೆಮಿಥ್ಯಾಭೂತವಾದರೂ ಅದನ್ನು ಕಲ್ಪಿಸಲು ಮತ್ತೊಂದು ಅವಿದ್ಯೆಯ ಆವಶ್ಯಕತೆಯಿಲ್ಲವೆಂದರೆ, ಅವಿದ್ಯೆ ಮಿಥ್ಯೆಯಾದರೂ ತನಗೆ ತಾನೇ ಕಲ್ಪಿತವೆಂದು ಹೇಳಿ ದಂತಾಯಿತು. ಹಾಗಾದರೆ ಮಿಥ್ಯೆಯಾದ ಈ ಪ್ರಪಂಚವೂ ಸಹ ತನ್ನ ಕಲ್ಪನೆ, ಅಥವಾ ತೋರಿಕೆಗೆ ಮತ್ತೊಂದು ಕಾರಣವನ್ನು ಅಪೇಕ್ಷಿಸದೇ ಸ್ವಯಂ ಮಿಥ್ಯೆಯಾಗಿ ತೋರಲಿ! ಆದ್ದರಿಂದ ಅವಿದ್ಯಾ ಕಲ್ಪನೆಯೂ ಅಪ್ರಾಮಾಣಿಕವೇ ಆಗುತ್ತದೆ. ಹೀಗೆ ಒಪ್ಪದಿದ್ದರೆ ಮಿಥ್ಯೆಯಾದ ಆ ಅವಿದ್ಯೆ ತನ್ನ ತೋರಿಕೆಗೆ ಮತ್ತೊಂದು ಅವಿದ್ಯೆಯನ್ನು ಅಪೇಕ್ಷಿಸಿದರೆ ಅದಕ್ಕೆ ಮತ್ತೊಂದು ಅವಿದ್ಯೆಯ ಅಪೇಕ್ಷೆ ಬರುವುದರಿಂದ ಅವಿದ್ಯಾಪರಂಪರೆಯನ್ನು ಕೊನೆಯಿಲ್ಲದೆ ಕಲ್ಪಿಸಬೇಕಾಗುವುದು. ಇದಕ್ಕೆ "ಅನವಸ್ಥಾ ದೋಷ"—ಎನ್ನುವರು. ಇದಕ್ಕಾಗಿ ಮಿಥ್ಯೆಯಾದರೂ ಮತ್ತೊಂದು ಅವಿದ್ಯೆಯ ಅಪೇಕ್ಷೆಯಿಲ್ಲ ವೆಂದರೆ, ಮಿಥ್ಯೆಯಾದ ಜಗತ್ತಿನ ತೋರಿಕೆಯೂ ಅವಿದ್ಯೆಯ ಅಪೇಕ್ಷೆಯಿಲ್ಲದೆಯೇ ಆಗಬಹುದಾ ದ್ದರಿಂದ ಅವಿದ್ಯೆ ಅಪ್ರಾಮಾಣಿಕವಾಗುತ್ತದೆ. ಅವಿದ್ಯೆ ಅನಾದಿಕಾಲದಿಂದಲೂ ಬರುತ್ತಿರುವುದುರಿಂದ ಅದರ ಕಲ್ಪನೆಗೆ ಮತ್ತೊಂದು ಅವಿದ್ಯೆ ಬೇಕಿಲ್ಲವೆಂದರೆ, ಹೀಗೆ ದೋಷರೂಪ ಕಾರಣದ ಅಪೇಕ್ಷೆ ಯಿಲ್ಲದೇ ಅನಾದಿ ಕಾಲದಿಂದಲೂ ಇರುವ ಅವಿದ್ಯೆ ಸತ್ಯವೇ ಆಗುತ್ತದೆ.

ಬ್ರಹ್ಮದಿಂದಲೇ ಅವಿದ್ಯೆ ಕಲ್ಪಿತವಾಗುವುದರಿಂದ ಬ್ರಹ್ಮವೇ ಅವಿದ್ಯೆಗೆ ಕಾರಣವಾದ ದೋಷ ವೆನಿಸಿಕೊಳ್ಳುತ್ತದೆ—ಎಂದರೆ ಆಗ ಬ್ರಹ್ಮನಿತ್ಯವಾದ್ದರಿಂದ ಅವಿದ್ಯೆಯೂ ನಿತ್ಯವಾಗಿ ಎಂದೂ ನಿವೃತ್ತಿ ಯಾಗುವಂತಿಲ್ಲ. ಆಗ ಯಾರಿಗೂ ಮೋಕ್ಷವೆಂಬ ಪರಮ ಪುರುಷಾರ್ಥವನ್ನು ಸಾಧಿಸಲು ಸಾಧ್ಯವೇ ಇಲ್ಲ.

**ಭಾವರೂಪಾಜ್ಞಾನ ಪ್ರತ್ಯಕ್ಷ ಸಿದ್ಧವಲ್ಲ**—ಬ್ರಹ್ಮಾಜ್ಞಾನವಾದಿಗಳಾದ ಶಾಂಕರರು ಅವಿದ್ಯೆ ಬ್ರಹ್ಮದಲ್ಲೇ ಇರುವುದು ಎನ್ನುವರು. ವಿದ್ಯಾಸ್ವರೂಪವಾದ ಬ್ರಹ್ಮದಲ್ಲಿ ಅದರ ಅಭಾವರೂಪವಾದ ಅವಿದ್ಯೆ ಇರಲು ಹೇಗೆ ಸಾಧ್ಯ?—ಎಂದರೆ, ಆ ಅವಿದ್ಯೆ ಭಾವರೂಪವೇ ಹೊರತು ಅಭಾವರೂಪವಲ್ಲ. ಆದ್ದರಿಂದ ವಿರೋಧವಿಲ್ಲವೆಂಬ ಅವರ ಭಾವರೂಪಾಜ್ಞಾನವಾದ ವನ್ನು ನಿರಾಕರಿಸುತ್ತಾರೆ. ಅದರಲ್ಲೂ ಭಾವರೂಪ ಅಜ್ಞಾನ ಪ್ರತ್ಯಕ್ಷ ಸಿದ್ಧವೆಂಬ ವಾದವನ್ನು ಇಲ್ಲಿ ನಿರಾಕರಿಸುತ್ತಾರೆ. ಗಾಢನಿದ್ರೆಯ ಕಾಲಾನಂತರ "ಆಗ ನಾನು ಏನನ್ನೂ ಅರಿತಿರಲಿಲ್ಲ"—ಎಂಬ ಅನುಭವ ಎಲ್ಲರಿಗೂ ಬರುತ್ತದೆ. 'ಏನನ್ನೂ ಅರಿತಿರಲಿಲ್ಲ'—ಎಂಬುದೇ ಅವಿದ್ಯೆ ಅಥವಾ ಅಜ್ಞಾನ. ಈ ಪದ "ನ ಅವಿದ್ಯಾ"—ಎಂಬ ಅರ್ಥದಲ್ಲಿರುವ ಪದವಲ್ಲ. ಆಗ ಅದು ಅಭಾವ ರೂಪವಾಗಬೇಕಾಗುತ್ತದೆ. ನಿದ್ರೆಯಲ್ಲಿ ಇಂತಹ ಜ್ಞಾನಾಭಾವದ ಅನುಭವ ಬರಬೇಕಾದರೆ, ಅಭಾವ ಜ್ಞಾನಕ್ಕೆ ಪ್ರತಿಯೋಗಿಜ್ಞಾನ ಅತ್ಯಾವಶ್ಯಕ ಆಗ ಪ್ರತಿಯೋಗಿಜ್ಞಾನವೇ ಇದ್ದರೆ, "ಏನನ್ನೂ ಅರಿತಿರಲಿಲ್ಲ"—ಎಂಬ ಅನುಭವ ಬರಲು ಸಾಧ್ಯ. ವಿಲ್ಲ. ಪ್ರತಿಯೋಗಿ ಜ್ಞಾನವಿಲ್ಲದಿದ್ದರೆ ಅಭಾವಜ್ಞಾನ ಬ್ಬರಲು ಸಾಧ್ಯವಿಲ್ಲದ್ದರಿಂದ ಆ ಅನುಭವವೇ ಬರಬಾರದಾಗುತ್ತದೆಯಷ್ಟೆ? ಆದ್ದರಿಂದ ಆಗ ತೋರುವ ಅಜ್ಞಾನ ಅಭಾವರೂಪವಲ್ಲ ಭಾವರೂಪ. ಹೀಗೆ ಭಾವರೂಪವಾದ ಅಜ್ಞಾನದ ಅನುಭವ ಎಲ್ಲರಿಗೂ ಇರುವುದರಿಂದ ಇದನ್ನು ನಿರಾಕರಿಸಲು

ಸಾಧ್ಯವೇ ಇಲ್ಲ. ಹೇಗೆಂದರೇ, ಅವಿದ್ಯೆಭಾವರೂಪವೆಂದರೂ ವಿದ್ಯೆಗೆ ವಿರೋಧಿಯಾದ ವಸ್ತು ಎಂಬಂಶ ಸಮಾನವಾದ್ದರಿಂದ ವಿದ್ಯಾಮಯನಾದ ಪರಮಾತ್ಮನಲ್ಲಿರಲಾರದು.

"ನನಗೆ ಏನೂ ಗೊತ್ತಾಗಲಿಲ್ಲ"—ಎಂದು ಹೇಳಿದಾಗ ಸರ್ವವಿಷಯ ಜ್ಞಾನಾಭಾವ ಅರ್ಥವಾಗುತ್ತೆ. ಆದರೆ ಆ ಅಜ್ಞಾನದ ಜ್ಞಾನವಿರಬೇಕಾಗುತ್ತೆ. ಇಲ್ಲದಿದ್ದರೆ ಅನಂತಕಾಲ ಆ ಉಲ್ಲೇಖ ಹೇಗೆ ಸಾಧ್ಯ! ಇಲ್ಲಿ ಒಂದು ರೀತಿಯಲ್ಲಿ ಜ್ಞಾನವಿದ್ದರೂ ಅಜ್ಞಾನ ಅನುಭವಸಿದ್ಧವಾಗಿರುವುದರಿಂದ ಇಂತಹ ಜ್ಞಾನ ಮತ್ತು ಅಜ್ಞಾನಕ್ಕೆ ವಿರೋಧವಿಲ್ಲವೆಂಬದೂ ಸರಿಯಲ್ಲ. ಅಲ್ಲಿ 'ಏನೂ ಗೊತ್ತಾಗಲಿಲ್ಲ'—ಎಂಬ ಅನುಭವ ಬಾಹ್ಯ ವಸ್ತುವಿಷಯಕವಾದದ್ದೇ ಹೊರತು ಆತ್ಮವಿಷಯಕವಾದದ್ದಲ್ಲ.

ಒಬ್ಬನಿಗೆ ಮದಮೂರ್ಛಾದಿಗಳು ಬಂದಾಗ ಬಾಹ್ಯ ವಸ್ತುವಿಷಯಕವಾದ ಯಾವ ಜ್ಞಾನವೂ ಇಲ್ಲದಿರುವುದರಿಂದ ಆ ಅನುಭವ ಬರುತ್ತದೆ. ಈ ಅಜ್ಞಾನ ಆತ್ಮನ ಧರ್ಮಭೂತವಾದ ಜ್ಞಾನದ ಅಭಾವವೇ ಆಗಿರುತ್ತದೆ, ಆತ್ಮನು ಸ್ವಪ್ರಕಾಶನಾದ್ದರಿಂದ ಅವನು ಸದಾ ತೋರುತ್ತಿರುವನು, ನಿರ್ವಿಶೇಷವಾದದಲ್ಲಿ ಸ್ವರೂಪಕ್ಕಿಂತಲೂ ಭಿನ್ನವಾದ ಆತ್ಮಧರ್ಮಭೂತವಾದ ಜ್ಞಾನವನ್ನು ಒಪ್ಪಲಿಲ್ಲವಾದ್ದರಿಂದ ಆ ಅಜ್ಞಾನ ಆತ್ಮ ಸ್ವರೂಪ ವಿಷಯಕವೇ ಆಗಬೇಕಾಗುತ್ತದೆಯಾದ್ದರಿಂದ ಆತ್ಮನಾಶದಲ್ಲಿ ಪರ್ಯವಸಾನ ಅನಿವಾರ್ಯ.

**ಭಾವರೂಪಾಜ್ಞಾನ ಸಾಧಕಾನುಮಾನ ನಿರಾಸ**—ಕತ್ತಲಲ್ಲಿ ಹುಟ್ಟಿದ ಮೊಟ್ಟಮೊದಲನೆಯ ದೀಪದ ಬೆಳಕಿನಂತೆ, ಹೊಸದೊಂದು ವಿಷಯವನ್ನು ಪ್ರಕಾಶಪಡಿಸುವುದರಿಂದ ವಿವಾದಕ್ಕೆ ಒಳಗಾಗಿರುವ ಪ್ರಮಾಣಜ್ಞಾನ, ತನ್ನ ಪ್ರಾಗಭಾವಕ್ಕಿಂತಲೂ ಬೇರೆಯಾದ ತಾನಿರುವ ಕಡೆಯಲ್ಲಿದ್ದು ತನ್ನ ವಿಷಯವನ್ನು ಮರೆಮಾಡಿದ್ದ, ತನ್ನಿಂದಲೇ ನಿವೃತ್ತಿಯಾದ ಒಂದು ವಸ್ತುವಿನ ಅನಂತರವೇ ಬಂದಿರುತ್ತದೆ.

["ವಿವಾದಾಧ್ಯಾಸಿತಂ ಪ್ರಮಾಣಜ್ಞಾನಂ—ಸ್ವಪ್ರಾಗಭಾವವ್ಯತಿರಿಕ್ತ—ಸ್ವದೇಶಗತ—ಸ್ವವಿಷಯಾವರಣ—ಸ್ವನಿವರ್ತ್ಯ—ವಸ್ತ್ವನ್ತರಪೂರ್ವಕಂ, ಅಪ್ರಕಾಶಿತಾರ್ಥಪ್ರಕಾಶಕತ್ವಾತ್, ಅನ್ಧಕಾರೇ ಪ್ರಥಮೋತ್ಪನ್ನ ಪ್ರದೀಪ ಪ್ರಭಾವತ್"]—ಎಂಬುದು ಭಾವರೂಪವಾದ ಅಜ್ಞಾನವನ್ನು ಸಾಧಿಸುವ ಅನುಮಾನದ ಪೂರ್ಣವಾದ ಆಕಾರ.

ಕತ್ತಲಲ್ಲಿ ಯಾವ ವಸ್ತುವೂ ಕಾಣುವುದಿಲ್ಲ. ದೀಪ ಹಚ್ಚಿದ ತತ್‌ಕ್ಷಣ ಅಲ್ಲಿದ್ದ ವಸ್ತು ಕಾಣಿಸುತ್ತದೆ. ಈ ದೀಪದ ಬೆಳಕು ಇಲ್ಲಿ ದೃಷ್ಟಾಂತ. ದೀಪದ ಬೆಳಕು ಒಂದು ವಸ್ತುವನ್ನು ಮೊಟ್ಟಮೊದಲನೆಯದಾಗಿ ನಮಗೆ ತೋರಿಸಬೇಕಾದರೆ ಅಲ್ಲಿ ಮೊದಲು ಕತ್ತಲು ಇದ್ದಿರಬೇಕು. ದೀಪ ಯಾವ ವಸ್ತುವನ್ನು ತೋರಿಸಿತೋ ಅದೇ ವಸ್ತುವನ್ನು ಅಲ್ಲಿಯ ಕತ್ತಲು ಮರೆಮಾಡಿತ್ತು. ಕತ್ತಲೂ ಎನ್ನುವುದು ದೀಪದ ಅಭಾವ ಮಾತ್ರವಾಗದೇ ಅತಿರಿಕ್ತವಾದ ಒಂದು ಪದಾರ್ಥ. ಆ ಕತ್ತಲು ಭಾವರೂಪ, ಅಭಾವರೂಪವಲ್ಲ. ಆ ಕತ್ತಲು ದೀಪದಿಂದ ತೊಲಗುತ್ತದೆ.

ಹೀಗೆಯೇ ಆತ್ಮಸ್ವರೂಪವನ್ನು ಪ್ರಕಾಶಪಡಿಸುವ ತತ್ತ್ವಜ್ಞಾನ ಹುಟ್ಟುವುದಕ್ಕೆ ಮೊದಲು ಆ ಆತ್ಮನಲ್ಲಿ ಒಂದು ಅಜ್ಞಾನವಿದ್ದಿರಬೇಕು. ಈ ಅಜ್ಞಾನ ಆತ್ಮಜ್ಞಾನದ ಅಭಾವ ಮಾತ್ರವಲ್ಲ. ಕತ್ತಲಂತೆ ಅತಿರಿಕ್ತ ಪದಾರ್ಥ, ಮತ್ತು ಭಾವರೂಪ. ತತ್ತ್ವಜ್ಞಾನ ಹುಟ್ಟುವ ಆತ್ಮನಲ್ಲೇ ಇರುವುದು. ತತ್ತ್ವಜ್ಞಾನದಿಂದ ಬೆಳಗುವ ಆತ್ಮಸ್ವರೂಪವನ್ನು ಅಲ್ಲಿಯವರೆಗೆ ಮರೆ ಮಾಡಿತ್ತು ಮತ್ತು ತತ್ತ್ವಜ್ಞಾನದಿಂದಲೇ ತೊಲಗಿತು. ಇದು ಆ ಅನುಮಾನದ ತಾತ್ಪರ್ಯ.

ಜ್ಞಾನಪ್ರಾಗಭಾವದಿಂದಲೂ ಜ್ಞಾನಕ್ಕೆ ಕಾರಣವಾದ ವಿಷಯಾದಿಗಳಿಂದಲೂ ಜ್ಞಾನಕ್ಕೆ ತಡೆಯಾಗುವ ಗೋಡೆ ಮುಂತಾದುವುಗಳಿಂದಲೂ ಅಪ್ರಕಾಶ ಎಂಬುದು ವಸ್ತು ಧರ್ಮವಾಗಿಯೂ ಇರುವುದರಿಂದಲೂ ಸಿದ್ಧಸಾಧನ, ಅಥವಾ ಅರ್ಥಾಂತರ ಎಂಬ ದೋಷ ಬರುವುದರಿಂದ ಸಾಧ್ಯ ಕೋಟಿಯಲ್ಲಿ ನಾಲ್ಕು ವಿಶೇಷಣಗಳು ಸೇರಿವೆ.

ಹೀಗೆಂದರೆ—ಈ ಅನುಮಾನದಿಂದ ಹುಟ್ಟುವ ಜ್ಞಾನ ಅಜ್ಞಾನ ವಿಷಯಕವಾದ ಅಜ್ಞಾನವನ್ನು ಹೋಗಲಾಡಿಸುವುದೆ, ಅಥವಾ ಇಲ್ಲವೆ? ಹೋಗಲಾಡಿಸಿದರೆ ಅದರ ಇಷ್ಟ ಸಿದ್ಧಿಯಾಗದು. ಈ ಅನುಮಾನ ಒಂದು ಪ್ರಮಾಣ ರೂಪವಾದ ಜ್ಞಾನ. ಇದರಿಂದಲೇ ಭಾವರೂಪವಾದ ಅಜ್ಞಾನದ ತಿಳುವಳಿಕೆ ನಮಗೆ ಬರಬೇಕು. ಇದಕ್ಕೆ ಮೊದಲು ಈ ಭಾವರೂಪವಾದ ಅಜ್ಞಾನ ತಿಳಿದಿರಲಿಲ್ಲ. ಅಂದರೆ ಆ ಅಜ್ಞಾನದ ಅಜ್ಞಾನ ಇತ್ತು. ಅದು ಈ ಅನುಮಾನದಿಂದ ನಿವೃತ್ತಿ ಹೊಂದಬೇಕು. ಹೀಗಾಗಿ ಅಜ್ಞಾನ ವಿಷಯಕವಾದ ಮತ್ತೊಂದು ಅಜ್ಞಾನವನ್ನು ಒಪ್ಪಬೇಕಾಗುವುದರಿಂದ ಅನವಸ್ಥೆಯಲ್ಲಿ ಪರ್ಯವಸಾನವಾಗುವುದು. ಭಾವಾರೂಪಾಜ್ಞಾನದ ಅಜ್ಞಾನವನ್ನು ಈ ಅನುಮಾನ ಹೋಗಲಾಡಿಸದಿದ್ದರೆ ಈ ಭಾವರೂಪಾಜ್ಞಾನಕ್ಕೆ ಅನುಮಾನವೇ ಪ್ರಮಾಣವಾದ್ದರಿಂದ, ಭಾವರೂಪಾಜ್ಞಾನವೇ ಸಿದ್ಧಿಸುವಂತಿಲ್ಲವಾದ ಕಾರಣ, ಈ ಅನುಮಾನವೇ ವ್ಯರ್ಥವಾಗುತ್ತೆ. ಹೇತುವಿನ ಸ್ವರೂಪವನ್ನು ಬಿಡಿಸಿ ವಿಮರ್ಶಿಸಿದರೆ ಇಂದ್ರಿಯಾದಿಗಳಲ್ಲಿ ವ್ಯಭಿಚಾರ, ಅಸಿದ್ಧಿ ಮುಂತಾದ ದೋಷಗಳೂ ಬರುತ್ತವೆ.

"ಅಪ್ರಕಾಶಿತಾರ್ಥ ಪ್ರಕಾಶಕತತ್ವ"—ಎಂಬ ಹೇತುವಿಗೆ "ಪ್ರಕಾಶಕಾರಣತ್ವ"—ಎಂಬ ಅರ್ಥವನ್ನು ಹೇಳಿದರೆ ಇಂದ್ರಿಯಾದಿಗಳೂ ವಸ್ತುವಿನ ತೋರುವಿಕೆಗೆ ಕಾರಣವಾಗುವುದರಿಂದ ಹೇತು ಅಲ್ಲಿ ಇರುತ್ತದೆ. ಅಲ್ಲಿ ಸಾಧ್ಯವಾದ ಅಜ್ಞಾನ ಪೂರ್ವಕತ್ವವಿಲ್ಲದಿರುವುದರಿಂದ ವ್ಯಭಿಚಾರದೋಷ ಸ್ಪಷ್ಟ. "ಪ್ರಕಾಶಕರಣತ್ವ"—ಎಂಬ ಅರ್ಥವನ್ನು ಹೇಳಿದರೆ ದೃಷ್ಟಾಂತವಾದ ದೀಪಪ್ರಭೆಯಲ್ಲಿ ಪ್ರಕಾಶಕರಣತ್ವವಿಲ್ಲದಿರುವುದರಿಂದ ದೃಷ್ಟಾಂತಾ ಸಿದ್ಧಿ ಬರುತ್ತದೆ. ಹೀಗೆ ಈ ಅನುಮಾನದಿಂದ ಭಾವರೂಪಾಜ್ಞಾನ ಸಿದ್ಧಿಸುವುದಿಲ್ಲ.

ಇಂತಹ ಅವಿದ್ಯೆಯನ್ನು ಒಪ್ಪುವುದು ಶ್ರುತಿವಿರುದ್ಧ. "ಅವಿದ್ಯಾದಿ ದೋಷರಹಿತ"—ಎಂಬ ಅರ್ಥವುಳ್ಳ "ನಿರವದ್ಯಂ"—ಎನ್ನುವ ಶ್ರುತಿಗೆ ಪ್ರತಿಪಾದ್ಯ ಯಾವುದು?—ಅವಿದ್ಯೆಯೆ? ಜೀವಾತ್ಮನೆ? ಅವಿದ್ಯೆಯಿಂದ ಕೂಡಿದ ಬ್ರಹ್ಮವೇ? ಈ ಶ್ರುತಿಗೆ ನಿಮ್ಮ ಅವಿದ್ಯೆ ಪ್ರತಿಪಾದ್ಯವಾಗಿರುವುದೆಂದು ಒಪ್ಪಲು ಸಾಧ್ಯವೇ ಇಲ್ಲ. ಅವಿದ್ಯೆಗೆ ಮತ್ತೊಂದು ಅವಿದ್ಯೆಯ ಪ್ರಸಂಗವಿಲ್ಲದ ಕಾರಣ ಅದರ ನಿಷೇಧ ಅಸಂಬದ್ಧ. ಜೀವಾತ್ಮನೂ ಸಹ ಆಧ್ಯಾತ್ಮಿಕಾದಿ ತಾಪತ್ರಯದಲ್ಲಿ ಬಿದ್ದಿರುವುದರಿಂದ ವಿಷಯನಾಗಿರಲಾರ. ಅವಿದ್ಯೆಯಿಂದ ಕೂಡಿದ ಬ್ರಹ್ಮವೂ ಸಹ ಅವಿದ್ಯಾಮೋಹಿತವಾಗಿಯೇ ಇರುವುದರಿಂದ ವಿಷಯವಲ್ಲ. ಆದ್ದರಿಂದ 'ನಿರವದ್ಯ–ಶ್ರುತಿ ಅರ್ಥರಹಿತವೇ ಆಗುತ್ತೆ.

ಬ್ರಹ್ಮದಲ್ಲಿ ಅವಿದ್ಯೆ ಇದ್ದರೂ ಅವಿದ್ಯೆ ಸುಳ್ಳಾದ್ದರಿಂದ ಬ್ರಹ್ಮಕ್ಕೆ ದೋಷವಾಗುವುದಿಲ್ಲ. "ನಿರವದ್ಯಂ"—ಎಂಬ ಶ್ರುತಿಗೂ ಬ್ರಹ್ಮದಲ್ಲಿ ಸತ್ಯವಾದ ದೋಷ ಯಾವುದೂ ಇಲ್ಲ ಎಂದೇ ತಾತ್ಪರ್ಯ—ಎಂದರೆ ಅದನ್ನು ನಿರಾಸಮಾಡಲು ಏತಕ್ಕೆ ಅಷ್ಟೊಂದು ಶ್ರಮ ಪಡಬೇಕು? "ಅದು ಮಿಥ್ಯೆ"—ಎಂದು ತಿಳಿಯುವುದಕ್ಕಾಗಿಯೇ ಆಶ್ರಮಗಳೆಂದು ವಾದಿಸಿದರೂ ಆ ಅವಿದ್ಯೆ ನಿರಸನೀಯವಾದ ದೋಷ ಕೋಟಿಯಲ್ಲಿ ಸೇರಿದ ಮೇಲೆ, ಹೇಯವಾದ್ದರಿಂದ ಅಪುರುಷಾರ್ಥ ರೂಪವಾದ ಆ ಅವಿದ್ಯಾ ಸಂಬಂಧಕ್ಕಿಂತಲೂ ಪರಬ್ರಹ್ಮದಲ್ಲಿ ಬೇರೊಂದು ದೋಷ ಯಾವುದನ್ನು ಹೇಳಲು ಸಾಧ್ಯ? ಆ ಅವಿದ್ಯಾ ಸಂಬಂಧವೇ ಮಹಾದೋಷವಾಗುವುದರಿಂದ "ನಿರವದ್ಯಂ"—ಎಂಬ ಶ್ರುತಿಗೆ ವಿರೋಧ ಅನಿವಾರ್ಯವೇ ಆಗುತ್ತೆ.

ವಿಶುದ್ಧವಾದ ಬ್ರಹ್ಮದಲ್ಲಿ ಅವಿದ್ಯೆ ಅತ್ಯಾವಶ್ಯಕ. ಏಕೆಂದರೆ—ವಿಶುದ್ಧವಾದ ಬ್ರಹ್ಮದಲ್ಲಿ ಮಿಥ್ಯಾಭೂತವಾದ ಅವಿದ್ಯೆ ಸಂಬಂಧಿಸುವುದೇ ಇಲ್ಲವೆಂದರೆ, ಆ ಬ್ರಹ್ಮಕ್ಕೆ ಜೀವನೊಂದಿಗೆ ಐಕ್ಯವನ್ನು ಹೇಳುವ "ತತ್ತ್ವಮಸಿ"—ಇತ್ಯಾದಿ ವಾಕ್ಯ ಹೊಂದದೇ ಹೋಗುತ್ತೆ. ಆದ್ದರಿಂದ 'ನಿರವದ್ಯಂ' —ಇತ್ಯಾದಿ ಶ್ರುತಿ ಉಪಾಧಿರಹಿತ ಬ್ರಹ್ಮದ ವಿಶುದ್ಧಾವಸ್ಥೆಯ ದೃಷ್ಟಿಯಿಂದ ಸಮರ್ಥನೀಯವೇ ಆಗುತ್ತೆ.

ಜೀವನಿಗೂ ಬ್ರಹ್ಮಕ್ಕೂ ಅಭೇದವನ್ನು "ತತ್ತ್ವಮಸಿ"—ಇತ್ಯಾದಿ ಶ್ರುತಿ ಹೇಳುತ್ತೆ. ವಾಸ್ತವಿಕವಾಗಿ ಜೀವ ಬೇರೆಯಾಗಿದ್ದರೆ ಈ ಐಕ್ಯ ಸಂಭವಿಸುವುದೇ ಇಲ್ಲ ಇದಕ್ಕಾಗಿ ಬ್ರಹ್ಮವೇ ಯಾವುದೋ ಒಂದು ಉಪಾಧಿಯಿಂದ ಜೀವವೆಂದೆನಿಸಿಕೊಳ್ಳುತ್ತದೆ ಉಪಾಧಿ ಕಳೆದರೆ ಜೀವವೇ ಬ್ರಹ್ಮವಾಗುತ್ತೆ ಎಂದು ಹೇಳಬೇಕು. ಆ ಉಪಾಧಿಯೇ "ಅವಿದ್ಯೆ" ಅದು ಸತ್ಯವಾಗಿದ್ದ ಪಕ್ಷದಲ್ಲಿ ಅದ್ವಿತೀಯ ಶ್ರುತಿ ವಿರೋಧ ಬರುವುದರಿಂದ ಅದು ಮಿಥ್ಯೆ "ನಿರವದ್ಯಂ"—ಎಂಬ ಶ್ರುತಿಗೆ ಇಂತಹ ಅವಿದ್ಯೆಯಿಂದ ಬಿಡುಗಡೆಯಾದ ಬ್ರಹ್ಮವೇ ವಿಷಯವಾಗಬಹುದು ಎಂದು ಪೂರ್ವಪಕ್ಷದ ತಾತ್ಪರ್ಯ.

ಆದರೆ ಇದೂ ಯುಕ್ತವಲ್ಲ ಪ್ರತ್ಯಕ್ಷಾದಿ ಸಕಲ ಪ್ರಮಾಣಗಳಿಗೂ ಹೊಂದುವಂತೆಯೂ ಅನೇಕ ಶ್ರುತಿಗಳಿಗೆ ವಿರೋಧವಿಲ್ಲದಂತೆಯೂ ಐಕ್ಯವನ್ನು ಹೇಳುವ ವಾಕ್ಯವನ್ನು ಸಮನ್ವಯ ಮಾಡಲು ಸಾಧ್ಯವಿದ್ದಾಗಲೂ, ಅನೇಕ ಕಲ್ಯಾಣಗುಣಾಕರನಾದ ಪರಬ್ರಹ್ಮನ ವಿಷಯದಲ್ಲೂ ಪರಮಾತ್ಮನ ಸಕಲ ವೈಶಿಷ್ಟ್ಯಗಳನ್ನೂ ನಿರಾಕರಿಸುವ ಈ ಬ್ರಹ್ಮಾವಿದ್ಯಾವಾದ ಕೇವಲ ಅಸೂಯಾ ಮೂಲಕವಾದದ್ದು

**ಮಾಯಾ ಪದಕ್ಕೆ ಭಾವರೂಪಾಜ್ಞಾನವು ಅರ್ಥವಲ್ಲ.** ಪ್ರತ್ಯಕ್ಷ-ಅನುಮಾನ-ಈ ಎರಡು ಪ್ರಮಾಣಗಳಿಂದ ಭಾವರೂಪಾಜ್ಞಾನ ಸಾಧನ ಕ್ರಮ ಸಿದ್ಧಿಸದ ಹಾಗೆಯೇ ಶಬ್ದ ಪ್ರಮಾಣದಿಂದಲೂ ಅದು ಸಿದ್ಧಿಸುವಂತಿಲ್ಲ. ಹೇಗೆಂದರೆ, "ಮಾಯಯಾ ಸನ್ನಿರುದ್ಧಃ"—ಮಾಯಾಮೇತಾಂ"— "ಕ್ಷರಂತ್ವವಿದ್ಯಾ"—ಇತ್ಯಾದಿಗಳಲ್ಲಿ ಪ್ರಯುಕ್ತವಾದ "ಮಾಯಾ" "ಅವಿದ್ಯಾ"—ಪದಗಳಿಂದ ತ್ರಿಗುಣದ್ರವ್ಯವಾದ ಪ್ರಕೃತಿಯೇ ಹೇಳಲ್ಪಟ್ಟಿದೆ. ಅಥವಾ ಜ್ಞಾನಕರ್ಮ ಮುಂತಾದವೇ ಹೇಳಲ್ಪಟ್ಟಿವೆ ಎಂಬುದು ಆಯಾ ಜಾಗಗಳಲ್ಲೇ "ಮಾಯಾಂತು ಪ್ರಕೃತಿಂ ವಿದ್ಯಾತ್" ಕ್ಷರಂ ಪ್ರಧಾನಂ"—"ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ",—"ಮಾಯಾ ವಯುನಂ ಜ್ಞಾನಂ"— "ಅವಿದ್ಯಾ ಕರ್ಮ ಸಂಜ್ಞಾನ್ಯಾ"—ಇತ್ಯಾದಿ ವಿವರಣಗಳಿಂದ ಸ್ಪಷ್ಟವಾಗಿ ನಿಶ್ಚಯಿಸಲ್ಪಟ್ಟಿದೆ. ಆದ್ದರಿಂದ ಭಾವರೂಪಾಜ್ಞಾನ ವಾದಿಗಳಿಗೆ ಸಮ್ಮತವಾದ ಮಿಥ್ಯಾಭೂತವೂ ಬ್ರಹ್ಮನಿಷ್ಠವೂ ಆದ ಅವಿದ್ಯೆ ಶ್ರುತಿ ಮುಂತಾದುವುಗಳಲ್ಲಿಯೂ ಕಂಡುಬರುವುದಿಲ್ಲ.

ಮತ್ತೆಯೂ ಸಹ ಪರಮಾತ್ಮನು ಅವಿದ್ಯೆ ಮುಂತಾದ ಸಕಲ ವಿಧ ದೋಷರಹಿತನೆಂದು "ನಿರವದ್ಯಂ ನಿರಂಜನಂ"— "ಅಮೃತಃ"—"ಸಕಲಾನೆಯತ್ರ ಕ್ಲೇಶಾದಯಸ್ಸನ್ತಿಪರಾವರೇಶೇ" —ಇತ್ಯಾದ್ಯನೇಕ ಶ್ರುತಿ ಸ್ಮೃತಿಗಳಿಂದ ಮುಕ್ತ ಕಂಠದಿಂದ ಹೇಳಲ್ಪಟ್ಟ ಅರ್ಥವನ್ನು ತಳ್ಳಿಹಾಕಲು "ಮಾಯಾ" "ಅವಿದ್ಯಾ"—ಎಂಬ ಶಬ್ದಗಳು ಸಮರ್ಥವಾಗಿವೆ ಎಂದು ಹೇಳುತ್ತಿರುವವನಿಗೇ ಅವಿದ್ಯೆಯೇ ಹೊರತು ಪರಮಾತ್ಮನಲ್ಲಿ ಅದಿರಲು ಸಾಧ್ಯವಿಲ್ಲ.

**ಮಾಯಾ ಅವಿದ್ಯಾವಿಭಾಗ ನಿರಾಸ**—'ಮಾಯೆ'-ಬ್ರಹ್ಮನಲ್ಲಿದ್ದು ಜಗತ್ಸೃಷ್ಟ್ಯಾದಿಗಳನ್ನು ನಿರ್ವಹಿಸಲು ಸಹಕರಿಸುತ್ತದೆ. ಇದು ದುಃಖಾದಿ ಹೇತುವಲ್ಲ. 'ಅವಿದ್ಯೆ' ಜೀವಾತ್ಮನಲ್ಲಿದ್ದು ವ್ಯಾಮೋಹಾದಿಗಳನ್ನು ಹುಟ್ಟಿಸಿ ದುಃಖಾದಿ ಹೇತುವಾಗುತ್ತದೆ—ಎಂದು 'ಮಾಯೆ' ಅವಿದ್ಯೆಗಳಿಗೆ ಅವರು ಹೇಳುವ ವಿಭಾಗವೂ ಸಹ ವ್ಯರ್ಥವೇ ಆಗುತ್ತದೆ. ಪ್ರಕೃತದಲ್ಲಿ 'ಮಾಯೆ' ಮತ್ತೊಬ್ಬರನ್ನು ಮೋಹಗೊಳಿಸುವುದಕ್ಕಾಗಿ ಇರುವುದಷ್ಟೆ! ಪರಮಾತ್ಮನಿಗಿಂತಲೂ ಬೇರೆಯಾಗಿ ಸತ್ಯವಾದ 'ಜೀವ' ಪದಾರ್ಥ

ವನ್ನು ಒಪ್ಪದಿರುವುದರಿಂದ ಪರಮೋಹನವೂ ಸ್ವಮೋಹನವೇ ಆಗುವುದರಿಂದ ಏನು ಹೇಳಿದರೂ ಎಲ್ಲ ದೋಷವೂ ಪರಮಾತ್ಮನಿಗೇ ಬರುವುದೇ ಹೊರತು ವಸ್ತುತಃ ದೋಷ ಪರಿಹಾರವಾಗದು.

ಅಸತ್ಯವಾದ ಪದಾರ್ಥಗಳನ್ನು ಸತ್ಯದಂತೆ ತೋರಿಸಿಕೊಟ್ಟು ಅವುಗಳಗಳೊಂದಿಗೆ ಬ್ರಹ್ಮಕ್ಕೆ ಲೀಲಾ ರೂಪವಾದ ವ್ಯವಹಾರಗಳನ್ನು ಮಾಡುತ್ತಿರುವ ಕಾರಣ, ಅವಿದ್ಯೆಯ ಕಾರ್ಯವನ್ನೇ ಈ ಮಾಯೆಯೂ ಮಾಡುತ್ತಿರುವುದರಿಂದ ಎರಡೂ ಒಂದೇ ಆಗುತ್ತೆ.

ಹೀಗಲ್ಲದೆ ಮಾಯೆ ಇಂದ್ರಜಾಲದಂತೆ ವಿಚಿತ್ರದರ್ಶನವನ್ನು ಮಾಡಿಸುತ್ತದೆಯೇ ಹೊರತು ದುಃಖಾದಿಗಳನ್ನು ಮಾಡುವುದಿಲ್ಲ. ಅವಿದ್ಯೆಯೇ ದುಃಖಕ್ಕೆ ಕಾರಣ. ಈ ಅವಿದ್ಯೆ ಬ್ರಹ್ಮದಲ್ಲಿ ಇಲ್ಲದ ಕಾರಣ ಬ್ರಹ್ಮನಿತ್ಯ ನಿರ್ದುಷ್ಟ—ಎಂದಲ್ಲಿ ಈ ಮಾಯೆ ತ್ಯಾಜ್ಯ ಕೋಟಿಯಲ್ಲಿ ಸೇರದೇ ಹೋಗಬೇಕಾಗುತ್ತೆ. ದುಃಖಕ್ಕೆ ಕಾರಣವಾದುದೇ ತ್ಯಾಜ್ಯ. ಆದ್ದರಿಂದಲೇ ''ಮಾಯಾಮೇತಾಂ ತರನ್ತಿ'' ಇತ್ಯಾದಿಯಿಂದ ಮಾಯೆಯನ್ನು ತ್ಯಾಜ್ಯವಾಗಿ ಹೇಳಿದೆ. ಆದ್ದರಿಂದ ಇವೆರಡೂ ಭಿನ್ನವಲ್ಲ. ತ್ಯಾಜ್ಯವಾದ ಅವಿದ್ಯೆಯೇ ಮಾಯೆ.

ಬ್ರಹ್ಮ ಜಗತ್ತಿಗೆ ಉಪಾದಾನಕಾರಣವೆಂಬುದನ್ನು ಸಮರ್ಥಿಸಲು ಅವಿದ್ಯೆ ಅತ್ಯಾವಶ್ಯಕ. ಮಿಥ್ಯೆಯಾದ ಈ ಜಗತ್ತಿಗೆ ನಿತ್ಯ ನಿರ್ವಿಕಾರವಾದ ಬ್ರಹ್ಮ ಉಪಾದಾನ ಕಾರಣವಾಗಲು ಸಾಧ್ಯವಿಲ್ಲವಷ್ಟೆ! ಆದ್ದರಿಂದ ಆ ಬ್ರಹ್ಮಕ್ಕೆ ಉಪಾಧಿಯಾದ ವಸ್ತುವೂ ಜಗತ್ತಿನಂತೆ ಮಿಥ್ಯಾರೂಪವಾಗುವುದು ಅನಿವಾರ್ಯವಾಗುವುದರಿಂದಲೂ, ನಿರಧಿಷ್ಠಾನಭ್ರಮವನ್ನು ಒಪ್ಪಲು ಸಾಧ್ಯವಿಲ್ಲದ್ದರಿಂದಲೂ ಈ ಉಪಾಧಿಗೆ ಒಂದು ಅಧಿಷ್ಠಾನವಿಲ್ಲದಿರಲು ಸಾಧ್ಯವಿಲ್ಲ. ಹೀಗೆ ಅಧಿಷ್ಠಾನವಾಗಿ ಸತ್ಯವಾದ ಬ್ರಹ್ಮವೂ ಉಪಾದಾನವಾಗಿ ಮಿಥ್ಯೆಯಾದ ಅವಿದ್ಯೆಯೂ ಇಲ್ಲದೆ ಶುದ್ಧಬ್ರಹ್ಮಕ್ಕೆ ಜಗದುಪಾದಾನತ್ವವು ಸಂಭವಿಸಲಾದ ಕಾರಣ. ಸತ್ಯ ಮತ್ತು ಅಸತ್ಯ ರೂಪವಾದ ಈ ಎರಡೂ ಸೇರಿಯೇ ಜೊತೆಯಾಗಿ ಸೃಷ್ಟ್ಯಾದಿಗಳಿಗೆ ಕಾರಣವಾಗುತ್ತೆ. ಆದ್ದರಿಂದ 'ಅವಿದ್ಯೆ'—ಅತ್ಯಂತ ಆವಶ್ಯಕ ಎಂಬ ಈ ವಾದವೂ ಜಗತ್ತು ಸತ್ಯವೆಂಬುದನ್ನು ಯಾವ ರೀತಿಯಲ್ಲೂ ನಿರಾಕರಿಸಲು ಸಾಧ್ಯವಲ್ಲದ್ದರಿಂದ, ಯುಕ್ತವಲ್ಲ.

ಅಸತ್ಯವಾದ ಪ್ರಪಂಚಕ್ಕೆ ಅಸತ್ಯವಾದ ಅವಿದ್ಯೆಯೇ ಉಪಾದಾನವಾಗಲು ಸಾಧ್ಯ. ಆದ್ದರಿಂದ ತ್ರಿಗುಣಾತ್ಮಕವಾದ ಅಸತ್ಯ ಪ್ರಪಂಚಕ್ಕೆ ತ್ರಿಗುಣಶೂನ್ಯವೂ ಸತ್ಯವೂ ಆದ ಪರಬ್ರಹ್ಮ ಉಪಾದಾನವಾಗಲಾರದು—ಎಂದರೆ ಕಾರ್ಯ–ಕಾರಣಗಳಿಗೆ ಹಾಗೇನೂ ಸಾಜಾತ್ಯ ನಿಯಮವಿಲ್ಲ. ಸಗಣಿಯಿಂದ ಚೇಳು ಹುಟ್ಟುತ್ತದೆ. ಹಾಗೆಯೇ ಅಸತ್ಯವಾದ ವಿಶ್ವಕ್ಕೂ ಅವಿದ್ಯಾದ್ಯುಪಾಧಿರಹಿತವಾದ ಸತ್ಯವಾದ ಪರಬ್ರಹ್ಮವೇ ಸ್ವತಃ ಉಪಾದಾನವಾಗಲಿ, ಅವಿದ್ಯೆಯ ಆವಶ್ಯಕತೆಯೇನು? ಹಾಗೆ ಒಪ್ಪಿದರೆ ಕಾರಣದಂತೆ ಕಾರ್ಯವಾದ ಈ ವಿಶ್ವವೂ ಸುಳ್ಳಾಗದೆ ಸತ್ಯವೇ ಆಗಬೇಕಾಗುತ್ತೆ ಎಂಬುದಂತೂ ನಮಗೆ ಸಮ್ಮತವೇ ಆಗುತ್ತದೆ. ಆದ್ದರಿಂದ **ಪ್ರಪಂಚ ಮಿಥ್ಯೆಯಾದರೂ ಅವಿದ್ಯೆ ಸಿದ್ಧಿಸುವುದಿಲ್ಲ.**

ಹೀಗೆ ನಾನಾವಿಧವಾಗಿ ಅನುಮಾನಗಳಿಂದ ಜಗನ್ಮಿಥ್ಯಾತ್ವ ಸಾಧಿಸಲು ಅವರು ಹೊರಟದ್ದನ್ನು ನಿರಾಕರಿಸಿ ''ಏಕಮೇವಾದ್ವಿತೀಯಂ''—''ಬ್ರಹ್ಮ ಒಂದೇ ಇದೆ'—ಇತ್ಯಾದಿ ಶ್ರುತಿಗಳಿಂದ ಜಗನ್ಮಿಥ್ಯಾತ್ವ ಸಿದ್ಧಿಸುತ್ತದೆ ಎಂಬ ವಾದವನ್ನು—ನಿರಾಕರಿಸುತ್ತಾರೆ. ಹೇಗೆಂದರೆ—ಶ್ರುತಿಗೆ ಆಶ್ರಯವಾಗಿರುವುದು ಪ್ರತ್ಯಕ್ಷ. ತನಗೆ ಆಶ್ರಯವಾಗಿರುವ ಪ್ರತ್ಯಕ್ಷಕ್ಕೆ ವಿರುದ್ಧವಾದ ಅರ್ಥವನ್ನು ಬೋಧಿಸಲು ಶ್ರುತಿಗೂ ಸಹ ಸಾಮರ್ಥ್ಯವಿರುವುದಿಲ್ಲ. ಶ್ರುತಿ ಎಂಬುದು ಶಬ್ದರೂಪ. ಶಬ್ದಗಳು ಅರ್ಥವನ್ನು ಕೊಡಬೇಕಾದರೆ ಶಕ್ತಿಗ್ರಹಣ ಆವಶ್ಯಕ. ಶಕ್ತಿಗ್ರಹಣ ಪ್ರತ್ಯಕ್ಷಾದಿ ವ್ಯವಹಾರದಿಂದಲೇ ಆಗಬೇಕು. ಹೀಗೆ ಪ್ರತ್ಯಕ್ಷವನ್ನು ಅವಲಂಬಿಸಿ ಅರ್ಥವನ್ನು ಬೋಧಿಸುತ್ತಿರುವ ಶಬ್ದ ಪ್ರತ್ಯಕ್ಷಕ್ಕೆ ವಿರುದ್ಧವಾದ ಅರ್ಥವನ್ನು ಬೋಧಿಸಲು ಹೇಗೆ ಸಾಧ್ಯ? ಈ ಪ್ರಪಂಚ ಸತ್ಯವೆಂಬುದು ಪ್ರತ್ಯಕ್ಷಸಿದ್ಧ. ಇದಕ್ಕೆ

ವಿರುದ್ಧವಾಗಿ 'ಪ್ರಪಂಚ ಸುಳ್ಳು''—ಎಂದು ಬೋಧಿಸುವ ಶಕ್ತಿ ಶ್ರುತಿಗೆ ಇಲ್ಲವೇ ಇಲ್ಲ. ಆದ್ದರಿಂದ ಶ್ರುತಿ ವಿಶ್ವಮಿಥ್ಯಾತ್ವವನ್ನು ಹೇಳಲಾರದು

''ಆದಿತ್ಯೋ ಯೂಪಃ''—ಎಂಬ ಶ್ರುತಿ ವಾಕ್ಯವು ಯೂಪವನ್ನು ಸೂರ್ಯಸ್ವರೂಪವೆಂದು ಹೇಳುತ್ತದೆ ಆಕಾಶದಲ್ಲಿ ಬೆಳಗುವ ಸೂರ್ಯ, ಯಜ್ಞದಲ್ಲಿ ಉಪಯುಕ್ತವಾದ 'ಯೂಪ' ಇವೆರಡೂ ಒಂದು ಎಂಬುದು ಪ್ರತ್ಯಕ್ಷ ವಿರುದ್ಧ ಆದ್ದರಿಂದ ಹೊಳೆಯುತ್ತಿರುವ ಸಾದೃಶ್ಯದಿಂದ ಯೂಪವನ್ನು 'ಆದಿತ್ಯ'—ಎಂದು ಹೇಳಿದೆ ಎಂದು ಗೌಣಾರ್ಥವನ್ನು ಎಲ್ಲರೂ ಸ್ವೀಕರಿಸುತ್ತಾರೆ ಪ್ರತ್ಯಕ್ಷ ವಿರುದ್ಧವಾದ ಅರ್ಥವನ್ನು ಶ್ರುತಿ ಹೇಳಲು ಸಾಧ್ಯವಿಲ್ಲ ಎಂಬುದಕ್ಕೆ ಇದು ಸಾಕ್ಷಿ

**ಸ್ಫೋಟವಾದ ನಿರಾಸ**—'ವೇದಾನ್ತಾ ಧ್ಯಯನೇನ ಹಿ ವ್ಯುತ್ಪತ್ತಿಃ ಪೂರ್ಯತೇ'' ಎಂಬ ನ್ಯಾಯದಿಂದ ಸರ್ವಶಬ್ದವೂ ಪರಮಾತ್ಮಬೋಧಕ ಆದರೂ, ಲೋಕವ್ಯವಹಾರ ನಿರ್ವಾಹ—ಎಂದು ವೇದಾನ್ತ ವೈಶಿಷ್ಟ್ಯವಾದದಲ್ಲಿ ಶಬ್ದಶಕ್ತಿಯ ವಿಚಾರವನ್ನು ಮುಗಿಸಿ ಈಗ ಶಬ್ದಗಳು ವಾಚಕವಲ್ಲ, ಸ್ಫೋಟವೇ ವಾಚಕವೆಂಬ ಸ್ಫೋಟ ವಾದವನ್ನು ನಿರಾಕರಿಸುತ್ತಾರೆ ' ಈ ಶಬ್ದದಿಂದ ಈ ಅರ್ಥವನ್ನು ತಿಳಿಯುತ್ತೇವೆ'' ಎಂಬ ಎಲ್ಲ ಜನರ ವ್ಯವಹಾರವೂ ಶಬ್ದವೇ ವಾಚಕವೆಂದೂ ತಿಳಿಸುವುದೇ ಹೊರತು ಶಬ್ದಕ್ಕಿಂತಲೂ ಬೇರೆಯಾದ ಒಂದನ್ನು ನಮಗೆ ತಿಳಿಸುವುದಿಲ್ಲ

ಹೀಗೆ ಶಬ್ದವೇ ಅರ್ಥಬೋಧಕವಾದರೆ, ಒಂದು ಪದದಲ್ಲಿ ಅನೇಕ ಅಕ್ಷರಗಳಿರುವುದರಿಂದ ಪ್ರತ್ಯೇಕವಾಗಿ ಆ ಅಕ್ಷರಗಳು ಅರ್ಥಬೋಧಕವೆ? ಒಟ್ಟಾಗಿಯೇ ಬೋಧಕವೆ? ಎಂಬ ಸಂಶಯ ಬರುತ್ತದೆ ಪ್ರತ್ಯೇಕವೇ ಬೋಧಕವಾದರೆ 'ಘ''—ಎಂಬ ಒಂದು ಅಕ್ಷರದಿಂದಲೂ ಘಟಕ್ಕೆ ಬೋಧ ಬರಬೇಕಾಗುತ್ತೆ ಪ್ರತ್ಯೇಕ ಬೋಧಕವಲ್ಲ ಸಮುದಾಯವೇ ಬೋಧಕವೆಂದರೆ ಪ್ರತ್ಯೇಕ ಇಲ್ಲದಶಕ್ತಿ ಸಮುದಾಯದಲ್ಲಿ ಬರಲು ಹೇಗೆ ಸಾಧ್ಯ? ಆದ್ದರಿಂದ ಪದಗಳು ಅರ್ಥವಾಚಕವಲ್ಲ ಪದಗಳಿಂದ ಅಭಿವ್ಯಕ್ತವಾಗುವ ಸ್ಫೋಟವೇ ವಾಚಕವೆಂದು ಒಪ್ಪಬೇಕಾದರೆ, ಕಾರಣಗಳು ಅನೇಕವಾಗಿ, ಸಾಮಗ್ರಿ ಒಂದಾಗುವ ನ್ಯಾಯದಿಂದಲೇ ವರ್ಣಸಮುದಾಯರೂಪವಾದ ಪದವೇ ಆಯಾ ಅರ್ಥಕ್ಕೆ ವಾಚಕವಾಗುತ್ತದೆ ಮತ್ತು ಪದ ಸಮುದಾಯರೂಪ ವಾಕ್ಯ ಆಯಾ ವಾಕ್ಯಾರ್ಥವನ್ನು ಹೇಳುತ್ತದೆ

ಒಂದು ಕಾರ್ಯಕ್ಕೆ ಅನೇಕ ಕಾರಣಗಳಿರುತ್ತವೆ ಆ ಕಾರ್ಯವನ್ನು ಹುಟ್ಟಿಸುವ ಶಕ್ತಿ ಆ ಕಾರಣಗಳಲ್ಲಿ ಪ್ರತ್ಯೇಕವಿರುವುದ? ಸಮುದಾಯದಲ್ಲಿರುವುದೆ? ಪ್ರತ್ಯೇಕವಿದ್ದರೆ ಒಂದೇ ಒಂದು ಕಾರಣದಿಂದಲೂ ಆ ಕಾರ್ಯ ಆಗಬೇಕಾಗುತ್ತೆ ಸಮುದಾಯದಲ್ಲೇ ಇರುವುದೆಂದರೆ, ಪ್ರತ್ಯೇಕವಿಲ್ಲದ ಶಕ್ತಿ ಸಮುದಾಯದಲ್ಲಿ ಬರಲು ಹೇಗೆ ಸಾಧ್ಯ? ಆದ್ದರಿಂದ ಮತ್ತೊಂದರ ಸಹಕಾರದಿಂದ ಕಾರ್ಯವನ್ನು ಹುಟ್ಟಿಸುವ ಶಕ್ತಿಯೇ ಪ್ರತ್ಯೇಕವಿರುವುದರಿಂದ ಯಾವ ದೋಷವೂ ಇಲ್ಲವೆಂದೇ ಒಪ್ಪಬೇಕು ಇದೇ 'ಸಾಮಗ್ರ್ಯೈಕ ನೀತಿ''—ಇದರಂತೆಯೇ ಪ್ರತ್ಯೇಕ ವರ್ಣಗಳೂ ಇತರ ವರ್ಣಗಳ ಸಹಕಾರದಿಂದಲೇ ಅರ್ಥಬೋಧವನ್ನು ಹುಟ್ಟಿಸುವುದರಿಂದ ವರ್ಣಸ್ಫೋಟದ ಆವಶ್ಯಕತೆಯೂ ಬರುವುದಿಲ್ಲ ಇದಕ್ಕಿಂತಲೂ ಬೇರೆಯಾದ ಅತೀಂದ್ರಿಯವಾದ ಸ್ಫೋಟವೆಂಬುದು ಯಾವುದೂ ಪ್ರಾಮಾಣಿಕವಲ್ಲ ಸ್ಫೋಟ ಅಪ್ರತ್ಯಕ್ಷವಾದರೂ ಅನಿತ್ಯವಾದ ವರ್ಣಗಳಿಂದ ಸರ್ವಕಾಲದಲ್ಲೂ ಏಕರೂಪವಾದ ಶಾಬ್ದ ಬೋಧಾದಿಗಳನ್ನು ನಿರ್ವಹಿಸಲು ಸಾಧ್ಯವಿಲ್ಲವಾದ್ದರಿಂದ ಸ್ಫೋಟ ಆವಶ್ಯಕವೆಂದರೆ—ವರ್ಣಗಳು ಅನಿತ್ಯವಾದರೂ ವರ್ಣಗಳಿಂದಲೇ ಸ್ಫೋಟ ಅಭಿವ್ಯಕ್ತವಾಗುತ್ತದೆ ಎಂದು ಒಪ್ಪುವುದರಿಂದ ಯಾವ ವರ್ಣಗಳು ಸ್ಫೋಟಕ್ಕೆ ವ್ಯಂಜಕಗಳಾಗುತ್ತವೆಯೋ, ಆ ವರ್ಣಗಳಿಂದ ಶಾಬ್ದಬೋಧವೇ ಏತಕ್ಕೆ ಬರಬಾರದು? 'ತದ್ಧೇತೋರೇವ ತದ್ಧೇತುತ್ವೇ ಮಧ್ಯೇಕಿಂತೇನ''—ಎಂಬ ನ್ಯಾಯದಿಂದ ಸ್ಫೋಟ

ವನ್ನು ತಿಳಿಸುವ ಶಬ್ದ ಅರ್ಥವನ್ನೇ ತಿಳಿಸಬಹುದಾದ್ದರಿಂದ ಸ್ಫೋಟದ ಆವಶ್ಯಕತೆ ಬರುವುದಿಲ್ಲ. ಈ ವರ್ಣಸ್ಫೋಟನ್ಯಾಯ ವಾಕ್ಯ ಸ್ಫೋಟಕ್ಕೂ ಸಮಾನ. ಆದ್ದರಿಂದ ಶಬ್ದವೇ ವಾಚಕ ಸ್ಫೋಟವಲ್ಲ.

ಸ್ಫೋಟದಲ್ಲಿ ವರ್ಣಗಳ ಅಧ್ಯಾಸದಿಂದ ವರ್ಣಗಳೇ ವಾಚಕವೆಂಬ ವ್ಯವಹಾರ ಲೋಕದಲ್ಲಿ ಬರುತ್ತದೆಯೆಂದರೆ, ವರ್ಣಗಳಿಂದಲೇ ಅಭಿವ್ಯಕ್ತವಾಗುವ ಸ್ಫೋಟದಲ್ಲಿ ವರ್ಣದ ಆರೋಪ ಹೇಗೆ ಸಾಧ್ಯ? ಆದ್ದರಿಂದ ಸ್ಫೋಟಗಳಲ್ಲಿ ವರ್ಣದ ಆರೋಪದಿಂದ ಲೋಕ ವ್ಯವಹಾರವನ್ನು ನಿರ್ವಹಿಸಲು ಸಾಧ್ಯವಿಲ್ಲ. ಆದ್ದರಿಂದ ಸ್ಫೋಟ ಕಲ್ಪನೆ ಸರಿಯಲ್ಲ. "ಸ್ಫೋಟಸ್ತ್ವಂ ವರ್ಣಸಂಸ್ಪೃಷ್ಟಃ"—ಎಂದು ಮಹಾಭಾರತದಲ್ಲಿ 'ಸ್ಫೋಟ–ಪದವೇ ಇರುವಾಗ, ಅದನ್ನು ಹೇಗೆ ನಿರಾಕರಿಸುವುದೆಂದರೆ—"ನೀನು ವರ್ಣದಿಂದ ಕೂಡಿದ ಸ್ಫೋಟರೂಪನು"—ಎಂದು ಅಲ್ಲಿ ಹೇಳಿರುವ "ಸ್ಫೋಟ"—ಪದಕ್ಕೆ ವರ್ಣ ಗಳಲ್ಲಿರುವ "ಬೋಧನಶಕ್ತಿ"—ಎಂಬುದೇ ಅರ್ಥ. ವರ್ಣಗಳನ್ನು "ಸ್ಫೋಟ"—ಎಂದು ಹೇಗೆ ಹೇಳುವುದೆಂದರೆ, ವರ್ಣಗಳ ಬೋಧನ ಶಕ್ತಿಯಿಂದಲೇ ಅರ್ಥಗಳು ಸ್ಫುಟವಾಗಿ ತೋರುವುದರಿಂದ ಆ ಶಕ್ತಿಯನ್ನು "ಸ್ಫೋಟ"—ವೆನ್ನುವುದು ಯುಕ್ತವಾಗಿಯೇ ಇದೆ. ಆದ್ದರಿಂದ 'ಸ್ಫೋಟ' ಅತಿರಿಕ್ತ ಪದಾರ್ಥವಲ್ಲ.

**ಪ್ರತಿಭಾ ವಾಕ್ಯಾರ್ಥ ಪಕ್ಷ ನಿರಾಸ**—ಪದದ ವಿಚಾರವನ್ನು ಮುಗಿಸಿ ವಾಕ್ಯಾರ್ಥ ವಿಚಾರವನ್ನು ಪ್ರಾರಂಭಿಸುತ್ತಾರೆ. ವಿವರ್ತವಾದಿಗಳಾದ ಕೆಲವು ಬೌದ್ಧರು ಮತ್ತು ವೈಯಾಕರಣರು ಪ್ರತ್ಯೇಕ–ಸಮುದಾಯಾದಿ ವಿಕಲ್ಪದಿಂದ, ಶಬ್ದದಿಂದ ಅರ್ಥಜ್ಞಾನ ಬರಲು ಸಾಧ್ಯವಿಲ್ಲದ್ದರಿಂದ ವಾಕ್ಯ ಮತ್ತು ವಾಕ್ಯಾರ್ಥ ಎರಡೂ ಕೇವಲ ಜ್ಞಾನ ಸ್ವರೂಪ ಮಾತ್ರ—ವಾಸ್ತವಿಕವೇ ಅಲ್ಲ ಎಂದು ಹೇಳಿದ್ದೂ ಸಹ ಜ್ಞಾನ ಅಂತರವಾಗಿಯೂ ವಾಕ್ಯ ಮತ್ತು ವಾಕ್ಯಾರ್ಥಗಳು ಬಾಹ್ಯವಾಗಿಯೂ ಎಲ್ಲರಿಗೂ ಅನುಭವ ಸಿದ್ಧವಾಗಿರುವುದರಿಂದ ಸಮಂಜಸವಲ್ಲ.

ಪದಾರ್ಥಕ್ಕಿಂತಲೂ ವಾಕ್ಯಾರ್ಥ ಬೇರೆಯೆ, ಅಲ್ಲವೆ? ಬೇರೆಯಾಗಿದ್ದರೆ ವಾಕ್ಯಾರ್ಥ ಅಖಂಡ ರೂಪವಾಗಬೇಕಾಗುತ್ತೆ. ಇದರಿಂದ, "ಗಜಾನಯ'—ಎಂಬ ಕಡೆಯಲ್ಲಿರುವ 'ಆನಯ'—ಪದಾರ್ಥವೇ ಬೇರೆ. 'ಅಶ್ವಮಾನಯ'—ಎಂಬ ಕಡೆಯಲ್ಲಿರುವ 'ಆನಯ'—ಪದಾರ್ಥವೇ ಬೇರೆ—ಎಂದಾಗುತ್ತೆ. ಇದು ಅನುಭವ ವಿರುದ್ಧ ಮತ್ತು ವಾಕ್ಯಾರ್ಥಗಳು ಅನಂತವಾಗಬೇಕಾಗುತ್ತೆ. ಪ್ರತ್ಯೇಕ ಪದಾರ್ಥವೇ ವಾಕ್ಯಾರ್ಥವಾದರೆ ಆ ಪದಾರ್ಥ ಆ ವಾಕ್ಯದಲ್ಲಿ ಮಾತ್ರ ತೋರಲು ಸಾಧ್ಯ. ಬೇರೆ ವಾಕ್ಯಗಳಲ್ಲಿ ಆ ಪದ ಬಂದಾಗ ಪದಾರ್ಥ ಪ್ರತೀತಿ ಇಲ್ಲದೆಯೇ ವಾಕ್ಯಾರ್ಥ ಬರಬೇಕಾಗುವುದರಿಂದ ವ್ಯಭಿಚಾರ ಅನಿವಾರ್ಯ.

ಹೀಗೆಯೇ ವಾಚಕವಾದ ಪದಗಳಲ್ಲೂ ಪ್ರತ್ಯೇಕ-ಸಮುದಾಯ ವಿಕಲ್ಪಗಳಿಂದ ಪದಸ್ವರೂಪವೂ ದುರ್ನಿರೂಪವಾಗುತ್ತದೆ. ಆದ್ದರಿಂದ ವಾಕ್ಯವೇ ಆಗಲಿ, ವಾಕ್ಯಾರ್ಥವೇ ಆಗಲಿ, ವಾಸ್ತವಿಕವಾಗಿ ಯಾವುದೂ ಇಲ್ಲ. ಕೇವಲ ಕಲ್ಪನೆ ಮಾತ್ರವೇ ಎಂಬುದು ಅವರ ವಾದ. ಇದನ್ನೇ "ಪ್ರತಿಭಾ ವಾಕ್ಯಾರ್ಥಪಕ್ಷ"—ಎನ್ನುತ್ತಾರೆ.

ಬುದ್ಧಿ ಒಳಗಿನ ವಸ್ತು. ವಾಕ್ಯ ಮತ್ತು ವಾಕ್ಯಾರ್ಥ ಬಾಹ್ಯವಸ್ತು. ಇವೆಲ್ಲಾ ಒಂದಾಗುವುದು ಅನುಭವ ವಿರುದ್ಧವಾದ್ದರಿಂದ ಈ ವಾದ ಸರಿಯಲ್ಲ.

"ಇದು ಒಂದು ವಾಕ್ಯ"—ಇಷ್ಟೂ ಒಂದು ವಾಕ್ಯಾರ್ಥ"—ಇತ್ಯಾದಿ ವ್ಯವಹಾರವಿರುವುದರಿಂದ ಇವುಗಳ ಸ್ಥಾನದಲ್ಲಿ ಐಕ್ಯಕ್ಕೆ ಆಧಾರವಾದ ಬೇರೆ ಯಾವುದೂ ಇಲ್ಲವಾದ್ದರಿಂದ ಪ್ರತಿಭೆಯೇ ಆ ಒಂದು ಪದಾರ್ಥವಾಗಬೇಕಾಗುತ್ತೆ—ಎಂದರೆ, "ಇದು ಒಂದು ವಾಕ್ಯ"—ಇತ್ಯಾದಿ ಐಕ್ಯ ವ್ಯವಹಾರಗಳು ಸಮುದಾಯ ದೃಷ್ಟಿಯಿಂದ ಬರಬಹುದೆಂದು ಅನೇಕ ಕಡೆ ಹೇಳಿರುವುದರಿಂದ "ಪ್ರತಿಭಾ ವಾಕ್ಯಾರ್ಥಪಕ್ಷ"—ಸಮಂಜಸವಲ್ಲ. ಪ್ರತ್ಯೇಕ ಸಮುದಾಯಾದಿ ವಿಕಲ್ಪಗಳನ್ನು ಅನುಭವಕ್ಕೆ ತಕ್ಕಂತೆ ಪರಿಹರಿಸಿಕೊಳ್ಳಬೇಕು.

**ಅನ್ವಿತಾಭಿಧಾನವಾದ**—ಪ್ರತ್ಯಯವೇ ಆಗಲಿ ಅಥವಾ ಪ್ರಕೃತಿಯೇ ಆಗಲಿ, ಪರಸ್ಪರ ಅನ್ವಿತವಾದ ಅರ್ಥವನ್ನೇ ಬೋಧಿಸುತ್ತದೆ ಎಂಬುದು ಸಿದ್ಧಾನ್ತದಲ್ಲೂ ಅಂಗೀಕೃತವಾಗಿದೆ. ಈ ಅಂಶ 'ದಣ್ಡೀ'—ಮುಂತಾದ ಪದಗಳಲ್ಲಿ ಸ್ಪಷ್ಟವಾಗಿದೆ. ಆ ಪದದಿಂದ ದಂಡ ವಿಶಿಷ್ಟ ಪುರುಷನ ಬೋಧೆ ಬರುತ್ತದೆ. ಅದರಲ್ಲಿ ದಂಡಕ್ಕೂ ಪುರುಷನಿಗೂ ಸಂಬಂಧವು ಸೇರಿಯೇ ಬರುತ್ತದೆ. ಅದರಲ್ಲಿ ದಂಡಕ್ಕೂ ಪುರುಷನಿಗೂ ಸಂಬಂಧವು ಸೇರಿಯೇ ತೋರುವುದು ಅನುಭವ ಸಿದ್ಧ. ಹೀಗೆ ಒಪ್ಪದಿದ್ದರೆ ಒಂದು ವಾಕ್ಯವನ್ನು ಕೇಳಿದಾಗಲೇ ಅದರಲ್ಲಿರುವ ಪದಗಳ ಅರ್ಥಗಳು ಪರಸ್ಪರ ಅನ್ವಿತವಾಗಿಯೇ ತೋರುತ್ತಿರುವುದರಿಂದ ಅನುಭವ ವಿರೋಧ ಬರುವುದು.

ಹೀಗೆ ಪದಗಳು ಪರಸ್ಪರ ಅನ್ವಿತವಾಗಿಯೇ ಪದಾರ್ಥ ಸ್ಮರಣೆಯನ್ನು ಉಂಟುಮಾಡಿ ತಮ್ಮ ತಮ್ಮ ಅರ್ಥವನ್ನು ಹೇಳುತ್ತವೆ. ಹೀಗೆ ಹೇಳುವುದರಿಂದಲೇ ಚಕ್ರ ಅಥವಾ ಅನ್ಯೋನ್ಯಾಶ್ರಯ ದೋಷಗಳಿಗೆ ಅವಕಾಶವಿಲ್ಲ.

ಒಂದು ವಾಕ್ಯದಲ್ಲಿ ಪದಾರ್ಥಗಳು ತೋರಬೇಕಾದರೆ ಆಕಾಂಕ್ಷಾದಿಗಳು ಆವಶ್ಯಕ. ಆಕಾಂಕ್ಷೆ ಗೊತ್ತಾಗಬೇಕಾದರೆ ಪದಾರ್ಥಜ್ಞಾನ ಆವಶ್ಯಕ. ಹೀಗೆ ಆ ಆಕಾಂಕ್ಷಾಜ್ಞಾನ, ಪದಾರ್ಥಜ್ಞಾನ ಎರಡಕ್ಕೂ ಅನ್ಯೋನ್ಯಾಶ್ರಯ. ಪದಾರ್ಥಸ್ಮರಣೆ, ಆಕಾಂಕ್ಷಾಜ್ಞಾನ ಪದಾರ್ಥಜ್ಞಾನ, ಈ ಮೂರೂ ಸೇರಿದರೆ ಚಕ್ರಕ. ಪದಗಳಿಂದ ಅರ್ಥ ತೋರುವಾಗಲೇ ಪರಸ್ಪರ ಅನ್ವಿತವಾಗಿಯೇ ತೋರುತ್ತದೆ ಎನ್ನುವ ಅನ್ವಿತಾಭಿದಾನವಾದದಲ್ಲಿ ಈ ದೋಷಗಳಿಗೆ ಅವಕಾಶವಿಲ್ಲ. ಇದರಿಂದಲೇ ಮೊದಲು ಪದಾರ್ಥತೋರಿ ಅನಂತರ ಅನ್ವಯಜ್ಞಾನ ಬಂದು ಮತ್ತೆ ವಾಕ್ಯಾರ್ಥಕ್ಕಾಗಿ ಪದಾರ್ಥ ತೋರಿದಾಗಲೇ ಪದಾರ್ಥ ಎರಡು ಸಲ ತೋರಬೇಕಾಗುತ್ತದೆ. ಪರಸ್ಪರ ಅನ್ವಿತವಾಗಿಯೇ ಪದಾರ್ಥಗಳು ತೋರುವುದರಿಂದ ಪದಾರ್ಥಗಳು ಎರಡು ಸಲ ತೋರಬೇಕಾದ ಆವಶ್ಯಕತೆಯಿಲ್ಲ. ಇದರಿಂದಲೇ ಅನೇಕ ವಿಶೇಷಣ ವಿಶಿಷ್ಟವಾದ ಒಂದು ವಿಶೇಷ್ಯವನ್ನು ವಾಕ್ಯ ಬೋಧಿಸುವಾಗ ವಿಶೇಷಣಗಳಿಗೆ ವಿಶೇಷ್ಯದೊಂದಿಗೆ ಪ್ರತ್ಯೇಕವಾಗಿ ಅನ್ವಯವನ್ನು ಒಪ್ಪಿದರೆ ಒಂದೊಂದು ವಿಶೇಷಣದಿಂದ ವಿಶೇಷ್ಯ ಭಿನ್ನ ಭಿನ್ನವಾಗಿ ತೋರಬೇಕಾಗಿ ಬರುವುದರಿಂದ ವಾಕ್ಯಭೇದ ದೋಷ ಪ್ರಸಕ್ತಿಯೂ, ಒಟ್ಟಿಗೆ ಎಲ್ಲವೂ ಸೇರಿ ಒಂದೇ ಸಲ ತೋರುವ ಪಕ್ಷದಲ್ಲಿ ಬರುವುದಿಲ್ಲ.

**ಅಭಿಹಿತಾನ್ವಯ ವಾದದಲ್ಲಿ ಅನುಪಪತ್ತಿ ಪ್ರದರ್ಶನ**—ಶಬ್ದ ತನ್ನ ಅರ್ಥವನ್ನು ಬೋಧಿಸಬೇಕು. ಆ ಶಬ್ದ ಮತ್ತು ಪದಾರ್ಥ ಎರಡೂ ಪರಸ್ಪರ ಅನ್ವಯ ಜ್ಞಾನವನ್ನು ಹುಟ್ಟಿಸಬೇಕು. ಹೀಗೆ ಪದದಲ್ಲಿ ಅರ್ಥೋಪಸ್ಥಾಪನ ಶಕ್ತಿ, ಪದಾರ್ಥದಲ್ಲೂ ಮತ್ತೆ ಪದದಲ್ಲೂ ಅನ್ವಯೋಪಸ್ಥಾಪನ ಶಕ್ತಿ ಎಂದು ಮೂರು ಶಕ್ತಿಗಳನ್ನು ಇದರ ವಾದಿ ಕಲ್ಪಿಸಬೇಕು. ಆದುದರಿಂದ ಈ ವಾದದಲ್ಲಿ ಗೌರವ ಅನಿವಾರ್ಯ.

ಒಂದೇ ಶಕ್ತಿಯೇ ಈ ಮೂರು ಕೆಲಸವನ್ನು ಮಾಡುವುದೆಂದರೆ ಅದಾಗದ ಕೆಲಸ. ಹೇಗೆಂದರೆ ಮೊದಲು ಅನ್ವಯದ ತೋರಿಕೆಯನ್ನು ಒಪ್ಪದೇ, ಅರ್ಥ ಬೋಧವನ್ನು ಮಾತ್ರ ಒಪ್ಪುವುದರಿಂದ ಅರ್ಥ ಬೋಧದಲ್ಲೇ ಶಕ್ತಿಯ ಕೆಲಸ ಮುಗಿದು ಹೋಗುವುದರಿಂದ ಮತ್ತೆ ಅದರಿಂದಲೇ ಮುಂದಿನ ಕಾರ್ಯಗಳು ನಡೆಯಲು ಸಾಧ್ಯವೇ ಇಲ್ಲ.

ಅನ್ವಿತಾಭಿಧಾನವಾದದಲ್ಲಂತು ಮೊದಲು ಪದಗಳಿಂದ ಪದಾರ್ಥಸ್ಮರಣೆ ಮಾತ್ರವೇ ಬರುತ್ತದೆ. ಪದಾರ್ಥಬೋಧವಲ್ಲ. ಹೀಗೆ ಸ್ಮೃತವಾದ ಅರ್ಥಗಳಿಗೆ ಪರಸ್ಪರ ಅನ್ವಯ ಯೋಗ್ಯತ್ವಾದಿ ವಿಮರ್ಶೆ ಅನಂತರ ಆಗುತ್ತದೆ. ಇದರ ಅನಂತರ ಅಷ್ಟು ಪದಾರ್ಥಗಳೂ ಒಟ್ಟು ಪರಸ್ಪರ ಅನ್ವಿತವಾಗಿ ಒಟ್ಟು ಶಾಬ್ದಬೋಧ ಬರುತ್ತದೆ. ಇಷ್ಟೂ ಒಂದು ಶಕ್ತಿಯಿಂದಲೇ ನಡೆಯುವುದರಿಂದ ಲಾಘವವಿರುತ್ತೆ. ಅಭಿಹಿತಾನ್ವಯ ವಾದದಲ್ಲಿಯಾದರೋ—ಪದದಿಂದ ಪದಾರ್ಥಬೋಧವನ್ನೇ ಒಪ್ಪುವುದರಿಂದ

ವಾಕ್ಯಾರ್ಥಬೋಧಕ್ಕೂ ಶಬ್ದಕ್ಕೂ ಸಂಬಂಧ ತಪ್ಪುವುದರಿಂದ ಅದನ್ನು ಶಾಬ್ದ ಬೋಧವೆನ್ನಲಾಗದು. ಆದ್ದರಿಂದ ಅಭಿಹಿತಾನ್ವಯವಾದಕ್ಕಿಂತ ಅನ್ವಿತಾಭಿಧಾನವಾದವೇ ಯುಕ್ತ.

ಆದರೂ, ಶ್ರೀಭಾಷ್ಯದ ಕೆಲವು ಪಂಕ್ತಿಗಳು ಪದಾರ್ಥಗಳ ಪರಸ್ಪರಾನ್ವಯವು ವಾಕ್ಯವೇದ್ಯ ಎನ್ನುತ್ತವೆ. ಹಾಗೆಯೇ ಸಿದ್ಧಾರ್ಥದಲ್ಲಿ ಮೊದಲನೆಯ ಶಕ್ತಿಗ್ರಹಣವನ್ನು ಪ್ರತ್ಯೇಕ ಪದಗಳಿಗೆ ಬೋಧಕತ್ವವನ್ನೂ ಶ್ರೀಭಾಷ್ಯದಲ್ಲೇ ಹೇಳಿದೆ. ಹೀಗಿರುವಲ್ಲಿ ಈ ಎರಡು ಪಕ್ಷಗಳಲ್ಲಿ ಯಾವುದನ್ನೂ ತ್ಯಜಿಸಿದಂತೆ ಆಗುವುದಿಲ್ಲ. ಎರಡಕ್ಕೂ ಸಮನ್ವಯವನ್ನೇ ಹೇಳಿದಂತೆಯೇ ಆಗುತ್ತೆ. ಆದ್ದರಿಂದ ಆಯಾ ಯುಕ್ತಿಗಳ ಸ್ವಾರಸ್ಯ, ಲೋಕಾನುಭವಗಳನ್ನು ಅನುಸರಿಸಿ, ಅದನ್ನೂ ನಮ್ಮ ಸಿದ್ಧಾಂತದಲ್ಲಿ ಸಂಪೂರ್ಣವಾಗಿ ಖಂಡಿಸುವುದಿಲ್ಲ.

ಸಿದ್ಧರೂಪವಾದ ಅರ್ಥವನ್ನು ಪದಗಳು ಬೋಧಿಸುತ್ತವೆಯೆಂದು ಒಪ್ಪಿದ ಮೇಲೆ ಅಭಿಹಿತಾನ್ವಯವಾದವನ್ನು ಒಪ್ಪಲೇಬೇಕು. ಮೇಲೆ ಹೇಳಿದ ಯುಕ್ತಿಗಳಿಂದ ಅನ್ವಿತಾಭಿಧಾನವಾದದಲ್ಲಿ ಔಚಿತ್ಯವಿರುತ್ತದೆ. ಇವೆರಡನ್ನೂ ಆಲೋಚಿಸಿದಲ್ಲಿ ಈ ಎರಡು ವಾದಗಳಿಗೂ ಮಧ್ಯಸ್ಥವಾದ ವಾದ ಆಚಾರ್ಯರಿಗೆ ಸಮ್ಮತವೆಂದು ತೋರುತ್ತದೆ. ವಾಕ್ಯದಿಂದ ಅನ್ವಯ ವಿಶೇಷ ನಿಶ್ಚಿತವಾಗುತ್ತೆ. ಇದರಿಂದ ಅನುಭವ ವಿರೋಧವೂ ಭಾಷ್ಯಪಂಕ್ತಿಗಳ ವಿರೋಧವೂ ಬರುವುದಿಲ್ಲ. ಇದರ ವಿಸ್ತಾರವನ್ನು ಶ್ರೀ ನ್ಯಾಯ ಪರಿಶುದ್ಧಿಯಲ್ಲಿ ನೋಡಬಹುದು.

ಸಾಮಾನಾಧಿಕರಣ್ಯದಿಂದ ನಿರ್ವಿಶೇಷ ವಸ್ತುವೇ ಸಿದ್ಧಿಸುತ್ತದೆಯೆಂಬ ನಿರ್ವಿಶೇಷವಾದಿಗಳ ಮತವು ಸರಿಯಲ್ಲ. "ನೀಲೋ ಘಟಃ"—ಇತ್ಯಾದಿ ವಾಕ್ಯ ಸಾಮಾನಾಧಿಕರಣ್ಯವನ್ನು ಬೋಧಿಸುವುದರಿಂದ "ಅದೇ ಇದು"—ಎಂಬ ಪ್ರತ್ಯಭಿಜ್ಞೆಯಂತೆ ವಿಶೇಷಣರಹಿತವಾದ ವಿಶೇಷ್ಯವನ್ನು ಮಾತ್ರವೇ ಲಕ್ಷಣೆಯಿಂದ ಹೇಳುತ್ತದೆ.

"ಸೋಽಯಂ" "ಅದೇ ಇದು"—ಎಂಬ ಪ್ರತ್ಯಭಿಜ್ಞೆಯಿಂದ ಒಂದು ವಸ್ತುವಿನಲ್ಲಿ ಪೂರ್ವಕಾಲ ಸಂಬಂಧ ಮತ್ತು ಈ ಕಾಲ ಸಂಬಂಧ ತೋರುತ್ತದೆ. ಇದು ವಿರುದ್ಧ. ಆದ್ದರಿಂದ ತಚ್ಛಬ್ದಾರ್ಥದಲ್ಲಿ ವಿಶೇಷಣವಾದ ಪೂರ್ವಕಾಲದ ಸಂಬಂಧವನ್ನೂ 'ಇದಂ' ಶಬ್ದಾರ್ಥದಲ್ಲಿ ವಿಶೇಷಣವಾದ ಈ ಕಾಲ ಸಂಬಂಧವನ್ನೂ ತ್ಯಜಿಸಿ ಲಕ್ಷಣೆಯಿಂದ ವಿಶೇಷ್ಯದ ಐಕ್ಯಮಾತ್ರ ಬೋಧಿತವಾಗುತ್ತೆ.

ಇದರಂತೆ "ನೀಲೋ ಘಟಃ"—'ನೀಲಿಯಾದ ಘಟ' —ಎಂದಾಗ ನೀಲರೂಪ ವಿಶಿಷ್ಟ ವಸ್ತುವೂ ಘಟತ್ವ ವಿಶಿಷ್ಟ ವಸ್ತುವೂ ಒಂದಾದರೆ ವಿಶೇಷಣವಾದ ನೀಲತ್ವ ಘಟತ್ವ ಅಂಶಗಳೂ ಒಂದಾಗಬೇಕಾಗುತ್ತೆ. ಇದು ಅಸಂಭವ. ಆದ್ದರಿಂದ ವಿಶೇಷಣಾಂಶವಾದ ನೀಲಿಬಣ್ಣ ಮತ್ತು ಘಟತ್ವ ಜಾತಿಯನ್ನು ಬಿಟ್ಟು ಅದಕ್ಕೆ ಆಧಾರವಾದ ದ್ರವ್ಯ ಒಂದು ಎಂಬುದು ಮಾತ್ರವೇ ಆ ವಾಕ್ಯದ ಅರ್ಥ.

ಇದರಂತೆಯೇ "ತತ್ತ್ವಮಸಿ"—ಎಬಲ್ಲಿ ಅಜ್ಞತ್ವ ವಿಶಿಷ್ಟ ಜೀವ, 'ತ್ವಂ'—ಶಬ್ದದ ಅರ್ಥ. ಸರ್ವಜ್ಞತ್ವ ವಿಶಿಷ್ಟ ಪರಮಾತ್ಮ 'ತತ್'—ಶಬ್ದದ ಅರ್ಥ. ಇವೆರಡಕ್ಕೂ ಅಭೇದ ವಿರುದ್ಧ. ಅಜ್ಞನೂ ಸರ್ವಜ್ಞನೂ ಒಂದಾಗಲು ಹೇಗೆ ಸಾಧ್ಯ? ಆದ್ದರಿಂದ ಅಜಹಲ್ಲಕ್ಷಣೆಯಿಂದ ವಿಶೇಷಣಾಂಶಗಳನ್ನು ತ್ಯಜಿಸಿ ವಿಶೇಷ್ಯವಾದ ಆತ್ಮನು ಒಬ್ಬನೇ ಎಂಬುದೇ ಸಾಮಾನಾಧಿಕರಣ್ಯದ ತಾತ್ಪರ್ಯ.—ಎಂಬುದು ನಿರ್ವಿಶೇಷಾದ್ವೈತಿಗಳ ವಾದ.

ಅನುಭವ ವಿರೋಧ, ಅತಿ ಪ್ರಸಂಗ, ಸ್ವವಚನ ವಿರೋಧಗಳಿಂದಲೂ, ತಾನು ಹೇಳಿದ ದೃಷ್ಟಾಂತ ಹೊಂದದೇ ಇರುವುದರಿಂದಲೂ. ಆ ವಾದ ಸರಿಯಲ್ಲ.

ನೀಲಿಬಣ್ಣ, ಘಟತ್ವಜಾತಿ—ಇವೆಲ್ಲ ವಿಶೇಷಣವಾಗಿ ತೋರುತ್ತಿರುವಾಗ ನಿರ್ವಿಶೇಷ ವಸ್ತುವೇ ಅಲ್ಲಿ ತೋರುತ್ತದೆ ಎಂದರೆ ಅನುಭವ ವಿರೋಧ. "ದಂಡೀ ಪುರುಷಃ"—'ದಂಡವನ್ನು ಧರಿಸಿರುವ ಪುರುಷನು"—ಎಂಬ ಸಮಾನಾಧಿಕರಣ ವ್ಯವಹಾರದಲ್ಲಿ ನಿರ್ವಿಶೇಷ ಬೋಧವನ್ನು ಒಪ್ಪಿಲ್ಲವಾದ್ದರಿಂದ, ಅತಿ ಪ್ರಸಂಗ "ವಿಶೇಷಣಗಳಿಂದ ಆಯಾ ಅಂಶಗಳು ತೋರುತ್ತವೆ"—ಎಂದು ಹೇಳುತ್ತಿರು

ವಾಗಲೇ ನಿರ್ವಿಶೇಷವೇ ಬೋಧಿತವಾಗುತ್ತೆ. ಎನ್ನುವುದರಿಂದ ತನ್ನ ವಚನಕ್ಕೆ ವಿರೋಧ ಬರುತ್ತದೆ. ಆದ್ದರಿಂದ ಸಮಾನಾಧಿಕರಣ ವಾಕ್ಯ ನಿರ್ವಿಶೇಷ ಪರವಲ್ಲ.

"ಅದೇ ಇದು"—ಎಂಬ ವ್ಯವಹಾರದಲ್ಲಿ ಹೇಳಿದ ವಿರೋಧವೂ ಸಹ ಅಂತಹ ಅನುಭವ ದಿಂದಲೇ ಪರಿಹೃತವಾಗುವುದರಿಂದ ಆ ದೃಷ್ಟಾಂತವೂ ಹೊಂದುವುದಿಲ್ಲ. ಪ್ರತ್ಯಭಿಜ್ಞೆಯನ್ನೇ ಅಲ್ಲಗಳೆದರೆ ಕ್ಷಣಿಕವಾದವೇ ಸಿದ್ಧವಾಗಬೇಕಾಗುತ್ತೆದೆ.

ಒಂದೇ ದೇಶ ಮತ್ತು ಕಾಲದಲ್ಲೇ ಒಂದು ವಸ್ತುವಿನಲ್ಲಿ ವಿರುದ್ಧ ಧರ್ಮಗಳು ಬರುವು ದಿಲ್ಲ. ಬೇರೆ ಬೇರೆ ದೇಶ ಮತ್ತು ಕಾಲದಲ್ಲಿ ಅವುಗಳಿಗೆ ವಿರೋಧವಿಲ್ಲ.

ಶರೀರ ವಾಚಕ ಶಬ್ದಗಳು ಶರೀರಿಯನ್ನೂ ಹೇಳಬಹುದಾದ್ದರಿಂದ ಪರಮಾತ್ಮನ ಶರೀರವಾದ ಜೀವವನ್ನು ಹೇಳುವ 'ತ್ವಂ' —ಶಬ್ದ ಪರಮಾತ್ಮನನ್ನು ಹೇಳುವುದರಿಂದ "ತತ್ತ್ವಮಸಿ"—ಎಂಬ ನಿರ್ದೇಶದಲ್ಲಿ ಯಾವ ವಿರೋಧವೂ ಇಲ್ಲ.

ಲಕ್ಷಣವಾಕ್ಯಗಳು ನಿರ್ವಿಶೇಷ ವಸ್ತು ಪರವಲ್ಲ. "ಸತ್ಯಂ ಜ್ಞಾನಮನಂತಂ ಬ್ರಹ್ಮ"—ಎಂಬ ವಾಕ್ಯ ಲಕ್ಷಣವಾಕ್ಯವಾದ್ದರಿಂದ "ಪ್ರಕೃಷ್ಟ ಪ್ರಕಾಶಃ ಚಂದ್ರಃ"—ಎಂಬ ವಾಕ್ಯದಂತೆ ವಸ್ತು ಸ್ವರೂಪ ಮಾತ್ರವನ್ನೇ ಹೇಳುತ್ತದೆ. **"ಸತ್ಯಂ"—ಇತ್ಯಾದಿ ವಾಕ್ಯಂ ನಿರ್ವಿಶೇಷಪರಂ ಸ್ವರೂಪ ವಾಕ್ಯ-ತ್ವಾತ್**"—ಎಂಬ ಅನುಮಾನ ಇಲ್ಲಿ ವಿವಕ್ಷಿತ.

ಆಕಾಶದಲ್ಲಿ ಚಂದ್ರ ಯಾವುದೆಂದು ತಿಳಿಯದವನು "ಚಂದ್ರ ಯಾವುದು?" (ಕಶ್ಚಂದ್ರಃ) ಎಂದು ಕೇಳಿದಾಗ, ತಿಳಿದವನು 'ಪ್ರಕೃಷ್ಟ ಪ್ರಕಾಶಃ ಚಂದ್ರಃ' (ಹೆಚ್ಚು ಬೆಳಗುತ್ತಿರುವುದೇ ಚಂದ್ರ)—ಎಂದು ಹೇಳುತ್ತಾನೆ. ಇಲ್ಲಿ ಚಂದ್ರನ ಪರಿಚಯಕ್ಕಾಗಿ ಹೇಳಿದ ಆ ಮಾತಿಗೆ ಚಂದ್ರ ಸ್ವರೂಪದ ಪರಿಚಯ ಉದ್ದೇಶವೇ ಹೊರತು, ಚಂದ್ರನಲ್ಲಿ ಪ್ರಕಾಶವೆಂಬ ಧರ್ಮವನ್ನು ಹೇಳುವುದು ಉದ್ದೇಶ ವಲ್ಲ. ಇದರಂತೆ 'ಸತ್ಯಂ ಜ್ಞಾನಂ'—ಇತ್ಯಾದಿ ವಾಕ್ಯವೂ ಬ್ರಹ್ಮಸ್ವರೂಪವನ್ನು ಹೇಳುವುದೇ ಹೊರತು ಬ್ರಹ್ಮದ ಸತ್ಯತ್ವಾದಿ ಧರ್ಮಗಳನ್ನು ಹೇಳುವುದು ಅದರ ಉದ್ದೇಶವಲ್ಲ. ಲಕ್ಷಣವಾಕ್ಯಗಳೆಲ್ಲಕ್ಕೂ ಇದೇ ನ್ಯಾಯವೇ ಇರುತ್ತದೆ. ಆದ್ದರಿಂದ ಸತ್ಯತ್ವಾದಿ ಧರ್ಮಗಳನ್ನು ಕಳೆದು ಬ್ರಹ್ಮ ನಿರ್ವಿಶೇಷವೆಂದು ಸಿದ್ಧಿಸುತ್ತದೆ.

ಹೀಗೆಂದರೆ—ಸ್ವವಚನ ವಿರೋಧಾದಿ ದೋಷಗಳಿಂದ ಅದು ಸರಿಯಲ್ಲ. ಅಸಾಧಾರಣ ಧರ್ಮವೇ ಲಕ್ಷಣ. 'ಸತ್ಯಂ ಜ್ಞಾನಂ'—ಇತ್ಯಾದಿ ವಾಕ್ಯವನ್ನು 'ಲಕ್ಷಣ ವಾಕ್ಯ'—ಎಂದು ಹೇಳುತ್ತಾ, ನಿರ್ವಿಶೇಷವೇ ಅದರಿಂದ ಪ್ರತಿಪಾದ್ಯವೆಂದರೆ ಸ್ವವಚನ ವಿರೋಧವು ಸ್ಪಷ್ಟ.

ಇದಲ್ಲದೇ ಅಬಾಧಿತವಾದ ವಾಕ್ಯವಾದ್ದರಿಂದ ಸತ್ಯಾದಿ ಪದಗಳು ಸವಿಶೇಷವನ್ನೇ ಹೇಳುತ್ತವೆ —ಎಂದು ಹಿಂದಿನ ಅನುಮಾನದಲ್ಲಿ ಸತ್ಪ್ರತಿಪಕ್ಷ ದೋಷವೂ ಬರುತ್ತದೆ.

'ಸತ್ಯಂ'—ಇತ್ಯಾದಿ ವಾಕ್ಯ ಸವಿಶೇಷಪರಂ ಅಬಾಧಿತ ವಾಕ್ಯತ್ವಾತ್ 'ಘಟವತ್ ಭೂತಲಂ'—ಇತ್ಯಾದಿ ವಾಕ್ಯವತ್"—ಎಂಬ ಪ್ರತ್ಯನುಮಾನ ಇಲ್ಲಿ ವಿವಕ್ಷಿತ.

ಇದಲ್ಲದೇ, ದೃಷ್ಟಾಂತವಾದ 'ಪ್ರಕೃಷ್ಟ ಪ್ರಕಾಶಃ'—ಇತ್ಯಾದಿ ವಾಕ್ಯದಿಂದ ಚಂದ್ರನಲ್ಲಿ ಪ್ರಕಾಶ ವೆಂಬ ಧರ್ಮ ತೋರದೇ ಇದ್ದರೆ, ಚಂದ್ರನ ಪರಿಚಯವೇ ಆಗಲು ಸಾಧ್ಯವಿಲ್ಲವಾದ್ದರಿಂದ ಅದರಲ್ಲಿ 'ನಿರ್ವಿಶೇಷಪರತ್ವ'—ಎಂಬ ಸಾಧ್ಯವಿಲ್ಲವಾದ್ದರಿಂದ, 'ದೃಷ್ಟಾಂತಾಸಿದ್ಧಿ'—ಎಂಬ ದೋಷವೂ ಬರುತ್ತೆ.

ಚಂದ್ರಸ್ವರೂಪದ ಪ್ರಶ್ನೆಗೆ ಚಂದ್ರನ ಧರ್ಮವನ್ನು ಹೇಳಿದರೆ ಅದು ಹೇಗೆ ಉತ್ತರವಾದೀತು? ಎಂದರೆ, ಪ್ರಶ್ನೆಯೂ ಸವಿಶೇಷಪರವೇ ಹೊರತು ನಿರ್ವಿಶೇಷಪರವಲ್ಲ. ಆದ್ದರಿಂದ, (ಅಪೃಷ್ಟೋತ್ತರ) —ಅಂದರೆ "ಕೇಳದಿರುವುದಕ್ಕೆ ಇದು ಉತ್ತರವಾಗುತ್ತದೆ"—ಎಂಬ ಪರಿಹಾಸಕ್ಕೆ ಅವಕಾಶವಿಲ್ಲ.

## Some Opinions

1. I have generally followed the guidance of Sankara, as he seems to carry the Vedanta doctrine to the highest point, but I feel bound to say that Ramanuja is, on many points, the more faithful interpreter of Vedanta Sutras.

— Prof. Max Muller

2. Ramanuja is the greatest exponent of Hindu theism and the greatest Philosopher of Bhakti. His analogy of Self-Body relationship between God and the Universe is the best way. Ramanuja's doctrine is the heart of Vedanta and a clear expression of the real concerns of the Brahma Sutras. — Prof. Ninian Smart

3. Ramanuja expounds the Gita in his Bhashya in a manner far closer to the intention of its author. — W. D. P. Hill

4. The view of Ramanuja is one of the moral obligations to be discharged disinterestedly, without any desire for the consequences. The theory of modified monism, found in some Upanishads and the Bhagavadgita is adopted by him. — Dr. Susheela Kumar Maitra

5. Ramanuja's Bhashya does full justice to the intentions of the Gita.......He has restored the Gita not only in the hearts but also in the minds of the Indian thinkers restoring unity of religion and philosophy.

— Prof. J. A. B. Van Britenin

6. The movement of Sankara forced its way through its high intellectuality but it could be of little service to the masses ...... on the other hand, Ramanuja, with his Sariri-Sharira Bhava of God and world, a most practical philosophy, a great appeal to the emotions and entire denial of birthrights before spiritual attainments and its appeal through the popular tongue, completely succeeded in bringing the masses back to the Vedic Religion.

— Swamy Vivekananda

Ramanuja retains the realism of the Astika Philosophies and synthesises the various currents of Vedic ritualism, Bhagavata devotion, Philosophy of the Alwars and Monism of Vedanta. S. N. Dasagupta

# ಬ್ರಹ್ಮಸೂತ್ರಗಳು

ಶ್ರಿಯೈ ನಮಃ

ಶ್ರೀ ಲಕ್ಷ್ಮೀಹಯವದನ ಪರಬ್ರಹ್ಮಣೇ ನಮಃ

ಲಕ್ಷ್ಮೀನಾಥ ಸಮಾರಂಭಾಂ ನಾಥಯಾಮುನಮಧ್ಯಮಾಂ ।
ಅಸ್ಮದಾಚಾರ್ಯ ಪರ್ಯಂತಾಂ ವಂದೇ ಗುರು–
ಪರಂಪರಾಮ್ ॥

ವ್ಯಾಸಂ ವಸಿಷ್ಠನಪ್ತಾರಂ ಶಕ್ತೇಃ ಪೌತ್ರಮಕಲ್ಮಷಂ ।
ಪರಾಶರಾತ್ಮಜಂ ವಂದೇ ಶುಕತಾತಂ ತಪೋನಿಧಿಂ ॥

## ಬ್ರಹ್ಮಸೂತ್ರ ಪ್ರಥಮಾಧ್ಯಾಯಃ

### ಪಾದ ೧



**ಅಧಿಕರಣ ಸಂಖ್ಯಾ-೧೧ ಸೂತ್ರಸಂಖ್ಯಾ-೩೨**

### ಅಥ ದ್ವಿತೀಯ ಪಾದಃ

**ಒಟ್ಟು ಅಧಿಕರಣಗಳು–೧೭**

**ಸೂತ್ರಗಳು ೬೫**



## ಅಥ ತೃತೀಯಃ ಪಾದಃ



**ಒಟ್ಟು ಅಧಿಕರಣಗಳು-೨೭**

**ಸೂತ್ರಗಳು ೧೧೦**

## ಅಥ ಚತುರ್ಥಃ ಪಾದಃ

ಪುಟ



**ಒಟ್ಟು ಅಧಿಕರಣಗಳು-೩೫**

**ಸೂತ್ರಗಳು-೧೩೮**

## ಅಥ ದ್ವಿತೀಯಧ್ಯಾಯಃ

## ಪ್ರಥಮ ಪಾದಃ



**ಒಟ್ಟು ಅಧಿಕರಣಗಳು-೪೫**

**ಸೂತ್ರಗಳು-೧೭೪**

## ಅಥದ್ವಿತೀಯಾಧ್ಯಾಯಸ್ಯ ದ್ವಿತೀಯಃ ಪಾದಃ

## ಒಟ್ಟು ಅಧಿಕರಣಗಳು–೫೩
## ಸೂತ್ರಗಳು ೨೧೬

## ಅಥ ದ್ವಿತೀಯಾಧ್ಯಾಯಸ್ಯ ತೃತೀಯಃ ಪಾದಃ

**ಒಟ್ಟು ಅಧಿಕರಣ ಸಂಖ್ಯೆ—೬೦**
**ಸೂತ್ರಗಳು ೨೬೮**

## ಅಥ ದ್ವಿತೀಯಾಧ್ಯಾಯಸ್ಯ ಚತುರ್ಥಃ ಪಾದಃ



**ಒಟ್ಟು ಅಧಿಕರಣಸಂಖ್ಯೆ—೬೮**
**ಸೂತ್ರಗಳು ೨೮೭**

## ಅಥ ತೃತೀಯಾಧ್ಯಾಯಃ ಪ್ರಥಮ ಪಾದಃ

**ಒಟ್ಟು ಅಧಿಕರಣಗಳು–೧೦೮**
**ಸೂತ್ರಗಳು ೪೧೮**

ಪುಟ

## ಅಥ ತೃತೀಯಾಧ್ಯಾಯಸ್ಯ ಚತುರ್ಥಃ ಪಾದಃ



### ಒಟ್ಟು ಅಧಿಕರಣಗಳು—೧೨೩ ಸೂತ್ರಗಳು ೪೭೯

## ಅಥ ಚತುರ್ಥಾಧ್ಯಾಯಃ—ಪ್ರಥಮ ಪಾದಃ

**ಒಟ್ಟು ಅಧಿಕರಣಗಳು—೧೩೪**

**ಸೂತ್ರಗಳು ೪೮೮**

## ಅಥ ಚತುರ್ಥಾಧ್ಯಾಯಸ್ಯ ದ್ವಿತೀಯ ಪಾದಃ



**ಒಟ್ಟು ಅಧಿಕರಣಗಳು—೧೪೫**

**ಸೂತ್ರಗಳು-೫೦೮**

## ಅಥ ಚತುರ್ಥಾಧ್ಯಾಯಸ್ಯ ತೃತೀಯಃ ಪಾದಃ



**ಒಟ್ಟು ಅಧಿಕರಣಗಳು—೧೫೦**

**ಸೂತ್ರಗಳು-೫೨೩**

## ಅಥ ಚತುರ್ಥಾಧ್ಯಾಯಸ್ಯ ಚತುರ್ಥಃ ಪಾದಃ

ಇತಿ ಬ್ರಹ್ಮಸೂತ್ರೇಷು ಚತುರ್ಥಸ್ಯಾಧ್ಯಾಯಸ್ಯ ಚತುರ್ಥಃ ಪಾದಃ ಸಮಾಪ್ತಃ

**ಒಟ್ಟು ಅಧಿಕರಣ ಸಂಖ್ಯೆ–೧೫೬**

**ಸೂತ್ರಗಳು ೫೪೫**

* ಈ ಗುರ್ತಿನವು ಅಧಿಕರಣಗಳು

ಓಂ ಶ್ರೀ ಗುರುಭ್ಯೋ ನಮಃ

# ಶ್ರೀ ಭಾಷ್ಯಾಮೃತಸಾರ

ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ

1. ಸಂಸಾರವೆಂಬುದು ಬಹು ದುಃಖಭೂಯಿಷ್ಠವಾದದ್ದು. ಈ ಲೋಕದಲ್ಲಿ ಸಕಲ ಚೇತನರೂ,

"ಅನೇಕ ಜನ್ಮಸಾಹಸ್ರೀಂ ಸಂಸಾರಪದವೀಂ ವ್ರಜನ್।
ಮೋಹಾತ್ ಶ್ರಮಂ ಪ್ರಯಾತೋऽಸೌ ವಾಸನಾರೇಣುಕುಂಠಿತಃ ॥"

—ಎಂದು ಹೇಳಿರುವ ಪ್ರಕಾರ, ಅವಿದ್ಯಾ-ಕರ್ಮ-ವಾಸನಾ-ರುಚಿ-ಪ್ರಕೃತಿ ಸಂಬಂಧರೂಪವಾದ ಜನ್ಮ-ಜರಾ-ಮರಣಾದಿ ವಿಚಿತ್ರ ಸಂಸಾರ ಚಕ್ರದಲ್ಲಿ ಸಿಕ್ಕಿಕೊಂಡು, ಹೊರಬರಲು ಉಪಾಯವನ್ನು ಕಾಣದೆ ಅದರಲ್ಲಿಯೇ ಸುತ್ತುತ್ತಾ, "ಭಗವತ್ಸ್ವರೂಪ ತಿರೋಧಾನ ಕರೀಂ, ವಿಪರೀತ ಜ್ಞಾನಜನನೀಂ ಸ್ವವಿಷಯಾಯಾಶ್ಚ ಭೋಗ್ಯಬುದ್ಧೇರ್ಜನನೀಂ..." —ಎಂಬಂತೆ ದುರ್ನಿವಾರವಾದ ಮಹತ್ತರ ತ್ರಿಗುಣಾತ್ಮಕ ಪ್ರಕೃತಿಯೆಂಬ ಪಿಶಾಚಿಕೆಯ ಆವೇಶದಿಂದ ತತ್ತ್ವಾಜ್ಞಾನ ವಿಪರೀತ ಜ್ಞಾನ-ವಿಷಯ ಪ್ರಾವಣ್ಯಗಳುಳ್ಳವರಾಗಿ,

"ಮಾಂಸಾಸೃಕ್ಪೂಯ ವಿಣ್ಮೂತ್ರ ಸ್ನಾಯುಮಜ್ಜಾಸ್ಥಿ ಸಂಭವಾ।
ದೇಹೇ ಚೇತ್ಪ್ರೀತಿಮಾನ್ ಮೂಢೋ ಭವಿತಾ ನರಕೇऽಪಿ ಸಃ"—

"ಅಸ್ಥಿಸ್ಥೂಣಂ ಸ್ನಾಯುಬದ್ಧಂ ಮಾಂಸಶೋಣಿತ ಲೇಪನಂ।
ಚರ್ಮಾವರುದ್ಧಂ ದುರ್ಗಂಧಿ ಪಾತ್ರಂ ಮೂತ್ರಪುರೀಷಯೋಃ ॥
ಜರಾಶೋಕ ಸಮಾವಿಷ್ಟಂ ರೋಗಾಯತನಮಾತುರಂ।
ರಜಸ್ವಲಮನಿತ್ಯಂ ಚ ಭೂತಾವಾಸಮಿಮಂ ತ್ಯಜೇತ್ ॥"

ಇತ್ಯಾದಿಯಿಂದ ಅತ್ಯಂತ ಹೇಯವಾಗಿ ಉಲ್ಲೇಖಿಸಲ್ಪಟ್ಟಿರುವ ಶರೀರಾದಿಗಳಲ್ಲಿ ಭೋಗ್ಯತಾ ಬುದ್ಧಿಯನ್ನು ಮಾಡಿಕೊಂಡು "ತ್ವಂ ಮೇऽಹಂ ಮೇ ಕುತಸ್ತತ್ತದಪಿ ಕುತ ಇದಂ..."—ಇತ್ಯಾದಿಯಾದ ಅಭಿಯುಕ್ತೋಕ್ತಿಯಂತೆ ಭ್ರಮರೂಪವಾದ ಅಹಂಕಾರ-ಮಮಕಾರಗಳಿಂದ ಕಲುಷಿತ ಹೃದಯರಾಗಿ, "ಪಾಪಂ ಪ್ರಜ್ಞಾಂ ನಾಶಯತಿ ಕ್ರಿಯಮಾಣಂ ಪುನಃ ಪುನಃ। ನಷ್ಟಪ್ರಜ್ಞಃ ಪಾಪಮೇವ ಕರ್ತುಮಾರಭತೇ ಪುನಃ ॥" —ಎಂಬಂತೆ, ಮೇಲ್ಮೇಲೆ ಮಾಡುವ ಅಪರಾಧ ಪರಂಪರೆಯಿಂದ ಅವುಗಳ ಫಲಗಳನ್ನು ಅನುಭವಿಸುತ್ತಾ "ತದ್ಯಥಾ ಹಿರಣ್ಯನಿಧಿಂ ನಿಹಿತ ಮಕ್ಷೇತ್ರಜ್ಞಾ ಉಪರ್ಯುಪರಿ ಸಂಚರನ್ತೋ ನ ವಿಂದೇಯುಃ ಏವಮೇವೇಮಾಶಾಃ ಪ್ರಜಾಃ ಅಹರಹರ್ಗಚ್ಛನ್ತ್ಯಃ ಏತಂ

ಬ್ರಹ್ಮಲೋಕಂ ನ ವಿಂದಂತಿ ಅನೃತೇನ ಹಿ ಪ್ರತ್ಯೂಢಾಃ...... ' —ಎಂಬ ಶ್ರುತಿಯಂತೆ ಯಥಾವಸ್ಥಿತವಾದ ಪರಮಾತ್ಮ ಜ್ಞಾನರಹಿತರಾಗಿ ಸ್ವರೂಪ ಪ್ರಾಪ್ತವಾದ ಪರಿಪೂರ್ಣ ಭಗವದನುಭವಾತ್ಮಕ ಕೈಂಕರ್ಯವನ್ನು ಪಡೆಯದೆ ಮತ್ತೆ ಮತ್ತೆ ಹುಟ್ಟುತ್ತಿರುತ್ತಾರೆ.

2. (ಅ) ಈ ಸಂಸಾರದಿಂದ ಪಾರಾಗಲು ಅವರವರ ಅಧಿಕಾರಾನುಗುಣವಾಗಿ ಭಕ್ತಿ ಅಥವಾ ಪ್ರಪತ್ತಿಯೆಂಬುದೊಂದೇ ಉಪಾಯ. "ತಮೇವಂ ವಿದ್ವಾನಮೃತ ಇಹ ಭವತಿ, ನಾನ್ಯಃ ಪನ್ಥಾ ಅಯನಾಯ ವಿದ್ಯತೇ." "ವಿಜ್ಞಾಯ ಪ್ರಜ್ಞಾಂ ಕುರ್ವೀತ," "ಅನುವಿದ್ಯ ವಿಜಾನಾತಿ", "ಓಮಿತ್ಯಾತ್ಮಾನಂ ಧ್ಯಾಯಥ," "ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ," "ಆತ್ಮಾನಮೇವ ಲೋಕ ಮುಪಾಸೀತ," "ದ್ರಷ್ಟವ್ಯ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ," "ಭಿದ್ಯತೇ ಹೃದಯ ಗ್ರಂಥಿಃ ಛಿದ್ಯನ್ತೇ ಸರ್ವಸಂಶಯಾಃ। ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ." "ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ,"—ಇತ್ಯಾದಿ ಶ್ರುತಿಗಳೂ, "ನಾಹಂ ವೇದೈರ್ನತಪಸಾ ನ ದಾನೇನ ನ ಚೇಜ್ಯಯಾ। ಭಕ್ತ್ಯಾ ತ್ವನನ್ಯಯಾ ಶಕ್ಯಃ ಅಹಮೇವಂ ವಿಧೋಽರ್ಜುನ", "ಭ್ರಾಮ್ಯತಾ ಮತ್ರಸಂಸಾರೇ ನರಾಣಾಂ ಕರ್ಮದುರ್ಗಮೇ। ಹಸ್ತಾವಲಂಬನೋ ಹ್ಯೇಕೋ ಭಕ್ತಿಕ್ರೀತೋ ಜನಾರ್ದನಃ" "ಭಕ್ತ್ಯಾ ಪರಮಯಾ ವಾಪಿ......" —ಇತ್ಯಾದಿ ಸ್ಮೃತಿಗಳೂ ಶಕ್ತಾಧಿಕಾರಿಗಳಿಗೆ ಪರಮಪುರುಷಪ್ರಾಪ್ತಿಗೆ ಭಕ್ತಿಯೇ ಉಪಾಯವೆಂಬುದಕ್ಕೆ ಪ್ರಮಾಣಗಳು.

(ಆ) "ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ", "ತಸ್ಮಾನ್ನ್ಯಾಸಮೇಷಾಂ ತಪಸಾ ಮತಿರಿಕ್ತಮಾಹುಃ"—"ಸಕೃದುಚ್ಚಾರ ಸ್ಸಂಸಾರ ಮೋಚನಂ ಭವತಿ"— ಇತ್ಯಾದಿ ಶ್ರುತಿಗಳೂ,

"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ। ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ"— ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ। ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ।।"— ಲೋಕವಿಕ್ರಾನ್ತ ಚರಣೌ ಶರಣಂ ತೇಽವ್ರಜಂ ವಿಭೋ॥" "ವೃಥೈವ ಭವತೋ ಯಾತಾ ಭೂಯಸೀ ಜನ್ಮಸನ್ತತಿಃ। ತಸ್ಯಾಮನ್ಯತಮಂ ಜನ್ಮ ಸಂಚಿಂತ್ಯ ಶರಣಂ ವ್ರಜ॥" "ನ್ಯಾಸಃ ಪಂಚಾಂಗ ಸಂಯುತಃ"—"ತ್ವಮೇವೋಪಾಯ ಭೂತೋ ಮೇ ಭವೇತಿ ಪ್ರಾರ್ಥನಾಮತಿಃ। ಶರಣಾಗತಿರಿತ್ಯುಕ್ತಾ ಸಾ ದೇವೇಽಸ್ಮಿನ್ ಪ್ರಯು ಜ್ಯತಾಂ'—"ಶರಣಂ ತ್ವಾಂ ಪ್ರಪನ್ನಾಯೇ ಧ್ಯಾನಯೋಗ ವಿವರ್ಜಿತಾಃ"। "ಆತ್ಮಾತ್ಮೀಯ ಭರನ್ಯಾಸೋ ಹ್ಯಾತ್ಮನಿಕ್ಷೇಪ ಉಚ್ಯತೇ", "ತಾವದಾರ್ತಿಸ್ತಥಾ ವಾಂಛಾ ತಾವನ್ಮೋಹಸ್ತಥಾಽಸುಖಂ। ಯಾವನ್ನಯಾತಿ ಶರಣಂ ತ್ವಾಮಶೇಷಾಘನಾಶನಂ," —ಇತ್ಯಾದಿ ಸ್ಮೃತಿಗಳೂ ಪರಮಪುರುಷ ಪ್ರಾಪ್ತಿಗೆ ಅವನ ಚರಣಾರವಿಂದದಲ್ಲಿ ಶರಣಾಗತಿ (ಪ್ರಪತ್ತಿ) ಮಾಡುವುದೇ ಭಕ್ತ್ಯಾದಿಗಳಲ್ಲಿ ಅಶಕ್ತರಿಗೆ ಉಪಾಯವೆನ್ನುವುದಕ್ಕೆ ಪ್ರಮಾಣಗಳು.

3. (ಅ) ಇವೆರಡು ವಿಕಲ್ಪಿತ ಪ್ರಮಾಣಗಳಲ್ಲಿ—ಭಕ್ತಿಯ ಸ್ವರೂಪ—"ಉಪಾಯ ಭಕ್ತಿಃ ಪ್ರಾರಬ್ಧ ವ್ಯತಿರಿಕ್ತಾಘನಾಶಿನೀ॥" ಎಂದಿರುವಂತೆ, ಪ್ರಾರಬ್ಧವೊಂದನ್ನು ಬಿಟ್ಟು ಉಳಿದ ಪುಣ್ಯ-ಪಾಪಕರ್ಮಗಳನ್ನು ಮಾತ್ರವೇ ನಾಶಮಾಡಬಲ್ಲದೆಂಬುದು. ಉಪಾಯ ಭಕ್ತಿಯೆಂಬುದು ಪರಮ ಪುರುಷೋಪಾಸನೆ. ಪ್ರಾರಬ್ಧಕರ್ಮವನ್ನು ಅಳಿಸುವ ಶಕ್ತಿ ಇದಕ್ಕಿಲ್ಲ. ಈ ಉಪಾಸನೆಗೆ ಅಷ್ಟಾಂಗಯೋಗವೆಂದೂ ಹೆಸರು. ಇದು ಕರ್ಮಯೋಗ-ಜ್ಞಾನಯೋಗಗಳಿಂದ ಸಂಸ್ಕೃತವಾದ ಅಂತಃಕರಣದಿಂದ ಸಾಧ್ಯ. ಇದರಲ್ಲಿ ಅಧಿಕಾರವು ತ್ರೈವರ್ಣಿಕರಿಗೆ ಮಾತ್ರ. ಈ ಯೋಗ ಬಹುಕಷ್ಟ ಸಾಧ್ಯ. ಆಯಾ ವರ್ಣಾಶ್ರಮ ಧರ್ಮಗಳ ಅನುಷ್ಠಾನವು ಇದಕ್ಕೆ ಅಂಗ. ತೈಲಧಾರೆಯಂತೆ ಅವಿಚ್ಛಿನ್ನ ಸ್ಮೃತಿ ಸಂತಾನ ರೂಪವಾಗಿರಬೇಕಾದುದಿದು. ಪ್ರತಿನಿತ್ಯವೂ ಬಿಡದೆ ಇದನ್ನು ಯಾವಜ್ಜೀವವೂ ಅನುಷ್ಠಿಸುತ್ತಲೇ ಇರಬೇಕು. ಪ್ರೀತಿರೂಪವನ್ನು ಹೊಂದಿದ ಇದು ದಿನದಿನಕ್ಕೂ ಅಭ್ಯಾಸ ಬಲದಿಂದ ಪರಭಕ್ತಿ-ಪರಜ್ಞಾನ-ಪರಮ ಭಕ್ತಿರೂಪದಿಂದ ಅತಿಶಯವಾಗಿ ವೃದ್ಧಿ ಹೊಂದುತ್ತಾ ಧ್ಯೇಯನಾದ ಪರಮಪುರುಷನ ದರ್ಶನ ಸಮಾನಾಕಾರವಾದ ಸಾಕ್ಷಾತ್ಕಾರದಲ್ಲಿ ಕೊನೆಗೊಳ್ಳಬೇಕು. ಅಂತಿಮ ಸ್ಮೃತಿಯು ಈ ಅಧಿಕಾರಿಗಳಿಗೆ ಸ್ವಯತ್ನದಿಂದ ಉಂಟಾಗಬೇಕು. ಇವರಿಗೆ ಪ್ರಾರಬ್ಧ ಕರ್ಮವು ಕಳೆದ ಮೇಲೆಯೇ ಮೋಕ್ಷ.

(ಆ) ಪ್ರಪತ್ತಿಯ ಸ್ವರೂಪ—"ಸಾಧ್ಯಭಕ್ತಿಸ್ತು ಸಾ ಹಂತ್ರೀ ಪ್ರಾರಬ್ಧಸ್ಯಾಪಿ ಭೂಯಸೀ"—ಎಂದಿರುವಂತೆ ಸಾಧ್ಯಭಕ್ತಿಯೆನಿಸಿದ ಪ್ರಪತ್ತಿಯು ಪ್ರಾರಬ್ಧಕರ್ಮವನ್ನೂ ನಾಶ ಮಾಡಬಲ್ಲದು. ಇದಕ್ಕೆ ಷಡಂಗಯೋಗವೆಂದೂ ಹೆಸರು. ಮಹಾವಿಶ್ವಾಸಾದಿ ಐದು ಅಂಗಗಳಿಂದ ಸಂಸ್ಕೃತವಾದ ಅಂತಃಕರಣದಿಂದ ಸಾಧ್ಯವಾದುದಿದು. ಅನನ್ಯಗತಿಕರಾದವರೆಲ್ಲರಿಗೂ ಇದರಲ್ಲಿ ಅಧಿಕಾರವಿದೆ. ಆನುಕೂಲ್ಯದ ಸಂಕಲ್ಪ, ಪ್ರಾತಿಕೂಲ್ಯದ ವರ್ಜನ, ರಕ್ಷಿಸುವನೆಂಬ ದೃಢವಿಶ್ವಾಸ, ಗೋಪ್ತೃತ್ವವರಣ, ಕಾರ್ಪಣ್ಯ (ಆಕಿಂಚನ್ಯ, ಅನನ್ಯಗತಿಕತ್ವ)—ಈ ಐದು ಅಂಗಗಳನ್ನು ಬಿಟ್ಟು ಮತ್ತೆ ಯಾವ ಪರಿಕರವೂ ಇದಕ್ಕೆ ಬೇಕಿಲ್ಲ. ಆತ್ಮನಿಕ್ಷೇಪವೆಂಬುದು ಅಂಗಿ, ಮಿಕ್ಕ ಮೇಲೆ ಹೇಳಿದ ಅನುಕೂಲ್ಯ ಸಂಕಲ್ಪಾದಿ ಐದೂ ಅಂಗಗಳು. ಅಂಗಿಯೊಡನೆ ಸೇರಿ ಇದು ಷಡಂಗವೆನಿಸಿದೆ. ಮೇಲೆ ಹೇಳಿದ ಭಕ್ತಿಯೆಂಬ ಉಪಾಯಕ್ಕಿಂತ ಇದು ಸುಕರ. ಅದರಂತೆ ಇದನ್ನು ನಿತ್ಯವೂ ಅನುಷ್ಠಿಸಬೇಕಾಗಿಲ್ಲ. ಮತ್ತು ಅನುಷ್ಠಿಸಲೂ ಬಾರದು. "ಸಕೃದೇವ......" ಎಂಬಂತೆ ಇದು ಒಂದೇ ಬಾರಿ ಅನುಷ್ಠಿಸಲ್ಪಡಬೇಕಾದ್ದು. ಅನಂತರ ಇದರ ಬಗ್ಗೆ ಮತ್ತೇನೂ ಕರ್ತವ್ಯವಿರುವುದಿಲ್ಲ. ಈ ಅಧಿಕಾರಿಗೆ ಅಂತಿಮ ಸ್ಮೃತಿಗೆ ಸ್ವಪ್ರಯತ್ನವು ಬೇಕಿಲ್ಲ. ಇದರ ಮೂಲಕ ನಮ್ಮ ಆತ್ಮಾತ್ಮೀಯ ಸಕಲ ರಕ್ಷಣದ ಭಾರವನ್ನೂ ಪ್ರಾರ್ಥನಾ ಮೂಲಕ ಶರಣ್ಯನಾದ ಭಗವಂತನಲ್ಲಿ ಅರ್ಪಿಸುವುದಾದದ್ದರಿಂದ ಈ ಪ್ರಪತ್ತಿಗೆ ಭರ ಸಮರ್ಪಣವೆಂದೂ ಹೆಸರು. ಸಾಂಗವಾಗಿ ಒಂದು ಬಾರಿ ತಾನೇಯೋ ಅಥವಾ ಆಚಾರ್ಯನ ಮೂಲಕವಾಗಿಯೋ ಮುಮುಕ್ಷುವು ತನ್ನ ರಕ್ಷಣ ಭಾರವನ್ನು ಭಗವಂತನಲ್ಲಿ ಸಮರ್ಪಿಸಿದಲ್ಲಿ, ಅದರಲ್ಲಿ ಕೋರಿದ ಫಲ ದೊರಕಿಯೇ ದೊರಕುವುದೆಂಬುದು ಸಿದ್ಧಾಂತ. ಶಾಸ್ತ್ರೈಕ ಸಮಧಿಗಮ್ಯವಾದ ಯಥಾವಸ್ಥಿತ ತತ್ತ್ವಜ್ಞಾನವಿಲ್ಲದಿದ್ದಲ್ಲಿ ಈ ಭಕ್ತಿ-

ಪ್ರಪತ್ತಿಗಳೆಂಬವೆರಡು ಉಪಾಯಗಳೂ ಸಿದ್ಧಿಸವು. ಪ್ರಪನ್ನರಿಗೆ ವಿದ್ಯಮಾನ ದೇಹಾವಸಾನದಲ್ಲಿ ಅಥವಾ ಕೋರಿದ ಕಾಲದಲ್ಲಿಯೇ ಮೋಕ್ಷ.

4. ತತ್ತ್ವತ್ರಯ ನಿರೂಪಣ—ಚೇತನ, ಅಚೇತನ, ಈಶ್ವರ—ಎಂಬುದಾಗಿ ಶಾಸ್ತ್ರೋದಿತವಾದ ತತ್ತ್ವಗಳು ಮೂರು. "ಏಕಮೇವಾದ್ವಿತೀಯಂ"—ಎಂಬಲ್ಲಿಯ ಏಕತ್ವವ್ಯಪದೇಶವಾದರೋ—ವಿಶೇಷ್ಯ-ವಿಶೇಷಣ ಭಾವದಿಂದ ವಿಶಿಷ್ಟೈಕ್ಯವೆನ್ನುವ ಅರ್ಥದಲ್ಲಿ ಸಂಗತವಾಗುತ್ತೆ. "ಅಶೇಷಚಿದಚಿತ್ಪ್ರಕಾರಂ ಬ್ರಹ್ಮೈಕಮೇವ ತತ್ತ್ವಂ. ತತ್ರ ಪ್ರಕಾರ-ಪ್ರಕಾರಿಣೋಃ ಪ್ರಕಾರಾಣಾಂ ಚ ಮಿಥೋಽತ್ಯನ್ತ ಭೇದೇಽಪಿ ವಿಶಿಷ್ಟೈಕ್ಯಾದಿ ವಿವಕ್ಷಯಾ ಏಕತ್ವವ್ಯಪದೇಶಃ ತದಿತರನಿಷೇಧಶ್ಚ"—ಎಂಬುದಾಗಿ ನ್ಯಾಯ ಸಿದ್ಧಾಂಜನದಲ್ಲಿ ಶ್ರೀಮದಾಚಾರ್ಯರ ಶ್ರೀಸೂಕ್ತಿಯಿದೆ. "ಯಥಾ ಪ್ರಯೋಗ್ಯ ಆಚರಣೇಯುಕ್ತಃ ಏವಮೇವಾಸ್ಮಿನ್ ಶರೀರೇ ಪ್ರಾಣೋಯುಕ್ತಃ"—ಎಂಬಂತೆ, ಮೊದಲು ರಥವೆಂಬದಾಗಿ ನಿರೂಪಿತವಾದ ದೇಹವನ್ನು ತಿಳಿದು, ಬಳಿಕ, ಅದಕ್ಕೆ ಅಂತರ್ಯಾಮಿಯಾದ ಜೀವಾತ್ಮನನ್ನು ತಿಳಿದು ಬಳಿಕ ಅವನಿಗೂ ಅಂತರ್ಯಾಮಿಯಾದ ಪರಮಾತ್ಮನನ್ನು ತಿಳಿಯತಕ್ಕದ್ದು. ಈ ಕ್ರಮದಿಂದ ಮೊದಲು ಅಚೇತನ ತತ್ತ್ವವು ನಿರೂಪಿಸಲ್ಪಡುತ್ತೆ—

(ಅ) "ಅಚೇತನಾ ಪರಾರ್ಥಾ ಚ ನಿತ್ಯಾ ಸತತ ವಿಕ್ರಿಯಾ। ತ್ರಿಗುಣಾ ಕರ್ಮಿಣಾಂ ಕ್ಷೇತ್ರಂ ಪ್ರಕೃತೇ ರೂಪಮುಚ್ಯತೇ"—ಎಂದಿರುವಂತೆ ಅಚೇತನ ತತ್ತ್ವವು ಜಡ, ನಿತ್ಯ, ಸತತ ಪರಿಣಾಮಶಾಲಿ ಸತ್ತ್ವಾದಿ ಗುಣತ್ರಯಮಯ, ಜೀವರ ಕರ್ಮಫಲೋಪಭೋಗಕ್ಕೆ ಸ್ಥಾನವಾಗಿದೆ.

(ಆ) ಚೇತನ ತತ್ತ್ವ ನಿರೂಪಣೆ—

"ದೇಹೇನ್ದ್ರಿಯ ಮನಃ ಪ್ರಾಣಧೀಭ್ಯೋಽನ್ಯೋಽನನ್ಯ ಸಾಧನಃ ।
ನಿತ್ಯೋ ವ್ಯಾಪೀ ಪ್ರತಿಕ್ಷೇತ್ರಮಾತ್ಮಾಭಿನ್ನಸ್ಸ್ವತಸ್ಸುಖೀ॥"

"ನಾಯಂ ದೇವೋ ನಮರ್ತ್ಯೋವಾ ನ ತಿರ್ಯಕ್‌ಸ್ಥಾನ ರೋಽಪಿ ವಾ। ಜ್ಞಾನಾನನ್ದಮಯ ಸ್ತ್ವಾತ್ಮಾ ಶೇಷೋಹಿ ಪರಮಾತ್ಮನಃ"॥ "ದಾಸಭೂತಾಸ್ಸ್ವತಸ್ಸರ್ವೇಹ್ಯಾತ್ಮಾನಃ ಪರಮಾತ್ಮನಃ"—ಇತ್ಯಾದಿ ಪ್ರಮಾಣಗಳ ಅನುಸಾರ, ದೇಹೇಂದ್ರಿಯಾದಿಗಳಿಗಿಂತ ವಿಲಕ್ಷಣನೂ, ಅಣುಸ್ವರೂಪನೂ, ಸ್ವಯಂ ಪ್ರಕಾಶನೂ, ನಿತ್ಯನೂ, ಅತಿಸೂಕ್ಷ್ಮವಾದುದರಿಂದ ಸರ್ವಾಚೇತನಗಳೊಳಗೆ ಪ್ರವೇಶಿಸಲು ಯೋಗ್ಯನೂ, ಪ್ರತಿ ಶರೀರದಲ್ಲಿಯೂ ಭಿನ್ನನೂ, ಜ್ಞಾನಾನಂದಸ್ವರೂಪನೂ, ಪರಶೇಷತೈಕರಸನೂ, ಪರಾಧೀನ ಸ್ವರೂಪ ಸ್ಥಿತಿ ಪ್ರವೃತ್ತಿಕನೂ ಪರಿಪೂರ್ಣ ಭಗವದನುಭವಕ್ಕೆ ಯೋಗ್ಯನೂ ಆದವನು ಚೇತನ.

(ಇ) ಈಶ್ವರ ತತ್ತ್ವನಿರೂಪಣೆ—"ಸನ್ಮೂಲಾಸ್ಸೋಮ್ಯೇಮಾಸ್ಸರ್ವಾಃ ಪ್ರಜಾಸ್ಸದಾಯತನಾಃ ಸತ್ಪ್ರತಿಷ್ಠಾಃ"— "ಏತಸ್ಯವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾ ಪೃಥಿವ್ಯೌ ವಿಧೃತೇ ತಿಷ್ಠತಃ"— "ಪತಿಂ ವಿಶ್ವಸ್ಯ—". "ಅಂತಃ ಪ್ರವಿಷ್ಟಶ್ಶಾಸ್ತಾ ಜನಾನಾಂ ಸರ್ವಾತ್ಮಾ" —"ಏಕಮೇವಾದ್ವಿತೀಯಂ"— "ತದೈಕ್ಷತ ಬಹುಸ್ಯಾಂ ಪ್ರಜಾಯೇಯೇತಿ"— "ಸತ್ಯಂ ಜ್ಞಾನಮನನ್ತಂ ಬ್ರಹ್ಮ"— "ನಿತ್ಯಂ ವಿಭುಂ

ಸರ್ವಗತಂ ಸುಸೂಕ್ಷ್ಮಂ," "ಅಂಭಸ್ಯ ಪಾರೇ ಭುವನಸ್ಯ ಮಧ್ಯೇ ನಾಕಸ್ಯ ಪೃಷ್ಠೇ ಮಹತೋ ಮಹೀಯಾನ್," "ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷಃ ".

"ದೇವರ್ಷಿ ಪಿತೃ ಸಿದ್ಧಾದ್ಯೈಃ ತ್ವಯಾಪಿ ಜಗತಾಂ ಹಿತೇ। ನಿರ್ಮಿತಂ ಭಗವ ದ್ರೂಪ ಮರ್ಚಾಸಾಶುದ್ಧ ಚಿನ್ಮಯೀ "॥ "ಕಲೌ ಜಗತ್ಪತಿಂ ವಿಷ್ಣುಂ ಸರ್ವಸ್ರಷ್ಟಾರ ಮೀಶ್ವರಂ। ನಾರ್ಚಯಿಷ್ಯನ್ತಿಮೈತ್ರೇಯ ಪಾಷಂಡೋಪಹತಾ ಜನಾಃ ॥"

"ಷಾಡ್ಗುಣ್ಯಾದ್ವಾಸುದೇವಃ ಪರ ಇತಿ ಸ ಭವಾನ್ ಮುಕ್ತಭೋಗ್ಯೋ ಬಲಾಢ್ಯಾತ್। ಬೋಧಾತ್ ಸಂಕರ್ಷಣಸ್ತ್ವಂ ಹರಸಿ ವಿತನುಷೇ ಶಾಸ್ತ್ರಮೈಶ್ವರ್ಯ ವೀರ್ಯಾತ್। ಪ್ರದ್ಯುಮ್ನಸ್ಸರ್ಗ ಧರ್ಮೌ ನಯಸಿ ಚ ಭಗವನ್ ಶಕ್ತಿತೇಜೋಽನಿರುದ್ಧೋ ಬಿಭ್ರಾಣಃ ಪಾಸಿ ತತ್ತ್ವಂ ಗಮಯಸಿ ಚ ತಥಾ ವ್ಯೂಹ್ಯ ರಂಗಾಧಿರಾಜ "—

"ಐಶ್ವರ್ಯಮಕ್ಷರಗತಿಂ ಪರಮಂ ಪದಂ ವಾ" "ಸಂಸೃತ್ಯಕ್ಷರ ವೈಷ್ಣವಾಧ್ವಸು," "ಯಃ ಪುನರೇತಂ ತ್ರಿಮಾತ್ರೇಣೋ ಮಿತ್ಯನೇನ,"—ಇತ್ಯಾದಿಯಿಂದ, ನಿಯಮೇನ ಸರ್ವಾಧಾರನೂ, ಸರ್ವನಿಯಂತೃವೂ, ಸರ್ವಶೇಷಿಯೂ, ಆದ್ದರಿಂದಲೇ ಸರ್ವ ಶರೀರಿಯೂ, ಸಂಕಲ್ಪಾದಿ ರೂಪ ವ್ಯಾಪಾರ ಭೇದದಿಂದ ಸರ್ವಕಾರ್ಯಗಳಿಗೂ ಸರ್ವ ಕಾರಣನೂ, ಭೂತ ಭವಿಷ್ಯದ್ವರ್ತಮಾನಗಳೆಂಬ ಕಾಲತ್ರಯದಲ್ಲಿಯೂ ಒಂದೇ ವಿಧವಾದ ಸ್ವರೂಪ ರೂಪಗಳುಳ್ಳವನೂ, ಪರಮಪದ, ಆದಿತ್ಯ ಮಂಡಲ, ಕ್ಷೀರಾಬ್ಧಿಗಳೆಂಬ ಸ್ಥಾನತ್ರಯದಲ್ಲಿಯೂ ನಿತ್ಯ ವಾಸ ಮಾಡುವವನೂ, ಸ್ವಯಂವ್ಯಕ್ತ-ದಿವ್ಯ-ಆರ್ಷ ಮುಂತಾದ ಅರ್ಚಾ ರೂಪದಿಂದಿರುವವನೂ, ಕೃತಾದಿ ಮೂರು ಯುಗಗಳಲ್ಲಿಯೂ ವಿಶೇಷವಾಗಿ ಪ್ರಕಾಶಿಸುವವನೂ, ಜ್ಞಾನ ಶಕ್ತ್ಯಾದಿ ಗುಣ ಷಟ್ಕದಿಂದ ತ್ರಿಯುಗನೂ, ಸಂಕರ್ಷಣ ಪ್ರದ್ಯುಮ್ನ ಅನಿರುದ್ಧರುಗಳೆಂಬ ವ್ಯೂಹತ್ರಯದಿಂದ ಜಗತ್ಸಂಹಾರ, ಶಾಸ್ತ್ರಪ್ರವರ್ತನ, ಸೃಷ್ಟಿ ಧರ್ಮ ಪ್ರವರ್ತನ, ಜಗದ್ರಕ್ಷಣ, ತತ್ತ್ವಬೋಧನ ರೂಪ ಗಳಾದ ಷಡ್ವಿಧ ವ್ಯಾಪಾರಗಳುಳ್ಳವನೂ, ಐಶ್ವರ್ಯ-ಕೈವಲ್ಯ-ಮೋಕ್ಷಗಳೆಂಬ ಮೂರು ಪುರುಷಾರ್ಥಗಳಿಗೂ ಕಾರಣನಾದವನೂ, ಪ್ರತ್ಯಕ್ಷ-ಅನುಮಾನ-ಶಬ್ದಗಳೆಂಬ ಪ್ರಮಾಣ ತ್ರಯದಿಂದ ಅಪ್ರತಿಷೇಧ್ಯನೂ, ತ್ರಿಮಾತ್ರೆಗಳುಳ್ಳ ಓಂಕಾರಕ್ಕೆ ಮುಖ್ಯಾರ್ಥಭೂತನೂ ಆದವನು—ಈಶ್ವರ.

ಇವನೇ ಪರಬ್ರಹ್ಮವೆಂದು ವೇದಾಂತಗಳಲ್ಲಿ ಘೋಷಿಸಲ್ಪಟ್ಟಿದ್ದಾನೆ. ಇಂತಹ ಬ್ರಹ್ಮವು ಚೇತನಾಚೇತನ ವಿಶಿಷ್ಟವಾದ ವೇಷದಿಂದ ಒಂದೇ ತತ್ತ್ವ. ಲೋಕದಲ್ಲಿ ಶರೀರಕ್ಕೂ ಚೇತನನಿಗೂ ಇರುವ ಅತ್ಯಂತ ಭೇದದಿಂದ ವಸ್ತುಗಳು ಎರಡಾದರೂ, 'ದೇವದತ್ತನಾದ ನಾನು ಒಬ್ಬನೇ'—ಎಂದು ಏಕತ್ವ ವ್ಯವಹಾರದಂತೆ ಇಲ್ಲಿಯೂ ಚೇತನಾ ಚೇತನಗಳನ್ನು ಶರೀರವಾಗಿಯುಳ್ಳ ಬ್ರಹ್ಮ ಒಂದೇ ಎಂಬ ಉಪದೇಶವೂ, ನಾನಾತ್ವ ವ್ಯಪದೇಶವೂ ಸಂಗತವಾಗುತ್ತದೆ. ಸಾಮಾನಾಧಿಕರಣ್ಯ ಶ್ರುತಿಯು ಈ ಅರ್ಥದಲ್ಲಿಯೇ ಸ್ವರಸವಾಗುತ್ತೆ. "ತತ್ತ್ವಮಸಿ,"—ಎಂಬ ಸಾಮಾನಾಧಿಕರಣ್ಯ ಶ್ರುತಿಯಲ್ಲಿ "ತತ್" ಶಬ್ದಕ್ಕೆ ಜಗತ್ಕಾರಣತ್ವಾದಿಕವು ಪ್ರವೃತ್ತಿ ನಿಮಿತ್ತ. 'ತ್ವಂ'— ಪದಕ್ಕೆ ಅಚಿದ್ವಿಶಿಷ್ಟ ಜೀವ ಶರೀರಕತ್ವವು ಪ್ರವೃತ್ತಿ ನಿಮಿತ್ತ. ಹೀಗೆ ಭಿನ್ನ ಪ್ರವೃತ್ತಿ

ನಿಮಿತ್ತವಾದ 'ತತ್, ತ್ವಂ' ಶಬ್ದಗಳೆರಡೂ ಬ್ರಹ್ಮವೊಂದರಲ್ಲಿಯೇ ವರ್ತಿಸುತ್ತವೆ. "ಭಿನ್ನಪ್ರವೃತ್ತಿ ನಿಮಿತ್ತಾನಾಂ ಶಬ್ದಾನಾಂ ಏಕಸ್ಮಿನ್ನರ್ಥೇ ವೃತ್ತಿಃ ಸಾಮಾನಾಧಿಕರಣ್ಯಂ''—ಎಂಬುದಲ್ಲವೇ ಸಾಮಾನಾಧಿಕರಣ್ಯದ ಲಕ್ಷಣ! ಹೀಗೆ ಭೇದ-ಅಭೇದ ಘಟಕ-ಕಾರಣ-ಸಗುಣ-ನಿರ್ಗುಣ ಸ್ವರೂಪಾದಿಗಳನ್ನು ಪ್ರತಿಪಾದಿಸುವ ಶ್ರುತಿಗಳು ವಿಶಿಷ್ಟೈಕ್ಯ ಪಕ್ಷದಲ್ಲಿಯೇ ಮುಖ್ಯಾರ್ಥತ್ವ ಸ್ವಾರಸ್ಯವುಳ್ಳೋಣದರಿಂದ, ಸರ್ವವೇದಾಂತ ವೇದ್ಯನಾದ ಬ್ರಹ್ಮ ಶ್ರೀಮನ್ನಾರಾಯಣ ಒಬ್ಬನೇ, ಅವನು ಸರ್ವಶೇಷೀ, ಸರ್ವಶರೀರೀ ಮುಕ್ತಿಪ್ರದ ಮತ್ತು ಮುಕ್ತಭೋಗ್ಯ—ಎಂಬುದೇ ಸರ್ವೋಪನಿಷತ್ತುಗಳ ಸಾರ. ಆದ್ದರಿಂದ ಅಧಿಕರಣ ಸಾರಾವಳಿಯಲ್ಲಿ,

"ತ್ರಯ್ಯಂತೈರೇಕಕಂಠ್ಯೈಃ ತದನುಗುಣಮನುವ್ಯಾಸಮುಖ್ಯೋಕ್ತಿಭಿಶ್ಚ

ಶ್ರೀಮಾನ್ ನಾರಾಯಣೋ ನಃ ಪತಿರಖಿಲತನುರ್ಮುಕ್ತಿದೋಮುಕ್ತಭೋಗ್ಯಃ''
—ಎಂದು ಆಚಾರ್ಯರು ಹೇಳಿದ್ದಾರೆ.

5. ದೇವತಾಂತರಗಳಿಗೆ ಜಗತ್ಕಾರಣತ್ವ ಶಂಕಾನಿರಸನದ ಮೂಲಕ ಶ್ರೀಮನ್ನಾರಾಯಣನಿಗೇ ಜಗತ್ಕಾರಣತ್ವ ನಿರೂಪಣೆ; ಶ್ರೀಮನ್ನಾರಾಯಣನಿಗೇ ಮೇಲೆ ಹೇಳಿದಂತೆ ಜಗತ್ಕಾರಣತ್ವವು ಸಿದ್ಧಿಸುವುದರಿಂದ, ಬ್ರಹ್ಮ-ರುದ್ರ-ಇಂದ್ರಾದಿಗಳಿಗೆ ಕಾರಣತ್ವ ಶಂಕೆಗೇ ಆಸ್ಪದವಿಲ್ಲ. ಅವರೆಲ್ಲರೂ ಕಾರ್ಯಭೂತರು. ಕರ್ಮವಶ್ಯರು, ಸೃಜ್ಯರು, ಇತ್ಯಾದಿ ಕಾರಣದಿಂದ ಜೀವರೆಂದೇ ಸಿದ್ಧವಾಗಿದೆ. ಹೇಗೆಂದರೆ— "ಸ ಪ್ರಜಾಪತಿರೇಕಃ ಪುಷ್ಕರ ಪರ್ಣೇ ಸಮಭವತ್'' —"ಲಲಾಟಾತ್ ಕ್ರೋಧಜೋ ರುದ್ರೋಽಜಾಯತ,'' "ಪರೋ ನಾರಾಯಣೋ ದೇವಃ ತಸ್ಮಾತ್ ಜಾತಶ್ಚತುರ್ಮುಖಃ ತಸ್ಮಾತ್ ರುದ್ರೋಽಭವದ್ದೇವಿ.........''

"ಆ ಬ್ರಹ್ಮಸ್ತಂಬ ಪರ್ಯಂತಾ ಜಗದನ್ತರ್ವ್ಯವಸ್ಥಿತಾಃ । ಪ್ರಾಣಿನಃ ಕರ್ಮಜನಿತ ಸಂಸಾರ ವಶವರ್ತಿನಃ ।। "ಕ ಇತಿ ಬ್ರಹ್ಮಣೋ ನಾಮ ಈಶೋಽಹಂ ಸರ್ವದೇಹಿನಾಂ। ಆವಾಂ ತವಾಂಗಸಂಭೂತೌ ತಸ್ಮಾತ್ಕೇಶವ ನಾಮವಾನ್'' ॥
—ಇತ್ಯಾದಿ ಪ್ರಮಾಣಗಳಿರುವುದರಿಂದ ಚತುರ್ಮುಖಾದಿಗಳಿಗೆ ಕಾರಣತ್ವವಿಲ್ಲವೆಂಬುದು ಸ್ಪಷ್ಟ.

"ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸರ್ವೇ ಸಂಪ್ರಸೂಯನ್ತೇ''—ಎಂದು ಭಗವಂತನಿಗೂ ಉತ್ಪತ್ತಿ ಶ್ರುತವಾಗಿದೆಯಲ್ಲ! ಅದು ಹೇಗೆ?—ಎಂದಲ್ಲಿ, "ಅಜಾಯಮಾನೋ ಬಹುಧಾವಿಜಾಯತೇ'' "ಇಚ್ಛಾಗೃಹೀತಾಭಿಮತೋರುದೇಹಃ''— "ನ ಭೂತಸಂಘಸಂಸ್ಥಾನೋ ದೇಹೋಽಸ್ಯ ಪರಮಾತ್ಮನಃ'' — "ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ''—ಇತ್ಯಾದಿ ಪ್ರಮಾಣಗಳಿಂದ ಅವನಿಗೆ ಕರ್ಮಕೃತವಾದ ಉತ್ಪತ್ತಿಯಿಲ್ಲವೆಂದು ತಿಳಿಯುವುದರಿಂದಲೂ, ಜಗದ್ರಕ್ಷಣಕ್ಕಾಗಿ ಲೀಲೆಯಿಂದ ಅವತರಿಸುವುದಾಗಿ ಹೇಳಿರುವುದರಿಂದಲೂ, ಅದು ಉಪಪನ್ನವಾಗುವುದರಿಂದ, ವಿರೋಧವಿಲ್ಲ. ಬ್ರಹ್ಮವು ಸರ್ವ ಶರೀರಕವಾದ್ದರಿಂದ ಸರ್ವ ಶಬ್ದಗಳೂ ಅವನಲ್ಲಿಯೇ ಮುಖ್ಯಾರ್ಥವುಳ್ಳವುಗಳಾಗಿವೆ. ಆದ್ದರಿಂದ ಅವನೇ ಸರ್ವ ಶಬ್ದವಾಚ್ಯನೆಂಬುದೂ ಸಿದ್ಧ.

ಉಪಾಸನಾದಿ ವಾಕ್ಯಗಳಲ್ಲಿರುವ ಹಿರಣ್ಯಗರ್ಭ-ಶಾಂಭವಾದಿ ಶಬ್ದಗಳಿಗೆ ಅನನ್ಯಥಾ-ಸಿದ್ಧವಾದ ಜೀವಲಿಂಗಗಳು ಕಾಣಿಸದಿರುವಲ್ಲಿ, ಕೇವಲ ಯೌಗಿಕವಾಗಿ ಪರಮಾತ್ಮ ಪರತ್ವ, ಅನನ್ಯಥಾ ಸಿದ್ಧ ಜೀವಲಿಂಗ ಕಂಡಲ್ಲಿಯಾದರೋ—ತದ್ವಿಶಿಷ್ಟ ಪರಮಾತ್ಮಪರತ್ವ

"ಪರವಿದ್ಯಾಸು ಸರ್ವಾಸು ನಿರುಕ್ತ್ಯಾದೇಃ ಪರಾಶ್ರಯಾ।
ತಲ್ಲಿಂಗಾನನ್ಯಥಾ ಸಿದ್ಧೌ ತದ್ವಿಶಿಷ್ಟಾವಲಂಬಿನೀ॥"

—ಎಂದಿದ್ದಾರೆ ಆಚಾರ್ಯರು.

ಸರ್ವಶರೀರಿಯಾದ ಶ್ರೀಮನ್ನಾರಾಯಣನೇ ಸರ್ವ ಶಬ್ದವಾಚ್ಯ. ಸರ್ವಕರ್ಮ ಸಮಾರಾಧ್ಯ, ಎಂದು ಸಿದ್ಧಿಸುವುದರಿಂದ, ದೇವತಾಂತರಕ್ಕೆ ಆ ಪ್ರಸಕ್ತಿಗೆ ಲೇಶವೂ ಅವಕಾಶವಿಲ್ಲವೆಂದು ಸಿದ್ಧಾಂತಿತವಾಗಿದೆ.

6. ಭಗವಂತನಿಂದ ಹಿಡಿದು ಶಾರೀರಕ ಶಾಸ್ತ್ರ ಪ್ರವರ್ತನೆಯ ನಿರೂಪಣೆ: ಈ ಸಿದ್ಧಾಂತವನ್ನು ಶ್ರಿಯಃಪತಿಯಾದ ಭಗವಂತನು ಪುಲಸ್ತ್ಯ ವಸಿಷ್ಠ ವರಪ್ರದಾನ ದಿಂದ ಲಬ್ಧವಾದ ಪರದೇವತಾ ಪಾರಮಾರ್ಥ್ಯಜ್ಞಾನವುಳ್ಳವರಾಗಿ ಶ್ರೀವಿಷ್ಣುಪುರಾಣ ವನ್ನು ರಚಿಸಿದ ಶ್ರೀ ಪರಾಶರ ಬ್ರಹ್ಮರ್ಷಿಯಿಂದಲೂ,

"ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಂ।
ಕೋಹ್ಯನ್ಯೋ ಭುವಿ ಮೈತ್ರೇಯ ಮಹಾಭಾರತಕೃದ್ಭವೇತ್॥"

ಎಂದು ಪ್ರಖ್ಯಾತ ವೈಭವವುಳ್ಳ, ಪಂಚಮ ವೇದವೆನಿಸಿರುವ ಮಹಾಭಾರತ ಮತ್ತು ಬ್ರಹ್ಮಸೂತ್ರಾದಿಗಳನ್ನು ರಚಿಸಿದ ಶ್ರೀ ಪಾರಾಶರ್ಯ (ಬಾದರಾಯಣ) ಮಹರ್ಷಿ ಯಿಂದಲೂ ವಿಸ್ತಾರವಾಗಿ ಪ್ರಕಾಶಗೊಳಿಸಿದನು. ತರುವಾಯ ಭಗವದ್ಬೋಧಾಯನರು ಹತ್ತು ಲಕ್ಷ ಗ್ರಂಥಾತ್ಮಕವಾದ ವೃತ್ತಿಗ್ರಂಥದಿಂದ ಈ ಸಿದ್ಧಾಂತವನ್ನು ವಿಶದಪಡಿಸಿದರು. ಅನಂತರ, ಭಗವತ್ಕೃಪೆಯಿಂದ ಲಬ್ಧವಾದ ಸೂಕ್ಷ್ಮಾರ್ಥಗಳುಳ್ಳ ಟಂಕ ದ್ರಮಿಡ ಗುಹ ದೇವ ಪ್ರಭೃತಿ ಪೂರ್ವಸೂರಿಗಳು, ಇದನ್ನು ಸಂಕ್ಷೇಪಿಸಿದರು.

"ಕಲೌ ಖಲು ಭವಿಷ್ಯನ್ತಿ ನಾರಾಯಣ ಪರಾಯಣಾಃ।
ಕ್ವಚಿತ್ ಕ್ವಚಿತ್ ಮಹಾಭಾಗಾ ದ್ರಮಿಡೇಷು ಚ ಭೂರಿಶಃ॥—ತಾಮ್ರಪರ್ಣೀ ನದೀ ಯತ್ರ॥"

ಎಂದು ಸುಪ್ರಸಿದ್ಧ, ಮಹೀಮಂಡಲಕ್ಕೇ ಮಂಡನವಾದ, ತಾಮ್ರಪರ್ಣೀ ನದೀತೀರದಲ್ಲಿ ಮತಾಂತರರು ಹೇಳುವ ವೇದ ವಿರುದ್ಧಾರ್ಥಗಳನ್ನು ಖಂಡಿಸುವುದರ ಮೂಲಕ ಸರ್ವೋಪನಿಷತ್ಪ್ರಭೃತಿ ಪ್ರಮಾಣಗಳಿಂದ ಸಿದ್ಧವಾದ ತತ್ತ್ವಾರ್ಥದ ಸ್ಥಿರೀಕರಣಕ್ಕಾಗಿ ಕುರುಕಾಧೀಶರಾಗಿ ಅವತರಿಸಿ, ಭಗವಂತನಿಂದ ಅನುಗ್ರಹೀತವಾದ ನಿರತಿಶಯ ದಿವ್ಯ ಜ್ಞಾನವುಳ್ಳವರೂ, ಅತಿಮಾನುಷ ದಿವ್ಯಚೇಷ್ಟಿತರೂ ಆದ, ಶ್ರೀ ಪರಾಂಕುಶ ಮುನಿ ವರರು ನಾನಾ ದಿವ್ಯದೇಶಗಳಲ್ಲಿ ವಿರಾಜಿಸುವ ಸ್ವಯಂ ವ್ಯಕ್ತಾದ್ಯರ್ಚಾವತಾರ ರೂಪ ಭಗವದನುಭವದಿಂದ ಪ್ರವೃದ್ಧವಾದ ಪರಭಕ್ತ್ಯಮೃತ ಪರೀವಾಹರೂಪಗಳೂ, ವೇದಾಂತ ರಹಸ್ಯ ವೈಶದ್ಯಕ್ಕೆ ಅತಿಶಯ ಹೇತುಭೂತಗಳೂ, ಸದ್ಯಃ ಪರಮಾತ್ಮನಲ್ಲಿ ಚಿತ್ತರಂಜಕ

ತಮಗಳೂ ಸರ್ವೋಪಜೀವ್ಯಗಳೂ ಆದ ದ್ರಾವಿಡ ದಿವ್ಯ ಪ್ರಬಂಧಾತ್ಮಕ ಉಪಬೃಂಹಣ ಗಳಿಂದ, ಇದೇ ಸಿದ್ಧಾಂತವನ್ನೇ ಮತ್ತೆಯೂ ದೃಢೀಕರಿಸಿದರು.

ಅನಂತರ, ಮಧುರ ಕವಿ ಪ್ರಭೃತಿ ಸಂಪ್ರದಾಯ ಪರಂಪರೆಯಿಂದಲೂ, ಯೋಗ ಮಹಿಮೆಯಿಂದಲೂ ಶ್ರೀ ವಕುಳಭೂಷಣ ಮಹಾದೇಶಿಕರಿಂದ ಉಪದಿಷ್ಟವಾದ ಸರ್ವೋಪನಿಷತ್ಸಾರವುಳ್ಳವರೂ, ಸರ್ವಶಾಸ್ತ್ರವೇತ್ತೃವೂ, ಯೋಗಶಾಸ್ತ್ರ ವಿಚಕ್ಷಣರೂ ಆದ ಶ್ರೀಮನ್ನಾಥ ಮುನಿಗಳು, ಯೋಗರಹಸ್ಯ, ನ್ಯಾಯತತ್ತ್ವಗಳೆಂಬ ಗ್ರಂಥಗಳ ಮೂಲಕ ಈ ದರ್ಶನವನ್ನು ಮತ್ತೆ ಪ್ರವರ್ತನಗೊಳಿಸಿದರು. ಇವರ ಪೌತ್ರರಾದ ಶ್ರೀ ಯಾಮುನ ಮುನಿಯು ತಮ್ಮ ಪಿತಾಮಹರಾದ ನಾಥಮುನಿಗಳ ಅನುಗ್ರಹದಿಂದ ಸದಾಚಾರ್ಯರ ಮೂಲಕ ಸಾರ್ವಜ್ಞ್ಯವನ್ನು ಪಡೆದವರಾಗಿ ಸಿದ್ಧಿ ತ್ರಯಾದಿ ಗ್ರಂಥಗಳಿಂದ ನಿರವಗ್ರಹವಾಗಿ ಇದನ್ನು ಅಭಿವೃದ್ಧಿಗೊಳಿಸಿದರು.

ಅನಂತರ ಭಗವದ್ಭಾಷ್ಯಕಾರರು ಬೋಧಾಯನರ ವೃತ್ತಿಗ್ರಂಥವನ್ನು ಅನುಸರಿಸಿ ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನ ರೂಪವಾದ ಶ್ರೀ ಭಾಷ್ಯ, ದೀಪ, ಸಾರ, ಗೀತಾಭಾಷ್ಯ, ನಿತ್ಯ, ವೇದಾರ್ಥಸಂಗ್ರಹ, ಗದ್ಯತ್ರಯಗಳೆಂಬ ದಿವ್ಯ ಗ್ರಂಥಗಳನ್ನು ರಚಿಸಿ, ದಶದಿಕ್ಕು ಗಳಲ್ಲಿಯ ದುರ್ವಾದಿಗಳನ್ನು ಜಯಿಸಿ ಸರ್ವ ವಿಜಯಿಯಾಗಿ ಈ ಶಾರೀರಕ ಶಾಸ್ತ್ರವನ್ನು ಚೆನ್ನಾಗಿ ಪರಿಪಾಲಿಸಿದರು.

ಅನಂತರವೂ, ಭಗವದ್ಘಂಟಾವತಾರರಾದ ಶ್ರೀಮನ್ನಿಗಮಾಂತ ಮಹಾದೇಶಿಕರ್ ರವರು ಆಯಾ ದುರ್ವಾದಿಗಳ ಗರ್ವವನ್ನು ನಿರ್ಮೂಲಗೊಳಿಸುವ ಸಮೀಚೀನ ನ್ಯಾಯಮಾರ್ಗದಿಂದ ಅಖಿಲತಮಃಕರ್ಶನವಾದ ಈ ನಮ್ಮ ಶಾರೀರಕ ದರ್ಶನವನ್ನು ಚೆನ್ನಾಗಿ ಪ್ರತಿಷ್ಠಾಪಿಸಿದರು. ಶ್ರೀ ಶಠಕೋಪ-ಯತೀಂದ್ರ-ನಿಗಮಾಂತ ಮಹಾ ದೇಶಿಕರುಗಳ ಅತಿಮಾನುಷ ವೈಭವವು ಶ್ರೀ ಪಾದುಕಾ ಸಹಸ್ರ-ಯತಿರಾಜಸಪ್ತತಿ-ಪಿಳ್ಳೈಯಂತಾದಿ, ಸಪ್ತತಿ ರತ್ನಮಾಲಿಕಾ-ವೈಭವ ಪ್ರಕಾಶಿಕಾದಿ ಗ್ರಂಥಗಳಲ್ಲಿ ಸುಪ್ರಸಿದ್ಧ ವಾಗಿದೆ. ಹೀಗೆ ಶ್ರೀ ದೇಶಿಕೇಂದ್ರರಿಂದ ಅನುಗ್ರಹಿಸಲ್ಪಟ್ಟ ಪ್ರಬಂಧ ರತ್ನಗಳಲ್ಲಿ, ವೇದಾಂತವೆಂಬ ಕ್ಷೀರಸಮುದ್ರದ ಮಧ್ಯದಿಂದ ಉದ್ಧೃತವಾದ ಶ್ರೀ ಭಾಷ್ಯಾಮೃತದ ಪದೀವಾಹರೂಪವೂ, ಶ್ರೀ ಭಾಷ್ಯದ ಅರ್ಥವನ್ನು ತಿಳಿಯಲಿಚ್ಛಿಸುವವರಿಗೆ ಸುಕರವೂ ಆದ ಅಧಿಕರಣ ಸಾರಾವಳಿಯೆಂಬ ಗ್ರಂಥವು ಅತ್ಯುತ್ಕೃಷ್ಟತಮವಾದದ್ದು.

**ಇದರ ಪ್ರಕಾರ ದ್ವಾತ್ರಿಂಶತ್ (32) ಬ್ರಹ್ಮವಿದ್ಯೆಗಳ ಪ್ರತಿಪಾದನ ಪ್ರಕಾರ ನಿರೂಪಣೆ:—**

1. ಸದ್ವಿದ್ಯಾ—ಈಕ್ಷತ್ಯಧಿಕರಣ-ಅಧ್ಯಾಯ 1 ಪಾದ 1 ಅಧಿಕರಣ 5—"ಸದೇವ ಸೋಮ್ಯೇದಮಗ್ರಆಸೀತ್"—ಎಂಬ ವಾಕ್ಯದಿಂದ ಇದು ಶ್ರೀ ಛಾಂದೋಗ್ಯೋಪ ನಿಷತ್ತಿನಲ್ಲಿ ವಿಚಾರ ಮಾಡಲ್ಪಟ್ಟಿದೆ. ಶ್ರೀ ಸಾರಾವಳಿಯಲ್ಲಿ "ಗೌಣೇಕ್ಷಾ ಸಾಹ ಚರ್ಯಾತ್......" ಇತ್ಯಾದಿ ಮೂರು ಶ್ಲೋಕಗಳಿಂದ ವಿವರಿಸಲ್ಪಟ್ಟಿದೆ.
2. ಆನಂದವಿದ್ಯಾ—ಇದು "ಬ್ರಹ್ಮವಿದಾಪ್ನೋತಿ ಪರಂ......" ಎಂದು ತೈತ್ತಿ ರೀಯದಲ್ಲಿ ಉಕ್ತವಾಗಿದೆ. ಸಾರಾವಳಿಯಲ್ಲಿ "ಮುಖ್ಯೇಕ್ಷಾಯದ್ಯಭೀಷ್ಟಾ......"

—ಇತ್ಯಾದಿ 4 ಶ್ಲೋಕಗಳಿಂದ ಆನಂದಮಯಾಧಿಕರಣದ (1-1-6) ಸಂದರ್ಭದಲ್ಲಿ ಪ್ರಕಾಶಿತವಾಗಿದೆ.

3. ಅಂತರಾದಿತ್ಯವಿದ್ಯಾ—ಇದು " ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷಃ ......" ಎಂದು ಛಾಂದೋಗ್ಯದಲ್ಲಿದೆ. ಅಂತರಧಿಕರಣ (1-1-7) ದಲ್ಲಿ, " ಭೂಯಿಷ್ಠಾನಂತ ಪುಣ್ಯೋಪಚಯ......" ಇತ್ಯಾದಿ ಸಾರಾವಳಿಯ ಮೂರು ಶ್ಲೋಕಗಳಿಂದ ಪ್ರಕಟಿತವಾಗಿದೆ.

4. ಆಕಾಶವಿದ್ಯಾ—ಆಕಾಶಾಧಿಕರಣ (1-1-8)—ಇದು " ಸರ್ವಾಣಿ ಹವಾ ಇಮಾನಿ ಭೂತಾನಿ " ಎಂದು ಛಾಂದೋಗ್ಯದಲ್ಲಿ ಉಕ್ತವಾಗಿದೆ. ಸಾರಾವಳಿಯ " ಅತ್ರಾಕಾಶಸ್ತ್ವಶೇಷಃ......" ಇತ್ಯಾದಿ ಶ್ಲೋಕದಿಂದ ಇಲ್ಲಿ ಹೇಳಲ್ಪಟ್ಟಿದೆ.

5. ಪ್ರಾಣವಿದ್ಯಾ—ಪ್ರಾಣಾಧಿಕರಣ (1-1-9). ಇದು, "ಸರ್ವಾಣಿ ಹವಾ ಇಮಾನಿ ಭೂತಾನಿ ಪ್ರಾಣಮೇವ......" ಎಂದು ಛಾಂದೋಗ್ಯದಲ್ಲಿ ಪ್ರತಿಪಾದಿತವಾಗಿದೆ. " ಪ್ರಾಣಾಯತ್ತಂ ಹಿ......" ಇತ್ಯಾದಿ 3 ಶ್ಲೋಕಗಳಿಂದ ಸಾರಾವಳಿಯಲ್ಲಿ ಹೇಳಲ್ಪಟ್ಟಿದೆ.

6. ಗಾಯತ್ರೀ ಜ್ಯೋತಿರ್ವಿದ್ಯಾ—ಜ್ಯೋತಿರಧಿಕರಣ (1-1-10). " ಅಥ ಯದತಃ ಪರೋದಿವೋ ಜ್ಯೋತಿಃ॥ ......" ಎಂದು ಛಾಂದೋಗ್ಯ ಪ್ರತಿಪಾದಿತ. " ಪ್ರಾಣಾಯುತ್ತಂ ಹಿ......॥ " ಇತ್ಯಾದಿ ಸಾರಾವಳೀ ಶ್ಲೋಕದಿಂದ ಉಪಪಾದಿತ.

7. ಇಂದ್ರಪ್ರಾಣವಿದ್ಯಾ—ಇಂದ್ರ ಪ್ರಾಣಾಧಿಕರಣ (1-1-11) " ಪ್ರತರ್ದನೋ ಹವೈದೈವೋದಾಸಿಃ...... " —ಎಂದು ಕೌಷೀತಕೀ ಶ್ರುತಿಯಲ್ಲಿ ಅಭಿಹಿತ. " ವಿದ್ಯಾಪ್ರಾತರ್ದನೀ ಸಾ...... " ಇತ್ಯಾದಿ ಸಾರಾವಳೀ ಶ್ಲೋಕಗಳಿಂದ ಉಪವರ್ಣಿತವಾಗಿದೆ.

8. ಶಾಂಡಿಲ್ಯವಿದ್ಯಾ—ಸರ್ವತ್ರ ಪ್ರಸಿದ್ಧ್ಯಧಿಕರಣ (12) (1-2-1). " ಸರ್ವಂ ಖಲ್ವಿದಂ ಬ್ರಹ್ಮ......" ಎಂದು ಛಾಂದೋಗ್ಯದಲ್ಲಿ ಪ್ರತಿಪಾದಿತ. " ಯಸ್ಯ ಪ್ರಾಣಶ್ಶರೀರಂ...... " ಇತ್ಯಾದಿಯಾಗಿ ಸಾರಾವಳಿಯ ಮೂರು ಶ್ಲೋಕಗಳಿಂದ ಪ್ರಕಾಶಿಸಲ್ಪಟ್ಟಿದೆ.

9. ಅತ್ತೃವಿದ್ಯಾ—ಅತ್ತ್ರಧಿಕರಣ (13) (1-2-2)— " ಯಸ್ಯ ಬ್ರಹ್ಮ ಚ ಕ್ಷತ್ರಂ ಚ...... " ಎಂದು ಕಠವಲ್ಲಿಯಲ್ಲಿ ಹೇಳಿದೆ. " ಅತ್ತಾಖಿಲೋದನಾದೇಃ......" ಇತ್ಯಾದಿ 2 ಶ್ಲೋಕಗಳಿಂದ ಸಾರಾವಳಿಯಲ್ಲಿ ಸಮರ್ಥಿತವಾಗಿದೆ.

10. ಉಪಕೋಸಲವಿದ್ಯಾ—ಅಂತರಾಧಿಕರಣ (14) (1-2-3). " ಯ ಏಷೋಽಕ್ಷಿಣಿ ಪುರುಷೋ ದೃಶ್ಯತೇ......" ಎಂದು ಛಾಂದೋಗ್ಯದಲ್ಲಿ ಸ್ಪಷ್ಟವಾಗಿದೆ. " ಯ ದ್ವ್ಯಲತ್ವಾದೇಃ...... " ಇತ್ಯಾದಿ ಸಾರಾವಳಿಯ ಮೂರು ಶ್ಲೋಕಗಳಿಂದ ಸ್ಪಷ್ಟಗೊಳಿಸಲ್ಪಟ್ಟಿದೆ.

11. ಅಂತರ್ಯಾಮಿವಿದ್ಯಾ—ಅಂತರ್ಯಾಮ್ಯಧಿಕರಣ (15) (1-2-4). "ನಾನ್ಯೋಽತೋಽಸ್ತಿ ದ್ರಷ್ಟಾ......" ಎಂದು ಛಾಂದೋಗ್ಯದಲ್ಲಿ ವಿವೃತ. "ಅಂತರ್ಯಾಮೀ ಸ ಜೀವಃ"...... ಇತ್ಯಾದಿ ಸಾರಾವಳಿಯು ಎರಡು ಶ್ಲೋಕಗಳಿಂದ ವಿಚಾರಿತವಾಗಿದೆ.

12. ಅಕ್ಷರಪರವಿದ್ಯಾ—ಅದೃಶ್ಯತ್ವಾಧಿಕರಣ (16) (1-2-5). "ಯತ್ತದದ್ರೇಶ್ಯಮಗ್ರಾಹ್ಯಂ......" ಎಂದು ಮುಂಡಕೋಪನಿಷತ್ತಿನಲ್ಲಿ ಉಕ್ತ. "ದೃಶ್ಯತ್ವಾದೇರ್ನಿಷೇಧಃ......" ಇತ್ಯಾದಿ. ಸಾರಾವಳಿಯು ಶ್ಲೋಕದಿಂದ ಅಭಿವರ್ಣಿತವಾಗಿದೆ.

13. ವೈಶ್ವಾನರ ವಿದ್ಯಾ—ವೈಶ್ವಾನರಾಧಿಕರಣ (17) (1-2-6). "ಏಷೋಽಗ್ನಿರ್ವೈಶ್ವಾನರಃ......" ಎಂಬ ವಾಕ್ಯೋಕ್ತ. "ಸ್ವರ್ಲೋಕಾದಿತ್ಯ......" ಇತ್ಯಾದಿ ಸಾರಾವಳಿಯು ಎರಡು ಶ್ಲೋಕಗಳಿಂದ ಪ್ರಪಂಚಿತ.

14. ಭೂಮವಿದ್ಯಾ—ಭೂಮಾಧಿಕರಣ (19) (1–3–2). "ಯತ್ರನಾನ್ಯತ್ಪಶ್ಯತಿ ನಾನ್ಯತ್ ಶೃಣೋತಿ......" ಇತ್ಯಾದಿಯಾಗಿ ಛಾಂದೋಗ್ಯದಲ್ಲಿ ಸ್ಪಷ್ಟ...... "ಆತ್ಮಜ್ಞಾನಾಭಿಲಾಷಾತ್......" ಇತ್ಯಾದಿ ಸಾರಾವಳಿಯು ನಾಲ್ಕು ಶ್ಲೋಕಗಳಿಂದ ಪ್ರಕಾಶಿತ.

15. ಗಾರ್ಗ್ಯಕ್ಷರವಿದ್ಯಾ—ಅಕ್ಷರಾದಿಕರಣ (20) (1-3-3) "ಏತದಕ್ಷರಂ ಗಾರ್ಗಿ..." ಇತಿ ಬೃಹದಾರಣ್ಯಕ ಶ್ರುತಿಃ ಶ್ರೀ ಅಧಿಕರಣ ಸಾರಾವಳಿಯು—"ಪ್ರಖ್ಯಾತಾಕಾಶಪೂರ್ವ......" ಎಂಬ ಶ್ಲೋಕದಿಂದ ಪ್ರಪಂಚಿತ.

16. ಪ್ರಣವೋಪಾಸ್ಯ ಪರಮಪುರುಷ ವಿದ್ಯಾ—ಈಕ್ಷತಿಕರ್ಮವ್ಯಪದೇಶಾಧಿಕರಣ (21) (1–3–4). "ಯಃ ಪುನರೇತಂ ತ್ರಿಮಾತ್ರೇಣೋಮಿತ್ಯನೇನೈವಾಕ್ಷರೇಣ......" ಎಂದು ಪ್ರಶ್ನೋಪನಿಷತ್ತಿನಲ್ಲಿ ಪ್ರಸಿದ್ಧ. "ಲಕ್ಷ್ಮೀಭೂತೋಽಯಮೇಕಃ ......" ಇತ್ಯಾದಿ ಸಾರಾವಳಿಯು ಶ್ಲೋಕದ್ವಯದಿಂದ ಉಪವರ್ಣಿತ.

17 ದಹರವಿದ್ಯಾ— ದಹರಾಧಿಕರಣ (22) (1-3-5). "ಅಥಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ......" ಇತ್ಯಾದಿ ಛಾಂದೋಗ್ಯ ಶ್ರುತಿ ಪ್ರಸಿದ್ಧ. "ದಹ್ರಂ ಹೃತ್ಪುಂಡರೀಕೇ" ಇತ್ಯಾದಿ ಐದು ಶ್ಲೋಕಗಳಿಂದ ಪ್ರಪಂಚಿತ-

18. ಅಂಗುಷ್ಠ ಪ್ರಮಿತ ವಿದ್ಯಾ—ಪ್ರಮಿತಾಧಿಕರಣ (23) (1-3-6) "ಅಂಗುಷ್ಠಮಾತ್ರಃ ಪುರುಷೋ ಮಧ್ಯಆತ್ಮನಿಷ್ಠತಿ" —ಎಂದು ಕಠವಲ್ಲಿಯಲ್ಲಿ ವಿಚಾರಿತ. "ಪ್ರಾಣೇಶೋಽಂಗುಷ್ಠ ಮಾತ್ರಃ......" ಇತ್ಯಾದಿ 2 ಶ್ಲೋಕಗಳಿಂದ ಸಾರಾವಳಿಯಲ್ಲಿ ವಿಸ್ತೃತ.

19. ದೇವೋಪಾಸ್ಯ ಜ್ಯೋತಿರ್ವಿದ್ಯಾ—ಏತದ್ಗರ್ಭೇ ದೇವತಾಧಿಕರಣ (24)(1-3-7) ತಂ ದೇವಾಜ್ಯೋತಿಷಾಂ ಜ್ಯೋತಿಃ......" ಇತಿ ವಾಜಸನೇಯ ವಿವೃತ

ಶಬ್ದಾತ್ಮಾ ಲೌಕಿಕಾರ್ಥಾಕೃತಿಃ......" ಇತ್ಯಾದಿ 6 ಶ್ಲೋಕಗಳಿಂದ ಶ್ರೀ ಸಾರಾವಳಿಯಲ್ಲಿ ವಿಸ್ತೃತ.

20. ಮಧುವಿದ್ಯಾ—ಏತದ್ಗರ್ಭೇ ಮದ್ವಧಿಕರಣ-25 (1-3-8). "ಅಸೌವಾವ ಆದಿತ್ಯೋ ದೇವಮಧು" ಇತಿ ಛಾಂದೋಗ್ಯದಲ್ಲಿ ವಿಚಾರಿತ. "ಸ್ಯಾದೇವಂ ದೇವ ಮಾತ್ರೇ......" ಎಂಬ ಸಾರಾವಳೀ ಶ್ಲೋಕದಿಂದ ಬೋಧಿತ.

21. ಸಂವರ್ಗವಿದ್ಯಾ— ಏತದ್ಗರ್ಭೇ ಅಪಶೂದ್ರಾಧಿಕರಣ (26) (1-3-9). "ಜಾನಶ್ರುತಿಃ ಕಿಲ ಪೌತ್ರಾಯಣಃ ......" ಇತಿ ಛಾಂದೋಗ್ಯದಲ್ಲಿ ಸಿದ್ಧ. "ಜೈಮಿನ್ಯುಕ್ತ್ಯಾಪಶೂದ್ರು......" ಇತ್ಯಾದಿ ಶ್ಲೋಕದ್ವಯದಿಂದ ಸಾರಾವಳಿಯಲ್ಲಿ ಹೇಳಲ್ಪಟ್ಟಿದೆ.

22. ಅಜಾಶರೀರಕ ಬ್ರಹ್ಮವಿದ್ಯಾ—ಸಂಖ್ಯೋಪ ಸಂಗ್ರಹಾಧಿಕರಣ (30) (1-4-3) "ಯಸ್ಮಿನ್ ಪಂಚ-ಪಂಚಜನಾಃ......" ಇತ್ಯಾದಿಯಾಗಿ ಛಾಂದೋಗ್ಯದಲ್ಲಿ ವಿರಾಜಿತ "ಯಸ್ಮಿನ್ ಪಂಚೇತಿ ಮಾತ್ರೇ......" ಇತ್ಯಾದಿ ಶ್ಲೋಕದ್ವಯದಿಂದ ಶ್ರೀ ಸಾರಾವಳಿಯಲ್ಲಿ ಪ್ರಕಾಶಿತ.

23. ಬಾಲಾಕಿ ವಿದ್ಯಾ—ಜಗದ್ವಾಚಿ-ತ್ವಾಧಿಕರಣ (32) (1-4-5). "ಕ್ವೈಷ ಏತದ್ಬಾಲಾಕೇ ಪುರುಷೋಽಶಯಿಷ್ಟ......" ಇತ್ಯಾದಿಯಾಗಿ ಬೃಹದಾರಣ್ಯಕ ದಲ್ಲಿ ಉಕ್ತ. "ಯಸ್ಯೈತತ್ಕರ್ಮ"......" ಇತಿ ಶ್ಲೋಕದ್ವಯದಿಂದ ಸಾರಾವಳಿ ಯಲ್ಲಿ ವಿವೃತ.

24. ಮೈತ್ರೇಯೀ ವಿದ್ಯಾ—ವಾಕ್ಯಾನ್ವಯಾಧಿಕರಣ (33) (1-4-6). "ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ"...... ಇತಿ ಬೃಹದಾರಣ್ಯಕೇ "ಪತ್ಯಾದೀನಾಂ ಪ್ರಿಯತ್ವಂ......" ಇತಿ ಶ್ಲೋಕತ್ರಯೇಣ ಶ್ರೀ ಸಾರಾವಳಿ ಯಲ್ಲಿ ವಿವೃತ.

25. ದ್ರುಹಿಣ ರುದ್ರಾದಿ ಶರೀರಕ ಬ್ರಹ್ಮವಿದ್ಯಾ—ಸರ್ವ ವ್ಯಾಖ್ಯಾನಾಧಿಕರಣ (35) (1-4-8). "ಹಿರಣ್ಯಗರ್ಭಃ ಸಮವರ್ತತಾಗ್ರೇ...... ಭೂತಸ್ಯ ಜಾತಃ ಪತಿರೇಕ ಆಸೀತ್" ಇತ್ಯಾದಿ ಶ್ರುತಿ. "ಅಗ್ರೇ ಸಂವರ್ತನಂ......" ಇತ್ಯಾದಿ ಶ್ಲೋಕದ್ವಯದಿಂದ ಶ್ರೀ ಸಾರಾವಳಿಯಲ್ಲಿ ಪಠಿತ.

26. ಪಂಚಾಗ್ನಿವಿದ್ಯಾ—ತದಂತರ ಪ್ರತಿ ಪತ್ತ್ಯಧಿಕರಣೇ (69) (3-1-1) "ವೇತ್ಥ ಯಥಾ ಪಂಚಮ್ಯಾ ಮಾಹುತಾವಾಪಃ ಪುರುಷವಚಸೋ ಭವನ್ತಿ......" ಇತಿ ಛಾಂದೋಗ್ಯೇ "ದೇಹಾದ್ಯಂ......" ಇತ್ಯಾದಿ ಶ್ಲೋಕತ್ರಯೇಣ ಶ್ರೀ ಸಾರಾವಳಿಯಲ್ಲಿ ಪ್ರತಿಪಾದಿತ.

27. ಆದಿತ್ಯಸ್ಥಾಹರ್ನಾಮಕ ಬ್ರಹ್ಮವಿದ್ಯಾ — (27) ಅಕ್ಷಿಸ್ಥಾಹರ್ನಾಮಕ ಬ್ರಹ್ಮವಿದ್ಯಾ (28)— ಇತಿ ವಿದ್ಯಾದ್ವಯವೂ ಸಂಬಂಧಾಧಿಕರಣ (89)— (3-3-7) "ತದ್ಯತ್ಸತ್ಯಮಸೌ ಸ ಆದಿತ್ಯೋ ಯ ಏಷ ಏತಸ್ಮಿನ್ ಮಂಡಲೇ

ಪುರುಷೋ ಯಸ್ಯಾಯಂ ದಕ್ಷಿಣೇಕ್ಷನ್ "—ಇತ್ಯಾದಿಯಾಗಿ ಬೃಹದಾರಣ್ಯಕೇ "ಅಕ್ಷ್ಯಾದಿತ್ಯೋಃ ಪಲಕ್ಷ್ಯೇ......" ಇತಿ ಶ್ಲೋಕದಿಂದ ಸಾರಾವಳಿಯಲ್ಲಿ ಪ್ರತಿ ಪಾದಿತ.

29 ಪುರುಷವಿದ್ಯಾ—ಪುರುಷ ವಿದ್ಯಾಧಿಕರಣ (91) (3-3-9) "ತಸ್ಯೈವಂ ವಿದುಷೋ... .." ಇತಿ ತೈತ್ತಿರೀಯೇ. "ಆಖ್ಯಾದ್ಯೈಕ್ಯಾತ್......" ಇತ್ಯಾದಿ ಶ್ಲೋಕತ್ರಯೇಣ ಶ್ರೀ ಸಾರಾವಳಿಯಲ್ಲಿ ಉಕ್ತ

30 ಈಶಾವಾಸ್ಯವಿದ್ಯಾ—ಪುರುಷಾರ್ಥಾಧಿಕರಣೇ (109) (3-4-1) "ಕುರ್ವನ್ನೇವೇಹಕರ್ಮಾಣಿ.... ." ಇತೀಶಾವಾಸ್ಯೋಪನಿಷದಿ—"ಕುರ್ವನ್ನೇವ......" ಇತ್ಯಾದಿ ಶ್ಲೋಕದಿಂದ ಶ್ರೀ ಸಾರಾವಳಿಯಲ್ಲಿ ಪ್ರತಿಪಾದಿತ.

31. ಉಷಸ್ತಿಕಹೋಳವಿದ್ಯಾ—ಸರ್ವಾನ್ನಾನುಮತ್ಯಧಿಕರಣೇ (115) (3-4-7). "ಉಷಸ್ತಿರ್ಹ ಚಕ್ರಾಯಣಃ......" ಇತಿ ಬೃಹದಾರಣ್ಯಕೋಕ್ತ "ಆಹಾರಸ್ಯ ವ್ಯವಸ್ಥಾ .... .." ಇತ್ಯಾದಿ ಶ್ಲೋಕದಿಂದ ಶ್ರೀ ಸಾರಾವಳಿಯಲ್ಲಿ ಪ್ರತಿಪಾದಿತ

32. ವ್ಯಾಹೃತಿ ಶರೀರಕ ಬ್ರಹ್ಮವಿದ್ಯಾ—ನಾನಾ ಶಬ್ದಾದಿ ಭೇದಾತ್ (106) (3-3-24) ಇತಿ ಶಬ್ದಾದಿ ಭೇದಾಧಿಕರಣೇ. ವಿಕಲ್ಪಾಧಿಕರಣೇ ಚ (107) (3-3-25)"ಯ ಏಷ ಏತಸ್ಮಿನ್ ಮಂಡಲೇ ಭೂರಿತಿ ಶಿರಃ"—ಇತಿ ಶ್ರುತ್ಯುಕ್ತ—ಅತ್ರ 'ವಿಕಲ್ಪಾಧಿಕರಣೇ ಎಂಬಲ್ಲಿಯ "ವಿಕಲ್ಪೋಽವಿಶಿಷ್ಟ ಫಲತ್ವಾತ್" ಎಂಬ ಸೂತ್ರಾಭಿಪ್ರಾಯವೂ, ಶ್ರೀ ಭಾಷ್ಯಕಾರರಿಂದ ಶ್ರೀ ಶರಣಾಗತಿ ಗದ್ಯದಲ್ಲಿ ವಿಶದತರವಾಗಿ ಪ್ರತಿಪಾದಿತವೂ ಶ್ರೀ ಸುದರ್ಶನ ಭಟ್ಟಾರಕರಿಂದ, ಮೇಲಣ ಸೂತ್ರದ ವ್ಯಾಖ್ಯಾನ ಮಾಡುವಾಗ, "ನ್ಯಾಸವಿದ್ಯಾ ಅಭಿಪ್ರೇತಾ"—ಎಂದು ಅನುಗೃಹೀತವೂ 32 ವಿದ್ಯೆಗಳಿಗೆ ಸಮಾನವಾದುದೂ, ಅಕಿಂಚನಾಧಿಕಾರಿಕವೂ ಪರಮ ಗುಹ್ಯತಮವೂ ಆದ ಶ್ರೀಮನ್ನ್ಯಾಸವಿದ್ಯೆಯು ಶ್ರೀಮದಧಿಕರಣ ಸಾರಾವಳಿಯಲ್ಲಿ ತೃತೀಯಾಧ್ಯಾಯದ ತೃತೀಯ ಪಾದದಲ್ಲಿ, ಶಬ್ದಾದಿ ಭೇದಾಧಿಕರಣದಲ್ಲಿಯೂ ವಿಕಲ್ಪಾಧಿಕರಣದಲ್ಲಿಯೂ, "ಯದ್ವಾ ಶಬ್ದಾದಿ ಭೇದಾತ್..." ಎಂದು ಆರಂಭವಾಗಿ "ರೂಪಾದೀನಾಂ ವಿಶೇಷೈಃ"—ಎಂಬ ಶ್ಲೋಕದವರೆಗೆ ಉಪವರ್ಣಿತವಾಗಿದೆ.

ಕಾಮ್ಯವಿದ್ಯಾಕಥನ—ಹೀಗೆಯೇ ಕಾಮ್ಯವಿದ್ಯೆಗಳೂ ಶ್ರೀ ಅಧಿಕರಣ ಸಾರಾವಳಿ ಯಲ್ಲಿ ನಿರೂಪಿತವಾಗಿವೆ. ವಿದ್ಯೆ = ಉಪಾಸನ. "ಓಮಿತ್ಯೇದಕ್ಷರಮುದ್ಗೀಥಮುಪಾಸೀತ" —ಎಂಬ ಶ್ರುತ್ಯುಕ್ತವಾದ ಉದ್ಗೀಥ ವಿದ್ಯೆಯು ಆದಿತ್ಯಾದಿ ಮತ್ಯಧಿಕರಣದಲ್ಲಿ "ತಾದರ್ಥ್ಯಾದ್ದೇವತಾನಾಂ. ...." ಎಂಬ ಶ್ಲೋಕದಿಂದ ಪ್ರತಿಪಾದಿತವಾಗಿದ.

"ನಾಮ ಬ್ರಹ್ಮೇತ್ಯುಪಾಸೀತ"—ಇತ್ಯುಕ್ತವಾದ ನಾಮಾದಿ ಪ್ರತೀಕ ವಿದ್ಯೆಯು. "ನಾಮಾದಿ ಬ್ರಹ್ಮದೃಷ್ಟ್ಯಾ ....." ಎಂಬ ಶ್ಲೋಕದಿಂದ ಪ್ರತಿಪಾದಿತ.

ಅಗ್ನಿರಹಸ್ಯದಲ್ಲಿ " ಮನಶ್ಚಿತೋ ವಾಕ್ಚಿತಃ "—ಎಂದು ಶ್ರುತವಾದ ಮನಶ್ಚಿತಾದಿ ವಿದ್ಯೆಯು "ಅಂಗಂ ಪೂರ್ವಂ ಪ್ರಸಕ್ತ..." ಇತ್ಯಾದಿ ಶ್ಲೋಕದ್ವಯದಿಂದ ಪ್ರತಿಪಾದಿತ.

" ಯ ಏಷ ರಸಾನಾಂ ರಸತಮಃ "—ಎಂದು ಉದ್ಗೀಥದಲ್ಲಿ ರಸತಮತ್ವಾದಿ ದೃಷ್ಟಿವಿದ್ಯೆಯು ಅಂಗಾವಯುವ ಬದ್ಧಾಧಿಕರಣ (3-3-22ರಲ್ಲಿ) ದಲ್ಲಿ, "ಉದ್ಗೀಥಾ ದೇರ್ವಿಶೇಷೇ "—ಎಂಬ ಶ್ಲೋಕದಿಂದ ಪ್ರತಿಪಾದಿತವಾಗಿದೆ.

—❦❦—

ಶ್ರೀ

ಓಂ ನಮೋ ಭಗವತೇ ವಾಸುದೇವಾಯ

ಶ್ರೀ ಲಕ್ಷ್ಮೀ ಕುಮಾರತಾತಾಚಾರ್ಯ ಮಹಾದೇಶಿಕಾಯ ನಮಃ
ಭಗವತೇ ಭಾಷ್ಯಕಾರಾಯ ಮಹಾದೇಶಿಕಾಯ ನಮಃ
ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ

# ಶ್ರೀ ಭಾಷ್ಯಂ—ಶಾಸ್ತ್ರಾವತಾರಃ

1, "ಅಖಿಲ ಭುವನ ಜನ್ಮಸ್ಥೇಮ ಭಂಗಾದಿಲೀಲೇ
ವಿನತ ವಿವಿಧ ಭೂತವ್ರಾತರಕ್ಷೈಕದೀಕ್ಷೇ।
ಶ್ರುತಿಶಿರಸಿ ವಿದೀಪ್ತೇ ಬ್ರಹ್ಮಣಿ ಶ್ರೀನಿವಾಸೇ
ಭವತುಮಮ ಪರಸ್ಮಿನ್ ಶೇಮುಷೀ ಭಕ್ತಿರೂಪಾ॥"

—ಎಂಬ ಮಂಗಳ ಶ್ಲೋಕದಿಂದ ಆರಂಭಿಸಿ ಪ್ರವೃತ್ತವಾಗಿರುವ ಶ್ರೀ ಭಾಷ್ಯವು "ಸತ್ಯೈಕಾಲಂಬಿ" ಅಂದರೆ, ಉಭಯ ವಿಭೂತಿ ವಿಶಿಷ್ಟವೂ ಅಖಿಲಹೇಯ ಪ್ರತ್ಯನೀಕವೂ ಸಮಸ್ತ ಕಲ್ಯಾಣಗುಣಾಕರವೂ ಆದ ಪರಬ್ರಹ್ಮಕ್ಕೆ ಸತ್ಯತ್ವವನ್ನೇ ಪ್ರತಿಪಾದಿಸತಕ್ಕದ್ದೆಂದರ್ಥ ಅಥವಾ ಸತ್ಯಭೂತವೇ ಆದ ಪರಬ್ರಹ್ಮವೇ ಅಖಿಲ ಜಗತ್ತುಗಳಿಗೂ ಕಾರಣ. ಚೇತನಾಚೇತನಾತ್ಮಕವಾದ ಉಭಯ ವಿಭೂತಿವರ್ಗವೂ ಸತ್ಯ. ಸತ್ಯಭೂತವೇ ಆದ ಬ್ರಹ್ಮವು. ಸಮಸ್ತ ಹೇಯ ಪ್ರತಿಭಟ ಮತ್ತು ಸಮಸ್ತ ಕಲ್ಯಾಣ ಗುಣಾಕರ—ಎಂಬುದೂ ಸತ್ಯ. ಆಯಾ ವ್ಯವಸ್ಥಿತ ಗುಣಗಳುಳ್ಳ ಉಪಾಸನ ವಿತಾನವೂ ಸತ್ಯ. ಅದಕ್ಕೆ ಅಂಗವಾದ ವರ್ಣಾಶ್ರಮ ಧರ್ಮ ಸಮುದಾಯವೂ ಸತ್ಯ. ಉತ್ಕ್ರಮಣ, ಅರ್ಚಿರಾದಿಮಾರ್ಗ, ಅದರಿಂದ ಪ್ರಾಪ್ಯವಾದ ಲೋಕವಿಶೇಷಗಳು, ಭಗವತ್ಪ್ರಾಪ್ತಿ, ಅನಾವೃತ್ತಿ ಪರ್ಯಂತವಾದ ಅರ್ಥಗಳೆಲ್ಲವೂ ಸತ್ಯ. ಹೀಗೆ ಸತ್ಯಭೂತವಾದ ಅರ್ಥಗಳನ್ನು ಅವಲಂಬಿಸಿ ಅವನ್ನು ಪ್ರತಿಪಾದ್ಯಗಳನ್ನಾಗಿ ಸ್ವೀಕರಿಸಿ ಪ್ರವೃತ್ತವಾದ ಅಥವಾ ಅವಕ್ಕೆ ಪ್ರತಿಪಾದಕವಾದ ಭಾಷ್ಯವಿದೆಂದರ್ಥ.

ಬ್ರಹ್ಮವೊಂದು ಮಾತ್ರವೇ ಸತ್ಯ. ಅದನ್ನು ಬಿಟ್ಟು ಅದರ ಕಲ್ಯಾಣಗುಣಪರ್ಯಂತವಾದ ಮೇಲೆ ಹೇಳಿದ ಅರ್ಥಜಾತವೆಲ್ಲವೂ ಅಸತ್ಯವೆಂಬುದನ್ನೇ ಅವಲಂಬಿಸಿ ಪ್ರವೃತ್ತವಾದ ಶಂಕರಾದಿ ಭಾಷ್ಯಗಳನ್ನು ಇದರಿಂದ ತಳ್ಳಿಹಾಕಿದಂತಾಯಿತು.

ಸೂತ್ರದ ಲಕ್ಷಣಗಳು ಪೂರ್ಣವಾಗಿರುವುದರಿಂದ, ಸುಮ್ಮನೆ 'ಸೂತ್ರ'ವೆಂದಾಗ್ಯೂ ಅದಕ್ಕೆ ಬ್ರಹ್ಮಸೂತ್ರವೆಂದೇ ಹೇಗೆ ಅರ್ಥವೋ, ಹಾಗೆಯೇ, ಭಾಷ್ಯ ಲಕ್ಷಣಗಳು ಪೂರ್ಣವಾಗಿರುವುದರಿಂದ ಭಗವದ್ರಾಮಾನುಜರ ಭಾಷ್ಯದಲ್ಲಿಯೇ ಭಾಷ್ಯ

ಶಬ್ದವು ಮುಖ್ಯಾರ್ಥವುಳ್ಳದ್ದೆಂಬುದು ಸರ್ವಸಮ್ಮತ. ಆದುದರಿಂದ ಕೇವಲ 'ಭಾಷ್ಯ' ವೆಂದಾಗ್ಯೂ ಭಗವದ್ರಾಮಾನುಜ ಭಾಷ್ಯವೆಂದೇ ಅರ್ಥ. ವಿಶೇಷಣವಿಲ್ಲದೆ ಕೇವಲ ಭಾಷ್ಯ ಶಬ್ದದಿಂದಲೇ ಇದು ನಿರ್ದೇಶಿಸಲು ಅರ್ಹವಾದುದೆಂದು ಭಾವ. ಆದ್ದರಿಂದ "ಸತ್ಯೈಕಾಲಂಬಿ ಭಾಷ್ಯಂ ಯತಿಪತಿ ಕಥಿತಂ......" ಇತ್ಯಾದಿಯಾಗಿ ನಮ್ಮ ಸ್ವಾಮಿ ಶ್ರೀ ದೇಶಿಕರ್‌ರವರಿಂದ ಇದು ಕೊಂಡಾಡಲ್ಪಟ್ಟಿದೆ.

2. ಪೂರ್ವಕಾಂಡದಲ್ಲಿ ಪ್ರತಿಪಾದಿತವಾದ ನ್ಯಾಯಗಳಿಂದಲೇ ವೇದಾಂತ-ವಾಕ್ಯಗಳ ಅರ್ಥಗಳೂ ನಿರ್ಣೀತವಾಗುವುದರಿಂದ ಮತ್ತೆ ಈ ಶಾರೀರಕ ಶಾಸ್ತ್ರವೇಕೆ?—ಎಂದಲ್ಲಿ, ನಿಜ, ಆದಾಗ್ಯೂ, ಆಯಾ ಅಧಿಕರಣಗಳಲ್ಲಿ ಪ್ರಸಕ್ತವಾದ ಪೂರ್ವಪಕ್ಷ ಯುಕ್ತಿ ವಿಶೇಷ ಗಳನ್ನು ನಿರಾಕರಿಸಿದಲ್ಲದೆ, ವೇದಾಂತದ ಅರ್ಥ ನಿರ್ಣಯವೂ ಸಿದ್ಧಿಸುವುದಿಲ್ಲವಾಗಿ ಆಯಾ ಅಧಿಕರಣಗಳು ಇಲ್ಲಿ ಸಫಲಗೊಳ್ಳುತ್ತವೆಯಾದ್ದರಿಂದ, ಪೌನರುಕ್ತ್ಯ ಶಂಕೆಗೆ ಅವಕಾಶವಿಲ್ಲ. ಏನೂ ಪ್ರಯೋಜನವಿಲ್ಲದೆಯೇ ಮತ್ತೆ ಹೇಳಲ್ಪಟ್ಟಿದ್ದು ಪೌನರುಕ್ತ್ಯ ವೆನಿಸುವುದು. ಇದು ಹಾಗಲ್ಲ. ಇಲ್ಲದಿದ್ದಲ್ಲಿ ಪೂರ್ವಕಾಂಡದಲ್ಲಿಯೇ ಪ್ರಕೃತಿ ಷಟ್ಕೋಕ್ತನ್ಯಾಯೋಪಜೀವನವೇ ಆದ ವಿಕೃತಿ ಷಟ್ಕವೆಂಬುದಿರುವುದೇಕೆ? —ಎಂದು ಆಕ್ಷೇಪಿಸ ಬೇಕಾದೀತು. ವೇದವಾಕ್ಯಗಳ ಅರ್ಥ ನಿರ್ಣಯವನ್ನೇ ಫಲವಾಗಿಯುಳ್ಳ ನ್ಯಾಯ ಸಮುದಾಯವೇ ಮೀಮಾಂಸೆಯೆಂಬುದು. "ಧರ್ಮೇ ಪ್ರಮೀಯಮಾಣೇತು ವೇ-ದೇನಕರಣಾತ್ಮನಾ ಇತಿ ಕರ್ತವ್ಯತಾಭಾಗಂ ಮೀಮಾಂಸಾ ಪೂರಯಿಷ್ಯತಿ"॥— ಎಂದಿದೆ. ಇದರಲ್ಲಿ ಕರ್ಮಕಾಂಡ, ದೇವತಾಕಾಂಡ, ಮತ್ತು ಬ್ರಹ್ಮಕಾಂಡವೆಂಬ ಮೂರು ಭಾಗಗಳಿವೆ. ಇವುಗಳಲ್ಲಿ ಕ್ರಮವಾಗಿ 12, 4 ಮತ್ತು 4 ಅಧ್ಯಾಯಗಳಿವೆ. ಆದ್ದರಿಂದ ಮೀಮಾಂಸೆ ಒಟ್ಟು ವಿಂಶತಿ ಲಕ್ಷಣೀ ಎನಿಸಿದೆ. ಮೊದಲೆರಡು ಕಾಂಡಗಳಲ್ಲಿ ಕ್ರಮವಾಗಿ ಕರ್ಮ ಮತ್ತು ದೇವತೆಗಳ ವಿಚಾರಗಳಾದ ಮೇಲೆ ಕಡೆಯದಾದ ಬ್ರಹ್ಮ ಕಾಂಡದಲ್ಲಿ ಬ್ರಹ್ಮವಿಚಾರ ಮಾಡಲ್ಪಟ್ಟಿದೆ. ಕರ್ಮಕಾಂಡದಲ್ಲಿಯ ಅರ್ಥಗಳು— "ಧರ್ಮಧೀಮಾನ, ಭೇದಾಂಗ ಪ್ರಯುಕ್ತಿ ಕ್ರಮ ಕರ್ತೃಭಿಃ । ಸಾತಿದೇಶ ವಿಶೇಷೋಹ ಬಾಧತಂತ್ರ ಪ್ರಸಕ್ತಿಭಿಃ ॥" ಇತಿ. ದೇವತಾಕಾಂಡದಲ್ಲಿ "ಸ್ವರೂಪಮಾದೌ ತದ್ಭೇದಃ ತದುಪಾಸನಪೂರ್ವಕಂ। ಫಲಂ ಚ ದೇವತಾಕಾಂಡೇ ದೇವತಾನಾಂತು ಕಥ್ಯತೇ॥" ಇತಿ.

(1) ಸಾಂಗಾಧ್ಯಯನವಾದ ಮೇಲೆ, ಕರ್ಮಕಾಂಡದಲ್ಲಿ, "ಅಪಾಮ ಸೋಮ ಮಮೃತಾ ಅಭೂಮ." "ಅಕ್ಷಯ್ಯಂ ಹವೈ ಚಾತುರ್ಮಾಸ್ಯಯಾಜಿನಸ್ಸುಕೃತಂ ಭವತಿ" —ಇತ್ಯಾದಿಗಳಿಂದ ಕರ್ಮಗಳು ಅನಂತವೂ, ಸ್ಥಿರವೂ ಆದ ಫಲ ಕೊಡತಕ್ಕವುಗಳೆಂದು ಆಪಾತತಃ ಕಂಡುಬರುತ್ತೆ. "ವಸನ್ತೇವಸನ್ತೇ ಜ್ಯೋತಿಷಾಯಜೇತ" ಇತ್ಯಾದಿ. ಆವೃತ್ತಿ ವಿಧಾನಾದಿಗಳಿಂದಲೂ, "ಅತೋऽತೋವಾ ಉತ್ತರಾಣಿ ಶ್ರೇಯಾಂಸಿ ಭವಂತಿ" —ಇತ್ಯಾದಿ ಶ್ರುತಿಯಿಂದಲೂ ಚೆನ್ನಾಗಿ ಕರ್ಮನಿರೂಪಣೆ ಮಾಡಿಕೊಂಡ ಮೇಲೆ ಅನಂತ ಸ್ಥಿರಫಲಕವೆಂಬ ಆಪಾತಪ್ರತೀತಿ ಬಿಟ್ಟು ಹೋಗಿ ಕರ್ಮಗಳೆಲ್ಲವೂ ಅಲ್ಪವೂ, ಅಸ್ಥಿರವೂ ಆದ ಫಲ ಕೊಡತಕ್ಕವುಗಳೆಂಬ ನಿರ್ಣಯ ಹುಟ್ಟುತ್ತೆ. "ಬ್ರಹ್ಮವಿದಾಪ್ನೋತಿ ಪರಂ"

" ಬ್ರಹ್ಮವೇದ ಬ್ರಹ್ಮೈವ ಭವತಿ," "ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ ಜುಷ್ಟಸ್ತತ ಸ್ತೇನಾಮೃತತ್ವಮೇತಿ,"—ಎಂಬಿವೇ ಮುಂತಾದ ಔಪನಿಷದ್ವಾಕ್ಯಗಳಿಂದುಂಟಾದ, ಬ್ರಹ್ಮ ವಿಚಾರವು ಅನಂತ ಸ್ಥಿರಫಲಕವೆಂಬ ಆಪಾತ ಪ್ರತೀತಿ ಮಾತ್ರ ಇನ್ನೂ ಮುಂದುವರಿಯು ತ್ತಿದೆ ಇದನ್ನು ನಿರ್ಣಯಿಸುವುದಕ್ಕಾಗಿ ಶಾರೀರಕ ಶಾಸ್ತ್ರ ಹೊರಟಿದೆ.

(2) ಇದರಿಂದ ಕರ್ಮ ವಿಚಾರಾನಂತರವೇ ಬ್ರಹ್ಮವಿಚಾರಾರಂಭವೆಂಬುದು ಸಿದ್ಧ. ವೇದ-ವೇದಾಂತಗಳ ಅಧ್ಯಯನದಿಂದುಂಟಾದ ಆಪಾತ ಪ್ರತೀತಿ ಮಾತ್ರದಿಂದಲೇ ಪೂರ್ವಕಾಂಡೋಕ್ತವಾದ ಕರ್ಮ ವಿಚಾರ ಮಾಡುವುದನ್ನು ಬಿಟ್ಟು ಮೊದಲೇ ಬ್ರಹ್ಮ ಭಾಗ ವಿಚಾರಕ್ಕೇ ಏಕೆ ತೊಡಗಬಾರದು?—ಎಂದಲ್ಲಿ, ಆಗ್ಗೆ ಅದೇ ಆಪಾತ ಪ್ರತೀತಿ ಮಾತ್ರವಿರುವುದರಿಂದ ಬ್ರಹ್ಮ ವಿಚಾರಕ್ಕೆ ತಾನೇ ಏಕೆ ತೊಡಗಬೇಕು? ಆಪಾತ ಪ್ರತೀತಿ ಮಾತ್ರದಿಂದ ಅದರಲ್ಲಿ ಹೇಳಿರುವ ಅರ್ಥಗಳ ಬಗ್ಗೆ ನ್ಯಾಯನಿರೂಪಣವಿಲ್ಲದೆ ಸಂಶಯ ವಿಪರ್ಯಯಗಳು ಹೋಗದಿರುವುದರಿಂದ ಬ್ರಹ್ಮಮೀಮಾಂಸೆಗೆ ತೊಡಗುವುದು ಆವಶ್ಯಕ ವೆಂದಲ್ಲಿ ಹಾಗೆ ಸಂಶಯ-ವಿಪರ್ಯಯ ಹೋಗುವುದಕ್ಕಾಗಿಯೇ ಕರ್ಮ ವಿಚಾರವನ್ನೂ ಮೊದಲು ಮಾಡಿಯೇ ಅನಂತರ ಬ್ರಹ್ಮವಿಚಾರಕ್ಕೆ ತೊಡಗುವುದೂ ಆವಶ್ಯಕ. ಹಾಗೆ ಮಾಡಿದ ಕರ್ಮ ವಿಚಾರದಿಂದ, ಅದರಲ್ಲಿ ಹೇಳಿರುವ ಕರ್ಮಜಾತವಾವುದೂ, ಸಮೀಹಿತ ಸಾಧನವಲ್ಲವೆಂಬ ನಿಶ್ಚಯವುಂಟಾದರೇಯೇ ಮುಮುಕ್ಷುವು ಬ್ರಹ್ಮ ಅನಂತ ಸ್ಥಿರಫಲಕವೆಂಬ ಆಪಾತ ಪ್ರತೀತಿಯುಳ್ಳವನಾಗಿದ್ದಾಗ್ಯೂ ಅದನ್ನು ನ್ಯಾಯಾನುಗ್ರಹೀತ ವಾಕ್ಯಗಳಿಂದ ನಿಶ್ಚಯಿಸಿ ತಿಳಿಯುವುದಕ್ಕಾಗಿ ಬ್ರಹ್ಮ ವಿಚಾರವನ್ನು ಚಿಂತಿಸಲು ತೊಡಗುತ್ತಾನೆ

(3) ವೇದಾಂತಾರ್ಥ ವಿಚಾರದಲ್ಲಿ ತೊಡಗಿದ ನ್ಯಾಯನಿಬಂಧನ ರೂಪವಾದ ಶಾಸ್ತ್ರವೇ ಬ್ರಹ್ಮಮೀಮಾಂಸೆಯೆಂಬುದು. " ಪರೀಕ್ಷ್ಯಲೋಕಾನ್ ಕರ್ಮಚಿತಾನ್..." ಎಂಬ ವಿಷಯ ವಾಕ್ಯದಲ್ಲಿಯೂ ಈ ಶ್ರೌತಕ್ರಮ ಸ್ಪಷ್ಟವಾಗಿದೆ. ತ್ರಿವರ್ಗದಲ್ಲಿ ಪ್ರಥಮ ಪ್ರಾವಣ್ಯವೆಂಬುದು ಅರ್ಥಕ್ರಮ ಅನಾದಿ ಸಂಸಾರದಲ್ಲಿ ಅನಾದಿ ವಾಸನಾಬಲದಿಂದ ಮೊದಲು ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗದಲ್ಲಿಯೇ ಪ್ರಾವಣ್ಯವೆಂಬುದು ಸಹಜ. ವೈದಿಕ ಕರ್ಮಾಚರಣೆಯಿಂದ ಜ್ಞಾನೋತ್ಪತ್ತಿಗೆ ಪ್ರತಿಬಂಧಕವಾದ ಪ್ರಾಚೀನ ಕರ್ಮಗಳು ತೀರಿದರೆ ಅನಂತರ ಜ್ಞಾನದಿಂದ ಬ್ರಹ್ಮಪ್ರಾಪ್ತಿಯೆಂದು, " ಕಷಾಯೇ ಕರ್ಮಭಿಃ ಪಕ್ವೇ ತತೋಜ್ಞಾನಂ ಪ್ರವರ್ತತೇ—" " ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋ ಭಯಗ್ಂ ಸಹ। ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತಮಶ್ನುತೇ "— ಇತ್ಯಾದಿ ಪ್ರಮಾಣಗಳಿಂದ ಸಿದ್ಧವಾಗಿದೆ ಅನುಷ್ಠೇಯಗಳಾದ ಕರ್ಮಜ್ಞಾನಗಳಿಗೆ ಪೌರ್ವಾಪರ್ಯ ಸಿದ್ಧವಾದ್ದರಿಂದ ಅವುಗಳ ಚಿಂತನಕ್ಕೂ ಪೌರ್ವಾಪರ್ಯ ಸಿದ್ಧ. ಇಲ್ಲಿಯ ' ಅವಿದ್ಯಾ '—ಶಬ್ದಕ್ಕೆ ಶಾಸ್ತ್ರವಿಹಿತವಾದ ಕರ್ಮವೆಂದರ್ಥ. ' ಮೃತ್ಯು '—ಶಬ್ದಕ್ಕೆ ಜ್ಞಾನೋತ್ಪತ್ತಿ ವಿರೋಧಿಯಾದ ಪ್ರಾಚೀನ ಕರ್ಮವೆಂದು ತಾತ್ಪರ್ಯ. ಇವುಗಳಿಂದ, ಉಪಾಸನಕ್ಕೆ ಕರ್ಮಗಳು ಸಂನಿಪತ್ಯೋಪಕಾರಕಗಳೆಂದು ಸಾಕ್ಷಾತ್ತಾಗಿಯೇ ವರ್ಣಿತವಾಗಿವೆ. ಪೂರ್ವಕಾಂಡದಲ್ಲಿ, ಜ್ಞಾನ ನಿರಪೇಕ್ಷವಾಗಿ ಕೇವಲ ಅನುಷ್ಠಾನ ಮಾತ್ರದಿಂದಲೇ ಕರ್ಮಗಳು



ಲೇಖಕರ ಕಾಲಕ್ಷೇಪಾಚಾರ್ಯರಾದ
ವಿದ್ವಾನ್ ಶ್ರೀ ಹೆಚ್. ಶ್ರೀನಿವಾಸ್ಯೆಂಗಾರ್ಯ ಸ್ವಾಮಿಗಳು



ಸಂಪಾದಕರ ತಂದೆಯವರೂ ಕರ್ಣಾಟಕ ಅರ್ಚಕ ಜನ
ಮಹಾಸಂಘದ ಸಂಸ್ಥಾಪಕರೂ ಆಗಮ ವಿದ್ವಾಂಸರೂ ಆದ
ಶ್ರೀಮಾನ್ ಸಂಕರ್ಷಣ ರಾಘವಭಟ್ಟಾಚಾರ್ಯರವರು

ಆಯಾ ಫಲವನ್ನು ಕೊಡತಕ್ಕವೆಂದು ಹೇಳಿದೆ. ಉತ್ತರ ಕಾಂಡದಲ್ಲಿಯಾದರೋ— ಕರ್ಮಾಂಗಕವಾದ ಜ್ಞಾನದಿಂದಲೇ ಪರಮ ಪುರುಷಾರ್ಥ ಪ್ರಾಪ್ತಿಯೆಂದು ಪ್ರತಿಪಾದಿಸಲ್ಪಟ್ಟಿದೆ. ಪೂರ್ವಕಾಂಡದಲ್ಲಿ ಹೇಳಿರುವುದು ಲಘುವಾದ ಉಪಾಯ. ಉತ್ತರ ಕಾಂಡದಲ್ಲಿ ಹೇಳಿರುವುದು ಗುರುವಾದ ಉಪಾಯ. ಲಘೂಪಾಯದಿಂದಲೇ ಫಲ ಲಭಿಸುವಲ್ಲಿ ಅದನ್ನು ಬಿಟ್ಟು ಗುರುವಾದ ಉಪಾಯದಲ್ಲಿ ಪ್ರವರ್ತಿಸುವುದು ಅಸಂಭವವಾದುದರಿಂದ ಮೊದಲು ಲಘೂಪಾಯವೆನಿಸಿದ ಕರ್ಮಗಳ ವಿಚಾರವನ್ನು ಮಾಡಿ, ಅವೆಲ್ಲವೂ ಅಲ್ಪವೂ ಅಸ್ಥಿರವೂ ಆದ ಫಲವುಳ್ಳವುಗಳೆಂದು ತಿಳಿದು ಅದರ ಮುಂದಿನ ಭಾಗದಲ್ಲಿ ಹೇಳಿರುವ ಬ್ರಹ್ಮಜ್ಞಾನವು ಅನಂತವೂ ಅಕ್ಷಯವೂ ಆದ ಫಲವುಳ್ಳದ್ದೆಂದು ಆಪಾತಃ ತಿಳಿದುಬರುವುದರಿಂದ ಅದರ ನಿರ್ಣಯಕ್ಕಾಗಿ ಮುಂದೆ ಬ್ರಹ್ಮವಿಚಾರದಲ್ಲಿ ತಾನಾಗಿಯೇ ಮುಮುಕ್ಷುವು ತೊಡಗುತ್ತಾನೆಯೆಂಬುದು ಅರ್ಥಕ್ರಮ.

(4) "ದುಃಖತ್ರಯಾಭಿಘಾತಾತ್ ಜಿಜ್ಞಾಸಾ"—ಎಂದು ಸಾಂಖ್ಯರೆನ್ನುವರು. ಯಾದವ ಪ್ರಕಾಶೀಯರೂ ತಾಪತ್ರಯಾಭಿಹತಿಯನ್ನೇ ವೇದಾಂತಕ್ಕೆ ಪೂರ್ವವೃತ್ತವೆನ್ನುವರು. ಶಾಂಕರೀಯರು, ನಿತ್ಯಾನಿತ್ಯ ವಸ್ತುವಿವೇಕ ಶಮದಮಾದಿ ಸಾಧನ ಸಂಪತ್, ಇಹಾಮುತ್ರ ಚ ಫಲಭೋಗವಿರಾಗ, ಮುಮುಕ್ಷುತ್ವಗಳೆಂಬ ಸಾಧನ ಚತುಷ್ಟಯವನ್ನು ಪೂರ್ವವೃತ್ತವೆನ್ನುವರು. ಆದರೆ, "ಪರೀಕ್ಷ್ಯಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್......" ಇತ್ಯಾದಿ ಶ್ರುತಿಯು ಕರ್ಮ ವಿಚಾರ ಮಾಡದೆ ಮೇಲಣ ವಾದಿಗಳಿಬ್ಬರು ಹೇಳುವುದೂ ಸಿದ್ಧಿಸುವುದಿಲ್ಲವೆನ್ನುತ್ತೆ. ವೇದಾಧ್ಯಯನವಾದ ಮೇಲೆ ಮೀಮಾಂಸಾ ಶ್ರವಣವು ನ್ಯಾಯಪ್ರಾಪ್ತವಾದ್ದರಿಂದ, ಅಪ್ರಾಪ್ತವಾದ ಸಾಂಖ್ಯಾದಿ ತಂತ್ರಾಂತರಗಳಿಗೆ ಅವಕಾಶವೇ ಇಲ್ಲ. ಆದ್ದರಿಂದ ಮೀಮಾಂಸಾ ಶಾಸ್ತ್ರದಲ್ಲಿಯ ಕರ್ಮ-ಬ್ರಹ್ಮ ವಿಚಾರಗಳಿಗೇ ಪೌರ್ವಾಪರ್ಯ ನಿಯಮವು ಸಿದ್ಧ.

(5) ಇಷ್ಟು ಹೇಳಿದ ಮೇಲೂ, ನಿರ್ವಿಶೇಷ ಬ್ರಹ್ಮವೊಂದೇ ಸತ್ಯ. ಕಂಠ-ಚಾಮೀಕರ ನ್ಯಾಯದಿಂದ ಅದು ನಮಗೆ ಲಬ್ಧವೇ ಆಗಿದೆ. (ಸ್ವಂತ ಕತ್ತಿನಲ್ಲಿಯೇ ಇರುವ ಚಿನ್ನದ ಕಂಠಾಭರಣವನ್ನು ಮೊದಲು ಗಮನಿಸದೆ, ಯಾರೋ ಅದನ್ನು ಅಪಹರಿಸಿಬಿಟ್ಟರೆಂದು ಭ್ರಮಿಸಿ ಸಂಭ್ರಮದಿಂದ ಹುಡುಕುವವನನ್ನು ನೋಡಿ, ನಿನ್ನ ಕಂಠಾಭರಣ ನಿನ್ನ ಕತ್ತಿನಲ್ಲಿಯೇ ಇದೆಯಲ್ಲ! ಎಂದು ಮತ್ತೊಬ್ಬರು ಹೇಳಿದಾಗ, ಆಗಲೇ ಅದನ್ನು ಕಣ್ಣಾರೆ ಕಂಡು ಸಮಾಧಾನ ಹೊಂದುತ್ತಾನೆಯೆಂಬುದೇ ಈ ನ್ಯಾಯ). ಹಾಗೆಯೇ ಇಲ್ಲಿ ನಿವರ್ತನೀಯವಾದುದು ಅವಿದ್ಯಾರೂಪವಾದ ಬಂಧನ. ಬ್ರಹ್ಮ-ವ್ಯತಿರಿಕ್ತವಾದುದರಿಂದ ಇದು ಮಿಥ್ಯಾಭೂತ.

"ಮಿಥ್ಯಾಭೂತಂ ನಿವರ್ತ್ಯಂ ಶ್ರುತಿ
ಶಕಲಭುವಃ ಪ್ರೇಕ್ಷಣಾತ್ ತನ್ನಿವೃತ್ತಿಃ ।
ಕರ್ಮೈರ್ವಂ ಕ್ವೋಪಯುಕ್ತಂ ಪ್ರತಿಭಟಮಪಿ
ತದ್ವ್ಯುತ್ಪತ್ತಿತೋಕ್ತಿರ್ಮದುಕ್ತೇ ಪ್ರಾಪ್ತಾ...॥"—ಎಂಬುದು ಅವರ ವಾದ.

ರಜ್ಜು ಸರ್ಪಜ್ಞಾನದಲ್ಲಿ, ಇದು ಸರ್ಪವಲ್ಲ, ರಜ್ಜು—ಎಂಬ ಜ್ಞಾನವುಂಟಾಗಿ ಸರ್ಪವೆಂಬ

ಭ್ರಾಂತಿ ತಾನಾಗಿಯೇ ತೊಲಗಿ ಅದರಿಂದುಂಟಾಗಿದ್ದ ಭಯಾದಿಗಳೂ ತೊಲಗುತ್ತವೆ. ಇಲ್ಲಿ ಮಿಥ್ಯಾಭೂತವಾಗ ಸರ್ಪದ ವಧೆಗಾಗಿ ದಂಡ ಘಾತಾದಿ ಕ್ರಿಯೆಗಳಿಗೆ ಆವಶ್ಯಕತೆ ಯೇನಿದೆ?—ಇದನ್ನು "ಮಣಿಮಂತ್ರೌಷಧಾದಿಭ್ಯೋದಂಡಘಾತಾದಿನಾಪಿ ವಾ ಕ್ರಿಯತೇ ನೈವಕೇನಾಪಿ ಮಾಯಾಕುಂಡಲಿಖಂಡನಂ"—ಎನ್ನುತ್ತಾರೆ. ಆದ್ದರಿಂದ ಕರ್ಮ ವಿಚಾರವನ್ನು ಇಲ್ಲಿ ಪೂರ್ವವೃತ್ತವನ್ನಾಗಿ ಹೇಳುವುದಕ್ಕಿಲ್ಲ. ಕರ್ಮ ಅನುಪಯುಕ್ತ ಮಾತ್ರವೇ ಅಲ್ಲ—ಕರ್ತೃ ಕರಣಾದ್ಯನೇಕ ಭೇದರೂಪವಾದುದರಿಂದ ಪ್ರಕೃತಕ್ಕೆ ಕರ್ಮವು ವಿರೋಧಿಯೂ ಹೌದು. ಆದುದರಿಂದ ಸಾಧನ ಚತುಷ್ಟಯಾದಿಗಳಿಗೇ ಪೂರ್ವವೃತ್ತ ವನ್ನು ಹೇಳಬೇಕು—ಇತ್ಯಾದ್ಯಪನ್ಯಾಯಮೂಲದಾದ ಪ್ರಲಾಪಗಳಿಗೆ ಪ್ರತಿವಚನ ಗತಿಯಂ "ಸತ್ಯೈಕಾಲಂಬಿ"—ಅಂದರೆ ಬ್ರಹ್ಮವೂ ಸತ್ಯ. ತದ್ವ್ಯತಿರಿಕ್ತವಾದ ಚೇತನಾಚೇತನ ಪ್ರಪಂಚವೂ ಸತ್ಯ—ಹಾಗೆಯೇ ಬಂಧನವೂ ಸತ್ಯವೇ. ಇತ್ಯಾದಿಯಾಗಿ ಬ್ರಹ್ಮ ವ್ಯತಿರಿಕ್ತವಾದುದಲ್ಲಕ್ಕೂ ಸತ್ಯತ್ವವನ್ನೇ ಪ್ರತಿಪಾದಿಸುವ ಭಗವದ್ಭಾಷ್ಯಕಾರರ ಭಾಷ್ಯದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಬ್ರಹ್ಮವೊಂದನ್ನು ಉಳಿದು, ಮತ್ತೆಯೆಲ್ಲವೂ ಮಿಥ್ಯೆ ಯೆಂಬುದಾದಲ್ಲಿಯಲ್ಲವೇ ಆ ಮಿಥ್ಯಾಜ್ಞಾನ ನಿವೃತ್ತಿಗಾಗಿ ಅವರು ಹೇಳುವಂತೆ ಶ್ರುತಿ ವಚನ ಮಾತ್ರವೇ ಸಾಕು! ಅವೆಲ್ಲವೂ ಸತ್ಯವೇ ಆಗಿರುವಾಗ ಸತ್ಯಭೂತವಾದ ವಸ್ತು ಜ್ಞಾನಮಾತ್ರದಿಂದ ಹೇಗೆ ನಿವರ್ತಿಸುತ್ತೆ? ಸರ್ಪವು ಭ್ರಾಂತಿಯಾದರೇಸೋ ಸರಿ, ಯಥಾರ್ಥ ಜ್ಞಾನದಿಂದ ಭ್ರಾಂತಿ ತೊಲಗುತ್ತೆ. ಸರ್ಪ ನಿಜವೇ ಆದಲ್ಲಿ ಅದರ ನಿರಸನಕ್ಕಾಗಿ ದಂಡಘಾತಾದಿ ವ್ಯಾಪಾರಗಳು ಆವಶ್ಯಕವಲ್ಲವೇ? 'ಇದು ಸರ್ಪ'— ಎಂದು ತಿಳಿದಷ್ಟಕ್ಕೇ, ಸರ್ಪವಾಗಲಿ, ತನ್ನಿಮಿತ್ತ ಭಯವಾಗಲಿ ತೊಲಗುವುದೇ? ಆದ್ದರಿಂದ ಉಭಯ ವಿಭೂತಿ ವಿಶಿಷ್ಟ ಪರಬ್ರಹ್ಮವೇ ಪ್ರಾಪ್ಯ. ಇದಕ್ಕೆ ಪ್ರಾಪಕವಾದುದು ಉಪಾಸನ. ಅದು ಫಲಾಭಿಸಂಧಿರಹಿತವಾದ ಕರ್ಮಾನುಷ್ಠಾನದಿಂದಲೇ ಸಾಧ್ಯ. ಅದಕ್ಕೆ ಆಯಾ ಕರ್ಮಗಳ ಪರಿಜ್ಞಾನ ಅಗತ್ಯ. ಅದಕ್ಕಾಗಿ ಕರ್ಮಮೀಮಾಂಸಾ ಶ್ರವಣ ಮೊದಲು ಆವಶ್ಯಕ. ಆದ್ದರಿಂದ ಕರ್ಮ ವಿಚಾರವನ್ನೇ ವೇದಾಂತಕ್ಕೆ ಪೂರ್ವವೃತ್ತ ವನ್ನಾಗಿ ಹೇಳಬೇಕೆಂಬುದು ಸಿದ್ಧಾಂತ.

(6) ಮತ್ತೆಯೂ, ಒಂದೇ ದೇಹದಲ್ಲಿ ಮುಂಡ-ರುಂಡಗಳೆಂಬ ಭಾಗವಿರುವಂತೆ ಕರ್ಮ-ಬ್ರಹ್ಮ ಭಾಗಗಳೆಂದು ಭಾಗದ್ವಯಾತ್ಮಕವಾದ ಮೀಮಾಂಸ ಶಾಸ್ತ್ರವೊಂದನ್ನೇ ಬೇರೆ ಬೇರೆ ಶಾಸ್ತ್ರವನ್ನಾಗಿ ಹೇಳುವ ಕಬಂಧ-ರಾಹು ಮೀಮಾಂಸಕರನಿಸಿದವರಿಬ್ಬರೂ, ಶಾಸ್ತ್ರೈಕ್ಯವಿದ್ದರೆಯಲ್ಲವೇ, ಕರ್ಮ-ಬ್ರಹ್ಮ ವಿಚಾರಗಳೆರಡರಲ್ಲಿ ಪೌರ್ವಾಪರ್ಯ (ಹಿಂದು–ಮುಂದೆಂಬುದರ) ನಿಯಮವನ್ನು ಕಲ್ಪಿಸುವುದು! ಐಕ್ಯವೇ ಇಲ್ಲದಿರುವಲ್ಲಿ ಪೌರ್ವಾಪರ್ಯ ನಿಯಮ ಸಿದ್ಧಿಸುವುದು ಹೇಗೆ? ಎಂದು ಆಕ್ಷೇಪಿಸುವರು.

ಇದಕ್ಕೆ ಉತ್ತರ: "ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ ।
ಸ್ಮೃತಯಶ್ಚ ಪುರಾಣಾನಿ ವಿದ್ಯಾಹ್ಯೇತಾಶ್ಚತುರ್ದಶ" ॥

—ಇತ್ಯಾದಿ ಪ್ರಮಾಣಗಳಿಂದ ಹದಿನಾಲ್ಕು ವಿದ್ಯಾಸ್ಥಾನಗಳಲ್ಲಿ ಮೀಮಾಂಸೆಯೂ ಒಂದಾಗಿ ಪರಿಗಣಿಸಲ್ಪಟ್ಟಿದೆ. "ಸ್ವಾಧ್ಯಾಯೋಽಧ್ಯೇತವ್ಯಃ"—ಎಂಬ ಅಧ್ಯಯನ

ವಿಧಿಯೂ ವೇದ-ವೇದಾಂತಗಳೆರಡಕ್ಕೂ ಪೂರ್ತಿಯಾಗಿ ಅನ್ವಯಿಸುವುದರಿಂದ ಅದರಲ್ಲಿ ಏಕದೇಶವನ್ನು ಮಾತ್ರವೇ ಅಧ್ಯಯನ ಮಾಡಬೇಕೆನ್ನಲು ಪ್ರಮಾಣವಿಲ್ಲ. ನಿರೀಶ್ವರ ಮೀಮಾಂಸಕರು (ಕಬಂಧ ಮೀಮಾಂಸಕರು) ಕರ್ಮವೇ ಸಕಲ ಫಲ ಸಾಧನ. ಅದೇ ಪ್ರಧಾನವೆಂಬ ದುರಭಿಮಾನದಿಂದ ಕರ್ಮ-ಕರ್ತೃಗಳಿಗಿಂತ ಅತಿರಿಕ್ತವಾದ ಈಶ ರ ನೆಂಬವನನ್ನು ಅಂಗೀಕರಿಸುವುದಿಲ್ಲ. ಹಾಗೆ ಅಂಗೀಕರಿಸಿದಲ್ಲಿ ಕರ್ಮವೇ ಪ್ರಧಾನವೆಂಬ ಅವರ ವಾದಕ್ಕೆ ಹಾನಿ ತಟ್ಟುವುದು. ಆದ್ದರಿಂದ, ಜೀವಾತಿರಿಕ್ತವಾದ ಈಶ್ವರನ ಪರ ವಾದ ಬ್ರಹ್ಮಕಾಂಡದಲ್ಲಿ ಅವರಿಗೆ ವಿರೋಧವಿದೆ. ಶಾಂಕರಾದಿಗಳಿಗೂ, ಜಗತ್ತು ಮಿಥ್ಯೆ, ಬ್ರಹ್ಮವೊಂದೇ ಸತ್ಯ, ಜ್ಞಾನ ಮಾತ್ರದಿಂದಲೇ ಬಂಧನಿವೃತ್ತಿ. ಕರ್ಮದಿಂದ ಅದಕ್ಕೇನೂ ಉಪಯೋಗವಿಲ್ಲ. ಅಲ್ಲದೆ ವಿರೋಧವೂ ಇದೆ. ಆದ್ದರಿಂದ ಅದು ತ್ಯಾಜ್ಯ—ಎಂದೆನ್ನುವ ದುರಭಿಮಾನದಿಂದ ಕರ್ತೃ-ಕರಣಾದ್ಯನೇಕ ಭೇದ ಪ್ರತಿಷ್ಠಾಪಿತವಾಗಿರುವ ಕರ್ಮ ಕಾಂಡದ ವಿಷಯದಲ್ಲಿ ಅವರಿಗೆ ಅಂತರ್ವಿರೋಧವಿದೆ. ಆದ್ದರಿಂದ ಅವರು ಕರ್ಮ ವಿಚಾರವನ್ನು ಒಪ್ಪುವುದಿಲ್ಲ. ಹೀಗೆ ಬಾಹ್ಯಕಲ್ಪರಾದ ಅವರಿಬ್ಬರೂ ಉಪೇಕ್ಷಣೀಯರು. ಅಧ್ಯಯನ ವಿಧಿಯಿಂದ, ವ್ಯಾಖ್ಯೇಯವಾದ, ಸಕಲ ವೇದಕ್ಕೂ ಪೌರ್ವಾಪರ್ಯ ಸಿದ್ಧಿಸು ವಲ್ಲಿ, ವ್ಯಾಖ್ಯಾನವಾದ ಮೀಮಾಂಸಾಶಾಸ್ತ್ರದ ಕರ್ಮ ಬ್ರಹ್ಮಾತ್ಮಕ ಭಾಗದ್ವಯಕ್ಕೂ ಶಾಸ್ತ್ರೈಕ್ಯವೂ ಪೌರ್ವಾಪರ್ಯ ನಿಯಮವೂ ಪ್ರಾಮಾಣಿಕರಿಗೆ ಸಿದ್ಧಿಸದಿರುವುದಾದರೂ ಹೇಗೆ?—ಎಂಬುದು.

(7) ಮತ್ತೊಂದು ಶಂಕೆ—ಮೇಲೆ ಹೇಳಿದ ಪ್ರಕಾರ, ವಿಷಯೈಕ್ಯ, ಪ್ರಯೋಜನೈಕ್ಯ, ಪ್ರವೃತ್ತಿ ಪ್ರಕಾರೈಕ್ಯಗಳಿಂದ ಶಾಸ್ತ್ರೈಕ್ಯ ಸಿದ್ಧಿಸಲಿ. ಆದರೂ, ಕರ್ಮ ವಿಚಾರವಾದ ಮೇಲೆಯೇ ಬ್ರಹ್ಮ ವಿಚಾರ ಮಾಡತಕ್ಕದ್ದೆಂಬ ಕ್ರಮವಿವಕ್ಷೆ ಸಿದ್ಧಿಸುವುದಾದರೂ ಹೇಗೆ?—ಎಂಬುದು. ಇದಕ್ಕೆ ಉತ್ತರ: ಕ್ರಮ ವಿಶೇಷಯುಕ್ತವಾದ ಆಕಾಂಕ್ಷಾ ವಶದಿಂದಲೇ ಪ್ರಬಂಧೈಕ್ಯ ಪರಿಕ್ಲೃಪ್ತವಾಗಿದೆ. ಪ್ರಬಂಧೈಕ್ಯದಲ್ಲಿ ಕ್ರಮ ಪರಿಕ್ಲೃಪ್ತಿಯೂ ಉಪಪನ್ನ ವಾಗಿಯೇ ಆಗುತ್ತೆ. ಅಂದರೆ ವೇದರಾಶಿ ಒಂದೇ. ಆಡಿಯಿಂದ ತುದಿಯವರೆಗೂ ಅದಕ್ಕೆ ವ್ಯಾಖ್ಯಾನವಾಗಿರುವ ಮೀಮಾಂಸಾ ಶಾಸ್ತ್ರವೂ ಒಂದೇ ಪ್ರಬಂಧ. ಅದರಲ್ಲಿ ಪೌರ್ವಾಪರ್ಯವಿಲ್ಲದೆ ಪ್ರಬಂಧೈಕ್ಯವನ್ನು ಹೇಳಲು ಶಕ್ಯವಲ್ಲದ್ದರಿಂದ ಕ್ರಮ ಪರಿಕ್ಲೃಪ್ತಿ ಉಪಯುಜ್ಯವಾಗಿದೆ ಎಂಬುದು.

(8) ಕರ್ಮಕಾಂಡದಲ್ಲಿ ಕರ್ಮವಿಚಾರ—ಬ್ರಹ್ಮಕಾಂಡದಲ್ಲಿ ಬ್ರಹ್ಮವಿಚಾರ—ಹೀಗೆ ವಿಚಾರ ಭೇದದಿಂದ ಶಾಸ್ತ್ರಭೇದವೂ ಇದ್ದಂತೆಯಲ್ಲವೇ?—ಎಂದರೆ, ಇವು ಒಳಗಿನ ಅರ್ಥದಲ್ಲಿಯ ಭೇದಗಳು. ಸಾಧಾರಣವಾದ ಅರ್ಥಗಳಲ್ಲಿ ಐಕ್ಯವಿದ್ದಲ್ಲಿ, ಒಳಅರ್ಥದಲ್ಲಿಯ ಭೇದಗಳು ಶಾಸ್ತ್ರಕ್ಕೆ ಭೇದಕಗಳಾಗವು. ಹಾಗಲ್ಲದಿದ್ದಲ್ಲಿ, ಷಟ್ಕದ್ವಿಕ, ಅಧ್ಯಾಯ—ಪಾದ-ಪೇಟಿಕಾ-ಅಧಿಕರಣಗಳು—ಇವೂ ಪರಸ್ಪರ ಅರ್ಥ ಭೇದವುಳ್ಳವುಗಳಾದ್ದರಿಂದ ಇವು ಒಂದೊಂದೂ ಬೇರೆ ಬೇರೆ ಶಾಸ್ತ್ರವೆನಿಸಬೇಕಾದೀತು!

(9) ಕರ್ಮಕಾಂಡದ ಕರ್ತೃ—ಜೈಮಿನಿ. ದೇವತಾಕಾಂಡದ ಕರ್ತೃ—ಕಾಶಕೃತ್ಸ್ನರು, ಶಾರೀರಕದ ಕರ್ತೃ—ಬಾದರಾಯಣರು, ಈ ರೀತಿ ಕರ್ತೃಭೇದವಿರುವುದ ರಿಂದಲಾದರೂ ಶಾಸ್ತ್ರಭೇದವೂ ಇರಬೇಕಲ್ಲವೇ?—ಎಂಬುದೂ ಅಸಾರ. ಏಕೆಂದರೆ,

ಒಂದು ಕಾರ್ಯಕ್ಕೆ ಒಬ್ಬರೇ ಕರ್ತೃ. ಬೇರೆಬೇರೆ ಕಾರ್ಯಗಳಿಗೆ ಕರ್ತೃಗಳೂ ಬೇರೆ ಬೇರೆ—ಎಂಬ ನಿರ್ಬಂಧವಿಲ್ಲ. ಬಹುಕಾಲದಿಂದ ಸಾಧ್ಯವಾಗತಕ್ಕ ಒಂದೊಂದೇ ರಥಗೋಪುರಾದಿಗಳಲ್ಲಿ ಮೊದಲಿನ ಕರ್ತೃ ಮಾಡಿ ಮಿಕ್ಕದ್ದನ್ನು ಮತ್ತೊಬ್ಬ ಕರ್ತೃ ಮಾಡುವುದನ್ನೂ ಕಂಡಿದ್ದೇವೆ. ಅಲ್ಲದೆ ಒಬ್ಬನೇ ಅನೇಕ ಬೇರೆ ಬೇರೆ ಕಾರ್ಯಗಳನ್ನೂ ಮಾಡಬಲ್ಲ. ಆದ್ದರಿಂದ ಶಾಸ್ತ್ರಕರ್ತೃಗಳ ಭೇದ ಅಥವಾ ಅಭೇದ ಶಾಸ್ತ್ರದ ಭೇದ ಅಥವಾ ಅಭೇದಕ್ಕೆ ಪ್ರಯೋಜಕವಲ್ಲ.

(10) ಆದರೂ ಮತ್ತೆಲ್ಲಾ ಭೇದಕಾರಣಗಳೂ ಇರಲಿ. ಆಯಾ ಕರ್ತೃಭೇದದೊಡನೆ ಅರ್ಥವಿರೋಧವೂ ಇದ್ದರೋ?—ಎಂದಲ್ಲಿ ಈ ಆರೋಪ ಕಲಿಬಲಕಲುಷರಾದ ಮಹಾ ಸಾಹಸಿಕರು ಮಾಡತಕ್ಕದ್ದು. ವಸ್ತುತಃ ಜೈಮಿನಿಯು ಬಾದರಾಯಣರ ಶಿಷ್ಯರು. ಇಬ್ಬರೂ ಒಳ್ಳೆಯ ನ್ಯಾಯನಿರೂಪಣೆಯಿಂದ ವೇದಾರ್ಥವನ್ನು ಪ್ರಕಾಶಪಡಿಸುವುದರಲ್ಲಿಯೇ ಪ್ರವೃತ್ತರು. ಇಂತಹ ಶಿಷ್ಯಾಚಾರ್ಯರಿಬ್ಬರೊಳಗೆ ಪರಸ್ಪರ ವಿರೋಧ ಪ್ರಕಟಿಸುವುದು ಹೇಗೆ?

(11) ಆದಾಗ್ಯೂ "ಇಂದ್ರಾಯ ವಜ್ರಿಣೇ," "ಇಂದ್ರಾಯ ರಾಜ್ಞೇ,"—"ಇಂದ್ರಾಯಾಧಿರಾಜಾಯ,"—ಇತ್ಯಾದಿಗಳಲ್ಲಿ 'ವಜ್ರಿತ್ವ,' 'ಅಧಿರಾಜತ್ವ'—ಮುಂತಾದ ವಿಶೇಷಣ ಭೇದದಿಂದ ದೇವತಾ ಭೇದವನ್ನೂ ತಾಂತ್ರಿಕರು ನಿಶ್ಚಯಿಸುತ್ತಾರೆ. ಹಾಗೆಯೇ 'ಇಂದ್ರ' 'ಮಹೇಂದ್ರ'—ಮುಂತಾದ ಶಬ್ದಭೇದದಿಂದಲೂ ದೇವತಾ ಭೇದವನ್ನು ಹೇಳುತ್ತಾರೆ. ಆದ್ದರಿಂದ 'ದೇವತೆ'—ಎಂಬ ನಿಯತ ವಾರಮಾರ್ಥಿಕವಾವುದೂ ಇಲ್ಲವೆಂಬುದು ಜೈಮಿನಿಯ ಮತ. ಬಾದರಾಯಣರಾದರೋ—ಆಸ್ತಿಕಾಗ್ರೇಸರರು. ಆದ್ದರಿಂದ ಇವರೊಳಗೆ ವಿರೋಧವಿಲ್ಲವೆನ್ನುವುದು ಹೇಗೆ?—ಎಂದರೆ, ಶಯನ, ಆಸನ, ಬೋಜನಾದ್ಯವಸ್ಥೆಗಳಿಂದ ಕೂಡಿದ ಒಬ್ಬನೇ ರಾಜನು ನಿಯತಾಧಿಕಾರಿಗಳಿಂದ ಆಯಾ ಅಧಿಕಾರಕ್ಕೆ ತಕ್ಕಂತೆ ನಿಯತವಾಗಿ ವ್ಯವಹರಿಸಲ್ಪಡುತ್ತಾನೆ. ಹಾಗೆಯೇ ಇಲ್ಲಿಯೂ ಉದ್ದೇಶ್ಯವಾದ ಆಕಾರ ಭೇದವೇ ಹೊರತು ಸ್ವರೂಪ ಭೇದವಿಲ್ಲ. ವೇದಾಂತವನ್ನು ಶ್ರವಣ ಮಾಡದವರಿಗೆ ಕರ್ಮ ವಿಚಾರದಲ್ಲಿ ಅಶ್ರದ್ಧೆಯಾಗದಿರಲೆಂದು ದೇವತಾಧಿಕರಣದಲ್ಲಿ ಕೆಲವು ಅನ್ಯ ಪರವಾದ ಉಕ್ತಿಗಳನ್ನು ಜೈಮಿನಿ ಹೇಳಿದ್ದಾರೆಯೇ ಹೊರತು ಅವರು ದೇವತೆಯನ್ನು ನಿರಾಕರಿಸಿದವರಲ್ಲ. ಬಾದರಾಯಣರು ಅವರನ್ನು ಖಂಡಿಸಿದವರೂ ಅಲ್ಲ. ದೇವತೆಯನ್ನು ಸ್ಫುಟವಾಗಿ ಅಂಗೀಕರಿಸಿಕೊಂಡೇ ಜೈಮಿನಿಯು ವೇದವಿಹಿತವಾದ ಕರ್ಮ ಹೇಯವೆನ್ನುವ ಪ್ರತ್ಯಕ್ಷೈಕ ಪ್ರಮಾಣಕರಾದ ಬಾಹ್ಯರ ನಿರಾಸಕ್ಕೋಸ್ಕರ ಕರ್ಮಪ್ರಾಧಾನ್ಯವನ್ನು ಪ್ರತಿಪಾದಿಸಿದ್ದಾರೆಯಷ್ಟೆ! ಇದನ್ನು 'ನಹಿ ನಿಂದಾನ್ಯಾಯ' ವೆನ್ನುವರು. "ನಹಿ ನಿಂದಾ ನಿಂದ್ಯಂ ನಿಂದಿತುಂ ಪ್ರವರ್ತತೇ, ಅಪಿ ತು ನಿಂದಿತಾದಿತರತ್ಪ್ರಶಂಸಿತುಂ"—ಎಂಬುದು ಆ ನ್ಯಾಯ. ಆದ್ದರಿಂದ ವಿರುದ್ಧದಂತೆ ಕಂಡುಬರುವ ದೇವತಾ ನಿರಾಸಾದಿಗಳಲ್ಲಿ ತಾತ್ಪರ್ಯವಿಲ್ಲ.

(12) ಆದಾಗ್ಯೂ, "ಆಮ್ನಾಯಸ್ಯ ಕ್ರಿಯಾರ್ಥತ್ವಾತ್ ಸಿದ್ಧಪರವಾಕ್ಯಾನಾಂ ತಚ್ಛೇಷತ್ವಂ" ಎಂದು ಸೂತ್ರಕಾರರಿಂದ ಕಂಠೋಕ್ತವಾಗಿರುವುದು ಇದಕ್ಕೆ ವಿರುದ್ಧವಲ್ಲವೇ? ಆದ್ದರಿಂದ ಶಾಸ್ತ್ರಭೇದವಿದ್ದೇ ಇದೆ—ಎಂದರೆ, ಹಾಗಲ್ಲ, "ಪದೇ ಜುಹೋತಿ,"

"ಆಹವನೀಯೇ ಜುಹೋತಿ"—"ನ ಹಿಂಸ್ಯಾತ್ ಸರ್ವಾಭೂತಾನಿ"—"ಪಶು ಮಾಲಭೇತ,'—ಇತ್ಯಾದಿಯಂತೆ. ಸಾಮಾನ್ಯತಃ ಸಿದ್ಧಪರವಾಕ್ಯಗಳಿಗೆ ಕ್ರಿಯಾಶೇಷತ್ವ ಹೇಳಲ್ಪಡಲಾಗಿ, ಸಿದ್ಧಪರವಾಕ ವಿಶೇಷಕ್ಕೆ ವಿಧಿಶೇಷತ್ವವುಂಟೇ ಇಲ್ಲವೇ—ಎಂದು ವಿಚಾರ ಮಾಡಿ ಸ್ವಯಂ ಪುರುಷಾರ್ಥ ವಿರಹಿಗಳಾದ ಸಿದ್ಧಪರ ವಾಕ್ಯಗಳಿಗೆ ಮಾತ್ರವೇ ಕ್ರಿಯಾಶೇಷತ್ವ, ಸ್ವಯಂ ಪುರುಷಾರ್ಥ ಪರ್ಯವಸಾಯಿಯಾದ ಸಿದ್ಧ ಪರವಾಕ್ಯಗಳಿಗಾದರೋ ವಿಧಿಶೇಷತ್ವವಿಲ್ಲ—ಎಂದು ನಿರ್ಣಯಿಸುವುದು ಯುಕ್ತ. ಹೋಮವು ಸಾಮಾನ್ಯವಾಗಿ ಆಹವನೀಯದಲ್ಲಿ ಮಾಡತಕ್ಕದ್ದಾದರೂ ಹೋಮ ವಿಶೇಷವನ್ನು 'ಪದ'—ದಲ್ಲಿ ಮಾಡಬೇಕೆಂಬ ನಿಶ್ಚಯ ಹೇಗೋ, ಸಾಮಾನ್ಯತಃ ಹಿಂಸಾ ನಿಷೇಧವಿದ್ದಾಗ್ಯೂ ಹಿಂಸಾವಿಶೇಷವು ಕರ್ತವ್ಯವೆಂಬ ನಿಶ್ಚಯ ಹೇಗೋ—ಮತ್ತು ಇದರಿಂದ ಹೇಗೆ ಶಾಸ್ತ್ರಭೇದವಿಲ್ಲವೋ, ಅದರಂತೆಯೇ ದೇವತಾ ನಿರಾಕರಣದಲ್ಲಿ ತಾತ್ಪರ್ಯವಿಲ್ಲವಾದ್ದರಿಂದ ಶಾಸ್ತ್ರಭೇದವಿಲ್ಲ. ಅಥವಾ, ವೇದದಲ್ಲಿ ಪ್ರಾವಣ್ಯವುಂಟಾಗಿ ಕರ್ಮಾನುಷ್ಠಾನ ಶ್ರದ್ಧೆಯುಂಟು ಮಾಡುವುದರಲ್ಲಿ ತಾತ್ಪರ್ಯಾತಿಶಯದಿಂದ, ಇದಕ್ಕೆ ವಿರುದ್ಧರಾದವರನ್ನು ನಿರಾಕರಿಸಲಿಚ್ಛೆಯಿಂದ, ಇಲ್ಲಿಯ ದೇವತಾ ನಿರಾಸೋಕ್ತಿಯು ಅನ್ವಾರುಹ್ಯವಾದವೂ ಆಗಿರಬಹುದು. ಅಭಿಮತತರವಾದ ಅರ್ಥವನ್ನು ಅನಾದರಿಸಿಯಾದರೂ ವಿಪಕ್ಷ ನಿರಾಸವು ಕಂಡುಬರುತ್ತೆ. "ಅಭೀಷ್ಟಾರ್ಥ ವ್ಯಯೇನಾಪಿ ಜಯತಿ ಕ್ಷೇತ್ರಹಾರಿಣಂ। ಲಬ್ಧಕ್ಷೇತ್ರೈರ್ನ ದುಷ್ಪ್ರಾಪಸ್ಸ್ಯಾದರ್ಥ ಇತಿ ನಿರ್ಣಯಃ—ಎಂಬ ನಿಶ್ಚಯದಿಂದ ಅಭಿಮತತರನಾದ ಈಶ್ವರನನ್ನು ಅನಾದರಿಸಿಯಾದರೂ ವೇದಪ್ರಾವಣ್ಯವನ್ನು ಸಮರ್ಥಿಸಿದಲ್ಲಿ, ತರುವಾಯ ಅಭಿಮತವಾದ ಈಶ್ವರ ಸಿದ್ಧಿ ತಾನಾಗಿಯೇ ಆಗುವುದೆಂದು ಜೈಮಿನಿಯ ಅಭಿಪ್ರಾಯವೆನ್ನಬಹುದು.

(13) ದೇವತಾ ಸಿದ್ಧಿಯನ್ನೂ ಒಪ್ಪಿಕೊಂಡಲ್ಲಿ ಅದರ ವಿಷಯದಲ್ಲಿ ಅನಾದರವಾದವೆಂಬುದು ಹೇಗಾಯಿತು? ಎಂದಲ್ಲಿ ದೇವತಾನಾದರವಾದವು ಅನ್ವಾರುಹ್ಯವಾದವಾದ್ದರಿಂದ ವಿರೋಧವಿಲ್ಲವೆಂದು ಭಾವ. ಪರಪಕ್ಷವನ್ನು ಅಂಗೀಕರಿಸಿ ಸಾಂತ್ವದಿಂದ ಸಮಾಧಾನ ರೂಪವಾಗಿ ಮಾಡುವ ವಾದಕ್ಕೆ ಅನ್ವಾರುಹ್ಯ ವಾದವೆಂದು ಹೆಸರು.

(14) ಇಲ್ಲಿ ಅನ್ವಾರುಹ್ಯ ವಾದವೆಂಬುದು ಹೇಗೆ ನಿಶ್ಚಯ ಎಂದರೆ—"ಸಂಪತ್ತೇರಿತಿ ಜೈಮಿನಿ..." "ಪರಂ ಜೈಮಿನಿರ್ಮುಖ್ಯತ್ವಾತ್" "ಬ್ರಾಹ್ಮೇಣ ಜೈಮಿನಿಃ"... ಇತ್ಯಾದಿ ಬ್ರಹ್ಮಸೂತ್ರಗಳಿಂದಲೇ ಬ್ರಹ್ಮ ಸ್ವರೂಪ-ತದ್ಗುಣ-ತದುಪಾಸನ-ತತ್ಫಲಾಭ್ಯುಪಗಮಗಳು ತಿಳಿದು ಬರುವುದರಿಂದಲೂ, ಮಹಾಭಾರತದೊಳಗಿನ ಹಯಶಿರೋಪಾಖ್ಯಾನಾದಿಗಳಲ್ಲಿ ಭಗವದ್ವ್ಯಾಸರಿಂದ ಜೈಮಿನಿಯು ಪರಮಾತ್ಮ ತತ್ತ್ವಜ್ಞಾನ ಪಡೆದುದಾಗಿ ತಿಳಿಯುವುದರಿಂದಲೂ, ವಿರುದ್ಧಾರ್ಥದಲ್ಲಿ ತಾತ್ಪರ್ಯವಿಲ್ಲದ್ದರಿಂದ ಅಭೀಷ್ಟಾರ್ಥಕ್ಕೆ ವಿರೋಧವಿಲ್ಲ.

(15) ಆದಾಗ್ಯೂ, ಅರ್ಥ ವಿರೋಧವು ದುಷ್ಪರಿಹರ. ಹೇಗೆಂದರೆ—ಕರ್ಮಕಾಂಡದಲ್ಲಿ ಉಪದೇಶ ಭಾಗ, ಮತ್ತು ಅತಿದೇಶಭಾಗ—ಎಂದು ಎರಡು ಭಾಗಗಳಿವೆ. ಏಕತ್ರ ಸಿದ್ಧವಾದ ಅರ್ಥವನ್ನು ಅನ್ಯತ್ರವೂ ಉಪಯೋಗಿಸುವುದಕ್ಕೆ ಅತಿದೇಶವೆನ್ನುವರು.

ಆ ಅತಿದೇಶವು ಸಾಮಾನ್ಯಾತಿದೇಶ ಮತ್ತು ವಿಶೇಷಾತಿದೇಶ—ಎಂದು ಎರಡು ಬಗೆ. "ಪ್ರಕೃತಿ ವ ದ್ವಿಕೃತಿಃ ಕರ್ತವ್ಯಾ"—ಎಂಬುದು ಸಾಮಾನ್ಯಾತಿದೇಶ. "ಸಮಾನ ಮಿತರತ್ ಶ್ಯೇನೇನ"—ಇತ್ಯಾದಿಗಳಿಂದ ವಿಶೇಷಾತಿದೇಶ. ವಿಶೇಷಾತಿ ದೇಶನಿರೂಪಣ ಪರವಾದ ಎಂಟನೇ ಅಧ್ಯಾಯದಲ್ಲಿ, ವಿಕೃತಿಗಳಲ್ಲಿ ಪ್ರಕೃತಿ ಧರ್ಮವನ್ನು ಅತಿ ದೇಶ ಮಾಡಬೇಕಾದಾಗ, ಯಾವ ಕರ್ಮದಲ್ಲಿ ಯಾರ ಕರ್ಮದ ಧರ್ಮವನ್ನು ಅತಿದೇಶ ಮಾಡತಕ್ಕದ್ದು?—ಎಂದು ಕೇಳಿದಲ್ಲಿ ಯಾವ ಕರ್ಮದಲ್ಲಿ ಯಾವ ಕರ್ಮದೊಂದಿಗೆ ದ್ರವ್ಯಸಾಮ್ಯ ಅಥವಾ ದೇವತಾಸಾಮ್ಯವಿದೆಯೋ ಅಲ್ಲಿ ದ್ರವ್ಯಸಾಮ್ಯವಿರುವ ಕರ್ಮದ ಧರ್ಮವನ್ನೇ ಅತಿದೇಶ ಮಾಡತಕ್ಕದ್ದೇ ಹೊರತು ದೇವತಾ ಸಾಮ್ಯವಿರುವ ಕರ್ಮದ ಧರ್ಮವನ್ನಲ್ಲ. "ದ್ರವ್ಯ ದೇವತಾ ಸಾಮ್ಯೇ ದ್ರವ್ಯಂ ಬಲೀಯಃ"—ಎಂದು ದ್ರವ್ಯ ಪ್ರಾಧಾನ್ಯವನ್ನೇ ಜೈಮಿನಿ ಹೇಳಿದ್ದಾರೆ. ಅನುಷ್ಠಾನವೂ ಹಾಗೆಯೇ ನಡೆಯುತ್ತಿದೆ. ಆದ್ದರಿಂದ ದ್ರವ್ಯ ಪ್ರಾಧಾನ್ಯವನ್ನು ಹೇಳುವ ಜೈಮಿನಿಗೆ ದೇವತಾ ನಿರಾಸದಲ್ಲಿಯೇ ತಾತ್ಪರ್ಯ—ಎಂದರೆ, ಅದಕ್ಕೆ ಉತ್ತರ, ಇಲ್ಲಿ ದ್ರವ್ಯ ದೇವತೆಗಳ ಸದ್ಭಾವ ಅಸದ್ಭಾವ ಗಳಿಂದ ಪ್ರಾಧಾನ್ಯಾ ಪ್ರಾಧಾನ್ಯಗಳ ವಿವಕ್ಷೆಯಿಲ್ಲ; ಮತ್ತೇನೆಂದರೆ, ವಿಲಂಬಿತ ಮತ್ತು ಅವಿಲಂಬಿತ ಪ್ರಮಾಣಗಳಿಗೆ ವಿಷಯವಾಗಿರೋಣದರಿಂದಾದ ಪ್ರಾಧಾನ್ಯಾ ಪ್ರಾಧಾನ್ಯ ವಿವಕ್ಷೆಯಿದು. ದ್ರವ್ಯವು ಅವಿಲಂಬಿತ ಪ್ರತ್ಯಕ್ಷಗಮ್ಯ. ದೇವತೆಯಾದರೋ ವಿಲಂಬಿತ ಶಾಸ್ತ್ರಗಮ್ಯ. "ಶ್ರುತಿಲಿಂಗವಾಕ್ಯ ಪ್ರಕರಣ ಸ್ಥಾನ ಸಮಾಖ್ಯಾನಾಂ ಸಮವಾಯೇ ಪಾರ ದೌರ್ಬಲ್ಯಂ ಅರ್ಥ ವಿಪ್ರಕರ್ಷಾತ್"—ಎಂಬಂತ, ಶ್ರುತಿ ಲಿಂಗಾದಿಗಳಲ್ಲಿಯೂ, ಪ್ರತ್ಯಕ್ಷಾನುಮಾನಾದಿಗಳಲ್ಲಿಯೂ, ವಿಲಂಬಾವಿಲಂಬಗಳೇ ಪೂರ್ವೋಕ್ತ ಪ್ರಾಬಲ್ಯ ದೌರ್ಬಲ್ಯಗಳಿಗೆ ಹೇತು.

(16) ಆದರೆ, ಹವಿಷ್ಟ್ವವು ಶಾಸ್ತ್ರೈಕವೇದ್ಯವಾದ್ದರಿಂದ ದ್ರವ್ಯಕ್ಕೂ ಪ್ರಾಧಾನ್ಯ ವಿಲ್ಲವಲ್ಲವೇ?—ಎಂದಲ್ಲಿ, ಹಾಗಲ್ಲ; ಚರುಪುರೋಡಾಶಾದಿಕ ದ್ರವ್ಯವು ಪ್ರತ್ಯಕ್ಷ. ಅದರೊಳಗೆ ಹವಿಷ್ಟ್ವವೆಂಬ ಧರ್ಮ ಮಾತ್ರವೇ ಶಾಸ್ತ್ರದಿಂದ ವೇದ್ಯ. ದೇವತೆಗಾದರೋ—ಸ್ವರೂಪವೂ ಶ್ರೇಯಸ್ಸಾಧನತ್ವಾದಿ ಧರ್ಮವೂ—ಇವೆರಡೂ ಶಾಸ್ತ್ರವೇದ್ಯ. ಹೀಗೆ ಧರ್ಮತಃ ಸ್ವರೂಪತಃ—ಇವೆರಡರಿಂದಲೂ ವಿಲಂಬಿತವಾದ ಪ್ರಮಾಣಕ್ಕೆ ವಿಷಯ ವಾದ್ದರಿಂದ ದೇವತೆಗೆ ಅಪ್ರಾಧಾನ್ಯ. ಧರ್ಮ ಮಾತ್ರ ಶಾಸ್ತ್ರವೇದ್ಯವಾದರೂ, ಧರ್ಮ್ಯಂಶವು ಅವಿಲಂಬಿತ ಪ್ರಮಾಣಗಮ್ಯವಾದ್ದರಿಂದ ಹವಿಸ್ಸಿಗೆ ಪ್ರಾಧಾನ್ಯ. ಹೀಗ ಪ್ರಾಧಾನ್ಯಾ ಪ್ರಾಧಾನ್ಯಗಳು ಪ್ರಮಾಣದ್ವಾರಕಗಳಾದ್ದರಿಂದ, ಸ್ವರೂಪಾ ಸದ್ಭಾವದಲ್ಲಿ ತಾತ್ಪರ್ಯವಿಲ್ಲವಾದ್ದರಿಂದ ಇಲ್ಲಿಯ ದೇವತಾ ನಿರಾಸೋಕ್ತಿಯು ಅನ್ಯಪರ. ಹೀಗೆಯೇ ಅರ್ಥಾಂತರಗಳ ವಿರೋಧಗಳನ್ನೂ ಸುಲಭವಾಗಿ ಪರಿಹರಿಸಲು ಸಾಧ್ಯ. ಆದ್ದರಿಂದ ಅರ್ಥವಿರೋಧವಿಲ್ಲವಾಗಿ ಪೂರ್ವೋತ್ತರ ಭಾಗಗಳು ಸೇರಿ ಒಂದೇ ಶಾಸ್ತ್ರವಾದುದು ಮೀಮಾಂಸೆಯೆಂಬುದು ಉಪಪನ್ನ.

4. ಹೀಗೆ, ಐಕಶಾಸ್ತ್ರ್ಯ, ಪೌರ್ವಾಪರ್ಯ ನಿಯಮ, ಶಾಸ್ತ್ರವು ಆರಂಭಣೀಯ ಎಂಬ ಮೂರೂ ಪ್ರತಿಜ್ಞಾತವಾಯಿತು. ಇವುಗಳ ಉಪಪಾದನಕ್ಕಾಗಿ "ಸ್ವಾಧ್ಯಾಯೋ ಅಧ್ಯೇತವ್ಯಃ"—ಇತ್ಯಾದಿಯಾಗಿ ಅಧ್ಯಯನ ವಿಧಿಯು ಮುಂದೆ ನಿರೂಪಿಸಲ್ಪಟ್ಟಿದೆ.

(1) ಇಲ್ಲಿ ಆಕ್ಷೇಪ-ವೇದ ಪ್ರಾಮಾಣ್ಯ ಸಮರ್ಥನದಂತೆ ಅಧ್ಯಯನ ವಿಧಿಯೂ ಕರ್ಮವಿಚಾರದಿಂದಲೇ ಸಿದ್ಧವಾಗಿರುವುದರಿಂದ ಅಷ್ಟೇ ಸಾಕಲ್ಲವೇ! ಮತ್ತೆ ಇಲ್ಲಿ ಅಧ್ಯಯನ ವಿಧಿ ನಿರೂಪಣವೇಕೆ?—ಎಂಬುದು. ಇದಕ್ಕೆ ಸಮಾಧಾನ; ಅಲ್ಲಿ, ಈಚಿನ ವ್ಯಾಖ್ಯಾತೃಗಳು ಅಧ್ಯಯನ ವಿಧಿಗೆ ಅರ್ಥಜ್ಞಾನದವರಿಗೂ ತಾತ್ಪರ್ಯ ವೆಂದು ಹೇಳಿದ್ದಾರೆ. ಅಕ್ಷರರಾಶಿ ಗ್ರಹಣ ಪರ್ಯಂತ ಮಾತ್ರವೇ ಅಧ್ಯಯನ ವಿಧಿಗೆ ತಾತ್ಪರ್ಯವೆಂಬುದು ಭಗವದ್ಬಾದರಾಯಣರಿಗೆ ಅಭಿಮತ. "ಅಧ್ಯಯನ ಮಾತ್ರವತಃ" ಎಂದು ಮುಂದೆ ಹೇಳಲ್ಪಡುತ್ತೆಯಷ್ಟೆ! ಆ ಮುಂದೆ ಹೇಳುವ ಅರ್ಥವು ಶಾಸ್ತ್ರವು ಆರಂಭಣೀಯವೆಂಬುದಕ್ಕಾಗಿ ಇಲ್ಲಿ ಹೇಳಲ್ಪಟ್ಟಿದೆ. ಅಧ್ಯಯನ ವಿಧಿಗೆ ಅಕ್ಷರ ರಾಶಿ ಗ್ರಹಣ ಪರ್ಯಂತ ಮಾತ್ರವೇ ತಾತ್ಪರ್ಯವೆಂಬುದನ್ನು ನಿರೂಪಿಸಿದಲ್ಲಿ ಅರ್ಥಜ್ಞಾನಕ್ಕಾಗಿ ಶಾಸ್ತ್ರವು ಆರಂಭಣೀಯವೆಂಬುದೂ ಸಿದ್ಧ. ವೇದ ಮೊತ್ತವೂ ಅಧ್ಯಯನ ವಿಧಿಗೆ ವಿಷಯವೆಂದು ನಿರೂಪಿಸುವುದರಿಂದ ಐಕಶಾಸ್ತ್ರ್ಯ ಮತ್ತು ಪೌರ್ವಾಪರ್ಯ ನಿಯಮವೂ ಸಿದ್ಧಿಸುತ್ತೆ. ಅಕ್ಷರ ರಾಶಿ ಗ್ರಹಣ ಮಾತ್ರ ವಿಷಯವಾದಲ್ಲಿ, ಆರಂಭಣೀಯತ್ವವು ಸಿದ್ಧಿಸುವುದು ಹೇಗೆ?—ಎಂದಲ್ಲಿ,

(2) ಅಧ್ಯಯನ ವಿಧಿಯು ಅರ್ಥಜ್ಞಾನಪರ್ಯಂತವೆಂದಾದರೆ, ಅರ್ಥಜ್ಞಾನವು, "ಅಧೀತ್ಯಸ್ನಾಯಾತ್", "ಆಚಾರ್ಯ ಕುಲಾದ್ವೇದಮಧೀತ್ಯಾಭಿಸಮಾವೃತ್ಯ......" ಎಂದು ಯಜ್ಞಾದ್ಯನುಷ್ಠಾನಕ್ಕೆ ಶೇಷವೆಂದಾಗುವುದರಿಂದ ಉಪನಿಷತ್ಸಿದ್ಧವಾದ ಬ್ರಹ್ಮ ಜ್ಞಾನವೂ ಕರ್ಮಕ್ಕೆ ಶೇಷಭೂತವೆಂದಾಗುವುದು. ಆ ಜ್ಞಾನವೂ "ಆತ್ಮಾ ವಾ ಇದಂ..." "ಬ್ರಹ್ಮವಾ ಇದಂ ಏಕಮೇವಾಗ್ರ ಆಸೀತ್", "ಅಯಮಾತ್ಮಾ ಬ್ರಹ್ಮ,"... ಇತ್ಯಾದಿ ಯಾಗಿ ವೇದಾಂತಸ್ಥವಾದ ಬ್ರಹ್ಮಶಬ್ದದ ಪರ್ಯಾಯವಾಗಿ ಆತ್ಮವಿಷಯವಾದ್ದರಿಂದ, "ವ್ರೀಹೀನ್ ಪ್ರೋಕ್ಷತಿ"—ಎಂಬಲ್ಲಿ, ವ್ರೀಹ್ಯಾದಿ ದ್ವಾರಾ ಪ್ರೋಕ್ಷಣಾದಿ ಹೇಗೋ ಹಾಗೆ, ಆತ್ಮದ್ವಾರಾ ಕರ್ಮಶೇಷವಾಗಲಾಗಿ, ದ್ವಾರಭೂತ ವ್ರೀಹ್ಯಾದಿಯಂತೆ ದ್ವಾರ ಭೂತನಾದ ಆತ್ಮನೂ ಕರ್ಮಶೇಷಭೂತನೆಂದಾಗುವುದು.

(3) ಸಮುದ್ರಾದಿ ಧ್ಯಾನದಂತೆ ಆತ್ಮಜ್ಞಾನವು ಅದೃಷ್ಟಾದಿ ದ್ವಾರಾ ಕರ್ಮ ಶೇಷವಾಗುವುದಾದ್ದರಿಂದ, ಆತ್ಮನು ಕರ್ಮಶೇಷನಲ್ಲವೆನ್ನಲಾಗದು. ಕರ್ಮಶೇಷಭೂತ ನಾಗಿ ಅವಕ್ಲೃಪ್ತನಾದ ಆತ್ಮನಿಗೆ ದ್ವಾರತ್ವವು ಸಂಭವಿಸುವಲ್ಲಿ ಅದೃಷ್ಟಕಲ್ಪನೆ ಕೂಡದು. ಸಮುದ್ರಕ್ಕಾದರೆ ಕ್ರತುವಿಗೆ ಉಪಕಾರಕವಲ್ಲವಾದ್ದರಿಂದ, ಅದೃಷ್ಟ ಕಲ್ಪನೆ ಯುಕ್ತ.

(4) ಕರ್ಮ ಆತ್ಮನಿಗೆ ಫಲಪ್ರದವಾದುದರಿಂದ, ಅವನಿಗೆ ಕರ್ಮಶೇಷತ್ವವಿರಲಿ —ಎಂದಲ್ಲಿ, ಸಂಪ್ರತಿಪನ್ನನಾದ ಆತ್ಮನಿಂದ ಆತ್ಮಜ್ಞಾನಕ್ಕೆ ಕರ್ಮಶೇಷತ್ವವು ನಿರೂಢ ವಾದರೂ, ಅಸಂಪ್ರತಿಪನ್ನಾತ್ಮನ ಕಲ್ಪನೆ ಕೂಡದು. ಜೀವವಿಲಕ್ಷಣನಾದ ಆತ್ಮಾ ಸಂಪ್ರತಿಪನ್ನನಲ್ಲವಷ್ಟೆ! ಆದ್ದರಿಂದ ಅನುಷ್ಠಾನಕ್ಕೆ ಶೇಷಭೂತನಾದ ಆತ್ಮನು ಕರ್ಮ ಗಳಲ್ಲಿ ಕರ್ತೃಭೂತನಾದ ಜೀವನೇ—ಎಂದಾಗಿ ವೇದಾಂತಗಳೆಲ್ಲವೂ ಜೀವಪರವೇ ಆದ್ದರಿಂದ ಜೀವಾತಿರಿಕ್ತನಾದ ಈಶ್ವರನಲ್ಲಿ ಪ್ರಮಾಣವಿಲ್ಲದ್ದರಿಂದ, ಅಪ್ರಾಮಾಣಿಕೇಶ್ವರ ವಿಚಾರರೂಪವಾದ ಶಾಸ್ತ್ರವನ್ನು ಆರಂಭಿಸಕೂಡದು—ಎಂದಾಗುವುದು. ಅಧ್ಯಯನ ವಿಧಿಯು ಅಕ್ಷರ ರಾಶಿ ಗ್ರಹಣ ಪರ್ಯಂತ ಮಾತ್ರವಾದಲ್ಲಿ, ಅರ್ಥಜ್ಞಾನವು ಅನುಷ್ಠಾನಕ್ಕೆ

ಶೇಷಭೂತವಾಗದುದರಿಂದ, ಕರ್ಮಗಳಲ್ಲಿ ಕರ್ತೃವಾದ ಜೀವನಿಗಿಂತ ಬೇರೆಯಾದ ಆತ್ಮಪ್ರತಿಪಾದನ ಸಂಭವಿಸುತ್ತೆಯಾಗಿ ಪ್ರಾಮಾಣಿಕ ಪರಮಾತ್ಮ ವಿಚಾರ ರೂಪವಾದ ಶಾಸ್ತ್ರವನ್ನು ಆರಂಭಿಸತಕ್ಕದ್ದೆಂದು ಸಿದ್ಧಿಸುವುದು. ಆದ್ದರಿಂದ ಅಧ್ಯಯನ ವಿಧಿಯು.

"ತಥಾ ಹಿ ಪ್ರಥಮಂ ತಾವತ್ ಸ್ವಾಧ್ಯಾಯೋ ಅಧ್ಯೇತವ್ಯಃ—ಇತ್ಯಧ್ಯಯನೇ ನೈವ ಸ್ವಾಧ್ಯಾಯ ಶಬ್ದ ವಾಚ್ಯವೇದಾಖ್ಯಕ್ಷರ ರಾಶಿಗ್ರಹಣಂ ವಿಧೀಯತೇ. ತಚ್ಚಾಧ್ಯಯನಂ ಕಿಂ ರೂಪಂ ಕಥಂ ಚ ಕರ್ತವ್ಯ ಮಿತ್ಯಪೇಕ್ಷಾಯಾಂ" "ಅಷ್ಟವರ್ಷಂ ಬ್ರಾಹ್ಮಣಮುಪನಯೀತ ತಮಧ್ಯಾಪಯೇತ್"—ಇತ್ಯನೇನ. "ಶ್ರಾವಣ್ಯಾಂ ಪ್ರೌಷ್ಠಪದ್ಯಾಂ ವಾ ಉಪಾಕೃತ್ಯ ಯಥಾ ವಿಧಿ। ಯುಕ್ತಶ್ಛನ್ದಾಂಸ್ಯ ಧೀಯೀತ ಮಾಸಾನ್ ವಿಪ್ರೋಽರ್ಧಪಂಚಮಾನ್"—ಇತ್ಯಾದಿ ವ್ರತನಿಯಮ ವಿಶೇಷೋಪದೇಶೈಶ್ಚಾಪೇಕ್ಷಿತಾನಿ ವಿಧೀಯನ್ತೇ: ಏವಂ ಸತ್ಸಂತಾನ ಪ್ರಸೂತ ಸದಾಚಾರ ನಿಷ್ಠಾತ್ಮಗುಣೋಪೇತವೇದವಿದಾಚಾರ್ಯೋಪ ನೀತಸ್ಯ ವ್ರತ ನಿಯಮ ವಿಶೇಷ ಯುಕ್ತಸ್ಯಾ ಚಾರ್ಯೋಚ್ಚಾರಣಾನೂಚ್ಚಾರಣ ರೂಪಂ ಅಕ್ಷರರಾಶಿಗ್ರಹಣಂ ಅಧ್ಯಯನ ಮಿತ್ಯವಗಮ್ಯತೇ. ಅಧ್ಯಯನಂ ಚ ಸ್ವಾಧ್ಯಾಯ ಸಂಸ್ಕಾರಃ, "ಸ್ವಾಧ್ಯಾಯೋ ಅಧ್ಯೇತವ್ಯಃ"—ಇತಿ ಸ್ವಾಧ್ಯಾಯಸ್ಯ ಕರ್ಮತ್ವಾವ ಗಮಾತ್. ಸಂಸ್ಕಾರೋ ಹಿ ನಾಮ ಕಾರ್ಯಾಂತರ ಯೋಗ್ಯತಾಕರಣಂ. ಸಂಸ್ಕಾರ್ಯತ್ವಂ ಚ ಸ್ವಾಧ್ಯಾಯಸ್ಯ ಯುಕ್ತಂ. ಧರ್ಮಾರ್ಥ ಕಾಮ ಮೋಕ್ಷರೂಪ ಪುರುಷಾರ್ಥ ಚತುಷ್ಟಯ ತತ್ಸಾಧನಾವ ಬೋಧಿತ್ವಾತ್ ಜಪಾದಿನಾ ಸ್ವರೂಪೇಣಾಪಿ ತತ್ಸಾಧನತ್ವಾಚ್ಚ. ಏವಂ ಅಧ್ಯಯನ ವಿಧಿಃ ಮಂತ್ರವತ್ ನಿಯಮವದಕ್ಷರ ರಾಶಿ ಗ್ರಹಣ ಮಾತ್ರೇ ಪರ್ಯವಸ್ಯತಿ..." ಇತ್ಯಾದಿಯಾಗಿ ನಿರೂಪಿಸಲ್ಪಟ್ಟಿದೆ.

(5) ಇಲ್ಲಿ, "ಸಕ್ತೂನ್ ಜುಹೋತಿ..." ಎಂಬಲ್ಲಿಯ 'ಸಕ್ತು' ಹೋಮದಂತೆ ಅಧ್ಯಯನವು ಪ್ರಧಾನ ಕರ್ಮ, ಸ್ವರೂಪೇಣ ವಿಧೇಯ, ಅಧ್ಯಾಪನ ವಿಧಿ ಪ್ರಯುಕ್ತ, ಉಪನಯನವೆಂಬುದು ಅಧ್ಯಾಪನಕ್ಕೆ ಅಂಗ—ಎಂಬುದು ಪ್ರಾಭಾಕರಮತ. ಇದಕ್ಕೆ

"ತತ್ರಾರ್ಥ ಕರ್ಮಾಧ್ಯಯನಂ ಸಮ್ಮತಂ ಸಕ್ತುಹೋಮವತ್ ।
ಸ್ವರೂಪತೋ ವಿಧೇಯಂಸ್ಯಾತ್ ಅಧ್ಯಾಪನ ವಿಧೇರ್ಬಲಾತ್ ॥
ಪ್ರಯುಕ್ತಂ ಚೋಪನಯನಂ ಅಂಗಮಧ್ಯಾಪನಸ್ಯ ಚ ।
ಪ್ರಾಭಾಕರಸ್ಯಾಭಿಮತಂ ಏತದರ್ಥ ಚತುಷ್ಟಯಂ ॥"

—ಇತ್ಯಾದಿ ಅನುಸಂಧೇಯ. ಇದನ್ನು ಅನಾದರಿಸಿ, "ವ್ರೀಹೀನವಹನ್ತಿ"—ಎಂಬಲ್ಲಿಯ ಅವಘಾತಾದಿಯಂತೆ, ಅಧ್ಯಯನಕ್ಕೆ ಗುಣಕರ್ಮತ್ವ, ಅದರ ನಿಯಮಕ್ಕೆ ವಿಧೇಯತ್ವ, ಅಧ್ಯಯನಕ್ಕೆ ಸ್ವವಿಧಿ ಪ್ರಯುಕ್ತತ್ವ. ಉಪನಯನಕ್ಕೆ ಅಧ್ಯಯನಾಂಗತ್ವ—ಎಂಬ ನಾಲ್ಕು ಅರ್ಥಗಳು ಕೌಮಾರಿಲರಿಗೆ ಅಭಿಮತ. ಈ ಮತವೇ ನಮ್ಮ ಸಿದ್ಧಾಂತಿ ಮತವೂ. ಮೇಲೆ ಹೇಳಿದ ಇಬ್ಬರ ಮತಕ್ಕಿಂತ ಸಿದ್ಧಾಂತಿ ಮತಕ್ಕೆ ಇರುವ ವಿಶೇಷ—ಅಧ್ಯಯನ ವಿಧಿ ಅಕ್ಷರ ರಾಶಿ ಗ್ರಹಣ ಮಾತ್ರ ಪರ್ಯಂತತ್ವವೆಂಬುದು. ಇದಕ್ಕೆ,

"ಗುಣಕರ್ಮತ್ವಧ್ಯಯನಂ ಅವಘಾತಾದಿವನ್ಮತಂ ।
ನಿಯಮೋಽತ್ರ ವಿಧೇಯಸ್ಸ್ಯಾತ್ ಪ್ರಯುಕ್ತಂ ಸ್ವವಿಧೇರ್ಬಲಾತ್ ॥

ಸ್ವಸ್ಯೋಪನಯನಂ ಚಾಂಗಂ ಏವ ಮರ್ಥಚತುಷ್ಟಯಂ ।
ಕುಮಾರಿಲಸ್ಯಾಭಿಮತಂ ಜ್ಞಾನಾಂತತ್ವಂ ದ್ವಯೋಸ್ಸಮಂ ।
ತತ್ರೌಪನಿಷ ದಾನಾಂತು ಮತಂಸ್ಯಾಧ್ಯಾಪ್ತಿಸಂಮತಂ ।
ವಿಶೇಷಸ್ಸ್ಯಾದುಭಯತೋಽಹ್ಯಕ್ಷರಗ್ರಹಣಾಂ ತಥಾ॥ "

—ಎಂಬುದು ಅನುಸಂಧೇಯ. ಮೇಲೆ "ಪ್ರಥಮಂ ತಾವತ್ "—ಎಂಬಲ್ಲಿ, ಶಾಸ್ತ್ರಾಂತರ ಶ್ರವಣ ಯೋಗ್ಯವಾದ ಅವಸ್ಥೆಗಿಂತ ಮುಂಚೆ—ಎಂದರ್ಥ. ಗರ್ಭಾಷ್ಟಮೋಪನೀತನಿಗೆ ಅಲ್ಲವೇ ಅಧ್ಯಯನ! ಅದಕ್ಕೆ ಮುಂಚೆ. ಶಾಸ್ತ್ರಾಂತರ ಪರಿಶ್ರಮಕ್ಕೆ ಅರ್ಹತೆಯೆಲ್ಲಿದೆ? ಆದ್ದರಿಂದ, ಅಧ್ಯಯನ ವಿಧಿ ಪರತಂತ್ರನಿಗೆ ಸಾಂಗಾಧ್ಯಯನವಾದ ಮೇಲೆ ಕರ್ಮವಿಚಾರ ಅವಶ್ಯವೆಂಬುದು ಸ್ವರಸಸಿದ್ಧ. ಆದ್ದರಿಂದ ಪೂರ್ವಪಕ್ಷಿಯು ಹೇಳುವ ಸಾಧನ ಚತುಷ್ಟಯಾದಿ ಪೂರ್ವ ವೃತ್ತಾಂತರ ನಿಷ್ಪಾದನೆಗೆ ಅವಕಾಶವೆಲ್ಲಿಯದು? —ಎಂಬುದು, "ಪ್ರಥಮಂ ತಾವತ್" ಎಂಬುದರಿಂದ ಫಲಿತ. "ವೇದಾಖ್ಯ"—ಶಬ್ದದಿಂದ ವೇದವೆಲ್ಲವನ್ನೂ ಪೂರ್ತಿ ಅಧ್ಯಯನ ಮಾಡಬೇಕೆಂಬುದು ಸೂಚಿತ. ಸ್ವಾಧ್ಯಾಯವೆಂದರೆ ವೇದವೆಲ್ಲವೂ. ವೇದಾಂತ ಭಾಗ ಮಾತ್ರವೆಂದಲ್ಲ. "ಅಧ್ಯಯನೇನ"—ಎಂಬ ನಿರ್ದೇಶದಿಂದ ಗುಣಕರ್ಮತ್ವವು ಸೂಚಿತ. ಅಧ್ಯೇತವ್ಯ '—ಎಂಬಲ್ಲಿಯ 'ತವ್ಯ —ಪ್ರತ್ಯಯದಿಂದ 'ಕರ್ಮತ್ವ'—ಅವಗತವಾಗುತ್ತೆ. ಇದಕ್ಕೆ ಸ್ವಾಧ್ಯಾಯವೇ ಕರ್ಮವೆಂದಾಯಿತು. ಪುರುಷನಲ್ಲಿ. 'ಕರ್ತುರೀಪ್ಸಿತತಮ' ವಾದುದು ಕರ್ಮ. ಅಧ್ಯಯನವು ಸ್ವಾಧ್ಯಾಯಕ್ಕೆ ಸಂಸ್ಕಾರ, ಪುರುಷನಿಗಲ್ಲ. ಪುರುಷಾರ್ಥ ಚತುಷ್ಟಯ ಮತ್ತು ಅವುಗಳ ಸಾಧನವನ್ನು ಬೋಧಿಸುವುದರಿಂದ ಸಂಸ್ಕಾರತ್ವವು ಸ್ವಾಧ್ಯಾಯಕ್ಕೆ ಯುಕ್ತ. ಅರ್ಥಜ್ಞಾನ ಮತ್ತು ಅನುಷ್ಠಾನಗಳಿಲ್ಲದೆಯೇ ಜಪಿಸಲ್ಪಡುವ ಅಕ್ಷರ ಮಾತ್ರದಿಂದಲೇ ತತ್ಸಾಧನವನ್ನು ಬೋಧಿಸುತ್ತದೆಯಷ್ಟೆ? ಅನುಷ್ಠಾನಕ್ಕೆ ಅನುಗುಣವಾದ ಜ್ಞಾನ ಮತ್ತು ಜಪ ಮುಂತಾದ್ದು ಅಧ್ಯಯನದಿಂದ ಸಂಸ್ಕೃತವಾದ ವೇದದಿಂದಲೇ ಸಿದ್ಧಿಸುವುದೆಂದರ್ಥ. 'ಅಧ್ಯಯನೇನ'—ಎಂಬ ನಿರ್ದೇಶದಿಂದ ಗುಣ ಕರ್ಮತ್ವವನ್ನು ಬಿಟ್ಟು ಪ್ರಧಾನ ಕರ್ಮತ್ವ ವಿವಕ್ಷೆಯಿದ್ದಲ್ಲಿ ಆಗ, "ಸ್ವಾಧ್ಯಾಯೇನ ಅಧ್ಯಯನಂ ಸಂಪಾದ್ಯಂ,"—ಎಂದು ವಚನವಿರಬೇಕಾಗಿದ್ದಿತು. "ಅಧ್ಯಯನೇ ನೈವ" ಎಂಬಲ್ಲಿಯ 'ಏವ' ಕಾರದಿಂದ ಅಧ್ಯಯನದ ನಿಯಮಕ್ಕೆ ವಿಧಿದ್ಯೋತಿತವಾಗುತ್ತೆ. ಪುಸ್ತಕ ನಿರೀಕ್ಷಣಾದಿಗಳಿಂದ ಕೂಡದೆಂದು ಭಾವ. "ಸ್ವಾಧ್ಯಾಯೋ ಅಧ್ಯೇತವ್ಯಃ" —ಎಂದು ಅಧ್ಯಯನ ವಿಧಿವಾಕ್ಯವನ್ನು ಎತ್ತಿ ಹೇಳಿರುವುದರಿಂದ ಸ್ವವಿಧಿ ಪ್ರಯುಕ್ತತ್ವವು ಕಂಡುಬರುತ್ತೆ. "ಅಧ್ಯಾಪಯೇತ್"—ಎಂಬ ವಾಕ್ಯವನ್ನು ಇಲ್ಲಿ ಎತ್ತಿಲ್ಲ. 'ಪ್ರಥಮಂ. ಎಂಬ ಪ್ರಾಥಮ್ಯ ವಚನದಿಂದ ಅಧ್ಯಯನಕ್ಕೆ ಉಪನಯನ ಅಂಗವೆಂದಾಯಿತು. ಶಾಸ್ತ್ರಾಂತರ ಪರಿಶ್ರಮಕ್ಕೆ ಯೋಗ್ಯವಲ್ಲದ ಗರ್ಭಾಷ್ಟಮ ವರ್ಷವೆಂಬ ಅಭಿಪ್ರಾಯದಿಂದ ಪ್ರಾಥಮ್ಯ ಹೇಳಲ್ಪಟ್ಟಿದೆ. "ಅಷ್ಟವರ್ಷಂ ಬ್ರಾಹ್ಮಣಮುಪನಯೀತ,"—ಎಂಬಲ್ಲಿ ಹೇಳಿರುವ ಉಪನಯನ ಕಾಲ ಉಪನಯನ ದ್ವಾರಾ ಅಧ್ಯಯನಕ್ಕೆ ಶೇಷಭೂತವಾದದ್ದು. ಪ್ರಾಥಮ್ಯ, ಪರತಂತ್ರೋಚ್ಚಾರಣ ರೂಪತ್ವ ಉಪನಯನಾಂಗಕತ್ವಗಳನ್ನು ತೋರಿಸುವುದಕ್ಕಾಗಿ "ಅಷ್ಟವರ್ಷಂ ಬ್ರಾಹ್ಮಣಮುಪನಯೀತ ತಮಧ್ಯಾಪಯೇತ್"

ಎಂದಿದೆ. “ಬ್ರಾಹ್ಮಣಮುಪನಯೀತ”—ಎಂಬ ದ್ವಿತೀಯ ಶ್ರುತಿಯಿಂದ ಮಾಣವಕ ಶೇಷತ್ವ ಕಂಡುಬರುವುದರಿಂದ ಅವನಲ್ಲಿಯ ಅಧ್ಯಯನಕ್ಕೆ ಉಪನಯನವು ಅಂಗವೆಂದು ಸೂಚಿತ. “ಅಧ್ಯಾಪಯೇತ್”—ಎಂಬುದರಿಂದ ಪರತಂತ್ರೋಚ್ಚಾರಣ ರೂಪತ್ವ ಸಿದ್ಧಿಸುತ್ತೆ ಉಪನಯನಕ್ಕೆ ಅಕರ್ತೃರ್ಗಭಿಪ್ರಾಯ ಸೂತ್ರವಿಹಿತವಾದ್ದರಿಂದ, ಅಧ್ಯಾಪನಾಂಗತ್ವವಿಲ್ಲ “ದ್ವಾದಶಾಹೇನ ಪ್ರಜಾಕಾಮಂ ಯಾಜಯೇತ್,” “ಅನ್ನಾದ್ಯಕಾಮಂ ಯಾಜಯೇತ್”—“ನಿಷಾದ ಸ್ಥಪತಿಂ ಯಾಜಯೇತ್,”—ಇತ್ಯಾದಿಯಲ್ಲಿ ತೋರುವ ಯಾಜನಕ್ಕೆ ಹೇಗೋ ಹಾಗೆ ಅರ್ಥಾರ್ಜನಾದಿಯು ಪ್ರಾಪ್ತವಾದ್ದರಿಂದ ಅಧ್ಯಾಪನಕ್ಕ ವಿಧಿಯೆಂಬುದಿಲ್ಲ. ಅಲ್ಲದೆ ಅಧ್ಯಾಪನದಲ್ಲಿ ಅಧಿಕಾರಿ ವಿಶೇಷವೂ ಶ್ರುತವಲ್ಲದ್ದರಿಂದ ಅಧ್ಯಯನವು ಅಧ್ಯಾಪಯಿತೃಪೂರ್ವಕವನ್ನಲ್ಪಟ್ಟಿದೆ. ಆದ್ದರಿಂದ ಇದು ಅಧ್ಯಯನಾಂಗ ವಿಧಿ. ವ್ರತ=ಉಪಾಕರ್ಮ ಕಾಂಡವ್ರತಾದಿ, ನಿಯಮ= “ಪದ್ಯುಹವಾ ಏತತ್ ಶ್ಮಶಾನಂ ಯಚ್ಛೂದ್ರಃ ತಸ್ಮಾತ್ ಶೂದ್ರಸಮೀಪೇನಾಧ್ಯೇತವ್ಯಂ”—ಇತ್ಯಾದಿಯಾಗಿ ಹೇಳಲ್ಪಟ್ಟ ದೇಶಕಾಲ ಭಕ್ಷ್ಯಾಭಕ್ಷ್ಯಾದಿವ್ಯವಸ್ಥಾರೂಪಃ, ಉಪಾಕರ್ಮಾದಿವ್ರತ— ನಿಯಮದಿಂದ ಕೂಡಿದ ಉಪನಯನವೂ ಅಧ್ಯಯನಕ್ಕೆ ಅಂಗವೆಂದು ಭಾವ. “ಅಷ್ಟವರ್ಷಂ ಬ್ರಾಹ್ಮಣಮುಪನಯೀತ, ತಮಧ್ಯಾಪಯೇತ್,” —ಎಂದು ಉಪನಯನವು ಅಧ್ಯಯನಕ್ಕೆ ಅಂಗವೆಂಬುದು ಅಯುಕ್ತ ಅದು ಉಪನೇಯನನ್ನು ಪಡೆಯುವದರ ಮೂಲಕ ಅಧ್ಯೇತೃಸಾಕಾಂಕ್ಷವಾದ ಅಧ್ಯಾಪನಕ್ಕೆ ಅಂಗವಲ್ಲವೇ? “ಉಪನೀಯತುಯಶ್ಶಿಷ್ಯಂ ವೇದಮಧ್ಯಾಪಯೇತ್ ದ್ವಿಜಃ”—ಇತ್ಯಾದಿ ಸ್ಮೃತಿ ವಚನದಿಂದಲೂ ಹೀಗೆಂದು ಕಾಣುತ್ತೆ.—ಎಂದಲ್ಲಿ ಉತ್ತರ; “ಬ್ರಾಹ್ಮಣಮುಪನಯೀತ—ಎಂಬಲ್ಲಿಯ ಬ್ರಾಹ್ಮಣ ಶಬ್ದದ ದ್ವಿತೀಯಾ ವಿಭಕ್ತಿಯಿಂದ ಉಪನಯನವು ಮಾಣವಕನಿಗೆ ಶೇಷವೆಂದು ತಿಳಿಯುತ್ತೆ. ಉಪನಯನವು ಮಾಣವಕನಿಗ ಶೇಷಭೂತ. ಅಧ್ಯಯನವು ಮಾಣವಕನಲ್ಲಿದ. ಆದರಲ್ಲಿ ಅಂತರಂಗ ಬಹಿರಂಗ ನ್ಯಾಯದಿಂದ ಉಪನಯನವು ಅಧ್ಯಯನಕ್ಕೇ ಅಂಗ.

ಆದಾಗ್ಯೂ, “ಉಪನೀಯತು ಯಶ್ಶಿಷ್ಯಂ ವೇದಮಧ್ಯಾಪಯೇತ್ ದ್ವಿಜಃ” —ಎಂಬಲ್ಲಿ ಉಪನೀಯ' ಶಬ್ದದಲ್ಲಿಯ 'ಕ್ತ್ವಾ' ಪ್ರತ್ಯಯದಿಂದ ಉಪನಯನವು ಅಧ್ಯಾಪನಕ್ಕೇ ಅಂಗವೆಂಬುದೇ ಯುಕ್ತವಲ್ಲವೇ? ಅಂತರಂಗತ್ವವು ವಸ್ತುಸಾಮರ್ಥ್ಯ ರೂಪ ಅಂಗ. ಅದಕ್ಕಿಂತ 'ಕ್ತ್ವಾ' ಶ್ರುತಿಯೇ ಬಲವುಳ್ಳದ್ದಷ್ಟೆ! ಎಂದಲ್ಲಿ, ಅಂತರಂಗತ್ವವು ಪ್ರತ್ಯಕ್ಷ ಶ್ರುತಿ ಸಿದ್ಧ. 'ಕ್ತ್ವಾ' ಶ್ರುತಿಯು ಸ್ಮೃತಿಯಲ್ಲಿಯ ಅನುವಾದ ವಚನವೂ ಆಗಿದೆ ಇದು ಸ್ಮೃತಿವಚನವಾದ್ದರಿಂದ ಇದಕ್ಕೆ ಮೂಲಶ್ರುತಿಯ ಅಪೇಕ್ಷಯಿದೆ ಅನುವಾದ ರೂಪ ವಚನವಾದ್ದರಿಂದ ವಿಧ್ಯಂತರದ ಆಪೇಕ್ಷೆಯೂ ಇದ. ಹೀಗೆ ಇಲ್ಲಿ ವಿಳಂಬ ದ್ವಯವಿದೆ. ಶ್ರುತಿಲಿಂಗಾದಿಗಳಲ್ಲಿ ವಿಳಂಬಿತ ಜ್ಞಾನಕ್ಕೆ ಹೇತುವಾಗಿರುವುದು ಪ್ರಾಬಲ್ಯ ದೌರ್ಬಲ್ಯಗಳಿಗೆ ಕಾರಣ ಹೀಗೆ ವಿಳಂಬಿತ ದ್ವಯದಿಂದ ಉಪಹತವಾದ್ದರಿಂದ 'ಕ್ತ್ವಾ' ಶ್ರುತಿಗೆ ಬಲವಿಲ್ಲ. ಇವೇ ಮುಂತಾದ ಕಾರಣಗಳಿಂದ ಉಪನಯನವು ಅಧ್ಯಯನಾಂಗವೇ ಹೊರತು ಅಧ್ಯಾಪನಾಂಗವಲ್ಲ “ಅಧೀತವೇದಃ ಪುರುಷಃ ಸ್ವಯ

ಮೇವ ಪ್ರವರ್ತತೇ "—ಎಂಬ ಶ್ರೀ ಭಾಷ್ಯ ಶ್ರೀ ಸೂಕ್ತಿಯಿಂದ "ಅಥಾತೋ ಧರ್ಮ ಜಿಜ್ಞಾಸಾ "—ಎಂಬ ಸೂತ್ರವೂ ಅರ್ಥಾತ್ತಾಗಿ ವ್ಯಾಖ್ಯಾತವಾದಂತಾಯಿತು.

ಅಧ್ಯಯನದ ವಿಧಿಗೆ ಅಕ್ಷರರಾಶಿ ಗ್ರಹಣ ಪರ್ಯಂತತ್ವದಲ್ಲಿ ಪ್ರವರ್ತಕವಿಲ್ಲದ್ದ ರಿಂದಲೂ, ಸ್ವಾಧ್ಯಾಯವು ಅರ್ಥಪರವೆಂಬುದಕ್ಕೆ ಪ್ರಮಾಣವಿಲ್ಲದ್ದರಿಂದಲೂ, ಮೀಮಾಂಸೆಯನ್ನು ಆರಂಭಿಸಕೂಡದು—ಎಂಬುದು ಪೂರ್ವಪಕ್ಷ.

ಸಾಂಗಾಧ್ಯಯನವಾದ ಮೇಲೆ ಶಬ್ದವು ಸ್ವತಃ ಅರ್ಥಬೋಧಕವಾದುದರಿಂದ ಪ್ರವರ್ತಕವಿಲ್ಲದಿದ್ದಾಗ್ಯೂ ರಾಗದಿಂದ ಪ್ರವೃತ್ತಿಯೆಂಬುದು ಉಪಪನ್ನವಾದ್ದರಿಂದ ಮೀಮಾಂಸೆಯನ್ನು ಆರಂಭಿಸಬಹುದೆಂಬುದು ಸಿದ್ಧಾಂತ.

ಹೀಗೆ ಜೈಮಿನಿ-ಬಾದರಾಯಣರುಗಳ ವಾಕ್ಯಗಳಿಗೆ ಆಕ್ಷಿಪ್ತವಾದ ವಿರೋಧವನ್ನು ಪರಿಹರಿಸಿದ ನಂತರ ಪ್ರಾಸಂಗಿಕವಾದ ಮತ್ತೊಂದು ಆಕ್ಷೇಪ—ಬೋಧಾಯನರಿಂದ ಪ್ರಣೀತವಾದ ಬ್ರಹ್ಮಕಾಂಡದ ವೃತ್ತಿಗ್ರಂಥದಲ್ಲಿ ಕರ್ಮಕಾಂಡದಲ್ಲಿಯು 12 ಅಧ್ಯಾಯ ಗಳೂ ಸಂಕರ್ಷಣ ಕಾಂಡದಲ್ಲಿಯು 4 ಅಧ್ಯಾಯಗಳೂ ಸೇರಿ ಒಟ್ಟು 16 ಅಧ್ಯಾಯ ಗಳನ್ನೂ ಜೈಮಿನಿಯು ರಚಿಸಿದುದಾಗಿ ಹೇಳಿದೆ. ಆದರೆ ಶ್ರೀ ಭಟ್ಟಪರಾಶರರು ರಚಿಸಿದ ತತ್ತ್ವರತ್ನಾಕರವೆಂಬ ಗ್ರಂಥದಲ್ಲಿ ಸಂಕರ್ಷಕಾಂಡವನ್ನು ಕಾಶಕೃತ್ಸ್ನರು ರಚಿಸಿದುದಾಗಿ ಹೇಳಿದೆ. ಇವೆರಡೂ ಸಂಗತವಾಗುವುದು ಹೇಗೆ?—ಎಂಬುದು. ಇದಕ್ಕೆ ಸಮಾಧಾನ– ಈ ಇಬ್ಬರು ಗ್ರಂಥಕರ್ತೃಗಳೂ ವಿಶ್ವಸನೀಯರಾದುದರಿಂದ ಇವರಲ್ಲಿ ಯಾರ ವಾಕ್ಯಕ್ಕೂ ಅಪ್ರಾಮಾಣ್ಯವೆಂಬುದಿಲ್ಲ. ಶ್ರೀ ತತ್ತ್ವರತ್ನಾಕರ ವಾಕ್ಯದಂತೆ ಸಂಕರ್ಷಕಾಂಡ ಕಾಶಕೃತ್ಸ್ನ ಕರ್ತೃಕವೆಂಬುದು ಸಿದ್ಧವಾದುದರಿಂದ, ಜೈಮಿನಿಯು ರಚಿಸಿದ 12 ಅಧ್ಯಾಯಗಳಿಗೆ ಪ್ರಾಚುರ್ಯಾರ್ಥವನ್ನಿಟ್ಟುಕೊಂಡು, ವೃತ್ತಿಕಾರರ ವಾಕ್ಯವನ್ನು ಔಪಚಾರಿಕವನ್ನಾಗಿ ಭಾವಿಸಬೇಕು. ಜೈಮಿನಿಯು 16 ಅಧ್ಯಾಯಗಳನ್ನು ರಚಿಸಿದರೆಂಬ ವೃತ್ತಿಕಾರಕ ವಾಕ್ಯ ಪ್ರಮಾಣವಾದ್ದರಿಂದ ಕಾಶಕೃತ್ಸ್ನನು ದೇವತಾ ಕಾಂಡಕ್ಕೆ ವಿಶೇಷ ಪ್ರವರ್ತಕ ರೆಂಬ ತಾತ್ಪರ್ಯದಿಂದ ತತ್ತ್ವರತ್ನಾಕರ ವಾಕ್ಯವನ್ನು ಸ್ವೀಕರಿಸಬೇಕು—ಎಂಬುದು. ಹೀಗೆ ತಾತ್ಪರ್ಯ ಭೇದದಿಂದ ಉಭಯತ್ರ ಪ್ರಾಮಾಣ್ಯ ಸಿದ್ಧಿಸುವುದು.

ಮುಂದೆ, ಪರಪಕ್ಷವಾದಿಗಳಿಂದ ಪರಿಕಲ್ಪಿತವಾಗಿ ಅಪನ್ಯಾಯಮೂಲವಾದ ಅಧಿಕ ಸಂಖ್ಯಾನಿರಾಕರಣಕ್ಕಾಗಿ ಶ್ರೀಬ್ರಹ್ಮ ಸೂತ್ರಗಳ ಸಂಖ್ಯೆ 'ಶುಭಾಶೀಃ "—(545) ಅಧಿಕರಣಗಳ ಸಂಖ್ಯ' 'ಚಿನ್ಮಯೀ' (156) ಮತ್ತು ಇದರ 4 ಅಧ್ಯಾಯಗಳ ಪ್ರತಿ ಪಾದದಲ್ಲಿಯು ಅಧಿಕರಣ ವಿಭಾಗ ಕ್ರಮವಾಗಿ 'ಅಕ್ಷ' (11) ಊರ್ಮಿ (6) 'ಆಶಾ' (10) ಅಹಿ (8) ಕಾಷ್ಠಾ (10) ದ್ವಿಪದ (8) ಮುನಿ (7) ವಸು (8) ಊರ್ಮಿ (6) ಅದ್ರಿ (8) ತತ್ತ್ವ (26) ಅತಿಶಕ್ವರೀ (15) ಅಕ್ಷ (11) ಅಕ್ಷ (11) ಪ್ರಯಾಜ (5) ರಸ (6) ಗಳೆಂಬುದಾಗಿ ನಿರ್ದಿಷ್ಟವಾಗಿವೆ.

ಈ ಶಾರೀರಕವೆಂಬ ಶಾಸ್ತ್ರ ಕ್ರಮವಾಗಿ ಸಮನ್ವಯ, ಅವಿರೋಧ, ಸಾಧನ, ಫಲ- ಎಂಬ ವಿಚಾರಗಳುಳ್ಳ ನಾಲ್ಕು ಅಧ್ಯಾಯಗಳನ್ನುಳ್ಳದ್ದು. ಇದು ಪೂರ್ವದ್ವಿಕ-ಉತ್ತರದ್ವಿಕ ಗಳೆಂದು ಇಬ್ಭಾಗವಾಗಿದೆ. ಎರಡೆರಡು ಅಧ್ಯಾಯಕ್ಕೆ ಒಂದೊಂದು ದ್ವಿಕವೆಂದು ಹೆಸರು.

ಇವುಗಳಲ್ಲಿ ಪೂರ್ವದ್ವಿಕ ಸಿದ್ಧವಿಷಯ ನಿರೂಪಣ ಪರ, ಏಕೆಂದರೆ ಬ್ರಹ್ಮ ಸಿದ್ಧವಸ್ತು ವೆನಿಸುವುದು. ಅಲ್ಲದೆ ಉತ್ತರ ದ್ವಿಕದಲ್ಲಿ ಪ್ರತಿಪಾದ್ಯವಾದ ಉಪಾಸನ ಮತ್ತು ಪ್ರಾಪ್ತಿ ಗಳಿಗೆ ವಿಷಯವೂ ಆದದ್ದು. ಆದ್ದರಿಂದ ಪೂರ್ವದ್ವಿಕಕ್ಕೆ ಸಿದ್ಧದ್ವಿಕ ಅಥವಾ ವಿಷಯದ್ವಿಕ ವೆನ್ನುವರು. ಉತ್ತರದ್ವಿಕವು ಪುರುಷ ಸಾಧ್ಯವಾದ ಉಪಾಸನ ಮತ್ತು ಪ್ರಾಪ್ತಿ ಪರ. ಅಲ್ಲದೆ, ಪರಬ್ರಹ್ಮನನ್ನು ವಿಷಯವಾಗಿ ಉಳ್ಳದ್ದು. ಆದ್ದರಿಂದ ಇದಕ್ಕೆ ಸಾಧ್ಯ ದ್ವಿಕ ಅಥವಾ ವಿಷಯಿ ದ್ವಿಕವೆನ್ನುವರು. ಅಂದರೆ ಪೂರ್ವದ್ವಿಕವು ಸಿದ್ಧರೂಪವೂ ವಿಷಯ ರೂಪವೂ ಆದ ಬ್ರಹ್ಮನನ್ನು ಪ್ರಧಾನತಃ ಪ್ರತಿಪಾದಿಸುತ್ತದೆ. ಉತ್ತರ ದ್ವಿಕವು ಉಪಾ ಸನ ಪ್ರಾಪ್ತಿಗಳನ್ನು ಪ್ರಧಾನತಃ ಪ್ರತಿಪಾದಿಸುತ್ತದೆ. ಉಪಾಸನ ಮತ್ತು ಪ್ರಾಪ್ತಿಪರ ವಾದ ಉತ್ತರದ್ವಿಕಕ್ಕೂ ಬ್ರಹ್ಮಜಿಜ್ಞಾಸಾ ರೂಪ ಶಾಸ್ತ್ರಕ್ಕೂ ಸಂಬಂಧವೇನು?— ಎಂದರೆ, ಸಾಧನ 2 ವಿಧ, ಒಂದು ಪ್ರಧಾನ ಮತ್ತೊಂದು ಅಪ್ರಧಾನ. ಬ್ರಹ್ಮ ಪ್ರಧಾನ ಸಾಧನ. ಅದರ ಉಪಾಸನ ಅಪ್ರಧಾನ ಸಾಧನ. ಹಾಗೆಯೇ ಸಾಧ್ಯವೂ ಬ್ರಹ್ಮ ಮತ್ತು ತತ್ಪ್ರಾಪ್ತಿ ಎಂದು 2 ವಿಧ. "ಸಸ್ವೇನೈವ ಫಲಪ್ರದಃ ಫಲಮಪಿ ಸ್ವೇನೈವ ನಾರಾಯಣಃ" ಎಂಬ ತಾಂತ್ರಿಕ ವಚನದಂತೆ ಬ್ರಹ್ಮಪ್ರಾಧಾನ್ಯದಿಂದ ಪ್ರಾಪ್ಯವೂ ಪ್ರಾಪಕವೂ ಆದುದ ರಿಂದ ಅದರ ಚಿಂತನ ರೂಪವಾದ ಉತ್ತರ ದ್ವಿಕವೂ ಆ ಬ್ರಹ್ಮದ ಜಿಜ್ಞಾಸೆಯಲ್ಲಿಯೇ ಪ್ರಾಧಾನ್ಯದಿಂದ ನಿವಿಷ್ಟವಾಗಿದೆ.

ಹೀಗೆ ಅಧ್ಯಾಯ ಮತ್ತು ದ್ವಿಕಗಳಲ್ಲಿ ಅರ್ಧಭಾಗವಿರುವಂತೆಯೇ ಇದರ ಪಾದ ಗಳಲ್ಲಿಯೂ ಅರ್ಧವಿಭಾಗವುಂಟು. ಮೊದಲಧ್ಯಾಯದ 1ನೇ ಪಾದದಲ್ಲಿ ಅಸ್ಪಷ್ಟತರ ಜೀವಾದಿ ಲಿಂಗಕ ವಾಕ್ಯಗಳೂ, 2ನೇ ಪಾದದಲ್ಲಿ ಅಸ್ಪಷ್ಟ ಜೀವಾದಿ ಲಿಂಗಕ ವಾಕ್ಯಗಳೂ, 3ನೇ ಪಾದದಲ್ಲಿ ಸ್ಪಷ್ಟಜೀವಾದಿ ಲಿಂಗಕ ವಾಕ್ಯಗಳೂ. 4ನೇ ಪಾದದಲ್ಲಿ ಸ್ಪಷ್ಟತರ ಜೀವಾದಿ ಲಿಂಗಕ ವಾಕ್ಯಗಳೂ ವಿಚಾರ ಮಾಡಲ್ಪಟ್ಟಿವೆ. 2ನೆಯದಾದ ಅವಿರೋಧಾ ಧ್ಯಾಯದ 1ನೇ ಪಾದದಲ್ಲಿ ಪ್ರಥಮಾಧ್ಯಾಯ ಪ್ರತಿಪಾದಿತವಾದ ಶ್ರುತಿಗಳನ್ನು ಬ್ರಹ್ಮದಲ್ಲಿ ಸಮನ್ವಯ ಮಾಡಿರುವುದರ ಬಗ್ಗೆ ಸ್ಮೃತಿ-ಪುರಾಣ-ಇತಿಹಾಸಾದಿಗಳಿಂದ ತೋರುವ ಬಾಧೆಗಳು ಪರಿಹರಿಸಲ್ಪಟ್ಟಿವೆ. 2ನೆಯದಾದ ತರ್ಕ ಪಾದದಲ್ಲಿ ವೇದಾಂತಕ್ಕೆ ಸಮಾನವಾಗಿ ಭಾವಿಸಲ್ಪಟ್ಟ ಸಾಂಖ್ಯವೈಶೇಷಿಕಾದಿ ಪಕ್ಷಗಳ ತರ್ಕಗಳು ಸತ್ತರ್ಕಾನುಗ್ರಹಶಾಲಿಗಳಾದ ವೇದಾಂತ ವಾಕ್ಯಗಳಿಂದ ಖಂಡಿಸಲ್ಪಟ್ಟಿವೆ. 3ನೆಯದಾದ ವಿಯತ್ಪಾದದಲ್ಲಿ ವಿಯತ್ (ಆಕಾಶ) ಮುಂತಾದುವುಗಳಿಗೆ ಬ್ರಹ್ಮಕಾರ್ಯದ ಪ್ರಕಾರ ಪರಿಶೋಧಿಸಲ್ಪಟ್ಟಿದೆ. 4ನೆಯ ದಾದ ಪ್ರಾಣಪಾದದಲ್ಲಿ ಜೀವನಿಗೆ ಉಪಕರಣಗಳಾದ ಮುಖ್ಯಪ್ರಾಣಾದಿಗಳ ಕಾರ್ಯತ್ವದ ಪ್ರಕಾರ ಪರಿಶೋಧಿತವಾಗಿದೆ. ಮೂರನೆಯ ಅಧ್ಯಾಯದ 1ನೆಯದಾದ ಜೀವದೋಷ ಪಾದದಲ್ಲಿ ಸಂಸಾರಿಯಾದ ಜೀವನ ದೋಷಗಳೂ, 2ನೆಯದಾದ ಉಭಯಲಿಂಗ ಪಾದದಲ್ಲಿ ಈಶ್ವರನ ಅಖಿಲಹೇಯ ಪ್ರತ್ಯನೀಕತ್ವ-ಸಕಲ ಕಲ್ಯಾಣ ಗುಣಾಕರತ್ವಗಳೆಂಬ ಉಭಯಲಿಂಗಗಳೂ ಚಿಂತಿತವಾಗಿವೆ. 3ನೆಯ ಪಾದದಲ್ಲಿ ಭಕ್ತಿಶಬ್ದ ವಾಚ್ಯವಾದ ಉಪಾಸನವೂ 4ನೆಯ ಪಾದದಲ್ಲಿ ಉಪಾಸನದ ಅಂಗವೆನಿಸಿದ ಕರ್ಮಾದಿಗಳೂ ಚಿಂತಿ ಸಲ್ಪಟ್ಟಿವೆ. ಕೊನೆಯದಾದ ಫಲಾಧ್ಯಾಯವೆಂಬ 4ನೆಯ ಅಧ್ಯಾಯದ 1ನೆಯ ಪಾದ ದಲ್ಲಿ ಉತ್ತರ ಪೂರ್ವಾಘಗಳ ಅಶ್ಲೇಷ-ವಿನಾಶ ರೂಪವಾದ ಉಪಾಸನಾನುಷ್ಠಾನದ

ಪ್ರಭಾವವೂ 2ನೇ ಪಾದದಲ್ಲಿ ದೇಹದಿಂದ ಜೀವನ ಉತ್ಕ್ರಮಣ ಪ್ರಕಾರವೂ, ಮೂರನೇ ಪಾದದಲ್ಲಿ ಅವನು ಅರ್ಚಿರಾದಿ ಮಾರ್ಗದಿಂದ ಹೋಗುವಿಕೆಯೂ, 4ನೇ ಪಾದದಲ್ಲಿ "ಪರಂಜ್ಯೋತಿರುಪಸಂಪದ್ಯ ಸ್ವೇನರೂಪೇಣಾಭಿನಿಷ್ಪದ್ಯತೇ॥" ಎಂಬಂತೆ ಆಜೀವನು ಶ್ರೀ ವೈಕುಂಠವಾಸಿಯಾದ ವಾಸುದೇವನನ್ನು ಸೇರಿ ಪಡೆಯುವ ಅಸಂಕುಚಿತಾನಂದಾನುಭವವೂ ಕ್ರಮವಾಗಿ ವಿಚಾರ ಮಾಡಲ್ಪಟ್ಟಿವೆ.

ಹೀಗೆ ಪಾದಭೇದದಿಂದ ಅರ್ಥಭೇದವನ್ನು ಹೇಳಲಾಗಿ ಈ ಎಲ್ಲ ಪಾದಗಳೂ ಬ್ರಹ್ಮಜಿಜ್ಞಾಸಾರೂಪವೆಂಬುದು ಹೇಗಾದೀತು?—ಎಂದಲ್ಲಿ, ಆಯಾ ಪಾದದಲ್ಲಿ ಹೇಳಲ್ಪಟ್ಟ ಅರ್ಥ ವಿಶೇಷಗಳೆಲ್ಲಕ್ಕೂ ಬ್ರಹ್ಮವೊಂದರಲ್ಲಿಯೇ ಪರ್ಯವಸಾನವೆಂಬುದೇ ಅದಕ್ಕೆ ಉತ್ತರ. ಆದ್ದರಿಂದ ಭಗವಂತನು 16 ಪಾದಗಳಲ್ಲಿ ಪ್ರತಿಪಾದ್ಯವಾದ 16 ವಿಶೇಷಗಳಿಂದ ವಿಶಿಷ್ಟನೆನಿಸಿದ್ದಾನೆ. ಆ ವಿಶೇಷಗಳಾವುವೆಂದರೆ—1ನೇ ಪಾದದಲ್ಲಿ ಜನ್ಮಾದ್ಯಧಿಕರಣ ವಿಷಯ ವಾಕ್ಯದಲ್ಲಿ "ಯತೋ ವಾ ಇಮಾನಿ ಭೂತಾನಿ ಜಾಯನ್ತೇ" —ಇತ್ಯಾದಿಯಿಂದಲೂ, ಈಕ್ಷತ್ಯಾನಂದಮಯಾಧಿಕರಣಗಳಲ್ಲಿ "ಬಹು ಸ್ಯಾಂ"— ಎಂದು ಆರಂಭವಾಗಿ, "ಇದಂ ಸರ್ವಮಸೃಜತ"—ಎಂಬುದರಿಂದಲೂ, ಜಗತ್ಸ್ರಷ್ಟೃತ್ವವನ್ನು ಪ್ರತಿಪಾದಿಸಿರುವುದರಿಂದ, ಆ ಪಾದದಲ್ಲಿ ಪರಮಾತ್ಮನು "ಸ್ರಷ್ಟಾ" ಎಂದು ವೇದ್ಯನಾಗಿದ್ದಾನೆ.

2ನೇ ಪಾದದಲ್ಲಿ ಅಂತರ್ಯಾಮ್ಯಧಿದೈವತ್ಯಾದ್ಯಧಿಕರಣಗಳಲ್ಲಿ ಸರ್ವ ಶರೀರಿಯಾಗಿ ಪ್ರತಿಪಾದಿತವಾಗಿರುವುದರಿಂದ, "ದೇಹೀ" ಎಂದು ಸರ್ವದೇಹೀತ್ವೇನ ವೇದ್ಯನಾಗಿದ್ದಾನೆ. 3ನೇ ಪಾದದಲ್ಲಿಯ ಭೂಮಾಧಿಕರಣ ವಿಷಯ ವಾಕ್ಯದಲ್ಲಿ "ಸ ಭಗವಃ ಕಸ್ಮಿನ್ ಪ್ರತಿಷ್ಠಿತಃ"— ಎಂದೂ, "ಸ್ವೇ ಮಹಿಮ್ನಿ ಪ್ರತಿಷ್ಠಿತಃ"—ಎಂದಿವೇ ಮೊದಲಾಗಿ ಪ್ರತಿಪಾದಿಸಿರುವುದರಿಂದ "ಸ್ವನಿಷ್ಠಃ"—ಎಂದರೆ, 'ಅನನ್ಯಾಧಾರ' ಎಂಬುದಾಗಿ ವೇದ್ಯ. 4ನೇ ಪಾದದಲ್ಲಿಯ ಆನುಮಾನಿಕಾಧಿಕರಣದಲ್ಲಿ, "ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾಗತಿಃ" —ಇತ್ಯಾದಿಯಿಂದಲೂ, "ವದತೀತಿ ಚೇನ್ನ ಪ್ರಾಜ್ಞೋ ಹಿ ಪ್ರಕರಣಾತ್"—ಎಂಬ ಸೂತ್ರದ ವಿಷಯ ವಾಕ್ಯದಲ್ಲಿ "ಅನಾದ್ಯನನ್ತಂ ಮಹತಃ ಪರಂ ಧ್ರುವಮ್"—ಇತ್ಯಾದಿಯಿಂದಲೂ ಭಗವಂತನ ಮಾಹಾತ್ಮ್ಯ ಪ್ರತಿಪಾದನದಿಂದಲೂ, ಪ್ರಕೃತ್ಯಧಿಕರಣದಲ್ಲಿ ಸಾರ್ವಜ್ಞತ್ವ ಸರ್ವಶಕ್ತಿತ್ವಾದಿ ಪ್ರತಿಪತ್ತಿಯಿಂದಲೂ, "ನಿರವಧಿ ಮಹಿಮಂ"—ಎಂದು ವೇದ್ಯನಾಗಿದ್ದಾನೆ. 5ನೆಯದಾದ ಸ್ಮೃತಿಪಾದದಲ್ಲಿ ಕಾಪಿಲಾದಿ ವಿರುದ್ಧಾರ್ಥ ಸ್ಮೃತಿ ವಿರೋಧಗಳನ್ನೂ ಯುಕ್ತ್ಯಾಭಾಸ ಮೂಲಕ ವಿರೋಧಗಳನ್ನೂ ನಿರಸನ ಮಾಡಿರುವುದರಿಂದ "ಅಪಾಸ್ತಬಾಧಃ"— ಎಂಬುದಾಗಿ ವೇದ್ಯನಾಗಿದ್ದಾನೆ. 6ನೆಯದಾದ ತರ್ಕಪಾದದಲ್ಲಿ ಬುದ್ಧಾದಿ ರೂಪದಿಂದ ತಾಮಸರಿಗೆ ಅನಾಪ್ತನಾಗಿದ್ದರೂ, ಪಾಂಚರಾತ್ರಾಧಿಕರಣದಲ್ಲಿ ಪಾಂಚಕಾಲಿಕ ವೃತ್ತಿಗಳಿಗೆ ಆಪ್ತನೆಂಬುದರಿಂದ,"ಶ್ರಿತಾಪ್ತಃ'—'ಎಂದು ವೇದ್ಯನಾಗಿದ್ದಾನೆ. 7ನೆಯ ಪಾದ ವಿಯತ್ಪಾದದಲ್ಲಿ, ವಿಯತ್ ಮುಂತಾದುವಕ್ಕೆ ಸ್ವರೂಪವಿಕಾರ ರೂಪ ಜನನ ಪ್ರತಿಪಾದನದಿಂದಲೂ, ಜೀವಾತ್ಮನಿಗೆ ಸ್ವಭಾವ ವಿಕಾರರೂಪ ಜನನ ಪ್ರತಿಪಾದನದಿಂದಲೂ, "ವಿಯದಾತ್ಮಾ

ದ್ಯುಚಿತ ಜನನಕೃತ್ "—ಎಂದು ವೇದ್ಯನಾಗಿದ್ದಾನೆ. 8ನೆಯದಾದ ಪ್ರಾಣಪಾದದಲ್ಲಿ, "ತಥಾಪ್ರಾಣಾಃ" ಎಂಬುದರಿಂದ ಇಂದ್ರಿಯಗಳಿಗೂ ಮುಖ್ಯಪ್ರಾಣನಿಗೂ ಜನನ ಪ್ರತಿಪಾದನೆಯಿರುವುದರಿಂದ, "ಇಂದ್ರಿಯಾದ್ಯುಚಿತ ಜನನಕೃತ್"—ಎಂದು ವೇದ್ಯ. 9ನೆಯ ಪಾದ ಜೀವದೋಷ ಪಾದದಲ್ಲಿ, ಜಾಗ್ರತ್ಸ್ವಪ್ನ ಸುಷುಪ್ತಿ ಮೂರ್ಛಾಮರಣ ಗಳಲ್ಲಿ ಭಗವಂತನೇ ನಿರ್ವಾಹಕನಾಗಿ ಹೇಳಲ್ಪಟ್ಟಿರುವುದರಿಂದ, "ಸಂಸಾರ ತಂತ್ರ ನಿರ್ವಾಹಕ" ನೆಂದು ವೇದ್ಯನಾಗಿದ್ದಾನೆ. 10ನೆಯದಾದ ಉಭಯಲಿಂಗ ಪಾದದಲ್ಲಿ ನಿರ್ದೋಷನೂ, ಕಲ್ಯಾಣಗುಣಾಕರನೂ ಎಂಬುದಾಗಿ ಪ್ರತಿಪಾದಿಸಿರುವುದರಿಂದ, "ನಿರ್ದೋಷತ್ವಾದಿ ರಮ್ಯಃ"—ಎಂದು ವೇದ್ಯನಾಗಿದ್ದಾನೆ. 11ನೆಯದಾದ ಗುಣೋಪ ಸಂಹಾರ ಪಾದದಲ್ಲಿ ನಾನಾ ವಿಧವಾದ ಉಪಾಸನಗಳನ್ನು ವಿಚಾರ ಮಾಡಿರುವುದರಿಂದ, "ಬಹುಭಜನಪದ" ಎಂದು ವೇದ್ಯನಾಗಿದ್ದಾನೆ. 12ನೆಯದಾದ ಪುರುಷಾರ್ಥ ಪಾದದಲ್ಲಿ ಆಯಾ ಗೃಹಸ್ಥಾದ್ಯಾಶ್ರಮ ಧರ್ಮಗಳನ್ನೇ ಅಂಗವಾಗಿಯುಳ್ಳದ್ದು ವಿದ್ಯೆ (ಉಪಾಸನ) ಎಂದು ಪ್ರತಿಪಾದಿಸಿರುವುದರಿಂದ, "ಸ್ವಾರ್ಹಕರ್ಮಪ್ರಸಾದ್ಯಃ"—ಎಂದು ವೇದ್ಯನಾಗಿದ್ದಾನೆ. 13ನೆಯದಾದ ಆವೃತ್ತಿ ಪಾದದಲ್ಲಿ ವಿದ್ಯಾನಿಷ್ಠನಿಗೆ ಉತ್ತರ- ಪೂರ್ವಾಘಗಳ ಅಶ್ಲೇಷ-ವಿನಾಶಗಳನ್ನು ಪ್ರತಿಪಾದಿಸಿರುವುದರಿಂದ, "ಪಾಪ ಚ್ಛಿತ್"—ಎಂದು ವೇದ್ಯನಾಗಿದ್ದಾನೆ. 14ನೆಯದಾದ ಉತ್ಕ್ರಾಂತಿಪಾದದಲ್ಲಿ ಉತ್ಕ್ರಾಂತ ನಾದ ಚೇತನನಿಗೆ, ಹಾರ್ದನಾದ ಭಗವಂತನ ಅನುಗ್ರಹದಿಂದ "ತದೋಕೋಗ್ರ ಜ್ವಲನಂ......" ಇತ್ಯಾದಿ ಸೂತ್ರದಿಂದ ಬ್ರಹ್ಮನಾಡೀ ಪ್ರವೇಶವನ್ನು ಹೇಳಿರುವುದರಿಂದ, "ಬ್ರಹ್ಮನಾಡೀಗತಿಕೃತ್"—ಎಂದು ವೇದ್ಯನಾಗಿದ್ದಾನೆ. 15ನೆಯದಾದ 'ಅರ್ಚಿರಾದಿ" ಪಾದದಲ್ಲಿ ಭಗವನ್ನಿಯುಕ್ತರಾದ ಅರ್ಚಿರಾದಿಗಳಿಂದ ಅತಿವಹನವನ್ನು ಪ್ರತಿಪಾದಿಸಿರು ವುದರಿಂದ, "ಅತಿವೋಢೃ"—ಎಂದು ವೇದ್ಯ. ಕೊನೆಯದಾದ ಮುಕ್ತಿಪಾದದಲ್ಲಿ ಮುಕ್ತನಿಗೆ ಭಗವಂತನೊಂದಿಗೆ ಪರಮ ಸಾಮ್ಯಶ್ರುತವಾಗಿರುವುದರಿಂದ "ಸಾಮ್ಯದಃ" —ಎಂದು ವೇದ್ಯನಾಗಿದ್ದಾನೆ. ಹೀಗೆ ಈ ಶಾಸ್ತ್ರದಲ್ಲಿ ಪಾದಗಳೆಲ್ಲದರಲ್ಲಿಯೂ ಸ್ರಷ್ಟೃ ತ್ವಾದಿರೂಪಗಳಿಂದ ಪರಮ ಪುರುಷನನ್ನೇ ವೇದ್ಯನನ್ನಾಗಿ ಪ್ರತಿಪಾದಿಸಿರುವುದರಿಂದ ಈ ಶಾಸ್ತ್ರ ಸಂಪೂರ್ಣವಾಗಿ ಭಗವತ್ಪರವೆಂದು ಭಾವ.

ಇಲ್ಲಿ ಕೆಲವರ ಚೋದ್ಯವೇನೆಂದರೆ—"ನೀವು ಹೇಳುವುದೊಂದು, ಮಾಡುವು ದೊಂದು. ಬ್ರಹ್ಮಜ್ಞಾನಕ್ಕೆ ಕರ್ಮ ವಿಚಾರವನ್ನು ಪೂರ್ವವೃತ್ತವೆನ್ನುತ್ತೀರಿ. ಕರ್ಮ ವಿಚಾರವಿಲ್ಲದೆಯೂ ಬ್ರಹ್ಮವಿಚಾರವನ್ನು ಆಚಾರ್ಯರು ಮಾಡುತ್ತಿದ್ದಾರೆ. ಇದು ಹೇಗೆ ಸಂಗತ?—ಎಂಬುದು. ಇದಕ್ಕೆ ಉತ್ತರ—ಇಲ್ಲಿ ವಿಧಿಯೆಂಬುದು ಕಾರ್ಯ ವೆನ್ನುವವರು ಕೆಲವರು. ಶಬ್ದ ಭಾವನೆಯೆನ್ನುವರು ಮತ್ತೆ ಕೆಲವರು. ಇಷ್ಟಸಾಧನ ವೆಂಬುದು ಮಂಡನರ ಮತ. ಧಾತ್ವರ್ಥ ಭಾವನೆಯೆಂದು ಆಚಾರ್ಯೈಕ ದೇಶಿ ಗಳೆನ್ನುವರು. ಹಿತಕಾಮನಾದ ಆಪ್ತನ ನಿಯೋಗವೆಂಬುದು ನ್ಯಾಯವಾದಿಗಳ ಮತ. ವೇದಾಂತವಾದಿಗಳೂ ಇದನ್ನೇ ಅನುಮೋದಿಸಿರುವರು—

"ಆಪ್ತಸ್ಯಹಿತಕಾಮಸ್ಯ ನಿಯೋಗಂ ಕೇಚಿದೂಚಿರೇ ।
ಭಾಷ್ಯಕಾರೋಽಪಿ ಭಗವಾನ್ ಏತಮೇವಾನ್ವಮನ್ಯತ॥"

—ವಿಧಿ ಇದು ಯಾವುದಾದರೂ ಆಗಿರಲಿ. ಕೃತಾದಿ ಪುಣ್ಯಯುಗಗಳಲ್ಲಿ ಅಧಿಕಾರಿಗಳು ಅಪರಿಮಿತ ಬಲ, ಬುದ್ಧಿ ಪ್ರಾಣಗಳುಳ್ಳವರಾದ್ದರಿಂದ, ವೇದಗಳನ್ನು ಕಲಿತು ವಿಘ್ನವಿಲ್ಲದೆಯೇ ಫಲವದಾಪಾತ ಪ್ರತೀತಿ ಜನಿತವಾದ ತ್ರಿಕಾಂಡಿಯಾದ ಮೀಮಾಂಸೆ ಯನ್ನು ಕ್ರಮವಾಗಿ ವಿಚಾರ ಮಾಡುತ್ತಿದ್ದರು. ಇದೇ ನ್ಯಾಯವಾದ ಮಾರ್ಗ. ಈ ಕಲಿಯುಗದಲ್ಲಿಯಾದರೋ—ಪರಿಮಿತವಾದ ಬಲ, ಬುದ್ಧಿ-ಪ್ರಾಣಗಳುಳ್ಳವರಾದ್ದರಿಂದ ಕೆಲವು ಸುಕೃತಿಗಳು ಮಧ್ಯೆ ವಿಘ್ನಸಂಭವದ ಶಂಕೆಯಿಂದ, ಬ್ರಹ್ಮವಿಚಾರರೂಪವಾದ ಮುಖ್ಯಾರ್ಥವನ್ನು ಅನುಷ್ಠಿಸುವುದಕ್ಕಾಗಿ ಕರ್ಮ ವಿಚಾರ ರೂಪವಾದ ಅಂಗಾನು ಷ್ಠಾನವನ್ನು ಸ್ವಲ್ಪಕಾಲ ಬಿಟ್ಟುಬಿಟ್ಟು, ಶೀಘ್ರವಾಗಿ ವೇದಾಂತ ಶ್ರವಣದಲ್ಲಿಯೇ ವಿಹರಿಸುತ್ತಾರೆ. "ಮುಖ್ಯಾಮುಖ್ಯ ವಿರೋಧೇ ಮುಖ್ಯಾನುಗ್ರಹೋ ನ್ಯಾಯ್ಯಃ"—ಎಂಬ ರೀತಿಯಿದು. ಈ ಅರ್ಥವನ್ನು "ಗುಣಮುಖ್ಯ ವ್ಯತಿಕ್ರಮೇ ತದರ್ಥತ್ವಾತ್ ಮುಖ್ಯೇನ ವೇದಸಂಯೋಗಃ"—ಎಂಬಲ್ಲಿ ಹೇಳಿದೆ. ಇಲ್ಲಿಯ ನಿರ್ಣಯವೇನೆಂದರೆ, ಅನುಕ್ರಮಕ್ಕೆ ಅನುಪಪತ್ತಿ ಶಂಕೆಯಿಲ್ಲದಾಗ, ನ್ಯಾಯಾನುಸಾರವಾದ ಅನುಕ್ರಮದಿಂದಲೇ ವೇದಾಂತ ಶ್ರವಣವಾಗತಕ್ಕದ್ದು. ಶಂಕೆಯಿದ್ದಲ್ಲಿಯಾದರೋ—ವ್ಯುತ್ಕ್ರಮದಿಂದಲಾದರೂ ಶ್ರವಣ ಮಾಡುವುದರಲ್ಲಿ ವಿರೋಧವಿಲ್ಲ. ಕರ್ಮಕಾಂಡೋಕ್ತ ನ್ಯಾಯಗಳ ಅರಿವಿಲ್ಲದೆ ಶಾಂಡಿಲ್ಯವಿದ್ಯಾದಿಗಳ ಭೇದಾಭೇದ ಚಿಂತೆ ಹೇಗೆ ಸಾಧ್ಯ? ಶ್ರುತಿಲಿಂಗಾದಿಗಳನ್ನು ತಿಳಿಯದೆ ಕರ್ಮ-ಜ್ಞಾನ ಇವೆರಡಕ್ಕೂ ಅಂಗಾಂಗಿ ಭಾವವನ್ನು ಪರಿಕಲ್ಪಿಸುವುದು ಹೇಗೆ—ಎಂದರೆ ತತ್ತ್ವವನ್ನರಿತವರು ರಚಿಸಿರುವ ಪ್ರಕರಣಾದಿಗಳಿಂದ ಕರ್ಮಕಾಂಡದ ಅರ್ಥವನ್ನು ಸಂಕ್ಷೇಪವಾಗಿ ಕೇಳಿ ಶಾರೀರಕ ಕಾಂಡದ ಶ್ರವಣ ಮಾಡಬಹುದು. ಅಥವಾ ಶಾರೀರಕ ಶಾಸ್ತ್ರವನ್ನು ಶ್ರವಣ ಮಾಡುತ್ತಿರುವಾಗಲೇ ಅತಿಶಯಿತ ಪ್ರತಿಭಾ ವಂತರು ಆಯಾ ಅಪೇಕ್ಷಿತವಾದ ಅರ್ಥಗಳನ್ನು ಕೇಳಿ ಥಟ್ಟನೆ ಗ್ರಹಿಸಬಹುದು. ಆದ್ದರಿಂದ ವಿರೋಧವಿಲ್ಲ.

ಇದರ ಮೇಲೆ "ಸ್ವಾಧ್ಯಾಯೋ ಅಧ್ಯೇತವ್ಯಃ"—ಎಂಬ ಅಧ್ಯಯನ ವಿಧಿಗೆ ಅಕ್ಷರರಾಶಿ ಗ್ರಹಣ ಮಾತ್ರವೇ ಫಲವೆನ್ನುವ ನೀವು ಮೀಮಾಂಸಾ ಶ್ರವಣವನ್ನು ರಾಗ ಪ್ರಾಪ್ತವೆನ್ನುತ್ತೀರಿ. ಹಾಗಾದರೆ ಆಚಾರ್ಯ ಮುಖದಿಂದಲೇ ಕೇಳಬೇಕೆಂಬ ನಿರ್ಬಂಧ ವಿಲ್ಲವಷ್ಟೆ! ತಾವು ಪಂಡಿತರೆಂದು ಭಾವಿಸುವ ಧೃಷ್ಟರು ಗುರುಗಳ ಬಳಿ ಹೋಗದೆಯೇ ಪುಸ್ತಕವನ್ನು ನೋಡಿಯೋ ಅಥವಾ ಮತ್ತೆ ಹೇಗೋ ಮೀಮಾಂಸಾ ಪರಿಜ್ಞಾನವನ್ನು ಹೊಂದಬಹುದಲ್ಲವೇ? ಎಂದರೆ—ಅದು ಯುಕ್ತವಲ್ಲ, ಏಕೆಂದರೆ "ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್"—ಎಂದು ಬ್ರಹ್ಮಜ್ಞಾನಕ್ಕಾಗಿ ಗುರುವಿನ ಬಳಿಗೆ ಹೋಗ ಬೇಕೆಂದೇ ವಿಧಿಯಿದೆ. ಗುರುವಿನಿಂದಲೇ ತತ್ತ್ವೋಪದೇಶವೆಂಬುದು ಕಂಡುಬಂದಿದೆ. "ಆಚಾರ್ಯವಾನ್ ಪುರುಷೋ ವೇದ"—ಎಂಬಲ್ಲಿ ಆಚಾರ್ಯೋಪದೇಶದಿಂದಲೇ ಒಳ್ಳೆಯ ಜ್ಞಾನ, ವೀರ್ಯವತ್ತರ ಜ್ಞಾನವುಂಟಾಗುವುದೆಂದು ವಿಶದವಾಗಿದೆ. "ಆಚಾ ರ್ಯವಾನ್"—ಎಂಬುದರಲ್ಲಿಯು, 'ಮತುಪ್'—ಪ್ರತ್ಯಯದಿಂದ ಚೆನ್ನಾಗಿ ಗುರೂ ಪಾಸನ ಮಾಡಬೇಕೆಂಬುದೂ ವಿವಕ್ಷಿತ. "ಆಚಾರ್ಯಾದ್ಧ್ಯೇವ ವಿದ್ಯಾವಿದಿತಾ ಸಾಧಿಷ್ಠಂ ಪ್ರಾಪತ್"—ಎಂಬುದರಿಂದ ಆಚಾರ್ಯೋಪದೇಶದಿಂದ ವಿದಿತವಾದ ವಿದ್ಯೆಯೇ ಸಾಧು

ತಮವೆನಿಸಿದೆ. "ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ "—ಎಂಬಲ್ಲಿ ಕಾಣಿಸುವ ವಿಧಿಯು ಶ್ರವಣವನ್ನು ವಿಧಿಸುವ ಅಪೂರ್ವ ವಿಧಿಯಲ್ಲ. ಏಕೆಂದರೆ ಇದು ಅಪ್ರಾಪ್ತವಾದುದಲ್ಲ. ಶ್ರವಣಕ್ಕಾಗಿ ಗುರ್ವಭಿಗಮನವನ್ನೂ ವಿಧಿಸಿಲ್ಲ. ಆದ್ದರಿಂದ ಪರಿಸಂಖ್ಯಾ ವಿಧಿಯೂ ಅಲ್ಲ, ಇವನ್ನು ಶ್ರವಣಾರ್ಥಿಗಳು ತಾವೇ ಆಚರಿಸುತ್ತಾರೆ. ಮತ್ತೇನೆಂದರೆ, "ಅಭಿಜನವಿದ್ಯಾಸಮುದೇತಂ ಸಮಾಹಿತಂ ಸಂಸ್ಕರ್ತಾರ ಮಿಾಪ್ಸೇತ್ " ಎಂಬಂತೆ ಶ್ರೋತ್ರಿಯನೂ ಬ್ರಹ್ಮನಿಷ್ಠನೂ ಆದ ಗುರುವಿನಲ್ಲಿಗೇ ಹೋಗಬೇಕು ಎಂದು ಶಿಷ್ಯಾಚಾರ್ಯರ ಗುಣಗಳನ್ನು ಮಾತ್ರ ವಿಧಿಸುವ ನಿಯಮವಿಧಿಯೆಂದು ನಿಶ್ಚಿತವಾಗಿದೆ.

ಆದ್ದರಿಂದ ವಿಧಿಪ್ರಾಪ್ತತ್ವ—ರಾಗಪ್ರಾಪ್ತತ್ವಗಳೊಳಗೆ ವಿರೋಧ ಚೋದನವು ಮಂದವಾದದ್ದು ಹೀಗೆ ಸಾಂಗವಾದ ಅಧ್ಯಯನದ ನಂತರ, "ಅಥಾತೋ ಧರ್ಮ ಜಿಜ್ಞಾಸಾ "—ಎಂಬುದರಿಂದ ಹಿಡಿದು "ಅನಾವೃತ್ತಿಶ್ಶಬ್ದಾದನಾವೃತ್ತಿಶ್ಶಬ್ದಾತ್ "—ಎಂಬುದರ ಪೂರ್ತಿ, ಸಂಗತಿ ವಿಶೇಷ ವಿಶಿಷ್ಟ ಕ್ರಮವಾದ ಮಿಾಮಾಂಸೆ ಒಂದೇ ಶಾಸ್ತ್ರವೆಂಬುದನ್ನು ಸಮರ್ಥಿಸಿ, ಅದನ್ನು ಅನುಕ್ರಮದಿಂದ ವಿಚಾರಮಾಡತಕ್ಕದ್ದೆಂದು ಪ್ರಮಾಣ-ತರ್ಕಗಳಿಂದ ಪ್ರಕಟಿಸಲಾಯಿತು. ತರುವಾಯ, ಈ ಮಿಾಮಾಂಸಾ ಶಾಸ್ತ್ರದ ಏಕದೇಶವಾದ ಶಾರೀರಕ ಶಾಸ್ತ್ರವನ್ನು ಆರಂಭಿಸಲಾಗದೆಂಬ ಶಂಕೆಯನ್ನು ಇದರ ಮೊದಲಿನ ನಾಲ್ಕು ಅಧಿಕರಣಗಳಿಂದ ಶಮನ ಮಾಡಿ ಶಾಸ್ತ್ರೋಪಕ್ರಮ ಪ್ರತಿಪಾದನಕ್ಕೆ ತೊಡಗಿದ್ದಾರೆ. ಇದನ್ನು "ವ್ಯುತ್ಪತ್ತ್ಯಭಾವಾತ್ ಪ್ರತಿಪತ್ತಿದೌಸ್ಥ್ಯಾತ್ ಅನ್ಯೇನ ಸಿದ್ಧೇರಫಲತ್ವತಶ್ಚ । ಅಮಾತ್ವಮಾಶಂಕ್ಯ ನಿರಾಚಕಾರ ನ್ಯಾಯೈಶ್ಚತುರ್ಭಿಃ ಪ್ರತಿಪಾದ್ಯ ತತ್ತತ್ "—ಎನ್ನಲಾಗಿದೆ.

ಶಾಸ್ತ್ರಾರಂಭ ಸಮರ್ಥನ ರೂಪವಾದ ಅರ್ಥೈಕ್ಯವುಳ್ಳದ್ದರಿಂದ ಈ 4 ಸೂತ್ರಗಳೂ ಸೇರಿ ಒಂದೇ ಪೇಟಿಕೆಯೆನಿಸಿದೆ. ಇದರೊಳಗೆ ಎರಡೆರಡು ಸೂತ್ರಗಳು ಸೇರಿ ಎರಡು ಅವಾಂತರ ಪೇಟಿಕೆಗಳಾಗಿವೆ. ಇವುಗಳಲ್ಲಿ ಮೊದಲೆರಡು ಸೂತ್ರಗಳು ಸಿದ್ಧವಸ್ತು ಪ್ರತಿಪಾದಕವಾದ ಶಬ್ದಕ್ಕೆ ವ್ಯುತ್ಪತ್ತಿ (ಅರ್ಥಬೋಧ) ಯನ್ನು ಸಮರ್ಥಿಸುವುದರ ಮೂಲಕ ವೇದಾಂತವಾಕ್ಯಗಳಿಗೆ ಪ್ರಾಮಾಣ್ಯವನ್ನು ಸಮರ್ಥಿಸುತ್ತವೆ. ಅನಂತರದ ಎರಡು ಸೂತ್ರಗಳು ತಾತ್ಪರ್ಯ ಲಿಂಗವನ್ನು ಸಮರ್ಥಿಸುವುದರ ಮೂಲಕ ವೇದಾಂತ ವಾಕ್ಯಗಳಿಗೆ ಪ್ರಾಮಾಣ್ಯವನ್ನು ಸಮರ್ಥಿಸುತ್ತವೆ. ಈ ನಾಲ್ಕು ಸೂತ್ರಗಳಲ್ಲಿ ಮೊದಲನೆಯದು ಸಿದ್ಧಪರವಾದ ಶಬ್ದಸಾಮಾನ್ಯಕ್ಕೆ ವ್ಯುತ್ಪತ್ತಿಯನ್ನು ಸಮರ್ಥಿಸುತ್ತದೆ. ಎರಡನೆಯ ಸೂತ್ರವು ಸಿದ್ಧ ವಿಶೇಷಪರವಾದ ಬ್ರಹ್ಮಶಬ್ದಕ್ಕೆ ವ್ಯುತ್ಪತ್ತಿಯನ್ನು ಸಮರ್ಥಿಸುತ್ತದೆ. ಹೀಗೆ ಇವೆರಡು ಸೂತ್ರಗಳಿಗಿರುವ ಅವಾಂತರ ವಿಭಾಗ. ಮುಂದಿನ ಪೇಟಿಕೆಯು ವೇದಾಂತ ವಾಕ್ಯಗಳಿಗೆ ಬ್ರಹ್ಮದಲ್ಲಿ ತಾತ್ಪರ್ಯ ಲಿಂಗವನ್ನು ಸಮರ್ಥಿಸುತ್ತದೆ. ತಾತ್ಪರ್ಯ ಲಿಂಗಗಳು—

"ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಂ ।
ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯ ನಿರ್ಣಯೇ॥ "—

—ಎಂಬಂತೆ ಆರು ವಿಧ. ಪ್ರಮಾಣಾಂತರಾಗೋಚರವಾದ್ದರಿಂದ ಅಪೂರ್ವತೆಯೆಂಬ

ತಾತ್ಪರ್ಯಲಿಂಗವು ಶಾಸ್ತ್ರಯೋನ್ಯಧಿಕರಣದಲ್ಲಿ ಸಿದ್ಧಿಸುತ್ತದೆ. ಸಾಫಲ್ಯವೆಂಬ ಲಿಂಗವು ಸಮನ್ವಯಾಧಿಕರಣದಲ್ಲಿ ಸಿದ್ಧಿಸುತ್ತದೆ. ಅದರಲ್ಲಿಯೂ ಶಾಸ್ತ್ರಸಾಫಲ್ಯಲಿಂಗ ಮೊದಲ ದರಲ್ಲಿ. ಶಾಸ್ತ್ರಜನ್ಯ ಜ್ಞಾನದ ಸಾಫಲ್ಯಲಿಂಗವೆಂಬುದು ಎರಡನೆಯದರಲ್ಲಿ ಸಿದ್ಧಿಸು ತ್ತದೆ. ಹೀಗೆ ಪೇಟಿಕಾಧಿಕರಣ ವಿಭಾಗಗಳು ಪ್ರಸಿದ್ಧವಾಗಿವೆ.

ಆದ್ಯವ್ಯುತ್ಪತ್ತಿಯು ಸಿದ್ಧವಸ್ತುವಿನಲ್ಲಿ ಸಿದ್ಧಿಸುವುದಿಲ್ಲವೆಂಬುದು ಪ್ರಥಮಾಧಿ ಕರಣದ ಪೂರ್ವಪಕ್ಷ–ಬ್ರಹ್ಮವೆಂಬುದರಲ್ಲಿ ಜಗತ್ಕಾರಣತ್ವ ಲಕ್ಷಣದ ಘಟನೆಯಾಗದುದ ರಿಂದ ವಿವಕ್ಷಿತ ಬ್ರಹ್ಮಶಬ್ದದ ವ್ಯುತ್ಪತ್ತಿ ಸಿದ್ಧಿಸದೆಂಬುದು ಎರಡನೇ ಅಧಿಕರಣದ ಪೂರ್ವಪಕ್ಷ. ಅನುಮಾನದಿಂದಲೇ ಸಿದ್ಧವಾದ ಬ್ರಹ್ಮಕ್ಕೆ ಶಾಸ್ತ್ರದಿಂದೇನು ಪ್ರಯೋಜನ? ಎಂಬುದು ಮೂರನೆಯ ಅಧಿಕರಣದ ಪೂರ್ವಪಕ್ಷ. ಸಿದ್ಧವಸ್ತುವಿನ ಅರಿವಿನಿಂದ ಶ್ರೋತೃವಿಗೇನೂ ಫಲವಿಲ್ಲವೆಂಬುದು ನಾಲ್ಕನೆಯ ಅಧಿಕರಣದ ಪೂರ್ವಪಕ್ಷ. ಈ ವಿಧವಾದ ಆಕ್ಷೇಪಗಳಿಂದ ಬ್ರಹ್ಮವಿಚಾರದಲ್ಲಿ ಪ್ರವೃತ್ತಿ ಸ್ತಂಭಿತವಾಗಲಾಗಿ, ಸಿದ್ಧ ವಸ್ತುವಿನಲ್ಲಿಯೂ ವ್ಯುತ್ಪತ್ತಿಯುಂಟು; ಜಗಜನ್ಮಾದಿ ಲಕ್ಷಣವು ವಿಶೇಷಣವಾಗಿಯೋ ಉಪಲಕ್ಷಣವಾಗಿಯೋ ಬ್ರಹ್ಮಕ್ಕೆ ಸಂಭವಿಸುತ್ತದೆ; ಬ್ರಹ್ಮ ಪ್ರಮಾಣಾಂತರ ಗೋಚರ ವಾಗದು. ವೇದಾಂತ ವಾಕ್ಯಜನಿತ ಜ್ಞಾನಗಳು "ನಿನ್ನ ಮನೆಯಲ್ಲಿ ನಿಧಿಯಿದೆ."— ಇತ್ಯಾದಿ ನ್ಯಾಯದಿಂದ ನಿರತಿಶಯಾನಂದ ಬ್ರಹ್ಮವಿಷಯಕವಾಗಿ ಸ್ವಯಂ ಪುರುಷಾರ್ಥ ರೂಪ, ಎಂಬ ಈ ನಾಲ್ಕು ನ್ಯಾಯಗಳು ಈ ನಾಲ್ಕು ಅಧಿಕರಣಗಳಿಂದ ನಿರ್ಣಾಯಿ ಸಲ್ಪಡತಕ್ಕವಾಗಿವೆ.

ಮೇಲೆ ಹೇಳಿದ ಚತುರಧಿಕರಣೀ ಪೂರ್ವಪಕ್ಷಗಳನ್ನು ಅನ್ವಾರುಹ್ಯವಾದ ದಿಂದಲೇ ಏಕೆ ಪರಿಹರಿಸಬಾರದು? ಎಂದೂ ಕೆಲವರು ಹೇಳುತ್ತಾರೆ. ಅದು ಹೇಗೆಂದರೆ ಸಿದ್ಧ ವಸ್ತುವಿನಲ್ಲಿ ಆದ್ಯವ್ಯುತ್ಪತ್ತಿ ಬೇಡಲೇ ಬೇಡ. ಆದಾಗ್ಯೂ ಯಾಗಾದಿಗಳಿಗೆ ಫಲಭೂತವಾದ ಸ್ವರ್ಗಾದಿಗಳ ಸ್ವರೂಪದಂತೆ. "ಬ್ರಹ್ಮವಿದಾಪ್ನೋತಿ ಪರಂ"— ಎಂಬ ವಾಕ್ಯವಿಹಿತ ಜ್ಞಾನದ ಫಲವಾಗಿ ಬ್ರಹ್ಮವೂ ಸಿದ್ಧಿಸಲಿ; ಲಕ್ಷಣ ಭಂಗವಿದ್ದರೂ ಪುರಾಣಾದಿ ಪ್ರಸಿದ್ಧ ರಾವಣ-ಯುಧಿಷ್ಠಿರ-ಸುಯೋಧನಾದಿಗಳಂತೆ ಆಯಾ ಔಪ ನಿಷದ ಸೂಕ್ತ ಪ್ರಸಿದ್ಧಿಯಿಂದ ಬ್ರಹ್ಮವೂ ಸಿದ್ಧಿಸಲಿ; ಕಾವ್ಯೇತಿಹಾಸ ಪುರಾಣಾದಿ ಗಳಲ್ಲಿ ಎಲ್ಲ ಕಡೆಗಳಲ್ಲಿಯೂ ಲಕ್ಷಣ ಹೊಂದುವುದಿಲ್ಲವಷ್ಟೆ. ಅಷ್ಟಕ್ಕೇ ಅರ್ಥಸಿದ್ಧಿಸದಿಲ್ಲ ವಷ್ಟೆ! ಬ್ರಹ್ಮ ಅನುಮಾನ ಪ್ರಸಿದ್ಧವೇ ಆದಾಗ್ಯೂ, ನಿರತಿಶಯಾನಂದಾದ್ಯನಂತಗುಣ ವಿಶಿಷ್ಟವೆಂಬುದಾಗಿ ಶಾಸ್ತ್ರವೇದ್ಯವು ಏಕಾಗಿರಬಾರದು? ವಿಧಿಶೇಷವೆಂದಾಗ್ಯೂ, ಅಬಾಧಿತವಾದ ವೇದಾಂತ ವಾಕ್ಯಗಳು, "ಅಗ್ನಿರ್ಹಿಮಸ್ಯ ಭೇಷಜಂ," ಎಂಬಂತೆ ಸ್ವಾರ್ಥ ಪ್ರಾಮಾಣ್ಯವುಳ್ಳದರಲ್ಲಿ ವಿರೋಧವೇನು?—ಎಂಬ ದೀನಕೃತ್ಯವಾದ ಅನ್ವಾ ರುಹ್ಯವಾದವನ್ನು ಪರಮಾರ್ಥ ದೂಷಣವೇ ಇರುವಲ್ಲಿ ಏಕೆ ಆಶ್ರಯಿಸುವುದು? ಪರಪಕ್ಷವನ್ನು ಅಂಗೀಕರಿಸಿ ಸಾಂತ್ವದಿಂದ ಸಮಾಧಾನ ರೂಪವಾದುದು ದೀನಕೃತ್ಯ. ಎಂದು ಋಜುಸ್ವಭಾವರೂ, ಮಹಾವಾಗ್ಮಿಯೂ ಆದ ಭಗವದ್ಬಾದರಾಯಣರು ನಾರಾಯಣಪರವಾದ ಶಾಸ್ತ್ರವನ್ನು ನೇರವಾದ ಯುಕ್ತಿಗಳಿಂದಲೇ ಸಾಧಿಸಿದ್ದಾರೆಯಷ್ಟೆ!

ಚತುಸ್ಸೂತ್ರಿಯ ಮೊದಲೆರಡು ಅಧಿಕರಣಗಳಿಂದ ಸಿದ್ಧರೂಪವಾದ ಬ್ರಹ್ಮದಲ್ಲಿ ಪ್ರತೀತಿ(ಅರಿವು)ಯುತ್ಪತ್ತಿಯಾಗುವುದನ್ನು ಹೇಳಿ, ಆ ಪ್ರತೀತಿಗೂ ಆ ಪ್ರತೀತಿಗೆ ಕಾರಣ ಭೂತವಾದ ಶಾಸ್ತ್ರಕ್ಕೂ ಸಾಫಲ್ಯವನ್ನು ಮತ್ತೆರಡು ಅಧಿಕರಣಗಳಿಂದ ಹೇಳಲಾಗಿದೆ. ಪ್ರಧಾನ ಭೂತವಾದ ಸಕಲ ವೇದಾಂತ ಚಿಂತೆ ಮತ್ತು ಅರ್ಥ ಚಿಂತಾಂತರ ರೂಪವಾದ ಈ ನಾಲ್ಕು ಅಧಿಕರಣಗಳಿಗೂ ಉಪೋದ್ಘಾತ (ಪೀಠಿಕಾ) ಲಕ್ಷಣವು ಸಾಧಾರಣವಾದದ್ದು. ಹೀಗೆ ಈ ನಾಲ್ಕು ಅಧಿಕರಣಗಳೂ ಸೇರಿ ಶಾಸ್ತ್ರದ ಉಪೋದ್ಘಾತವೆನಿಸಿವೆ. ಶ್ರೀಭಾಷ್ಯ ಕಾರರು ಮತ್ತು ಅವರ ಶಿಷ್ಯಪರಂಪರೆಯಿಂದ ಅನುಗತವಾಗಿ ಚಿರಕಾಲಾನುವೃತ್ತವಾದ ಮಾರ್ಗವಿದು. ಮೇಘನಾದಸೂರಿಪ್ರಭೃತಿಗಳಾದರೋ—ಮೊದಲನೆಯ ಸೂತ್ರವೊಂದು ಮಾತ್ರವೇ ಶಾಸ್ತ್ರೋಪೋದ್ಘಾತವಾದದ್ದು. ಮಿಕ್ಕ ಮೂರು ಅಧಿಕರಣಗಳೂ ಶಾಸ್ತ್ರಾ ತ್ಮಕವೇ—ಎನ್ನುತ್ತಾರೆ. ಇದು ಬರೀ ವೈಭವವಾದವೆಂಬುದು ಶ್ರೀ ದೇಶಿಕ ಸಿದ್ಧಾಂತ.

[ಇತಿ ಶಾಸ್ತ್ರಾವತಾರಃ]



ಶ್ರೀಃ

ಶ್ರೀ ನಿಧಿಂ ಬ್ರಹ್ಮವರದಂ ತನ್ನಾಮ್ನಶ್ಚ ಗುರೂತ್ತಮಾನ್।
ವಂದೇ ಭಾಗವತಾನ್ ಸರ್ವಾನ್ ಶ್ರೀ ಭಾಷ್ಯಾಶಯಲಬ್ಧಯೇ ॥

ಓಂ ನಮೋ ಭಗವತೇ ವಾಸುದೇವಾಯ
ಶ್ರೀ ಭಗವತೇ ಭಾಷ್ಯಕಾರಾಯ ಮಹಾದೇಶಿಕಾಯ ನಮಃ
ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ
ಶ್ರೀ ಶ್ರೀನಿವಾಸ ಮಹಾಗುರವೇ ನಮಃ

# ಶ್ರೀ ಭಾಷ್ಯಾಮೃತಸಾರ

ಶ್ರೀ ಭಾಷ್ಯದ ಮಂಗಳ ಶ್ಲೋಕ—

ಅಖಿಲ ಭುವನ ಜನ್ಮಸ್ಥೇಮ ಭಂಗಾದಿ ಲೀಲೇ
ವಿನತ ವಿವಿಧ ಭೂತವ್ರಾತ ರಕ್ಷೈಕ ದೀಕ್ಷೇ।
ಶ್ರುತಿ ಶಿರಸಿ ವಿದೀಪ್ತೇ ಬ್ರಹ್ಮಣಿ ಶ್ರೀನಿವಾಸೇ
ಭವತು ಮಮ ಪರಸ್ಮಿನ್ ಶೇಮುಷೀ ಭಕ್ತಿರೂಪಾ ॥

**ಅವತಾರಿಕೆ**

ಭಗವಾನ್ ಭಾಷ್ಯಕಾರರು ಶ್ರೀ ಶಾರೀರಕ ಶಾಸ್ತ್ರದ ಭಾಷ್ಯ ರಚನೆಗೆ ತೊಡಗಿದ್ದಾರೆ. ಇದಕ್ಕೆ ಕಾರಣ—ಲೋಕದಲ್ಲಿ ಅಲೌಕಿಕ ಪುರುಷಾರ್ಥವನ್ನು ಬಯಸುವವರಿಗೆ ಆ ಪುರುಷಾರ್ಥ ಮತ್ತು ಅದರ ಸಾಧನೆಗಳನ್ನು ತಿಳಿಯುವುದು ಆವಶ್ಯಕ, ಇದನ್ನು ಶಾಸ್ತ್ರದಿಂದಲೇ ತಿಳಿಯಬೇಕು. ಅಂತಹ ಶಾಸ್ತ್ರಗಳಲ್ಲಿ ಪ್ರಧಾನವಾದುದು ವೇದ, ಹೇಗೆಂದರೆ—ಇದು ಅಪೌರುಷೇಯ—ಆದುದರಿಂದ ಕರ್ತೃ ಬುದ್ಧಿ ಸಂಬಂಧವಾದ ದೋಷಮಷೀ ಮಾಲಿನ್ಯಕ್ಕೆ ಇದರಲ್ಲಿ ಲೇಶವೂ ಅವಕಾಶವಿಲ್ಲ. ಇದು ನಿತ್ಯವೂ ಶುದ್ಧವೂ ಬುದ್ಧವೂ ಆದದ್ದು. ಆದುದರಿಂದ ಈ ವೇದವೇ ಸರ್ವಾತ್ಮನಾ ಆಶ್ರಯಣೀಯವೆಂಬುದು ಸಿದ್ಧ.

ವೇದವು ಪೂರ್ವಭಾಗ ಮತ್ತು ಉತ್ತರ ಭಾಗವೆಂಬುದಾಗಿ ವಿಭಕ್ತವಾಗಿದೆ. ಪಶು, ಪುತ್ರ, ವೃಷ್ಟಿ, ಅನ್ನ, ಸ್ವರ್ಗ ಮುಂತಾದ ಐಹಿಕಾ ಮುಷ್ಮಿಕ ಅರ್ವಾಚೀನ ಫಲಗಳನ್ನೂ, ಅವುಗಳ ಸಾಧನಗಳನ್ನೂ ತಿಳಿಸುವುದು ಪೂರ್ವಭಾಗ. ಪರಮ ಪುರುಷಾರ್ಥ ಮತ್ತು ಅದರ ಸಾಧನಗಳನ್ನು ತಿಳಿಸುವುದು ಉತ್ತರ ಭಾಗ. ಈ ಉತ್ತರ ಭಾಗವು ಪೂರ್ವಾಚಾರ್ಯರಿಗೆ ಅಭಿಮತವಾದ ಮುಕ್ತಿಘಂಟಾ ಪಥಕ್ಕೆ ಕಂಟಕಗಳಂತಿರುವ ವಿವಿಧ ಬಾಹ್ಯ–ಕುದೃಷ್ಟಿ ಜನರ ಪರಕೃತ ದುರ್ವಚನಗಳಿಂದ ಬಾಧಿತವಾಗಿದೆ. ಇವರೊಳಗೆ

"ಚಾರ್ವಾಕ ಮಾರ್ಹತಂ ಚೈವ ತಥಾ ಬೌದ್ಧ ಚತುಷ್ಟಯಂ ।
ವೇದಾಂತಪರಿಪಂಥೀನಿ ಬಾಹ್ಯಷಟ್ಕಮಯಾ ಇಮೇ॥"

—ಎಂಬಲ್ಲಿ ಹೇಳಿರುವ ಆರು ಬಗೆಯವರೂ ಬಾಹ್ಯರೆನಿಸಿದ್ದಾರೆ. ವೇದಾಂತಕ್ಕೆ ವೈರಿಗಳಿವರು.

ಕಬಂಧರಾಹು ಮೀಮಾಂಸೇ ಸಾಂಖ್ಯಂ ಪಾಶುಪತಂ ತಥಾ।
ಕಾಣಾದ ವೈಯಾಕರಣೌ ಕುದೃಕ್ ಷಟ್ಕಮಯಾ ಇಮೇ॥

ಎಂಬಲ್ಲಿ ಹೇಳಿರುವ ಆರು ಬಗೆಯವರೂ ಕುದೃಷ್ಟಿಗಳೆನಿಸಿರುವವರು. ವೇದಕ್ಕೆ ಅಂತರಂಗ ವೈರಿಗಳಿವರು. ವೇದಬಾಹ್ಯರೆಂಬವರು ವೇದದ ಬಹಿಃ ಇದ್ದುಕೊಂಡೇ ಅದನ್ನು ದೂಷಿಸುವವರು. ಈ ಕುದೃಷ್ಟಿಗಳಾದರೋ—ತಾವೂ ವೈದಿಕರೆಂದುಕೊಂಡು ವೇದದ ಒಂದೊಂದು ಅಕ್ಷರಕ್ಕೂ ದುರರ್ಥವನ್ನು ಕಲ್ಪಿಸಿ ಅದನ್ನು ದೂಷಿಸುತ್ತಾರೆ. ಇವರಿಂದ ವೇದಕ್ಕೆ ಆಗುವ ಮರ್ಮವ್ಯಥೆ ಬಾಹ್ಯರಿಂದ ಆಗುವುದಕ್ಕಿಂತ ತೀಕ್ಷ್ಣತರ. ಇದನ್ನು ಅರಿಯದೆ ಇವರು ತೋರುವ ಮಾರ್ಗದಲ್ಲಿ ಭ್ರಾಂತಿಯಿಂದ ಪ್ರವೃತ್ತರಾಗಿ ಮೋಹದಿಂದ ತೊಳಲುವ ಚೇತನರನ್ನು ಉಜ್ಜೀವನಗೊಳಿಸಲಿಚ್ಛೆಯಿಂದ, ಸಂಸಾರ ಭಯದಿಂದ ಅಭಿತಪ್ತರಾದ ಜನರ ಭಾಗ್ಯ ವೈಭವದಿಂದ ಅವತರಿಸಿದ ಪರಮಕಾರುಣಿಕರಾದ ಭಾಷ್ಯಕಾರರು ಸದಸದ್ವಿವೇಚನೆಯಲ್ಲಿ ಚತುರರಾದ ಪೂರ್ವಾಚಾರ್ಯರಿಗೆ ಪರಿಚಿತವೂ ಪ್ರಾಚೀನವೂ ಆದ ಸಮೀಚೀನ ಮಾರ್ಗವನ್ನು ನಿಷ್ಕಂಟಕವಾಗಿಸಿ ಪರಮ ಪುರುಷಾರ್ಥವನ್ನು ಬಯಸುವವರನ್ನು ಕೃತಾರ್ಥರನ್ನಾಗಿ ಮಾಡಲು, ವೇದದ ಉತ್ತರ ಭಾಗವಾದ ಶಾರೀರಕ ಶಾಸ್ತ್ರದ ವ್ಯಾಖ್ಯಾನದಲ್ಲಿ ಉಜ್ಜುಗಿಸಿದ್ದಾರೆ,

ಇದರಂತೆಯೇ ವೇದದ ಪೂರ್ವಭಾಗವೂ ಕೂಡ ಕೆಲವೆಡೆಗಳಲ್ಲಿ ಅರ್ವಾಚೀನ ವ್ಯಾಖ್ಯಾನಗಳಿಂದ ಬಾಧಿತವಾಗಿಲ್ಲವೆ? ಅದರ ಸಮೀಚೀನ ವ್ಯಾಖ್ಯೆಗೂ ಇವರು ತೊಡಗಲಿಲ್ಲವೇಕೆ?—ಎಂದರೆ, ನಿಜ; ಆದರೆ ದೇಹಕ್ಕಿಂತ ಆತ್ಮವು ಅತಿರಿಕ್ತವೆಂಬ ಜ್ಞಾನವಿದ್ದು—ವೇದದಲ್ಲಿ ಹೇಳಿರುವ ಯಜ್ಞಯಾಗಾದಿಗಳನ್ನು ಅವುಗಳ ಪ್ರಯೋಗ ಮಾರ್ಗದಲ್ಲಿ ಸ್ಖಲನವಿಲ್ಲದಂತೆ ಆಚರಿಸಿದರೇ ಸಾಕು, ಅಷ್ಟರಿಂದಲೇ ಅದರಲ್ಲಿ ಹೇಳಿರುವ ಸ್ವರ್ಗಾದಿ ಫಲ ಸಿದ್ಧಿಸುವುದು. ಇಷ್ಟರ ಹೊರತು ಆಯಾ ದೇವತಾ ಸ್ವರೂಪ, ಅದರ ಯಾಥಾತ್ಮ್ಯ, ಸತ್ಕಾರ್ಯವಾದ—ಇವೇ ಮುಂತಾದುವುಗಳ ಜ್ಞಾನ ಅದಕ್ಕೆ ಬೇಕಿಲ್ಲ.

ಪರಮಪುರುಷಾರ್ಥವಾದರೋ—"ಭವತು ಮಮ ಪರಸ್ಮಿನ್ ಶೇಮುಷೀ ಭಕ್ತಿರೂಪಾ"—ಎಂದು ಮೇಲಿನ ಮಂಗಳ ಶ್ಲೋಕದಲ್ಲಿ ಪ್ರಾರ್ಥಿಸಿರುವಂತೆ ಜ್ಞಾನೈಕಸಾಧ್ಯ—ಆ ಜ್ಞಾನ ಮಾರ್ಗದಲ್ಲಿ ಸ್ಖಲನವಾದರೆ, ಅದಕ್ಕೆ ಫಲ ಆತ್ಮಹಾನಿ. ಇದನ್ನು ಅವಶ್ಯ ತಪ್ಪಿಸಬೇಕೆಂಬುದಕ್ಕಾಗಿ ಪೂರ್ವ ಭಾಗವನ್ನು ಬಿಟ್ಟು ಉತ್ತರ ಭಾಗವಾದ ಬ್ರಹ್ಮಸೂತ್ರಗಳ ವ್ಯಾಖ್ಯಾನಕ್ಕೇ ಶ್ರೀ ಭಾಷ್ಯಕಾರರು ತೊಡಗಿದ್ದಾರೆ.

"ಇಷ್ಟಂ ಹಿ ವಿದುಷಾಂ ಲೋಕೇ ಸಮಾಸ ವ್ಯಾಸಧಾರಣಂ"—ಎಂಬಂತೆ, ಸಂಕ್ಷೇಪ ಮತ್ತು ವಿಸ್ತರ—ಇವೆರಡೂ ವಿದ್ವಾಂಸರಿಗೆ ಇಷ್ಟ. ಈ ನ್ಯಾಯವನ್ನು ಅನುಸರಿಸಿ, ಶ್ರೋತೃವಿಗೆ ಸೌಕರ್ಯಕ್ಕಾಗಿ ಶಾಸ್ತ್ರಾರ್ಥವನ್ನು ಸಂಕ್ಷೇಪವಾಗಿ ಈ ಮಂಗಳ ಶ್ಲೋಕದಲ್ಲಿ

ಸೇರಿಸಿದ್ದಾರೆ, ಈ ಶಾಸ್ತ್ರಾರ್ಥ ಸಂಕ್ಷೇಪದಿಂದ ವಸ್ತು ನಿರ್ದೇಶ ರೂಪ ಮಂಗಳ "ಭಕ್ತಿರೂಪಾ"—ಎಂಬುದರಿಂದ ಬ್ರಹ್ಮದಲ್ಲಿ ಪ್ರಹ್ವೀಭಾವ ತೋರುವುದರಿಂದ, ನಮಸ್ಕಾರ ರೂಪ ಮಂಗಳ, "ಭವತು"—ಎಂಬ ಪ್ರಾರ್ಥನೆಯಲ್ಲಿ ಆಶೀರ್ವಾದ ತೋರುವುದರಿಂದ, ಆಶೀರ್ವಾದ ರೂಪ ಮಂಗಳ—ಹೀಗೆ ತ್ರಿವಿಧ ಮಂಗಳಗಳು ಇದರಲ್ಲಿ ಆಚರಿಸಲ್ಪಟ್ಟಿವೆ. ಪ್ರಕೃತ ಶಾಸ್ತ್ರದ ನಿರ್ವಿಘ್ನ ಪರಿಸಮಾಪ್ತಿ, ಪ್ರಚಯ ಗಮನ, ಶಿಷ್ಯಶಿಕ್ಷಣ—ಗಳೇ ಮಂಗಳಾಚರಣೆಯ ಉದ್ದೇಶ.

ಈ ಶಾಸ್ತ್ರದಲ್ಲಿ ನಾಲ್ಕು ಅಧ್ಯಾಯಗಳಿವೆ. ಮೊದಲೆರಡು ಅಧ್ಯಾಯಗಳಲ್ಲಿ ಸಿದ್ಧೋಪಾಯವೂ ಉಪೇಯವೂ ಆದ ಪರಬ್ರಹ್ಮವೂ ಮುಂದಿನ ಎರಡು ಅಧ್ಯಾಯಗಳಲ್ಲಿ ಸಾಧ್ಯೋಪಾಯವೂ ಉಪೇಯವೂ ಆದ ಪರಬ್ರಹ್ಮವೂ ಪ್ರತಿಪಾದಿತವಾಗಿ ಪೂರ್ವದ್ವಿಕ ಉತ್ತರದ್ವಿಕಗಳೆಂದು ಶಾಸ್ತ್ರವು ವಿಭಕ್ತವಾಗಿದೆ. ಮಂಗಳ ಶ್ಲೋಕದಲ್ಲಿಯ ಸಪ್ತಮ್ಯಂತ ಪದಗಳಿಂದ ಪೂರ್ವದ್ವಿಕದ ಅರ್ಥವೂ,ಮಿಕ್ಕಪದಗಳಿಂದ ಉತ್ತರದ್ವಿಕದ ಅರ್ಥವೂ ಸಂಕ್ಷೇಪವಾಗಿ ಪ್ರತಿಪಾದಿತವಾಗಿದೆ. ಸಿದ್ಧೋಪಾಯವೆಂಬುದು ಪರಬ್ರಹ್ಮ. ಸಾಧ್ಯೋಪಾಯವೆಂಬುದು ಭಕ್ತಿ. ಹೀಗೆ, "ಸ್ವಪ್ರಾಪ್ತೇಃ ಸ್ವಯಂಮೇವ ಸಾಧನಂ ಬ್ರಹ್ಮ"—ಎಂಬ ಶಾಸ್ತ್ರಾರ್ಥ ಇದರಲ್ಲಿ ಗರ್ಭಿತ.

**ವಿವರಣೆ**

(ಅನ್ವಯ ಕ್ರಮದಲ್ಲಿ) 1. [ಅಖಿಲ ಭುವನ ಜನ್ಮಸ್ಥೇಮಭಂಗಾದಿಲೀಲೇ—] (ಅಖಿಲ) = ಖಿಲ ಅಗೋಚರ, ಖಿಲವಲ್ಲದ್ದು ಅಖಿಲ—ಅಗೋಚರವಲ್ಲದ್ದು—ಅಂದರೆ ಸಕಲವೆಂದರ್ಥ, [ಭುವನ] ಕಾರ್ಯವರ್ಗ—ವಿಪುಲತರ ಕಾರ್ಯ ವಿಶೇಷದಲ್ಲಿ ರೂಢವಾದ ಶಬ್ದವಿದು, ಇದರಿಂದ ಕುಲಾಲಾದಿಗಳ ವ್ಯಾವೃತ್ತಿ. ಬ್ರಹ್ಮದ ಸೃಷ್ಟ್ಯಾದಿ ವ್ಯಾಪಾರಗಳಿಗೆ ಅಗೋಚರ ಅಂದರೆ ವಿಷಯವಲ್ಲದ್ದು ಯಾವುದೂ ಇಲ್ಲವೆಂದು (ಅಖಿಲ ಭುವನ)ವೆಂಬುದರ ಅರ್ಥ. ಇದರಿಂದ ಬ್ರಹ್ಮಾದಿಗಳ ವ್ಯಾವೃತ್ತಿ. "ಅಜ್ಞಾತಂ ನಾಸ್ತಿ ತೇ ಕಿಂಚಿತ್"—ಎಂಬಲ್ಲಿಯಂತೆ, ಉಕ್ತಾರ್ಥದ ದೃಢೀಕರಣಕ್ಕಾಗಿ, "ಸಕಲ ಭುವನ—ವೆನ್ನದೆ" "ಅಖಿಲ ಭುವನ"—ವೆಂಬ ವ್ಯತಿರೇಕೋಕ್ತಿ, "ನಿಖಿಲ"-ವೆಂದಾಗ್ಯೂ ವ್ಯತಿರೇಕೋಕ್ತಿ ಸಿದ್ಧಿಸುವುದಾದರೂ, "ಅ"ಕಾರವು ಮಾಂಗಳಿಕವಾದ್ದರಿಂದ, ಅಕಾರೋಪಕ್ರಮಕ್ಕಾಗಿ "ಅಖಿಲ"—ಶಬ್ದ ಪ್ರಯೋಗವಿದೆ, ಅಕಾರವು ವಿಷ್ಣುವಾಚಕವಷ್ಟೆ। ನ, ಖಿಲಂ = "ಅಖಿಲಂ—ಎಂದು "ನಞ್"—ನಿಷೇಧವಾಚಿಯಾದರೂ, "ನಿಷ್ಪ್ರತ್ಯೂಹಮುಪಾಸ್ಮಹೇ"—ಇತ್ಯಾದಿ ನಿರ್ದೇಶದಂತೆ ಇಲ್ಲಿಯೂ ಶುಭಕರ-ವೈಕಲ್ಯ ನಿಷೇಧವು ಪೌಷ್ಕಲ್ಯ ಪರವಷ್ಟೆ।। (ಜನ್ಮ) = ಸೃಷ್ಟಿ. (ಅಖಿಲ ಭುವನಗಳ ಸೃಷ್ಟಿ.) (ಸ್ಥೇಮ) = ಸ್ಥಿತಿ, ಪಾಲನೆಯೆಂದರ್ಥ. (ಭಂಗ) = ಲಯ. (ಆದಿ) = ಸೃಷ್ಟ್ಯಾದಿಗಳಿಗೆ ಉಪಯುಕ್ತವಾದ ಅಂತಃ ಪ್ರವೇಶ ನಿಯಮನಾದಿಗಳು. (ಲೀಲೇ) = ಕ್ರೀಡೆ. "ಮೋದತೇ ಭಗವಾನ್ ಭೂತೈಃ ಬಾಲಃ ಕ್ರೀಡನಕೈರಿವ"—ಎಂಬಂತೆಯೇ ಸೃಷ್ಟ್ಯಾದಿಗಳು ಭಗವಂತನಿಗೆ ಲೀಲೆ. ಇದರಿಂದ, "ಅಪ್ರಮೇಯೋಽನಿಯೋಜ್ಯಶ್ಚ ಯತ್ರಕಾಮಗಮೋ ವಶೀ,"—ಎಂಬಲ್ಲಿ ಹೇಳಿರುವಂತೆ ಭಗವಂತನ ಪರಿಪೂರ್ಣತ್ವ, ಅನನ್ಯಪ್ರೇರ್ಯತ್ವ, "ಬಾಲ"—ಶಬ್ದದಿಂದ

ಪ್ರಯೋಜನಾಂತರ ನೈರಪೇಕ್ಷ್ಯ ಸ್ವಚ್ಛಂದ ಚೇಷ್ಟಿತತ್ವವೇ ಮುಂತಾದುವು ವಿವಕ್ಷಿತ. "ಬಹುಸ್ಯಾಂ ಪ್ರಜಾಯೇಯ"—ಎಂಬ ಶ್ರುತಿಯಂತೆ ಭಗವಂತನೇ ಉಪಾದಾನ ಮತ್ತು ನಿಮಿತ್ತ ಕಾರಣನೆಂಬುದೂ ಮತ್ತು ಅವನ ಪರತ್ವವೂ ಫಲಿತ.

"ಅಖಿಲ ಭುವನ ಜನ್ಮಸ್ಥೇಮ ಭಂಗಾದಿ"—ಎಂಬುದರಿಂದ ಮೊದಲನೆಯದಾದ ಕಾರಣಾಧ್ಯಾಯದ ಅರ್ಥವು ಸಂಕ್ಷಿಪ್ತ. ಅವಾಪ್ತಸಮಸ್ತಕಾಮನಿಗೆ ವ್ಯಾಪಾರ ವೆಂಬುದೆಂತು?—ಎಂಬ ಶಂಕೆಯನ್ನು ಪರಿಹರಿಸುವುದು ಇಲ್ಲಿಯ 'ಲೀಲಾ' ಶಬ್ದ. ಇದರಿಂದ ಎರಡನೆಯದಾದ ಅವಿರೋಧಾಧ್ಯಾಯದ ಅರ್ಥವೂ ಸೂಚಿತ.

2. [ವಿನತ ವಿವಿಧ ಭೂತವ್ರಾತ ರಕ್ಷೈಕ ದೀಕ್ಷೇ] = (ವಿನತ) = ವಿಶೇಷೇಣ ನತರು ವಿನತರು, ಅಂದರೆ ಶರಣಾಗತರು. ಇಲ್ಲಿ ನ್ಯಾಸ-ಉಪಾಸನಗಳೆಂಬ ವಿದ್ಯಾವಿಶೇಷ ನಿಷ್ಠ ರೆಂದು ಭಾವ. (ವಿವಿಧ) = ದೇವತ್ವ, ಮನುಷ್ಯತ್ವ, ವರ್ಣಾಶ್ರಮಾದಿ ಭೇದ ಮತ್ತು ಜನ್ಮ-ಗುಣ-ವೃತ್ತ—ಇತ್ಯಾದಿಗಳ ಭೇದ ಪ್ರಯುಕ್ತವಾದ ವೈವಿಧ್ಯವು ವಿವಕ್ಷಿತ. (ಭೂತ) = 'ಭೂ-ಸತ್ತಾಯಾಂ'—ಎಂಬ 'ಸತ್ತಾರ್ಥಕಭೂ'—ಧಾತುವಿನಿಂದ ನಿಷ್ಪನ್ನವಾದುದು 'ಭೂತ'-ಶಬ್ದ. ಭಗವದ್ವಿಷಯಕ ಜ್ಞಾನದಿಂದ ಸತ್ತೆಯುಳ್ಳವರೆಂದರ್ಥ. "ಅಸ್ತಿ ಬ್ರಹ್ಮೇತಿ ಚೇದ್ವೇದ, ಸಂತಮೇನಂ ತತೋವಿದುಃ"—ಎಂದಿದೆಯಷ್ಟೆ, ಶ್ರುತಿ! (ಭೂತ ವ್ರಾತ) = ವ್ರಾತ = ಸಮೂಹ, ಭೂತ ಸಂಬಂಧೀವ್ರಾತಃ = ಭೂತವ್ರಾತಃ. ಸಂಶ್ರಿತರ ಸಂಬಂಧಿಗಳೂ ಅದೇ ಕಾರಣದಿಂದಲೇ ಭಗವಂತನಿಗೆ ರಕ್ಷ್ಯರೆಂದು ಭಾವ.

"ಪಶುರ್ಮನುಷ್ಯಃ ಪಕ್ಷೀವಾ ಯೇ ಚ ವೈಷ್ಣವ ಸಂಶ್ರಯಾಃ ।
ತೇನೈವತೇ ಪ್ರಯಾಸ್ಯಂತಿ ತದ್ವಿಷ್ಣೋಃ ಪರಮಂ ಪದಂ॥"

—ಎಂಬುದಿದಕ್ಕೆ ಪ್ರಮಾಣ. ಭೂತಾನಾಂ + ವ್ರಾತಃ = ಭೂತವ್ರಾತಃ—ಎಂದು ಸಮಾಸದೊಳಗಿನ ಷಷ್ಠೀ ವಿಭಕ್ತಿಗೆ ಸಂಬಂಧಮಾತ್ರವೇ ವಿಷಯವಾದ್ದರಿಂದ ಇಲ್ಲಿ ಸಮುದಾಯವಾಚಕ 'ವ್ರಾತ'—ಶಬ್ದವು ಭೂತ ಶಬ್ದದಿಂದ ನಿರ್ದಿಷ್ಟವಾದುದಕ್ಕಿಂತ ಅತಿರಿಕ್ತವಾದುದನ್ನೂ ಹೇಳಬಲ್ಲುದು. ಇದಕ್ಕೆ ಉದಾಹರಣೆ—"ರಾಜಪರಿಷತ್" —ಇತ್ಯಾದಿ. (ರಕ್ಷಾ) = ಇಷ್ಟಪ್ರಾಪಣ ಪರ್ಯಂತವಾದ ಅನಿಷ್ಟನಿವಾರಣವೇ ಇಲ್ಲಿ 'ರಕ್ಷಾ'—ಎಂಬುದು. ಈ ವಿಧ ರಕ್ಷಣೆಯಲ್ಲಿ (ಏಕದೀಕ್ಷೇ) = ಏಕ = ಪ್ರಧಾನ, ದೀಕ್ಷಾ = ಸಂಕಲ್ಪ. ಸ್ವಂತ ಸತ್ತೆಗಿಂತ ಸಂಶ್ರಿತರನ್ನು ರಕ್ಷಿಸುವ ಸಂಕಲ್ಪವೇ ಇವನಿಗೆ ಅತ್ಯಂತ ಅಭಿಮತವೆಂಬುದು 'ಏಕ'—ಪದದ ಅಭಿಪ್ರಾಯ. ಇದೇ ಇಲ್ಲಿ ಸೂಚಿತ ವಾದ ಪ್ರಾಧಾನ್ಯ. "ಅಪ್ಯಹಂ ಜೀವಿತಂ ಜಹ್ಯಾಂ ತ್ವಾಂ ವಾಸೀತೇ ಸಲಕ್ಷ್ಮಣಾಂ । ನ ತು ಪ್ರತಿಜ್ಞಾಂ ಸಂಶ್ರುತ್ಯ ಬ್ರಾಹ್ಮಣೇಭ್ಯೋ ವಿಶೇಷತಃ॥"—ಎಂದು ತಾನೇ ಎಂದಿದ್ದಾನೆ. "ದದಾಮ್ಯೇತದ್ವ್ರತಂ ಮಮ"—ಎಂದೂ ಹೇಳಿದ್ದಾನೆಯಷ್ಟೆ? "ಕಾಮಮಾತ್ಮಾನಂ ಭಾರ್ಯಾಂ ಪುತ್ರಂ ವೋಪರುಂಧ್ಯಾನ್ನತ್ವೇವ ದಾಸಕರ್ಮಕರಂ......"—ಎಂದಿದ್ದಾರೆ. ಆಪಸ್ತಂಬರೂ, 'ದೀಕ್ಷಾ'—ಶಬ್ದದಿಂದ ಆಶ್ರಿತಸಂರಕ್ಷಣವೇ ಭಗವಂತನಿಗೆ ಸ್ವಂತ ಪ್ರಯೋ ಜನದಂತೆಯೆಂದೂ ಫಲಿತ. ಹೇಗೆಂದರೆ, ಕೈಗೊಂಡ ವ್ರತ (ದೀಕ್ಷಾ) ಭ್ರಂಶವಾದಲ್ಲಿ ಹಾನಿ ಯಜಮಾನನಿಗೇ. ವ್ರತ ಸಮಾಪ್ತಿಗೊಂಡರೆ ಅಭ್ಯುದಯವೂ ಯಜಮಾನನಿಗೇ

ಅಲ್ಲವೆ! ಪ್ರಕೃತ ' ವಿನತ, ರಕ್ಷಾ '—ಶಬ್ದಗಳಿಂದ ಮೂರು ಮತ್ತು ನಾಲ್ಕನೇ ಅಧ್ಯಾಯಗಳ, ಅಂದರೆ ಉತ್ತರ ದ್ವಿಕದ ಅರ್ಥವೂ ಸಂಕ್ಷಿಪ್ತ.

ಜಗತ್ಕಾರಣತ್ವ—ಮೋಕ್ಷ ಪ್ರದತ್ವಗಳು ರಾಜನಿಗೆ ಛತ್ರಚಾಮರಗಳು ಹೇಗೋ ಹಾಗೆ ಭಗವಂತನಿಗೆ ಅಸಾಧಾರಣ ಚಿಹ್ನೆಗಳು. ಪರತ್ವ—ಸೌಲಭ್ಯಗಳೆರಡೂ ಭಗವಂತನ ಆಶ್ರಯಣೀಯತೆಗೆ ನಿಮಿತ್ತ. "ಸರ್ವಲೋಕಮಹೇಶ್ವರಂ"—"ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂಶಾಂತಿ ಮೃಚ್ಛತಿ" ಎಂಬ ಭಗವದ್ವಚನಗಳು ಕ್ರಮವಾಗಿ ಅವನ ಪರತ್ವ—ಸೌಲಭ್ಯಗಳಿಗೆ ಪ್ರಮಾಣಗಳಾಗಿವೆ.

3. ಪ್ರಮೇಯ ಸಿದ್ಧಿಯು ಪ್ರಮಾಣಕ್ಕೆ ಅಧೀನವಾದುದರಿಂದ ಪ್ರಮೇಯಕ್ಕೆ ಅನುಗುಣವಾದ ಪ್ರಮಾಣವನ್ನು ಮುಂದೆ ಪ್ರದರ್ಶಿಸಿದ್ದಾರೆ—[ಶ್ರುತಿ ಶಿರಸಿ ವಿದೀಪ್ತೇ] ಎಂದು, (ಶ್ರುತಿ) = ವೇದ, ಇದರಿಂದ ಅಪೌರುಷೇಯತ್ವ = ನಿರ್ದೋಷತ್ವಗಳು ಸೂಚಿತ. ಶ್ರೂಯತೇ ನಿತ್ಯಂ ಇತಿ ಶ್ರುತಿಃ—ಎಂದಿದೆಯಷ್ಟೆ! (ಶ್ರುತಿಶಿರಸಿ ವಿದೀಪ್ತೇ)—ಎಂಬುದರಿಂದ ಅನನ್ಯ ಪರತ್ವವು ವಿವಕ್ಷಿತ. ಪರತ್ವಪ್ರಧಾನವಾದ ಮಂತ್ರ ಬ್ರಾಹ್ಮಣ ಭಾಗಗಳೇ ಉಪನಿಷತ್ತುಗಳು. ಪೂರ್ವಭಾಗದಲ್ಲಿಯ ಅಗ್ನಿ, ಇಂದ್ರಾದಿಗಳ ರೂಪದಲ್ಲಿರುವುದೂ ಪರಬ್ರಹ್ಮವೇ ಎಂದು "ತದೇವಾಗ್ನಿ ಸ್ತದ್ವಾಯುಸ್ತತ್ಸೂರ್ಯಸ್ತದುಚಂದ್ರಮಾಃ"—ಇತ್ಯಾದ್ಯುಪನಿಷದ್ವಾಕ್ಯಗಳಿಂದ ತಿಳಿಯುತ್ತೆ. ಆದ್ದರಿಂದ ಪೂರ್ವಭಾಗದಲ್ಲಿ ಬ್ರಹ್ಮವು 'ದೀಪ್ತಃ.' ಉತ್ತರ ಭಾಗದಲ್ಲಿ ವಿಶೇಷೇಣ + ದೀಪ್ತ = ವಿದೀಪ್ತ; ಅಂದರೆ ವಿಶೇಷವಾಗಿ ಬೆಳಗುವುದೆಂದರ್ಥ. ಇದರಿಂದ ಚತುಸ್ಸೂತ್ರಿಯ ಅರ್ಥವೂ ದ್ಯೋತಿತ,—ವ್ಯುತ್ಪತ್ತಿಸೌಷ್ಠವವಿಲ್ಲದಲ್ಲಿ ಆ ಬ್ರಹ್ಮವು ಶ್ರುತಿ ಶಿರಸ್ಸಿನಲ್ಲಿ (ಉಪನಿಷತ್ತಿನಲ್ಲಿ) ವೇದ್ಯವಾಗುವುದು ಹೇಗೆ? ಹಾಗೆಯೇ ಇಲ್ಲಿಯ ' ಶ್ರುತಿ ಶಿರ 'ಶ್ಶಬ್ದವು ಪ್ರಮಾಣಾಂತರ ವ್ಯಾವರ್ತಕವೂ ಹೌದು.

4. [ಶ್ರೀನಿವಾಸೇ] = ಶ್ರೀಮನ್ನಾರಾಯಣನೆಂಬ

5. [ಪರಸ್ಮಿನ್, ಬ್ರಹ್ಮಣಿ] = ಪರಬಹ್ಮದಲ್ಲಿ. ಇಲ್ಲಿ ' ಪರಸ್ಮಿನ್ '—ಎಂಬುದರಿಂದ "ಪರಮತಸ್ಸೇತೂನ್ಮಾನ"—ಎಂಬ ಅಧಿಕರಣದ ಅರ್ಥವೂ ಸೂಚಿತ. (ಪರ) = ಉತ್ಕೃಷ್ಟ. ಉಪೇಯಾಂತರ ವ್ಯಾವೃತ್ತಿಯೂ ಇದರಿಂದ ಕಂಡುಬರುತ್ತೆ. "ಬ್ರಹ್ಮವಿದಾಪ್ನೋತಿ ಪರಂ"—ಎಂಬಲ್ಲಿ ಪ್ರಾಪ್ಯವಸ್ತುವನ್ನು "ಪರ"—ಶಬ್ದದಿಂದ ಹೇಳಿದೆ. "ನಸ್ಥಾನತೋಽಪಿ ಪರಸ್ಯ ಉಭಯ ಲಿಂಗಂ ಸರ್ವತ್ರ ಹಿ"—ಎಂಬ ಅಧಿಕರಣದಲ್ಲಿ ಸಿದ್ಧವಾದ ಉಭಯಲಿಂಗತ್ವ ರೂಪ ವೈಲಕ್ಷಣ್ಯವೂ ಇಲ್ಲಿಯ "ಪರಸ್ಮಿನ್"—ಎಂಬುದರಿಂದ ದ್ಯೋತಿತ. ಹೀಗೆ ಉಪೇಯವನ್ನು ಹೇಳಿ ಮುಂದೆ ಉಪಾಯ ಸ್ವರೂಪವನ್ನು—

6. [ಭಕ್ತಿರೂಪಾ, ಶೇಮುಷೀ]—ಎಂದಿದ್ದಾರೆ. ಶೇಮುಷೀ = ಪ್ರಜ್ಞೆ ಅಥವಾ ಜ್ಞಾನ. ' ಭಕ್ತಿರೂಪಾ '—ಎಂಬುದು ವಿಶೇಷ ಶಬ್ದ. "ಛಾಗೋವಾ ಮಂತ್ರ ವರ್ಣಾತ್"—ಎಂಬಲ್ಲಿಯ ಛಾಗಪಶುನ್ಯಾಯವಿಲ್ಲಿ ' ಅಭಿಪ್ರೇತ. ಶೇಮುಷೀ '—ಶಬ್ದದಿಂದ ಯಾದವ ಭಾಸ್ಕರೀಯರ ಜ್ಞಾನ ಕರ್ಮ ಸಮುಚ್ಚಯವಾದದ ವ್ಯಾವೃತ್ತಿ.

'ಭಕ್ತಿರೂಪಾ' ಎಂಬುದರಿಂದ ವಾಕ್ಯಾರ್ಥಜ್ಞಾನ ವ್ಯಾವೃತ್ತಿ "ಶುದ್ಧಭಾವಂಗತೋ ಭಕ್ತ್ಯಾ ಶಾಸ್ತ್ರಾದ್ವೇದ್ಮಿ ಜನಾರ್ದನಂ" "ಭಕ್ತ್ಯಾತ್ವನನ್ಯಯಾ ಶಕ್ಯಃ..."ಇತ್ಯಾದಿಯಲ್ಲಿ ಹೇಳಿರುವಂತೆ ಜ್ಞಾನ ದರ್ಶನ ಪ್ರಾಪ್ತಿಗಳಿಗೆ ಸಾಧನವಾದ ಭಕ್ತಿಯೂ ಇಲ್ಲಿ ವಿವಕ್ಷಿತ. ಕರ್ಮವು ಮೃತ್ಯುತರಣ ಸಾಧನ, ಜ್ಞಾನವು ಅಮೃತಪ್ರಾಪ್ತಿಗೆ ಸಾಧನ, ಎಂಬುದಾಗಿ ಜ್ಞಾನ—ಕರ್ಮಗಳಿಗೆ ಸಮಪ್ರಾಧಾನ್ಯವನ್ನು ಯಾದವರು ಹೇಳುವರು. ದರ್ಶಪೂರ್ಣಮಾಸ ಅಥವಾ ಭಕ್ತಿಯೋಗದ ಫಲೋತ್ಪತ್ತಿಗೆ ಸಹಕಾರಿತ್ವ ಲಕ್ಷಣವಾದ ಆರಾದುಪಕಾರಕತ್ವ (ಆರಾತ್ = ಸಮೀಪ) ರೂಪವಾದ ಅಂಗತ್ವವನ್ನು ಕರ್ಮಕ್ಕೆ ಭಾಸ್ಕರರು ಹೇಳುವರು. ಕರ್ಮಕ್ಕೆ ಸನ್ನಿಪತ್ಯೋಪಕಾರಕತ್ವ (ಒಳ ಹೊಕ್ಕು ಉಪಕಾರಕರ) ರೂಪವಾದ ಅಂಗತ್ವವನ್ನು ಹೇಳುವವರು ಸಿದ್ಧಾಂತಿಗಳು.

7. ಅಹಮಸ್ಮ್ಯಪರಾಧಾನಾಂ ಆಲಯೋಽಕಿಂಚನೋಽಗತಿಃ—ಇತ್ಯಾದ್ಯುಕ್ತ ಪ್ರಕಾರದಿಂದ ತಮ್ಮನ್ನು ಅನುಸಂಧಾನಮಾಡಿಕೊಂಡು [ಮಮ] = ನನಗೆ—ಎಂದಿದ್ದಾರೆ.

8. [ಭವತು] = ಉಂಟಾಗಲಿ. ಭಕ್ತಿಯೇ ಸ್ವಾದುತಮವಾದುದರಿಂದ ಅದೇ ಇಲ್ಲಿ ಪ್ರಾರ್ಥಿತವಾಗಿದೆ. ಅಥವಾ ಭಕ್ತಿ ಎಲ್ಲರಿಗೂ ರುಚಿಸದೆನ್ನುವುದಕ್ಕಾಗಿ [ಮಮ, ಭವತು]—ಮಮ = ಪ್ರತಿಬಂಧಕವಾದ ಪಾಪದಿಂದ ರಹಿತನಾದ ನನಗೆ—ಎಂದರ್ಥ, ಪಿತ್ತವು ಶಾಂತವಾದವನಿಗಲ್ಲವೇ ಹಾಲು ರುಚಿಸುವುದು!

ಈ ಶ್ಲೋಕದಲ್ಲಿ ಶಾಸ್ತ್ರ ಪ್ರತಿಪಾದ್ಯದ ಏಕ ದೇಶವಾದ ಪರಪಕ್ಷ ಪ್ರತಿಕ್ಷೇಪವೂ ಅರ್ಥತಃ ಸೂಚಿತ. "ಜನ್ಮಸ್ಥೇಮ ಭಂಗ..." ಇತ್ಯಾದಿಯಿಂದ ಏಕಕಾಲದಲ್ಲಿ ಸೃಷ್ಟ್ಯಾದಿಗಳನ್ನು ಒಪ್ಪದ ಭಾಟ್ಟರೂ ಪ್ರಾಭಾಕರರೂ ವ್ಯಾವರ್ತಿತರಾಗಿದ್ದಾರೆ. 'ಲೀಲಾ'—ಶಬ್ದದಿಂದ ಸಾಕ್ಷಿಮಾತ್ರೇಶ್ವರವಾದಿಗಳಾದ ಹೈರಣ್ಯಗರ್ಭರನಿರಾಸ. "ವಿನತ ವಿವಿಧ..."—ಇತ್ಯಾದಿಯಿಂದ ಜೀವರೊಳಗೆ ಪರಸ್ಪರ ಭೇದವನ್ನೂ, ಜೀವ—ಬ್ರಹ್ಮ ಭೇದವನ್ನೂ ಒಪ್ಪದ ಬ್ರಹ್ಮಾಜ್ಞಾನವಾದಿಗಳು ಅಪಾಸ್ತರಾಗಿದ್ದಾರೆ. 'ಶ್ರುತಿಶಿರಸಿ'—ಎಂಬುದರಿಂದ ವೇದ ಬಾಹ್ಯರಾದ ಚಾರ್ವಾಕಾದಿಗಳ ನಿರಾಸವಾಗಿದೆ. ಆನುಮಾನಿಕೇಶ್ವರ ವಾದಿಗಳೂ ಇದೇ ಪದದಿಂದ ನಿರಸ್ತರು—'ಬ್ರಹ್ಮಣಿ'—ಎಂಬುದರಿಂದ ಅಬ್ರಹ್ಮಾತ್ಮಕ ಪ್ರಧಾನ—ಪರಮಾಣುಕಾರಣವಾದಿಗಳಾದ ಸಾಂಖ್ಯವೈಶೇಷಿಕಾದಿಗಳು ವ್ಯುದಸ್ತರಾಗಿದ್ದಾರೆ. 'ಶೇಮುಷೀ'—ಶಬ್ದದಿಂದ ಜ್ಞಾನ ಕರ್ಮ ಸಮುಚ್ಚಯೋಪಾಯವಾದಿಗಳಾದ ಯಾದವ ಭಾಸ್ಕರೀಯರು ನಿರಸ್ತರು. 'ಭಕ್ತಿರೂಪಾ'—ಎಂಬುದರಿಂದ ವಾಕ್ಯಾರ್ಥ ಜ್ಞಾನ ಮಾತ್ರಕ್ಕೆ ಉಪಾಯತ್ವವನ್ನೂ ಹೇಳುವವರು ಪ್ರತಿಕ್ಷಿಪ್ತರಾಗಿದ್ದಾರೆ. 'ಶ್ರೀನಿವಾಸ'—ಶಬ್ದದಿಂದ ಪಾಶುಪತಾದಿಗಳೂ ಈಶ್ವರೋತ್ತೀರ್ಣ ಬ್ರಹ್ಮವಾದಿಗಳೂ, ಭೇದಾ ಭೇದವಾದಿಗಳೂ ಪ್ರತಿಕ್ಷಿಪ್ತರಾಗಿದ್ದಾರೆ.

ಶ್ಲೋಕ 2] ಪಾರಾಶರ್ಯವಚಸ್ಸುಧಾಂ ಉಪನಿಷದ್ದುಗ್ಧಾಬ್ಧಿಮಧ್ಯೋದ್ಧೃತಾಂ
ಸಂಸಾರಾಗ್ನಿವಿದೀಪನವ್ಯಪಗತ ಪ್ರಾಣಾತ್ಮ ಸಂಜೀವಿನೀಂ।
ಪೂರ್ವಾಚಾರ್ಯ ಸುರಕ್ಷಿತಾಂ ಬಹುಮತಿ ವ್ಯಾಘಾತದೂರಸ್ಥಿತಾಂ
ಆನೀತಾಂತು ನಿಜಾಕ್ಷರೈಸ್ಸುಮನಸೋ ಭೌಮಾಃ ಪಿಬನ್ತ್ವನ್ವಹಂ॥

**ಸಂಗತಿ**

ಹಿಂದಿನ ಶ್ಲೋಕದಲ್ಲಿ ಈ ಪ್ರಬಂಧಕ್ಕೆ ಪರಮ ಪ್ರಯೋಜನವಾದ ಸಿದ್ಧರೂಪ ಪರಮ ವಿಷಯ ಪ್ರದರ್ಶಿತವಾಯಿತು. ಸಾಧ್ಯರೂಪ ಪ್ರಯೋಜನವೂ 'ರಕ್ಷಾ'—ಪದದಿಂದ ಸಂಕ್ಷಿಪ್ತವಾಗಿ ಪ್ರದರ್ಶಿತವಾಯಿತು. ಇಲ್ಲಿ ಈ ಪ್ರಬಂಧಕ್ಕೆ ಪರಂಪರೆಯಿಂದ ಅವಾಂತರ ವಿಷಯವು ಪರಬ್ರಹ್ಮ, ಸಾಕ್ಷಾತ್ತಾದ ಅವಾಂತರ ಪ್ರಯೋಜನವು ಸಮ್ಯಕ್‌ಜ್ಞಾನ, ಪರಂಪರೆಯಿಂದ ಪರಮ ಪ್ರಯೋಜನವು ಮುಕ್ತಿ. ತಮ್ಮ ವ್ಯಾಖ್ಯೇಯವಾದ ಪಾರಾಶರ್ಯವಚಸ್ಸುಧೆಗೆ ಮೂಲ ಉಪನಿಷತ್ತೆಂದಿರುವುದರಿಂದ ವ್ಯಾಖ್ಯೇಯಾಂತರಗಳು ಸಪ್ರಮಾಣಗಳಲ್ಲ. ತಮ್ಮ ಭಾಷ್ಯಕ್ಕೆ ಸಾಂಪ್ರದಾಯಕತ್ವವನ್ನು ಹೇಳಿರುವುದರಿಂದ ಭಾಷ್ಯಾಂತರವ್ಯಾವೃತ್ತಿ—ಎಂಬಿವೇ ಮುಂತಾದುದು ಹೇಳಲ್ಪಡುತ್ತವೆ. ಸ್ತುತ್ಯಾತ್ಮಕ ಗುರೂಪಾಸನರೂಪ ಮಂಗಳವೂ ಅರ್ಥತಃ ಆಚರಿಸಲ್ಪಟ್ಟಿದೆ.

"ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ।
ಉಪದೇಕ್ಷ್ಯನ್ತಿತೇ ಜ್ಞಾನಂ ಜ್ಞಾನಿನಃ ತತ್ತ್ವದರ್ಶಿನಃ ॥"

"ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾನ್ತಿ ತೇ" ಇತ್ಯಾದಿಯಿಂದ ಆಚಾರ್ಯೋಪಸತ್ತಿಗೂ ಭಗವತ್ಕಟಾಕ್ಷವೇ ಮೂಲವೆಂದು ತಿಳಿದುಬಂದಿರುವುದರಿಂದ ಪರದೇವತೋಪಾಸನೆಯ ನಂತರ ಗುರೂಪಾಸನೆಯೆಂಬುದೂ ಯುಕ್ತವೆಂದು ತಿಳಿಯುತ್ತೆ.

"ಯಸ್ಯ ದೇವೇಪರಾಭಕ್ತಿಃ ಯಥಾ ದೇವೇ ತಥಾ ಗುರೌ।
ತಸ್ಯೈತೇ ಪರಮಾಹ್ಯರ್ಥಾಃ ಪ್ರಕಾಶನ್ತೇ ಮಹಾತ್ಮನಃ॥"—ಎಂದು ಶ್ರುತವಾಗಿದೆ.

"ನಮಸ್ಕೃತ್ಯ ಹೃಷೀಕೇಶಂ", "ನಮೋ ಭಗವತೇ ತಸ್ಮೈವ್ಯಾಸಾಯ" ಎಂದಿದ್ದಾರೆ.

ಭಗವದ್ವೈಶಂಪಾಯನರೂ ದ್ರವಿಡಾಚಾರ್ಯರೂ,

"ನಮಃ ಪ್ರವರಗುಣೈಕಾಸ್ಪದಾಯ ಸ್ಥಿರತ್ರಸ ಕುಲ ಬೀಜ ಕುಂಭಭೂತಾಯ ಭುವನಕೋಶಸ್ಯಗೋಪ್ತ್ರೇ ಬ್ರಹ್ಮಣೇ ನಮೋ ಜೈಮಿನಯೇ ವೇದ ರಹಸ್ಯ ಸಂಪುಟ ನಿಗೂಢವಿಷ್ಟಾರಯಿತ್ರೇ ನ್ಯಾಯಪ್ರಜ್ವಲಿತಚೇತಸೇ ನಮೋಽಸ್ಮ್ಯಾಚಾರ್ಯೇಭ್ಯಃ"—ಎಂದಿದ್ದಾರೆ.

**ವಿವರಣೆ**

1. [ಉಪನಿಷತ್—ದುಗ್ಧ—ಅಬ್ಧಿ—ಮಧ್ಯ—ಉದ್ಧ ತಾಂ] =ಉಪನಿಷತ್ತೆಂಬ ಕ್ಷೀರ—ಸಮುದ್ರದ—ಮಧ್ಯದಿಂದ—ಮೇಲಕ್ಕೆ ಎತ್ತಲ್ಪಟ್ಟ—ಎಂದರ್ಥ. ಉಪನಿಷತ್ತಿನ ಮೂಲಕ ಇದಕ್ಕೆ ಬ್ರಹ್ಮನೇ ವಿಷಯ "ಬ್ರಹ್ಮಣಿ ಉಪನಿಷಣ್ಣಾ ಇತ್ಯುಪನಿಷತ್," "ಉಪನಿಷಣ್ಣತ್ವಾದ್ವಾ—ಉಪನಿಷತ್ ಇತಿ ಹಿವಾಕ್ಯಂ" "ಗಹನೇಹೀಯಂ ವಿದ್ಯಾ ಸನ್ನಿವಿಷ್ಟಾ"—ಎಂದು ಈ ವಿಷಯದಲ್ಲಿ ದ್ರವಿಡ ಭಾಷ್ಯವಿದೆ.

ನೇರವಾಗಿ ಭಗವಂತನನ್ನು ಪ್ರತಿಪಾದಿಸುವಿಕೆಯೇ ಉಪನಿಷಣ್ಣತ್ವ (ದುಗ್ಧ = ಕ್ಷೀರ)-ದುಗ್ಧ-ಶಬ್ದದಿಂದ ಪೂರ್ವಭಾಗಕ್ಕಿಂತ ಉತ್ತರ ಭಾಗವಾದ ಉಪನಿಷತ್ತು ಸಾರತರವೆಂದು ಭಾವ. "ಆರಣ್ಯಕಂ ಚ ವೇದೇಭ್ಯಃ ಓಷಧೀಭ್ಯೋ ಯಥಾಽಮೃತಂ" —ಎಂದಿದೆ. (ಅಬ್ಧಿ = ಸಮುದ್ರ) ಇದರಿಂದ ಆಲೋಚಿತಗಳಾದ ಉಪನಿಷತ್ತುಗಳು ಅನಂತವೆಂದು ಸೂಚಿತ ['ಮಥ್ಯ']—ಇದರಿಂದ ಸರ್ವ ವಾಕ್ಯಗಳಿಗೂ ಮುಖ್ಯಾರ್ಥಕ್ಕೆ ಪರಿತ್ಯಾಗವಿಲ್ಲವೆಂದು ಭಾವ 'ಮಥ್ಯ'-ವೆಂಬುದು ಎಲ್ಲ ಕಡೆಗಳಿಗೂ ಸಮವಾದುದಷ್ಟೆ! (ಉದ್ಧೃತಾಂ)—ಎಂಬುದರಿಂದ ನಿಶ್ಶೇಷವಾದ ಅರ್ಥಗ್ರಹಣವು ಸೂಚಿತ. ತಮ್ಮ ಗ್ರಂಥಕ್ಕೆ (ಭಾಷ್ಯಕ್ಕೆ) ಅವಾಂತರ ವಿಷಯವು ಪಾರಾಶರ್ಯ ಸೂತ್ರಗಳು. ಅದಕ್ಕೆ ಅವಾಂತರ ವಿಷಯ ಉಪನಿಷತ್ತು ಅದಕ್ಕೆ ವಿಷಯವಾದುದು 'ಬ್ರಹ್ಮ'—ಎಂದು ಪರಂಪರೆಯಿಂದ ಬ್ರಹ್ಮವೇ ಪ್ರತಿಪಾದ್ಯ. ಬಾದರಾಯಣ ಸೂತ್ರಗಳಿಗೆ ಉಪನಿಷತ್ತು ಮೂಲವೆಂದಿರುವುದರಿಂದ ಸಾಂಖ್ಯಾದಿ ಗ್ರಂಥಗಳು ಪ್ರಮಾಣ ಮೂಲಕಗಳಲ್ಲವಾದ್ದರಿಂದ ಅವುಗಳಲ್ಲಿ ಅನಾದರದಿಂದ ಈ ವ್ಯಾಖ್ಯಾನವೆಂಬುದು ಸೂಚಿತ

ಮುಂದೆ ಶಾಸ್ತ್ರಜನ್ಯವಾದ ಪರಮ ಪ್ರಯೋಜನವನ್ನು ಹೇಳುತ್ತಾರೆ—

2 [ಸಂಸಾರ-ಅಗ್ನಿ-ವಿದೀಪನ-ವ್ಯಪಗತಪ್ರಾಣ-ಆತ್ಮ-ಸಂಜೀವಿನೀಂ] ಎಂದರೆ ಸಂಸಾರವೆಂಬ ಅಗ್ನಿಯು ಉರಿಯುವಿಕೆಯಿಂದ—ಪ್ರಾಣ ಕಳೆದುಕೊಂಡವರಾದ ಚೇತನರನ್ನು—ಬದುಕಿಸತಕ್ಕ—ಎಂದರ್ಥ "ಸಂಸಾರಾಗ್ನಿ"—ಎಂಬುದರಿಂದ ಸಂಸಾರವು ಪೂರ್ತಿ ತಾಪತ್ರಯ ರೂಪವೆಂದು ಭಾವ "ಸ್ವರ್ಗೇಽಪಿ ಪಾತಭೀತಸ್ಯ ಕ್ಷಯಿಷ್ಣೋಃ ನಾಸ್ತಿ ನಿರ್ವೃತಿಃ"—ಎಂದಿದೆಯಷ್ಟೆ! ಅಲ್ಲದೆ,

(1) "ಆರೋಗ್ಯಮಿಂದ್ರಿಯಪಾಟವಮ್ ಐಶ್ವರ್ಯಂ ಶತ್ರುಶಾಲಿತಾ।
ವಿಯೋಗೋ ಬಾಂಧವೈರಾಯುಃ ಕಿಂ ತದ್ಯೇನಾತ್ರ ತುಷ್ಯತಿ"—

(2) ವ್ಯಾಘ್ರೀವ ತಿಷ್ಠತಿ ಜರಾಪರಿತರ್ಜಯಂತೀ
ರೋಗಾಶ್ಚ ಶತ್ರವ ಇವ ಪ್ರಹರಂತಿ ದೇಹೇ।
ಆಯುಃ ಪರಿಸ್ರವತಿ ಭಿನ್ನಘಟಾದಿವಾಂಭಃ
ಲೋಕಸ್ತಥಾಪ್ಯಹಿತ ಮಾಚರತೀತಿ ಚಿತ್ರಂ ॥"

(3) ಭೋಗಾರ್ಹೇ ನವಯೌವನೇಽಪಿ ವಿಪಿನೇ ಚೀರಾಂಬರೋ ರಾಘವಃ
ತತ್ರಾಪ್ಯಸ್ಯ ಪರೇಣ ದಾರಹರಣಂ ಕ್ಲೇಶಸ್ತದನ್ವೇಷಣೇ!
ಸಂಪ್ರಾಪ್ತಾಪಿ ಪರಾಪವಾದ ರಜಸಾ ತ್ಯಕ್ತಾಪುನರ್ಜಾನಕೀ
ಕಿಂ ತತ್ರಾಸ್ತಿ ಸುಖಾಸ್ಪದಂ ಭುವಿನೃಣಾಂ, ಶ್ಲಾಘ್ಯೋ ವಿವೇಕೋದಯಃ"

—ಇತ್ಯಾದಿ ಶ್ಲೋಕಗಳು ಇಲ್ಲಿ ಅನುಸಂಧೇಯಗಳು. ಮೇಲೆ ಕೊನೆಯ ಶ್ಲೋಕದಲ್ಲಿ ಹೇಳಿರುವಂತೆ ಶ್ರೀ ರಾಮಚಂದ್ರನಿಗೇ ಹಾಗಾದಲ್ಲಿ ಮಿಕ್ಕವರ ಪಾಡು ಹೇಳತಕ್ಕದ್ದೇನು?

(ವಿದೀಪನ)—ಎಂದರೆ, ಆ ಸಂಸಾರಾಗ್ನಿಯು ಸದಾ ವಿವಿಧವಾಗಿ ಉರಿಯುತ್ತಿರುವುದರಿಂದ, (ವಿ-ದೀಪನ) ಉಪಾಸನಕ್ಕೆ ಮುಂಚೆ, ಎಂದೂ ಆರತಕ್ಕದ್ದಲ್ಲವೆಂದು ಭಾವ.

[ಪ್ರಾಣ = ಪರಮಾತ್ಮಾ]—"ಸರ್ವಾಣಿ ಹವಾ ಇಮಾನಿ ಭೂತಾನಿ ಪ್ರಾಣಃ ಮೇವಾಭಿಸಂವಿಶಂತಿ." "ಕೋಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್॥" ಇತ್ಯಾದಿಯಾಗಿ ಶ್ರುತವಾಗಿದೆಯಷ್ಟೇ! (ವಿ + ಅಪ + ಗತ) ಗತ = ಅಲಾಭ. 'ವಿ + ಅಪ'—ಎಂಬೆರಡು ಉಪಸರ್ಗಗಳಿಂದ ಅದು ಅನಾದಿ ಮತ್ತು ವಿವಿಧವೆಂದು ಸೂಚಿತ, ಜ್ಞಾನ, ದರ್ಶನ ಪ್ರಾಪ್ತಿಗಳಲ್ಲಿ ಒಂದೂ ಇಲ್ಲವೆಂದು ಅಲಾಭದ ವೈವಿಧವು ಸೂಚಿತ. ಇಂತಹ 'ಆತ್ಮ'ರಿಗೆ (ಸಂಜೀವಿನೀಂ) = ಸಂಸಾರದಿಂದ ಬಿಡುಗಡೆ ಯನ್ನು ತರತಕ್ಕದ್ದಾದ—ಎಂದರ್ಥ. (ಸಂ + ಜೀವಿನೀಂ) = ಸಂ = ಎಂಬುದರಿಂದ ಕೈವಲ್ಯಾಗಳ ವ್ಯಾವೃತ್ತಿ.

ಅನಂತರ ಸಾಂಪ್ರದಾಯಿಕತ್ವವನ್ನು ಹೇಳುತ್ತಾರೆ—

3. [ಪೂರ್ವಾಚಾರ್ಯಸುರಕ್ಷಿತಾಂ] = ಪೂರ್ವಾಚಾರ್ಯರಿಂದ ಚೆನ್ನಾಗಿ ರಕ್ಷಿಸಲ್ಪಟ್ಟ- 'ಪೂರ್ವ' ಶಬ್ದದಿಂದ ಅರ್ವಾಚೀನರಾದ ಶಂಕರಾದಿಗಳ ವ್ಯಾವೃತ್ತಿಯು ಫಲಿತ. [ಸುರಕ್ಷಿತಾಂ] = ಉಪದೇಶ ಮಾತ್ರದಿಂದಲ್ಲದೆ ಗ್ರಂಥ ರೂಪದಿಂದಲೂ ರಕ್ಷಿತವೆಂಬುದು 'ಸು'—ಎಂಬುದರ ಅರ್ಥ.

ಪೂರ್ವಾಚಾರ್ಯರುಗಳ ಗ್ರಂಥದಿಂದಲೇ ಅರ್ಥಸ್ವರೂಪ ತಿಳಿಯುವುದಾದಲ್ಲಿ ನೀವು ಮಾಡತಕ್ಕದ್ದೇನಿದೆ?—ಎಂದರೆ,

4. [ಬಹುಮತಿ-ವ್ಯಾಘಾತ-ದೂರ-ಸ್ಥಿತಾಂ] 'ಬಹು' = ಅನೇಕ ವಿಧ ಅಥವಾ ಅನೇಕ ಮಂದಿಗಳ, (ಮತಿ) = ಬುದ್ಧಿಗಳ (ವ್ಯಾಘಾತ) = ಪರಸ್ಪರ ವಿರೋಧದಿಂದ ಆಗುವ ಸಮಿಾಚೀನಾರ್ಥ ವ್ಯಾಘಾತದಿಂದಲೂ ಕೂಡ (ದೂರಸ್ಥಿತಾಂ) = ಈಗಿನ ಜನರಿಗೆ ತಿಳಿಯಲಸಾಧ್ಯವಾದ, ಯಥಾರ್ಥ ಜ್ಞಾನವಿಲ್ಲದುದು ಮಾತ್ರವಲ್ಲ, ಅನ್ಯಥಾ ಜ್ಞಾನವೂ ಉಂಟೆಂದು ಭಾವ.

ಸೂತ್ರಾದ್ಯವಾಂತರ ವಿಷಯುವನ್ನುಳ್ಳದ್ದು ತಮ್ಮ ಗ್ರಂಥವೆನ್ನುವುದಕ್ಕಾಗಿ,

5. [ನಿಜಾಕ್ಷರೈಃ] = ಸುಧಾ ಪಕ್ಷದಲ್ಲಿ ಗಾಯತ್ರಿಯ ಅವಯವ ಭೂತವಾದ ಅಮೃತಾಕ್ಷರಗಳಿಂದವೆಂದು ಭಾವ. ಆದ್ದರಿಂದ 'ಮಮಾಕ್ಷರೈಃ"—ಎಂದಿಲ್ಲ.

6. [ಆನೀತಾಂ] = ತರಲ್ಪಟ್ಟ

7. [ಪಾರಾಶರ್ಯ-ವಚಃ ಸುಧಾಂ]—ವ್ಯಾಸರ ವಾಕ್ಕೆಂಬ—ಅಮೃತವನ್ನು—ಎಂದರ್ಥ. 'ಪಾರಾಶರ್ಯ'—ಶಬ್ದದಿಂದ "ಸಹೋವಾಚ. ವ್ಯಾಸಃ ಪಾರಾಶರ್ಯಃ" —ಎಂಬ ಶ್ರುತಿಯಿಂದ ವ್ಯಾಸರ ಜನ್ಮೋತ್ಕರ್ಷವು ಸೂಚಿತ. ಇವರ ವಾಕ್ಕೇ ಸುಧೆ (ಅಮೃತ) ಅಂದರೆ ಅಮೃತದಂತೆ ಭೋಗ್ಯ. ಇಲ್ಲಿ (ವಚಃ)—ಎಂಬುದಕ್ಕೆ ಅರ್ಥದಲ್ಲಿ ತಾತ್ಪರ್ಯ. 'ವೇದವಿತ್', 'ಶಾಸ್ತ್ರವಿತ್,' ಇತ್ಯಾದಿಗಳಲ್ಲಿ ವೇದಾದಿ ಶಬ್ದಗಳಿರುವ ಹಾಗೆ, ಇದು ಇವರ ಗ್ರಂಥಕ್ಕೆ ಅವಾಂತರ ವಿಷಯ.

8. [ಭೌಮಾಃ ಸುಮನಸಃ ಅನ್ವಹಂ ಪಿಬಂತು] = (ಭೌಮಾಃ) = ಭೂಮಿ ಯಲ್ಲಿರುವ. (ಸುಮನಸಃ) = ವಿದ್ವಾಂಸರು, ಸಾರಾಸಾರ ವಿವೇಕವುಳ್ಳವರು. ಇದರಿಂದ

ಅಸತ್ತುಗಳು ಪರಿಗ್ರಹಿಸದಿದ್ದಲ್ಲಿ ದೋಷವಿಲ್ಲವೆಂದು ಭಾವ. ದೇವತೆಗಳಿಗೆ ವೃತ್ತಿಕಾರ ಗ್ರಂಥಾದಿಗಳಿಂದಲೇ ಸುಗಮವಾಗಿರುವುದರಿಂದ (ಭೌಮಾಃ)—ಎಂದಿದ್ದಾರೆ. (ಅನ್ವಹಂ) = ನಿತ್ಯವೂ (ಪಿಬಂತು) = ಸೇವಿಸಲಿ. ರಸ್ಯತಾತಿಶಯದಿಂದ ದಿನದಿನವೂ ಪಾನ ಮಾಡಿದಾಗ್ಯೂ, ತೃಪ್ತಿಯಿಲ್ಲವೆನ್ನುವುದಕ್ಕಾಗಿ, (ಅನ್ವಹಂ) ಎಂದಿದೆ. ಫಲಾಂತರಕ್ಕಿಂತ ಭಗವತ್ಪ್ರಾಪ್ತಿಗೆ ಉಪಾಯಭೂತವಾದುದೇ ಸ್ವಾದುತಮವಷ್ಟೆ! "ಶ್ವನಾಕ ಪೃಷ್ಠ ಗಮನಂ ಪುನರಾವೃತ್ತಿ ಲಕ್ಷಣಂ। ಶ್ವಜಪೋ ವಾಸುದೇವೇತಿ ಮುಕ್ತಿ ಬೀಜಮನುತ್ತಮಂ" ಎಂದಿದೆಯಷ್ಟೆ! ಅಥವಾ, ಬಹುಗಂಭೀರವಾದುದರಿಂದ ದಿನವೂ ಸೇವಿಸತಕ್ಕದ್ದೆಂದೂ ಭಾವ.

ಹಾಗಾದಲ್ಲಿ ಪುರಾತನ ಗ್ರಂಥಗಳೇ ಸಾಕಲ್ಲವೇ?—ಅಪೂರ್ವ ಗ್ರಂಥ ನಿರ್ಮಾಣ ಕ್ಕಾಗಿ ಪ್ರಯಾಸವೇಕೆ?—ಎಂದು ಶಂಕಿಸುವಲ್ಲಿ, ಹೇಳುತ್ತಾರೆ—

" [ಭಗವದ್ಬೋಧಾಯನ ಕೃತಾಂ ವಿಸ್ತೀರ್ಣಾಂ ಬ್ರಹ್ಮಸೂತ್ರವೃತ್ತಿಂ ಪೂರ್ವಾ-ಚಾರ್ಯಾಃ ಸಂಚಿಕ್ಷಿಪುಃ ತನ್ಮತಾನುಸಾರೇಣ ಸೂತ್ರಾಕ್ಷರಾಣಿ ವ್ಯಾಖ್ಯಾಸ್ಯಂತೇ "]— ಎಂದು ಇಲ್ಲಿ 'ಭಗವತ್' ಶಬ್ದವು ಪರಮಾಪ್ತತೆಯನ್ನು ಸೂಚಿಸುತ್ತೆ. 'ಬೋಧಾಯನ' —ಶಬ್ದದಿಂದ 'ಪೂರ್ವಾಚಾರ್ಯ'—ಶಬ್ದವೂ ಅರ್ಥಾತ್ ವಿವೃತ, ಮತಾಂತರ ಪ್ರವರ್ತಕರು ಅನಾಪ್ತರೆಂದೂ ಇದರಿಂದ ಸೂಚಿತ.

ಭಗವದ್ಬೋಧಾಯನರ ಬ್ರಹ್ಮಸೂತ್ರವೃತ್ತಿ 10 ಲಕ್ಷಗ್ರಂಥಗಳುಳ್ಳದ್ದು. ಆದ್ದರಿಂದ ಅತಿ ವಿಸ್ತಾರ. ದ್ರಮಿಡ ಭಾಷ್ಯಕಾರಾದಿಗಳ ವ್ಯಾಖ್ಯಾನವು ಅತಿ ಸಂಕ್ಷಿಪ್ತ. ಪರಪಕ್ಷ ಪ್ರತಿಕ್ಷೇಪದ ಗೋಜಿಗೇ ಅವರು ಹೋಗಿಲ್ಲ. ಅತಿ ವಿಸ್ತೃತವೂ, ಅತಿ ಸಂಕ್ಷಿಪ್ತವೂ ಆದ ವ್ಯಾಖ್ಯಾನಗಳು ಚಿರ ಜೀವಿಗಳೂ ಬಲು ಜಾಣರೂ ಇರುವ ದೇಶ ಕಾಲಾದಿಗಳಲ್ಲಿ ಸಫಲವಾಗತಕ್ಕವು. ಅಲ್ಪಾಯುಷ್ಯವೂ, ಯಾವಜ್ಜೀವ ಗ್ರಂಥಪರಿಶ್ರಮಕ್ಕೆ ಬೇಕಾದ ಬುದ್ಧಿ ವಿಶೇಷದ ಶೂನ್ಯತೆಯೂ ಇರುವ ಈಗಿನವರಿಗಾಗಿ ಅದೇ ಪೂರ್ವಾಚಾರ್ಯರ ಮತಾನುಸಾರ, ಪರಮತನಿರಾಸಾದಿಗಳಿಗಾಗಿ ಅನತಿ ವಿಸ್ತೃತವೂ ಸುಗ್ರಹವೂ ಸೂತ್ರ ಪದಗಳ ಪ್ರಕೃತಿ ಪ್ರತ್ಯಯಗಳ ವಿಭಾಗಾನುಗುಣವೂ ಆದ ವ್ಯಾಖ್ಯಾನವು ಶ್ರೀಭಾಷ್ಯ ಕಾರರಿಂದ ರಚಿಸಲ್ಪಟ್ಟಿದೆ. ಇಲ್ಲಿ "ಸೂತ್ರಾಕ್ಷರಾಣಿ ವ್ಯಾಖ್ಯಾಸ್ಯನ್ತೇ "—ಎಂದು ಪ್ರತಿಜ್ಞೆ ಮಾಡಿರುವುದರಿಂದ, ಮೊದಲಿನ 'ಅಖಿಲ ಭುವನ...'—ಇತ್ಯಾದಿಯಾದ ಮಂಗಳ ಶ್ಲೋಕವು ಸೂತ್ರವ್ಯಾಖ್ಯಾನರೂಪವಲ್ಲದ್ದರಿಂದ ಭಾಷ್ಯದಲ್ಲಿ ಅಂತರ್ಭೂತವಲ್ಲವೆನ್ನ ಕೂಡದು. ಸೂತ್ರತಾತ್ಪರ್ಯಾರ್ಥಪರವೂ ಗ್ರಂಥಪರಿಸಮಾಪ್ತ್ಯಾದಿಗಾಗಿ ಮಂಗಳಾ ಚರಣ ರೂಪವೂ ಆದುದ್ದರಿಂದ ಅದೂ ಭಾಷ್ಯದೊಳಗೇ ಸೇರಿದ್ದೇ ಆಗಿದೆ. ಅದು ಸೂತ್ರ ತಾತ್ಪರ್ಯಾರ್ಥ ಪರವೆಂಬುದು ಶ್ಲೋಕ ವ್ಯಾಖ್ಯಾನದಲ್ಲಿ ಸ್ಪಷ್ಟವಾಗಿದೆ.

"ಪದಚ್ಛೇದಃ ಪದಾರ್ಥೋಕ್ತಿಃ ವಿಗ್ರಹೋ ವಾಕ್ಯಯೋಜನಾ ।
ಆಕ್ಷೇಪಸ್ಯ ಸಮಾಧಾನಂ ವ್ಯಾಖ್ಯಾನಂ ಪಂಚಲಕ್ಷಣಂ ॥"

ಎಂಬ ವ್ಯಾಖ್ಯಾವಿಖ್ಯಾತ ವೈಭವವುಳ್ಳ ವ್ಯಾಖ್ಯಾನವಿದು. ಕಾಶ್ಮೀರದಲ್ಲಿ ಇದನ್ನು ಕೇಳಿದ ಶ್ರೀ ಸರಸ್ವತೀ ದೇವಿಯು ಅತ್ಯಾಶ್ಚರ್ಯಗೊಂಡು, ಇದಕ್ಕೆ 'ಶ್ರೀ ಭಾಷ್ಯ '—

ವೆಂಬ ನಾಮವಿತ್ತು ಶ್ಲಾಘಿಸಿ ಇವರನ್ನು ಶ್ರೀ ಭಾಷ್ಯಕಾರರೆಂಬ ಮಹಿತ ಪದವಿಯಲ್ಲಿ ಅಭಿಷೇಕಿಸಿ ಪೂಜಿಸಿದುದಾಗಿ ಪ್ರಸಿದ್ಧಿಯಿದೆ.

"ಶ್ರುತ್ವಾ ಶ್ರೀಭಾಷ್ಯಮತ್ಯದ್ಭುತಮಿದ ಮಿತಿ ಸಾಭಾರತೀ ಶ್ಲಾಘಮಾನಾ, ಮೂರ್ಧ್ನಾ ತತ್ಪ್ರೀತಿದಾನಂ ಸುಸದೃಶಮಿದ ಮೇವೇತ್ಯಥಾಚಾರ್ಯಾಂ ಸ್ವಕೀಯಾಂ। ದತ್ವಾ ತಸ್ಮೈತುರಂಗಾನನರುಚಿರತಮಾಂ ರಾಜತೀಮಭ್ಯಷಿಂಚತ್ ಸಾಮ್ರಾಜ್ಯೇ ಭಾಷ್ಯಕಾರಾಭಿಧಪದೇ ತತ್ರತಂ ಲಕ್ಷ್ಮಣಾರ್ಯಂ॥"—ಎಂಬ ಶ್ಲೋಕವೂ ಇಲ್ಲಿ ಅನುಸಂಧೇಯ.

ಹೀಗೆ ಶ್ರೀ ಶಾರೀರಕ ಸೂತ್ರಗಳಿಗೆ ಶ್ರೀಸಂಯಮೀಂದ್ರರು ಅನುಗ್ರಹಿಸಿರುವ ವ್ಯಾಖ್ಯಾನವೇ ಮಹರ್ಷಿಮತಾನುಸಾರಿಣಿಯೂ ಮತ್ತು ಒಳ್ಳೆಯ ಜ್ಞಾನವನ್ನು ವೃದ್ಧಿಪಡಿಸತಕ್ಕದ್ದೂ ಆದುದು. ಆದುದರಿಂದ ಇದು ಸುತರಾಂ ಆದರಣೀಯ ವೆಂಬುದು ಸುಸ್ಪಷ್ಟವಾಗಿದೆ. ಇತರ ವ್ಯಾಖ್ಯಾತೃಗಳು ಆರ್ಷ ವ್ಯಾಖ್ಯಾನವನ್ನು ಅತಿ ಲಂಘಿಸಿರುವುದು—'ಉಪಾಸಾತ್ರೈವಿಧ್ಯಾತ್', 'ಸರ್ವತ್ರ ಪ್ರಸಿದ್ಧೋಪದೇಶಾತ್" —"ಭೂಮಾಸಂಪ್ರಸಾದಾದಧ್ಯುಪದೇಶಾತ್", "ದಹರ ಉತ್ತರೇಭ್ಯಃ—"ಇತ್ಯಾದಿ ಗಳಲ್ಲಿ ಸ್ಪಷ್ಟತರ. ಆದುದರಿಂದ

"ನಿರಾಬಾಧಾ ಬೋಧಾಯನ ಪಣಿತಿನಿಷ್ಯಂದ ಸುಭಗಾ,
ವಿಶುದ್ಧೋಪನ್ಯಾಸತ್ಯತಿಭಿದುಕಿ ಶಾರೀರಕ ನಯಾಃ ।
ಅಕುಂಠೈಃ ಕಲ್ಪನ್ತೇ ಯತಿಪತಿನಿಬನ್ಧಾ ನಿಜಮುಖೈಃ
ಅನಿದ್ರಾಣ ಪ್ರಜ್ಞಾರಸ ಧಮನಿ ಮೇಧಾಯ ಸುಧಿಯಾಂ"—ಎಂದು ಶ್ರೀ ದೇಶಿಕರ್‌ರವರು ಇದನ್ನು ಕೊಂಡಾಡಿದ್ದಾರೆ.

ಕ್ಷೀರಾಂಭೋನಿಧಿ ರತ್ನಮಂಟಪ ಮಹಾಸೌವರ್ಣ ಸಿಂಹಾಸನದಲ್ಲಿರುವ ದಿವ್ಯ ದಂಪತಿಗಳು ತಮ್ಮ ಮುಖ ಸೌಂದರ್ಯಾದಿಗಳನ್ನು ನೋಡಿಕೊಳ್ಳಲು ಬೇರೆ ಕನ್ನಡಿಗಳು ಬೇಕಿಲ್ಲ; ಸ್ವಚ್ಛಕ್ಷೀರ ಸಮುದ್ರವೇ ಸ್ಫಟಿಕ ಕನ್ನಡಿಯಾಗಿದೆ ಅವರಿಗೆ. ಹಾಗೆಯೇ ಅವರು ತಮ್ಮ ಗುಣಾದಿಗಳನ್ನು ನೋಡಬೇಕಾದಲ್ಲಿ, ಭಗವದ್ರಾಮಾನುಜರ ಶ್ರೀ ಭಾಷ್ಯಾದಿ ಗಳೇ ಅವರಿಗೆ ಸ್ವಚ್ಛ ರತ್ನಕನ್ನಡಿಯಾಗಿದೆ, ಇತರ ಗ್ರಂಥಗಳು ಹಾಗೆ ಭಗವದ್ಗುಣಗಳನ್ನು ಸ್ವಚ್ಛವಾಗಿ ತೋರಿಸಲಾರವು. ಇದನ್ನು "ಲಕ್ಷ್ಮೀಕಾನ್ತಸ್ಫಟಿಕಮುಕುರೋ ಲಕ್ಷ್ಮಣಾರ್ಯೋಪದೇಶಃ—ಎಂದು—ಶ್ರೀ ದೇಶಿಕರ್‌ರವರು ವರ್ಣಿಸಿದ್ದಾರೆ. ಅಂತಹ ಅಖಿಲ ತಮಃಕರ್ಶನವಾದ ದರ್ಶನ ಶ್ರೀ ವಿಶಿಷ್ಟಾದ್ವೈತ ದರ್ಶನ. ಇದೇ ಸಾಕ್ಷಾತ್ ಭಗವದ್ದರ್ಶನ ವೆಂಬುದೂ. ಶ್ರೀವರದರಾಜಸ್ವಾಮಿಯು ಶ್ರೀಸಂಯಮೀಂದ್ರರಿಗೆ ಶ್ರೀ ಕಾಂಚೀಪೂರ್ಣ ಮೂಲಕ ಅನುಗ್ರಹಿಸಿದುದಾಗಿ ಪ್ರಸಿದ್ಧವಾಗಿರುವ ವಾರ್ತಾಷಟ್ಕದೊಳಗಿನ "ವಿಶಿಷ್ಟಾದ್ವೈತಂ ಸ್ವಂಮತ ಮಹಿ ಚ"—ಎಂಬ ವಾರ್ತೆಯಿಂದಲೂ ಸುವ್ಯಕ್ತ. ಸರ್ವಶ್ರುತ್ಯರ್ಥ—ತತ್ವಾವ ಬೋಧಕತ್ವ ಮತ್ತು ಸರ್ವವಾದಿ ವಿಜಯಾವಹತ್ವ—ಇವು ಈ ಮತದ ಪ್ರಧಾನ ಪ್ರತಿತಂತ್ರವೆನಿಸಿದ—ಚೇತನಾಚೇತನಗಳಿಗೂ ಈಶ್ವರನಿಗೂ ತೋರುವ ಶರೀರ ಶರೀರಿ ಭಾವಸಂಬಂಧವೆಂಬುದಕ್ಕಿರುವ ಪ್ರಾಧಾನ್ಯ.

[ಪ್ರಥಮಾಧ್ಯಾಯದ ಪ್ರಥಮಪಾದ]

## ಜಿಜ್ಞಾಸಾಧಿಕರಣ

### ಸೂತ್ರ ೧—ಅಥಾತೋ ಬ್ರಹ್ಮಜಿಜ್ಞಾಸಾ

**ಸೂತ್ರಾರ್ಥ**—[ಅಥ] = ವೇದದ ಮೊದಲನೆಯ ಭಾಗವಾದ ಕರ್ಮಕಾಂಡದ ಅರ್ಥವನ್ನು ವಿಚಾರಮಾಡಿದ ನಂತರ, [ಅತಃ] = ಆದರಿಂದ, ಕರ್ಮಗಳೆಲ್ಲವೂ ಅಲ್ಪವೂ ಅಸ್ಥಿರವೂ ಆದ ಫಲಗಳುಳ್ಳವು—ಎಂಬ ನಿರ್ಣಯಪೂರ್ವಕವಾಗಿ, ಬ್ರಹ್ಮಜ್ಞಾನ ಅನಂತವೂ ಅಕ್ಷಯವೂ ಆದ ಫಲವುಳ್ಳದ್ದೆಂಬ ಆಪಾತಪ್ರತೀತಿ ಅನುವರ್ತಿಸುವುದರಿಂದ ಅದರ ನಿರ್ಣಯಕ್ಕೋಸ್ಕರ, [ಬ್ರಹ್ಮ ಜಿಜ್ಞಾಸಾ] = ಬ್ರಹ್ಮದ ವಿಚಾರವು (ಮಾಡಲ್ಪಡತಕ್ಕದ್ದು.)

ಇಲ್ಲಿ, ಮುಮುಕ್ಷುವಾದವನು ಕರ್ಮವಿಚಾರಾನಂತರ ಬ್ರಹ್ಮವಿಚಾರವನ್ನು ಮಾಡಬೇಕಾದರೆ ಅದಕ್ಕೆ ಹೇತು—ಕೇವಲ ಕರ್ಮಗಳೆಲ್ಲವೂ ಅಲ್ಪವೂ ಅಸ್ಥಿರವೂ ಆದ ಫಲಗಳನ್ನೇ ಕೊಡತಕ್ಕವು—ಎಂಬ ನಿರ್ಣಯಸಹಿತವಾದ, ಬ್ರಹ್ಮಜ್ಞಾನ ಅನಂತ ಸ್ಥಿರ ಫಲಕವೆಂಬ ಆಪಾತ ಪ್ರತೀತಿ. ಇಲ್ಲಿಯ ಹೇತು ವಿಶಿಷ್ಟಹೇತು. ಏಕೆಂದರೆ, ಕರ್ಮಗಳು ಅಲ್ಪಾಸ್ಥಿರಫಲಕಗಳೆಂಬ ನಿರ್ಣಯವಿಲ್ಲದಿದ್ದಲ್ಲಿ ಕರ್ಮಗಳಲ್ಲಿಯೇ ಮಗ್ನನಾಗಿರುವನೇ ಹೊರತು ಅದನ್ನು ಬಿಟ್ಟು ಬ್ರಹ್ಮ ವಿಚಾರಮಾಡಲು ಮುಮುಕ್ಷುವಾದ ಅಧಿಕಾರಿ ತೊಡಗುವವನಲ್ಲ. ಕರ್ಮಗಳು ಅಲ್ಪಾಸ್ಥಿರಫಲಕಗಳೆಂಬ ನಿರ್ಣಯವಿದ್ದೂ, ಬ್ರಹ್ಮಜ್ಞಾನ ಅನಂತ ಸ್ಥಿರಫಲಕವೆಂಬ ಆಪಾತ ಪ್ರತೀತಿಯಿಲ್ಲದಲ್ಲಿಯೂ ಕರ್ಮವಿಚಾರದಿಂದಲೇ ತೃಪ್ತನಾಗುವನು. ಆದ್ದರಿಂದ ಕರ್ಮ ವಿಷಯಕ ಅಲ್ಪಾಸ್ಥಿರಫಲತ್ವ ನಿರ್ಣಯ ವಿಶಿಷ್ಟ, ಬ್ರಹ್ಮ ವಿಚಾರ ವಿಷಯಕ ಅನಂತಸ್ಥಿರ ಫಲತ್ವ ಆಪಾತಪ್ರತೀತಿಯೇ ಬ್ರಹ್ಮವಿಚಾರಕ್ಕೆ ತೊಡಗುವುದಕ್ಕೆ ಹೇತು.

ಆದ್ದರಿಂದ ಬ್ರಹ್ಮವಿಚಾರವು—ಕರ್ಮವಿಚಾರಾನಂತರ ಕಾಲಿಕ ಕರ್ತವ್ಯ—ಕರ್ಮವಿಚಾರ ಹೇತುಕವಾದ್ದರಿಂದ. ಬ್ರಹ್ಮವಿಚಾರ—ಪಕ್ಷ—ಕರ್ಮವಿಚಾರಾನಂತರ ಕಾಲಿಕ ಕರ್ತವ್ಯವೆಂಬುದು ಸಾಧ್ಯ. ಕರ್ಮವಿಚಾರವೆಂಬುದು ಹೇತು. ಹಾಗೆಯೇ, ಇಲ್ಲಿ

ಬ್ರಹ್ಮಜಿಜ್ಞಾಸಾ—ಎಂಬುದರಿಂದ ಪಕ್ಷ ನಿರ್ದೇಶ.
ಅಥ — —" — ಸಾಧ್ಯನಿರ್ದೇಶ.
ಅತಃ — —" — ಹೇತುಪರಾಮರ್ಶ.

**[ಬ್ರಹ್ಮಜಿಜ್ಞಾಸಾ-ಅಥ-ಅತಃ]**—ಎಂಬುದು ಅನುಮಾನಾಕಾರವಾದ ವಾಕ್ಯ.

ಜಿಜ್ಞಾಸೆ = ಜ್ಞಾತುಂ ಇಚ್ಛಾ—[ತಿಳಿಯಲು ಇಚ್ಛೆ)—ಇಲ್ಲಿ ಇಷ್ಯಮಾಣ ಅಂದರೆ ಇಚ್ಛಿಸಲ್ಪಟ್ಟಿರುವುದು ಜ್ಞಾನ—ಇಚ್ಛೆಗಿಂತ ಇಚ್ಛಿಸಲ್ಪಟ್ಟ ಜ್ಞಾನ ಪ್ರಧಾನವಾದುದರಿಂದ—ಬ್ರಹ್ಮ ಜಿಜ್ಞಾಸಾ—ಎಂಬಲ್ಲಿ ವಿಧಿ ಜ್ಞಾನಕ್ಕೇ ಹೊರತು ಇಚ್ಛೆಗಲ್ಲ. ಇಚ್ಛೆಯು ವಿಷಯ ವೈಲಕ್ಷಣ್ಯವಿದ್ದಲ್ಲಿ ತಾನಾಗಿಯೇ ಹುಟ್ಟುತ್ತೆ. ಅದು ವಿಧಿಸಲ್ಪಡತಕ್ಕದ್ದಲ್ಲ. ಆದ್ದರಿಂದ ಜಿಜ್ಞಾಸಾ ಪದಕ್ಕೆ 'ವಿಚಾರ'ವೆಂಬುದು ಲಾಕ್ಷಣಿಕಾರ್ಥ ವಿಚಾರವೇ

ವಿಧೇಯ. ಈ ವಿಚಾರವು ಪ್ರೀತಿವಿಷಯ. ಇದು ರಾಗದಿಂದ . ಪ್ರಾಪ್ತವಾಗತಕ್ಕದ್ದೆಂದು ತಿಳಿಸುವುದಕ್ಕೋಸ್ಕರ, "ನಿದಿಧ್ಯಾಸಿತವ್ಯಃ" "ವಿಜಿಜ್ಞಾಸಿತವ್ಯಃ "—"ತದ್ವಿಜಿಜ್ಞಾಸಸ್ವ ",—ಎಂಬಿವೇ ಮುಂತಾದ ಶ್ರುತ್ಯನುಸಾರವಾಗಿ ಇಲ್ಲಿಯೂ ' ಜಿಜ್ಞಾಸಾ' —ಎಂಬುದಾಗಿ "ಸನಂತ" ನಿರ್ದೇಶವಿದೆ. " ಇಚ್ಛಾ ನ ವಿಧೇಯಾ, ಇಚ್ಛಾಯಾಃ.

ಇಷ್ಯಮಾಣಪ್ರಧಾನತ್ವಾತ್—ಇತ್ಯಾಕಾರಕವಾದದ್ದು ಇಲ್ಲಿ ಅನುಮಾನ, ವೇದಾಂತಾರ್ಥವಿಚಾರಾತ್ಮಕ ನ್ಯಾಯ ನಿಬಂಧನ ರೂಪಂತು ಶಾಸ್ತ್ರಂಬ್ರಹ್ಮ ಮೀಮಾಂಸಾ—ಎಂದು ಪ್ರಸಿದ್ಧಿಯಿದೆ.

ಅಧಿಕರಣವೆಂಬುದು—"ವಿಷಯಃ ಸಂಶಯ ಶ್ಚೈವ ವಿಚಾರೋನಿರ್ಣಯಸ್ತಥಾ।
ಪ್ರಯೋಜನಂ ಚ ಪಂಚಾಂಗಂ ಪ್ರಾಂಚೋಽಧಿಕರಣಂ ವಿದುಃ ॥"
—ಎಂಬುದಾಗಿ ಐದು ಅಂಗಗಳುಳ್ಳದ್ದು. ಹತ್ತು ಅಂಗಗಳುಳ್ಳದ್ದೆಂದೂ ಆಚಾರ್ಯರುಗಳು ಕೆಳಗಿನ ಶ್ಲೋಕಗಳಲ್ಲಿ ಹೇಳಿರುತ್ತಾರೆ—

" ಸಂಗತಿಃ ವಿಷಯಶ್ಚೈವ ಸಂಶಯೋತ್ಥಾನಕಾರಣಮ್ ।
ಸಂಶಯಸ್ಯ ಪ್ರಕಾರಶ್ಚ ತದರ್ಥಾ ಚ ವಿಚಾರಣಾ॥
ತಸ್ಯಾಂ ಫಲಫಲಿತ್ವಂ ಚ ನ್ಯಾಯೌ ದ್ವೌ ಪಕ್ಷಯೋರ್ದ್ವಯೋಃ ।
ನಿರ್ಣಯಸ್ತತ್ಫಲಂ ಚೇತಿ ಬೋಧ್ಯಾನ್ಯಧಿಕೃತೌ ದಶ ॥"—

**ವಿಷಯ 2 ವಿಧ**

1. ಅಧಿಕರಣದಲ್ಲಿ ಪ್ರತಿಪಾದ್ಯವಾದ ಅರ್ಥ—ಇದು ಪ್ರಧಾನ ವಿಷಯ.
2. ಅದನ್ನು ಪ್ರತಿಪಾದಿಸುವ ಶ್ರುತಿ—ಇದು ಅವಾಂತರ ವಿಷಯ.

ಈ ಪ್ರಥಮಾಧಿಕರಣದಲ್ಲಿಯ ಪ್ರಧಾನ ವಿಷಯ—'ಬ್ರಹ್ಮ ಜಿಜ್ಞಾಸ್ಯ'—ಎಂಬುದು. ಇದಕ್ಕೆ ಪ್ರತಿಪಾದಕ ಅವಾನ್ತರ ವಿಷಯವೆನಿಸಿರುವ ಶ್ರುತಿ;—ಅಂದರೆ ವಿಷಯ ವಾಕ್ಯ—

" ಪರೀಕ್ಷ್ಯಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್ । ನಾ ಸ್ತ್ಯಕೃತಃ ಕೃತೇನ। ತದ್ವಿಜ್ಞಾನಾರ್ಥಂ ಸ ಗುರುಮೇವಾಭಿ ಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ। ತಸ್ಮೈ ಸ ವಿದ್ವಾನ್ ಉಪಸನ್ನಾಯ ಸಮ್ಯಕ್ ಪ್ರಶಾನ್ತ ಚಿತ್ತಾಯ ಶಮಾನ್ವಿತಾಯ। ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್॥ "—ಎಂಬುದು.

**ಸಂಗತಿ**

ಹಿಂದಿನದಕ್ಕೂ ಮುಂದಿನದಕ್ಕೂ ಇರುವ ಪರಸ್ಪರ ಸಂಬಂಧವೇ ಸಂಗತಿ ಯೆಂಬುದು.

ಇದರ ಲಕ್ಷಣ—" ಅನಂತರಾಭಿಧಾನೇಯಾ ಜಿಜ್ಞಾಸಾ ಸ್ಯಾತ್ ಪ್ರಯೋಜಿಕಾ ।
ತದ್ಧೇತು ಜ್ಞಾನ ವಿಷಯ ಸಂಬಂಧಃ ಸಂಗತಿರ್ಮತಾ॥"—ಎಂಬುದು.

ಈ ಸಂಗತಿಯು:—ಶಾಸ್ತ್ರ—ಕಾಂಡ—ದ್ವಿಕ—ಅಧ್ಯಾಯ—ಪಾದ—ಪೇಟಿಕಾ ಅಧಿಕರಣ—ಸೂತ್ರ ರೂಪ ಸಂಬಂಧಿ ಭೇದದಿಂದ 8 ವಿಧವಾಗಿದೆ. ಪ್ರಸ್ತುತ ಪ್ರಥಮಾಧಿಕರಣಕ್ಕೆ—ಇದು ವೇದಾರ್ಥ ವಿಚಾರ ರೂಪವಾದ್ದರಿಂದ ಶಾಸ್ತ್ರಸಂಗತಿ ಅತಿ ಸ್ಪಷ್ಟವಾಗಿದೆ. ವೇದಾಂತಾರ್ಥವಿಚಾರ ರೂಪವಾದ್ದರಿಂದ ಕಾಂಡ ಸಂಗತಿ. ಕಾರಣ ವಿಷಯುವಾದ್ದರಿಂದ ದ್ವಿಕ ಸಂಗತಿ. ಕಾರಣ ವಿಷಯವಾಕ್ಯತರ್ಕರೂಪವಾದ್ದರಿಂದ ಅಧ್ಯಾಯ ಸಂಗತಿ. ಅಯೋಗ ವ್ಯವಚ್ಛೇದ ರೂಪವಾದ್ದರಿಂದ ಪಾದ ಸಂಗತಿ. ಶಾಸ್ತ್ರಾರಂಭಾರ್ಥವಾದ್ದರಿಂದ ಪೇಟಿಕಾ ಸಂಗತಿ—ಅದರಲ್ಲಿಯೂ ಪ್ರತೀತಿ ಜನನಾರ್ಥವಾದ್ದರಿಂದ ಪೇಟಿಕಾ ಪೂರ್ವಭಾಗದೊಡನೆ ಸಂಗತಿ.

ಅಧಿಕರಣಸಂಗತಿಯೆಂಬುದು—

''ಉಪೋದ್ಘಾತಶ್ಚಾಪವಾದಃ ಪ್ರತ್ಯುದಾ ಹೃತಿರೇವ ಚ ।
ದೃಷ್ಟಾನ್ತಾಕ್ಷೇಪಾತಿದೇಶ ಪ್ರಸಂಗಾ ಇತಿ ಸಪ್ತಧಾ॥''

—ಎಂಬ ಪ್ರಕಾರದಿಂದ 7 ವಿಧ. ಪ್ರಕೃತದಲ್ಲಿ, "ಅನ್ತೇ ಹರೌ ತದ್ದರ್ಶನಾತ್ ಸ ವಿಷ್ಣುರಾ ಹಹಿ ತಂ ಬ್ರಹ್ಮೇತ್ಯಾ—ಚಕ್ಷತೇ ತಂ ಬ್ರಹ್ಮೇತ್ಯಾಚಕ್ಷತೇ''—ಎಂಬ ಇದರ ಹಿಂದಿನ ದೇವತಾ ಕಾಂಡದ ಕೊನೆಯ ಅಧಿಕರಣದಲ್ಲಿ ಪ್ರತಿಪನ್ನವಾದ ಸರ್ವದೇವತಾಂತರ್ಯಾಮಿಯಾದ ವಿಷ್ಣುವಿನ ಪರವಾದುದರಿಂದ ಈ ಜಿಜ್ಞಾಸಾಧಿಕರಣಕ್ಕೆ ಇದರ ಪೂರ್ವಾಧಿಕರಣದೊಡನೆ ಸಂಗತಿಯಿದೆ. ಇದನ್ನು ಆಕ್ಷೇಪ ಸಂಗತಿಯೆನ್ನುವರು.

" ಪೂರ್ವಾಧಿಕರಣಸಿದ್ಧಾನ್ತನ್ಯಾಯಸ್ಯಾನುಪಪನ್ನತಾಮ್ ।
ಶಂಕಿತ್ವಾ ಪೂರ್ವಪಕ್ಷ ಸ್ಯೋತ್ಥಾನೇತ್ವಾಕ್ಷೇಪಸಂಗತಿಃ'

ಎಂಬುದು ಆಕ್ಷೇಪ ಸಂಗತಿಯ ಲಕ್ಷಣ. ಇದರಲ್ಲಿಯೂ, " ತಂ ಬ್ರಹ್ಮೇತ್ಯಾಚಕ್ಷತೇ ತಂ ಬ್ರಹ್ಮೇತ್ಯಾಚಕ್ಷತೇ''—ಎಂದು ಪ್ರಾಧ್ಯಾನ್ಯದಿಂದ 2 ಸಲ ಹೇಳಲ್ಪಟ್ಟ "ಬ್ರಹ್ಮ''—ಶಬ್ದವನ್ನು ಹೊಂದಿರುವುಧರಿಂದ ಸೂತ್ರ ಸಂಗತಿಯೆಂಬುದೂ ಸ್ಪಷ್ಟ.

ಈ ಸೂತ್ರಕ್ಕೆ—"ಪರೀಕ್ಷ್ಯ ಲೋಕಾನ್...''—ಇತ್ಯಾದಿಯಾದ ವಿಷಯ ವಾಕ್ಯದ ಪ್ರಕಾರ ಜ್ಯೋತಿಷ್ಟೋಮಾದಿ ಕರ್ಮಗಳನ್ನು ಮಾಡಿ ಸ್ವರ್ಗಾದಿ ಲೋಕಗಳನ್ನು ಹೊಂದಿದವನು ಅಲ್ಲಿ ಕೆಲವು ಕಾಲ ಅತಿಸ್ವಲ್ಪವಾದ ಸುಖವನ್ನು ಅನುಭವಿಸಿದ ಮೇಲೆ ಭೂಲೋಕಕ್ಕೆ ಬೀಳುವನು—ಎಂಬ ಅರ್ಥವನ್ನು ಚೆನ್ನಾಗಿ ಕರ್ಮಕಾಂಡಗಳನ್ನು ವಿಚಾರ ಮಾಡಿ ತಿಳಿದುಕೊಂಡು ಆ ಅಲ್ಪ ಸುಖದಲ್ಲಿ ವೈರಾಗ್ಯಹೊಂದಿ ಬ್ರಹ್ಮಜ್ಞಾನವು ಅನನ್ತ ಸ್ಥಿರ ಫಲಕವೆಂಬ ಆಪಾತ ಪ್ರತೀತಿಯಿಂದ ಬ್ರಹ್ಮದ ಸ್ವರೂಪವನ್ನೂ ಅದಕ್ಕೆ ಉಪಾಯವನ್ನೂ ವಿಚಾರಿಸಿ ತಿಳಿಯುವುದಕ್ಕಾಗಿ ಆಚಾರ್ಯನಲ್ಲಿಗೆ ಹೋಗತಕ್ಕದ್ದೆಂದು ಹೇಳಲಾಯಿತು. ಈ ವಾಕ್ಯದಲ್ಲಿ ಹೇಳಿರುವಂತೆ ವೇದಾಂತ ವಾಕ್ಯಗಳ ಮೂಲಕ ಬ್ರಹ್ಮವಿಚಾರವನ್ನು ಮಾಡಬಹುದೆ ಅಥವಾ ಮಾಡಬಾರದೆ?—ಎಂದು ಸಂಶಯ—ವೇದಾಂತ ವಾಕ್ಯಗಳು ಸಿದ್ಧವಾದ ಬ್ರಹ್ಮವನ್ನು ಬೋಧಿಸುವುವೆಂಬ ನಿಶ್ಚಯವಿದ್ದಲ್ಲಿ ಮಾಡಬಹುದು. ಆ ನಿಶ್ಚಯವಿಲ್ಲದ್ದರಿಂದ ಮಾಡಕೂಡದು ಎಂಬುದು ಪೂರ್ವಪಕ್ಷ—ಏಕೆಂದರೆ, ಬ್ರಹ್ಮ ಶಬ್ದದ ಅರ್ಥವನ್ನು ಅರಿಯಬಹುದಾದರೆ ಈ ಪದಕ್ಕೆ ಇದು ಅರ್ಥವೆಂದು

ತಿಳಿಯಬಹುದು. ಶಬ್ದಕ್ಕೆ ಅರ್ಥವನ್ನು ಅರಿಯುವ ಬಗೆ—ದೊಡ್ಡವರ ವ್ಯವಹಾರಗಳನ್ನು ಕಂಡು ಈ ಶಬ್ದಕ್ಕೆ ಇದು ಅರ್ಥವೆಂದು ನಿಶ್ಚಯಿಸುವುದು ಲೋಕದಲ್ಲಿ ಅನುಭವಸಿದ್ಧವಾಗಿದೆ. ಅದು ಹೇಗೆಂದರೆ—"ಅಶ್ವ"—ಎಂಬ ಪದದ ಅರ್ಥವನ್ನು ಅರಿಯದವನು ಎಲ್ಲೋ ಒಂದು ಕಡೆ ಹೋದಾಗ ಅಲ್ಲಿರುವವನೊಬ್ಬನು ಮತ್ತೊಬ್ಬನನ್ನು ನೋಡಿ "ಅಶ್ವವನ್ನು ಕೊಂಡು ಬಾ, ಅಶ್ವವನ್ನು ಕೊಂಡು ಹೋಗು, ಅಶ್ವವನ್ನು ಕಟ್ಟಿಹಾಕು"—ಎಂದು ಕೆಲವು ಸಲ 'ಅಶ್ವ' ಪದದಿಂದ ವ್ಯವಹರಿಸಿದರೆ, ಅದನ್ನು ಕೇಳಿದ ಮತ್ತೊಬ್ಬನು ಕುದುರೆಯನ್ನು ಕುರಿತೇ ಆಯಾ ಕೃತ್ಯಗಳನ್ನೆಸಗಲು, ಅವನು ಹೇಳಿದ್ದನ್ನೂ ಇವನು ಮಾಡಿದ್ದನ್ನೂ ನೋಡುತ್ತಿದ್ದ ಇಲ್ಲಿಂದ ಹೋಗಿದ್ದ ಮತ್ತೊಬ್ಬನು, 'ಅಶ್ವ'—ಎಂದರೆ ತರುವುದು, ಕೊಂಡೊಯ್ಯುವುದು, ಕಟ್ಟುವುದು, ಮೊದಲಾದ ಕ್ರಿಯೆಗಳೊಡನೆ ಸಂಬಂಧಿಸಿದ ಇಂತಹ ಆಕಾರವುಳ್ಳ ವಸ್ತು ಎಂದು ಅಶ್ವ ಪದದ ಅರ್ಥವನ್ನು ತಿಳಿದುಕೊಳ್ಳುವನು. ಈ ರೀತಿಯನ್ನು ಬಿಟ್ಟರೆ, ಶಬ್ದಕ್ಕೆ ಅರ್ಥವನ್ನು ತಿಳಿಯಬಲ್ಲ ಉಪಾಯ ಮತ್ತೊಂದಿಲ್ಲ. ಮೇಲೆ ಹೇಳಿದ ಈ ವಿಧ ವ್ಯವಹಾರ ಎತ್ತುವುದು, ಹಿಡಿಯುವುದು, ಇಡುವುದು—ಮುಂತಾದ ಕ್ರಿಯೆಗಳೊಡನೆ ಸಂಬಂಧಿಸಿದ ಕಾರ್ಯರೂಪ ವಸ್ತುಗಳ ವಿಷಯವಾಗಿಯೇ ಕಂಡು ಬರುತ್ತೆ. ಆದ್ದರಿಂದ ಈ ವಿಧವಾದ ವಸ್ತುಗಳೇ ಶಬ್ದದಿಂದ ತಿಳಿದುಬರತಕ್ಕವು. ಸಿದ್ಧರೂಪವಾದ ಬ್ರಹ್ಮವೆಂಬುದು ಈ ವಿಧವಾದ ಕಾರ್ಯಗಳಿಗೆ ಯೋಗ್ಯವಲ್ಲದ್ದರಿಂದ ವೇದಾಂತ ವಾಕ್ಯಗಳಿಂದ ಅದನ್ನು ಅರಿಯುವ ನಿಶ್ಚಯವಿಲ್ಲ. ಆದ್ದರಿಂದ ವೇದಾಂತ ವಿಚಾರ ಮಾಡತಕ್ಕದ್ದಲ್ಲ—ಎಂದಲ್ಲಿ,

**ಸಿದ್ಧಾನ್ತ**

ಶಬ್ದಾರ್ಥವನ್ನು ಅರಿಯುವುದಕ್ಕೆ ವೃದ್ಧ ವ್ಯವಹಾರವೇ ಅಲ್ಲದೆ ಆಪ್ತವಾಕ್ಯವೂ ಕಾರಣವಾಗಿ ಕಾಣಿಸುವುದು. ಹೇಗೆಂದರೆ—ಹಿರಿಯರು ಬಾಲಕರನ್ನೆತ್ತಿಕೊಂಡು "ಇದು ಪಶು, ಇದು ಪಕ್ಷಿ, ಇದು ಮರ"—ಎಂದು ತಮ್ಮ ತೋರು ಬೆರಳಿನಿಂದ ಆಯಾ ವಸ್ತುವನ್ನು ತೋರಿಸಿ ಹೇಳಿದರೆ, ಬಾಲಕರೂ ಕೂಡ 'ಪಶು'—ಎಂಬ ಪದಕ್ಕೆ ಇದು ಅರ್ಥ, 'ಪಕ್ಷಿ'—ಎಂಬುದಕ್ಕೆ ಇದು ಅರ್ಥ ವೆಂದು ತಿಳಿದುಕೊಂಡು ಇತರರಿಗೆ ಆ ವಸ್ತುವನ್ನು ತಿಳಿಸುವುದಕ್ಕಾಗಿ ಆಯಾ ಶಬ್ದಗಳನ್ನು ಪ್ರಯೋಗಿಸಿದಲ್ಲಿ, ಅವರೂ ಆ ಶಬ್ದಗಳನ್ನು ಕೇಳಿ ಆ ಅರ್ಥವನ್ನು ಅರಿಯುವುದನ್ನು ಕಂಡು ಈ ಶಬ್ದ ಈ ಅರ್ಥವನ್ನು ಬೋಧಿಸುವುದು ಎಂದು ನಿಶ್ಚಯಿಸಿಕೊಳ್ಳುವುದು ಲೋಕಾನುಭವಸಿದ್ಧವಾದ್ದರಿಂದ, ವೇದಾಂತಗಳಲ್ಲಿಯೂ ವೃದ್ಧರ ವಾಕ್ಯಗಳನ್ನು ಕೇಳಿ ಅರ್ಥವನ್ನು ತಿಳಿಯಬಹುದಾದ್ದರಿಂದ ವೇದಾಂತ ವಾಕ್ಯಗಳಿಂದ ಬ್ರಹ್ಮವಿಚಾರವನ್ನು ಮಾಡಬಹುದೆಂಬುದು—ಸಿದ್ಧಾಂತ.

## 2. ಜನ್ಮಾದ್ಯಧಿಕರಣವತ್.

### ಸೂತ್ರ—ಜನ್ಮಾದ್ಯಸ್ಯ ಯತಃ

**ಪ್ರತಿಪದಾರ್ಥ**—[ಅಸ್ಯ] = ಈ ಜಗತ್ತಿಗೆ [ಜನ್ಮಾದಿ] = ಉತ್ಪತ್ತಿ ಸ್ಥಿತಿ ಲಯಗಳು. [ಯತಃ] = ಯಾವನ ದೆಸೆಯಿಂದಲೋ—[ಅದು ಬ್ರಹ್ಮ]. ಜಗಜ್ಜನ್ಮಾದಿ ಕಾರಣತ್ವವು ಬ್ರಹ್ಮಕ್ಕೆ ಲಕ್ಷಣ—ವೆಂಬುದು ಸಾರಾಂಶ.

THE ACADEMY . SANSKRIT RESEARCH,
MELKOTE-571431,
(KARNATAKA STATE)

**ಸಂಗತಿ**

ಪ್ರಮಾಣಪರೀಕ್ಷೆ ಸಿದ್ಧವಾದ ಮೇಲೆ ಇಲ್ಲಿ ಪ್ರಮೇಯ ಪರೀಕ್ಷಿಸಲ್ಪಟ್ಟಿದೆ. ಹಿಂದಿನ ಅಧಿಕರಣದಲ್ಲಿ ಬ್ರಹ್ಮಜಿಜ್ಞಾಸ್ಯವೆನ್ನಲಾಯಿತು. ಆ ಬ್ರಹ್ಮವೆಂಬುದು ಯಾವುದು?—ಎಂದಲ್ಲಿ ಈ ಅಧಿಕರಣ ಆರಂಭವಾಗಿದೆ—ಇದು ಆಕ್ಷೇಪ ಸಂಗತಿ. ಇನ್ನೂ ಬೇರೆ ಸಂಗತಿಗಳೂ ತೋರುತ್ತವೆ—ಹಿಂದೆ ಬ್ರಹ್ಮದ ಸ್ವರೂಪ ನಿರ್ದೇಶ, ಇಲ್ಲಿ ಬ್ರಹ್ಮದ ಲಕ್ಷಣ ಜನ್ಮಾದಿಕವೆಂದು ಹೇಳಲ್ಪಡುತ್ತೆ.

ಹಿಂದೆ ಸಿದ್ಧಸಾಮಾನ್ಯದಲ್ಲಿ ಶಬ್ದಸಾಮಾನ್ಯವ್ಯುತ್ಪತ್ತಿ ಸಮರ್ಥನ. ಇಲ್ಲಿಯಾದರೋ ಸಿದ್ಧವಿಶೇಷದಲ್ಲಿ ಶಬ್ದ ವಿಶೇಷವಾದ ಬ್ರಹ್ಮಶಬ್ದವ್ಯುತ್ಪತ್ತಿ ಸಮರ್ಥನ.

ಹಿಂದೆ ಶಿಷ್ಯಸಾಮಾನ್ಯಕ್ಕೆ "ತದ್ವಿಜ್ಞಾನಾರ್ಥಂ..."—ಇತ್ಯಾದಿ ಶ್ರುತಿಯಿಂದ ಗುರೂಪದೇಶ ಪ್ರಕಾಶಿತವಾಯಿತು. ಇಲ್ಲಿ ಶಿಷ್ಯ ವಿಶೇಷ ರೂಪ ಪುತ್ರನಿಗೆ ತಂದೆಯಿಂದ ಉಪದೇಶ ಪ್ರಕಾಶಿತವಾಗಿದೆ.

ಹಿಂದೆ ಅಪ್ರತಿಪತ್ತಿಯು ಪೂರ್ವಪಕ್ಷಕ್ಕೆ ಹೇತು. ಇಲ್ಲಿ ವಿಪ್ರತಿಪತ್ತಿ ಹೇತು. ಆದ್ದರಿಂದಲೇ "ವ್ಯುತ್ಪತ್ತ್ಯಭಾವಃ ಪ್ರತಿಪತ್ತಿ ದೌಸ್ಥ್ಯಂ...॥"—ಎಂದಿದೆ.

ಪ್ರಥಮಾಧ್ಯಾಯ ಪ್ರತಿಪಾದ್ಯವಾದ ಶಬ್ದಾರ್ಥ ಸಂಬಂಧ ಪ್ರತಿಪಾದನ ಹಿಂದಿನ ಅಧಿಕರಣದಲ್ಲಿ, ದ್ವಿತೀಯಾಧ್ಯಾಯೋಕ್ತ ಅವಿರೋಧ ಕಥನ ಈ ಅಧಿಕರಣದಲ್ಲಿ ಹೀಗೆ ಎರಡು ಅಧ್ಯಾಯಗಳ ಸಂಗ್ರಹ ರೂಪ ಈ 2 ಅಧಿಕರಣಗಳು.

**ವಿಷಯ ವಾಕ್ಯ**

"ಯತೋವಾ ಇಮಾನಿ ಭೂತಾನಿ ಜಾಯನ್ತೇ—ಯೇನ ಜಾತಾನಿ ಜೀವನ್ತಿ—ಯತ್ಪ್ರಯನ್ತ್ಯಭಿ ಸಂವಿಶನ್ತಿ ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ"—ಎಂಬುದು.

**ಭಾಷ್ಯ**

ಹಿಂದಿನ ಸೂತ್ರದಲ್ಲಿ ಬ್ರಹ್ಮ ವಿಚಾರ್ಯವೆನ್ನಲಾಯಿತು. ಆ ಬ್ರಹ್ಮನು "ಯತೋವಾ ಇಮಾನಿ...॥"—ಇತ್ಯಾದಿ ವಾಕ್ಯದಲ್ಲಿ ಹೇಳಿರುವ ಜಗಜ್ಜನ್ಮಾದಿ ಕಾರಣತ್ವ ರೂಪ ಲಕ್ಷಣದಿಂದ ಅರಿಯಲ್ಪಡತಕ್ಕದ್ದೆಂದು ಈ ಸೂತ್ರದಲ್ಲಿ ಹೇಳಿದೆ.

ಇಲ್ಲಿ "ಜಗಜ್ಜನ್ಮಾದಿ..."ವಾಕ್ಯದಲ್ಲಿ ಹೇಳಿರುವ ಕಾರಣತ್ವವು ಬ್ರಹ್ಮಕ್ಕೆ ಲಕ್ಷಣವಾದೀತೇ ಅಥವಾ ಆಗಲಾರದೆ? ಎಂಬುದು ಸಂಶಯ. ಆಗದೆಂಬುದು ಪೂರ್ವ ಪಕ್ಷ. ಏಕೆಂದರೆ 'ಜಗಜ್ಜನ್ಮ—ಸ್ಥಿತಿ—ಲಯಗಳು ಬ್ರಹ್ಮಕ್ಕೆ ಸಮುದಾಯ ಲಕ್ಷಣವೆಂದಲ್ಲಿ ಇವು ಮೂರೂ ಪರಸ್ಪರ ವಿರುದ್ಧವಾದ್ದರಿಂದ ಒಂದೇ ಬ್ರಹ್ಮವ್ಯಕ್ತಿಯಲ್ಲಿ ಕೂಡಿರಲಾರವು. ಜನಕನೇ ವಿನಾಶಕರನೂ ಆಗುವುದು ಹೇಗೆ? ಪ್ರತ್ಯೇಕ ಲಕ್ಷಣವೆಂದಲ್ಲಿ ಬ್ರಹ್ಮ ವ್ಯಕ್ತಿಗಳೂ ಬೇರೆ ಬೇರೆಯಾಗಿರಲೇಬೇಕು. "ಖಂಡೋ ಮುಂಡಃ ಪೂರ್ಣಶೃಂಗೋಗೌಃ—ಎಂಬಂತೆ,

ಆದ್ದರಿಂದ ವಿಶೇಷಣವಾಗಿಯಾಗಲಿ ಉಪಲಕ್ಷಣವಾಗಲಿ ಈ ಮೂರೂ ಬ್ರಹ್ಮ ಲಕ್ಷಣವಾಗವು. ಉಪಲಕ್ಷಣಪಕ್ಷವೇಕೆ ಘಟಿಸದೆಂದರೆ, ಲೋಕದಲ್ಲಿ "ಯತ್ರಾಯಂ

 Acch. No. 17619

ಸಾರಸಃ ಸ ದೇವ ದತ್ತಕೇದಾರಃ॥ —ಎಂಬಲ್ಲಿಯಂತೆ ಮೂರು ಆಕಾರಗಳು ಅನ್ವಿತವಾದ ರೇರಿಯೇ ಉಪಲಕ್ಷಣಜ್ಞಪ್ತಿಯಿರುವುದು. ಇಲ್ಲಿ ಕೇದಾರತ್ವ ಪ್ರಸಿದ್ಧ. ದೇವದತ್ತೀಯತ್ವ ಅಪ್ರಸಿದ್ಧ—ಸಾರಸ ಸಂಬಂಧ—ಉಪಲಕ್ಷಣವಾದ್ದರಿಂದ ಅದೂ ಪ್ರಸಿದ್ಧವೇ ಸರಿ. ನಿರ್ಗುಣ ವಾದ ಬ್ರಹ್ಮದಲ್ಲಿಯಾದರೋ ಜ್ಞಾತ ಮತ್ತು ಅಜ್ಞಾತಗಳಾದ ಉಪಲಕ್ಷಕಾಕಾರ ವಿಶೇಷ ಸಂಭವಿಸುವುದಿಲ್ಲವಾಗಿ—ವಿಶೇಷಣ ಮತ್ತು ಉಪಲಕ್ಷಣ ಪಕ್ಷಗಳು ಯಾವುದೂ ಘಟಿಸದು. ಹೀಗೆ ಲಕ್ಷಣದ ಅಭಾವದಿಂದ, ಅಲಕ್ಷಿತವಾದುದರಲ್ಲಿ ವಿಚಾರ ಅನ್ಯಾಯವಾದುದರಿಂದ ಬ್ರಹ್ಮವಿಚಾರ ಸಂಭವಿಸದು. ಅಲ್ಲದೆ, ಉಪಲಕ್ಷ್ಯವಾದ ಬ್ರಹ್ಮಜ್ಞಾತವೆಂದಲ್ಲಿ ಜ್ಞಾತ ವಾದ್ದರಿಂದಲೇ ಅದು ಉಪಲಕ್ಷ್ಯವೇ ಆಗದು. ಅಜ್ಞಾತವೆಂದಲ್ಲಿ ಅಜ್ಞಾತವಾದ್ದರಿಂದಲೇ ಉಪಲಕ್ಷ್ಯತ್ವವೂ ಸಂಭವಿಸದು. ಸಾರಸಾದ್ಯುಪಲಕ್ಷಣಕ್ಕೆ ಸಂಬಂಧಿಯಾಗಿ ಜ್ಞಾತವಾದ ಕೇದಾರವೇ ಉಪಲಕ್ಷ್ಯವಷ್ಟೆ!—ಎಂಬೀ ಪೂರ್ವಪಕ್ಷಕ್ಕೆ [ಸಿದ್ಧಾಂತ—ದೇವದತ್ತನೆಂಬವನು ಕಪ್ಪು, ಯುವಾ, ಕುಂಡಲಧರಿಸಿರುವನು—ಎಂಬಲ್ಲಿ ಈ ಮೂರು ವಿಶೇಷಣಗಳನ್ನೂ ಉಳ್ಳವನು ಒಬ್ಬನೇ ಎಂದು ತೋರುವುದು ಅನುಭವಸಿದ್ಧ. ಏಕೆಂದರೆ, ಖಂಡ–ಮುಂಡ-ಪೂರ್ಣಶೃಂಗವಾದುದು ಗೋವು—ಎಂಬಲ್ಲಿಯ ವಿಶೇಷಣಗಳಂತೆ ಈ ವಿಶೇಷಣ ಗಳು ಪರಸ್ಪರ ವಿರುದ್ಧವಲ್ಲ. ಅದರಂತೆಯೇ ಅವಿರುದ್ಧವಾದ ಮೂರು ವಿಶೇಷಣ ಗಳುಳ್ಳ ಬ್ರಹ್ಮವ್ಯಕ್ತಿ ಒಂದೇ ಎಂದು ಇಲ್ಲಿಯೂ ತೋರುವುದು. ವಿಶೇಷಣಗಳು ಬೇರೆ ಬೇರೆಯಾದಷ್ಟಕ್ಕೇ ಅವಕ್ಕೆ ಆಶ್ರಯವಾದ ವಿಶೇಷ್ಯವೂ ಬೇರೆ ಬೇರೆಯಾಗಿರ ಬೇಕೆಂಬ ನಿಯಮವಿಲ್ಲ. ಜನ್ಮಾದಿ ವಿಶೇಷಣಗಳಲ್ಲಿ ತೋರುವ ವಿರೋಧ ಕಾಲ ಭೇದ, ದೇಶ ಭೇದ, ಮುಖ ಭೇದಗಳಿಂದ ಪರಿಹೃತವಾಗುತ್ತವೆ. ಲಕ್ಷಣ ದ್ವಿವಿಧವೆಂದು ವೇದಾನ್ತಿಗಳೆನ್ನುವರು. ಅದು ಯಾವುವೆಂದರೆ, "ಯತೋವಾ ಇಮಾನಿ...॥" ಇತ್ಯಾದಿಕ ವಾದುದೊಂದು. "ಸತ್ಯಂ ಜ್ಞಾನಂ..."—ಎಂಬ ಶೋಧಕವಾಕ್ಯ ಪ್ರತಿಪನ್ನ ಲಕ್ಷಣ ಮತ್ತೊಂದು. ಮೊದಲನೆಯದು ತಟಸ್ಥ ಲಕ್ಷಣ, ಎರಡನೆಯದು ಸ್ವರೂಪ ಲಕ್ಷಣವೆಂದು ಮೃಷಾವಾದಿಗಳೆನ್ನುತ್ತಾರೆ. ಇವೆರಡೂ ಪ್ರಾಯಿಕವಾಗಿ ಸ್ವರೂಪ ಲಕ್ಷಣದಲ್ಲಿಯೇ ಪರ್ಯವಸಿತವೆಂದು ಪ್ರಾಜ್ಞರೆನ್ನುವರು. ಸೃಷ್ಟಿ—ಸ್ಥಿತಿ—ಸಂಹಾರ ಕರ್ತೃಗಳಾದ ಮೂವ ರಿದ್ದಾರೆಂದೂ ಅವರೆಲ್ಲರೂ ಈಶ್ವರರು ಮತ್ತು ಬ್ರಹ್ಮಶಬ್ದವಾಚ್ಯರೆಂದೂ ಹೇಳುವ ಕೆಲವು ಪರವಾದಿಗಳೂ ಇದ್ದಾರೆ. ಅವರಾಡುವ ಪ್ರತ್ಯೇಕೇಶ್ವರತ್ವವನ್ನು ನಿರಸನ ಮಾಡು ವುದಕ್ಕಾಗಿ ಮೂರು ವಿಶೇಷಣಗಳನ್ನು ಶ್ರುತಿ ಕೊಟ್ಟಿರುವುದು. ಸೃಷ್ಟಿ—ಸ್ಥಿತಿ—ಸಂಹಾರ ಕರ್ತೃತ್ವಗಳು ಎಲ್ಲವೂ ಸೇರಿಯೇ ಪರಬ್ರಹ್ಮತ್ವಕ್ಕೆ ನಿಯಾಮಕ. ಆ ಬ್ರಹ್ಮವೆಂಬುದು ನಾರಾಯಣನೆಂದು "ನಾರಾಯಣ ಪರಂಬ್ರಹ್ಮ" ಎಂದು ಶ್ರುತವಾಗಿದೆ.

ಇನ್ನು ಉಪಲಕ್ಷಣಪರವಾದ ಆಕ್ಷೇಪಗಳಲ್ಲಿ—ನಿರ್ಗುಣಬ್ರಹ್ಮದಲ್ಲಿ ಜ್ಞಾತ ಮತ್ತು ಅಜ್ಞಾತ ಆಕಾರಗಳು ಕೂಡುವುದಿಲ್ಲವೆಂಬುದು ನಿರ್ಗುಣರ ಪ್ರಲಾಪವೇ ಸರಿ. ಜಗ ಕ್ಕಾರಣತ್ವಾದಿಯೇ ಬ್ರಹ್ಮದ ಗುಣ. ಅದು ಉಪಲಕ್ಷಣಾಕಾರವೆಂಬುದು ಪ್ರಸಿದ್ಧವೇ ಆಗಿದೆ. ಉಪಲಕ್ಷ್ಯವೂ ಕೂಡ ವೇದತ್ರಯಸಾರ ಭೂತವಾದ ಪುರುಷ ಸೂಕ್ತವೇ ಮುಂತಾದುದರಲ್ಲಿ 'ಪುರುಷ', 'ಪುರುಷ', ಎಂದು ಸಾಮಾನ್ಯವಾಗಿ ಪ್ರಸಿದ್ಧವಾದುದೇ. ಅಪ್ರಸಿದ್ಧವಾದುದೊಂದು ಉಳಿದಿದೆ. ಅದೇ ನಿರತಿಶಯ ಬ್ರಹತ್ತ್ವ—ಬೃಂಹಣತ್ವಗಳಿಂದ

ಬ್ರಹ್ಮವೆನಿಸಿದುದು. ಬೃಹತಿಧಾತುವಿನ ಅರ್ಥವೇ ಅದು. ಇದರಿಂದ ಉಭಯ ಲಿಂಗತ್ವ ವನ್ನು ಹೇಳಿದ ಹಾಗಾಯಿತು. ಕಲ್ಯಾಣಗುಣೈಕತಾನತ್ವವೇ ಬೃಹತ್ತ್ವ. ಅಖಿಲ ಹೇಯ ಪ್ರತ್ಯನೀಕತ್ವವೇ ಬೃಂಹಣತ್ವ. ಇವೆರಡನ್ನೂ "ಗುಣನಿಧಿಃ, ಅಘಜಿತ್"—ಎಂದು ಶ್ರೀಮದಾಚಾರ್ಯರು ಹೇಳಿದ್ದಾರೆ. ಭೃಗುವಲ್ಲಿಯಲ್ಲಿ 'ಬ್ರಹ್ಮಯಾವುದು ?'—ಎಂದು ವಾರುಣಿ ಪ್ರಶ್ನಿಸಿದ್ದಕ್ಕೆ ತಂದೆಯಾದ ವರುಣರು "ಯತರ ದೆಸೆಯಿಂದ ಜಗತ್ಸೃಷ್ಟ್ಯಾದಿಕವು ಪ್ರಸಿದ್ಧವೋ ಅದು ಬ್ರಹ್ಮ"—ಎಂದು ಉತ್ತರಿಸಿದ್ದಾರೆ. ಹೀಗೆ ಉಪಲಕ್ಷಣವಾದ ಜಗತ್ಕಾರಣತ್ವವು "ಯ ತ್ರಾಯಂ ಸಾರಸಃ ಸ ದೇವದತ್ತಕೇದಾರ"—ಎಂಬಲ್ಲಿ ಹೇಳಿರುವ ಸಾರಸಸ್ಥಾನದಲ್ಲಿದೆ. ಪುರುಷಶಬ್ದಿತನಾದ ಶ್ರೀವಿಷ್ಣು ಕೇದಾರ ಸ್ಥಾನವನ್ನು ಅನವಧಿಕಾತಿಶಯ ಬೃಹತ್ತ್ವ–ಬೃಂಹಣತ್ವಾಶ್ರಯರೂಪವಾದ ಬ್ರಹ್ಮಶಬ್ದಾರ್ಥ ದೇವ ದತ್ತ ಸ್ಥಾನಾಪನ್ನ. ಈ ರೀತಿ ಉಪಲಕ್ಷಣ ಪಕ್ಷದ ನಿರ್ವಾಹವನ್ನು ಶ್ರೀಮದಾಚಾರ್ಯರು ಮಾಡಿದ್ದಾರೆ. ನಿರ್ವಿಶೇಷವಾದವೆಂಬುದು ವೇದವಾದಕ್ಕೆ ತಕ್ಕದ್ದಲ್ಲ-ಅದು ಮಾಧ್ಯಮಿಕ ಗೋಷ್ಠಿಗೆ ಮಾತ್ರವೇ ಸರಿ: ನಿರತಿಶಯ ಬೃಹತ್ವ ಬೃಂಹಣತ್ವ ವಿಶಿಷ್ಟವಾದುದು ಬ್ರಹ್ಮವೆಂದು "ಬ್ರಹ್ಮ ಪರಿಬೃಢಂ ಸರ್ವತಃ" "ಬೃಹತಿ ಬೃಂಹಯತಿ ತಸ್ಮಾದುಚ್ಯತೇ ಪರಂ ಬ್ರಹ್ಮ", "ಬೃಹತ್ವಾತ್ ಬೃಂಹಣತ್ವಾಚ್ಚ ತದ್ಬ್ರಹ್ಮೇತ್ಯಭಿಧೀಯತೇ" ಇತ್ಯಾದಿ ಪ್ರಮಾಣಸಿದ್ಧವಾಗಿದ್ದಾಗ್ಯೂ ಈ ಶ್ರುತಿ–ಪುರಾಣಗಳಿಂದ ಹೇಳಲ್ಪಟ್ಟ ಬ್ರಹ್ಮ-ವಿಷ್ಣು-ರುದ್ರಾದಿಗಳಲ್ಲಿ ಅಂತಹ ಪರಬ್ರಹ್ಮ ಇಂಥಾದ್ದು ಎಂಬ ವ್ಯಕ್ತಿ ವಿಶೇಷ ಪರಿಜ್ಞಾನವಿಲ್ಲ. "ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ"—ಎಂಬುದರಿಂದ ಮೊದಲು ತಿಳಿಯದಿದ್ದ ಆ ವಿಶೇಷ ಪರಿಜ್ಞಾನವುಂಟಾಗುತ್ತೆ. ನಿರತಿಶಯ ಬೃಹತ್ವ–ಬೃಂಹಣತ್ವಗಳಿಂದ ಬ್ರಹ್ಮಶಬ್ದ ವಾಚ್ಯತ್ವಾಕಾರವೇ ಉಪಲಕ್ಷ್ಯತ್ವಾಕಾರವೆಂದು ಮೊದಲು ಹೇಳಿಯಾಯಿತು. ಈಗ ಮತ್ತೆ ಆ ಪರಬ್ರಹ್ಮದಲ್ಲಿ ಶ್ರಿಯಃ ಪತಿತ್ವವು ಉಪಲಕ್ಷ್ಯಾಕಾರವೆಂದು ವಿಭಜಿಸಿ "ಶ್ರೀಮತಿ ಬ್ರಹ್ಮತೋಕ್ತೇಃ"—ಎಂದಿದ್ದಾರೆ ಶ್ರೀಮದಾಚಾರ್ಯರು.

ಮತ್ತೆಯೂ ಆಕ್ಷೇಪ-ವಿಶೇಷಣ-ಉಪಲಕ್ಷಣಗಳೆರಡೂ ಪರಸ್ಪರ ವಿರುದ್ಧವಾದುವು —ವಿಶೇಷ್ಯದೊಡನೆ ಸದಾ ಇದ್ದುಕೊಂಡೇ ಅದನ್ನು ತಿಳಿಸಿಕೊಡುವುದು ವಿಶೇಷಣ, ಯಾವುದು ತಾನು ಬಿಟ್ಟು ಹೋದ ಮೇಲೆಯೂ ಕೂಡ ಉಪಲಕ್ಷ್ಯವನ್ನು ತಿಳಿಸಿ ಕೊಡುತ್ತದೆಯೋ ಅದು ಉಪಲಕ್ಷಣ. ಉದಾಹರಣೆಗೆ–"ಶಾಖಾಗ್ರೇ ಚನ್ದ್ರಃ"—ಎಂಬಲ್ಲಿ ಉಪಲಕ್ಷಣವಾದ ಶಾಖಾಗ್ರ ಪ್ರತೀತಿಯಿಲ್ಲದೆಯೂ ಚಂದ್ರ ಕಂಡು ಬರುತ್ತಾನೆ. "ಪ್ರಕೃಷ್ಟ ಪ್ರಕಾಶಃ ಚನ್ದ್ರಃ" ಎಂಬಲ್ಲಿ ವಿಶೇಷಣವಾದ ಪ್ರಕೃಷ್ಟಪ್ರಕಾಶತ್ವವೆಂಬುದು ಚನ್ದ್ರನೊಡನೆಯೇ ನಿತ್ಯವೂ ಕಂಡು ಬರುತ್ತದೆ. ಹೀಗೆ ಪರಸ್ಪರ ವಿರುದ್ಧ ಲಕ್ಷಣಗಳುಳ್ಳ ಉಪಲಕ್ಷಣ ಮತ್ತು ವಿಶೇಷಣ ಎಂಬಿವೆರಡು ವಿಧಗಳಲ್ಲಿಯೂ ಜಗತ್ಕಾರಣತ್ವಾದಿಗಳಿಂದ ಒಂದೇ ಬ್ರಹ್ಮ ಲಕ್ಷ್ಯವಾಗುವುದು ಹೇಗೆ?—ಎಂದರೆ "ಬ್ರಹ್ಮವಿದಾಪ್ನೋತಿ ಪರಂ"—ಇತ್ಯಾದಿಯಿಂದ ಮೋಕ್ಷಕ್ಕಾಗಿ ಬ್ರಹ್ಮ ಉಪಾಸ್ಯವೆನ್ನಲಾಗಿದೆ. ಆ ಬ್ರಹ್ಮ ಯಾವುದೆಂದು ವಿಶೇಷ ಜಿಜ್ಞಾಸೆಯುಂಟಾದಲ್ಲಿ "ಯತೋವಾ ಇಮಾನಿ" ಇತ್ಯಾದಿ ವಾಕ್ಯದಲ್ಲಿ ಜಗತ್ಕಾರಣತ್ವಾದಿ ಲಕ್ಷಣ ಸಂಭವವಿದ್ದ ಹಾಗೆ ವಿಶೇಷಣವಾಗಿಯೂ ಉಪಲಕ್ಷಣ ವಾಗಿಯೂ ಬ್ರಹ್ಮವನ್ನು ಬೋಧಿಸುತ್ತದೆ. ಬ್ರಹ್ಮದ ಗುಣಗಳು ಅನಂತ. ಉಪಾಸನ

ಗಳೂ ೩೨ ವಿಧಗಳಾಗಿವೆ. ಉಪಾಸ್ಯ ಎಲ್ಲ ವಿದ್ಯೆಗಳಲ್ಲಿಯೂ ಒಂದೇ ಆದರೂ ವಿದ್ಯೆ ಅಂದರೆ ಉಪಾಸನ ಭೇದಿಸುವುದರಿಂದ ಉಪಾಸ್ಯಭೇದವೂ ಆದ ಹಾಗೆಯೇ. ಆದ್ದರಿಂದ ಯಾವ ವಿಧವಾದ ಬ್ರಹ್ಮೋಪಾಸನದಲ್ಲಿ ಯಾವ ಗುಣಗಳು ನಿಯತವಾಗಿ ಅನುವರ್ತಿ ಸುತ್ತವೆಯೋ ಅದು ವಿಶೇಷಣಗಳು. ಯಾವ ಗುಣಗಳು ಬ್ರಹ್ಮಪ್ರತಿಪತ್ತಿ ವೇಳೆಯಲ್ಲಿ ಮಾತ್ರ ಕೂಡಿದ್ದು ಉಪಾಸನವೇಳೆಯಲ್ಲಿ ನಿಯತವಾಗಿ ಅನುವರ್ತಿಸುವುದಿಲ್ಲವೋ ಅದು ಉಪಲಕ್ಷಣಗಳು. ಉಪಾಸನಾಂತರಗಳಲ್ಲಿಯೂ ಉಪಾಸ್ಯದ ಸ್ವರೂಪ ಒಂದೇ ಆದಾಗ್ಯೂ ಗುಣಭೇದದಿಂದ ಭಿನ್ನವಾಗಿ ಉಪಾಸ್ಯ ಬಹುಪಾಗುವುದರಿಂದ ಒಂದೊಂದು ಉಪಾಸನ ದಲ್ಲಿ ಕೆಲವು ಗುಣಗಳು ಉಪಾಸ್ಯಕ್ಕೆ ವಿಶೇಷಣವಾಗಿರುವುವೇ ಬೇರೆ ಉಪಾಸನಗಳಲ್ಲಿ ಉಪಾಸ್ಯದ ಉಪಲಕ್ಷಣವೂ ಆಗಿರುತ್ತವೆ. ಅಂದರೆ, "ಕಾರಣಂ ತುಧ್ಯೇಯಃ"—ಎಂಬಂತೆ ಜಗತ್ಕಾರಣತ್ವಾದಿಯು ಧ್ಯೇಯದಲ್ಲಿ ಮಾತ್ರ ಅನುವರ್ತಿಸುತ್ತದೆ."ಹೀಗೆ ಆನಂದಾದಯಃ ಪ್ರಧಾನಸ್ಯ,"—ಎಂಬಂತೆ ಸತ್ಯತ್ವ—ಜ್ಞಾನತ್ವ—ಅನಂತತ್ವ—ಆನಂದತ್ವ—ಅಮಲತ್ವಾದಿಗಳು ಸ್ವರೂಪ ನಿರೂಪಕ ಧರ್ಮಗಳಾದ್ದರಿಂದ ಎಲ್ಲಾ ಉಪಾಸನಗಳಲ್ಲಿಯೂ ಯಾವಾಗಲೂ ಅನುವರ್ತಿಸುತ್ತವೆ. ಆದ್ದರಿಂದ ಅವು ವಿಶೇಷಣಗಳು. ಯಾವ ಧರ್ಮಗಳು ಚಂದ್ರನಲ್ಲಿ ಶಾಖಾಗ್ರದಂತೆ ಆಗಾಗ್ಗೆ ಮಾತ್ರ ಕಾಣಿಸಿಕೊಂಡು ವ್ಯಾವರ್ತಕಗಳೂ ಆಗಿ ಬ್ರಹ್ಮ ದಲ್ಲಿವೆಯೋ ಅದು ಉಪಲಕ್ಷಣಗಳು. ಶ್ರಿಯಃ ಪತಿತ್ವವು ಉಪಲಕ್ಷ್ಯಾಕಾರವಾದ್ದರಿಂದ ಸರ್ವೋಪಾಸನಗಳಲ್ಲಿಯೂ ವಿಷಯುವಾಗಿರುವುದರಿಂದ ನಿತ್ಯ ಅನುಸಂಧೇಯ. ಆದ್ದ ರಿಂದಲೇ "ಶ್ರುತಿ ಶಿರಸಿ ವಿದೀಪ್ತೇ ಬ್ರಹ್ಮಣಿ ಶ್ರೀನಿವಾಸೇ ಭವತು ಮಮ ಪರಸ್ಮಿನ್ ಶೇಮುಷೀ ಭಕ್ತಿರೂಪಾ"—ಎಂದು ಶ್ರೀ ಭಾಷ್ಯಕಾರರೇ ಸರ್ವೋಪಾಸನ ವಿಷಯು ವನ್ನಾಗಿ ಶ್ರಿಯಃ ಪತಿತ್ವವನ್ನು ಹೇಳಿದ್ದಾರೆ.

## 3. ಅಧಿಕರಣಂ—ಶಾಸ್ತ್ರಯೋನ್ಯಧಿಕರಣಂ
## ಸೂತ್ರ—"ಶಾಸ್ತ್ರಯೋನಿತ್ವಾತ್"

### ಅನುಮಾನಾಕಾರ

[ಜಿಜ್ಞಾಸ್ಯಂ ಬ್ರಹ್ಮ। ಶಾಸ್ತ್ರಯೋನಿ—। ಪ್ರಮಾಣಾಂತರಾ ವೇದ್ಯತ್ವೇಸತಿ ವೇದ್ಯ-ತ್ವಾತ್].

### ಆಕ್ಷೇಪ ಸಂಗತಿ

[ಜಗಜ್ಜನ್ಮಾದಿ ಕಾರಣವಾದ ಬ್ರಹ್ಮವೇದಾನ್ತವೇದ್ಯವೆಂದು ಹಿಂದಿನ ಅಧಿಕರಣ ದಲ್ಲಿ ಹೇಳಿದ್ದು ಸರಿಯಲ್ಲ—ಏಕೆಂದರೆ ಅನುಮಾನದಿಂದಲೇ ಬ್ರಹ್ಮ ಸಿದ್ಧಿಸುತ್ತೆ. ಆದ್ದರಿಂದ ಬೇರೆ ಪ್ರಮಾಣದಿಂದ ಕಂಡುಹಿಡಿಯಲಾಗದುದನ್ನು ಮಾತ್ರ ಪ್ರತಿಪಾದಿ ಸುವ ವೇದ ಅದನ್ನು ಹೇಳಲಾರದು]—ಎಂಬುದು.

### ವಿಷಯ ವಾಕ್ಯ

ಇದರಲ್ಲಿಯೂ, "ಯತೋ ವಾ ಇಮಾನಿ ಭೂತಾನಿ ಜಾಯನ್ತೇ"—ಇತ್ಯಾದಿ. ಪ್ರಧಾನವಾದ ವಿಷಯುವೂ ಆದೇ.

**ಅದಕ್ಕಾಗಿ ವಿಚಾರ**

ವೇದಾಂತಗಳು ಬ್ರಹ್ಮದ ಬಗ್ಗೆ ಪ್ರಮಾಣವೇ, ಅಲ್ಲವೆ? ಇದಕ್ಕೋಸ್ಕರ ವಿಚಾರ— ವೇದಾಂತಗಳಿಗೆ ಸಿದ್ಧ ಬ್ರಹ್ಮದಲ್ಲಿ ತಾತ್ಪರ್ಯಲಿಂಗವಿದೆಯೆ, ಇಲ್ಲವೆ? ಇದಕ್ಕಾಗಿ ವಿಚಾರ- ಬ್ರಹ್ಮ ಪ್ರಮಾಣಾಂತರ ಪ್ರಾಪ್ತವೇ, ಅಲ್ಲವೆ? ಅದಕ್ಕಾಗಿ ವಿಚಾರ-ಕಾರ್ಯತ್ವಾದಿ ಲಿಂಗವು ಅನ್ವಯದಿಂದಲಾಗಲಿ, ವ್ಯತಿರೇಕದಿಂದಲಾಗಲಿ ಬ್ರಹ್ಮವನ್ನು ತಿಳಿಸಲು ಶಕ್ತವೇ, ಅಲ್ಲವೆ?—ಮತ್ತೆಯೂ ವಿಚಾರ-ಅನ್ಯಥಾಸಿದ್ಧತ್ವಾದಿ ಹೇತು ದೋಷಗಳು ಜಗತ್ಕರ್ತೃತ್ವವನ್ನು ಸಾಧಿಸುವ ಕಾರ್ಯತ್ವಾದಿ ಹೇತುವಿನಲ್ಲಿ ಸಂಭವಿಸುವುವೆ? ಇಲ್ಲವೆ?

**ಫಲಫಲಿಭಾವ**

"ಕಾರ್ಯತ್ವಾತ್"—ಇತ್ಯಾದಿ ಹೇತುಗಳು ಈಶ್ವರನನ್ನು ಸಾಧಿಸುವುದರಲ್ಲಿ ನಿರ್ದೋಷವಾದ್ದರಿಂದ ಸಾಧಿಸಲು ಶಕ್ತವಾದುವು. ಹೀಗೆ ಈಶ್ವರನು ಪ್ರಮಾಣಾಂತರ ಪ್ರಾಪ್ತನಾದ್ದರಿಂದ ವೇದಾಂತ ವಾಕ್ಯಗಳಿಗೆ ಬ್ರಹ್ಮದಲ್ಲಿ ತಾತ್ಪರ್ಯಲಿಂಗವಿಲ್ಲವಾಗಿ ಅವು ಪ್ರಮಾಣಗಳಲ್ಲ. ಆದ್ದರಿಂದ ಶಾಸ್ತ್ರವನ್ನು ಆರಂಭಿಸಕೂಡದು—ಎಂದು ಪೂರ್ವ ಪಕ್ಷದಲ್ಲಿ ಫಲಫಲಿಭಾವ. ಇದಕ್ಕೆ ವಿಪರೀತ ವರ್ಣನೆಯು ಸಿದ್ಧಾಂತದಲ್ಲಿ ಫಲ-ಫಲಿಭಾವ.

**ಸೂತ್ರಾರ್ಥ**

(ಪ್ರತಿಪದಾರ್ಥ) (ಶಾಸ್ತ್ರಯೋನಿತ್ವಾತ್) = (ಬ್ರಹ್ಮವು) ಶಾಸ್ತ್ರವನ್ನೇ (ವೇದಾಂತ ವಾಕ್ಯಗಳನ್ನೇ) ಕಾರಣ (ಪ್ರಮಾಣ)ವಾಗಿ ಉಳ್ಳದ್ದರಿಂದ.

("ಯತೋವಾ ಇಮಾನಿ"—ಇತ್ಯಾದಿ ವಾಕ್ಯವು ಬ್ರಹ್ಮವನ್ನು ಬೋಧಿಸುವುದು.) ಶಾಸ್ತ್ರವನ್ನು ಬಿಟ್ಟು ಪ್ರತ್ಯಕ್ಷ ಅನುಮಾನ, ಮುಂತಾದ ಇತರ ಪ್ರಮಾಣಾಂತರಗಳಿಗೆ ಬ್ರಹ್ಮ ವಿಷಯವಲ್ಲವಾದ್ದರಿಂದ ವೇದಾಂತವಾಕ್ಯ ಬ್ರಹ್ಮಕ್ಕೆ ಬೋಧಕವಾಗುವುದೆಂದು ತಾತ್ಪರ್ಯ.

**ಭಾಷ್ಯ**

ಉತ್ಪತ್ತಿವಿನಾಶಶಾಲಿಗಳಾದ ಘಟಾದಿ ಪದಾರ್ಥಗಳು ಒಬ್ಬನಿಂದ ಸೃಷ್ಟಿಸಲ್ಪಡು ವಂತೆ, ಉತ್ಪತ್ತಿವಿನಾಶಶಾಲಿಯಾದ ಈ ಜಗತ್ತೂ ಒಬ್ಬನಿಂದ ಸೃಷ್ಟಿಸಲ್ಪಟ್ಟೇ ಇರಬೇಕು. ಇದನ್ನು ಸೃಷ್ಟಿಸಲು ಅಲ್ಪಜ್ಞರೂ ಅಲ್ಪ ಶಕ್ತಿಯುಳ್ಳವರೂ ಆದ ಜೀವರುಗಳಿಂದ ಸಾಧ್ಯವಲ್ಲವಾದ್ದರಿಂದ, ಇದಕ್ಕೆ ಕರ್ತೃವಾದವನು ಸರ್ವಜ್ಞನೂ ಸರ್ವಶಕ್ತಿಯುಳ್ಳವನೂ ಆಗಿರಬೇಕು. ಅವನೆ ಬ್ರಹ್ಮವೆನ್ನಲ್ಪಟ್ಟವನು—ಎಂದು ಅನುಮಾನದಿಂದ ಸರ್ವಜ್ಞನೂ ಸರ್ವಶಕ್ತನೂ ಆದ ಈಶ್ವರನೊಬ್ಬನು ಜೀವವಿಲಕ್ಷಣನಾಗಿಯೇ ಸಿದ್ಧಿಸುವನು. ಆದ್ದರಿಂದ ಅನುಮಾನ ಬೋಧಿತವಾದ ಬ್ರಹ್ಮವನ್ನು ಪ್ರಮಾಣಾನ್ತರಾ ಪ್ರಾಪ್ತವಾದ ವಸ್ತುವನ್ನೇ ಬೋಧಿಸತಕ್ಕ ಶಕ್ತಿಯುಳ್ಳ ಶಾಸ್ತ್ರ ಬೋಧಿಸಲಾರದು ಎಂಬುದು ಪೂರ್ವಪಕ್ಷ.

**ಸಿದ್ಧಾನ್ತ**

ಉತ್ಪತ್ತಿವಿನಾಶಶಾಲಿಯಾದ ಈ ಜಗತ್ತಿಗೆ ಕರ್ತೃವನ್ನು ಅನುಮಾನದಿಂದ ಸ್ವೀಕರಿಸಿದಾಗ್ಯೂ, ವಿಶ್ವಾಮಿತ್ರಾದಿಗಳಂತೆ ಶಕ್ತಿವಂತರಾದ ಜೀವರುಗಳಿಂದಲೇ

ಒಂದೊಂದು ಭಾಗ ಒಂದೊಂದು ಕಾಲದಲ್ಲಿ ಸೃಷ್ಟಿಸಲ್ಪಟ್ಟದ್ದೆಂದು ಗ್ರಹಿಸುವುದೇ ಲಾಘವವೂ ಯುಕ್ತವೂ ಆಗಿರುವಲ್ಲಿ, ಇವರಿಗಿಂತಲೂ ಬೇರೆಯಾದ ಈಶ್ವರನೆಂಬವನೊಬ್ಬನು ಈ ಅನುಮಾನದಿಂದ ಸಿದ್ಧಿಸನು. ಆದ್ದರಿಂದ ಪ್ರಮಾಣಾಂತರಾ ವಿಷಯವಾದ ಬ್ರಹ್ಮಕ್ಕೆ ಈ ವಾಕ್ಯ ಬೋಧಕವೇ ಸರಿ. ಎಂಬುದು ಸಿದ್ಧಾನ್ತ.

ಇದರ ಮೇಲೆ ಪೂರ್ವಪಕ್ಷಿಯು ಮತ್ತೊಂದು ಚೋದ್ಯ—"ಲೋಕದಲ್ಲಿ ನಿಮ್ಮ ವೈದಿಕ ಮತದವರೆಲ್ಲರೂ ಬ್ರಹ್ಮನಿಂದ ಹಿಡಿದು ಪಿಪೀಲಿಕೆವರಿಗಿನ ವಿಚಿತ್ರ ರಚನೆಯೆಲ್ಲಕ್ಕೂ ಶ್ರೀಮನ್ನಾರಾಯಣನಿಂದಲೆ ಸೃಷ್ಟಿಯನ್ನು ಸರ್ವಥಾ ಹೇಳುತ್ತಾರೆ. ಅದನ್ನೇ ಕೆಲವರು ಪ್ರಕರಣರೂಪ ಪ್ರಬನ್ಧಗಳಲ್ಲಿ ಯುಕ್ತಿಗಳಿಂದ ಸ್ಥಾಪಿಸುತ್ತಾರೆ. ಇದೇ ಅನುಮಾನವೆಂಬುದು. ಅದನ್ನೇ ಈ ಜನ್ಮಾದಿವಾಕ್ಯವೂ ಅಭಿಪ್ರಾಯ ಪಡುತ್ತೆ. ಆದ್ದರಿಂದ ಅನುಮಾನವೇ ಪರಬ್ರಹ್ಮದಲ್ಲಿ ಪ್ರಮಾಣ. ಅನುಮಾನಕ್ಕೇ ಜಗತ್ಕರ್ತೃತ್ವ ಸಾಧನೆಯಲ್ಲಿ ಪ್ರಾಬಲ್ಯವಾದ್ದರಿಂದ ಅನುಮಾನಸಿದ್ಧವಾದುದರ ಅನುವಾದ ಮಾತ್ರವೇ ಈ ಜಗಜ್ಜನ್ಮಾದಿವಾಕ್ಯ. ಅನುವಾದತ್ವವೂ "ಯತೋವಾ ಇಮಾನಿ..." ಎಂಬ ಶಬ್ದದ ಪ್ರಯೋಗದಿಂದ ತಿಳಿಯುತ್ತೆ—ಈ ಕಾರಣದಿಂದಲೇ ಈಶ್ವರಾನುಮಾನವನ್ನು ಬಿಡುವುದು ನಿಮಗೆ ಅನುಚಿತ"—ಎಂದು.

ಇದಕ್ಕೆ ಸಿದ್ಧಾಂತಿಯು ಉತ್ತರ—ಶ್ರೀ ನಾರಾಯಣನೇ ಸಕಲ ಕಾರಣನೆಂಬುದನ್ನೇ ಶ್ರುತಿ-ಪುರಾಣ-ಇತಿಹಾಸ-ಲೋಕ ಪ್ರಸಿದ್ಧಿ ಮುಂತಾದ ಅನೇಕಗಳು ಹೇಳುತ್ತವೆಯೆಂದು ನಮ್ಮವರ ಪ್ರವಾದ. ಅಷ್ಟರಿಂದ ಅನುಮಾನ ಗಮ್ಯತ್ವವನ್ನು ಸ್ಥಾಪಿಸಿದಂತಲ್ಲ. ಕೆಲವರ ಗ್ರಂಥ ನಿದರ್ಶನದಲ್ಲಿಯೂ ಕೂಡ, "ಯಸ್ತರ್ಕೇಣಾನುಸನ್ಧತ್ತೇ ಸ ಧರ್ಮಂ ವೇದ ನೇತರಃ"—ಎಂದು ಹೇಳಿದ ಪ್ರಕ್ರಿಯೆಯಿಂದ ಆಗಮಾನುಕೂಲ ತರ್ಕ ಮಾತ್ರ ಅನುಮೋದಿಸಲ್ಪಟ್ಟಿದೆಯೇ ಹೊರತು ಆಗಮ ವಿರುದ್ಧ ನಿಮಿತ್ತ ಮಾತ್ರೇಶ್ವರಾನುಮಾನವನ್ನು ಪ್ರಮಾಣವನ್ನಾಗಿ ಸ್ಥಾಪಿಸಿಲ್ಲ "ಯತಃ" ಎಂಬ ಅನುವಾದವೂ ಇದಕ್ಕೆ ಪುರುಷ ಸೂಕ್ತಾದಿ ವಾಕ್ಯಗಳಿರುವ ಪೂರ್ವ ಪ್ರಸಿದ್ಧಿ ಮಾತ್ರವನ್ನು ಪರಾಮರ್ಶಿಸುವುದೇ ಹೊರತು, ಅನುಮಾನದಿಂದಲೇ ಪ್ರಸಿದ್ಧಿಯೆಂಬುದನ್ನಲ್ಲ.—ಎಂಬುದು.

## 4. ಸಮನ್ವಯಾಧಿಕರಣ

ಸೂತ್ರ—**"ತತ್ತು ಸಮನ್ವಯಾತ್"**

**ವಿಷಯ ವಾಕ್ಯ**

ಹಿಂದಿನ ಅಧಿಕರಣದ್ದೇ.

**ಆಕ್ಷೇಪ ಸಂಗತಿ**

ಬ್ರಹ್ಮಪ್ರಮಾಣಾನ್ತರಕ್ಕೆ ಗೋಚರವಲ್ಲದಿದ್ದಾಗ್ಯೂ, ಸಿದ್ಧರೂಪವಾದ ಬ್ರಹ್ಮ ಪ್ರವೃತ್ತಿ ನಿವೃತ್ತಿಗಳಿಗೆ ಸಿಲುಕತಕ್ಕದ್ದಲ್ಲವಾದ್ದರಿಂದ ನಿಷ್ಫಲವಾದ ಆ ಬ್ರಹ್ಮವು ಶಾಸ್ತ್ರ ಪ್ರತಿಪಾದ್ಯ ಹೇಗಾದೀತು?—ಎಂಬ ಆಕ್ಷೇಪದ ಪರಿಹಾರಕ್ಕಾಗಿ ಈ ಅಧಿಕರಣ ಹೊರಟಿದೆ. ಅಥವಾ ಹಿಂದಿನ ಅಧಿಕರಣದಲ್ಲಿ ತಾರ್ಕಿಕರನ್ನು ನಿರಾಸಮಾಡಿ 'ಇಲ್ಲಿ

ತಾಂತ್ರಿಕರ–ನಿರಸನವನ್ನು ಮಾಡಿದೆ ಅಥವಾ ಹಿಂದೆ ನಿಮಿತ್ತಮಾತ್ರೇಶ್ವರವಾದಿಗಳನ್ನು ನಿರಸನ ಮಾಡಿ ಇಲ್ಲಿ ನಿರೀಶ್ವರವಾದಿಗಳ ನಿರಸನವಾಗಿದೆ.

**ವಿಷಯ**

ಶಾಸ್ತ್ರಾರಂಭವೇ ಪ್ರಧಾನ ವಿಷಯ.

**ಅದಕ್ಕಾಗಿ ವಿಚಾರ**

ವೇದಾಂತಶಾಸ್ತ್ರ ಆರಂಭಿಸಲು ಯೋಗ್ಯವೇ ಅಥವಾ ಅಲ್ಲವ?

**ಇದಕ್ಕಾಗಿ ಮತ್ತೆ ವಿಚಾರ**

ಸಿದ್ಧರೂಪವಾದ ಬ್ರಹ್ಮದಲ್ಲಿ ವೇದಾಂತವಾಕ್ಯಗಳಿಗೆ ಸ್ವತಂತ್ರವಾಗಿಯಾಗಲೀ ವಿಧಿಶೇಷವಾಗಿಯಾಗಲಿ ಪ್ರಾಮಾಣ್ಯ ಸಂಭವಿಸುವುದೆ? ಅಥವಾ ಸಂಭವಿಸದೆ? ಸ್ವಾತಂತ್ರ್ಯ ಪಕ್ಷದಲ್ಲಿ, ತಾತ್ಪರ್ಯಲಿಂಗವಿದೆಯೋ? ಇಲ್ಲವೆ?

ಬ್ರಹ್ಮವನ್ನು ಪ್ರತಿಪಾದಿಸುವುದರಲ್ಲಿ ವೇದಾಂತವಾಕ್ಯಗಳಿಗೆ ಸಪ್ರಯೋಜನತ್ವ ಇದೆಯೆ? ಇಲ್ಲವೆ?—ಅಪ್ರಯೋಜನವತ್ವ ಕೇವಲ ಪ್ರೀತಿಗೋಸ್ಕರವ? ಅಥವಾ ಕಾರ್ಯ ರೂಪ ಪ್ರಯೋಜನಕ್ಕೋಸ್ಕರವೆ?

ಪ್ರೀತಿಗಾಗಿಯೋ ಎಂದಲ್ಲಿ, ವಸ್ತುವಿಲ್ಲದಿದ್ದರೂ ಪ್ರಯೋಜನ ಪರವೆ? ಅಲ್ಲವ?

**ಫಲಫಲಿಭಾವ**

ಪೂರ್ವಪಕ್ಷದಲ್ಲಿ-ಪ್ರೀತ್ಯರ್ಥವೆಂದಲ್ಲಿ ವಸ್ತು ಸುಳ್ಳಾದಾಗ್ಯೂ ಪ್ರಯೋಜನ ಸಿದ್ಧಿಸುವುದರಿಂದ ಬ್ರಹ್ಮಕ್ಕೆ ಯಾಥಾತ್ಮ್ಯವಿಲ್ಲವಾಗಿ, ಪ್ರವೃತ್ತಿ ನಿವೃತ್ತಿ ಪ್ರಯೋಜನ ಪರವಾದಲ್ಲಿಯೂ ವಾಕ್ಯ ಅನ್ಯಪರವಾದ್ದರಿಂದ ಪರಬ್ರಹ್ಮಯಾಥಾತ್ಮ್ಯವಿಲ್ಲವಾಗಿ ನಿಷ್ಪ್ರಯೋಜನವಾದ್ದರಿಂದ ತಾತ್ಪರ್ಯಲಿಂಗವಿಲ್ಲದ್ದರಿಂದ ವಸ್ತುಸದ್ಭಾವದಲ್ಲಿ ಸ್ವತಂತ್ರ ವಾಗಿಯಾಗಲಿ, ಪರತಂತ್ರವಾಗಿಯಾಗಲಿ ವಾಕ್ಯಪ್ರಾಮಾಣ್ಯವಿಲ್ಲದ್ದರಿಂದ ವೇದಾಂತ ಶಾಸ್ತ್ರವು ಆರಂಭಿಸಲು ಯೋಗ್ಯವಲ್ಲ—ಎಂಬುದು ಸಿದ್ಧಾಂತದಲ್ಲಿ ಇದರ ವೈಪರೀತ್ಯ ವರ್ಣನೆಯೇ ಫಲ-ಫಲಿಭಾವ.

**ಸೂತ್ರಪ್ರತಿಪದಾರ್ಥ**

[ಸಮನ್ವಯಾತ್] = (ವೇದಾಂತವಾಕ್ಯಗಳು ಪರಮ ಪುರುಷಾರ್ಥ-ಭೂತವಾದ ಬ್ರಹ್ಮದಲ್ಲಿಯೇ) ಸಾಕ್ಷಾತ್ತಾಗಿ ಅನ್ವಯಿಸುವುದರಿಂದ, [ತ ತ್, ತು] = ಆ ಶಾಸ್ತ್ರ ಪ್ರಮಾಣಕತ್ವವಾದರೋ—(ಬ್ರಹ್ಮಕ್ಕೆ ಕೊಡುತ್ತದೆ.)

ಬ್ರಹ್ಮಕ್ಕೆ ಶಾಸ್ತ್ರಪ್ರಮಾಣಕತ್ವ ಕೊಡುವುದಿಲ್ಲವೆಂಬ ಶಂಕೆಯನ್ನು ಇದು ಹೋಗ ಲಾಡಿಸುತ್ತದೆ ಪುರುಷಾರ್ಥಬೋಧಕಗಳಾದ ವೇದಾನ್ತವಾಕ್ಯಗಳು ಆನಂದ ರೂಪ ವಾದ ಬ್ರಹ್ಮವನ್ನು ಪ್ರತಿಪಾದಿಸತಕ್ಕವುಗಳಾದ್ದರಿಂದ, ಈ ವಾಕ್ಯಗಳಿಂದ ಬ್ರಹ್ಮ ಬೋಧಿ ಸಲ್ಪಡುವುದೆಂದು ತಾತ್ಪರ್ಯ.

**ಭಾಷ್ಯ ಸಾರಾಂಶ**

"ಯತೋವಾ ಇಮಾನಿ ಭೂತಾನಿ ಜಾಯನ್ತೇ. "—ಇತ್ಯಾದಿ ವಾಕ್ಯದಿಂದ ಬ್ರಹ್ಮ ಬೋಧಿಸಲ್ಪಡುತ್ತದೆಯೆ-? ಅಥವಾ ಇಲ್ಲವೆ?—ಎಂದು ಸಂಶಯ. "ಯಜೇತ"

(ಯಾಗವಮಾಡಬೇಕು) "ನ ಕಳಂಜಂ ಭಕ್ಷಯೇತ್"—ಕಳಂಜ = (ಕೆಂಪುಮೂಲಂಗಿ)ವನ್ನು ತಿನ್ನಕೂಡದು)—ಎಂಬ ವಾಕ್ಯಗಳು ಮನುಷ್ಯನ ಸತ್ಕರ್ಮಪ್ರವೃತ್ತಿ, ಅಸತ್ಕರ್ಮ ನಿವೃತ್ತಿಗಳನ್ನು ಹೇಳಿ, ಆ ಪ್ರವೃತ್ತಿ ನಿವೃತ್ತಿಗಳ ಮೂಲಕ ಸ್ವರ್ಗಪ್ರಾಪ್ತಿರೂಪ ಪುರುಷಾರ್ಥಗಳನ್ನು ಪ್ರತಿಪಾದಿಸುವುದರಿಂದ ಪ್ರಮಾಣವಾಗಿವೆ. ಬ್ರಹ್ಮ ಬೋಧಕವಾದ ವಾಕ್ಯಗಳು ಪ್ರವೃತ್ತಿ ನಿವೃತ್ತಿಗಳನ್ನು ಹೇಳುವುದಿಲ್ಲವಾದ್ದರಿಂದ ಅವರ ಮೂಲಕ ಬ್ರಹ್ಮಕ್ಕೆ ಬೋಧಕವೂ ಅಲ್ಲ. ಬ್ರಹ್ಮಪುರುಷಾರ್ಥರೂಪವಲ್ಲವಾದ್ದರಿಂದ. "ಇಲ್ಲಿ ನಿಧಿ ಯಿದೆ"—ಎಂಬ ವಾಕ್ಯದ ಹಾಗೆ ಸಾಕ್ಷಾತ್ತಾಗಿಯೂ ಬ್ರಹ್ಮಕ್ಕೆ ಬೋಧಕವಲ್ಲ. ಆದ್ದರಿಂದ ಈ ವಾಕ್ಯದಿಂದ ಬ್ರಹ್ಮಬೋಧಿತವಾಗದು—ಆದ್ದರಿಂದ ಶಾಸ್ತ್ರವನ್ನು ಆರಂಭಿಸಕೂಡದು —ಎಂಬುದು ಪೂರ್ವಪಕ್ಷ.

**ಸಿದ್ಧಾಂತ**

"ಆನಂದೋ ಬ್ರಹ್ಮ–", "ಆಕಾಶ ಆನಂದೋ ನ ಸ್ಯಾತ್–", "ಆನನ್ದಂ ಬ್ರಹ್ಮಣೋ ವಿದ್ವಾನ್"—ಇತ್ಯಾದಿ ವಾಕ್ಯಗಳು ಪರಬ್ರಹ್ಮವು ನಿರತಿಶಯಾನಂದ-ಸ್ವರೂಪವೆಂದು ಪ್ರತಿಪಾದಿಸುತ್ತವೆ. ಆದ್ದರಿಂದ ನಿರತಿಶಯಾನಂದರೂಪವಾದ ಬ್ರಹ್ಮವನ್ನು ಪ್ರತಿಪಾದಿಸುವ ಪ್ರಮಾಣಗಳು ಸಾಕ್ಷಾತ್ತಾಗಿಯೇ ಪುರುಷಾರ್ಥಬೋಧಕಗಳಾದ್ದರಿಂದ ಪರಂಪರೆಯಿಂದ ಪುರುಷಾರ್ಥಬೋಧಕವಾದ "ಯಜೇತ"—ಇತ್ಯಾದಿ ವಾಕ್ಯಗಳಿಗಿಂತಲೂ ಪ್ರಮಾಣತಮವಾದ ಈ ವಾಕ್ಯದಿಂದ ಬೋಧಿತವಾಗುವುದು. ಆದ್ದರಿಂದ ಶಾಸ್ತ್ರಾರಂಭವನ್ನು ಮಾಡಬೇಕು—ಎಂಬುದು ಸಿದ್ಧಾಂತ.

ಇಲ್ಲಿಗೆ ಉಪೋದ್ಘಾತ ಪೇಟಿಕೆ ಸಮಾಪ್ತವಾಯಿತು.

## ಶಾಸ್ತ್ರಾರಂಭ ಪೇಟಿಕಾ ೨
## ಅಧಿಕರಣ ೫—ಈಕ್ಷತ್ಯಧಿಕರಣ

[ಪ್ರತಿಪಾದ್ಯ ವಿದ್ಯೆ–ಸದ್ವಿದ್ಯೆ]

ಸೂತ್ರ ೧—"**ಈಕ್ಷತೇರ್ನಾಶಬ್ದಂ**"

[ಪೂರ್ವಪಕ್ಷೀ–ಸಾಂಖ್ಯ]

**[ಜಗತ್ಕಾರಣ ವಾಚಿವಾಕ್ಯ ಪ್ರತಿಪಾದ್ಯಂ–ಅಶಬ್ದಂ ನ–ಈಕ್ಷತೇಃ]**

**ಆಕ್ಷೇಪ ಸಂಗತಿ**

ವೇದಾನ್ತಸಾರವಾದ ಸದ್ವಿದ್ಯೆ ಪ್ರಕೃತಿಯನ್ನೇ ಜಗತ್ಕಾರಣವನ್ನಾಗಿ ಹೇಳುತ್ತೆ—ಎಂಬ ಆಕ್ಷೇಪ ಇಲ್ಲಿ ಪ್ರತಿಕ್ಷಿಪ್ತವಾಗಿದೆ. ಹಿಂದೆ ಪರಮಾತ್ಮನಿಗೆ ವೇದಾಂತ ವೇದ್ಯತ್ವವನ್ನು ಹೇಳಿಯಾಯಿತು. ಈಗ ಪ್ರಕೃತ್ಯಾದಿಗಳಿಗೆ ವೇದಾಂತ ವೇದ್ಯತ್ವ ಸಂಭವಿಸುವುದಿಲ್ಲವೆನ್ನಲಾಗಿದೆ.

**ವಿಷಯ ವಾಕ್ಯ**

"ಸದೇವ ಸೋಮ್ಯೇದಮಗ್ರ ಆಸೀತ್ ಏಕಮೇವಾ ದ್ವಿತೀಯಂ ತದೈಕ್ಷತಬಹುಸ್ಯಾಂ ಪ್ರಜಾಯೇಯೇತಿ-ತತ್ತೇಜೋಽಸೃಜತ"—ಇತ್ಯಾದಿ.

## ವಿವರಣೆ

ಇಲ್ಲಿ 'ಅಶಬ್ದ''—ಎಂದರೆ ಪ್ರಧಾನ (ಪ್ರಕೃತಿ) ಪ್ರಕೃತಿ ಶಬ್ದವೇದ್ಯವಾದ್ದರಿಂದ ಅದು ಅಶಬ್ದ. ಎಂಬುದು ಹೇಗೆ?—ಎಂದರೆ, ಶಬ್ದವೊಂದೇ ಅದಕ್ಕೆ ಪ್ರಮಾಣವಲ್ಲ. ಮತ್ತೇನೆಂದರೆ ಅನುಮಾನದಿಂದಲೂ ಅದು ವೇದ್ಯವಾದ್ದರಿಂದ ಅದಕ್ಕೆ ಅಶಬ್ದ. ಎಂದು ಪ್ರಯೋಗವಿದೆ. ಹಾಗೆ ಅದು ಪ್ರಮಾಣಾಂತರ (ಅನುಮಾನ)ದಿಂದಲೂ ಪ್ರಾಪ್ತವಾದ ಮೇಲೆ ಪ್ರಮಾಣಾಂತರಾ ಪ್ರಾಪ್ತವಾದ್ದನ್ನು ಮಾತ್ರವೇ ಪ್ರತಿಪಾದಿಸತಕ್ಕ ಶಾಸ್ತ್ರ ಅದನ್ನು ಹೇಗೆ ಪ್ರತಿಪಾದಿಸೀತು?—ಎಂದರೆ, ಸಾಮಾನ್ಯವಾಗಿ ದೃಷ್ಟವಾದ ಅನುಮಾನದಿಂದ ಪ್ರಧಾನವು ಕಾರಣವೆಂದಿಷ್ಟು ಮಾತ್ರ ತಿಳಿದಿದೆ. ಅದರ ವಿಶೇಷಗಳು ತಿಳಿಯವು—ಆ ವಿಶೇಷಗಳನ್ನು ಶಾಸ್ತ್ರ ಪ್ರತಿಪಾದಿಸುತ್ತದೆ ಎಂದು ಸಾಂಖ್ಯರ ಅಭಿಪ್ರಾಯ. ಅಲ್ಲದೆ, "ಅಪ್ರಾಪ್ತೇಹಿ ಶಾಸ್ತ್ರಂ ಅರ್ಥವತ್''—ಎಂಬುದು ಮೀಮಾಂಸಕರ ಮತವೇ ಹೊರತು ಸಾಂಖ್ಯರದಲ್ಲವೆಂದೂ ಪೂರ್ವಪಕ್ಷಿಯ ಅಭಿಪ್ರಾಯ—ಬ್ರಹ್ಮಕ್ಕೆ ಜಗತ್ಕಾರಣ ತ್ವದ ಯೋಗವಿಲ್ಲವೆಂಬುದನ್ನು ತಳ್ಳಿಹಾಕಿ ಕಾರಣತ್ವವುಂಟೆಂಬುದನ್ನು ಸಮರ್ಥಿಸುವ ವೇದಾಂತ ವಾಕ್ಯಗಳು ಈ ೧ನೇ ಪಾದದಲ್ಲಿ ವಿಚಾರಮಾಡಲ್ಪಡುತ್ತವೆ. ಆದ್ದರಿಂದ ಈ ಪಾದ ಅಯೋಗವ್ಯವಚ್ಛೇದಪರವೆನಿಸಿದೆ. ಬ್ರಹ್ಮವೊಂದೇ ಜಗತ್ಕಾರಣವೆಂಬುದನ್ನು ಬಿಟ್ಟು ಪ್ರಧಾನಾದಿ ಬೇರೆಯವದಕ್ಕೂ ಕಾರಣತ್ವವುಂಟೆಂಬುದನ್ನು ತಳ್ಳಿಹಾಕುವ ವೇದಾಂತ ವಾಕ್ಯಗಳು ಈ ಅಧ್ಯಾಯದ ಮುಂದಿನ ಮೂರು ಪಾದಗಳಲ್ಲಿ ವಿಚಾರಮಾಡಲ್ಪಡು ತ್ತವೆ. ಆದ್ದರಿಂದ ಆ ಪಾದಗಳು ಅನ್ಯಯೋಗವ್ಯವಚ್ಛೇದ ಪರಗಳೆನಿಸಿವೆ. ಈ ಈಕ್ಷತ್ಯಧಿ ಕರಣದಲ್ಲಿಯಾದರೋ ಪ್ರಧಾನ ಜಗತ್ಕಾರಣವಲ್ಲ ಎಂದು ಬ್ರಹ್ಮವ್ಯತಿರಿಕ್ತವಾದ ಪ್ರಧಾನಕ್ಕೆ ಕಾರಣತ್ವಯೋಗವನ್ನು ತಳ್ಳಿಹಾಕುವುದೇ ವಿಷಯವಾಗಿದೆ ಇದು ಅನ್ಯ ಯೋಗವ್ಯವಚ್ಛೇದ ಪರವಾದ ಮುಂದಿನ ತ್ರಿಪಾದಿಯಲ್ಲಿ ಹೇಳಬೇಕಾದ ವಿಷಯ ಹೀಗಿರು ವಲ್ಲಿ—ಅಯೋಗವ್ಯವಚ್ಛೇದ ಪರವಾದ ಈ ಪ್ರಥಮ ಪಾದದಲ್ಲಿ ಈ ಅನ್ಯಯೋಗ ವ್ಯವಚ್ಛೇದಪರವಾದ ಈಕ್ಷತ್ಯಧಿಕರಣ ಹೇಗೆ ಸಂಗತ?—ಎಂದು ಶಂಕಿಸಿದಲ್ಲಿ—ಅಯೋಗ ವ್ಯವಚ್ಛೇದದ ಶೇಷಭೂತವಾಗಿ ಇದು ಇಲ್ಲಿ ಹೇಳಲ್ಪಟ್ಟಿದೆಯೇ ಹೊರತು ಪ್ರಾಧಾನ್ಯ ದಿಂದಲ್ಲ—ಎಂದು ತಿಳಿಯಬೇಕು.

ಈ ಪಾದದಲ್ಲಿ ಈಕ್ಷತ್ಯಧಿಕರಣ—ಆನನ್ದಮಯಾಧಿಕರಣ—ಅಂತರಧಿಕರಣ—ಈ ಮೂರೂ ಸೇರಿ ೧ ಪೇಟಿಕೆ. ಅದರ ಮುಂದಿನ ಪಾದ ಆಕಾಶಾಧಿಕರಣ—ಪ್ರಾಣಾಧಿಕರಣ— ಜ್ಯೋತಿರಧಿಕರಣ—ಇಂದ್ರಪ್ರಾಣಾಧಿಕರಣಗಳೆಂಬ ನಾಲ್ಕು ಅಧಿಕರಣಗಳೂ ಸೇರಿ ಒಂದು ಪೇಟಿಕೆಯಾಗಿದೆ

## ಪ್ರತಿಪದಾರ್ಥ

[ಈಕ್ಷತೇಃ] = 'ಈಕ್ಷತಿ'—ಧಾತ್ವರ್ಥವಾದ ಸಂಕಲ್ಪದಿಂದ (ಜಗತ್ಕಾರಣವಾದ ವಸ್ತುವು ತಾನು ಈ ವಿಧವಾಗಿ ಸೃಷ್ಟಿಸಲಿದ್ದೇನೆ—ಎಂದು ಸಂಕಲ್ಪಿಸಿ ಸೃಷ್ಟಿ ಮಾಡುವುದೆಂದು ಹೇಳಿರುವುದರಿಂದ) [ಅಶಬ್ದಂ] = ಶಬ್ದಮಾತ್ರವನ್ನೇ ಪ್ರಮಾಣವಾಗಿ ಯುಳ್ಳದ್ದಲ್ಲದ ಅಂದರೆ ಅನುಮಾನದಿಂದ ಅರಿಯಲ್ಪಡುವ ಅಚೇತನವಾದ ಮೂಲ

ಪ್ರಕೃತಿಯು [ನ] = ಜಗತ್ಕಾರಣವಾಗಲಾರದು. ಸಂಕಲ್ಪಿಸುವುದೆಂಬುದು ಚೇತನನ ಧರ್ಮವಾದ್ದರಿಂದ ಆಸಂಕಲ್ಪವುಳ್ಳ ಜಗತ್ಕಾರಣವು ಅಚೇತನವಾದ ಮೂಲ ಪ್ರಕೃತಿಯಾಗದೆಂದು ಭಾವ.

**ಭಾಷ್ಯ ಸಾರಾಂಶ**

"ಸ ದೇವ ಸೋಮ್ಯೇದಮಗ್ರ ಆಸೀತ್"-ಇತ್ಯಾದಿಯಾದ ಈ ಅಧಿಕರಣದ ವಿಷಯ ವಾಕ್ಯದಲ್ಲಿ ಜಗತ್ಕಾರಣವಾಗಿ ಹೇಳಲ್ಪಟ್ಟದ್ದು ಸಾಂಖ್ಯರು ಹೇಳುವ ಮೂಲ ಪ್ರಕೃತಿಯೋ ಅಥವಾ ನಿರವಧಿಕಾನಂದರೂಪವಾದ ಪರಬ್ರಹ್ಮವೋ?—ಎಂಬುದು ಇಲ್ಲಿ ಸಂಶಯ. ಸತ್ತ್ವ-ರಜಸ್ತಮೋಮಯವೂ, ಪರಿಣಾಮಿಯೂ, ಅಚೇತನವೂ ವಿಕಾರಾಸ್ಪದವೂ, ಆದ ಈ ಜಗತ್ತಿಗೆ, ಘಟಕ್ಕೆ ಮೃತ್ಪಿಂಡ ಹೇಗೋ ಹಾಗೆ, ಇದರ ಸಜಾತೀಯವೂ, ಇದೇ ಗುಣಗಳನ್ನುಳ್ಳದ್ದೂ ಆದ ಅಚೇತನವೇ ಕಾರಣವಾಗಬೇಕು, ಅದಕ್ಕೆ ಮೂಲಪ್ರಕೃತಿಯೆಂದು ಹೆಸರು. ಅದನ್ನೇ ಈ ವಾಕ್ಯ ಪ್ರತಿಪಾದಿಸುತ್ತದೆ, "ಯೇನಾಶ್ರುತಂ ಶ್ರುತಂ ಭವತಿ..."—ಇತ್ಯಾದಿ ವಾಕ್ಯದಿಂದ, ಆ ಮೂಲಪ್ರಕೃತಿಯನ್ನು ಅರಿತಲ್ಲಿ ಸಕಲವನ್ನೂ ಅರಿತಂತೆಯೋ –ಎಂದು ಪ್ರತಿಜ್ಞೆಯನ್ನುಮಾಡಿ, ಅದು ಹೇಗೆಂದಲ್ಲಿ, ಮೃತ್ಪಿಂಡ (ಮಣ್ಣಿನ ಮುದ್ದೆ)ವನ್ನು ಅರಿತರೆ, ಅದರಿಂದ ಮಾಡಲ್ಪಟ್ಟ ಘಟ ಶರಾವಾದಿಗಳೂ ಚಿನ್ನದ ಗಟ್ಟಿಯನ್ನು ಅರಿತರೆ, ಅದರಿಂದ ಮಾಡಲ್ಪಟ್ಟ ಕಟಕ ಮಕುಟಾದಿಗಳೂ ಅರಿಯಲ್ಪಟ್ಟಂತೆಯೋ ಎಂದು ದೃಷ್ಟಾಂತ ಹೇಳುವುದರಿಂದ, ಪ್ರತಿಜ್ಞಾ-ದೃಷ್ಟಾಂತ ಘಟಿತವಾದ ಸಾಂಖ್ಯರು ಹೇಳುವ ಅನುಮಾನ ಪ್ರಕ್ರಿಯೆ ತೋರುವುದರಿಂದ, ಈ ವಾಕ್ಯದಲ್ಲಿ ಹೇಳಿದ ಜಗತ್ಕಾರಣವು ಮೂಲಪ್ರಕೃತಿಯೇ ಸರಿ—ಎಂಬುದು ಪೂರ್ವಪಕ್ಷ.

**ಸಿದ್ಧಾನ್ತ**

ಇದರ ಮುಂದಿನದಾದ, "ತದೈಕ್ಷತ ಬಹುಸ್ಯಾಂ ಪ್ರಜಾಯೇಯ."—ಎಂಬ ವಾಕ್ಯದಲ್ಲಿ ಆ ಜಗತ್ಕಾರಣವು ತಾನು ಅನೇಕ ವಿಧವಾಗಿ ಆಗುವುದಾಗಿ ಮೊದಲೇ ಸಂಕಲ್ಪಿಸಿತು ಎಂದೂ ಹೇಳಿರುವುದರಿಂದ ಆ ಸಂಕಲ್ಪ ಅಚೇತನವಾದ ಮೂಲ ಪ್ರಕೃತಿಗೆ ಕೂಡದುದರಿಂದ, ಆ ಸಂಕಲ್ಪವುಳ್ಳ ನಿರವಧಿಕಾನಂದ ರೂಪವಾದ ಪರಬ್ರಹ್ಮವೇ ಈ ವಾಕ್ಯದಲ್ಲಿ ಜಗತ್ಕಾರಣವಾಗಿ ಹೇಳಲ್ಪಟ್ಟಿದೆ. ಸಾಂಖ್ಯರು ಹೇಳುವ ಅನುಮಾನ ಪ್ರಕ್ರಿಯೆಯೂ ಅನುಮಾನಾವಯವಗಳಲ್ಲಿ ಅತ್ಯಂತ ಪ್ರಧಾನವಾದ ಹೇತುವನ್ನು ಹೇಳಿಲ್ಲವಾದ್ದರಿಂದ, ಇಲ್ಲಿ ತೋರುವುದಿಲ್ಲ. ಕಾರ್ಯ ಕಾರಣ ಸಾರೂಪ್ಯಾದಿ ಹೇತುಗಳು ಸಾಂಖ್ಯರಿಗೆ ಇವೆಯೆಂದರೆ,"ಯತ್ ಸರೂಪಂ ತತ್ ಪರಸ್ಪರಂ ಕಾರ್ಯಕಾರಣಭಾವಭಾಕ್, ಯಥಾ ಮೃತ್ ಘಟಾದಿ,"—ಇತ್ಯಾದ್ಯನುಮಾನಕ್ಕೆ ಹೇತು ಭೂತವಾದ ಕಾರ್ಯಕಾರಣ ಸಾರೂಪ್ಯರೂಪ ಹೇತುವು ಮುಂದೆ ೨ನೇ ಅಧ್ಯಾಯದ ೨ನೇ ಪಾದದಲ್ಲಿ ಪರಿಹರಿಸಲ್ಪಡುವುದು. ಹಾಗಾದರೆ ಇಲ್ಲಿ ಮತ್ತು ಅಲ್ಲಿ ಆದಲ್ಲಿ ಪೌನರುಕ್ತ್ಯ ಪ್ರಸಂಗಿಸದೆ?—ಎಂದಲ್ಲಿ, ಮುಂದೆ ಪ್ರಧಾನಕ್ಕೆ ಕಾರಣ ನಿಶ್ಚಯಿಸುವ ಹೇತುಗಳು ನಿಶ್ಶೇಷವಾಗಿ ನಿರ್ಮೂಲ ಮಾಡಲ್ಪಡುವುವು—ಇಲ್ಲಿ ಪ್ರಧಾನ ಕಾರಣತ್ವಾನುಮಾನದ ಸಂಭಾವನೆಯು ಮಾತ್ರ ಪರಿಹೃತವಾಗಿದೆ. ಇದೊಂದನ್ನು (ಆದೇಶ) ಅರಿತರೆ ಮತ್ತೆಲ್ಲವನ್ನೂ ಅರಿತಂತೆಯಾಗುವುದೆಂದ ಮೇಲೆ.

ಅದು ಹೇಗೆ?—ಎಂಬ ಶಿಷ್ಯನ ಸಂಶಯವನ್ನು ನಿವಾರಿಸುವುದಾದ್ದರಿಂದಾಗಿ ಚಿನ್ನವೇ ಮೊದಲಾದುದು ದೃಷ್ಟಾಂತವಾಗಿ ಹೇಳಲ್ಪಟ್ಟಿತು—ಎಂಬುದು.

## ಸೂತ್ರ ೨—ಗೌಣಶ್ಚೇನ್ನಾತ್ಮ ಶಬ್ದಾತ್

### ಪ್ರತಿಪದಾರ್ಥ

[ಗೌಣಃ ಚೇತ್] = ಗೌಣರೂಪವಾದ, ಅಂದರೆ ಸೃಷ್ಟ್ಯುನ್ಮುಖ ಸ್ವರೂಪವಾದ ಸಂಕಲ್ಪವೇ ಇಲ್ಲಿ ಹೇಳಿದೆ (ಆದ್ದರಿಂದ ಆ ಗೌಣ ಸಂಕಲ್ಪವುಳ್ಳ ಮೂಲಪ್ರಕೃತಿಯೇ ಜಗತ್ಕಾರಣ) ಎಂದಲ್ಲಿ, [ಆತ್ಮಶಬ್ದಾತ್] = (ಈ ಜಗತ್ಕಾರಣವನ್ನು ಚೇತನವಾಚಕವಾದ) 'ಆತ್ಮ'—ಎಂಬ ಶಬ್ದದಿಂದ ಹೇಳುವುದರಿಂದ [ನ] = (ಅದು) ಮೂಲಪ್ರಕೃತಿಯಾಗಲಾರದು.

### ಭಾಷ್ಯ ಸಾರಾಂಶ

ಇದಕ್ಕೆ ಮೇಲೆ, "ತತ್ತೇಜ ಐಕ್ಷತ", (ಆ ತೇಜಸ್ಸು ಸಂಕಲ್ಪಿಸಿತು) "ತಾ ಆಪ ಐಕ್ಷನ್ತ".—(ಆ ನೀರು ಸಂಕಲ್ಪಿಸಿತು)—ಎಂದು ಅಚೇತನವಾದ ತೇಜಸ್ಸು ಮತ್ತು ನೀರಿಗೂ ಸಂಕಲ್ಪವನ್ನು ಹೇಳಿರುವುದರಿಂದ ಅದು ಚೇತನ ಧರ್ಮವಾದ ಸಂಕಲ್ಪವಲ್ಲ. ಸೃಷ್ಟ್ಯುನ್ಮುಖತ್ವರೂಪವಾದ (ಅಂದರೆ, ಜಗದ್ರೂಪವಾಗಿ ಪರಿಣಮಿಸುವುದಕ್ಕೆ ಪೂರ್ವ ಕ್ಷಣದಲ್ಲಿಯ ಅವಸ್ಥೆ) ಅಚೇತನಗತ ಸಂಕಲ್ಪವೆಂದು ತಿಳಿಯಬೇಕು. ಅದರಂತೆ ಅದರೊಂದಿಗೆ ಸಮಾನವಾದ ಈ ಸಂಕಲ್ಪವೂ ಗೌಣವೆಂದೇ ತಿಳಿಯಬೇಕು. ಈ ಗೌಣ ಸಂಕಲ್ಪವು ಅಚೇತನದಲ್ಲಿಯೂ ಸಂಭವಿಸಬಹುದಾದ್ದರಿಂದ ಮೂಲಪ್ರಕೃತಿಯೇ ಇಲ್ಲಿ ಜಗತ್ಕಾರಣವಾಗಿ ಹೇಳಲ್ಪಟ್ಟಿದೆಯೆಂಬುದು ಪೂರ್ವಪಕ್ಷ.

"ಐತದಾತ್ಮ್ಯಮಿದಗ್ಂ ಸರ್ವಂ, ತತ್ಸತ್ಯಂ ಸ ಆತ್ಮಾ"—ಎಂದು ಜಗತ್ಕಾರಣವಾದ ವಸ್ತುವನ್ನು ಚೇತನವಾಚಕವಾದ 'ಆತ್ಮ'-ಶಬ್ದದಿಂದ ಹೇಳಿರುವುದರಿಂದ, ಅಚೇತನವಾದ ಪ್ರಧಾನ ಇಲ್ಲಿ ಪ್ರತಿಪಾದಿಸಲ್ಪಡದು. "ತತ್ತೇಜ ಐಕ್ಷತ,"—ಇತ್ಯಾದಿ ವಾಕ್ಯಗಳಲ್ಲಿಯೂ, ಆ ತೇಜಸ್ಸನ್ನು ಶರೀರವಾಗಿಯುಳ್ಳ ಪರಮಾತ್ಮನೇ ಸಂಕಲ್ಪಿಸಿದುದಾಗಿ ಹೇಳುವುದರಿಂದ ಚೇತನಧರ್ಮವಾದ ಮುಖ್ಯ ಸಂಕಲ್ಪವನ್ನೇ ಹೇಳಿದೆಯಾದ್ದರಿಂದ, ಅದುವೂ ಗೌಣ ಸಂಕಲ್ಪವೆಂದಾಗದು—ಎಂದು ಸಿದ್ಧಾನ್ತ.

## ಸೂತ್ರ ೩— ತನ್ನಿಷ್ಠಸ್ಯ ಮೋಕ್ಷೋಪದೇಶಾತ್"

### ಪ್ರತಿಪದಾರ್ಥ

[ತನ್ನಿಷ್ಠಸ್ಯ] = ಆ ಬ್ರಹ್ಮವನ್ನು ಉಪಾಸನಮಾಡುವವನಿಗೆ [ಮೋಕ್ಷೋಪದೇಶಾತ್] = (ಈ ಪ್ರಾರಬ್ಧ ಶರೀರ ಕಳೆದಮೇಲೆ) ಮೋಕ್ಷಪ್ರಾಪ್ತಿಯನ್ನು ಹೇಳಿರುವುದರಿಂದ, (ಸ್ಪಷ್ಟವಾಚ್ಯವಾದ ಜಗತ್ಕಾರಣವು ಪ್ರಧಾನವಲ್ಲ)

### ಭಾಷ್ಯ

"ತತ್ತ್ವಮಸಿ"—ಎಂಬ ಮೇಲಣ ವಾಕ್ಯದಲ್ಲಿ ಜೀವಾತ್ಮನನ್ನು ಸುಬ್ಬದ್ಧವಾಚ್ಯವಾದ ಜಗತ್ಕಾರಣ ವಸ್ತುವಿಗೆ ಶರೀರವಾಗಿ ಅನುಷ್ಠಾನಮಾಡುವವನು.

"ತಸ್ಯ ತಾವದೇವ ಚಿರಂ..."—ಇತ್ಯಾದಿ ವಾಕ್ಯದಿಂದ, ಈ ಶರೀರ ಹೋದ ಕೂಡಲೆ ಮೋಕ್ಷ ಹೊಂದುವನೆಂದು ಹೇಳಿದೆ. ಅಚೇತನವಾದ ಪ್ರಧಾನವು ಜಗತ್ಕಾರಣವಾದಲ್ಲಿ ತದಾತ್ಮಕತ್ವಾನು ಸಂಧಾನವು ಸಂಸಾರಕ್ಕೆ ಹೇತುವಾಗುವುದೇ ಹೊರತು ಮೋಕ್ಷಕ್ಕೆ ಹೇತುವಾಗದು. ಆದ್ದರಿಂದ ಪ್ರಧಾನಕ್ಕಿಂತ ವಿಲಕ್ಷಣವಾದ ಪರಮಚೇತನನೇ ಜಗತ್ಕಾರಣವೆಂದು ತಿಳಿಯತಕ್ಕದ್ದು.

### ಸೂತ್ರ ೪—ಹೇಯತ್ವಾ ವ ಚ ನಾಚ್ಚ

ಜಗತ್ಕಾರಣವು ಮೂಲ ಪ್ರಕೃತಿಯಾದಲ್ಲಿ ಅದು ಮೋಕ್ಷವಿರೋಧಿಯಾದುದರಿಂದ, ನಿಹೀನವೆಂದು ಹೇಳಬೇಕು. ಹಾಗೆ ಹೇಳಿಲ್ಲವಾದ್ದರಿಂದಲೂ ಅದು ಜಗತ್ಕಾರಣವಲ್ಲ.

### ಸೂತ್ರ ೫—ಪ್ರತಿಜ್ಞಾವಿರೋಧಾತ್

"ಯೇನಾ ಶ್ರುತಂ ಶ್ರುತಂ ಭವತಿ..."ಇತ್ಯಾದಿ ವಾಕ್ಯವು ಯಾವುದನ್ನು ಅರಿತಲ್ಲಿ ಅರಿಯಲ್ಪಡದಿದ್ದವೆಲ್ಲವೂ ಅರಿಯಲ್ಪಟ್ಟಿದಾಗುವುದೋ—ಅದು ಜುಗತ್ಕಾರಣವೆಂದು ಹೇಳುತ್ತೆ. ಕಾರಣಜ್ಞಾತವಾದರೆ, ಮತ್ತೆಲ್ಲವೂ ಅದರ ಕಾರ್ಯವಾದ್ದರಿಂದ, ಜ್ಞಾತಗಳಾಗುವುವೆಂದು ತಾತ್ಪರ್ಯ. ಪ್ರಧಾನ ಜಗತ್ಕಾರಣವಾದಲ್ಲಿ ಅದು ಜೀವನಿಗೆ ಕಾರಣವಾಗದಿರುವುದರಿಂದ ಪ್ರಧಾನಜ್ಞಾನದಿಂದ ಚೇತನನು ಜ್ಞಾತನಾಗನು. ಆದ್ದರಿಂದ ಮೊದಲು ಮಾಡಿದ ಪ್ರತಿಜ್ಞೆಗೆ ಇದು ವಿರುದ್ಧವಾಗುವುದು. ಆದ್ದರಿಂದ ಪ್ರಧಾನ ಜಗತ್ಕಾರಣವಲ್ಲ.

### ಸೂತ್ರ ೬—ಸ್ವಾಪ್ಯಯಾತ್

"ಸತಾ ಸೋಮ್ಯ ತದಾ ಸಂಪನ್ನೋ ಭವತಿ."—ಎಂಬ ವಾಕ್ಯ ಜೀವನು ಸುಷುಪ್ತಿ ಕಾಲದಲ್ಲಿ ಸಚ್ಛಬ್ದವಾಚ್ಯವಾದ ಜಗತ್ಕಾರಣದಲ್ಲಿ ಲಯಿಸುತ್ತಾನೆ ಎಂದು ಹೇಳುವುದು. ಲಯವೆಂದರೆ ತನ್ನ ಕಾರಣದೊಂದಿಗೆ ಏಕೀಭವಿಸಿರುವುದು. ಪ್ರಧಾನ ಜಗತ್ಕಾರಣವಾದಲ್ಲಿ, ಅದು ಜೀವನಿಗೆ ಕಾರಣವಲ್ಲವಾದ್ದರಿಂದ, ಅದರಲ್ಲಿ ಜೀವನಿಗೆ ಲಯ ಹೇಳುವುದು ಸರಿಯಲ್ಲ. ಆದ್ದರಿಂದ ಪ್ರಧಾನ ಜಗತ್ಕಾರಣವಲ್ಲ.

### ಸೂತ್ರ ೭—ಗತಿಸಾಮಾನ್ಯಾತ್

ಇತರ ಉಪನಿಷತ್ತುಗಳಿಗೆ ಏನು ಗತಿಯೋ (ಏನು ನ್ಯಾಯವೋ) ಅದು ಈ ಉಪನಿಷತ್ತಿಗೂ ಸಮಾನವಾದ್ದರಿಂದ, (ಪ್ರಧಾನ ಜಗತ್ಕಾರಣವಲ್ಲ)

"ಆತ್ಮಾವಾ ಇದಂ ಏಕ ಏವಾಗ್ರ ಆಸೀತ್"—"ಏಕೋ ಹವೈನಾರಾಯಣ ಆಸೀತ್."—ಇತ್ಯಾದಿಯಾದ 'ಐತರೇಯೋಪನಿಷದ್ವಾಕ್ಯಗಳಲ್ಲಿ, ಸರ್ವಜ್ಞನಾದ ಪುರುಷೋತ್ತಮನೇ ಜಗತ್ಕಾರಣವೆಂದು ಹೇಳುವುದರಿಂದ, ಆ ಪುರುಷೋತ್ತಮನ್ನೇ ಇಲ್ಲಿಯೂ ಜಗತ್ಕಾರಣವೆಂಬುದಾಗಿ ಹೇಳಬೇಕಾದ್ದರಿಂದ, ಪ್ರಧಾನ ಜಗತ್ಕಾರಣವೆಂಬುದಾಗಿ ಹೇಳಲ್ಪಡತಕ್ಕದ್ದಲ್ಲ.

### ಸೂತ್ರ ೮—ಶ್ರುತತ್ವಾಚ್ಚ

"ಆತ್ಮನ ಏವೇದಗ್ಂ ಸರ್ವಂ"—ಎಂದು ಈ ಉಪನಿಷತ್ತಿನಲ್ಲಿಯೂ, ಸಚ್ಛಬ್ದವಾಚ್ಯವಾದ ಜಗತ್ಕಾರಣವು ಚೇತನವಾಚಿಯಾದ 'ಆತ್ಮ'—ಶಬ್ದದಿಂದ ಹೇಳಲ್ಪಡು

ವುದರಿಂದ, ಪ್ರಧಾನ ಜಗತ್ಕಾರಣವಲ್ಲ. ಸರ್ವಜ್ಞವೂ ಪುರುಷೋತ್ತಮ ಶಬ್ದವಾಚ್ಯವೂ ಆದ ಪರಬ್ರಹ್ಮವೇ ಜಗತ್ಕಾರಣ.

## ಆನಂದಮಯ ಅಧಿಕರಣ 6—ಆನನ್ದಮಯೋಽಭ್ಯಾಸಾತ್

[ಆನನ್ದವಿದ್ಯಾ]

### ಸೂತ್ರ ೧ [ಇಲ್ಲಿಯೂ ಸಾಂಖ್ಯನೇ ಪೂರ್ವಪಕ್ಷಿ]

**ಅಪವಾದ ಸಂಗತಿ**

(೧) ಜಗತ್ಕಾರಣವಾದ ಸಚ್ಛಬ್ದವಾಚ್ಯದ ಈಕ್ಷಣ ಮುಖ್ಯವೆನ್ನುವಲ್ಲಿ ಮುಖ್ಯೇಕ್ಷಣಕ್ಕೆ ಅರ್ಹನಾದ ಜೀವನೇ ಜಗತ್ಕಾರಣವಾಗಲಿ—ಎಂಬ ಪೂರ್ವಪಕ್ಷೋತ್ಥಾನದಿಂದ ಅಪವಾದ ಸಂಗತಿ.

(೨) ಸದ್ವಿದ್ಯಾ ವಾಕ್ಯದಲ್ಲಿ "ತತ್ ತ್ವಂ ಅಸಿ"—ಎಂಬ ಮೂರು ಪದಗಳಿಂದ ಜೀವ-ಬ್ರಹ್ಮರಿಗೆ ಐಕ್ಯ ಪ್ರದರ್ಶಿತವಾಯಿತು.ಹಾಗೆಯೇ ಜೀವವೇ ಜಗತ್ಕಾರಣವಾದ ಬ್ರಹ್ಮವಾಗಲಿ—ಎಂದೂ ಪೂರ್ವಪಕ್ಷ ಉತ್ಥಿತವಾಗಿದೆ.

**ವಿಷಯ ವಾಕ್ಯ**

ತೈತ್ತಿರೀಯದಲ್ಲಿ—"ಸ ವಾ ಏಷ ಪುರುಷೋಽನ್ನರಸಮಯಃ"—ಎಂದು ಆರಂಭಿಸಿ, "ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾತ್ ಅನ್ಯೋಽನ್ತರ ಆತ್ಮಾನನ್ದಮಯಃ" —ಎಂಬುದು.

**ಸೂತ್ರ ಪ್ರತಿಪದಾರ್ಥ**

[ಅಭ್ಯಾಸಾತ್] = ಆನಂದಮಯನಿಷ್ಠವಾದ ಆನಂದವನ್ನು ಜೀವಾನಂದದಿಂದ ಹಿಡಿದು ನೂರು ನೂರರಷ್ಟಾಗಿ ಗುಣಿಸಿರುವುದರಿಂದ [ಆನಂದಮಯಃ] = ಆನಂದ ಮಯ ಶಬ್ದದಿಂದ ಹೇಳಲ್ಪಟ್ಟವನು (ಪರಮಾತ್ಮಾ).

ಇದರ ಹಿಂದಿನ ಈಕ್ಷತ್ಯಧಿಕರಣದಲ್ಲಿ ಜಗತ್ಕಾರಣವಾದದ್ದು ಅಚೇತನಕ್ಕಿಂತ ವಿಲಕ್ಷಣವೆನ್ನಲಾಯಿತು. ಈ ಅಧಿಕರಣದಲ್ಲಿ ಅದು ಜೀವನಿಗಿಂತಲೂ ವಿಲಕ್ಷಣವೆನ್ನಲಾಗಿದೆ.

ಅಚೇತನಕ್ಕೆ ಸಂಕಲ್ಪಿಸುವ ಸಾಮರ್ಥ್ಯವಿಲ್ಲದ್ದರಿಂದ ಅದು ಜಗತ್ಕಾರಣವಾಗದಿದ್ದಾಗ್ಯೂ, ಸಂಕಲ್ಪವುಳ್ಳ ಜೀವ. ಜಗತ್ಕಾರಣವಾಗಬಹುದೋ? "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ"—ಎಂದು ಉಪಕ್ರಮಿಸಿ, "ಅನ್ಯೋಽನ್ತರ ಆತ್ಮಾನಂದಮಯಃ"—ಎಂದು ಜಗತ್ಕಾರಣವಾಗಿ ಹೇಳಲ್ಪಟ್ಟ ಆನಂದಮಯನು ಜೀವಾತ್ಮನೋ ಅಥವಾ ಪರಮಾತ್ಮನೋ?—ಎಂದು ಸಂಶಯ. "ತಸ್ಯೈಷ ಏವ ಶಾರೀರ ಆತ್ಮಾ",—ಎಂದು ಆನಂದಮಯನಿಗೆ ಶರೀರ ಸಂಬಂಧವನ್ನು ಹೇಳಿದೆ. ಶರೀರ ಸಂಬಂಧ ಪುಣ್ಯಾಪುಣ್ಯ ಕರ್ಮಾನುಗುಣ. ಅದು ಜೀವನಿಗೆ ಉಂಟಾದುದರಿಂದ ಜೀವಾತ್ಮನೇ ಜಗತ್ಕಾರಣ—ಎಂದು ಪೂರ್ವಪಕ್ಷ.

**ಸಿದ್ಧಾಂತ**

ಶ್ರುತಿಯು "ಸೈಷಾನನ್ದಸ್ಯ ಮೀಮಾಂಸಾ ಭವತಿ"—ಎಂದು ಆನಂದ ಮಯನ ಆನಂದವನ್ನು ವಿಚಾರಿಸಲು ತೊಡಗಿ, ಮನುಷ್ಯಾನಂದವನ್ನು ಮೊದಲು ಹೇಳಿ, ಅದಕ್ಕಿಂತ ನೂರರಷ್ಟು ದೇವಗಂಧರ್ವಾನಂದವೆಂದು, ಇದೇ ಕ್ರಮದಿಂದ, ಇಂದ್ರ, ಬೃಹಸ್ಪತಿ, ಚತುರ್ಮುಖ ಬ್ರಹ್ಮ—ಇವರುಗಳ ಆನಂದಗಳನ್ನು ಲೆಕ್ಕವಿಟ್ಟು ಹೇಳಿ, ಅದಕ್ಕೆ ಮೇಲೆ, ಬ್ರಹ್ಮಾನಂದವನ್ನು ಹೇಳಿ, "ಯತೋ ವಾ ಚೋ ನಿವರ್ತನ್ತೇ..." —ಎಂದು ಹಿಂತೆಗೆದು, ಆ ಆನಂದ ಮನಸ್ಸಿಗೂ ವಿಷಯವಾಗದುದರಿಂದ, ಅಪರಿಚ್ಛಿನ್ನ (ಅಳವಿಲ್ಲದ್ದು) ವೆಂದಿತು. ಈ ಅಪರಿಚ್ಛಿನ್ನವಾದ ಆನಂದ ಅಲ್ಪಸುಖವುಳ್ಳ ಜೀವರಲ್ಲಿ ಸಂಭವಿಸತಕ್ಕದ್ದಲ್ಲವಾದ್ದರಿಂದ ಆ ಆನಂದವನ್ನುಳ್ಳ ಜಗತ್ಕಾರಣನಾದ ಆನಂದಮಯನು ಜೀವನಿಗಿಂತ ಭಿನ್ನನಾದ ಪರಮಾತ್ಮಾ ಎನ್ನಬೇಕು. ಕರ್ಮಾಧೀನವಾದ ಶರೀರ ಸಂಬಂಧು ಪರಮಾತ್ಮನಿಗೆ ಇಲ್ಲದಿದ್ದಾಗ್ಯೂ, ಚೇತನಾಚೇತನಗಳೆಲ್ಲವೂ ಅವನಿಗೆ ಶರೀರ ವಾದ್ದರಿಂದ, ನಿರ ಪಾಧಿಕವಾದ ಶರೀರಸಂಬಂಧ ಅವನಿಗೇಉಂಟು. ಆದ್ದರಿಂದ ಅವನೇ ಜಗತ್ಕಾರಣ. ಅಲ್ಲದೆ,

"ತಸ್ಯೈಷ ಏವ ಶಾರೀರ ಆತ್ಮಾ ಯಃ ಪೂರ್ವಸ್ಯ......"—ಎಂಬುದು ಆನಂದ ಮಯನಿಗೆ ವಿಜ್ಞಾನಮಯ ಪರ್ಯಂತರಾದವರಿಗಿರುವ ಹಾಗೆ, ಬೇರೊಬ್ಬ ಅಂತರಾತ್ಮ ನಿಲ್ಲವೆನ್ನುವುದಕ್ಕಾಗಿ. "ಸ್ವಯಂ ದಾಸಾಸ್ತಪಸ್ವಿನಃ"—ಎಂಬಂತೆ ಆನಂದಮಯನಾದ ತನಗೆ ಆನಂದಮಯನಾದ ತಾನೇ ಆತ್ಮಾ—ಎಂದರ್ಥ. "ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯಾನಂದಮಯಾ ಮೇ ಶುದ್ಧ್ಯಂತಾಂ"—ಎಂಬ ವಿರಜಾ ಮಂತ್ರೋಕ್ತ ಶೋಧ್ಯತ್ವವು, "ಶುದ್ಧಂ ರಾಜ ಹೃದಯಂ"—ಎಂಬಂತೆ, ಭಕ್ತಿಯಿಂದ ಶಾಂತವಾದ ನಿಗ್ರಹೆ ಸಂಕಲ್ಪರೂಪವೆಂದರ್ಥವೇ ಹೊರತು ಮೊದಲು ಅಶುದ್ಧವಾದ ಅವನಿಗೆ ಒಂದು ಶುದ್ಧಿ ವಿಶೇಷವೆಂದಲ್ಲ. "ಏತಮಾನನ್ದಮಯಮಾತ್ಮನಮುಪ ಸಂಕ್ರಾಮತಿ"—ಎಂದು ಹೇಳಲ್ಪಟ್ಟ ಉಪಸಂಕ್ರಾನ್ತಿಯು ಪ್ರಾಪ್ತಿ—ಅಂದರೆ ಹಿಂದೆ ಅನುಭವಿಸದಿದ್ದ ಪರಿಪೂರ್ಣ ಬ್ರಹ್ಮಾನುಭವವನ್ನು ಪಡೆಯುವುದು. ಇದನ್ನೇ "ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತೇತಿ"—ಎಂದು ಹೇಳಿದೆಯಷ್ಟೆ! ಅಥವಾ "ವೈಕುಂಠೇತು ಪರೇಲೋಕೇ" ಎಂದಿರುವ ದೇಶವಿಶೇಷ ಪ್ರಾಪ್ತಿ. "ಬ್ರಹ್ಮಪುಚ್ಛಂ ಪ್ರತಿಷ್ಠಾ"—ಎಂಬುದರಿಂದ, ಆನಂದಮಯನೇ ಬ್ರಹ್ಮ ವೆಂದಲ್ಲಿ ನಿರ್ದೇಹನೂ ನಿರಂಶ (ನಿರವಯವ)ನೂ ಆದ ಅವನಲ್ಲಿ ಶಿರಃ ಪುಚ್ಛಾದಿಗಳು ಘಟಿಸಲಾಗದುದರಿಂದ, ಸರ್ವಭೂತಗಳಿಗೂ ಅಧಿಷ್ಠಾನಭೂತವಾದ ಪುಚ್ಛವೇ ಪರಬ್ರಹ್ಮ ವೆಂಬ ಪುಚ್ಛ ಬ್ರಹ್ಮವಾದಿಗೆ ಉತ್ತರ. "ಸ್ವೇಮಹಿಮ್ನಿ ಪ್ರತಿಷ್ಠಿತಃ"—ಇತ್ಯಾದಿ ನ್ಯಾಯದಿಂದ ಸರ್ವಕ್ಕೂ ಆಧಾರನಾದ ಅವನಿಗೆ ಆಧಾರವಾದುದು ಮತ್ತೆ ಯಾವುದೂ ಇಲ್ಲ ಅವನಿಗೆ. ಅವನೇ ಆಧಾರ—ಎಂಬುದು.

ಸೂತ್ರ ೨—**ವಿಕಾರ ಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್**

**ಪ್ರತಿಪದಾರ್ಥ**

[ವಿಕಾರ ಶಬ್ದಾತ್] = ವಿಕಾರಾರ್ಥಕವಾದ "ಮಯಟ್"—ಪ್ರತ್ಯಯ ಹೇಳ ಲ್ಪಟ್ಟಿರುವುದರಿಂದ, [ನ] = ಆನಂದಮಯ ಪರಮಾತ್ಮನಲ್ಲ. [ಇತಿಚೇತ್] = ಎಂದಲ್ಲಿ

[ನ] = ಹಾಗಲ್ಲ [ ಪ್ರಾಚುರ್ಯಾತ್] = ' ಮಯಟ್ '—ಪ್ರತ್ಯಯ ಪ್ರಾಚುರ್ಯಾರ್ಥಕವಾದುದರಿಂದ, (ಪರಮಾತ್ಮನೇ ಆನಂದಮಯ)

**ವಿವರಣೆ**

" ಆನನ್ದಮಯಃ "—ಎಂದು ಆನನ್ದಪದದ ಮೇಲಿರುವ ' ಮಯಟ್ — ಪ್ರತ್ಯಯಕ್ಕೆ ವಿಕಾರವೆಂದರ್ಥ ಆದ್ದರಿಂದ ' ಆನಂದಮಯ '—ಎಂಬ ಪದಕ್ಕೆ ಆನಂದ ವಿಕಾರ, ಅಂದರ ಆನಂದದ ಪರಿಣಾಮ ಎಂದರ್ಥ. ಪರಮಾತ್ಮನು ಪರಿಣಾಮಾದಿ ವಿಕಾರ ಶೂನ್ಯನಾದ್ದರಿಂಡ, ಆನಂದಮಯ ಪದವು ಪರಮಾತ್ಮಪರವಲ್ಲ—ಎಂಬುದು ಪೂರ್ವಪಕ್ಷ

" ಮಯಟ್ "—ಪ್ರತ್ಯಯಕ್ಕೆ ' ವಿಕಾರ —ಎಂದು ಅರ್ಥವಾದರ, ಜೀವನೂ ವಿಕಾರಶೂನ್ಯನಾದ್ದರಿಂದ ಅದು ಜೀವಪರವೂ ಆಗದು ಆದ್ದರಿಂದ ಈ ' ಮಯಟ್ ' —ಪ್ರತ್ಯಯಕ್ಕೆ ಪ್ರಾಚುರ್ಯವೆಂದರ್ಥ. ಆನಂದಮಯ—ಎಂದರ ಆನಂದಪೂರ್ಣವಾಗಿ ನೆರೆದವನು ಅಧಿಕನಾದ ಆನಂದವುಳ್ಳವನು—ಎಂದು ಅರ್ಥವಾಗುವುದರಿಂದ ಈ ಪದವು ಪರಮಾತ್ಮನನ್ನು ಹೇಳುವುದರಲ್ಲಿ ತಡೆಯಿಲ್ಲ—ಎಂಬುದು ಸಿದ್ಧಾಂತ

### ಸೂತ್ರ ೩—**ತದ್ಧೇತುವ್ಯಪದೇಶಾಚ್ಚ**

' ಏಷಹ್ಯೇವಾನನ್ದಯಾತಿ "—ಎಂದು ಆನಂದಮಯನೇ ಜೀವನನ್ನು ಆನಂದ ಗೊಳಿಸುವವನು ಎಂದು ಹೇಳುವುದರಿಂದ ಈ ಆನಂದಮಯ ಜೀವಾತ್ಮನಿಗಿಂತ ಬೇರೆಯವನೇ ಆಗಿರಬೇಕು

### ಸೂತ್ರ ೪—**ಮಾನ್ತ್ರವರ್ಣಿಕಮೇವ ಚ ಗೀಯತೇ**

[ಮಾನ್ತ್ರವರ್ಣಿಕಂ ಏವ]—"ಸತ್ಯಂ ಜ್ಞಾನ ಮನನ್ತಂ ಬ್ರಹ್ಮ"—ಎಂಬ ಮಂತ್ರ ವರ್ಣದಲ್ಲಿ ಹೇಳಲ್ಪಟ್ಟ ಪರಬ್ರಹ್ಮವೇ. " ಅನ್ಯೋಽನ್ತರ ಆತ್ಮಾನನ್ದಮಯಃ "—ಎಂಬುದರಲ್ಲಿಯೂ ಆನಂದಮಯ ಶಬ್ದದಿಂದ ಹೇಳಲ್ಪಟ್ಟಿರುವುದರಿಂದ, ಜೀವನಿಗಿಂತಲೂ ಬೇರೆಯಾದ, ಪರಬ್ರಹ್ಮ ಶಬ್ದವಾಚ್ಯನಾದ ಪುರುಷೋತ್ತಮನೇ ಆನಂದಮಯ ಶಬ್ದದಿಂದ ಹೇಳಲ್ಪಟ್ಟಿದ್ದಾನೆ

### ಸೂತ್ರ ೫—**ನೇತರೋಽನುಪಪತ್ತೇಃ**

ಈ ಸೂತ್ರದಲ್ಲಿ ಮುಕ್ತಪುರುಷನೂ ಕೂಡ ಆನಂದಮಯ ಶಬ್ದಕ್ಕೆ ಅರ್ಥವಲ್ಲ—ಏಕೆಂದರ, ಆನಂದಮಯನಿಗೆ, "ವಿಪಶ್ಚಿತಾ "—ಎಂದು ಸತ್ಯಸಂಕಲ್ಪತ್ವವನ್ನೂ ಹೇಳಿದೆ. ಈ ನಿರುಪಾಧಿಕಮಾದ, ಅಂದರೆ, ನಡುವೆ ಬಂದದ್ದಾಗದೆ ಯಾವಾಗಲೂ ಇರತಕ್ಕ ಸತ್ಯ ಸಂಕಲ್ಪತ್ವ, ಅಂದರೆ ತಾನು ನೆನೆದ ಕಾರ್ಯವನ್ನು ಕೊರತೆಯಿಲ್ಲದೆ ಆಗಲೇ ನೆರವೇರಿಸುವ ಶಕ್ತಿಯು ಮೊದಲು ಸಂಸಾರಿಯಾಗಿದ್ದು ತರುವಾಯ ಮೋಕ್ಷ ಹೊಂದಿದ ಮುಕ್ತನಿಗೂ ಸಂಭವಿಸದಾದ್ದರಿಂದ, ಅವನೂ ಆನಂದಮಯನಲ್ಲ

ಸೂತ್ರ ೬—**ಭೇದವ್ಯಪದೇಶಾಚ್ಚ**

"ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾತ್ ಅನ್ಯೋಽನ್ತರ ಆತ್ಮಾನಂದಮಯಃ"—ಎಂಬಂತೆ ವಿಜ್ಞಾನಮಯನೆಂದು ಹೇಳಲ್ಪಟ್ಟಿರುವ ಜೀವಾತ್ಮನಿಗಿಂತ ಆನಂದಮಯನು ಅನ್ಯ ಎಂದು ಹೇಳುವುದರಿಂದ ಆನಂದಮಯ ಜೀವಾತ್ಮನಾಗಲಾರ.

ಸೂತ್ರ ೭—**ಕಾಮಾಚ್ಚ ನಾನುಮಾನಾಪೇಕ್ಷಾ**

ಜೀವನು ಜಗತ್ತನ್ನು ಸೃಷ್ಟಿಸುವಾಗ ಮೂಲ ಪ್ರಕೃತಿಯ ಸಹಾಯ ಬೇಕು. ಆನಂದಮಯನು ಅದರ ಸಹಾಯವಿಲ್ಲದೆ ಸಂಕಲ್ಪದಿಂದಲೇ ಜಗತ್ತನ್ನು ಸೃಷ್ಟಿಸುತ್ತಾನೆಂದು ಹೇಳಿರುವುದರಿಂದ ಆನಂದಮಯ ಜೀವಾತ್ಮನಲ್ಲ. ಈ ಸೂತ್ರದಲ್ಲಿಯ ಅನುಮಾನ ಶಬ್ದಕ್ಕೆ ಮೂಲ ಪ್ರಕೃತಿಯೆಂದು ಅರ್ಥ.

ಸೂತ್ರ ೮—**ಅಸ್ಮಿನ್ ಅಸ್ಯ ಚ ತದ್ಯೋಗಂ ಶಾಸ್ತಿ**

[ಅಸ್ಮಿನ್] = ಈ ಆನಂದಮಯನಲ್ಲಿ (ಸೇರಿದಲ್ಲಿ) [ಅಸ್ಯ] = ಈ ಜೀವನಿಗೆ [ತದ್ಯೋಗಂ] = ಆನಂದ ಪ್ರಾಪ್ತಿಯನ್ನು, [ಶಾಸ್ತಿ ಚ] = ಶಾಸ್ತ್ರ ಹೇಳುತ್ತದೆ.

**ವಿವರಣೆ**

"ರಸಂಹ್ಯೇವಾಯಂ ಲಬ್ಧ್ವಾ ಆನನ್ದೀ ಭವತಿ,"—ಎಂಬ ಶ್ರುತಿ ಆನನ್ದ ಸ್ವರೂಪನಾದ ಆನಂದಮಯನನ್ನು ಹೊಂದಿ ಜೀವಾತ್ಮನೂ ಆನಂದವುಳ್ಳವನಾಗುವನು, ಎಂದು ಹೇಳುತ್ತದೆ. ಯಾವನನ್ನು ಹೊಂದಿದಲ್ಲಿ ಯಾವನಿಗೆ ಆನಂದವುಂಟಾಗುವುದೋ, ಅವನು ಅವನಿಗಿಂತ ಬೇರೆಯಾದವನಾಗಿರಬೇಕು. ಆದ್ದರಿಂದ, ಜಗತ್ಕಾರಣವಾಗಿ ಹೇಳಲ್ಪಟ್ಟ ಆನಂದಮಯನು ಜೀವನಲ್ಲ—ಪರಬ್ರಹ್ಮವಾದ ಪುರುಷೋತ್ತಮ.

**ಅಧಿಕರಣ 7—ಅನ್ತಸ್ತದ್ಧರ್ಮೋಪದೇಶಾತ್**

(ಅನ್ತರಾದಿತ್ಯವಿದ್ಯಾ]

[ಅನ್ತರಧಿಕರಣ]

**ಸಂಗತಿ**

ಜಗತ್ಕಾರಣವಾದಿ ವಾಕ್ಯಗಳು ಪರಮಾತ್ಮಪರವೆಂಬುದಾಗಿ ನಿರೂಪಿಸಲ್ಪಟ್ಟಿವೆ. ಕಾರಣ ವಾಕ್ಯವಲ್ಲದಿದ್ದಾಗ್ಯೂ, ಅನ್ತರಾದಿತ್ಯವಿದ್ಯೆ ಇಲ್ಲಿ ಹೇಗೆ ನಿರೂಪಿಸಲ್ಪಡುತ್ತೆ ?—ಎಂದರೆ ಆನಂದಮಯಾಧಿಕರಣಕ್ಕೇ ಈ ಅಧಿಕರಣ ಶೇಷಭೂತವಾದ್ದರಿಂದ—ಎಂದು ಉತ್ತರ. ಇವು ಬೇರೆ ಬೇರೆ ಉಪನಿಷತ್ತುಗಳಾದರೂ ಅದರ ಶೇಷಭೂತವಾಗಿ ನಿರೂಪಿತವಾಗುವುದು ಹೇಗೆ?—ಎಂದರೆ, ಆನನ್ದ ವಲ್ಲಿಯಲ್ಲಿ "ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ"—ಎಂದು ಆನಂದಮಯನೇ ಆದಿತ್ಯಮಂಡಲದೊಳಗಿರುವವನೆಂದು ಹೇಳಿದೆ. ಛಾಂದೋಗ್ಯದಲ್ಲಿ ಹೇಳಿರುವ ಆದಿತ್ಯಾಂತರ್ವರ್ತಿಗೆ ಕರಚರಣಾದಿ ದೇಹ ಸಂಬಂಧವಿರುವುದರಿಂದ ಅವನು ಜೀವನೇ ಆಗಿರಬೇಕಾದ್ದರಿಂದ, ಆನಂದವಲ್ಲಿಯಲ್ಲಿಯೂ ಜೀವನೇ ಆದಿತ್ಯಮಂಡಲಾಂತರ್ವರ್ತಿಯಾದ ಪುರುಷ—ಆದ್ದರಿಂದ ಆನಂದಮಯ ಜೀವನೇ ಸರಿ—ಎಂದು ಶಂಕೆಯಿರುವುದರಿಂದ ಅದರ ಶೇಷಭೂತವಾಗಿ ಅದರ ಮುಂದಿನದಾದ ಈ ಅಧಿಕರಣ ಆರಂಭವಾಗಿದೆಯೆಂದು ಉತ್ತರ. ಹಾಗಾದರೆ

ಇದು ಬೇರೆ ಅಧಿಕರಣವಾಗಿರುವುದೇಕೆ ?—ಎಂದಲ್ಲಿ ಹಿಂದೆ ಹೇಳಿದ ನ್ಯಾಯಕ್ಕೆ ವಿಷಯುವಲ್ಲದ ಉಪನಿಷದ್ಭೇದವೇ ಅದಕ್ಕೆ ಕಾರಣ. "ತಸ್ಯೈಷ ಏವ ಶಾರೀರ ಆತ್ಮಾ"—ಎಂಬ ವಾಕ್ಯ ಸಂದರ್ಭದಲ್ಲಿ ಹಿಂದೆಯೇ ಶರೀರ ಸಂಬಂಧ ಪರಿಹೃತವಾಗಿರುವಲ್ಲಿ ಮತ್ತೆ ಆ ಶಂಕೆಯೇಕೆ ?—ಎಂದಲ್ಲಿ, ಹಿಂದೆ ಹೇಳಿದ್ದು ಕರಚರಣಾದಿಗಳಿಂದ ಕೂಡಿದ ಶರೀರ ವಾಗಿರಲಿಲ್ಲ. ಅಲ್ಲಿ ಅನ್ನಮಯಾದಿಗಳಿಗೆ ಹೇಳಿದ ಶರೀರ ಸಂಬಂಧ ಶೇಷ—ಶೇಷಿಭಾವ ಲಕ್ಷಣದಿಂದಲೋ— ಆಧಾರಾಧೇಯ ಭಾವದಿಂದಲೋ ಹೇಗೋ ಶರೀರ ಶರೀರಿಭಾವ ಉಪಪನ್ನ. ಈ ಛಾಂದೋಗ್ಯ ವಾಕ್ಯದಲ್ಲಿಯಾದರೋ—"ಹಿರಣ್ಯಶ್ಮಶ್ರುಃ, ಹಿರಣ್ಯಕೇಶಃ" ಇತ್ಯಾದಿಯಿಂದ ಕರಚರಣಾದ್ಯವಯವಗಳುಳ್ಳ ಶರೀರ ಶ್ರುತವಾಗಿದೆ. ಇಂತಹ ಶರೀರ ಕರ್ಮಕೃತವೆಂಬುದು ಲೋಕ ಪ್ರಸಿದ್ಧ—ಆದ್ದರಿಂದ ಈ ಶಂಕೆಯು ನಿರಸನಕ್ಕಾಗಿ ಆ ಅಧಿಕರಣಕ್ಕೆ ಶೇಷಭೂತವಾಗಿ ಈ ಅಧಿಕರಣ ಆರಂಭವಾಗಿದೆ. ಹಿಂದೆ ಜೀವ ಸಾಮಾನ್ಯ ನಿರಾಸ, ಇಲ್ಲಿ ಜೀವ ವಿಶೇಷ ನಿರಾಸ ಎಂದೂ ಸಂಗತಿಯನ್ನು ಹೇಳಬಹುದಾಗಿದೆ.

## ವಿಷಯ ವಾಕ್ಯ

ಛಾಂದೋಗ್ಯದಲ್ಲಿ—"ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುಃ ಹಿರಣ್ಯಕೇಶಃ ಆಪ್ರಣಖಾತ್ ಸರ್ವ ಏವ ಸುವರ್ಣಃ ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವ ಮಕ್ಷಿಣೀ ತಸ್ಯೋದಿತಿ ನಾಮ ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತಃ ಉದೇತಿ ಹವೈಸರ್ವೇಭ್ಯಃ ಪಾಪ್ಮಭ್ಯೋ ಯ ಏವಂ ವೇದ ತಸ್ಯಋಕ್ಚ ಸಾಮಚ ಗೇಷ್ಣೌ ಇತ್ಯಧಿದೈವತ ಮಥಾಧ್ಯಾತ್ಮಮಪಿ, ಅಥ ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಸೈವಋಕ್ ಸಾಮ ತದುಕ್ಥಂ ತದ್ಯಜುಸ್ತದ್ಬ್ರಹ್ಮ ತಸ್ಯೈತಸ್ಯ ತದೇವ ರೂಪಂ ಯದ ಮುಷ್ಯ ರೂಪಂ ಯಾವ ಮುಷ್ಯ ಗೇಷ್ಣೌತಾಗೇಷ್ಣೌಯನ್ನಾಮತನ್ನಾಮ." ಎಂಬುದು.

## ಸೂತ್ರದ ಪ್ರತಿ ಪದಾರ್ಥ

[ಅಂತಃ] = ಸೂರ್ಯಮಂಡಲ ಮತ್ತು ಅಕ್ಷಿಯೊಳಗಿನ ಪುರುಷ [ತದ್ಧರ್ಮೋಪ ದೇಶಾತ್] = (ಆ ಪುರಷನಿಗೆ) ಪರಮಾತ್ಮನಿಗೇ ಅಸಾಧಾರಣ ಧರ್ಮಗಳನ್ನು ಹೇಳುವುದರಿಂದ, (ಪರಮಾತ್ಮಾ).

## ವಿವರಣೆ

"ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋದೃಶ್ಯತೇ."- ಎಂಬ ವಿಷಯವಾಕ್ಯದಲ್ಲಿ, ಸೂರ್ಯಮಂಡಲ ಮಧ್ಯವರ್ತಿಯಾಗಿ ಸ್ವರ್ಣಮಯ ದಿವ್ಯ ವಿಗ್ರಹವುಳ್ಳವನಾಗಿ ಹೇಳಲ್ಪಟ್ಟವನು ಜೀವಾತ್ಮನೋ ಅಥವಾ ಪರಮಾತ್ಮನೋ ? —ಎಂದು ಸಂಶಯ.

"ಹಿರಣ್ಯಶ್ಮಶ್ರುರ್ಹಿರಣ್ಯಕೇಶ."—ಎಂದು ಆ ಪುರುಷನಿಗೆ ಶರೀರಾವಯವಗಳನ್ನು ಹೇಳಿದೆ. ಶರೀರವೆಂಬುದು ಕರ್ಮಫಲ ಭೋಗಕ್ಕಾಗಿ ಜೀವನಿಗೇ ಇರತಕ್ಕದ್ದು. ಆದ್ದರಿಂದ ಆ ಪುರುಷ ಜೀವಾತ್ಮನೆಂಬುದು ಪೂರ್ವಪಕ್ಷ.

"ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತಃ"—ಎಂದು ಅಪಹತಪಾಪ್ಮತ್ವಾದಿ ಕಲ್ಯಾಣ ಗುಣಗಳುಳ್ಳವನೆಂದು ಹೇಳಿರುವುದರಿಂದ, ಈ ಗುಣಗಳು ಜೀವನಲ್ಲಿ ಅಸಂಭವಗಳಾದ್ದರಿಂದ, ಸೂರ್ಯಮಂಡಲ ಮಧ್ಯವರ್ತಿಯಾದ ಆ ಪುರುಷ ಜೀವನಿಗಿಂತ ಬೇರೆಯಾದ ಪರಮಾತ್ಮಾ. ಅವನಿಗೆ ಜ್ಞಾನಾದಿ ಗುಣಗಳಂತೆ, ಅಪ್ರಾಕೃತ ದಿವ್ಯ ವಿಗ್ರಹವೂ ಉಂಟು— ಎಂಬುದು ಸಿದ್ಧಾಂತ.

ಸೂತ್ರ ೨—**ಭೇದವ್ಯಪದೇಶಾಚ್ಚಾನ್ಯಃ**

"ಯ ಆದಿತ್ಯೇ ತಿಷ್ಠನ್ ಆದಿತ್ಯಾದಂತರಃ"—ಎಂದು ಸೂರ್ಯಮಂಡಲದಲ್ಲಿರುವ ಆ ಪುರುಷನು ಸೂರ್ಯನಿಗಿಂತ ಬೇರೆಯಾದವನು ಎಂದು ಹೇಳಿರುವುದರಿಂದ, ಅವನು ಸೂರ್ಯರೂಪಿಯಾದ ಜೀವನಾಗನು, ಪರಮಾತ್ಮನೇ ಸರಿ.

## 8. ಆಕಾಶಾಧಿಕರಣಂ—ಆಕಾಶಸ್ತಲ್ಲಿಂಗಾತ್

[ಆಕಾಶವಿದ್ಯಾ]

### ಸಂಗತಿ

ಈಕ್ಷತ್ಯಧಿಕರಣದಲ್ಲಿ 'ಸಂಕಲ್ಪ'—ಎಂಬುದರಿಂದ ಪ್ರಧಾನ ವ್ಯಾವೃತ್ತವಾಯಿತು. ಆನಂದಮಯಾಧಿಕರಣದಲ್ಲಿ 'ಆನಂದಾಭ್ಯಾಸ' ದಿಂದ ಜೀವ ಸಾಮಾನ್ಯ ವ್ಯಾವೃತ್ತ- ಅಂತರಧಿಕರಣದಲ್ಲಿ-ಅಪ್ರಾಕೃತರೂಪ ವಿಶೇಷ ಹೇಳಿರುವುದರಿಂದ ಉಪಚಿತಪುಣ್ಯ ವಿಶೇಷವುಳ್ಳ ಜೀವನೂ ವ್ಯಾವೃತ್ತ. ಅದರಲ್ಲಿಯೇ 'ಕಪ್ಯಾಸಂ'— ಎಂದು ಪುಂಡರೀಕಾಕ್ಷತ್ವ ಶ್ರುತವಾಗಿರುವುದರಿಂದ ಚತುರ್ಮುಖಾದಿಗಳೂ ವ್ಯಾವೃತ್ತರಾದರು .ಇಲ್ಲಿಗೆ ಶಾಸ್ತ್ರಕೃತ್ಯ ಮುಗಿಯಿತು. ಪ್ರಥಮಾಧ್ಯಾಯದ ಮುಂದಿನ ಅಧಿಕರಣಗಳು ನಿರರ್ಥಕವೆಂದಲ್ಲಿ—"ಅಸ್ಪಷ್ಟತರಮಸ್ಪಷ್ಟಂ ಸ್ಪಷ್ಟಂ ಛಾಯಾನುಸಾರಿಚ."— ಎಂದು ಹೇಳಿರುವ ಕ್ರಮದಿಂದ ಉತ್ಥಾನದ್ವಾರ ಭೇದದಿಂದ ಕ್ರಮವಾಗಿ ಏಳುವ ಮೃದೂಪಕ್ರಮ ಕ್ರೂರ ನಿಷ್ಠುರಾದ—ಅಂದರೆ, ಪ್ರಮಾಣ-ಪ್ರಮೇಯಗಳನ್ನು ಅಂಗೀಕರಿಸುವವರಂತೆ ಮೊದಲು ಮೃದುವಾಗಿ ಉಪಕ್ರಮಿಸಿ ಕಡೆಗೆ ಸರ್ವಶೂನ್ಯವೆನ್ನುವ ಮಟ್ಟಕ್ಕೆ ಇಳಿಯುವ ಪೂರ್ವಪಕ್ಷಿಗಳನ್ನು ಈ ಅಧ್ಯಾಯದಲ್ಲಿ ನಿರಾಕರಿಸುವವರಾಗಿ ಈ ಅಧ್ಯಾಯದ ಮಿಕ್ಕ ಅಧಿಕರಣಗಳಿಂದ ಭಕ್ತಿ ವೃದ್ಧಿಗಾಗಿ ಭಗವದ್ಗುಣಗಳನ್ನೂ ವಿಶೇಷವಾಗಿ ಪ್ರಕಾಶಗೊಳಿಸುತ್ತಾರೆ. ಯುದ್ಧಗಳಲ್ಲಿ ಕಾಲಾಳು-ಕುದುರೆ-ಗಜ-ರಥ ಸೈನ್ಯಗಳನ್ನು ಮುಂದುಮಾಡಿ ಮೊದಮೊದಲು ದುರ್ಬಲರನ್ನು ಮುಂದೆ ಬಿಟ್ಟು ಅವರು ಭಗ್ನರಾದ ಮೇಲೆ ಹೊರಟು ಬಂದ ಪ್ರಬಲರೊಡನೆ ಯುದ್ಧಕ್ಕೆ ನಿಲ್ಲುವಂತೆ, ಇಲ್ಲಿಯೂ ಅಸ್ಪಷ್ಟತರ ಜೀವಾದಿ ಲಿಂಗಗಳೊಳಗೆ ಮೊದ ಮೊದಲಿನವು ಭಗ್ನವಾದ ಮೇಲೆ ಮತ್ತೆ ಉತ್ತರೋತ್ತರ ಲಿಂಗಗಳನ್ನು ಪರಿಗ್ರಹಿಸುವುದರಿಂದ ಪೂರ್ವಪಕ್ಷ ಪ್ರವೃತ್ತವಾಗಿದೆ. ಅದರ ಪ್ರವೃತ್ತಿಯನ್ನು ಕುಂಠನಮಾಡಿದ ಮಾತ್ರದಿಂದ ಉಂಟಾದ ತತ್ತ್ವಜ್ಞಾನ ಸ್ಥಿರವಾಗಿ ನಿಲ್ಲುವುದಿಲ್ಲ. ಅದಕ್ಕಾಗಿ ಅಧ್ಯಾಯ ಶೇಷವನ್ನೂ ಆರಂಭಿಸಲೇ ಬೇಕು. ಅಲ್ಲದೆ, ಎಲ್ಲಾ ಅಧಿಕರಣಗಳಲ್ಲಿಯೂ ಆಯಾ ಅಧಿಕರಣ ನಿಯತಗಳಾದ ಭಗವದ್ಗುಣಗಳು ವಿಶೇಷತಃ ಪ್ರಕಾಶಿಸಲ್ಪಡುತ್ತವೆ. ಆ ಗುಣಗಳನ್ನು ಸಂಪೂರ್ಣವಾಗಿ

ಅನುಸಂಧಾನ ಮಾಡುವುದು ಅಧ್ಯಾಯ ಶೇಷಕ್ಕೆ ಪ್ರಯೋಜನ ನಿರ್ವಿಶೇಷವಾದಿಗಳಿಗಾದರೋ ಒಂದೇ ಒಂದು ಅಧಿಕರಣದಿಂದಲೇ ನಿರ್ವಿಶೇಷವೆಂಬುದು ತಿಳಿಯುವುದರಿಂದ ಪ್ರತಿಪಾದ್ಯ ಗುಣವಿಶೇಷವಿಲ್ಲದುದರಿಂದ ಅದರ ಮುಂದಿನ ಅಧಿಕರಣಗಳು ನಿಷ್ಫಲವೆಂದು ತಿಳಿಯತಕ್ಕದ್ದು.

## ಪ್ರಕೃತ ಅಧಿಕರಣ ಸಂಗತಿ

ಜಗತ್ಕಾರಣವಾಚಿಗಳಾದ ಸತ್, ಬ್ರಹ್ಮ, ಆತ್ಮಾ ಮುಂತಾದ ಸಾಧಾರಣ ಶಬ್ದಗಳಿಂದ ಜಗತ್ಕಾರಣ ನಿರ್ದಿಷ್ಟವಾಗಿರಲಾಗಿ, ಈಕ್ಷಣ ವಿಶೇಷ—ಆನಂದ ವಿಶೇಷರೂಪ ವಿಶೇಷಾರ್ಥ ಸ್ವಭಾವದಿಂದ ಪ್ರಧಾನ ಮತ್ತು ಕ್ಷೇತ್ರಜ್ಞರೇ ಮುಂತಾದವರಿಗಿಂತ ಬ್ರಹ್ಮ ಅತಿರಿಕ್ತವಾದುದೆನ್ನಲಾಯಿತು ಈಗ ಆಕಾಶಾದಿ ವಿಶೇಷ ಶಬ್ದಗಳಿಂದ ನಿರ್ದಿಷ್ಟವಾದ ಜಗತ್ಕಾರಣತ್ವ–ಜಗದೈಶ್ವರ್ಯಾದಿವಾದದಲ್ಲಿಯೂ ಕೂಡ ಆಕಾಶಾದಿ ಶಬ್ದಗಳಿಂದ ಹೇಳಲ್ಪಟ್ಟ ಪ್ರಸಿದ್ಧ ಚಿದಚಿದ್ವಸ್ತುವಿಗಿಂದ ಬೇರೆ ಯಾದದ್ದು ಬ್ರಹ್ಮ —ಎಂದು ಪ್ರತಿಪಾದಿಸಲ್ಪಡುತ್ತದೆ ಇದಕ್ಕೆ ಪ್ರತ್ಯುದಾಹೃತಿ ಸಂಗತಿಯೆಂದು ಹೆಸರು

"ಪೂರ್ವಾಧಿಕೃತಿ ಸಿದ್ಧಾಂತ ನ್ಯಾಯನ್ಯಾವಿಷಯಿಕ್ರಿಯಾಂ ।
ಆಲಂಬ್ಯ ಪೂರ್ವಪಕ್ಷಸ್ಯೋತ್ಥಾನೇಸ್ಯಾತ್ಪ್ರತ್ಯುದಾಹೃತಿಃ'' ॥

—ಎಂಬುದು ಅದರ ಲಕ್ಷಣ ಇದರಂತೆ—

"ವಿಶೇಷಲಿಂಗಂ ಪ್ರಬಲಂ ಸಾಮಾನ್ಯ ಶ್ರುತಿ ತೋ ಮತಂ ।
ವಿಪರೀತ ಮಿಹಾಕಾಶನಯೋಽತಃ ಪ್ರತ್ಯುದಾಹೃತಿಃ''॥

—ಎಂದು ಈ ಅಧಿಕರಣ ಸಂಗತಿಯನ್ನು ಹೇಳಿದೆ.

## ವಿಷಯ ವಾಕ್ಯ

ಛಾಂದೋಗ್ಯದಲ್ಲಿ. "ಅಸ್ಯಲೋಕಸ್ಯ ಕಾ ಗತಿರಿತಿ ಆಕಾಶ ಇತಿ ಹೋವಾಚ ಸರ್ವಾಣಿ ಹವಾ ಇಮಾನಿ ಭೂತಾನ್ಯಾಕಾಶಾ ದೇವ ಸಮುತ್ಪದ್ಯಂತೇ ಆಕಾಶಂ ಪ್ರತ್ಯಸ್ತಂಯಂತಿ, ಆಕಾಶೋಹ್ಯೇವೈಭ್ಯೋ ಜ್ಯಾಯಾನ್ ಆಕಾಶಃ ಪರಾಯಣಂ."—ಎಂಬುದು.

## ಸೂತ್ರದ ಪ್ರತಿಪಧಾರ್ಥ

[ತಲ್ಲಿಂಗಾತ್] = ಪರಮಾತ್ಮ ಲಕ್ಷಣವನ್ನು ಹೇಳುವುದರಿಂದ[ಆಕಾಶಃ] = ಆಕಾಶ ಶಬ್ದವಾಚ್ಯನು (ಪರಮಾತ್ಮಾ).

ಮೇಲೆ ಹೇಳಿರುವ ವಿಷಯ ವಾಕ್ಯದಲ್ಲಿ ಆಕಾಶ ಜಗತ್ಕಾರಣ ಎಂದಿದೆ. ಇಲ್ಲಿ ಆಕಾಶ ಪದಕ್ಕೆ ಅರ್ಥ-ಪಂಚಭೂತಗಳಲ್ಲಿ ಎಣಿಸಲ್ಪಟ್ಟ ಆಕಾಶವೋ ? ಅಥವಾ ಪರಮಾತ್ಮನೋ ?—ಎಂದು ಸಂಶಯ. .ಐದನೆಯ ತತ್ತ್ವವಾದ ಆಕಾಶವೇ ಲೋಕದಲ್ಲಿ ಆಕಾಶವೆಂದು ಪ್ರಸಿದ್ಧವಾಗಿರುವುದರಿಂದ ಪಂಚಭೂತಗಳಲ್ಲೊಂದಾದ ಆಕಾಶವೇ ಇಲ್ಲಿ ಜಗತ್ಕಾರಣವೆಂದು ಹೇಳಿದೆಯೆನ್ನುವುದು ಪೂರ್ವಪಕ್ಷ. "ಸರ್ವಾಣಿ ಹವಾ ಇಮಾನಿ

ಭೂತಾನಿ''—ಎಂದು ಪ್ರಸಿದ್ಧವಾಗಿ, ಅಂದರೆ, ಈ ಸಕಲ ಪದಾರ್ಥಗಳೂ ಆಕಾಶದಿಂದಲೇ ಉಂಟಾಯಿತಲ್ಲವೇ ?—ಎಂದು ಹೇಳಿರುವುದರಿಂದ, ಆ ಜಗತ್ಕಾರಣತ್ವ ಪ್ರಸಿದ್ಧಿ ಬೇರೆ ಶ್ರುತಿಗಳಲ್ಲಿ," ಏಕೋ ಹವೈ ನಾರಾಯಣ ಆಸೀತ್."—ಎಂದು ಪರಮ ಪುರುಷ ನಿಗೇ ಉಂಟಾಗುವುದರಿಂದ ಆ ಪರಮ ಪುರುಷನೇ ಜಗತ್ಕಾರಣವಾಗಿ ಹೇಳಿದ ಆಕಾಶ ಪದಾರ್ಥ ಎಂದು ಸಿದ್ಧಾಂತ. ಆಕಾಶ—ಎಂದರೆ, ಚೆನ್ನಾಗಿ ಬೆಳಗುವದೆಂದರ್ಥ. ಇದು ಯೌಗಿಕಾರ್ಥ. ಮಹಾಭೂತಗಳಲ್ಲಿ ಸೇರಿದ ಶಿನೆಯದಾದ ಭೂತಾಕಾಶವೆಂಬುದು ರೂಢ್ಯರ್ಥ. ರೂಢಿ ಯೋಗವನ್ನು ಬಾಧಿಸುತ್ತದೆ ಎಂಬುದು ಸಿದ್ಧವಾದಾಗ್ಯೂ, ಪ್ರಮಾಣ ಪರಿಕ್ಲೃಪ್ತವಾದ ಯೋಗವು ರೂಢಿಯನ್ನೇ ಬಾಧಿಸುತ್ತದೆಯೆಂಬುದು ನ್ಯಾಯವಿತ್ತುಗಳ ನಿರ್ಣಯ. ಇಲ್ಲಿ "ಸರ್ವಾಣಿ ಹವಾ ಇಮಾನಿ ಭೂತಾನಿ...."ಎಂದು ಪ್ರಸಿದ್ಧವನ್ನಿ ರ್ದೇಶವಿದೆ.' ಹ ವಾ '—ಎಂಬುದು ಪ್ರಸಿದ್ಧಿಪ್ರತಿಪಾದಕವಾದ ಅವ್ಯಯ. ಪ್ರಸಿದ್ಧಿ ಕಾರಣವಾಕ್ಯಗಳಲ್ಲಿ ಕಂಡು ಬರುತ್ತೆ. ಅವುಗಳಲ್ಲಿ" ಛಾಗಪಶುನ್ಯಾಯ "—ವೇ ಮುಂತಾದು ದರಿಂದ ನಾರಾಯಣನಿಗೇ ಪರತ್ವವು ಸಿದ್ಧವೇ ಆಗಿದೆ.

## 9. ಪ್ರಾಣಾಧಿಕರಣ

### ಸೂತ್ರ—ಅತ ಏವ ಪ್ರಾಣಃ

[ಪ್ರಾಣವಿದ್ಯಾ]

**ಅತಿದೇಶ ಸಂಗತಿ—**

"ಅತ್ರ ಕೃತ್ಸ್ನಾಧಿಕಾಶಂಕಾಂ ಪೂರ್ವನ್ಯಾಯಾತಿ ದೇಶತಃ ।
ಅಪಾಕರೋತ್ ಪ್ರಾಣನಯೋ ಸಂಗತಿ ಸ್ಸ್ಯಾತಿದೇಶಿಕೀ ॥ "—ಎಂದು ಹೇಳಿದೆ.
"ಕೃತ್ಸ್ನಾಯತ್ರಾಧಿಕಾಶಂಕಾಂ' ಪೂರ್ವಮೇವಾತಿದಿಶ್ಯತೇ ।
ಸಂಗತಿಃ ಕಥಿತಾ ಸದ್ಭಿಃ ಕಾಚಿತ್ತ್ವ ತ್ರಾತಿ ದೇಶಿಕೀ " ॥—ಎಂಬುದು ಅತಿದೇಶ ಸಂಗತಿಯ ಲಕ್ಷಣ.

ಇಲ್ಲಿ ಆ ಅಧಿಕವಾದ ಆ ಶಂಕೆಯಾದರೋ—ಪ್ರಸಿದ್ಧಾಕಾಶದಲ್ಲಿ ಜಗದುತ್ಪತ್ತಿ ಕಣ್ಣಿಗೆ ಕಾಣಿಸದು. ಆದ್ದರಿಂದ ಆಕಾಶ ಶಬ್ದದಲ್ಲಿ ರೂಢ್ಯರ್ಥಭಂಗವು ನ್ಯಾಯ, ಇಲ್ಲಿಯಾ ದರೋ ಸಕಲ ಭೂತ ಜಾತಕ್ಕೂ ಪ್ರಾಣಕ್ಕೇ ಅಧೀನವಾದ ಸ್ಥಿತಿ ಪ್ರವೃತ್ತ್ಯಾದಿಗಳು ಕಣ್ಣಿಗೇ ಕಾಣಿಸುವುದರಿಂದ ಪ್ರಸಿದ್ಧವಾದ ಪ್ರಾಣವೇ ಜಗತ್ಕಾರಣವೆನ್ನುವುದೇ ಸರಿ. —ಎಂಬುದು

**ವಿಷಯವಾಕ್ಯ**

ಛಾಂದೋಗ್ಯದಲ್ಲಿ—" ಪ್ರಸ್ತೋತರ್ಯಾದೇವತಾ ಪ್ರಸ್ತಾವಮನ್ವಾಯತ್ತಾ "—ಎಂದು ಪ್ರಸ್ತಾಪಿಸಿ" ಕತಮಾ ಸಾ ದೇವತೇತಿ ಪ್ರಾಣ ಇತಿ ಹೋವಾ ಚ ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶಂತಿ ಪ್ರಾಣಮಭ್ಯುಜ್ಜಿಹತೇ ಸೈಷಾ ದೇವತಾ ಪ್ರಸ್ತಾವಮನ್ವಾಯತ್ತಾ ತಾಂ ಚೇದ ವಿದ್ವಾನ್ ಪ್ರಾಸ್ತೋಷ್ಯೋ ಮೂರ್ಧಾತೇ ವ್ಯಪತಿಷ್ಯತ್" ಇತಿ.

**ಸೂತ್ರಾರ್ಥ**

[ಅತ ಏವ] = ಈ ಹೇತುವಿನಿಂದಲೇ [ಪ್ರಾಣಃ] = ಪ್ರಾಣಶಬ್ದವಾಚ್ಯನು (ಪರಮಾತ್ಮಾ).

**ವಿವರಣೆ**

"ಕತಮಾ ಸಾ ದೇವತೇತಿ, —ಪ್ರಾಣ ಇತಿ ಹೋವಾಚ," —ಎಂಬ ಇಲ್ಲಿಯ ವಿಷಯವಾಕ್ಯದಲ್ಲಿ ಪ್ರಾಣವೇ ಜಗತ್ಕಾರಣ ಎಂದಿದೆ. ಪ್ರಾಣ ಎಂದರೆ ಬದುಕಿಸುವವನೆಂದರ್ಥ. ಇದು ಪ್ರಾಣವಾಯುವಿಗೂ ಪರಮಾತ್ಮನಿಗೂ ಉಂಟಾದುದರಿಂದ, ಅದು ವಾಯುರೂಪವಾದ ಪ್ರಾಣನೋ? ಅಥವಾ ಪರಮಾತ್ಮನೋ?—ಎಂದು ಸಂಶಯ. ಶರೀರದಲ್ಲಿ ಪ್ರಾಣವಿರುವವರೆಗೂ ಮನುಷ್ಯ—ಪಶು ಪಕ್ಷ್ಯಾದಿಗಳು ಜೀವಿಸಿರುತ್ತವೆ. ಪ್ರಾಣ ಅಗಲಿದಲ್ಲಿ ನಶಿಸುತ್ತವೆ.. ಆದ್ದರಿಂದ ಜೀವಮಯನಾದ ಜಗತ್ತಿಗೆ ಕಾರಣ ವಾಯುರೂಪವಾದ ಪ್ರಾಣನೇ. ಅದೇ ಇಲ್ಲಿ ಹೇಳಲ್ಪಟ್ಟಿದೆಯೆಂದು ಪೂರ್ವಪಕ್ಷ.

ಜಗತ್ತಿನಲ್ಲಿರುವ ಮರ, ಕಲ್ಲು ಮೊದಲಾದ ಅಚೇತನಗಳು ಪ್ರಾಣವಾಯು ಸಂಬಂಧವಿಲ್ಲದುವುಗಳಾದರೂ ಅಳಿವಿಲ್ಲದೆ ಕಾಣಲ್ಪಡುವುವು. ಆದ್ದರಿಂದ ಚೇತನಾ ಚೇತನ ಮಯವಾದ ಜಗತ್ತಿಗೆ ಪ್ರಾಣ ಕಾರಣವೆಂದು ಹೇಳಲಾಗದು. ಹಿಂದಿನಂತೆಯೇ ಇಲ್ಲಿಯೂ "ಸರ್ವಾಣಿ ಹವಾ ಇಮಾನಿ ಭೂತಾನಿ,"—ಎಂದು ಪ್ರಸಿದ್ಧವಾಗಿ ಹೇಳುವುದರಿಂದ ಆ ಕಾರಣತ್ವ ಪ್ರಸಿದ್ಧಿ ಪರಮ ಪುರುಷನಿಗೇ .ಉಂಟಾದ್ದರಿಂದ, ಇಲ್ಲಿಯೂ ಜಗತ್ಕಾರಣವಾಗಿ ಹೇಳಲ್ಪಟ್ಟ ಪ್ರಾಣವು ಪರಮಾತ್ಮಾ—ಎಂದು ಸಿದ್ಧಾಂತ.

## 10. ಜ್ಯೋತಿರಧಿಕರಣ

ಸೂತ್ರ—**ಜ್ಯೋತಿಶ್ಚರಣಾಭಿಧಾನಾತ್**

[ಗಾಯತ್ರೀ ಜ್ಯೋತಿರ್ವಿದ್ಯಾ]

**ಸಂಗತಿ—ಪ್ರತ್ಯುದಾಹೃತಿ**

"ಸ್ವವಾಕ್ಯೋಕ್ತ ಬ್ರಹ್ಮಲಿಂಗ ವಿಶೇಷಾದರ್ಶನಾದಿಹ ।

ಜ್ಯೋತಿರ್ವಿಚಾರ್ಯತೇ ತಸ್ಮಾತ್ ಪ್ರತ್ಯುದಾಹೃತಿ ಸಂಗತಿಃ ॥"—ಎಂದಿದೆ.

ಅಂದರೆ, ಹಿಂದಿನ ಎರಡು ಅಧಿಕರಣಗಳಲ್ಲಿ ಸರ್ವಕಾರಣತ್ವಾದಿಕ ಲಿಂಗ ಹೇಗೆ ವಿಶೇಷೋಕ್ತಿಯನ್ನು ಬಾಧಿಸುತ್ತದೆಯೋ ಹಾಗೆ ಮುಂದಿನ ಎರಡು ಅಧಿಕರಣಗಳಲ್ಲಿಯೂ ವಿಶೇಷೋಕ್ತಿಯನ್ನು ಬಾಧಿಸುವ ಲಿಂಗ ಯಾವುದೂ ಇಲ್ಲ. ಅಷ್ಟೇ ಅಲ್ಲ—ಪ್ರಸಿದ್ಧ ಜ್ಯೋತಿಸ್ ಮತ್ತು ಇಂದ್ರರಿಗೆ ಅನುಕೂಲವಾದ ಕಾಕ್ಷೇಯ ಜ್ಯೋತಿ ರೈಕ್ಯಾದಿಕ ಲಿಂಗವೂ ಇದೆ. ಅದು ಸಿದ್ಧಾಂತ ಭೂತವಾದ ಪರಬ್ರಹ್ಮತ್ವಕ್ಕೆ ಪ್ರತಿಕೂಲ. ಲಿಂಗ ಮಾತ್ರವೇ ಅಲ್ಲದೆ, ಜ್ಯೋತಿಃ. ಇಂದ್ರ —ಎಂಬ ವಿಶೇಷ ಶಬ್ದವೂ ಶ್ರುತವಾಗಿದೆ. ಆದ್ದರಿಂದ ಜ್ಯೋತಿಶ್ಶಬ್ದ ಪ್ರಸಿದ್ಧ ಜ್ಯೋತಿಸ್ಸನ್ನೇ ಹೇಳುತ್ತದೆ—ಎಂಬ ಶಂಕೆಯಿಂದ, ಜ್ಯೋತಿಶ್ಶಬ್ದ ವಿಚಾರ ಮಾಡುವುದಕ್ಕಾಗಿ ಈ ಅಧಿಕರಣ ಉತ್ಥಿತವಾಗಿದೆ.

## ವಿಷಯ ವಾಕ್ಯ

ಛಾಂದೋಗ್ಯದಲ್ಲಿ", ಅಥಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷ್ವನುತ್ತಮೇಷೂತ್ತಮೇಷು ಲೋಕೇ ಷ್ವಿದಂ ವಾವ ತದ್ಯದಿದಮಸ್ಮಿನ್ ಅಂತಃ ಪುರುಷೇ ಜ್ಯೋತಿಃ."—

## ಸೂತ್ರ ಪ್ರತಿಪದಾರ್ಥ

[ಚರಣಾಭಿಧಾನಾತ್] = (ಇಲ್ಲಿ ಹೇಳಿರುವ ಜ್ಯೋತಿಸ್ಸಿಗೆ ಸಮಸ್ತಭೂತಗಳೂ) ಪಾದವೆಂದು ಹೇಳವುದರಿಂದ [ಜ್ಯೋತಿಃ] = ಜ್ಯೋತಿಶ್ಶಬ್ದದಿಂದ ಹೇಳಲ್ಪಟ್ಟವನು (ಪರಮಾತ್ಮ.)

## ವಿವರಣೆ

ಮೇಲೆ ಹೇಳಿರುವ ವಿಷಯ ವಾಕ್ಯದಲ್ಲಿ ನಿರವಧಿಕತೇಜೋವಿಶಿಷ್ಟನಾಗಿ ಹೇಳಲ್ಪಟ್ಟವನು ಸೂರ್ಯ, ಅಗ್ನಿ ಮುಂತಾದ ತೇಜಸ್ಸಿನಲ್ಲಿ ಒಂದೋ ?—ಅಥವಾ ಪರಮ ಪುರುಷನೋ ?—ಎಂದು ಸಂಶಯ." ಇದಂವಾವ ತದ್ಯದಿದಮಸ್ಮಿನ್ನಂತಃ ಪುರುಷೇ ಜ್ಯೋತಿಃ."—ಎಂದು ಉದರದಲ್ಲಿರುವ ಜಠರಾಗ್ನಿಯೊಂದಿಗೆ ಐಕ್ಯವನ್ನು ಹೇಳಿರುವುದರಿಂದಲೂ, ಈ ವಾಕ್ಯದಲ್ಲಿ ಪರಮ ಪುರುಷ ಲಕ್ಷಣವನ್ನು ಹೇಳಿಲ್ಲವಾದ್ದರಿಂದಲೂ, ಈ ಜ್ಯೋತಿಶ್ಶಬ್ದಕ್ಕೆ ಅಗ್ನಿ ಮುಂತಾದ ತೇಜಸ್ಸುಗಳಲ್ಲಿ ಒಂದು ಎಂದು ತಿಳಿಯತಕ್ಕದ್ದು—ಎಂಬುದು ಪೂರ್ವಪಕ್ಷ.

ಹಿಂದಿನ ವಾಕ್ಯದಲ್ಲಿ, " ಪಾದೋಽಸ್ಯವಿಶ್ವಾಭೂತಾನಿ, "—ಎಂದು ಸಮಸ್ತ ಭೂತಗಳನ್ನೂ ಪರಮ ಪುರುಷನಿಗೆ ಪಾದವನ್ನಾಗಿ ಹೇಳಿ ಈ ವಾಕ್ಯದಲ್ಲಿ. " ಅಥಯದತಃ, " —ಎಂದು ಆ ಪರಮಪುರುಷನನ್ನೇ ಜ್ಯೋತಿಶ್ಶಬ್ದದಿಂದ ಹೇಳಿದೆ. ಸಮಸ್ತ ಭೂತಗಳೂ ಅಗ್ನಿ ಮುಂತಾದುವುಗಳಿಗೆ ಪಾದವಾಗದುದರಿಂದ. ಅವುಗಳನ್ನು ಪಾದವಾಗಿಯುಳ್ಳ ಪರಮ ಪುರುಷನೇ ಇಲ್ಲಿ ಜ್ಯೋತಿಶ್ಶಬ್ದಕ್ಕೆ ಅರ್ಥ. ಅವನನ್ನು ಜಠರಾಗ್ನಿ ಶರೀರನನ್ನಾಗಿ ಉಪಾಸಿಸಬೇಕೆನ್ನುವುದಕ್ಕಾಗಿ ಜಠರಾಗ್ನಿಯೊಂದಿಗೆ ಐಕ್ಯವನ್ನು ಹೇಳಿದೆಯೆಂಬುದು ಸಿದ್ಧಾಂತ.

ಸೂತ್ರ ೨—**ಛನ್ದೋಽಭಿಧಾನಾನ್ನೇತಿಚೇನ್ನ ತಥಾ ಚೇತೋಽರ್ಪಣನಿಗದಾತ್ ತಥಾಹಿ ದರ್ಶನಮ್**

## ಸೂತ್ರಾರ್ಥ

[ಛಂದೋಽಭಿಧಾನಾತ್] = (ಹಿಂದಿನ ವಾಕ್ಯದಲ್ಲಿ) ಛಂದಸ್ಸನ್ನು ಹೇಳಿರುವುದರಿಂದ. [ನ] = (ಆ ವಾಕ್ಯದಲ್ಲಿ ಹೇಳಲ್ಪಟ್ಟವನು) ಪರಮಪುರುಷನಲ್ಲ. [ಇತಿ ಚೇತ್] = ಹೀಗೆಂದಲ್ಲಿ, [ನ] = ಹಾಗಲ್ಲ. [ತಥಾ] = (ಪೂರ್ವವಾಕ್ಯದಲ್ಲಿ) ಆ ಗಾಯತ್ರೀರೂಪವಾಗಿ [ಚೇತೋಽರ್ಪಣ ನಿಗದಾತ್] = (ಪರಮ ಪುರುಷನನ್ನು ಮನಸ್ಸಿನಿಂದ ಧ್ಯಾನಿಸಬೇಕೆಂದು ನಿಶ್ಚಯಿಸುವುದರಿಂದ,(ಅವನು ಪರಮ ಪುರುಷನೇ) [ತಥಾಹಿ] = ನಾಲ್ಕು ಪಾದಗಳನ್ನುಳ್ಳದ್ದಾಗಿಯೂ [ದರ್ಶನಂ] = (ಗಾಯತ್ರೀ) ಕಾಣಲ್ಪಡುವುದು.

**ವಿವರಣೆ**

ಹಿಂದಿನ ವಾಕ್ಯದಲ್ಲಿ ("ಗಾಯತ್ರೀ ವಾ ಇದಗ್ಂ ಸರ್ವಮ್")— ಎಂದು ಗಾಯತ್ರಿಯನ್ನು ಹೇಳುವುದರಿಂದ, ಅನಂತರ ಹೇಳಲ್ಪಟ್ಟ "ಪಾದೋಽಸ್ಯವಿಶ್ವಾ ಭೂತಾನಿ," —ಎಂಬ ವಾಕ್ಯದಲ್ಲಿಯೂ ಆ ಗಾಯತ್ರಿಯನ್ನು ವಿಷಯವನ್ನಾಗಿ ತಿಳಿಯಬೇಕೇ ಹೊರತು ಅಪ್ರಸ್ತುತನಾದ ಪರಮಪುರುಷನನ್ನು ವಿಷಯವನ್ನಾಗಿ ತಿಳಿಯಲಾಗದು—ಎಂಬುದು ಪೂರ್ವಪಕ್ಷ.

ಪರಮಪುರುಷನನ್ನು ಗಾಯತ್ರಿಯಂತೆ ನಾಲ್ಕು ಪಾದಗಳನ್ನುಳ್ಳವನೆಂದು ಧ್ಯಾನಿಸಬೇಕೆನ್ನುವುದಕ್ಕಾಗಿ ಗಾಯತ್ರೀ ಶಬ್ದದಿಂದ ಪರಮಪುರುಷನನ್ನು ಹೇಳಿದೆಯೆಂದು ತಿಳಿಯತಕ್ಕದ್ದು. ಹೀಗೆ ತಿಳಿಯದಿದ್ದಲ್ಲಿ ಸಮಸ್ತ ಭೂತಗಳನ್ನೂ ಪಾದವಾಗಿ ಉಳ್ಳೋಣವು ಗಾಯತ್ರಿಗೆ ಹೊಂದದುದರಿಂದ ಆ ಶ್ರುತಿ ಅಪಾರ್ಥವಾದೀತು ಗಾಯತ್ರಿಗೆ ಮೂರೇ ಪಾದಗಳು ನಾಲ್ಕು ಪಾದಗಳಿಲ್ಲವೆಂದು ಭಾವಿಸಕೂಡದು. ಗಾಯತ್ರಿಗೆ, "ಇಂದ್ರಃ ಶಚೀ ಪತಿಃ, ವಲೇನ ಪೀಡಿತಃ, ದುಶ್ಚ್ಯವನೋ ವೃಷಾ, ಸಮಿತ್ಸುಸಾ ಸಹಿಃ,"—ಎಂದು ನಾಲ್ಕು ಪಾದಗಳೂ ಉಂಟೆಂಬುದು ಸಿದ್ಧಾಂತ.

ಸೂತ್ರ ೩— **ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಮ್**

**ಸೂತ್ರಾರ್ಥ**

[ಭೂತಾದಿ ಪಾದವ್ಯಪದೇಶೋಪಪತ್ತೇಃ, ಚ] = ಭೂತ, ಪೃಥಿವೀ ಶರೀರ, ಹೃದಯ—ಎಂಬ ಈ ನಾಲ್ಕನ್ನೂ "ಸೈಷಾ ಚತುಷ್ಪದಾ,"—ಎಂದು ಗಾಯತ್ರೀಗೆ ನಾಲ್ಕು ಪಾದಗಳಾಗಿ ಹೇಳಿರುವುದರಿಂದ ಇದು ಯುಕ್ತಿಯುಕ್ತವಾಗಬೇಕಾಗಿದ್ದಾಗ್ಯೂ, [ಏವಂ] = ಈ ವಿಧವಾಗಿಯೇ (ಗಾಯತ್ರೀ ಪದಕ್ಕೆ ಅರ್ಥ ಬ್ರಹ್ಮವೆಂದೇ) ತಿಳಿಯತಕ್ಕದ್ದು.

ಸೂತ್ರ ೪—**ಉಪದೇಶಭೇದಾತ್ ನೇತಿ ಚೇನ್ನ ಉಭಯಸ್ಮಿನ್ನಪ್ಯ ವಿರೋಧಾತ್**

**ಸೂತ್ರಾರ್ಥ**

[ಉಪದೇಶಭೇದಾತ್] = ಉಕ್ತಿಭೇದದಿಂದ [ನ] = (ಈ ವಾಕ್ಯದಲ್ಲಿ) ಬ್ರಹ್ಮ ತೋರುವುದಿಲ್ಲ. [ಇತಿ ಚೇತ್] = ಎಂದಲ್ಲಿ, [ನ] = ಹಾಗಲ್ಲ. [ಉಭಯಸ್ಮಿನ್ ಅಪಿ] = ಎರಡು ವಿಧವಾದ ಉಕ್ತಿಯಲ್ಲಿಯೂ [ಅವಿರೋಧಾತ್] = ವಿರೋಧವಿಲ್ಲದ್ದರಿಂದ. (ಪರಬ್ರಹ್ಮ ತೋರುವುದರಲ್ಲಿ ಬಾಧಕವಿಲ್ಲ.)

**ವಿವರಣೆ**

ಮೇಲೆ ಹೇಳಿದ ಯುಕ್ತಿಯಿಂದ ಹಿಂದಿನ ವಾಕ್ಯದಲ್ಲಿ ಗಾಯತ್ರೀ ಶಬ್ದಕ್ಕೆ ಪರಮಪುರುಷನೇ ಅರ್ಥವಾದಾಗ್ಯೂ ಈ ವಾಕ್ಯದಲ್ಲಿ ಆ ಪರಮಪುರುಷ ತೋರುವುದಿಲ್ಲ. ಏಕೆಂದರೆ—ಆ ವಾಕ್ಯದಲ್ಲಿ "ತ್ರಿಪಾದಸ್ಯಾಮೃತಂ ದಿವಿ"—ಎಂದು ಆಕಾಶವನ್ನು ಜ್ಯೋತಿಸ್ಸಿಗೆ ಆದಿಕಾರಣವನ್ನಾಗಿ ಹೇಳಿದೆ. ಈ ವಾಕ್ಯದಲ್ಲಿ, "ದಿವಃ ಪರೋ

ಜ್ಯೋತಿಃ ''—ಎಂದು ಆಕಾಶವನ್ನು ಎಲ್ಲೆಯನ್ನಾಗಿ ಹೇಳಿದೆ. ಹೀಗೆ ಅಲ್ಲಿಯೂ ಇಲ್ಲಿಯೂ ಬೇರೆ ಬೇರೆ ವಿಧವಾಗಿ ಹೇಳಿರುವುದರಿಂದ, ಹಿಂದಿನ ವಾಕ್ಯದಲ್ಲಿ ಹೇಳಿದ್ದನ್ನು ಈ ವಾಕ್ಯದಲ್ಲಿ ಜ್ಯೋತಿಶ್ಶಬ್ದಕ್ಕೆ ಅರ್ಥವನ್ನಾಗಿ ಸ್ವೀಕರಿಸಕೂಡದು—ಎಂದು ಪೂರ್ವ್ವ ಪಕ್ಷ.

## ಸಿದ್ಧಾಂತ

ಮರದಮೇಲೆ ಚಂದ್ರ—ಎಂದಾಗ್ಲೂ, ಮರಕ್ಕಿಂತ ಮೇಲೆ ಚಂದ್ರ ಎಂದಾಗ್ಲೂ ಒಂದೇ ವಿಧವಾದ ಅರ್ಥ ತೋರುವ ಹಾಗೆ 'ಆಕಾಶದಲ್ಲಿ' ಎಂಬ ಹಿಂದಿನ ವಾಕ್ಯದಲ್ಲಿಯೂ, 'ಆಕಾಶಕ್ಕಿಂತ'—ಎಂಬ ಈ ವಾಕ್ಯದಲ್ಲಿಯೂ ಒಂದೇ ಅರ್ಥವನ್ನು ತೆಗೆದುಕೊಳ್ಳುವುದೇ ಯುಕ್ತವಾದ್ದರಿಂದ, ಈ ವಾಕ್ಯದಲ್ಲಿ ಜ್ಯೋತಿಶ್ಶಬ್ದಕ್ಕೆ ಪೂರ್ವ ವಾಕ್ಯದಲ್ಲಿಯ ಗಾಯತ್ರೀ ಪದಾರ್ಥವನ್ನೇ ತಾತ್ಪರ್ಯವಾಗಿ ಗ್ರಹಿಸಬೇಕು—ಎಂಬುದು ಸಿದ್ಧಾಂತ.

## 11. ಇನ್ದ್ರಪ್ರಾಣಾಧಿಕರಣ

ಸೂತ್ರ—**ಪ್ರಾಣಸ್ತಥಾನುಗಮಾತ್**

[ಇನ್ದ್ರಪ್ರಾಣವಿದ್ಯಾ ಅಥವಾ ಪ್ರತರ್ದನವಿದ್ಯಾ]

### ಅಪವಾದ ಸಂಗತಿ

'' ಪೂರ್ವೋಕ್ತಾತ್ ಪೂರ್ವಪಕ್ಷಾತ್ ಉಪಕ್ರಮಾಪರಾಕ್ರಮಾತ್ ।
ಇಂದ್ರಪ್ರಾಣಾಧಿಕರಣೇ ಸಂಗತಿಸ್ತ್ವಪವಾದಿಕೀ ''— ॥

ಆದಿತ್ಯಾದಿ ಪರವಾದ ಜ್ಯೋತಿಶ್ಶಬ್ದವನ್ನು ನಿರಸನಮಾಡಿದಮೇಲೆ, ಜ್ಯೋತಿಸ್ಸು ಗಳಿಗೆಲ್ಲಾ ಅಧಿಪತಿಯೆಂದು ಪರಿಕಲ್ಪಿತವಾದ ಇಂದ್ರ ಜಗತ್ಕಾರಣನಾಗಬಹುದೆಂಬ ಆಶಂಕೆ ಮಾಡಿ ಅದನ್ನು ನಿರಸನಮಾಡಲಾಗಿದೆ. ಅಥವಾ ಉಪಸಂಹಾರಕ್ಕಿಂತ ಉಪಕ್ರಮ ಬಲವೆಂಬ ನ್ಯಾಯದಿಂದ ಉಪಸಂಹಾರದಲ್ಲಿ ಹೇಳಿದ ಅರ್ಥಗಳನ್ನು ನಿರಸನಮಾಡಿ ಯಾಯಿತು ಹಿಂದಿನ ಅಧಿಕರಣದಲ್ಲಿ. ಹಾಗಾದರೆ ಅದೇ ನ್ಯಾಯದಿಂದ ಈ ಪ್ರತರ್ದನ ವಿದ್ಯೆಯಲ್ಲಿಯೂ, ಉಪಕ್ರಮ ಪ್ರಾಬಲ್ಯದಿಂದ ಉಪಸಂಹಾರ ವಾಕ್ಯದಲ್ಲಿ ಹೇಳಿರುವ ಪರಮಪುರುಷ ಪರಿಕಲ್ಪನೆಯೂ ಬಾಧಿಸಲ್ಪಡಲಿ—ಎಂಬ ಪೂರ್ವಪಕ್ಷದಿಂದ ಸಂಗತಿ.

ಅಥವಾ

ಪೂರ್ವಾಧಿಕರಣದಲ್ಲಿ ಪರಮ ಪುರುಷ ಜ್ಯೋತಿಶ್ಶಬ್ದದಿಂದ ಹೇಳಲ್ಪಟ್ಟಿದ್ದಾನೆನ್ನ ಲಾಯಿತು. ಅದು ಅಯುಕ್ತ—ಏಕೆಂದರೆ, ಪರಮಪುರುಷನಿಗಿಂತ ಬೇರೆಯಾದ ಇಂದ್ರಾದಿ ಶಬ್ದವಾಚ್ಯನೇ ವೇದಾಂತ ಪ್ರತಿಪಾದ್ಯನಾಗಿದ್ದಾನೆ—ಎಂಬ ಶಂಕೆಯಿಂದ ಸಂಗತಿ. ಇದರಲ್ಲಿ ಕಾರಣತ್ವಾಕ್ಷೇಪಕಲಿಂಗಗಳು ಒಹುವಾಗಿರುವುದು ಅನುಸಂಧೇಯ.

### ವಿಷಯವಾಕ್ಯ

ಕೌಷೀತಕೀ ಬ್ರಾಹ್ಮಣದಲ್ಲಿ ಪ್ರತರ್ದನವಿದ್ಯೆಯಲ್ಲಿ, '' ಪ್ರತರ್ದನೋ ಹ ವೈ ದೈವೋದಾಸಿರಿಂದ್ರಸ್ಯ ಪ್ರಿಯಂಧಾಮ ಉಪಜಗಾಮ ಯುದ್ಧೇನ ಚ

ಪೌರುಷೇಣ ಚ. "—ಎಂದು ಆರಂಭಿಸಿ. "ವರಂ ವೃಣೀಷ್ವ, "—ಎಂದು ಇಂದ್ರನಿಗೆ. "ತ್ವಮೇವ ವರಂ ವೃಣೀಷ್ವ ಯಂ ತ್ವಂ ಮನುಷ್ಯಾಯ ಹಿತತಮಂಮನ್ಯಸೇ "—ಎಂದು ಪ್ರತರ್ದನ ಹೇಳಲಾಗಿ, "ಸಹೋವಾಚ ಪ್ರಾಣೋಽಸ್ಮಿ ಪ್ರಜ್ಞಾತ್ಮಾತಂ ಮಾಮಾಯುರಮೃತಮಿತ್ಯುಪಾಸ್ಸ್ವ "—ಎಂದು ಶ್ರುತವಾಗಿದೆ.

## ಸೂತ್ರಾರ್ಥ

[ಪ್ರಾಣಃ] = ಪ್ರಾಣ ಎಂಬ ಶಬ್ದಕ್ಕೆ ವಾಚ್ಯನಾದವನು ಜೀವನಿಗಿಂತ ಬೇರೆಯಾದ ಪರಮಾತ್ಮಾ. [ತಥಾ] = ಹಾಗೆ ಯಾದರೇಯೇ (ಬ್ರಹ್ಮಗುಣಗಳಲ್ಲಿ) [ಅನುಗಮಾತ್] = ಅನುವರ್ತಿಸುವುದರಿಂದ. (ಆ ಗುಣಗಳಿಗೆ ಅಧಿಕರಣವಾಗಿ ಹೇಳುವುದರಿಂದ) ಪೂರ್ವವಾಕ್ಯದಲ್ಲಿ ಪ್ರಸ್ತುತವಾದುದಕ್ಕೆ ಉತ್ತರವಾಕ್ಯದೊಡನೆ ಸಂಬಂಧವಿರುವುದರಿಂದ —ಎಂದರ್ಥ.

## ವಿವರಣೆ

"ಪ್ರಾಣೋಽಸ್ಮಿ ಪ್ರಜ್ಞಾತ್ಮಾ ತಂ ಮಾಮಾಯುರಮೃತಮಿತ್ಯುಪಾಸ್ಸ್ವ"—ಎಂಬ ಈ ಸೂತ್ರದ ವಿಷಯವಾಕ್ಯದಲ್ಲಿ, ಮೋಕ್ಷಕ್ಕೋಸ್ಕರ ಹೇಳಲ್ಪಟ್ಟ ಪ್ರಾಣೋಪಾಸನದಲ್ಲಿ ವಿಷಯನಾದವನು ಜೀವಾತ್ಮನೋ? ಅಥವಾ ಪರಮಾತ್ಮನೋ?—ಎಂದು ಸಂಶಯ. ಇದು ಇಂದ್ರ ಹೇಳಿರುವ ವಾಕ್ಯ. ಇಂದ್ರನೆಂಬುದು ಒಬ್ಬ ಜೀವನ ಹೆಸರಾಗಿದೆ. ಅವನು "ನಾನು ಪ್ರಾಣನಾಗಿರುತ್ತೇನೆ "—ನನ್ನನ್ನು ಮೋಕ್ಷಕ್ಕಾಗಿ ಉಪಾಸಿಸು"—ಎಂದು ಹೇಳುವುದರಿಂದ, ಈ ಪ್ರಾಣ ಶಬ್ದಕ್ಕೆ ಇಂದ್ರನಾದ ಜೀವನೇ ಅರ್ಥವೆಂದು ಪೂರ್ವಪಕ್ಷ.

ಈ ಪ್ರಕರಣದಲ್ಲಿ ಇಂದ್ರನೆಂದೂ, ಪ್ರಾಣನೆಂದೂ ಹೇಳಲ್ಪಟ್ಟವನಿಗೆ ಮೇಲಣ ವಾಕ್ಯದಲ್ಲಿ, ನಿರುಪಾಧಿಕವಾದ ಆನಂದ, ವಿಕಾರವಿಲ್ಲದಿರುವಿಕೆ, ಮೋಕ್ಷಪ್ರದತ್ವ—ಮುಂತಾದ ಗುಣಗಳನ್ನು ಹೇಳಿರುವುದರಿಂದ, ಅವುಗಳು ಜೀವನಿಗೆ ಸೇರತಕ್ಕವಲ್ಲವಾದ್ದರಿಂದ, ಇಂದ್ರ ಪ್ರಾಣ ಶಬ್ದಗಳಿಂದ ಹೇಳಲ್ಪಟ್ಟವನು ಪರಮಾತ್ಮನೆಂದು ಸಿದ್ಧಾಂತ.

### ಸೂತ್ರ ೨—**ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮ ಸಂಬನ್ಧ ಭೂಮಾಹ್ಯಸ್ಮಿನ್**

## ಸೂತ್ರಾರ್ಥ

[ವಕ್ತುಃ] = ಹೇಳುವವನಾದ ಇಂದ್ರನ [ಆತ್ಮೋಪದೇಶಾತ್] = ಆತ್ಮವನ್ನು ಉಪಾಸಿಸುವಂತೆ ಹೇಳಿರುವುದರಿಂದ [ನ] = ಪ್ರಾಣ ಶಬ್ದಾರ್ಥವು ಪರಬ್ರಹ್ಮವಲ್ಲ [ಇತಿ ಚೇತ್] = ಎಂದರೆ, [ಅಸ್ಮಿನ್] = ಈ ಪ್ರಕರಣದಲ್ಲಿ [ಅಧ್ಯಾತ್ಮ ಸಂಬಂಧ ಭೂಮಾ ಹಿ] = ಪರಮಾತ್ಮನಿಗೇ ಉಳ್ಳ ಗುಣ ಸಂಬಂಧಾತಿಶಯ (ಇರುವುದರಿಂದ) ಇಂದ್ರ ಪ್ರಾಣಶಬ್ದಗಳಿಗೆ ಪರಮಾತ್ಮನೇ ಅರ್ಥ.

## ವಿವರಣೆ

ಮೊದಲಲ್ಲಿ, "ತ್ರಿಶೀರ್ಷಾಣಂ ತ್ವಾಷ್ಟ್ರಮಹನಮ್"—ಎಂದರೆ, "ನಾನು ವೃತ್ರಾಸುರನನ್ನು ಕೊಂದೆ" —ಎಂದು ಹೇಳಿರುವುದರಿಂದ, ಹೀಗೆ ಹೇಳುವವನು ವೃತ್ರಾಸುರನನ್ನು ವಧಿಸಿದ ಇಂದ್ರನಾದ ಜೀವನೆಂಬುದು ಸಿದ್ಧ. ಅವನು,

"ಮಾಮುಪಾಸ್ವ"—(ನನ್ನನ್ನು ಉಪಾಸಿಸು) ಎಂದೂ, "ಪ್ರಾಣೋಸ್ಮಿ"—(ನಾನು ಪ್ರಾಣನಾಗಿದ್ದೇನೆ) ಎಂದೂ ಹೇಳಿರುವುದರಿಂದ, ಇಲ್ಲಿ ಉಪಾಸ್ಯನಾಗಿ ಹೇಳಲ್ಪಟ್ಟ ಇಂದ್ರ ಪ್ರಾಣ ಶಬ್ದವಾಚ್ಯನು ಪರಬ್ರಹ್ಮವಲ್ಲ—ಎಂದು ಪೂರ್ವಪಕ್ಷ.

ಮೊದಲ ವಾಕ್ಯದಲ್ಲಿ ಇಂದ್ರನೆಂದು ತೋರಿದಾಗ್ಯೂ, "ಏಷ ಏವ ಸಾಧ ಕರ್ಮಕಾರಯತಿ"—ಎಂದು ಉಪಕ್ರಮಿಸಿ, ಇವನೇ ಸಕಲ ಕರ್ಮಗಳನ್ನು ಮಾಡಿಸುವ ನೆಂದೂ, "ತದ್ಯಥಾರಥಸ್ಯಾರೇಷು ನೇಮಿರರ್ಪಿತಾ"—ಎಂದು ಉಪಕ್ರಮಿಸಿ, ಇವನೇ ಸಕಲ ಜಗತ್ತಿಗೂ ಆಧಾರಭೂತನೆಂದೂ, "ಏಷಲೋಕಾಧಿಪತಿಃ"—ಇತ್ಯಾದಿಗಳಿಂದ ಸರ್ವಲೋಕಾಧಿಪತಿತ್ವ ಮುಂತಾದ ಗುಣಗಳುಳ್ಳವನೆಂದೂ ಇದೇ ಮೊದಲಾಗಿ ಈ ಪ್ರಕರಣ ಪೂರ್ತಿ ಪರಮಾತ್ಮಗುಣಗಳನ್ನೇ ಪ್ರತಿಪಾದಿಸುವುದರಿಂದ, ಇಂದ್ರ, ಪ್ರಾಣ ಶಬ್ದಗಳಿಗೆ ಪರಮ ಪುರುಷನೇ ಅರ್ಥ ಎಂದು ಸಿದ್ಧಾಂತ.

## ಸೂತ್ರ ೩—**ಶಾಸ್ತ್ರದೃಷ್ಟ್ಯಾತೂಪದೇಶೋ ವಾಮದೇವವತ್**

### ಸೂತ್ರಾರ್ಥ

[ವಾಮದೇವವತ್] = ವಾಮದೇವರ ಹಾಗೆ [ಉಪದೇಶಃ] = (ಈ ವಿಧವಾದ) ಉಪದೇಶವು [ಶಾಸ್ತ್ರದೃಷ್ಟ್ಯಾ] = ಶಾಸ್ತ್ರದ ಅರ್ಥವನ್ನು ತಿಳಿಸು ವುದರಿಂದ (ಕೂಡುವುದು).

### ವಿವರಣೆ

ಇಂದ್ರ-ಪ್ರಾಣ ಶಬ್ದಗಳಿಗೆ ಪರಮಾತ್ಮಾ ಅರ್ಥವಾದಲ್ಲಿ, ಇಂದ್ರನು, "ನನ್ನನ್ನು ಉಪಾಸಿಸು" ಎಂದು ಹೇಳುವುದು, ಹೇಗೆ ಕೂಡುವುದು?—ಎಂದರೆ, ಪರಮಾತ್ಮನಿಗೆ ಜೀವಾತ್ಮನು ಶರೀರವೆಂದೂ, ಶರೀರವನ್ನು ಹೇಳುವ ಶಬ್ದಗಳು ಆ ಶರೀರವುಳ್ಳ ಆತ್ಮನನ್ನೇ ಹೇಳುವುದೆಂದೂ, ಅರಿತವನಾದ್ದರಿಂದ, "ನನಗೆ ಅಂತರ್ಯಾಮಿ ಯಾದ ಪರಮಾತ್ಮನನ್ನು ಉಪಾಸಿಸು"—ಎಂಬ ಅರ್ಥವನ್ನು "ನನ್ನನ್ನು ಉಪಾಸಿಸು" —ಎಂಬ ಶಬ್ದದಿಂದಲೂ, "ನನಗೆ ಅಂತರ್ಯಾಮಿಯಾದವನೇ ಪ್ರಾಣನಿಗೂ ಅಂತ ರ್ಯಾಮಿ", ಎಂಬ ಅರ್ಥವನ್ನು "ನಾನು ಪ್ರಾಣ"—ಎಂಬ ಶಬ್ದದಿಂದಲೂ ಹೇಳು ವುದರಲ್ಲಿ ಬಾಧಕವೇನೂ ಇಲ್ಲ. ಹೀಗೆಯೇ ಬ್ರಹ್ಮವಿತ್ತಾದ ವಾಮದೇವರೂ, "ಅಹಂ ಮನುರಭವಂ ಸೂರ್ಯಶ್ಚ"—"ನಾನೇ ಮನುವಾಗಿದ್ದೇನೆ, ಸೂರ್ಯನಾಗಿದ್ದೇನೆ" —ಎಂದಿದ್ದಾರೆ. ಆದ್ದರಿಂದ ಇಂದ್ರ ಪ್ರಾಣ ಶಬ್ದಗಳಿಗೆ ಪರಮಾತ್ಮನೇ ಅರ್ಥ.

## ಸೂತ್ರ ೪—**ಜೀವ ಮುಖ್ಯ ಪ್ರಾಣಲಿಂಗಾನ್ನೇತಿ ಚೇನ್ನೋಪಾಸಾ ತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್**

### ಸೂತ್ರಾರ್ಥ

[ಜೀವಮುಖ್ಯ ಪ್ರಾಣಲಿಂಗಾತ್] = (ಈ ವಾಕ್ಯದಲ್ಲಿ) ಜೀವನಾದ ಇಂದ್ರನ ಮತ್ತು ಮುಖ್ಯಪ್ರಾಣನಾದ ವಾಯುವಿನ ಲಕ್ಷಣ ಕಾಣುವುದರಿಂದ, [ನ] = ಪರಮಾತ್ಮ ಗುಣಸಂಬಂಧ ಅಧಿಕವಾಗಿ ಕಾಣುವುದೆಂಬುದಿಲ್ಲ. [ಇತಿಚೇತ್] = ಎಂದಲ್ಲಿ,

[ನ] = ಹಾಗಲ್ಲ, [ಉಪಾಸಾತ್ರೈವಿಧ್ಯಾತ್] = ಮೂರುವಿಧ ಉಪಾಸನಗಳನ್ನು ಹೇಳುವು ಕ್ಕಾಗಿ (ಆ ಲಕ್ಷಣಗಳನ್ನುಳ್ಳ ಇಂದ್ರಾದಿ ಬೋಧಕ ಶಬ್ದಗಳಿಂದ ಪರಮಾತ್ಮನನ್ನು ಹೇಳಿದೆ) [ಆಶ್ರಿತತ್ವಾತ್] = (ಬೇರೆಡೆಗಳಲ್ಲಿಯೂ) ಮೂರು ವಿಧವಾದ ಉಪಾಸನವು ಆಶ್ರಯಿ ಸಲ್ಪಟ್ಟಿರುವುದರಿಂದ (ಹೇಳಿರುವುದರಿಂದ) [ಇಹ] = ಇಲ್ಲಿಯೂ, [ತದ್ಯೋಗಾತ್] = ಆ ಮೂರು ವಿಧ ಉಪಾಸನವೂ ಕೂಡುವುದರಿಂದ, (ಆಯಾ ಶಬ್ದಗಳಿಂದ ಪರಮಾತ್ಮ ನನ್ನು ಹೇಳಿದೆ.)

**ವಿವರಣೆ**

"ತ್ರಿಶೀರ್ಷಾಣಾಂ ತ್ವಾಷ್ಟ್ರ ಮಹನಮ್"—(ವೃತ್ರಾಸುರನನ್ನು ಕೊಂದೆ)—ಎಂದು ಇಂದ್ರಲಕ್ಷಣವನ್ನು ಹೇಳಿರುವುದರಿಂದಲೂ, "ಯಾವದಸ್ಮಿನ್ ಶರೀರೇ ಪ್ರಾಣೋ ವಸತಿ ತಾವದಾಯುಃ"—(ಈ ಶರೀರರದಲ್ಲಿ ಎಲ್ಲಿಯವರೆಗೆ ಪ್ರಾಣ ವಾಸಿಸುವುದೋ, ಅದುವರೆಗೂ ಆಯುಸ್ಸು) ಎಂದು ಮುಖ್ಯ ಪ್ರಾಣ ಲಕ್ಷಣವನ್ನು ಹೇಳಿರುವುದರಿಂದಲೂ, ಇವುಗಳನ್ನು ಅನಾದರಿಸಿ, ಪರಮಾತ್ಮ ಲಕ್ಷಣಗಳನ್ನೇ ಗ್ರಹಿಸಿ ಪರಮಾತ್ಮನೇ ಇಲ್ಲಿ ಹೇಳಲ್ಪಟ್ಟಿದ್ದಾನೆಂಬುದು ಯುಕ್ತವಲ್ಲ—ಎಂಬುದು ಪೂರ್ವಪಕ್ಷ. ಇದರಲ್ಲಿ ಚೇತನನಾದ ಇಂದ್ರನಿಗೂ ಅಚೇತನವಾದ ಪ್ರಾಣಕ್ಕೂ ಪರಬ್ರಹ್ಮವಾದ ಪರಮಪುರುಷನಿಗೂ ಲಕ್ಷಣ ಏಕೆ ಕಾಣುವುದು ?—ಎಂದಲ್ಲಿ ಪರಮಪುರುಷನನ್ನು ತತ್ಸ್ವರೂಪ ರೂಪ ಗುಣವಿಶಿಷ್ಟನಾಗಿಯೂ, ಜೀವಾಂತರ್ಯಾಮಿಯಾಗಿಯೂ ಪ್ರಾಣಾಂತರ್ಯಾಮಿಯಾಗಿಯೂ, ಉಪಾಸಿಸಬೇಕೆನ್ನುವುದಕಾಗಿ. ಈ ವಿಧವಾಗಿ ತೈತ್ತೀರಿಯೋಪನಿಷತ್ತಿನಲ್ಲಿಯೂ, "ಸತ್ಯಂ ಜ್ಞಾನ ಮನಂತಂ ಬ್ರಹ್ಮ", —ಎಂದು ಪರಮಾತ್ಮನ ಸ್ವರೂಪ ಗುಣಗಳನ್ನೂ (ಇಲ್ಲಿ ಸಚ್ಚ + ತ್ಯಚ್ಚ = ಸತ್ಯಂ) ಸತ್ + ಚ = ಸಚ್ಚ. ಎಂಬ ಜೀವವಾಚಕ ಶಬ್ದದಿಂದ ಜೀವಾಂತರ್ಯಾಮಿತ್ವವನ್ನೂ (ತ್ಯತ್ + ಚ) = ತ್ಯಚ್ಚ—ಎಂಬ ಅಚೇತನ ವಾಚಕ ಶಬ್ದದಿಂದ ಅಚೇತನಾಂತರ್ಯಾ ಮಿತ್ವವನ್ನೂ ಉಳ್ಳ ಪರಮಾತ್ಮನನ್ನು ಹೇಳಿರುವುದು. ಅದರಂತೆ ಇಲ್ಲಿಯೂ. "ಮಾಮು ಪಾಸ್ಸ್ವ" ಎಂದು ಜೀವಾಂತರ್ಯಾಮಿತ್ವವನ್ನು "ಆನಂದೋಽಜರೋಽಮೃತಃ"— ಎಂದು ಆನಂದತ್ವಾದಿ ಪರಬ್ರಹ್ಮ ಗುಣಗಳನ್ನೂ ಉಳ್ಳ ಪರಮಪುರುಷನೇ ಹೇಳಲ್ಪಟ್ಟ ವನಾದ್ದರಿಂದ, ಇಲ್ಲಿ ಇಂದ್ರ-ಪ್ರಾಣ ಪದಗಳಿಗೆ ಪರಮ ಪುರುಷನೇ ಅರ್ಥ—ಎಂದು ಸಿದ್ಧಾಂತ.

ಆದ್ದರಿಂದ, ಇಂದ್ರಾದಿ ವಿಶಿಷ್ಟ ಪರಮಾತ್ಮನೇ ಈ ಪ್ರತರ್ದನ ವಿದ್ಯೆಯಲ್ಲಿಉಪಾಸ್ಯ ನೆಂದು, ಇಂದ್ರಾದಿ ರೂಢಿ ಶಕ್ತಿಯಿಂದ, ವಿಶೇಷಣವನ್ನು ಬಿಡದೆಯೇ ವಿಶೇಷ್ಯ ಪರ್ಯಂತ ವಾಗಿ ಹೇಳಿದೆ. ಇಲ್ಲಿ ಎರಡು ವಿಧ ನ್ಯಾಯಗಳೂ ಪ್ರಕಾಶಿತವಾಗಿವೆ. ಉಪಕ್ರಮವು ಪ್ರಸಿದ್ಧ ಪ್ರಾಣ-ಇಂದ್ರ ಶ್ರುತಿಲಿಂಗ ಯುಕ್ತವಾಗಿದ್ದಾಗ್ಯೂ ಮಹಾವಾಕ್ಯ ವಿರುದ್ಧವಾದಲ್ಲಿ ಬಾಧಿತವಾಗುತ್ತೆ. ಆದ್ದರಿಂದ, ಉಪಕ್ರಮ-ಉಪಸಂಹಾರಗಳಿಗೆ ವಿರೋಧ ಕಂಡಲ್ಲಿ-- ಉಪಕ್ರಮಕ್ಕೇ ಬಲ ಹೆಚ್ಚು. ಉಪಕ್ರಮ ಮಹಾವಾಕ್ಯಗಳಿಗೆ ವಿರೋಧವಾದಾಗ ಮಹಾ ವಾಕ್ಯಕ್ಕೆ ಹೆಚ್ಚುಬಲ. ಇಲ್ಲಿಯಾದರೋ-ವಿರೋಧವೇ ಇಲ್ಲ-ಏಕೆಂದರೆ,

ಮಹಾ ವಾಕ್ಯಗತವಾದ ಉಪಕ್ರಮಕ್ಕೂ ಇಂದ್ರ ವಿಶಿಷ್ಟ ಪರಮಾತ್ಮನೇಂದೇ ಆಧ್ಯಾತ್ಮ ವಿತ್ತುಗಳು ಅನುಸಂಧಾನ ಮಾಡಿರುವುದರಿಂದ

ಇಲ್ಲಿ ಹೇಳಿರುದ ನಿರತಿಶಯದೀಪ್ತಿ ಯುಕ್ತತ್ವವೂ ಮುಮುಕ್ಷೂಪಾಸ್ಯತ್ವವೂ ಕಾರಣನೆಂದು ಪ್ರಖ್ಯಾತನಾದ ನಾರಾಯಣನೊಬ್ಬನಲ್ಲಿಯೇ ನೆಲೆಯುಳ್ಳವೆಂದು ಹಿಂದೆ ಆಕಾಶಾಧಿಕರಣದಲ್ಲಿಯೇ ಪ್ರಸಿದ್ಧವಾಗಿದೆ. ಆಕಾಶಾಧಿಕರಣದಲ್ಲಿ ಸರ್ವ ಕಾರಣತ್ವ ಮಾತ್ರವೇ ಪರಮಪುರುಷ ವಿಷಯಃವಾಗಿ ಪ್ರಸಿದ್ಧವಾಗಿದೆಯೋ ಹೊರತು ಇಲ್ಲಿ ಹೇಳಿರುವ ಸರ್ವಕಾರಣತ್ವವ್ಯಾಪ್ತವಾದ ನಿರತಿಶಯದೀಪ್ತಿ ಯುಕ್ತತ್ವ ಮತ್ತು ಮುಮುಕ್ಷೂಪಾಸ್ಯತ್ವವೆಂಬ ಎರಡು ಲಿಂಗಗಳಲ್ಲ—ಎಂದಲ್ಲಿ, ಸರ್ವ ಜಗತ್ಕಾರಣತ್ವವು ಹೇಗೆ ಪರಮಪುರುಷ ವಿಷಯವೆಂಬುದಾಗಿ ಅಲ್ಲಿ ಪ್ರಸಿದ್ಧವಾದೆಯೋ ಹಾಗೆಯೇ, ಅದರೊಡನೆ ಸಮವ್ಯಾಪ್ತವಾದ್ದರಿಂದ ಈ ಎರಡು ಲಿಂಗಗಳೂ ಪ್ರಸಿದ್ಧವೇ. ಹೀಗೆ ಈ ಎರಡು ಲಿಂಗಗಳೂ ಮೇಲೆ ಹೇಳಿದಂತೆ ಹಿಂದೆಯೇ ಪರಮಪುರುಷ ನಿಷ್ಠವೆಂದು ಪ್ರಸಿದ್ಧವಾಗಿರುವುದರಿಂದ ಇಲ್ಲಿ ಪೂರ್ವಪಕ್ಷವೇಳುವುದಕ್ಕೆ ಕಾರಣವೇ ಇಲ್ಲ. ಈ ಎರಡು ಲಿಂಗಗಳಿಗೂ ಸರ್ವಕಾರಣಸ್ಥಿತತ್ವ ಪರಾಮರ್ಶವಿಲ್ಲಿ ಇಲ್ಲದ ಮೇಲೆ ಈ ಜ್ಯೋತಿರಧಿಕರಣ ಮತ್ತು ಇಂದ್ರಪ್ರಾಣವೆಂಬ ಅಧಿಕರಣಗಳೇಕೆ ಆರಂಭ ವಾಗಿವೆ ?—ಎಂದಲ್ಲಿ, ನಿಜ, ಈ ಅಧಿಕರಣಗಳಿಗೆ ಪ್ರಯೋಜನವಿಲ್ಲದಾಗ್ಯೂ ಸ್ವಲ್ಪ ಪ್ರಯೋಜನವಿದ್ದೇ ಇದೆ. ಅದೇನೆಂದರೆ, ಈ ಲಿಂಗದ್ವಯವೂ ಪರಮ ಪುರುಷನೊಬ್ಬ ನಲ್ಲಿಯೇ ನಿಷ್ಠವಾಗಿದ್ದಾಗ್ಯೂ, ಆ ಪರಮ ಪುರುಷನೇ ಉಪೇಂದ್ರನಾಗಿಯೂ ಅವತರಿಸಿದ್ದಾನೆ. ಉಪೇಂದ್ರನ ಉತ್ಪತ್ತಿಯೂ ಶ್ರುತಿ ಪುರಾಣಾದಿಗಳಲ್ಲಿ ಹೇಳಲ್ಪಟ್ಟಿದೆ, ಆದ್ದರಿಂದ ಉಪೇಂದ್ರನೂ ಉಪಾಸ್ಯ ಎಂದು ಆಲೋಚಿಸುವ ಬಾಲಬುದ್ಧಿಯ ನಿರಾಕರಣಕ್ಕಾಗಿ ಈ ಅಧಿಕರಣಾರಂಭವೆನ್ನಬೇಕು.

"ತತಸ್ತ್ವಮಪಿ ದುರ್ಧರ್ಷಸ್ತಸ್ಮಾದ್ಭಾವಾತ್ಸನಾತನಾತ್ ರಕ್ಷಾರ್ಥಂ ಸರ್ವ ಭೂತಾನಾಂ ವಿಷ್ಣುತ್ವಮುಪಜಗ್ಮಿವಾನ್."—ಇತ್ಯಾದಿಯಾಗಿ ವಿಷ್ಣುತ್ಪತ್ತಿ ವಚನಗಳಿವೆ.

ಇಂತಹ ಬಾಲರ ವಿಷ್ಣೂತ್ಪತ್ತ್ಯುಕ್ತಿಭ್ರಮ ಹೇಗೆಂದರೆ—ಜ್ಯೋತಿರಧಿಕರಣದ ವಿಷಯವಾಕ್ಯದಲ್ಲಿಯು, "ಪರೋದಿವಃ" ಎಂಬುದಕ್ಕೆ—ಪ್ರಾಕೃತಸ್ಥಾನ ವಿಶೇಷದ ಮೇಲೆ ಎಂದರ್ಥ.

"ವಿಶ್ವತಃ ಪೃಷ್ಠೇಷು" = ವ್ಯಷ್ಟಿಗೆ ಬಹಿರ್ಭೂತವಾದ.

"ಸರ್ವತಃ ಪೃಷ್ಠೇಷು" = ಸಮಷ್ಟಿ ಬಹಿರ್ಭೂತವಾದ.

"ಅನುತ್ತಮೇಷು" = ತನಗೆ ಮೇಲೆ ಉತ್ತಮವಿಲ್ಲದ "ಉತ್ತಮೇಷು ಲೋಕೇಷು" = ಉತ್ತಮಸ್ಥಾನ ವಿಶೇಷಗಳಲ್ಲಿ ಯತ್ ಜ್ಯೋತಿಃದೀಪ್ಯತೇ" = ಜ್ಯೋತಿಶ್ಶಬ್ದಿತನಾದ ಯಾವ ಪರಮಾತ್ಮ ಪ್ರಕಾಶಿಸುತ್ತಾನೆಯೋ, "ತತ್" = ಆ ಜ್ಯೋತಿಸ್ಸು, "ಅಸ್ಮಿನ್ಅಂತಃ ಪುರುಷೇ" = ಈ ತ್ರೈಲೋಕ್ಯದೊಳಗೆ ಇರುವ ತನ್ನ ಕಿಂಕರನಾದ ಇಂದ್ರನ ಸಮೀಪದಲ್ಲಿ, "ಯದಿದಂ ಜ್ಯೋತಿಃ" = ಯಾವ ಈ ಉಪೇಂದ್ರರೂಪವಾದ ಜೋತಿಸ್ಸು ಇದೆಯೋ. "ಇದಂ ವಾವ ತತ್" =

ಇದೇ ಅದು. ಹೀಗೆಯೇ ಈ ಇಂದ್ರ ಪ್ರಾಣಾಧಿಕರಣದಲ್ಲಿಯೂ, " ದೈವೋದಾಸಿಃ " = " ಅಗ್ನಿರವಮೋ ದೇವತಾನಾಂ ವಿಷ್ಣುಃ ಪರಮಃ "—ಎಂದು ಹೇಳಿರುವಂತೆ ಸಕಲ ದೇವತೆಗಳಿಗಿಂತ ಉತ್ಕೃಷ್ಟನಾಗಿ ಪರಮಪದದಲ್ಲಿರುವ ಎಂದರ್ಥ.—ದೈವೋದಾಸಿಪದದ ವ್ಯುತ್ಪತ್ತಿ—ದೇವೇಭ್ಯಃ ಉದಾಸ್ತೇ, ಅಂದರೆ ಉತ್ಕೃಷ್ಟವಾಗಿದ್ದಾನೆ—ಎಂದು "ಪ್ರತರ್ದನಃ" = ಪರಮಪುರುಷ.

" ಯುದ್ಧೇನ ಚ ಪೌರುಷೇಣ ಚ " = ಯುದ್ಧಸಾಧನವಾದ ಚಕ್ರಾದ್ಯಾಯುಧ ದಿಂದಲೂ ಸ್ವಾಸಾಧಾರಣವಾದ ಶ್ರೀವತ್ಸಾದಿ ಚಿಹ್ನದಿಂದಲೂ ಕೂಡಿ. " ಪೌರುಷೇಣ " —ಎಂಬುದಕ್ಕೆ ಪುರುಷಸ್ಯ (ವಿಷ್ಣೋಃ) + ಇದಂ = ಪೌರುಷಂ ಎಂದು ವ್ಯುತ್ಪತ್ತಿ. " ಇಂದ್ರಸ್ಯ ಪ್ರಿಯಂ ಧಾಮ " = ಸ್ವರ್ಗಲೋಕಕ್ಕೆ " ಉಪಜಗಾಮ—" = ಉಪೇಂದ್ರ ರೂಪದಿಂದ ಅವತರಿಸಿದನು. " ತಂ " = ಆ ಉಪೇಂದ್ರನನ್ನು (ಕುರಿತು) " ಇಂದ್ರ ಉವಾಚ " = ನಿನಗೆ ವರವನ್ನು ಕೊಡುತ್ತೇನೆ—ಎಂದು ಇಂದ್ರ ಹೇಳಿದನು. ಆ ಪ್ರತ ರ್ದನ "—ನು = ಪರಮಾತ್ಮನು, ತಾನು ಅವಾಪ್ತ ಸಮಸ್ತಕಾಮನಾದ್ದರಿಂದ ತನಗಾಗಿ ವರ ಕೇಳುವುದನ್ನು ಬಿಟ್ಟು, " ತಾಪತ್ರಯಾತುರ ಜನರಿಗೆ ಹಿತವಾದ ವರವನ್ನು ನೀನೇ ಆಲೋಚಿಸು "—ಎಂದನು ಎಂಬ ಅರ್ಥ ಇಲ್ಲಿ ಕಂಡುಬರುತ್ತೆ ಇದರ **ನಿರಾಕರಣ ಪ್ರಕಾರ:**—ಪೂರ್ವವಾಕ್ಯದಲ್ಲಿ "ಅಸ್ಮಿನ್ ಅಂತಃ ಪುರುಷೇ-" ಎಂಬುದಕ್ಕೆ ತ್ರೈಲೋಕ್ಯ ದೊಳಗಿನ ಇಂದ್ರನೆಂಬ ಅರ್ಥ ಸಮಂಜಸವಲ್ಲ, ತ್ರೈಲೋಕ್ಯವು 'ಇದಂ' —ಎಂಬ ನಿರ್ದೇಶಕ್ಕೆ ಅರ್ಹವಲ್ಲ. " ಪುರುಷಃ "—ಎಂಬ ಶಬ್ದ ಇಂದ್ರಪರವೂ ಆಗದು " ರಾಜ ಪುರುಷಃ "—ಇತ್ಯಾದಿಯಲ್ಲಿಯಂತೆ ಇಲ್ಲಿ " ಪುರುಷ " ಶಬ್ದ ಭೃತ್ಯನೆಂದೂ ಅಂದರೆ ಇಂದ್ರ ಪುರುಷೋತ್ತಮನ ಭೃತ್ಯನೆಂದೂ ಆಗದು ಏಕೆಂದರೆ, " ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ " = ಇತ್ಯಾದಿಯ ಲ್ಲಿ ಪುರುಷೋತ್ತಮನ ಭೃತ್ಯ ನೆಂಬುದಾಗಿ ಮಹಾದೇವಾದಿಗಳು ಶ್ರುತರಾಗಿವಂತೆ ಇಂದ್ರ ಇಲ್ಲಿ ಶ್ರುತವಾ ಎರಡನೆಯ ವಾಕ್ಯದಲ್ಲಿಯೂ ದಿವೋದಾಸನ ಅಪತ್ಯ (ಮಗ) ದೈವೋದಾಸಿ. ಇವನು ತನ್ನ ತಂದೆಯನ್ನು ಗೆದ್ದ ವೀತಿ ಹವ್ಯನನ್ನು ಜಯಿಸಿದವನು—ಅದಕ್ಕೆ ತಕ್ಕ ಬಲ ಪೌರು ಷಾತಿಶಯವುಳ್ಳವನು ಇತ್ಯಾದ್ಯರ್ಥದಿಂದ ಅನುಶಾಸನಿಕಾದಿಗಳಲ್ಲಿ ಪ್ರಸಿದ್ಧವಾದ ಕ್ಷತ್ರಿಯ ಪ್ರತರ್ದನನೇ ಇಲ್ಲಿ ತೋರುವವನು " ಉಪಜಗಾಮ " ಎಂಬುದಕ್ಕೂ ಅವತರಿಸಿದ ನೆಂಬ ಅರ್ಥ ಅತ್ಯಂತ ಔಪಚಾರಿಕ.

ಆದ್ದರಿಂದ ಹಿಂದೆ ಹೇಳಿದಂತೆ ಪ್ರಸಿದ್ಧ ಜ್ಯೋತಿಯು ಇಂದ್ರಶರೀರಕ ಪರಮಾತ್ಮ ನೆಂದೇ ಎರಡು ಪ್ರಕರಣಗಳಲ್ಲಿಯೂ ವಿವಕ್ಷಿತ.

—ಇಂದ್ರ ಪ್ರಾಣಾಧಿಕರಣ ಸಮಾಪ್ತ—



— ಶ್ರೀಮತೇ ರಾಮಾನುಜಾಯ ನಮಃ —

ಪ್ರಥಮಾಧ್ಯಾಯದ ದ್ವಿತೀಯಪಾದ

## ಸರ್ವತ್ರ ಪ್ರಸಿದ್ಧ್ಯಧಿಕರಣಂ—1 ಅಧಿಕರಣ

### ಸೂತ್ರ—ಸರ್ವತ್ರ ಪ್ರಸಿದ್ಧೋಪದೇಶಾತ್

(ಶಾಂಡಿಲ್ಯವಿದ್ಯಾ)

ಪ್ರಥಮ ಪಾದದಲ್ಲಿ, ಶಾಸ್ತ್ರೈಕವೇದ್ಯವೂ ಸಾರ್ವಜ್ಞ್ಯ—ಸತ್ಯ ಸಂಕಲ್ಪತ್ವವೇ ಮುಂತಾದ ಅಪರಿಮಿತೋದಾರ ಗುಣಸಾಗರವೂ ಸಕಲೇತರ ವಿಲಕ್ಷಣವೂ ಆದ ಪರ-ಬ್ರಹ್ಮವೇ ಪುರುಷೋತ್ತಮನಾದ ಶ್ರೀಮನ್ನಾರಾಯಣ. ಅವನೇ ವೇದಾಂತ ವೇದ್ಯ ನೆನ್ನಲಾಯಿತು. ಆದರೂ ಕೆಲವು ವೇದಾಂತ ವಾಕ್ಯಗಳು ಪ್ರಧಾನ—ಕ್ಷೇತ್ರಜ್ಞರೊಳಗಿರುವ ವಸ್ತುವಿಶೇಷ ಸ್ವರೂಪವನ್ನೇ ಪ್ರತಿಪಾದಿಸತಕ್ಕವು ಎಂದು ಆಶಂಕೆಮಾಡಿ ಅವುಗಳನ್ನು ನಿರಸನಮಾಡುವುದರ ಮೂಲಕ, ಆಯಾ ವಾಕ್ಯಗಳಲ್ಲಿ ಬ್ರಹ್ಮಕ್ಕೆ ಹೇಳಿರುವ ಕಲ್ಯಾಣ ಗುಣಾಕಾರತ್ವ ಮುಂದೆ ಪ್ರತಿಪಾದಿಸಲ್ಪಡುತ್ತದೆ. ಅವುಗಳೊಳಗೆ ಅಸ್ಪಷ್ಟ ಜೀವಾದಿ ಲಿಂಗಕ ವಾಕ್ಯಗಳು ಈ ದ್ವಿತೀಯ ಪಾದದಲ್ಲಿ ವಿಚಾರಮಾಡಲ್ಪಡುತ್ತವೆ.—ಸ್ಪಷ್ಟ ಜೀವಾದಿಲಿಂಗಕ ವಾಕ್ಯಗಳು ಮೂರನೆಯ ಪಾದದಲ್ಲಿಯೂ ಸ್ಪಷ್ಟತರ ಜೀವಾದಿ ಲಿಂಗಕಗಳು ನಾಲ್ಕನೆಯ ಪಾದದಲ್ಲಿಯೂ ವಿಚಾರಮಾಡಲ್ಪಡುತ್ತವೆ. ಇದು ಪಾದ ಸಂಗತಿ.

ಅಧಿಕರಣ ಸಂಗತಿ-ಅಪವಾದ ಸಂಗತಿ—

"ಮಹಾವಾಕ್ಯಗತಂ ಬ್ರಹ್ಮಲಿಂಗಂ ಪ್ರಬಲಮೀರಿತಂ ।
ತಾದೃಕ್ಷಲಿಂಗತಸ್ಸರ್ವನಯೋ ಶಂಕಾವ್ಯಪೋಹ್ಯತೇ ॥ "—

ಅಂದರೆ : ಉಪಕ್ರಮ ಉಪಸಂಹಾರಕ್ಕಿಂತ ಬಲವತ್ತರವಾದರೂ, ಪರಮಾತ್ಮ ಪ್ರತಿಪಾದನಕ್ಕೆ ಅನುಕೂಲವಾದ ಮಹಾವಾಕ್ಯದಿಂದ ಜೀವ ಪ್ರತಿಪಾದನಕ್ಕೆ ಅನುಕೂಲ ವಾದ ಉಪಕ್ರಮ ವಾಕ್ಯವನ್ನು ಹಿಂದಿನ ಅಧಿಕರಣದಲ್ಲಿ ನಿರಾಕರಿಸಿದರು. ಹಾಗಾದರೆ, ಅದೇ ನ್ಯಾಯದಿಂದ ಜೀವಪ್ರತಿಪಾದನಾನುಕೂಲ ಮಹಾವಾಕ್ಯದಿಂದ ಪರಮಾತ್ಮ ಪ್ರತಿಪಾದನಾನುಕೂಲವಾದ ಉಪಕ್ರಮವಾಕ್ಯ ನಿರಾಕರಿಸಲ್ಪಡಲಿ—ಎಂಬ ಪ್ರತಿ ಬಂದಿಗೆ ಪರಿಹಾರವಾಗಿ ಇದರಲ್ಲಿಯ ವೈಷಮ್ಯವನ್ನು ತೋರಿಸುತ್ತಾರೆ—ಹಿಂದೆ ಉಪ ಕ್ರಮಕ್ಕೂ ಮಹಾವಾಕ್ಯಕ್ಕೂ ಪರಸ್ಪರ ವಿರೋಧ ಕಂಡುದುದರಿಂದ ಮಹಾವಾಕ್ಯದಿಂದ ಉಪಕ್ರಮ ವಿರೋಧವಾಯಿತು. ಇಲ್ಲಿಯಾದರೋ—ಉಪಕ್ರಮೋಕ್ತವಾದ ಅರ್ಥವನ್ನೇ ಮಹಾವಾಕ್ಯ ಉಪಬೃಂಹಣ ಮಾಡುತ್ತದೆಯಾಗಿ, ಯಾವುದರಿಂದ ಯಾವುದು ಬಾಧಿತ ವೆಂಬುದನ್ನು ಇದರಲ್ಲಿ ತೋರಿಸುತ್ತಾರೆ.

**ವಿಷಯವಾಕ್ಯ**

" ಛಾಂದೋಗ್ಯದಲ್ಲಿ—" ಅಥ ಖಲುಕ್ರತುಮಯಃ ಪುರುಷಃ ಯಥಾ ಕ್ರತುರಸ್ಮಿನ್ ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ ಸ ಕ್ರತುಂ ಕುರ್ವೀತ ಮನೋಮಯಃ ಪ್ರಾಣ ಶರೀರೋ ಭಾ ರೂಪಃ.. ॥"— ಇತ್ಯಾದಿ.

ಇಲ್ಲಿ " ಸ ಕ್ರತುಂ ಕುರ್ವೀತ "—ಎಂದು ಹೇಳಿರುವ ಉಪಾಸನಕ್ಕೆ ಉಪಾಸ್ಯ —" ಮನೋಮಯಃ ಪ್ರಾಣ ಶರೀರಃ" ಎಂದು ನಿರ್ದಿಷ್ಟವಾಗಿದೆ. ಇಲ್ಲಿ ಸಂಶಯ— ಮನೋಮಯತ್ವಾದಿ ಗುಣವುಳ್ಳವನು ಜೀವನೋ ಅಥವಾ ಪರಮಾತ್ಮನೋ ?— ಎಂಬುದು. ಜೀವನೆಂಬುದು ಪೂರ್ವಪಕ್ಷ—ಮನಃ ಪ್ರಾಣಗಳು ಅವನಿಗೆ ಉಪಕರಣ ಗಳಾದ್ದರಿಂದ. ಪರಮಾತ್ಮನಿಗಾದರೋ—" ಅಪ್ರಾಣೋ ಹ್ಯಮನಾಃ "—ಎಂದು ಮನಃ ಪ್ರಾಣಗಳು ನಿಷೇಧಿಸಲ್ಪಟ್ಟಿವೆ. ಇತ್ಯಾದಿ ಕಾರಣಗಳಿಂದ ಜೀವನೆಂಬುದು ನಿಶ್ಚಿತ ವಾದ್ದರಿಂದ " ಏತದ್ಬ್ರಹ್ಮ... "—ಎಂಬ ಉಪಸಂಹಾರದಲ್ಲಿಯು ಬ್ರಹ್ಮ ಪದವೂ ಜೀವನಲ್ಲಿಯೇ ಪೂಜಾರ್ಥವಾಗಿ ಪ್ರಯುಕ್ತವೆಂದು ನಿಶ್ಚಿತವಾಗುತ್ತೆ.—ಇತ್ಯಾದಿ ಪೂರ್ವ ಪಕ್ಷಕ್ಕೆ ಸಿದ್ಧಾಂತದ ಉತ್ತರ = ಮನೋಮಯತ್ವಾದಿ ಗುಣವುಳ್ಳವನು ಪರಮಾತ್ಮಾ, ಹೇಗೆಂದರೆ [ಸರ್ವತ್ರ] = ವೇದಾಂತಗಳಲ್ಲಿ ಎಲ್ಲೆಲ್ಲಿಯೂ [ಪ್ರಸಿದ್ಧೋಪದೇಶಾತ್] = ಪರಬ್ರಹ್ಮದಲ್ಲಿಯೇ ಪ್ರಸಿದ್ಧವಾಗಿರುವ ಮನೋಮಯತ್ವಾದಿಯನ್ನು ಉಪದೇಶಿಸಿ ರುವುದರಿಂದ. ' ಮನೋಮಯ ' ನೆಂದರೆ—ವಿಶುದ್ಧವಾದ ಮನಸ್ಸಿನಿಂದ ಗ್ರಾಹ್ಯ ವೆಂದರ್ಥ. ಪ್ರಾಣ ಶರೀರ ನೆಂದರೆ ಪ್ರಾಣಕ್ಕೂ ಆಧಾರ ಮತ್ತು ನಿಯಂತೃವೆಂದರ್ಥ. " ಏತದ್ಬ್ರಹ್ಮ "—ಎಂಬಲ್ಲಿಯ ' ಬ್ರಹ್ಮ '—ಶಬ್ದವೂ ಮುಖ್ಯಾರ್ಥವುಳ್ಳದ್ದು. " ಅಪ್ರಾಣೋಹ್ಯಮನಾಃ "—ಎಂಬುದು ಬ್ರಹ್ಮಕ್ಕೆ ಮನಸ್ಸಿಗೆ ಅಧೀನ ಜ್ಞಾನ ಮತ್ತು ಪ್ರಾಣಕ್ಕೆ ಅಧೀನವಾದ ಸ್ಥಿತಿಯೆಂಬುದನ್ನು ನಿಷೇಧಿಸುತ್ತದೆ.—ಇದು ಈ ಸೂತ್ರಕ್ಕೆ ಪ್ರಥಮ ಯೋಜನೆ.

**೨ ನೆಯ ಯೋಜನೆ**

ಸೂತ್ರಾರ್ಥ — [ಪ್ರಸಿದ್ಧೋಪದೇಶಾತ್] = ಜಗದುತ್ಪತ್ತಿ ಸ್ಥಿತಿ ಲಯಗಳಿಗೆ ಕಾರಣನಾದವನನ್ನೇ (ಇಲ್ಲಿ ಅಂತರ್ಯಾಮಿಯಾಗಿ ಸಮಾನಾಧಿಕರಣ ಶಬ್ದದಿಂದ) ಹೇಳುವುದರಿಂದ, [ಸರ್ವತ್ರ] = " ಸರ್ವಂ ಖಲ್ವಿದಂ ಬ್ರಹ್ಮ "—ಎಂಬ ವಾಕ್ಯದಲ್ಲಿಯ ' ಸರ್ವ ' ಶಬ್ದಕ್ಕೆ ಅರ್ಥವಾದ ಜಗತ್ತಿನಲ್ಲಿ. (ಈ ಜಗತ್ತಿಗೆ ಅಂತರ್ಯಾಮಿ ಯಾಗಿ ಆ ಪದದೊಂದಿಗೆ ಸಮಾನಾಧಿಕರಣವಾದ ' ಬ್ರಹ್ಮ '—ಪದದಿಂದ ಹೇಳಲ್ಪಟ್ಟ ವನು ಪರಮಾತ್ಮಾ).

ಸಮಾನಾಧಿಕರಣ ಶಬ್ದವೆಂದರೆ—ವಿಶೇಷಣವನ್ನು ಹೇಳುವ ಪದವೂ, ವಿಶೇಷ್ಯ ವನ್ನು ಹೇಳುವ ಪದವೂ ಒಂದೇ ವಿಭಕ್ತಿಯಲ್ಲಿರುವುದು. ಈ ಎರಡನೆಯ ಯೋಜನೆಯೇ ಶ್ರೀಭಾಷ್ಯಕಾರರಿಗೆ ಅಭಿಮತವಾದದ್ದು.

**ವಿವರಣೆ**

"ಸರ್ವಂ ಖಲ್ವಿದಂ ಬ್ರಹ್ಮ"—ಎಂಬುದು ಈ ಅಧಿಕರಣಕ್ಕೆ ವಿಷಯವಾಕ್ಯ. ಇದರಲ್ಲಿಯು 'ಬ್ರಹ್ಮ'—ಪದಕ್ಕೆ ಅರ್ಥ ಜೀವಾತ್ಮನೋ? ಅಥವಾ ಪರಮಾತ್ಮನೋ?—ಎಂದು ಸಂಶಯ. ಸರ್ವವೂ ಬ್ರಹ್ಮವೆಂದು ಹೇಳುವುದರಿಂದ, ಬ್ರಹ್ಮನಿಂದ ಹಿಡಿದು ತೃಣದವರೆಗಿನ ಜಗದ್ರೂಪವಾಗಿ ಪರಿಣಮಿಸುವುದು ಕರ್ಮ ಪರವಶನಾದ ಜೀವನಿಗೇ ಕೂಡುವುದರಿಂದ, ಜೀವನೇ ಬ್ರಹ್ಮ ಶಬ್ದಕ್ಕೆ ಅರ್ಥವೆಂಬುದು ಪೂರ್ವಪಕ್ಷ.

ಸರ್ವವೂ ಬ್ರಹ್ಮ—ಎಂದರೆ, ಸರ್ವವೂ ಬ್ರಹ್ಮಾತ್ಮಕ—ಅಂದರೆ ಬ್ರಹ್ಮವನ್ನೇ ಆತ್ಮವನ್ನಾಗಿ ಉಳ್ಳದ್ದು, ಎಂದರ್ಥ. ಇದಕ್ಕೆ ಬ್ರಹ್ಮ ಹೇಗೆ ಆತ್ಮವಾಗುವುದು?—ಎಂದಲ್ಲಿ, "ತಜ್ಜಲಾನ್"—ಎಂದಿದೆ. ಈ ಜಗತ್ತಿನ ಉತ್ಪತ್ತಿ-ಲಯ-ಸ್ಥಿತಿಗಳಿಗೆ ಬ್ರಹ್ಮ ಕಾರಣವಾದ್ದರಿಂದ ಇದು ಬ್ರಹ್ಮಾತ್ಮಕವೇ ಎಂದು, ಅಂದರೆ, ಜಗದುತ್ಪತ್ತಿ ಸ್ಥಿತಿ ಲಯ ಹೇತುವಾದವನೇ ಇದಕ್ಕೆ ಆತ್ಮಾ ಎಂದು ಹೇಳಿದೆ. ಜಗದುತ್ಪತ್ತಿ ಸ್ಥಿತಿ ಲಯಗಳಿಗೆ ಹೇತು ಯಾರು?—ಎಂದಲ್ಲಿ, ಶ್ರುತಿ ವಾಕ್ಯಗಳು. "ಏಕೋ ಹವೈ ನಾರಾಯಣ ಆಸೀತ್"—ಎಂದು, ಅವನು ಶ್ರೀಮನ್ನಾರಾಯಣನೇ ಎಂದಿದೆ. ಆದ್ದರಿಂದ ಅವನೇ ಇಲ್ಲಿ ಸಕಲಕ್ಕೂ ಅಂತರ್ಯಾಮಿಯಾಗಿ ಬ್ರಹ್ಮಪದದಿಂದ ಹೇಳಲ್ಪಟ್ಟವನು—ಎಂದು ಸಿದ್ಧಾಂತ.

ಸೂತ್ರ ೨—**ವಿವಕ್ಷಿತ ಗುಣೋಪಪತ್ತೇಶ್ಚ**

"ಮನೋಮಯಃ ಪ್ರಾಣ ಶರೀರೋ ಭಾ ರೂಪಃ"—(ರಾಗ ದ್ವೇಷಾದಿಗಳಿಲ್ಲದ ಮನಸ್ಸಿನಿಂದ ಗ್ರಹಿಸಲು ಯೋಗ್ಯನು. ಪ್ರಾಣನಿಗೆ ಆಧಾರವಾದವನು, ನಿರವಧಿಕ ತೇಜಸ್ಸುಳ್ಳವನು—ಎಂದು ಮೇಲಿನ ವಾಕ್ಯಗಳಲ್ಲಿ ಈ ಬ್ರಹ್ಮಕ್ಕೆ) ಹೇಳಲ್ಪಟ್ಟ ಗುಣಗಳು ಪರಮಾತ್ಮನಲ್ಲಿಯೇ ಕೂಡುವುದರಿಂದ, ಬ್ರಹ್ಮಪದಕ್ಕೆ ಪರಮಾತ್ಮನೇ ಎಂದರ್ಥ.

ಸೂತ್ರ ೩—**ಅನುಪಪತ್ತೇಸ್ತು ನ ಶಾರೀರಃ**

**ಸೂತ್ರಾರ್ಥ**

[ಅನುಪಪತ್ತೇಃ] = (ಪೂರ್ವವಾಕ್ಯದಲ್ಲಿ ಹೇಳಿದ ಸರ್ವಕರ್ಮ ಸಮಾರಾಧ್ಯತ್ವಾದಿ ಗುಣಗಳು) ಕೂಡದುದರಿಂದ. [ಶಾರೀರಃ] = ಶರೀರ ಸಂಬಂಧವುಳ್ಳ (ಮೊದಲು ಸಂಸಾರಿಯಾಗಿದ್ದ) ಮುಕ್ತನೂ [ನ] = ಬ್ರಹ್ಮಶಬ್ದಕ್ಕೆ ಅರ್ಥವಲ್ಲ. [ತು]—ಎಂಬುದು ಮುಕ್ತನನ್ನು ಹೇಳಬಹುದೋ ಏನೋ—ಎಂಬ ಶಂಕೆಯನ್ನು ನೀಗಿಸುವುದು,

ಸೂತ್ರ ೪—**ಕರ್ಮಕರ್ತೃವ್ಯಪದೇಶಾ ಚ್ಚ**

**ಸೂತ್ರಾರ್ಥ**

"ಏತಮಿತಃ ಪ್ರೇತ್ಯ ಅಭಿಸಂಭವಾನಿ"—ಅಂದರೆ, ಸಂಸಾರದಿಂದ ಬಿಡಲ್ಪಟ್ಟವನಾಗಿ ಈ ಬ್ರಹ್ಮವನ್ನು ಹೊಂದುವೆನು.—ಎಂದು ಬ್ರಹ್ಮವನ್ನು ಪ್ರಾಪ್ತಿಗೆ

ಕರ್ಮವನ್ನಾಗಿಯೂ. (ಪ್ರಾಪ್ಯವನ್ನಾಗಿಯೂ) ಜೀವನನ್ನು ಪ್ರಾಪ್ತೃವನ್ನಾಗಿಯೂ (ಬ್ರಹ್ಮವನ್ನು ಹೊಂದುವವನನ್ನಾಗಿಯೂ) ಹೇಳಿರುವುದರಿಂದಲೂ, ಪ್ರಾಪ್ತೃವಾದ ಜೀವನು ಪ್ರಾಪ್ಯವಾದ ಬ್ರಹ್ಮಪದಾರ್ಥವಾಗಲಾರನು.

ಸೂತ್ರ ೫—**ಶಬ್ದವಿಶೇಷಾತ್**

**ಸೂತ್ರಾರ್ಥ**

"ಏಷಮೆ ಆತ್ಮಾಂತರ್ಹೃದಯೇ..."—ನನ್ನ ಹೃದಯದೊಳಗೆ ಈ ಬ್ರಹ್ಮ ಪದಾರ್ಥವಾದ ಆತ್ಮಾ ಇದ್ದಾನೆ—ಎಂದು ಷಷ್ಠೀ ವಿಭಕ್ತಿಯ ಮೇ—ಎಂಬ ಪದದಿಂದ ಉಪಾಸಕನಾದ ಜೀವನನ್ನೂ ಈ 'ಆತ್ಮಾ'—ಎಂದು ಪ್ರಥಮಾ ವಿಭಕ್ತಿಯುಳ್ಳ ಪದದಿಂದ ಉಪಾಸ್ಯವಾದ ಬ್ರಹ್ಮಪದಾರ್ಥವನ್ನೂ ಹೇಳುವುದರಿಂದ, ಉಪಾಸಕನಾದ ಜೀವನು ಉಪಾಸ್ಯನಾದ ಪರಬ್ರಹ್ಮವಾಗಲಾರನು.

ಸೂತ್ರ ೬—**ಸ್ಮೃತೇಶ್ಚ**

**ಸೂತ್ರಾರ್ಥ**

"ಸರ್ವಸ್ಯ ಚಾಹಂ ಹೃದಿಸನ್ನಿವಿಷ್ಟಃ"—(ಎಲ್ಲರ ಹೃದಯದಲ್ಲಿಯೂ ನಾನು ವಾಸಿಸುತ್ತಿದ್ದೇನೆ) ಎಂದು ಜೀವನನ್ನು ಭಕ್ತಿಮಾಡುವವನನ್ನಾಗಿಯೂ, ಪರಮಾತ್ಮನನ್ನು ಭಕ್ತಿಯಲ್ಲಿ ತೋರುವವನನ್ನಾಗಿಯೂ ಸ್ಮೃತಿ ಹೇಳುವುದರಿಂದ (ಜೀವನು ಬ್ರಹ್ಮಪದರ್ಥವಾದ ಜೀವನಲ್ಲ).

ಸೂತ್ರ ೭—**ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚ ನೇತಿಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ**

**ಸೂತ್ರಾರ್ಥ**

[ಅರ್ಭಕೌಕಸ್ತ್ವಾತ್] = ಅಲ್ಪ ಸ್ಥಾನವನ್ನುಳ್ಳವನಾದ್ದರಿಂದಲೂ, [ತದ್ವ್ಯಪದೇಶಾತ್, ಚ] = ಸೂಕ್ಷ್ಮರೂಪಿಯೆಂದು ಹೇಳಿರುವುದರಿಂದಲೂ, [ನ] = ಬ್ರಹ್ಮ ಪದಾರ್ಥವಲ್ಲ—[ಇತಿ ಚೇತ್] = ಎಂದಲ್ಲಿ, [ನ] = ಹಾಗಲ್ಲ. [ನಿಚಾಯ್ಯತ್ವಾತ್] = ಉಪಾಸ್ಯನಾದ್ದರಿಂದ (ಧ್ಯಾನಮಾಡುವುದಕ್ಕಾಗಿ) [ಏವಂ] = ಹೀಗೆ ಹೇಳಿದೆ. [ವ್ಯೋಮವಚ್ಚ] = ಆಕಾಶದಂತೆಯೇ, (ದೊಡ್ಡ ಆಕಾಶವನ್ನು ಸೂಕ್ಷ್ಮ ಸ್ಥಾನದಲ್ಲಿ ಕಿರಿದಾಗಿ ಅನುಸಂಧಿಸುವಂತೆಯೇ ಇಲ್ಲಿಯೂ ಕಂಡುಕೊಳ್ಳತಕ್ಕದ್ದು.)

**ವಿವರಣೆ**

"ಏಷ ಮೆ ಆತ್ಮಾಂತರ್ಹೃದಯೇ..."—ಎಂದು ಸೂಕ್ಷ್ಮವಾದ ಹೃದಯದಲ್ಲಿರುವವನನ್ನಾಗಿಯೂ, "ಅಣೀಯಾನ್"—ಎಂದು ಸೂಕ್ಷ್ಮಸ್ವರೂಪಿಯನ್ನಾಗಿಯೂ ಬ್ರಹ್ಮವನ್ನು ಹೇಳಿದೆ. ಇದು ಸರ್ವವ್ಯಾಪಕನಾದ ಪರಮಾತ್ಮನಿಗೆ ಕೂಡುವುದಿಲ್ಲವಾದ್ದರಿಂದ, ಅಣುಸ್ವರೂಪಿಯಾದ ಜೀವನೇ ಬ್ರಹ್ಮಶಬ್ದಕ್ಕೆ ಅರ್ಥ.—ಎಂದು ಪೂರ್ವ ಪಕ್ಷ.

ಸರ್ವವ್ಯಾಪಿಯಾದ ಪರಮಾತ್ಮನನ್ನೇ ಹೃದಯದಲ್ಲಿ ಧ್ಯಾನಿಸಬೇಕೆಂಬುದಕ್ಕಾಗಿ ಸೂಕ್ಷ್ಮವಾದ ಹೃದಯವನ್ನು ಸ್ಥಾನವನ್ನಾಗಿಯೂ, ಅದರಲ್ಲಿ ಅಡಗತಕ್ಕ ಅಳವಿಗಾಗಿ ಅವನ ಸ್ವರೂಪವನ್ನು ಸೂಕ್ಷ್ಮವಾಗಿಯೂ ಹೇಳಿದೆ. ಮುಂದೆ ಅವನನ್ನೇ "ಜ್ಯಾಯಾನ್ ಪೃಥಿವ್ಯಾಃ"—(ದೊಡ್ಡದಕ್ಕಿಂತಲೂ, ದೊಡ್ಡವನು) ಎಂದು ಹೇಳಿರುತ್ತದೆ. ಆಕಾಶ ದೊಡ್ಡದಾಗಿದ್ದರೂ ಅದನ್ನು ಕಿರಿದಾದ ಕಲಶಾದಿಗಳಲ್ಲಿಯೂ ಆ ಅಳತೆಯುಳ್ಳದಾಗಿ ಪರಿಚ್ಛೇದಿಸಿ ಕಾಣಿಸುವಂತೆ ಇಲ್ಲಿಯೂ ಕಂಡುಕೊಳ್ಳಬೇಕು. ಇದನ್ನು ಉಪಾಸನಕ್ಕಾಗಿ ಹೇಳಿದೆ—ಎಂದು ಸಿದ್ಧಾಂತ.

ಸೂತ್ರ ೮—**ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್**

**ಸೂತ್ರಾರ್ಥ**

[ಸಂಭೋಗಪ್ರಾಪ್ತಿಃ] = (ಜೀವನಂತೆ ಪರಮಾತ್ಮನನ್ನೂ ಶರೀರದ ಒಳಗೆ ಇರುವುದಾಗಿ ಒಪ್ಪಿಕೊಂಡಲ್ಲಿ ಜೀವನಿಗೆ ಹೇಗೊ ಹಾಗೆ ಪರಮಾತ್ಮನಿಗೂ) ಸುಖ-ದುಃಖಗಳ ಅನುಭವ ಸಂಭವಿಸುವುದು [ಇತಿ ಚೇತ್] = ಎಂದಲ್ಲಿ, [ನ] = ಹಾಗಲ್ಲ [ವೈಶೇಷ್ಯಾತ್] = (ಸುಖ ದುಃಖಾನುಭವಕ್ಕೆ) ಪುಣ್ಯಪಾಪರೂಪ ಕಾರಣ ವಿಶೇಷವುಂಟಾಗುವುದರಿಂದ. (ಶರೀರ ಸಂಬಂಧ ಮಾತ್ರವೇ ಸುಖದುಃಖಾನುಭವಕ್ಕೆ ಕಾರಣವಲ್ಲ. ಪುಣ್ಯಪಾಪಗಳೂ ಬೇಕು. ಅವು ಪರಮಾತ್ಮನಿಗೆ ಇಲ್ಲವಾದ್ದರಿಂದ, ಸುಖ ದುಃಖಾನುಭವವಿಲ್ಲವೆಂದು ಭಾವ.)

## 2. ಅಧಿಕರಣ

ಸೂತ್ರ—**ಅತ್ತಾ ಚರಾಚರ ಗ್ರಹಣಾತ್**

[ಅತ್ತ್ರವಿದ್ಯಾ ಅತ್ರಧಿಕರಣ]

**ಸಂಗತಿ**

ಹಿಂದೆ "ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್"—ಎಂಬಲ್ಲಿ ಭಗವಂತ ಸರ್ವಾಂತರ್ಯಾಮಿಯಾಗಿದ್ದಾಗ್ಯೂ, ಅವನಿಗೆ ಭೋಕ್ತೃತ್ವವಿಲ್ಲವೆನ್ನಲಾಯಿತು. ಹಾಗಾದರೆ, "ಯಸ್ಯ ಬ್ರಹ್ಮ ಚ ಕ್ಷತ್ರಂ ಚ..."— ಎಂಬಲ್ಲಿ ಭೋಕ್ತೃವೆಂದು ತಿಳಿದು ಬರುವವನು ಪರಮಪುರುಷನಾಗಲಾರ.—ಎಂಬ ಪೂರ್ವಪಕ್ಷದಿಂದ—ಪ್ರತ್ಯುದಾಹೃತಿ ಸಂಗತಿ.

**ವಿಷಯವಾಕ್ಯ**

ಕಠವಲ್ಲಿಯಲ್ಲಿ

"ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ।
ಮೃತ್ಯುರ್ಯಸ್ಯೋಪಸೇ ಚ ನಂ ಕ ಇತ್ಥಾವೇದ ಯತ್ರಸಃ"—

**ಸೂತ್ರಾರ್ಥ**

[ಚರಾಚರ ಗ್ರಹಣಾತ್] = (ಬ್ರಹ್ಮಕ್ಷತ್ರ ಶಬ್ದದಿಂದ ಬ್ರಾಹ್ಮಣ ಕ್ಷತ್ರಿಯರೊಂದಿಗೆ ಕೂಡಿದ ಸಮಸ್ತ) ಜಂಗಮ ಸ್ಥಾವರಗಳನ್ನೂ ಗ್ರಹಿಸುವುದರಿಂದ (ಹೇಳುವುದರಿಂದ) [ಅತ್ತಾ] = ಭುಜಿಸುವವನಾಗಿ ಹೇಳಲ್ಪಟ್ಟವನು (ಪರಮಾತ್ಮಾ).

**ವಿವರಣೆ**

" ಯಸ್ಯ ಬ್ರಹ್ಮ ಚ ಕ್ಷತ್ರಂ ಚ... "—ಎಂಬ ವಿಷಯವಾಕ್ಯದಲ್ಲಿ,—ಮೃತ್ಯುವನ್ನೇ ವ್ಯಂಜನವನ್ನಾಗಿಟ್ಟುಕೊಂಡು ಬ್ರಹ್ಮಕ್ಷತ್ರಗಳನ್ನು ಯಾವನು ಭುಜಿಸುವನೋ—ಎಂದು ಹೇಳಲ್ಪಟ್ಟವನು ಜೀವನೋ ಅಥವಾ ಪರಮಾತ್ಮನೋ ?—ಎಂದು ಸಂಶಯ. ಭುಜಿಸುವುದೆಂಬುದು ಹಿಂದಿನ ಜನ್ಮದಲ್ಲಿ ಮಾಡಿದ ಪುಣ್ಯ ಪಾಪರೂಪ ಕರ್ಮಾಧೀನವಾದ್ದರಿಂದ, ಇವನು ಕರ್ಮವನ್ನುಳ್ಳ ಜೀವನೆಂದು ಪೂರ್ವಪಕ್ಷ. ಮೃತ್ಯುವನ್ನು ಉಪಸೇಚನವನ್ನಾಗಿ ಹೇಳುವುದರಿಂದಲೂ, ಬ್ರಹ್ಮಕ್ಷತ್ರ ಪದಗಳಿಗೆ ಬ್ರಾಹ್ಮಣ ಕ್ಷತ್ರಿಯರನ್ನು ಅರ್ಥವಾಗಿ ಇಟ್ಟುಕೊಂಡಲ್ಲಿ ಅವರನ್ನು ಮಾತ್ರ ಭುಜಿಸುವವನೊಬ್ಬನು ಸಿದ್ಧನಲ್ಲದ್ದರಿಂದ ಆ ಪದಗಳಿಗೆ ಸಮಸ್ತ ಚರಾಚರಗಳನ್ನು ಅರ್ಥವಾಗಿ ತಿಳಿಯಬೇಕಾದ್ದರಿಂದಲೂ, ಚರಾಚರ ರೂಪವಾದ ಈ ಅನ್ನವನ್ನು ಭುಜಿಸುವುದು ಕರ್ಮಾಧೀನವಾದ ಭೋಜನವಲ್ಲ. ಜಗತ್ಸಂಹಾರ ರೂಪವೆಂದುಕೊಳ್ಳಬೇಕು. ಈ ಸಂಹಾರ ಜೀವನಿಗೆ ಕೂಡದುದರಿಂದ, ಇಲ್ಲಿ ಹೇಳಲ್ಪಟ್ಟವನು ಪರಮಾತ್ಮನೆಂದು ಸಿದ್ಧಾಂತ. ಉಪಸೇಚನವೆಂಬುದು ಬೇರೊಂದು ಅನ್ನಾದಿಗಳುಳ್ಳ ಭೋಜನಕ್ಕೆ ಸಾಧಕವಾಗಿದ್ದುಕೊಂಡು ತಾನೂ ಭುಜಿಸಲ್ಪಡುವುದು. ಯಮನನ್ನು ಸಾಧನವನ್ನಾಗಿ ಇಟ್ಟುಕೊಂಡು ಚರಾಚರಗಳನ್ನು ಸಂಹರಿಸಿ ಅನಂತರ ಯಮನನ್ನೂ ಸಂಹರಿಸಿಬಿಡುವನೆಂದು ತಾತ್ಪರ್ಯ.

ಸೂತ್ರ ೨—**ಪ್ರಕರಣಾ ಚ್ಚ**

**ಸೂತ್ರಾರ್ಥ**

" ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ, "—ಎಂದೂ " ನಾಯಮಾತ್ಮಾ ಪ್ರವಚನೇನ ಲಭ್ಯಃ... "—ಎಂದೂ ಇದು ಪರಮಾತ್ಮನನ್ನು ಹೇಳುವ ಪ್ರಕರಣವಾದ್ದರಿಂದಲೂ, ಈ ಪ್ರಕರಣದಲ್ಲಿ ಹೇಳಲ್ಪಟ್ಟವನು ಜೀವನಲ್ಲ.

ಸೂತ್ರ ೩—**ಗುಹಾಂ ಪ್ರವಿಷ್ಟಾ ಆತ್ಮಾನೌ ಹಿ ತದ್ದರ್ಶನಾತ್**

**ಸೂತ್ರಾರ್ಥ**

[ತದ್ದರ್ಶನಾತ್] = (ಈ ಪ್ರಕರಣದಲ್ಲಿ ಜೀವ—ಪರಮಾತ್ಮರುಗಳಿಗೇ ಹೃದಯವೆಂಬ ಗುಹೆಯಲ್ಲಿ) ಇರುವಿಕೆ ಕಾಣುವುದರಿಂದ, [ಆತ್ಮಾನೌ] = ಜೀವಾತ್ಮ— ಪರಮಾತ್ಮರುಗಳೇ [ಗುಹಾಂ ಪ್ರವಿಷ್ಟಾ, ಹಿ ] = ಹೃದಯ ಗುಹೆಯನ್ನು ಪ್ರವೇಶಿಸಿರುವವರಾಗಿ ಹೇಳಲ್ಪಟ್ಟವರು, ಆದ್ದರಿಂದ, (ಪರಮಾತ್ಮನೇ ಇಲ್ಲಿ ಭುಜಿಸುವವನೆಂದು ಹೇಳಲಟ್ಟವನು.)

**ವಿವರಣೆ**

" ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟಾ... "—ಎಂದಿರುವ ಮೇಲಣ ವಾಕ್ಯದಲ್ಲಿ ಹೃದಯ ಗುಹೆಯಲ್ಲಿದ್ದುಕೊಂಡು ಕರ್ಮಫಲವನ್ನು ಅನುಭವಿಸುವರೆಂದು ಹೇಳಿದೆ. ಕರ್ಮಫಲಾನುಭವ ಪರಮಾತ್ಮನಿಗೆ ಕೂಡದುದರಿಂದ, ಅಲ್ಲಿ ಜೀವನನ್ನೂ ಅಂತಃಕರಣವನ್ನೂ ಹೇಳಿರುವುದೆಂದು ತಿಳಿಯಬೇಕು. ಅಂತಃಕರಣಕ್ಕೆ ಕರ್ಮಫಲಾನುಭವವಿಲ್ಲದಿದ್ದಾಗ್ಯೂ, ಜೀವನ ಕರ್ಮಫಲಾನುಭವಕ್ಕೆ ಸಾಧನವಾದ್ದರಿಂದ ಅದನ್ನು

ಭೋಕ್ತೃವೆಂದು ಉಪಚರಿಸಿ ಹೇಳಿದೆ. ಭೋಕ್ತೃ—ಎಂದರೆ ಭೋಜನ ಮಾಡುವವನು. ಅಚೇತನವಾದ ಅಂತಃಕರಣವು ಭೋಜನ ಮಾಡದಿದ್ದಾಗ್ಗೂ, ಜೀವನು ಭುಜಿಸುವುದಕ್ಕೆ ಸಾಧನವಾದ್ದರಿಂದ, ಅದನ್ನೂ ಭೋಕ್ತೃವೆನ್ನಬಹುದು. ಭೋಜನವನ್ನು ಮಾಡದೆ ಅದಕ್ಕೆ ಸಾಧನವಾದುದನ್ನು ಭೋಜನ ಮಾಡುವುದೆಂದು ಹೇಳಿದಲ್ಲಿ ಅದನ್ನು ಉಪಚರಿಸಿ ಹೇಳುವುದೆಂದರ್ಥ. ಆ ಕರ್ಮಫಲ ಭೋಕ್ತೃವಾದ ಜೀವನೇ ಇಲ್ಲಿಯೂ ಬ್ರಹ್ಮಕ್ಷತ್ರ ಭೋಕ್ತೃವಾಗಿ ಹೇಳಲ್ಪಟ್ಟವನು—ಎಂಬುದು ಪೂರ್ವಪಕ್ಷ.

ಈ ಪ್ರಕರಣದಲ್ಲಿ "ಗುಹಾಹಿತಂ ಗಹ್ವರೇಷ್ಠಂ ಪುರಾಣಂ"—ಎಂದು ಪರಮಾತ್ಮನಿಗೂ "ಗುಹಾಂ ಪ್ರವಿಶ್ಯ ತಿಷ್ಠಂತೀ...' ಎಂದು ಜೀವಾತ್ಮನಿಗೂ ಹೃದಯ ಗುಹೆಯಲ್ಲಿ ಪ್ರವೇಶ ಹೇಳಲ್ಪಟ್ಟಿದೆ. ಅಂತಃಕರಣಕ್ಕಾಗಲೀ, ಮತ್ತೊಂದಕ್ಕಾಗಲೀ, ಹೇಳಲ್ಪಟ್ಟಿಲ್ಲ. ಆದ್ದರಿಂದ, ಹೃದಯ ಗುಹೆಯನ್ನು ಪ್ರವೇಶಿಸಿ ಕರ್ಮಫಲವನ್ನು ಭುಜಿಸುವವರೆಂದು ಮೇಲಿನ ವಾಕ್ಯದಲ್ಲಿ ಹೇಳಲ್ಪಟ್ಟವರುಗಳು ಜೀವಾತ್ಮ—ಪರಮಾತ್ಮರುಗಳೇ. ಪರಮಾತ್ಮನಿಗೆ ಕರ್ಮಫಲಾನುಭವವಿಲ್ಲದಿದ್ದಾಗ್ಯೂ, ಜೀವನ ಕರ್ಮಫಲಾನುಭವಕ್ಕೆ ಪ್ರಯೋಜಕನಾದ್ದರಿಂದ, ಅವನನ್ನೂ ಕರ್ಮಫಲ ಭೋಕ್ತೃವನ್ನಾಗಿ ಹೇಳಿದೆ. ಪ್ರಯೋಜಕನಾಗಿರುವುದೆಂದರೆ, ಅವನು ಅನುಭವಿಸಬೇಕಾದ ಫಲಗಳನ್ನು ಆಯಾ ಕಾಲಗಳಲ್ಲಿ ಏರ್ಪಡಿಸಿ ಕೊಡುವಿಕೆ. ಇಲ್ಲಿ ಜೀವ-ಪರರಿಬ್ಬರೂ ಪ್ರೇರ್ಯತ್ವ-ಪ್ರೇರಕತ್ವ ಸಂಬಂಧವಿದೆ. ಇಬ್ಬರನ್ನೂ ಸಮಾನವಾಗಿ ಭೋಕ್ತೃವೆಂದು ಹೇಳಿದ್ದಾಗ್ಯೂ ಪರಮಾತ್ಮನಿಂದ ಪ್ರೇರಿತನಾದ ಜೀವನು ನೇರವಾದ ಭೋಕ್ತೃ. ಅವನನ್ನು ಪ್ರೇರಿಸುವುದರ ಮೂಲಕ ಪರಮಾತ್ಮನು ಭೋಕ್ತೃ. "ಪಿಬಂತೌ"—ಎಂಬಲ್ಲಿ ಪಾನ ಮಾಡುವವನು, ಮಾಡಿಸುವವನು—ಇಬ್ಬರನ್ನೂ ಪಾನ ಮಾಡುವವರನ್ನಾಗಿಯೇ ತಂತ್ರದಿಂದ ಹೇಳಿದೆ. ಆದ್ದರಿಂದ ಅವರಿಬ್ಬರಿಗೂ ಸಮಾನ ಭೋಕ್ತೃತ್ವವಿಲ್ಲ. ಅಥವಾ "ಛತ್ರಿಣೋ ಗಚ್ಛಂತಿ—"— ಎಂಬಲ್ಲಿ 'ಛತ್ರಿ' ಶಬ್ದದಿಂದ ಲಕ್ಷಣೆಯಿಂದ ಛತ್ರಿ ಮತ್ತು ಅಚ್ಛತ್ರಿ (ಛತ್ರಿ ಹಿಡಿದವರು ಹಿಡಿಯದೆ ಜತೆಯಲ್ಲಿ ಹೋಗುವವರು) ಗಳನ್ನು ಒಟ್ಟಿಗೆ ಛತ್ರಿ ಎಂದೇ ಹೇಳಿದೆ. ಹೀಗೆಯೇ 'ಪಿಬಂತೌ'—ಎಬಲ್ಲಿಯೂ ಲಕ್ಷಣೆಯಿಂದ ಕರ್ಮಫಲವನ್ನು ಪಾನಮಾಡುವ ಜೀವ, ಮತ್ತು ಪಾನ ಮಾಡದ ಪರಮಾತ್ಮ—ಎಂಬ ಇವರಿಬ್ಬರನ್ನೂ ಗ್ರಹಿಸಬೇಕು. ಆದ್ದರಿಂದ ಇಲ್ಲಿಯ "ಯಸ್ಯ ಬ್ರಹ್ಮ ಚ ಕ್ಷತ್ರಂ ಚ" —ಎಂಬ ವಾಕ್ಯದಲ್ಲಿಯೂ ಬ್ರಹ್ಮ—ಕ್ಷತ್ರಗಳ ಭೋಕ್ತೃವೆಂದು ಹೇಳಲ್ಪಟ್ಟವನು ಪರಮಾತ್ಮನೆಂದು ಹೇಳುವುದರಲ್ಲಿ ಏನೂ ಬಾಧಕವಿಲ್ಲ. "ದ್ವಾಸುಪರ್ಣಾಸಯುಜಾ..." ಎಂಬ ಮಂತ್ರಕ್ಕೂ ಜೀವ-ಪರಮಾತ್ಮರುಗಳೇ ವಿಷಯವೆಂದು ನಿರ್ಣೀತವಾಗಿದೆ.

ಸೂತ್ರ ೪—**ವಿಶೇಷಣಾಚ್ಚ**

**ಸೂತ್ರಾರ್ಥ**

(ಈ ಪ್ರಕರಣದಲ್ಲಿ ಜೀವಾತ್ಮ—ಪರಮಾತ್ಮರುಗಳನ್ನೇ ಕ್ರಮವಾಗಿ ಉಪಾಸಕ ಉಪಾಸ್ಯರನ್ನಾಗಿಯೂ ಪ್ರಾಪ್ತೃವೆಂದೂ, ಪ್ರಾಪಕನೆಂದೂ) ವಿಶೇಷಿಸಿರುವುದರಿಂದಲೂ ಇತರ ಅಂತಃಕರಣಾದಿಗಳಿಗೆ ಈ ಪ್ರಕರಣದಲ್ಲಿ ಪ್ರವೇಶವಿಲ್ಲ.

"ಆತ್ಮಾನಂ ಮತ್ವಾಧೀರಃ"—ಎಂದು ಪರಮಾತ್ಮನನ್ನು ಉಪಾಸ್ಯನನ್ನಾಗಿಯೂ ಜೀವನನ್ನು ಉಪಾಸಕನನ್ನಾಗಿಯೂ. "ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ."—ಎಂದು ಪರಮಾತ್ಮನನ್ನು ಪ್ರಾಪ್ಯನನ್ನಾಗಿಯೂ ಜೀವನನ್ನು ಪ್ರಾಪ್ತೃವನ್ನಾಗಿ ಯೂ ಹೇಳಿದೆ. ಆದ್ದರಿಂದ ಇಲ್ಲಿ ಹೇಳಲ್ಪಟ್ಟ ಭೋಕ್ತೃ ಪರಮಾತ್ಮಾ.

"ಯಸ್ಯ ಬ್ರಹ್ಮ ಚ ಕ್ಷತ್ರಂಚ..."—ಎಂಬ ಈ ಅಧಿಕರಣದ ವಿಷಯವಾಕ್ಯದಲ್ಲಿ 'ಅತ್ತಾ'—ಎಂಬ ಪದ ಶ್ರುತವಲ್ಲದ್ದರಿಂದ ಈ ಶ್ರುತಿ ಈ ಸೂತ್ರಕ್ಕೆ ವಿಷಯವಲ್ಲವಂದಲ್ಲಿ ಓದನ-ಉಪಸೇಚನ ಶಬ್ದಗಳ ಸಾಮರ್ಥ್ಯದಿಂದ, ಅದನೀಯ-ಅತ್ತೃಭಾವ ಲಕ್ಷಣ ವಿಶೇಷ ದಲ್ಲಿ ಪರ್ಯವಸಾನವಿದೆಯಾದ್ದರಿಂದ, 'ಅತ್ತಾ'—ಎಂಬುದು ಸೂಚಿತವಾಗಿದೆಯೆಂದು ಸಮಾಧಾನ. ಆದ್ದರಿಂದಲೇ "ಯಸ್ಯ"—ಎಂಬ ಷಷ್ಠೀ ನಿರ್ದಿಷ್ಟವಾದ ಸಂಬಂಧಕ್ಕೂ ಈ ಪರ್ಯವಸಾನವನ್ನು ಸೂಚಿಸುವುದರಲ್ಲಿಯೇ ತಾತ್ಪರ್ಯ.

"ಗುಹಾಂ ಪ್ರವಿಷ್ಟೌ......"—ಇತ್ಯಾದಿಯಾದ ಎರಡು ಸೂತ್ರಗಳೂ ಬೇರೆ ಅಧಿಕರಣವೆಂದು ಕೆಲವರೆನ್ನುವರು. ಇದು ಅಯುಕ್ತ. ಒಂದೇ ಪ್ರಕರಣದಲ್ಲಿಯ ವಾಕ್ಯಗಳು ಇವಕ್ಕೆ ವಿಷಯಗಳಾದ್ದರಿಂದಲೂ, ಅಧಿಕರಣಾಂತರ—ಪಾದಾಂತರ ವ್ಯವ ಧಾನವಿಲ್ಲದ್ದರಿಂದಲೂ, ಪರಸ್ಪರ ಉಪಯುಕ್ತವಾದ ಅರ್ಥಗಳನ್ನು ಪ್ರತಿಪಾದಿಸುವ ಸೂತ್ರಗಳಿಗೆ ಐಕಾಧಿಕರಣ್ಯವೇ ಉಚಿತ. ಹಾಗಿಲ್ಲದಿದ್ದಲ್ಲಿ, ಈಕ್ಷತ್ಯಧಿಕರಣಾದಿಗಳಲ್ಲಿಯೂ ಒಂದೊಂದು ಅಧಿಕರಣದಲ್ಲಿಯ ಸೂತ್ರಗಳಿಗೂ ಅಧಿಕರಣ ಭೇದವನ್ನು ಕಲ್ಪಿಸಬೇಕಾದ ಪ್ರಸಂಗವೊದಗುವುದು. ಆದ್ದರಿಂದ ಒಂದೇ ಅಧಿಕರಣವಾಗಿದ್ದುಕೊಂಡೇ ಅವಾಂತರ ಶಂಕಾ ಪರಿಹಾರಪರವಾದವು ಈ ಎರಡು ಸೂತ್ರಗಳೂ

## 3. ಅನ್ತರಾಧಿಕರಣ

### ಸೂತ್ರ ಅನ್ತರ ಉಪಪತ್ತೇಃ

(ಉಪಕೋಸಲವಿದ್ಯಾ)

**ಸಂಗತಿ**

ಹಿಂದಿನ ಅಧಿಕರಣದಲ್ಲಿ ಮೋಕ್ಷ ಸ್ವರೂಪವನ್ನೂ ಅದರ ಸಾಧನವನ್ನೂ ಪ್ರಶ್ನಿಸಿದ ನಚಿಕೇತಸ್ಸಿಗೆ, ಅದನ್ನು ತಿಳಿಯುವುದು ಬಲು ಕಷ್ಟವೆಂಬುದನ್ನು ತಿಳಿಸಿ, ಅದಕ್ಕೆ ಬದಲಾಗಿ ವಿವಿಧ ಭೋಗಗಳನ್ನು ಕೊಡುವುದಾಗಿ ಪ್ರಲೋಭನಮಾಡಿ, ಶಿಷ್ಯನ ಯೋಗ್ಯತೆಯನ್ನು ಪರೀಕ್ಷಿಸಿ ತಿಳಿದುಕೊಂಡ ನಂತರ, ಪರಾವರ ತತ್ತ್ವಜ್ಞಾನ ವನ್ನೂ ಪರಮಾತ್ಮೋಪಾಸನವನ್ನೂ ತತ್ಪದವನ್ನೂ ಹೊಂದುವುದೇ ಲಕ್ಷಣವಾಗಿಯುಳ್ಳ ಮೋಕ್ಷವನ್ನೂ, "ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ..."—ಎಂದು ಉಪ ಕ್ರಮಿಸಿ, "ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ"—ಎಂಬಲ್ಲಿ ಯವರೆಗೂ ಉಪದೇಶಿಸಿ ಅದಕ್ಕೆ ಬೇಕಾದ ವಿಶೇಷಗಳನ್ನೂ ಮೃತ್ಯು ಉಪದೇಶಿಸಿದ ನೆಂದು ಹೇಳಿದೆ.

ಅನಂತರ—"ಗೂಢೋಽತ್ಮಾನ ಪ್ರಕಾಶತೇ"—"ತಂ ದುರ್ದರ್ಶಂ ಗೂಢಮನು ಪ್ರವಿಷ್ಟಂ ಕ ಇತ್ಥಾ ವೇದ ಯತ್ರ ಸಃ"—ಇತ್ಯಾದಿಯಿಂದ ಹಿಂದೆ ಹೇಳಿರುವಂತೆ

ಪರಮಾತ್ಮಾ ದುರ್ದರ್ಶನಾದಲ್ಲಿ, "ಯ ಏಷೋಽಕ್ಷಿಣಿ ಪುರುಷೋ ದೃಶ್ಯತೇ"—ಎಂಬಲ್ಲಿ ಸುದರ್ಶನೆಂಬುದಾಗಿ ಪ್ರಸಿದ್ಧವಾಗಿರುವವನು ಪರಮಾತ್ಮನಾಗಲು ಅರ್ಹನಲ್ಲ.—ಎಂಬ ಶಂಕೆಯಿಂದ ಇಲ್ಲಿ ಪ್ರತ್ಯುದಾಹೃತಿ ಸಂಗತಿ.

"ಅತ್ಯುದುರ್ದರ್ಶತಾಯಾಂ ಸ್ಯಾದಕ್ಷಿ ದೃಶ್ಯಸ್ಸುದರ್ಶನಃ ।

ಪ್ರತ್ಯುದಾಹೃತಿ ಸಂಗತ್ಯಾತೋಽಂತರಾಧಿ ಕ್ರಿಯೋದಯಃ ॥—ಎಂದು ಇದನ್ನೇ ಶ್ರೀನಯಸಂಗತಿ ಮಾಲೆಯಲ್ಲಿಯೂ ಹೇಳಿದೆ. ಪೂರ್ವಾಧಿಕರಣದಲ್ಲಿ ಉಪಾಸಕನ ಹೃದಯ ಗುಹಾಂತರ್ವರ್ತಿಯಾದ ಪರಮಾತ್ಮ ನಿರೂಪಿತ. ಇಲ್ಲಿ ಉಪಾಸಕನ ಚಕ್ಷುರ್ವರ್ತಿಯಾಗಿ ಪರಮಪುರುಷ ನಿರೂಪಿತನಾಗಿದ್ದಾನೆ—ಎಂದೂ ಸಂಗತಿಯನ್ನು ಹೇಳಬಹುದು.

## ವಿಷಯವಾಕ್ಯ

ಛಾಂದೋಗ್ಯದಲ್ಲಿ—"ಯ ಏಷೋಽಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾ ಚ ಏತದಮೃತ ಮೇತದಭಯ ಮೇತದ್ಬ್ರಹ್ಮ."—ಎಂದಿದೆ.

## ಸೂತ್ರಾರ್ಥ

[ಉಪಪತ್ತೇಃ] = (ಮೇಲೆ ಹೇಳಿದ ಗುಣಗಳು ಪರಮಪುರುಷನಲ್ಲಿಯೇ) ಅನ್ವಯಿಸುವುದರಿಂದ, [ಅಂತರಃ] = ನೇತ್ರದೊಳಗೆ ಕಾಣುವುದಾಗಿ ಹೇಳಲ್ಪಟ್ಟವನು (ಪರಮಾತ್ಮ).

## ವಿವರಣೆ

"ಯ ಏಷೋಽಕ್ಷಿಣಿ ಪುರುಷೋ ದೃಶ್ಯತೇ,"— (ನೇತ್ರದೊಳಗೆ ಯಾವ ಪುರುಷ ಕಾಣಲ್ಪಡುವನೋ)—ಇತ್ಯಾದಿಯಾಗಿ ಅಕ್ಷಿಗೆ ಆಧಾರವಾಗಿ ಹೇಳಲ್ಪಟ್ಟ ಪುರುಷನು ಪ್ರತಿಬಿಂಬರೂಪನೋ ? ಅಥವಾ ಜೀವನೋ ? ಅಥವಾ ನೇತ್ರಕ್ಕೆ ಅಧಿಷ್ಠಾನ ದೇವತೆಯಾದ ಸೂರ್ಯನೋ ? ಅಥವಾ ಪರಮಾತ್ಮನೋ ?—ಎಂದು ಸಂಶಯ. ನೇತ್ರದಲ್ಲಿ ಕಾಣಲ್ಪಡುತ್ತಾನೆಂದು ಪ್ರತ್ಯಕ್ಷವಾಗಿ ಹೇಳುವುದರಿಂದ, ಅದು ಪ್ರತಿಬಿಂಬವಾಗಬಹುದು; ಅಥವಾ ಕಣ್ಣು ತಿರುಗಿಸುವುದನ್ನು ನೋಡಿ ಮರಣ ಕಾಲದಲ್ಲಿ ಶರೀರದೊಳಗೆ ಜೀವನಿರುವುದಾಗಿ ನಿಶ್ಚಯಿಸುವುದರಿಂದ, ಜೀವನಿಗೆ ನೇತ್ರದಲ್ಲಿ ವಿಶೇಷ ಸಾನ್ನಿಧ್ಯವುಂಟು. ಆದ್ದರಿಂದ ಅವನು ಜೀವನೂ ಆಗಬಹುದು. ಅಥವಾ ನೇತ್ರಕ್ಕೆ ಅಧಿಷ್ಠಾನ ದೇವತೆಯಾದ ಸೂರ್ಯನು ನೇತ್ರದಲ್ಲಿ ಪ್ರತಿಷ್ಠಿತನಾಗಿದ್ದಾನೆಂದು. "ರಶ್ಮಿಭಿರೇಷೋಽಸ್ಮಿನ್ ಪ್ರತಿಷ್ಠಿತಃ."—ಎಂಬ ಶ್ರುತಿ ಹೇಳುವುದರಿಂದ, ಸೂರ್ಯನೂ ಆಗಬಹುದು—ಎಂಬುದು ಪೂರ್ವಪಕ್ಷ.

ಸಕಲಾಭೀಷ್ಟಪರಿಪೂರ್ಣ, ಭಕ್ತಾಭೀಷ್ಟಫಲಪ್ರದ, ನಿರತಿಶಯದೀಪ್ತಿಯುಕ್ತ—ಎಂದು ಮೇಲೆ ಹೇಳಲಿರುವ ಗುಣಗಳು ಕೆಳಗೆ ಹೇಳಿರುವ ಪ್ರತಿಬಿಂಬಾದಿಗಳಲ್ಲಿ ಇಲ್ಲ. ಪರಮಾತ್ಮನಲ್ಲಿ ಮಾತ್ರವೇ ಉಂಟು. ಆದ್ದರಿಂದ ಅಕ್ಷಿಗೆ ಆದಾರವೆಂಬುದಾಗಿ ಹೇಳಲ್ಪಟ್ಟ ಪುರುಷನು ಪರಮಾತ್ಮ ಎಂಬುದೇ ಸಿದ್ಧಾಂತ.

### ಸೂತ್ರ ೨—ಸ್ಥಾನಾದಿವ್ಯಪದೇಶಾ ಚ್ಚ

**ವಿವರಣೆ**

"ಯಶ್ಚಕ್ಷುಷಿ ತಿಷ್ಠನ್"— (ಯಾವನು ಕಣ್ಣಿನಲ್ಲಿ ಇದ್ದಾನೆಯೋ) ಅವನು ಸರ್ವಾಂತರ್ಯಾಮಿಯಾದ ಪರಮಾತ್ಮಾ ಎಂದು ಪರಮಪುರುಷನಿಗೇ ನೇತ್ರದಲ್ಲಿ ಸ್ಥಿತಿ ಮುಂತಾದ ಗುಣಗಳನ್ನು ಹೇಳುವುದರಿಂದಲೂ, ಇವನು ಪರಮಾತ್ಮಾ. ಯೋಗಿಗಳಿಗೆ ಕಾಣುವುದರಿಂದ 'ಕಾಣಲ್ಪಡುತ್ತಾನೆ' — ("ದೃಶ್ಯತೇ")—ಎಂದು ಪ್ರತ್ಯಕ್ಷವಾಗಿ ಹೇಳಿದೆ.

ಚಕ್ಷುಸ್ಸಿನಲ್ಲಿ ಸ್ಥಿತಿ, ನಿಯಮನ, ಧಾರಕತ್ವ ಮುಂತಾದುವು ಸೂತ್ರದಲ್ಲಿಯ 'ಆದಿ'—ಶಬ್ದದ ಅರ್ಥ.

### ಸೂತ್ರ ೩—ಸುಖವಿಶಿಷ್ಟಾಭಿಧಾನಾ ದೇವ ಚ

**ವಿವರಣೆ**

ಸುಖವಿಶಿಷ್ಟಾಭಿಧಾನಾತ್ + ಏವ + ಚ—ಎಂದು ಪದವಿಭಾಗ.

"ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ,"—ಎಂದು ಅಪರಿಚ್ಛಿನ್ನ ಸುಖವುಳ್ಳ ಪರಮಪುರುಷನನ್ನೇ ನೇತ್ರದಲ್ಲಿ ಉಪಾಸಿಸಬೇಕೆಂಬುದಕ್ಕಾಗಿಯೇ, "ಯ ಏಷೋಽಕ್ಷಿಣಿ ಪುರುಷೋ ದೃಶ್ಯತೇ"—ಎಂದು ಇಲ್ಲಿ ಹೇಳಿದೆ. ಇಲ್ಲಿ ಹೇಳಲ್ಪಟ್ಟವನು ಪರಮಾತ್ಮಾ ಎಂದು ನಿಶ್ಚಯಿಸುವುದಕ್ಕೆ ಇದೊಂದೇ ಸಾಕು—ಎಂದು ತಾತ್ಪರ್ಯ. ಖಂ = ಸುಖ.

"ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ,"—ಎಂಬ ಈ ವಾಕ್ಯದ ಮೊದಲಲ್ಲಿಯೇ, ಅನಂತ ಸುಖವುಳ್ಳ ಬ್ರಹ್ಮವನ್ನು ಹೇಳಲು ಆರಂಭಿಸಿರುವುದರಿಂದ ಆ ಬ್ರಹ್ಮಕ್ಕೆ ನೇತ್ರವನ್ನು ಸ್ಥಾನವಾಗಿ ಹೇಳಿರುವುದರಿಂದ ನೇತ್ರದಲ್ಲಿರುವ ಪುರುಷನೂ ಪರಮಾತ್ಮನೇ ಸರಿ.

### ಸೂತ್ರ ೪—ಅತಏವ ಚ ಸ ಬ್ರಹ್ಮ

**ಸೂತ್ರಾರ್ಥ**

[ಅತಃ, ಏವ] = ಅಪರಿಚ್ಛಿನ್ನ ಸುಖವುಳ್ಳ ಪರಮಪುರುಷನನ್ನು ಹೇಳುವುದರಿಂದಲೇ, [ಸಃ] = 'ಖ'—ಶಬ್ದದಿಂದ ಹೇಳಲ್ಪಟ್ಟ ಆಕಾಶ [ಬ್ರಹ್ಮ] = ಪರಬ್ರಹ್ಮ.

**ವಿವರಣೆ**

ಸಂಸಾರ ತಾಪಗಳನ್ನು ಕಂಡು ಹೆದರಿ ಸಂಸಾರವನ್ನು ಬಿಟ್ಟು ಮೋಕ್ಷ ಹೊಂದಲು ಬಯಸಿದ ಉಪಕೋಸಲನು ಪರಬ್ರಹ್ಮದ ಸ್ವರೂಪವನ್ನು ಪ್ರಶ್ನಿಸಲು, ಅವನಿಗೆ ಉತ್ತರ ಕೊಟ್ಟ "ಯದ್ವಾವ ಕಂ ತದೇವ ಖಂ ಯದೇವ ಖಂ ತದೇವ ಕಂ," —ಎಂಬ ವಾಕ್ಯದಲ್ಲಿ ಯಾವುದು 'ಕಂ' —ಎಂಬುದೋ ಅದೇ 'ಖಂ'. ಯಾವುದು ಖಂ'—ಎಂಬುದೋ, ಅದೇ 'ಕಂ'. ಬ್ರಹ್ಮದ ಸುಖರೂಪತ್ವವೇ ಅಪರಿಚ್ಛಿನ್ನ. ಅಂದರೆ ಅಳವಿಲ್ಲದ ಸುಖ ರೂಪವಾದ ಪರಬ್ರಹ್ಮವನ್ನು ಹೇಳಿ. "ಪ್ರಾಣಂ ಚ

ಹಾಸ್ಮೈತದಾಕಾಶಂ ಚೋಚುಃ" —ಎಂದು ಇವನ್ನೇ ಆಕಾಶವೆಂದು ಹೇಳುವರು —ಎಂದು ಹೇಳುವುದರಿಂದ, ಆ ವಾಕ್ಯದಲ್ಲಿಯು 'ಖಂ'—ಎಂಬ ಪದಕ್ಕೆ ಭೂತಾಕಾಶ ವೆಂದರ್ಥವಲ್ಲ. ಪರಬ್ರಹ್ಮವೇ ಅರ್ಥ.

ಸೂತ್ರ ೫—**ಶ್ರುತೋಪನಿಷತ್ಕಗತ್ಯಭಿಧಾನಾಚ್ಚ**

**ಸೂತ್ರಾರ್ಥ**

ಪರಮಾತ್ಮ ಸ್ವರೂಪ ಯಾಥಾರ್ಥ್ಯವನ್ನರಿತ ಉಪಾಸಕರಿಗೆ ಅನುಸಂಧೇಯವಾದ ಪುನರಾವೃತ್ತಿಯಿಲ್ಲದ (ಅರ್ಚಿರಾದಿ) ಮಾರ್ಗವನ್ನು (ಕಣ್ಣಿನಲ್ಲಿರುವ ಪುರುಷನನ್ನು ಅರಿತವನಿಗೂ) ಹೇಳುವುದರಿಂದಲೂ, (ಕಣ್ಣಿನಲ್ಲಿರುವ ಪುರುಷ ಪರಮಾತ್ಮಾ).

ಸೂತ್ರ ೬—**ಅನವಸ್ಥಿತೇ ರ ಸಂಭವಾಚ್ಚ ನೇತರಃ**

**ಸೂತ್ರಾರ್ಥ**

[ಅನವಸ್ಥಿತೇಃ] = ಪುರುಷಾಂತರ ಸನ್ನಿಧಾನಕ್ಕೆ ಅಧೀನವಾದ (ಪ್ರತಿಬಿಂಬವೂ, ಜೀವನೂ, ಸೂರ್ಯನೂ ಸರ್ವಕಾಲದಲ್ಲಿಯೂ ನೇತ್ರದಲ್ಲಿ) ಇರುವುದಿಲ್ಲವಾದ್ದರಿಂದಲೂ, [ಅಸಂಭವಾತ್ ಚ] = ಹಿಂದೆ ಹೇಳಿದ ಅಮೃತತ್ವಾದಿ ಗುಣಗಳು ಅವುಗಳಲ್ಲಿ ಸಂಭವಿಸದುದರಿಂದಲೂ, [ಇತರಃ] = ಪರಮಾತ್ಮನಿಗಿಂತಲೂ ಬೇರೆಯಾದ ಜೀವನೂ, ಸೂರ್ಯನೂ, ಪ್ರತಿಬಿಂಬವೂ ಕಣ್ಣಿನಲ್ಲಿರುವುದಾಗಿ ಹೇಳಲಟ್ಟ ಪುರುಷನಾಗಲಾರರು.

ಇಲ್ಲಿ ಕೆಲವರ ಚೋದ್ಯವುಂಟು—ಅದೇನೆಂದರೆ—ಮೋಕ್ಷಕ್ಕಾಗಿ ಉಪಾಸ್ಯನಾದವನಲ್ಲವೇ ಇಲ್ಲಿ ಕಣ್ಣಿನಲ್ಲಿ ಪ್ರತಿಪಾದಿಸಲ್ಪಟ್ಟಿದ್ದಾನೆ! ಕಣ್ಣಿನಲ್ಲಿ ಕಾಣಿಸುವ ಪ್ರತಿಕೃತಿ ಪುರುಷನು ತಾನೇ ಫಲಪ್ರದನಲ್ಲ. ಫಲಪ್ರದನಲ್ಲದವನು ಉಪಾಸ್ಯ ಹೇಗಾಗುತ್ತಾನೆ? —ಎಂಬುದು.

ಇದಕ್ಕೆ ಉತ್ತರ—ವೇದೋಕ್ತವಾದುದನ್ನು ಹೇಗೆ ಹೇಳಿದೆಯೋ ಹಾಗೆಯೇ ನಂಬಬೇಕು. ಕನ್ನಡಿ ನೋಡುವುದರಿಂದ ಮಂಗಳ. ಪಾಷಂಡಿಯನ್ನು ನೋಡಿದರೆ ಅಮಂಗಳ —ಎಂದು ಶ್ರುತಿ ಹೇಳುತ್ತೆ. ಇದಕ್ಕೆ ನಿಯಾಮಕವೇನು?—ಎಂದರೆ, "ಯದ್ವೇದಾತ್ ಪ್ರಭುಸಂಮಿತಾದಧಿಗತಂ ಶಬ್ದ ಪ್ರಮಾಣಾಚ್ಚಿರಂ."—ಎಂದು ಹೇಳಿರುವಂತೆ ಉದ್ದಂಡ ಮಹಾರಾಜನಂತೆ ವೇದ ಸ್ವತಂತ್ರವಾಗಿ ಏನನ್ನಾದರೂ ವಿಧಿಸುತ್ತದೆ. ಅಂತಹ ಶ್ರುತಿಯ ಸ್ವಾತಂತ್ರ್ಯವೇ ಇದಕ್ಕೆ ನಿಯಾಮಕ. ಹಾಗೆಯೇ ಜ್ಯೋತಿಷ್ಟೋಮಾದಿಗಳು ಧರ್ಮ; ಬ್ರಹ್ಮಹತ್ಯಾದಿಯು ಅಧರ್ಮವೆಂದೂ ಹೇಳಲ್ಪಟ್ಟಿದೆ. ಹೀಗೆಯೇ ಸರ್ವತ್ರ ಧರ್ಮಾಧರ್ಮಗಳ ಬಗ್ಗೆ ಶ್ರುತಿ ಸ್ವಾತಂತ್ರ್ಯವನ್ನೇ ಪುರಸ್ಕರಿಸಬೇಕೇ ಹೊರತು ಯಾವ ಯುಕ್ತಿಯನ್ನೂ ಅಲ್ಲ. ಹೀಗೆಯೇ ಇಲ್ಲಿಯೂ ಮಿಥ್ಯಾಭೂತ ಪ್ರತಿಬಿಂಬವೇ ಆದಾಗ್ಯೂ ಅದರ ದರ್ಶನವೇ ಫಲ ಕೊಡತಕ್ಕದ್ದು. ಸುಳ್ಳಾದಾಗ್ಯೂ ಕನ್ನಡಿಯಲ್ಲಿ ತನ್ನ ಪ್ರತಿಬಿಂಬ ನೋಡುವುದರಿಂದ ಮಂಗಳ ದೊರಕುತ್ತೆ. ಹೀಗೆಯೇ ಅಕ್ಷಿ ಪುರುಷನೇ ಉಪಾಸ್ಯನಾಗಿರುವುದರಲ್ಲಿಯೂ ಅವನ ಉಪಾಸನೆಯಿಂದ ಮಂಗಳಾವಾಪ್ತಿಯೆಂಬುದು ಸುಸಂಗತ. ಸ್ವಾತಂತ್ರ್ಯವೇ ಶ್ರುತಿಗೆ ಸ್ವಭಾವ. ಸ್ವತಂತ್ರವಾದ ಶ್ರುತಿಗಳಲ್ಲಿ ಫಲಪ್ರದವೇ ವೇದ್ಯ

ನಾಗಬೇಕೆಂಬ ನಿಯಮವಿಲ್ಲ. ಫಲವಿಲ್ಲದ್ದೂ, ವೇದ್ಯವಾಗಬಹುದು. ಮಂಗಳಕರವಾದ ಆಯಾ ವಸ್ತುಗಳನ್ನು ನೋಡುವಿಕೆಯೇ ಫಲ ಕೊಡುತ್ತೆ. ಆ ವಸ್ತು ಅಥವಾ ವೇದ್ಯವಾದುದಲ್ಲ ಫಲಕೊಡುವುದು. ವಸ್ತು ಮಿಥ್ಯೆಯಾದರೂ ಅದರ ಉಪಾಸನವೇ ಫಲಸಾಧನವಾದ್ದರಿಂದ ಅಕ್ಷ್ಯಂತರಸ್ಥನಾದ ಪ್ರತಿಬಿಂಬ ಪುರುಷನನ್ನು ಧ್ಯೇಯವಾಗಿ ಪೂರ್ವಪಕ್ಷಿಯೂ ಕಲ್ಪಿಸುವುದು ಯುಕ್ತವೆಂದು ಭಾವ.

## 4. ಅನ್ತರ್ಯಾಮ್ಯಧಿಕರಣ

[ಅಂತರ್ಯಾಮಿವಿದ್ಯಾ]

### ಸೂತ್ರ—ಅನ್ತರ್ಯಾಮ್ಯಧಿದೈವಾಧಿ ಲೋಕಾದಿಷು ತದ್ಧರ್ಮ ವ್ಯಪದೇಶಾತ್

**ಪೇಟಿಕಾಸಂಗತಿ**

ಹಿಂದೆ ೩ ಅಧಿಕರಣಗಳಿಂದ ಉಪಾಸಕನ ಹೃದಯಾದಿದೇಶಪರಿಚ್ಛಿನ್ನನಾದ ಪರಮಪುರಷ ಉಪಾಸ್ಯನೆಂದಾಯಿತು. ಮುಂದಿನ ೩ ಅಧಿಕರಣಗಳಿಂದ ವಿಪುಲ ದೇಶಾವ ಸ್ಥಿತ ಪರಮಾತ್ಮಾ ಉಪಾಸ್ಯನಾಗಿ ಹೇಳಲ್ಪಡುತ್ತಾನೆ.

**ಸಂಗತಿ**

ಹಿಂದೆ. "ಸ್ಥಾನಾದಿ ವ್ಯಪದೇಶಾಚ್ಚ."— ಎಂಬಲ್ಲಿ "ಯಶ್ಚಕ್ಷುಷಿ ತಿಷ್ಠನ್" — ಇತ್ಯಾದಿಯಿಂದ ಪ್ರತಿಪಾದ್ಯವಾದ ಚಕ್ಷುಸ್ಸಿನಲ್ಲಿ ಸ್ಥಿತಿ ನಿಯಮಾದಿಗಳು ಪರಮಾತ್ಮನದೇ ಎಂದು ಸಿದ್ಧಮಾಡಿಕೊಂಡು ಅಕ್ಷಿಪುರುಷ ಪರಮಾತ್ಮನೆಂದು ಸಾಧಿಸಿದರು. ಈಗ ಅದನ್ನೇ ಸಮರ್ಥಿಸುತ್ತಾರೆ...ಎಂದು ಇಲ್ಲಿ ಉಪೋದ್ಘಾತ ಸಂಗತಿ.

"ಅಕ್ಷಿಸ್ಥ ಪುರುಷಸ್ಯೈವ ಬ್ರಹ್ಮತ್ವಸ್ಯೋಪಪಾದಿಕಾ ।
ಅಂತರ್ಯಾಮ್ಯಧಿಕೃತಿಃ ತೇನೋಪೋದ್ಘಾತ ಸಂಗತಿಃ"—ಎಂದಿದೆ.

**ವಿಷಯವಾಕ್ಯ**

ಕಾಣ್ವರೂ ಮಾಧ್ಯಂದಿನರೂ ಆದ ವಾಜಸನೇಯರು—"ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೋ ಯಮಯತಿ ಏಷ ಆತ್ಮಾಂತರ್ಯಾಮ್ಯ ಮೃತಃ"— ಎಂದು ಕಾಣ್ವರೂ "ಯಸ್ಸರ್ವೇಷು ಲೋಕೇಷು ತಿಷ್ಠನ್, ಯಸ್ಸರ್ವೇಷು ವೇದೇಷು ತಿಷ್ಠನ್—ಇತ್ಯಾದಿಯಾಗಿ ಮಾಧ್ಯಂದಿನರೂ ಪಠಿಸುತ್ತಾರೆ.

**ಸೂತ್ರಾರ್ಥ**

[ಅಧಿದೈವಾಧಿ ಲೋಕಾದಿಷು] = ಅಧಿದೈವ ಅಧಿಲೋಕಾದಿ ಪದಗಳುಳ್ಳ ವಾಕ್ಯಗಳಲ್ಲಿ ಪ್ರತಿಪಾದಿಸಲ್ಪಟ್ಟ [ಅಂತರ್ಯಾಮೀ] = ಅಂತರ್ಯಾಮಿಯಾದವನು [ತದ್ಧರ್ಮವ್ಯಪದೇಶಾತ್] = ಪರಮಾತ್ಮನಿಗೇ ಅಸಾಧಾರಣವಾದ ಧರ್ಮಗಳನ್ನು ಹೇಳುವುದರಿಂದ (ಪರಮಾತ್ಮಾ).

**ವಿವರಣೆ**

"ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರಃ"—ಇತ್ಯಾದಿಯಾದ ವಿಷಯ ವಾಕ್ಯದಲ್ಲಿ ಅಂತರ್ಯಾಮಿಯಾಗಿ ಹೇಳಲ್ಪಟ್ಟವನು ಜೀವಾತ್ಮನೋ ? ಅಥವಾ, ಪರ ಮಾತ್ಮನೋ ?—ಎಂದು ಸಂಶಯ. "ದ್ರಷ್ಟಾ ಶ್ರೋತಾ (ನೋಡುತ್ತಾನೆ, ಕೇಳುತ್ತಾನೆ) ಎಂದು ಇಂದ್ರಿಯಾಧೀನ ಜ್ಞಾನವನ್ನೂ ಹೇಳುವುದರಿಂದಲೂ, "ನಾನ್ಯೋಽತೋಽಸ್ತಿ ದ್ರಷ್ಟಾ"—ಎಂದು ಇವನಿಗಿಂತ ಬೇರೊಬ್ಬ ದ್ರಷ್ಟೃವಾದವನು ಇಲ್ಲ—ಎಂದು ಹೇಳುವುದರಿಂದಲೂ, ಇವನು ಜೀವಾತ್ಮಾ ಎಂದು ಪೂರ್ವಪಕ್ಷ.

ಭೂಮಿ ಮುಂತಾದ ಸಕಲ ತತ್ತ್ವಗಳಲ್ಲಿಯೂ ಪ್ರವೇಶಿಸಿ ಅವುಗಳಿಗೆ ಸರ್ವ ಪ್ರಕಾರ ನಿಯಮಾದಿಗಳನ್ನು ಮಾಡಿಕೊಂಡು ಅವುಗಳಿಗೆ ಕಾಣದ ಹಾಗೆ ಇದ್ದುಕೊಂಡು ಶರೀರಿಯೂ ಪರಮ ಭೋಗ್ಯನೂ ಮೋಕ್ಷಪ್ರದನೂ ಆಗಿದ್ದಾನೆಂದು ಹೇಳಿರುವುದರಿಂದ ಈ ಗುಣಗಳು ಜೀವಾತ್ಮನಿಗೆ ಕೂಡತಕ್ಕವುಗಳಲ್ಲವಾದ್ದರಿಂದ. ಇಲ್ಲಿ ಅಂತರ್ಯಾಮಿ ಯಾಗಿ ಹೇಳಲ್ಪಟ್ಟವನು ಪರಮಾತ್ಮಾ. "ಪಶ್ಯತ್ಯಚಕ್ಷುಃ"—ಇತ್ಯಾದಿಯಿಂದ ಕಣ್ಣಿಲ್ಲ ದೆಯೇ ನೋಡುತ್ತಾನೆ, ಕಿವಿಯಿಲ್ಲದೆಯೇ ಕೇಳುತ್ತಾನೆ ಎಂದು ಹೇಳಿರುವು ದರಿಂದ ಇಲ್ಲಿ ಹೇಳಿದ್ದು ಇಂದ್ರಿಯಗಳಿಂದ ಉಂಟಾದ ಜ್ಞಾನವಲ್ಲ. ಸ್ವಾಭಾವಿಕವಾದ ಜ್ಞಾನ. ಇದು ಇವನಿಗೇ ಅಸಾಧಾರಣವಾದದ್ದು. ಬೇರೊಬ್ಬ ದ್ರಷ್ಟಾ ಇಲ್ಲವೆಂದಿರು-ವುದಕ್ಕೂ, ಪೃಥಿವ್ಯಾದಿಗಳಿಗೆ ಕಾಣಿಸದ ತಾನು ಅವಕ್ಕೆ ಅಂತರ್ಯಾಮಿಯಾಗಿರುವಂತೆ, ಅವನಿಗೂ ಕಾಣಲ್ಪಡದವನಾಗಿ ಅವನಿಗೂ ಬೇರೊಬ್ಬ ಅಂತರ್ಯಾಮಿಯಿಲ್ಲವೆಂದು ಅರ್ಥವಾದ್ದರಿಂದ ಅದೂ ಉಪಪನ್ನವೆಂದು ಸಿದ್ಧಾಂತ.

ಸೂತ್ರ ೨—**ನ ಚ ಸ್ಮಾರ್ತಮತದ್ಧರ್ಮಾಭಿಲಾಪಾತ್ ಶಾರೀರಶ್ಚ**

**ಸೂತ್ರಾರ್ಥ**

[ಅತದ್ಧರ್ಮಾಭಿಲಾಪಾತ್] = ಮೂಲಪ್ರಕೃತಿಗೂ ಜೀವಾತ್ಮನಿಗೂ ಕೂಡದ ನಿಯಂತೃತ್ವಾದಿ ಗುಣಗಳನ್ನು ಹೇಳುವುದರಿಂದ, [ಸ್ಮಾರ್ತಂ ಚ] = ಕಪಿಲ ಸ್ಮೃತಿಯಲ್ಲಿ ಜಗತ್ಕಾರಣವಾಗಿ ಹೇಳಲ್ಪಟ್ಟ ಮೂಲ ಪ್ರಕೃತಿಯೂ, [ಶಾರೀರಶ್ಚ] = ಶರೀರ ಸಂಬಂಧ ಯೋಗ್ಯನಾದ ಜೀವನೂ [ನ] = ಅಲ್ಲ, ಅಂದರೆ ಅಂತರ್ಯಾಮಿ ಯಲ್ಲ.

ಶಂಕರಭಾಷ್ಯದಲ್ಲಿ, "ನ ಚ ಸ್ಮಾರ್ತಮತದ್ಧರ್ಮಾಭಿಲಾಪಾತ್."—ಎಂದಿಷ್ಟು ಮಾತ್ರವೇ ಸೂತ್ರ ಕಾಣಿಸುವುದು.

**ವಿವರಣೆ**

ಎಲ್ಲವನ್ನೂ ತನ್ನ ನಿಯಮನದಿಂದ ನಡೆಯಿಸಬಲ್ಲ ಶಕ್ತಿಯೇ ಮುಂತಾದ ಗುಣಗಳು ಮೂಲ ಪ್ರಕೃತಿಗೆ ಕೂಡತಕ್ಕವಲ್ಲವಾದ್ದರಿಂದ ಮೂಲ ಪ್ರಕೃತಿ ಅಂತರ್ಯಾಮಿ ಹೇಗೆ ಆಗಲಾರದೋ ಹಾಗೆಯೇ ಆ ಗುಣಗಳು ಜೀವನಿಗೂ ಕೂಡ ಲಾರದವುಗಳಾದ್ದರಿಂದ, ಜೀವನೂ ಅಂತರ್ಯಾಮಿಯಾಗಲಾರನು.

### ಸೂತ್ರ ೩—**ಉಭಯೇಽಪಿ ಹಿ ಭೇದೇನೈನಮಧೀಯತೇ**

**ಸೂತ್ರಾರ್ಥ**

[ಉಭಯೇ ಅಪಿ] = ಕಾಣ್ವರೂ ಮಾಧ್ಯಂದಿನರೂ, [ಏನಂ] = ಈ ಅಂತ ರ್ಯಾಮಿಯನ್ನು [ಭೇದೇನ] = ಜೀವನಿಗಿಂತ ಬೇರೆಯನ್ನಾಗಿ [ಅಧೀಯತೇಹಿ] = ಹೇಳುವರಲ್ಲವೆ !.

ಶಂಕರಭಾಷ್ಯದಲ್ಲಿ, ''ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ''–ಎಂದು ಸೂತ್ರ.

**ವಿವರಣೆ**

''ಯ ಆತ್ಮನಿ ತಿಷ್ಠನ್ ಯೋವಿಜ್ಞಾನೇ ತಿಷ್ಠನ್,''–ಇತ್ಯಾದಿ ವಾಕ್ಯಗಳಿಂದ ಜೀವನನ್ನು ಅಧಿಕರಣವನ್ನಾಗಿಯೂ, ನಿಯಾಮ್ಯನನ್ನಾಗಿಯೂ, ಪರಮಪುರುಷನನ್ನು ಆಧೇಯವನ್ನಾಗಿಯೂ ನಿಯಂತೃವನ್ನಾಗಿಯೂ ಬಿಡಿಸಿ ಹೇಳುವುದರಿಂದ ಅಂತ ರ್ಯಾಮೀ ಜೀವನಲ್ಲ, ಪರಮಾತ್ಮಾ

ಇರುವ ಸ್ಥಳ ಆಧಾರ, ಅದರಲ್ಲಿರುವುದು ಆಧೇಯ–ಎನ್ನಲ್ಪಡುವುದು. ಇವೆರಡೂ ಮರದ ರೆಂಬೆಯೂ ಅದರಲ್ಲಿ ಕುಳಿತಿರುವ ಹಕ್ಕಿಯೂ ಹೇಗೋ ಹಾಗೆ, ಒಂದಾಗ ಲಾರದು–ಎಂದು ತಾತ್ಪರ್ಯ.

ಕಾಣ್ವ ಶಾಖೆಯಲ್ಲಿ ಪಠಿತವಾದ ''ಆತ್ಮನಿ''–ಎಂಬುದರ ಸ್ಥಾನದಲ್ಲಿ, ಮಾಧ್ಯನ್ದಿನ ಶಾಖೆಯಲ್ಲಿ 'ವಿಜ್ಞಾನೇ'–ಎಂದು ಪಠಿತವಾಗಿರುವುದರಿಂದ, ಇಲ್ಲಿಯ ಆತ್ಮ ವಿಜ್ಞಾನ ಶಬ್ದಗಳೆರಡಕ್ಕೂ ಜೀವಾತ್ಮನೆಂದೇ ಅರ್ಥವೇ ಹೊರತು ಅಂತಃಕರಣವೆಂದಲ್ಲ.

'ಸ ತ ಆತ್ಮಾನ್ತರ್ಯಾಮ್ಯಮೃತಃ''–ಎಂಬ ನಿಗಮದ ವಾಕ್ಯದಲ್ಲಿರುವ 'ತೇ'–ಎಂಬುದು ಶರೀರ ಭೂತಜೀವನನ್ನು ನಿರ್ದೇಶಿಸುತ್ತದೆ. ''ಅಂತರ್ಯಾಮ್ಯಮೃತಃ'' ಎಂಬುದರಿಂದ ಶರೀರಗತ ದೋಷ ಸಂಸ್ಪೃಷ್ಟನಲ್ಲದ ಅಂತರ್ಯಾಮಿಯು ಪ್ರತೀತ ನಾಗಿದ್ದಾನೆ. ಇದರಿಂದಲೂ ಇಲ್ಲಿಯ ಆತ್ಮ ವಿಜ್ಞಾನ ಶಬ್ದಗಳೆರಡೂ ಜೀವಪರವೆಂದು ತಿಳಿಯುತ್ತ.

## 5. ಅದೃಶ್ಯತ್ವಾದಿ ಗುಣಕಾಧಿಕರಣ

### ಸೂತ್ರ **ಅದೃಶ್ಯತ್ವಾದಿ ಗುಣಕೋಧರ್ಮೋಕ್ತೇಃ**

[ಅಕ್ಷರಪರವಿದ್ಯಾ]

**ಸಂಗತಿ-ಪ್ರತ್ಯುದಾಹೃತಿ**

ಪೂರ್ವಾಧಿಕರಣದಲ್ಲಿ ಪರಮಪುರುಷನು ಜೀವನಿಗೂ ನಿಯಂತೃವಾದ್ದರಿಂದ ''ಅದೃಷ್ಟೋ ದ್ರಷ್ಟಾ'',—ಎಂಬುದರಿಂದ 'ದ್ರಷ್ಟಾ'—ಎಂದು ಹೇಳಿದೆ—ಇಲ್ಲಿ ಅಂತಹ ದ್ರಷ್ಟೃತ್ವಾದಿಗಳನ್ನು ಹೇಳಿಲ್ಲವಾದ್ದರಿಂದ, ಪ್ರಕೃತಿಯೋ ಜೀವನೋ ಅದೃಶ್ಯತ್ವಾದಿ ಗುಣಕನಾಗಿರಬೇಕು—ಎಂಬ ಶಂಕೆಯಿಂದ ಸಂಗತಿ.

**ವಿಷಯವಾಕ್ಯ:**—

ಮುಂಡಕೋಪನಿಷತ್ತಿನಲ್ಲಿ—"ಅಥ ಪರಾಯಯಾ ತದಕ್ಷರಮಧಿಗಮ್ಯತೇಯತ್ತ ದದ್ರೇಶ್ಯಮಗ್ರಾಹ್ಯಮಗೋತ್ರ ಮವರ್ಣ ಮಚಕ್ಷುಶ್ಶೋತ್ರಂ ತದಪಾಣಿಪಾದಂ, ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯದ್ಭೂತಯೋನಿಂ ಪರಿಪಶ್ಯನ್ತಿ ಧೀರಾಃ."—ಮುಂದೆಯೂ"ಅಕ್ಷರಾತ್ಪರತಃ ಪರಃ—ಎಂಬುದು.

ಇಲ್ಲಿ 'ಅದೃಶ್ಯತ್ವಾದಿಗುಣಕ ಶಬ್ದದಿಂದ 'ಅಕ್ಷರ'—ವೂ. ಅದರ ಪುಲ್ಲಿಂಗ ನಿರ್ದೇಶದಿಂದ (ಅದೃಶ್ಯತ್ವಾದಿ ಗುಣಕಃ—ಎಂದು ಪುಲ್ಲಿಂಗವಿದೆ) "ಅಕ್ಷರಾತ್ ಪರತಃ ಪರ"—ನೂ ಎಂದು ಹೇಳಲ್ಪಟ್ಟಿದೆ. ಅದ್ರೇಶ್ಯಂ=ಇಂದ್ರಿಯದಿಂದ ದೃಶ್ಯವಲ್ಲದ್ದು- ಅಗ್ರಾಹ್ಯಂ= ಅನುಮಾನಾದಿಗಳಿಂದ ವೇದ್ಯವಲ್ಲದ್ದು. ಇಲ್ಲಿ ಅದೃಶ್ಯತ್ವಾದಿಗುಣಕವಾದ ಅಕ್ಷರ ಪ್ರಕೃತಿಯೆಂದೂ ಅಕ್ಷರಾತ್ ಪರತಃ ಪರವಾದವನು ಜೀವನೆಂದೂ ಶಂಕಿ ಸಲ್ಪಟ್ಟಿದೆ.

**ಸೂತ್ರಾರ್ಥ**

[ಧರ್ಮೋಕ್ತೇಃ]=ಸರ್ವಜ್ಞತ್ವಾದಿ ಗುಣಗಳನ್ನು ಹೇಳುವುದರಿಂದ [ಅದೃಶ್ಯತ್ವಾದಿ ಗುಣಕಃ] ಅದೃಶ್ಯತ್ವ (ಕಣ್ಣಿಗೆ ಕಾಣಿಸದಿರುವುದು) ಮುಂತಾದ ಗುಣಗಳುಳ್ಳವನು (ಪರಮಾತ್ಮಾ).

**ವಿವರಣೆ**

ವಿಷಯವಾಕ್ಯದಲ್ಲಿರುವ "ಅದ್ರೇಶ್ಯಃ"—ಇತ್ಯಾದಿಯಿಂದ ಪ್ರಕೃತಿಯೂ "ಅಕ್ಷರಾತ್ ಪರತಃ ಪರಃ",—ಎಂಬುದರಿಂದ ಜೀವನೂ ಹೇಳಲ್ಪಟ್ಟಿದೆಯೆ? ಅಥವಾ ಈ ಎರಡು ವಾಕ್ಯಗಳಿಂದಲೂ ಪರಮಾತ್ಮನೇ ಹೇಳಲ್ಪಟ್ಟಿದ್ದಾನೆಯೋ?—ಎಂದು ಸಂಶಯ.

"ಅದ್ರೇಶ್ಯಂ"—ಅಂದರೆ, ಇಂದ್ರಿಯಗಳಿಗೆ ಗೋಚರವಾಗುವವನಲ್ಲ, ಎಂದು ಅಚೇತನಗಳಿಗಿರುವ ಇಂದ್ರಿಯಗೋಚರತ್ವವನ್ನು ತಳ್ಳಿಹಾಕಿರುವುದರಿಂದ, ಅದಕ್ಕೆ ಸಜಾತೀಯವಾದ ಪ್ರಕೃತಿಯನ್ನೇ ಹೇಳಬೇಕು. "ಅಕ್ಷರಾತ್ ಪರತಃ ಪರಃ",— ಅಂದರೆ ಪರವಾದ ಅವ್ಯಾಕೃತಕ್ಕಿಂತಲೂ (ಮೂಲಪ್ರಕೃತಿಗಿಂತಲೂ) ಪರನಾದವನು —ಎಂಬುದರಿಂದ ಮೂಲಪ್ರಕೃತಿಗೆ ಪರನಾಗಿ ಅದಕ್ಕೆ ಅಧಿಷ್ಠಾತೃವಾದ ಜೀವನನ್ನೇ ಹೇಳಬೇಕು—ಎಂಬುದು ಪೂರ್ವಪಕ್ಷ.

ಮೇಲಣ ವಾಕ್ಯದಲ್ಲಿ "ಯಸ್ಸರ್ವಜ್ಞ ಸ್ಸರ್ವವಿತ್";—ಎಂದೂ, "ತಸ್ಮಾದೇತ ದ್ಬ್ರಹ್ಮನಾಮರೂಪ ಮನ್ನಂ ಚ ಜಾಯತೇ,"—ಎಂದೂ, ಕಾಣಲ್ಪಡದೆಂದು ಹೇಳಲ್ಪಟ್ಟ ವಸ್ತುವೂ "ಅಕ್ಷರಾತ್ ಪರತಃ ಪರಃ"—ಎಂಬ ವಸ್ತುವೂ ಸರ್ವವನ್ನೂ ಅರಿಯಬಲ್ಲದ್ದು ಸಕಲ ಜಗತ್ತಿಗೂ ಕಾರಣವಾದದ್ದು ಎಂದು ಹೇಳಿರುವುದರಿಂದ, ಆ ಗುಣಗಳು ಜೀವನಿಗೂ ಪ್ರಕೃತಿಗೂ ಕೂಡುವುದಲ್ಲವಾದ್ದರಿಂದ, ಆ ಎರಡು ವಾಕ್ಯಗಳಲ್ಲಿಯೂ ಆ ಗುಣಗಳುಳ್ಳ ಪರಮಾತ್ಮನೇ ಹೇಳಲ್ಪಟ್ಟಿದ್ದಾನೆ—ಎಂದು ಸಿದ್ಧಾಂತ.

ಸೂತ್ರ ೨—**ವಿಶೇಷಣ ಭೇದವ್ಯಪದೇಶಾಭ್ಯಾಂ ಚ ನೇತರೌ**

**ಸೂತ್ರಾರ್ಥ**

[ವಿಶೇಷಣ ಭೇದವ್ಯಪದೇಶಾಭ್ಯಾಂಚ] = "ಕಸ್ಮಿನ್ನು ಭಗವೋ ವಿಜ್ಞಾತೇ ಇದಂ ಸರ್ವಂ ವಿಜ್ಞಾತಂ ಭವತಿ"—(ಯಾವುದು ತಿಳಿದರೆ, ಇವೆಲ್ಲವೂ ತಿಳಿದಂತಾಗುತ್ತೆ, ಸ್ವಾಮಿ ?) ಎಂದು ವಿಶೇಷಿಸಿರುವುದರಿಂದಲೂ, "ಅಕ್ಷರಾತ್ಪರತಃ ಪರಃ"—ಎಂದು (ಪ್ರಕೃತಿಗಿಂತ ಪರನಾದ ಜೀವನಿಗಿಂತ ಪರನೆಂದು) ಭೇದವನ್ನು ಹೇಳಿರುವುದರಿಂದಲೂ, [ಇತರೌ] = ಜೀವ ಮತ್ತು ಪ್ರಕೃತಿ [ನ] = ಈ ವಾಕ್ಯದ ಅರ್ಥವಲ್ಲ.

**ವಿವರಣೆ**

ಕಾರಣವಾದ ಮೃತ್ಪಿಂಡವನ್ನರಿತರೆ, ಅದರಿಂದ ಮಾಡಲ್ಪಟ್ಟ ಕಲಶ ಶರಾವಾದಿಗಳೂ ಅರಿತಂತಾಗುವಂತೆ, ಆದೇಶವೆಂದು ಹೇಳಲ್ಪಟ್ಟ ವಸ್ತುವನ್ನು ಅರಿತರೆ ಸಮಸ್ತವನ್ನೂ ಅರಿತಂತಾಗುವುದೆಂದು ಹೇಳಿದೆ. ಹೀಗೆ ಕಲಶಾದಿಗಳಿಗೆ ಮೃತ್ಪಿಂಡ ಹೇಗೋ ಹಾಗೆ ಸಮಸ್ತ ಜಗತ್ತಿಗೂ ಆದೇಶವಾಗಿ ಹೇಳಲ್ಪಟ್ಟ ವಸ್ತು ಕಾರಣ ಎಂದು ವಿಶೇಷಿಸಿ ಹೇಳುವುದರಿಂದ, ಆ ವಾಕ್ಯ ಸಕಲ ಜಗತ್ಕಾರಣನಾದ ಪರಮಪುರುಷನನ್ನೇ ಹೇಳಬೇಕೇ ಹೊರತು, ಸಕಲ ಜಗತ್ಕಾರಣವಲ್ಲದ ಮೂಲಪ್ರಕೃತಿಯನ್ನು ಹೇಳದು. 'ಅಕ್ಷರ'—ಎಂದರೆ, ಮೂಲಪ್ರಕೃತಿ. ಪರತಃ—ಎಂದು ಅದಕ್ಕಿಂತ ಪರನಾದ ಜೀವ "ಪರಃ",—ಎಂದು ಆ ಜೀವನಿಗಿಂತ 'ಪರ'—ಎನ್ನುವುದರಿಂದ ಜೀವನಿಗಿಂತ ಪರನಾದ ಪರಮಪುರುಷನೇ ಆ ವಾಕ್ಯದಲ್ಲಿ ಹೇಳಲ್ಪಟ್ಟವನೆಂದು ಅಂಗೀಕರಿಸಬೇಕು.

ಸೂತ್ರ ೩—**ರೂಪೋಪನ್ಯಾಸಾ ಚ್ಚ**

**ಸೂತ್ರಾರ್ಥ**

["ಅಗ್ನಿರ್ಮೂರ್ಧಾ ಚಕ್ಷುಷೀ ಚನ್ದ್ರಸೂರ್ಯೌ.. — ಇತ್ಯಾದಿ ವಾಕ್ಯ ಆದೇಶನಾಗಿ ಹೇಳಲ್ಪಟ್ಟವನಿಗೆ ಸಕಲ ಜಗತ್ತನ್ನೂ) ಶರೀರವಾಗಿ ಹೇಳುವುದರಿಂದಲೂ, ಇವನು ಪರಮಾತ್ಮನೇ ಆಗಬೇಕು.

## 6. ವೈಶ್ವಾನರಾಧಿಕರಣ

ಸೂತ್ರ—**ವೈಶ್ವಾನರಃ ಸಾಧಾರಣ ಶಬ್ದ ವಿಶೇಷಾತ್**

[ವೈಶ್ವಾನರವಿದ್ಯೆ]

**ಸಂಗತಿ**

ಹಿಂದೆ, "ರೂಪೋಪನ್ಯಾಸಾ ಚ್ಚ",—ಎಂಬಲ್ಲಿ, ತ್ರೈಲೋಕ್ಯವೂ ಶರೀರವೆಂಬುದರಿಂದ ಪರಮಾತ್ಮತ್ವ ಸಾಧಿತವಾಗಲಾಗಿ, ಅಂತಹ ಶರೀರತ್ವ ಪರಮಾತ್ಮವ್ಯತಿರಿಕ್ತಕ್ಕೂ ಶ್ರುತವಾಗಿದೆಯೆಂಬ ಶಂಕೆಯಿಂದ, ಇಲ್ಲಿ ಅಪವಾದ ಸಂಗತಿ.

**ವಿಷಯವಾಕ್ಯ**

ಛಾನ್ದೋಗ್ಯದಲ್ಲಿ, "ಆತ್ಮಾನಮೇವೇಮಂ ವೈಶ್ವಾನರಂ ಸಂಪ್ರತ್ಯಧ್ಯೇಷಿ ತಮೇವನೋ ಬ್ರೂಹಿ"—ಎಂದು ಉಪಕ್ರಮಿಸಿ, "ಯಸ್ತ್ವೇತಮೇವಂ ಪ್ರಾದೇಶ ಮಾತ್ರಮಭಿವಿಮಾನ ಮಾತ್ಮಾನಂ ವೈಶ್ವಾನರ ಮುಪಾಸ್ತೇ"—. ಎಂಬುದು.

**ಸೂತ್ರಾರ್ಥ**

**[ಸಾಧಾರಣ ಶಬ್ದ ವಿಶೇಷಾತ್]** = ಅಗ್ನಿ, ಅಗ್ನಿಗೆ ಅಧಿಷ್ಠಾನ ದೇವತೆ, ಜಠರಾಗ್ನಿ, ಪರಮಾತ್ಮಾ—ಇವುಗಳಲ್ಲಿ ಸಾಧಾರಣವಾದ (ಇವುಗಳಿಗೆ ವಾಚಕವಾದ) ವೈಶ್ವಾನರ ಶಬ್ದವನ್ನು ಪರಮಾತ್ಮನಿಗೇ ಅಸಾಧಾರಣವಾದ ಗುಣಗಳಿಂದ ವಿಶೇಷಿಸಿರುವುದರಿಂದ, [ವೈಶ್ವಾನರಃ] = ವೈಶ್ವಾನರನೆಂದು ಹೇಳಲ್ಪಟ್ಟವನು (ಪರಮಾತ್ಮಾ).

**ವಿವರಣೆ**

"ಆತ್ಮಾನಮೇವೇಮಂ ವೈಶ್ವಾನರಂ ಸಂಪ್ರತ್ಯಧ್ಯೇಷಿ"—ಇತ್ಯಾದಿ. "ಅಭಿವಿಮಾನಮಾತ್ಮಾನಂವೈಶ್ವಾನರ ಮುಪಾಸ್ತೇ"—ಎಂಬ ವಿಷಯವಾಕ್ಯಗಳಲ್ಲಿಯ ವೈಶ್ವಾನರ ಶಬ್ದಕ್ಕೆ ಅರ್ಥ ಪರಮಾತ್ಮನೆಂದು ನಿಶ್ಚಯಿಸಬಹುದೆ? ಅಥವಾ ಕೂಡದೆ?—ಎಂದು ಸಂಶಯ.

'ವೈಶ್ವಾನರ'—ಎಂದು ಅಗ್ನಿಗೂ ಅಗ್ನಿಯ ಅಧಿಷ್ಠಾನ ದೇವತೆಗೂ, ಜಠರಾಗ್ನಿಗೂ, ಪರಮಪುರುಷನಿಗೂ ಹೆಸರು ವೇದಗಳಲ್ಲಿ ಕಂಡು ಬರುತ್ತೆ. ಈ ನಾಲ್ಕಕ್ಕೂ ಈ ಪ್ರಕರಣದಲ್ಲಿ ಲಕ್ಷಣವೂ ಕಾಣಿಸುವುದು. ಆದ್ದರಿಂದ ನಿಶ್ಚಯಿಸಲಾಗದೆಂದು ಪೂರ್ವಪಕ್ಷ.

"ಕೋ ನ ಆತ್ಮಾ ಕಿಂ ಬ್ರಹ್ಮ",—ಜೀವಾತ್ಮರಾದ ನಮಗೆ ಆತ್ಮಾ ಯಾರು? ಬ್ರಹ್ಮವೆಂಬುದು ಯಾವುದು? ಎಂದು ಆರಂಭಿಸಿ ಮೇಲಿನ ವಾಕ್ಯಗಳಲ್ಲಿ, "ಆತ್ಮಾನಂ ವೈಶ್ವಾನರಂ"—ಎಂದು ಬ್ರಹ್ಮಶಬ್ದವನ್ನು ಹೇಳಬೇಕಾದ ಕಡೆಯಲ್ಲಿ ವೈಶ್ವಾನರ ಶಬ್ದವನ್ನು ಹೇಳಿರುವುದರಿಂದಲೂ, ಆ ವೈಶ್ವಾನರ ಜೀವಾತ್ಮನಿಗೂ ಅಂತರಾತ್ಮನೆಂದು ಹೇಳುವುದರಿಂದಲೂ, ಬ್ರಹ್ಮಶಬ್ದದಿಂದ ಹೇಳಲ್ಪಟ್ಟ ಸಕಲಾಂತರ್ಯಾಮಿಯಾದ ಪರಮಾತ್ಮನೇ ವೈಶ್ವಾನರ ಶಬ್ದಕ್ಕೆ ಅರ್ಥವೆಂದು ನಿಶ್ಚಯಿಸಬಹುದೆಂಬುದು ಸಿದ್ಧಾಂತ.

ಸೂತ್ರ ೨—**ಸ್ಮರ್ಯಮಾಣಮನುಮಾನಂ ಸ್ಯಾದಿತಿ**

**ಸೂತ್ರಾರ್ಥ**

[ಇತಿ] = ಈ ವಿಧವಾಗಿ (ವೈಶ್ವಾನರನಿಗೆ) ಅವಯವವಾಗಿ [ಸ್ಮರ್ಯಮಾಣಂ] = ತೋರುವ (ಆಕಾಶಾದಿಗಳ ರೂಪ) [ಅನುಮಾನಂ] = ವೈಶ್ವಾನರ ಪರಮಾತ್ಮಾ ಎಂಬುದರಲ್ಲಿ) ಹೇತುವಾಗಿ, [ಸ್ಯಾತ್] = ಆಗುತ್ತದೆ.

**ವಿವರಣೆ**

"ದ್ಯೌರ್ಮೂರ್ಧಾ"—ಎಂದು ಆರಂಭಿಸಿ ಆಕಾಶದಿಂದ ಹಿಡಿದು ಭೂಮಿ ಪರ್ಯಂತವಾದ ಸಕಲ ಪದಾರ್ಥಗಳನ್ನೂ ಈ ವೈಶ್ವಾನರನಿಗೆ ಶಿರಸ್ಸು ಮುಂತಾದ ಅವಯವಗಳಾಗಿ ಹೇಳಿರುವುದರಿಂದ ಈ ವಿಧವಾದ ರೂಪ ಬೇರೆಯವರಿಗೆ ಕೂಡದಿರುವುದರಿಂದ ವೈಶ್ವಾನರನು ಪರಮಾತ್ಮಾ ಎಂಬುದು ಸಿದ್ಧ.

## ಸೂತ್ರ ೩—ಶಬ್ದಾದಿಭ್ಯೋऽನ್ತಃ ಪ್ರತಿಷ್ಠಾನಾ ಚ್ಚ ನೇತಿ ಚೇನ್ನ ತಥಾ ದೃಷ್ಟ್ಯುಪದೇಶಾತ್ ಅಸಂಭವಾತ್ ಪುರುಷಮಪಿ ಚೈನಮಧೀಯತೇ

**ಸೂತ್ರಾರ್ಥ**

[ಶಬ್ದಾದಿಭ್ಯಃ] = (ವೈಶ್ವಾನರ ಶಬ್ದದೊಂದಿಗೆ ಸಮಾನಾಧಿಕರಣವಾದ) ಅಗ್ನಿ ಶಬ್ದ ಮುಂತಾದುವುಗಳಿಂದಲೂ [ಅನ್ತಃ] = ಶರೀರದಲ್ಲಿ [ಪ್ರತಿಷ್ಠಾನಾತ್, ಚ] = ಇರುವುದಾಗಿ ಹೇಳಿರುವುದರಿಂದಲೂ, [ನ] = ವೈಶ್ವಾನರ ಪರಮಾತ್ಮನಲ್ಲ, [ಇತಿ ಚೇತ್] = ಎಂದದ್ದೇ ಆದರೆ, [ತಥಾ] = ಹಾಗೆ, [ದೃಷ್ಟ್ಯುಪದೇಶಾತ್] = ಉಪಾಸನವನ್ನು ಹೇಳಿರುವುದರಿಂದಲೂ, (ಜಠರಾಗ್ನಿಶರೀರಕನಾಗಿ 'ತದ್ವಿಶಿಷ್ಟನಾದ' ಪರ ಮಾತ್ಮನನ್ನು ಉಪಾಸಿಸಬೇಕೆನ್ನುವುದಕ್ಕೋಸ್ಕರ ಹಾಗೆ ಹೇಳಿರುವುದರಿಂದಲೂ) [ಅಸಂ ಭವಾತ್] = ಜಠರಾಗ್ನಿಗೆ ಆಕಾಶಾದಿಗಳು ಅವಯವಗಳೆಂಬುದು ಕೂಡದುದರಿಂದಲೂ, [ನ] = ವೈಶ್ವಾನರನು ಪರಮಾತ್ಮನಲ್ಲವೆನ್ನಕೂಡದು. [ಏನಂ] = ಈ ವೈಶ್ವಾನರನನ್ನೂ [ಪುರುಷಂ, ಅಪಿ ಚ] = ಪುರುಷನೆಂದೂ [ಅಧೀಯತೇ] = ಅಧ್ಯಯನ ಮಾಡುತ್ತಾರೆ (ಹೇಳುತ್ತಾರೆ).

**ವಿವರಣೆ**

"ಅಗ್ನಿರ್ವೈಶ್ವಾನರಃ",—ಎಂದು ವೈಶ್ವಾನರನನ್ನು ಅಗ್ನಿ ಎಂದು ಹೇಳುವು ದರಿಂದಲೂ, " ಹೃದಯಂ ಗಾರ್ಹಪತ್ಯಃ ಮನೋऽನ್ವಾಹಾರ್ಯಪಚನಃ ಆಸ್ಯ ಮಾಹವನೀಯಃ,"—ಎಂದು ಹೃದಯ ಮುಂತಾದ ಸ್ಥಾನಗಳಲ್ಲಿಯುಳ್ಳ ಈ ಅಗ್ನಿಗೆ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ—ಎಂಬ ತ್ರೇತಾಗ್ನಿ ಸ್ವರೂಪವನ್ನು ಹೇಳುವುದ ರಿಂದಲೂ, ಶರೀರದೊಳಗೆ ಇರುವುದೆಂದು ಹೇಳುವುದರಿಂದಲೂ ಈ ವಿಶೇಷಣಗಳುಳ್ಳ ವೈಶ್ವಾನರನು ಜಠರಾಗ್ನಿಯೇ ಎಂದು ನಿಶ್ಚಯಿಸಬೇಕಾದುದರಿಂದ ಇವನು ಪರಮಾತ್ಮಾ ಅಲ್ಲವೆಂದು ಪೂರ್ವಪಕ್ಷ.

ಪರಮಾತ್ಮನನ್ನು ಜಠರಾಗ್ನಿ ಶರೀರಕನನ್ನಾಗಿ ಉಪಾಸಿಸಬೇಕೆಂಬುದಕ್ಕಾಗಿ ಜಠ ರಾಗ್ನಿಯ ಲಕ್ಷಣಗಳ ಮೂಲಕ ವೈಶ್ವಾನರನಾದ ಪರಮಾತ್ಮನನ್ನು ಹೇಳಿದೆ. ಒಬ್ಬ ಅಧಿ ಕಾರಿಯ ಬಳಿ ಒಂದು ಕಾರ್ಯಕ್ಕಾಗಿ ಹೋಗುವಲ್ಲಿ ಅವನ ನಿಜರೂಪವಿರುವಾಗ, ಆ ಅಧಿ ಕಾರದಲ್ಲಿರುವಾಗಿನ ರೂಪಗಳನ್ನೂ ಹೇಳಿ, ಹೊಗಳಿ, ಅದಕ್ಕೆ ತಕ್ಕ ಫಲವನ್ನು ಪಡೆಯು ವಂತೆ ಇಲ್ಲಿಯೂ ಕಾಣತಕ್ಕದ್ದು. ಬರೀ ಜಠರಾಗ್ನಿಯನ್ನೇ ಹೇಳುವ ಪಕ್ಷದಲ್ಲಿ ಅದಕ್ಕೆ ಮೇಲಿನ ವಾಕ್ಯಗಳಲ್ಲಿ ಹೇಳಿರುವ ಆಕಾಶ ಮುಂತಾದುವು ಅವಯವಗಳಾಗಕೂಡದು. "ಅಗ್ನಿರ್ವೈಶ್ವಾನರೋ ಯತ್ಪುರುಷಃ,"—ಎಂದು ಈ ವೈಶ್ವಾನರನನ್ನು ಪುರುಷನೆಂದು ಹೇಳಿದೆ. 'ಪುರುಷನೆಂಬುದು ಪರಮಾತ್ಮನಿಗೇ ಹೆಸರಾಗಿ ಪುರುಷಸೂಕ್ತಾದಿಗಳಲ್ಲಿ ಪ್ರಸಿದ್ಧವಾಗಿದೆ. ಈ ಕಾರಣಗಳಿಂದ ವೈಶ್ವಾನರ ಪರಮಾತ್ಮನೆಂದೇ ನಿಶ್ಚಯಿಸಲ್ಪಡುವನು —ಎಂದು ಸಿದ್ಧಾನ್ತ.

### ಸೂತ್ರ ೪—ಅತ ಏವ ನ ದೇವತಾ ಭೂತಂ ಚ

**ಸೂತ್ರಾರ್ಥ**

ಸೂತ್ರಾರ್ಥ:—[ಅತ ಏವ] = ಈ ಕೆಳಗೆ ಹೇಳಿದ (ಪುರುಷನೆಂದೂ, ಆಕಾಶಾದಿಗಳನ್ನು ಅವಯುವಗಳಾಗಿ ಉಳ್ಳವನೆಂದೂ ಹೇಳಿದ್ದು. ಬ್ರಹ್ಮಶಬ್ದವನ್ನು ಹೇಳುವ ಕಡೆಯಲ್ಲಿ ವೈಶ್ವಾನರ ಪದ ಹೇಳಿದ್ದು) ಹೇತುಗಳಿಂದಲೇ, [ದೇವತಾ] = ಅಗ್ನಿ ದೇವತೆಯೂ, [ಭೂತಂ, ಚ] = ಪಂಚಭೂತಗಳಲ್ಲಿ ಹೇಳಿದ ಅಗ್ನಿಯೂ, [ನ] = ವೈಶ್ವಾನರ ಪದಕ್ಕೆ ಅರ್ಥವಲ್ಲ.

### ಸೂತ್ರ ೫—ಸಾಕ್ಷಾದಪ್ಯವಿರೋಧಂ ಜೈಮಿನಿಃ

**ಸೂತ್ರಾರ್ಥ**

[ಸಾಕ್ಷಾತ್, ಅಪಿ] = ಸಾಕ್ಷಾತ್ತಾಗಿಯೂ [ಅವಿರೋಧಂ] = ಪರಮಾತ್ಮನನ್ನು ಹೇಳುವುದರಲ್ಲಿ ವಿರೋಧವಿಲ್ಲದಿರುವಿಕೆಯನ್ನು, [ಜೈಮಿನಿಃ] = ಜೈಮಿನಿಯೆಂಬ ಆಚಾರ್ಯರು (ಹೇಳುತ್ತಾರೆ).

**ವಿವರಣೆ**

ಶ್ರೀ ವ್ಯಾಸರು ಅಗ್ನಿಪದಕ್ಕೆ ಅಗ್ನಿಯನ್ನು ಶರೀರವಾಗಿಯುಳ್ಳ ಪರಮಾತ್ಮನೆಂದು ಶರೀರದ್ವಾರಾ ಪರಮಾತ್ಮತ್ವವನ್ನು ಅರ್ಥವನ್ನಾಗಿ ಹೇಳಿದರು. ಹಾಗೆ ಹೇಳುವುದಲ್ಲದೆ ಸಾಕ್ಷಾತ್ತಾಗಿಯೇ (ನೇರವಾಗಿಯೇ) ಪರಮಾತ್ಮತ್ವವನ್ನು ಅರ್ಥವನ್ನಾಗಿ ಹೇಳಬಹುದು. ಹೇಗೆಂದರೆ:—ವೈಶ್ವಾನರ ಪದಕ್ಕೆ (ವಿಶ್ವೇಷಾಂ, ನರಾಣಾಂ ನೇತಾ) ಸಕಲ ಮನುಷ್ಯರನ್ನೂ ನಿಯಮಿಸುವವನು ಎಂಬ ಅವಯವಾರ್ಥದಿಂದ ಪರಮಾತ್ಮನೇ ಅರ್ಥವೆಂದು ಸ್ವೀಕರಿಸುವಂತೆ 'ಅಗ್ನಿ'—ಎಂಬ ಶಬ್ದಕ್ಕೂ ಮೇಲು ಲೋಕವನ್ನು (ಅಗ್ರಂ + ನಯತಿ + ಇತಿ) ಹೊಂದಿಸುವವನು ಅಥವಾ ಮೇಲು ಲೋಕಕ್ಕೆ ಒಯ್ಯುವವನು ಎಂಬ ಅವಯವಾರ್ಥದಿಂದ ಪರಮಾತ್ಮನನ್ನು ಅರ್ಥವನ್ನಾಗಿ ಹೇಳಬಹುದೆಂಬುದು ಜೈಮಿನಿ ಮತ.

### ಸೂತ್ರ ೬—ಅಭಿವ್ಯಕ್ತೇ ರಿತ್ಯಾಶ್ಮರಥ್ಯಃ

**ಸೂತ್ರಾರ್ಥ**

[ಅಭಿವ್ಯಕ್ತೇಃ] = (ಉಪಾಸಕನಿಗೆ ಮನಸ್ಸಿನಲ್ಲಿ) ವಿಷಯವಾಗುವುದಕ್ಕಾಗಿ (ಪರಮಪುರುಷನನ್ನು ಆಕಾಶಾದಿ ಪ್ರದೇಶದ ಅಳವುಳ್ಳವನನ್ನಾಗಿ ಅಳವುಪಡಿಸಿ ಹೇಳಿದೆ)—ಎಂದು [ಆಶ್ಮರಥ್ಯಃ] = ಆಶ್ಮರಥ್ಯರೆಂಬ ಆಚಾರ್ಯರು ಹೇಳುತ್ತಾರೆ.

**ವಿವರಣೆ**

"ಅಭಿವಿಮಾನಂ"—ಅಭಿ = ಎಲ್ಲವನ್ನೂ ವ್ಯಾಪಿಸಿ, ವಿಮಾನಂ = (ಅಭಿತೋ) ವಿಗತಂ + ಮಾನಂ (ಪ್ರಮಾಣಂ) — ಅಂದರೆ ಅಳವಿಲ್ಲದವನು — ಎಂದು ಹೇಳಲ್ಪಟ್ಟ ಪರಮಪುರುಷನನ್ನು "ಯಸ್ತ್ವೇತ ಮೇವಂ ಪ್ರಾದೇಶಮಾತ್ರಂ:"—ಎಂದು ಅಳವುಪಡಿಸಿ ಹೇಳುವುದು ಹೇಗೆ ಕೂಡುವುದು?—ಎಂದಲ್ಲಿ ಪರಮಾತ್ಮನು ಅಳವಿಲ್ಲ

ದವನಾದರೂ ಆ ಸ್ವರೂಪ ಉಪಾಸಕನ ಬುದ್ಧಿಗೆ ವಿಷಯವಾಗುವುದಕ್ಕಾಗಿ ಹೀಗೆ ಅಳತೆಯಿಟ್ಟು ಹೇಳಿದೆಯೆಂದು ಭಾವ.

ಸೂತ್ರ ೭—**ಅನುಸ್ಮೃತೇರ್ಬಾದರಿಃ**

**ಸೂತ್ರಾರ್ಥ**

[ಅನುಸ್ಮೃತೇಃ] = ಉಪಾಸನೆ ಮಾಡುವುದಕ್ಕಾಗಿ (ಆಕಾಶಾದಿಗಳನ್ನು ಅವಯವ ಗಳನ್ನಾಗಿ ಹೇಳಿದೆಯೆಂದು) [ಬಾದರಿಃ] = ಬಾದರಿಯೆಂಬ ಆಚಾರ್ಯರು ಹೇಳಿದರು.

**ವಿವರಣೆ**

ಆಕಾಶಾದಿ ಪೃಥ್ವೀವರಿಗಿನ ಪದಾರ್ಥಗಳನ್ನು ಪರಮಾತ್ಮನಿಗೆ ಅವಯವ ವಾಗಿ ಹೇಳುವುದೇಕೆ? — ಎಂದಲ್ಲಿ ಮೋಕ್ಷಕ್ಕೋಸ್ಕರ ಹೀಗೆ ಉಪಾಸಿಸ ಬೇಕೆಂಬುದಕ್ಕಾಗಿ ಆ ಪದಾರ್ಥಗಳನ್ನು ಪರಮಾತ್ಮನಿಗೆ ಶಿರಸ್ಸಿನಿಂದ ಹಿಡಿದು ಪಾದದ ವರೆಗಿನ ದೇಹಾವಯವಗಳನ್ನಾಗಿ ಹೇಳಿದೆಯೆಂದು ತಾತ್ಪರ್ಯ.

ಸೂತ್ರ ೮—**ಸಂಪತ್ತೇ ರಿತಿ ಜೈಮಿನಿಸ್ತಥಾ ಹಿ ದರ್ಶಯತಿ**

**ಸೂತ್ರಾರ್ಥ**

[ಸಂಪತ್ತೇಃ] = ಪ್ರಾಣಾಹುತಿಗೆ ಅಗ್ನಿಹೋತ್ರತ್ವ ಸಿದ್ಧಿಸುವುದಕ್ಕಾಗಿ (ಉಪಾಸಕನ ಹೃದಯ ಮುಂತಾದ ಅವಯವಗಳನ್ನು ಗಾರ್ಹಪತ್ಯ ಮುಂತಾದ ಅಗ್ನಿಸ್ವರೂಪಗಳನ್ನಾಗಿ ಕಲ್ಪಿಸಿದೆ) [ಇತಿ] = ಎಂದು [ಜೈಮಿನಿಃ] = ಜೈಮಿನಿಯೆಂಬ ಆಚಾರ್ಯರು ಹೇಳಿದರು. [ತಥಾಹಿ] = ಅದು ಹಾಗೆಯೇ ಅಷ್ಟೆ! ಎಂದು [ದರ್ಶಯತಿ. = (ಶ್ರುತಿ) ತೋರಿಸುತ್ತದೆ.

**ವಿವರಣೆ**

"ಉರೋವೇದಿಲೋಮಾನಿ ಬರ್ಹಿಃ"—ಎಂದು ಉಪಾಸಕನ ಎದೆ ಮೊದಲಾದ ಅವಯವಗಳನ್ನು ವೇದಿ ಮುಂತಾದ ಅಗ್ನಿಹೋತ್ರೋಪಕರಣಗಳನ್ನಾಗಿ ಹೇಳುವುದಕ್ಕೆ ಪ್ರಯೋಜನವೇನು?—ಎಂದಲ್ಲಿ ವೈಶ್ವಾನರ ವಿದ್ಯೆಗೆ ಉಪಾಸಕನು ತನ್ನ ಶರೀರಾವಯವಗಳನ್ನು ಅಗ್ನಿಹೋತ್ರೋಪಕರಣಗಳನ್ನಾಗಿ ನೆನೆಸಿಕೊಂಡು ಅದರಲ್ಲಿ ಪ್ರಾಣಾಹುತಿ ಹೋಮಮಾಡುವಂತೆ ನೆನೆಸಿಕೊಳ್ಳುವುದು ಅಂಗವಾದ್ದರಿಂದ ಆ ಅಂಗ ವನ್ನು ವಿವರಿಸಿ "ಅಥ ಯ ಏವಂ ವಿದ್ವಾನ್. ಅಗ್ನಿಹೋತ್ರಂಜುಹೋತಿ"—ಎಂದು ಈ ಶ್ರುತಿಯೂ ಉಪಾಸಕನು ತಾನು ಮಾಡುವ ಪ್ರಾಣಾಹುತಿಯನ್ನು ಅಗ್ನಿಹೋತ್ರ ವನ್ನಾಗಿ ನೆನೆಯಬೇಕೆಂದು ಹೇಳುತ್ತೆ. ಇಲ್ಲಿ, ಆಯಾ ಆಚಾರ್ಯರುಗಳು ಹೇಳಿದರೆನ್ನು ವುದು ಈ ಅರ್ಥ ಪ್ರಮಾಣತಮವೆನ್ನುವುದಕ್ಕಾಗಿ.

ಸೂತ್ರ ೯—**ಆಮನನ್ತಿ ಚೈನಮಸ್ಮಿನ್**

**ಸೂತ್ರಾರ್ಥ**

[ಏನಂ] = ಈ ವೈಶ್ವಾನರನನ್ನು [ಅಸ್ಮಿನ್] = ಈ ಉಪಾಸಕನ ಶರೀರದಲ್ಲಿ [ಆಮನನ್ತಿ] = (ಪ್ರಾಣಾಹುತಿಯ ವೇಳೆಯಲ್ಲಿ) ಅನುಸಂಧಾನಮಾಡುವಂತೆ ಹೇಳುತ್ತಾರೆ.

**ವಿವರಣೆ**

"ತಸ್ಯ ಹವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಃ" —ಇತ್ಯಾದಿ ವಾಕ್ಯಗಳು ವೈಶ್ವಾನರೋಪಾಸಕನು ತನ್ನ ಶಿರಸ್ಸು ಮುಂತಾಗಿ ಪಾದ ಪರ್ಯನ್ತವಾದ ಅವಯವಗಳನ್ನು ವೈಶ್ವಾನರನಿಗೆ ಅವಯವಗಳಾಗಿ ಹೇಳಲ್ಪಟ್ಟ ಆಕಾಶ —ಭೂಮಿ ಪರ್ಯಂತಗಳನ್ನಾಗಿ ಅನುಸಂಧಾನ ಮಾಡಿಕೊಂಡು ಪ್ರಾಣಾಹುತಿಯೆಂಬ ಅಗ್ನಿಹೋತ್ರದಿಂದ ವೈಶ್ವಾನರನನ್ನು ಆರಾಧಿಸಬೇಕೆಂದು ಹೇಳಿದೆ. ಆದ್ದರಿಂದ ವೈಶ್ವಾನರನು ಪರಮಾತ್ಮನೆಂಬುದು ಸಿದ್ಧ. ಇಲ್ಲಿ ಕೆಲವರ ಚೋದ್ಯವೇನೆಂದರೆ, ಬ್ರಹ್ಮೋಪಾಸನದಿಂದ ಮೋಕ್ಷಪ್ರಾಪ್ತಿ. "ಗರುಡಮಾತ್ಮಾನಂ ವಿಜಾನೀಯಾತ್" ಎಂಬಂತೆ ಒಂದು ವಸ್ತುವಿನಲ್ಲಿ ವಸ್ತ್ವಂತರವನ್ನು ಆರೋಪಮಾಡಿ ಉಪಾಸನ ಮಾಡುವುದರಿಂದ ಮಾತ್ರವೇ ಮೋಕ್ಷ ಸಿದ್ಧಿಸದು. ಹೀಗಿರುವಲ್ಲಿ "ನಾಮ ಬ್ರಹ್ಮೇತ್ಯುಪಾಸೀತ"—ಇತ್ಯಾದಿಯಂತೆ ಬ್ರಹ್ಮದೃಷ್ಟಿಯಿಂದ ಕೂಡಿದ ಆತ್ಮಾನ್ತರ ಧ್ಯಾನದಿಂದ ಮೋಕ್ಷಪ್ರಾಪ್ತವಾಗುವುದು ಹೇಗೆ?— ಇಲ್ಲಿ ವಿಚಾರ ಮಾಡಲ್ಪಟ್ಟವನು ವೈಶ್ವಾನರ—ಪರಮಾತ್ಮನಲ್ಲ. ಫಲವೂ ಅನ್ನಪ್ರಾಪ್ತಿಯೇ ಮುಂತಾದ್ದು. ಆದ್ದರಿಂದ ಇಲ್ಲಿ ಉಪದಿಷ್ಟವಾದ ಉಪಾಸನ ಫಲವೂ ಮೋಕ್ಷಕ್ಕೆ ವಿರುದ್ಧವೇ ಆದದ್ದು ಎಂಬುದು ಚೋದ್ಯ. ಇದಕ್ಕೆ ಸಮಾಧಾನ;— ಈ ವೈಶ್ವಾನರ ವಿದ್ಯೆಯಲ್ಲಿ ಬ್ರಹ್ಮದೃಷ್ಟಿಘಟಿತವಾದ ಬೇರೆ ಯಾವುದನ್ನೂ ಪ್ರಾಧಾನ್ಯದಿಂದ ಧ್ಯೇಯವನ್ನಾಗಿ ಹೇಳಿಲ್ಲ. ದ್ಯುಮೂರ್ಧಾದಿ ದೃಷ್ಟ್ಯನ್ವಿತ ಘಟಿತವಾದದ್ದೂ ಬ್ರಹ್ಮವೇ. ಅದನ್ನೇ ಧ್ಯೇಯವನ್ನಾಗಿ ಹೇಳಿದೆ. ಆದ್ದರಿಂದ ಬ್ರಹ್ಮಕ್ಕೇ ಪ್ರಾಧಾನ್ಯ. ಉಪಕ್ರಮದಲ್ಲಿಯ ಬ್ರಹ್ಮ—ಆತ್ಮ ಶಬ್ದಗಳಿಗೆ ಇಲ್ಲಿ ಬಾಧೆಯಿಲ್ಲ ಮತ್ತೊಂದರಲ್ಲಿ ಮತ್ತೊಂದು ದೃಷ್ಟಿ ಘಟನೆ ಎಂಬುದು ಇಲ್ಲಿಲ್ಲ. ಅಲ್ಲದೆ, ಫಲವೂ ಸರ್ವಪಾಪವಿಮೋಕ್ಷವೇ. ಅದು ಬ್ರಹ್ಮ ವಿದ್ಯೆಗೆ ಯುಕ್ತವಾದದ್ದು. ಹಾಗಾದರೆ. ಸರ್ವತ್ರ ಇರುವ ಅನ್ನಪ್ರಾಪ್ತಿ ಹೇಗೆ ಫಲವಾಗಿ ಇಲ್ಲಿ ಉಪದಿಷ್ಟವಾಗಿದೆ?—ಎಂದಲ್ಲಿ, ಅದ್ಯತೇ ಇತ್ಯನ್ನಂ— ಎಂಬ ವ್ಯುತ್ಪತ್ತಿಯಿಂದಲೂ "ಅಹಮನ್ನಮಹ ಮನ್ನಾದಃ",—ಎಂಬ ಶ್ರುತಿಯಿಂದಲೂ ಪರಬ್ರಹ್ಮವೇ ಇಲ್ಲಿ ಅನ್ನ ಶಬ್ದದಿಂದ ಹೇಳಲ್ಪಟ್ಟಿದೆ. ಆದ್ದರಿಂದ ಬ್ರಹ್ಮವಿದ್ಯೆಯಿಂದ ಬ್ರಹ್ಮಪ್ರಾಪ್ತಿ—ಎಂದಲ್ಲಿ ವಿರೋಧವೇನು? ಎಂಬುದೇ ಇದಕ್ಕೆ ಸಮಾಧಾನ. ಇಲ್ಲಿಗೆ ದ್ವಿತೀಯಪಾದ ಸಮಾಪ್ತ.

[ಪ್ರಥಮಾಧ್ಯಾಯದ ತೃತೀಯಪಾದ]

**1 ಅಧಿಕರಣ—ದ್ಯುಭ್ವಾದ್ಯಧಿಕರಣ**

ಸೂತ್ರ—**ದ್ಯುಭ್ವಾದ್ಯಾಯತನಂ ಸ್ವಶಬ್ದಾತ್**

**ಪಾದಸಂಗತಿ**

ಕಳೆದ ಎರಡು ಪಾದಗಳಲ್ಲಿ ಅಸ್ಪಷ್ಟತರ—ಅಸ್ಪಷ್ಟ ಜೀವಾದಿ ಲಿಂಗಕ ವಾಕ್ಯಗಳು ವಿಚಾರ ಮಾಡಲ್ಪಟ್ಟವು. ಮುಂದಿನ ಎರಡು ಪಾದಗಳಿಂದ ಸ್ಪಷ್ಟ—ಸ್ಪಷ್ಟತರ ಜೀವಾದಿ ಲಿಂಗಕ ವಾಕ್ಯಗಳು ಕ್ರಮವಾಗಿ ವಿಚಾರಮಾಡಲ್ಪಡುತ್ತವೆ. " ದ್ಯಾವ್ಯಾದ್ಯಾಯತನಂ"— ಎಂದು ಮಾತ್ರವೆನ್ನದೆ, ಊರ್ಧ್ವ—ಮತ್ತು ಅಧರಗಳೆಂಬ ಕೋಟಿ ದ್ವಯಾಂ

ತರ್ಗತ ಲೋಕಗಳಿಗೂ ಪ್ರದರ್ಶನಾರ್ಥವಾಗಿ ದ್ಯು, ಭೂ, ಶಬ್ದ ಪ್ರಯೋಗದಿಂದ "ದ್ಯುಭ್ವಾದ್ಯಾಯತನಂ"—ಎಂದು ಸೂತ್ರಿಸಿದ್ದಾರೆ.

**ಅಧಿಕರಣ ಸಂಗತಿ**

ಹಿಂದಿನ ಪಾದದ ಕೊನೆಯಲ್ಲಿ ದ್ಯು ಪೃಥಿವ್ಯಾದಿ ಸಂಬಂಧವುಳ್ಳವನಿಗೆ ಪರಮಾತ್ಮತ್ವ ಪ್ರಸಾಧಿತವಾಯಿತು. ಅದು ಜೀವನಲ್ಲಿಯೇ ಇದೆ ಎಂಬ ಅಪ ವಾದದಿಂದ ಅದನ್ನೇ ಮತ್ತೆ ಆಕ್ಷೇಪಿಸಿ ಸಮಾಧಾನಮಾಡಲಾಗಿದೆಯಾದ್ದರಿಂದ—ಇದು ಆಕ್ಷೇಪ ಸಂಗತಿ. ಅಲ್ಲದೆ, ಅದೃಶ್ಯತ್ವಾಧಿಕರಣದಲ್ಲಿಯೇ ತ್ರೈಲೋಕ್ಯ ಶರೀರವುಳ್ಳೋ ಣದರಿಂದ ಪರಮಾತ್ಮತ್ವವನ್ನು ಸಾಧಿಸಲಾಯಿತು — ಆ ಪ್ರಸಂಗದಿಂದ ವೈಶ್ವಾನರಾಧಿ ಕರಣದಲ್ಲಿಯೂ ಜೀವತ್ವವನ್ನು ಆಶಂಕೆ ಮಾಡಿ ನಿರಾಕರಿಸಲಾಯಿತು. ಇಲ್ಲಿಯಾದರೋ— ಪ್ರಾಸಂಗಿಕದ ಪರಿಸಮಾಪ್ತಿಯಲ್ಲಿ ಪೂರ್ವಾಧಿಕರಣೋಕ್ತವಾದ ಅರ್ಥಕ್ಕೆ ಶೇಷವಾಗಿ ರೋಣದರಿಂದ, ಮತ್ತೆ ದ್ಯುಭ್ವಾದಿವಾಕ್ಯವೇ ಸಮಾಧಾನಗೊಳಿಸಲ್ಪಡುತ್ತದೆ. ಈ ೩ನೇ ಪಾದದಲ್ಲಿ ಅದು ಇಡಲ್ಪಟ್ಟಿರುವುದು ನಿರಸನಯೋಗ್ಯವಾದ ಜೀವಾದಿಲಿಂಗ ಗಳು ಸ್ಪಷ್ಟವಾದುವುಗಳಾದ್ದರಿಂದ.

ಈ ಪಾದದಲ್ಲಿ ಸಾಕ್ಷಾತ್ ಸಂಗತವಾಗಿರುವುವು ಏಳೇ ಅಧಿಕರಣಗಳು. ನಡುವೆ ದೇವತಾದ್ಯಧಿಕರಣವೇ ಮುಂತಾದ ಮೂರು ಅಧಿಕರಣಗಳು ಅರ್ಥಾಂತರವುಳ್ಳವು ಗಳಾದ್ದರಿಂದ ಇಲ್ಲಿ ಸಂಗತಗಳಲ್ಲ—ಎಂದಲ್ಲಿ—"ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರ ತ್ವಾತ್",—ಎಂಬ ಅಧಿಕಾರ ಪ್ರಸಂಗದಿಂದ ಅದನ್ನು ಇಲ್ಲಿ ಹೇಳುವುದು ಸಮುಚಿತ ವೆನ್ನಬೇಕು. ಅಲ್ಲದೆ, ದೇವತಾಧಿಕರಣಾದಿಗಳನ್ನು ಹೇಳುವುದರಲ್ಲಿ, ಅರ್ಥಲೋಕಾಯು ತಿಕರಾದ ನಿರೀಶ್ವರ ಮೀಮಾಂಸಕರ ನಿರಸನವು ಪರಮಪುರುಷ ಚತುರ್ಮುಖಾದಿ ಪಿಪೀಲಿಕಾಂತವಾದ ಸಕಲ ಜಗತ್ಕಾರಣತ್ವ ರೂಪ ಪ್ರಸ್ತುತಾರ್ಥ ಪ್ರಸಾಧನಕ್ಕೆ ಉಪ ಯುಕ್ತವೇ ಆದದ್ದು ಬ್ರಹ್ಮಾದಿ ದೇವತೆಗಳೂ ಭಗವದುಪಾಸಕರೆನ್ನುವುದರಿಂದ ಅವ ರಿಂದ ಉಪಾಸ್ಯನಾದ ಭಗವಂತನಿಗೆ ಉತ್ಕರ್ಷವೂ ಸಿದ್ಧಿಸುವುದು. ದೇವತೆಗಳ ಬಗ್ಗೆ ಕಾರಣೈಕ್ಯಭ್ರಮವೂ ಗಳಿತವಾಗುವುದು—ಎಂದು ಭಾವ, ಹೇಗೆಂದರೆ;—ರಾಜನಿಗೂ ಭೃತ್ಯರಿಗೂ ಐಕ್ಯ ಹೇಗೆ ಕೂಡಲಾರದೋ ಹಾಗೆಯೇ ಕಾರಣನಾದ ಪರಮಾತ್ಮನಿಗೂ ಅವನ ಕಾರ್ಯರಾದ ದೇವತೆಗಳೊಡನೆ ಐಕ್ಯ ಹೇಗೆ ಕೂಡೀತು?

**ವಿಷಯವಾಕ್ಯ**

"ಆಥರ್ವಣಿಕರು ಹೇಳುತ್ತಾರೆ,—"ಯಸ್ಮಿನ್ ದ್ಯೌಃ ಪೃದಿವೀ ಚಾನ್ತರಿಕ್ಷಮೋತಂ ಮನಸ್ಸಹ ಪ್ರಾಣೈಶ್ಚ ಸರ್ವೈಃ ತಮೇವೈಕಂ ಜಾನಥಾತ್ಮಾನಂ ಅನ್ಯಾವಾಚೋ ವಿಮುಂಚಥ ಅಮೃತಸ್ಯೈಷ ಸೇತುಃ"—ಎಂದು.

**ಸೂತ್ರಾರ್ಥ**

[ಸ್ವಶಬ್ದಾತ್] = (ಪರಮಾತ್ಮನಾದ) ತನಗೆ ಅಸಾಧಾರಣವಾದ ಶಬ್ದಗಳಿಂದ ಹೇಳುವುದರಿಂದ, [ದ್ಯುಭ್ವಾದ್ಯಾಯತನಂ] = ಸ್ವರ್ಗಲೋಕ ಭೂಲೋಕ ಮುಂತಾ ದವಕ್ಕೆ ಆಧಾರವೆಂದು ಹೇಳಲ್ಪಟ್ಟವನು (ಪರಮಾತ್ಮಾ).

**ವಿವರಣೆ**

ಈ ಅಧಿಕರಣದ ಮೇಲೆ ಹೇಳಿದ ವಿಷಯವಾಕ್ಯದಲ್ಲಿ ಭೂಮ್ಯಂತರಿಕ್ಷ ದ್ಯುಲೋಕಗಳಿಗೆ ಆಧಾರವಾಗಿ ಹೇಳಲ್ಪಟ್ಟವನು ಜೀವನೋ? ಪರಮಾತ್ಮನೋ?— ಎಂದು ಸಂಶಯ. ಇಲ್ಲಿ ಇವನನ್ನು ಮನಸ್ಸು, ಪ್ರಾಣ ಮುಂತಾದುವುಗಳಿಗೆ ಆಧಾರವಾಗಿ ಹೇಳಿರುವುದರಿಂದ, "ಅಪ್ರಾಣೋಹ್ಯಮನಾಃ"—ಎಂದು ಪರಮಾತ್ಮನಿಗೆ ಮನಸ್ಸು ಪ್ರಾಣ ಇಲ್ಲವೆಂದಿರುವುದರಿಂದ ಇವನು ಜೀವನೆಂದು ಪೂರ್ವಪಕ್ಷ.

"ಅಮೃತಸ್ಯೈಷ ಸೇತುಃ",—ಎಂದು ಸೇತುವಾದದ್ದು ಈ ಕಡೆಯಿಂದ ಅತ್ತ ಕಡೆಯ ಕರೆಯನ್ನು ಹೊಂದುವುದಕ್ಕೆ ಸಾಧನವಾಗಿರುವ ಹಾಗೆ ಇವನು ಸಂಸಾರದಿಂದ ಮೋಕ್ಷ ಹೊಂದುವುದಕ್ಕೆ ಸಾಧನವಾಗಿದ್ದಾನೆಂದು ಹೇಳಿರುವುದರಿಂದಲೂ, ಆತ್ಮಾ ಎಂದು ತಾನು ನಿಯನ್ತೃವಾಗಿ ಎಲ್ಲದರಲ್ಲಿಯೂ ವ್ಯಾಪಿಸಿದ್ದಾನೆಂದು ಹೇಳಿರುವುದರಿಂದಲೂ, ಈ ಗುಣಗಳು ಜೀವನಿಗೆ ಇಲ್ಲದುದರಿಂದ, ಹೀಗೆ ಹೇಳಲ್ಪಟ್ಟವನು ಪರಮಾತ್ಮಾ. ಸಕಲ ಜಗತ್ತಿಗೂ ಆಧಾರವಾದವನು ಮನಸ್ಸು ಮುಂತಾದುವುಗಳಿಗೂ ಆಧಾರವಾಗಿರಲು ಕೊರತೆಯೇನು? ಇಲ್ಲಿ ಕರ್ಮಾಧೀನವಾದ ಆಧಾರವನ್ನು ಹೇಳಿಲ್ಲ. ಅಕರ್ಮವಶ್ಯನಾದ ಈಶ್ವರ ತನ್ನ ಸಂಕಲ್ಪದಿಂದ ಸಕಲವನ್ನೂ ಧರಿಸಿದ್ದಾನೆಂದು ಹೇಳಿದೆ.—ಎಂದು ಸಿದ್ಧಾನ್ತ.

ಸೂತ್ರ ೨—**ಮುಕ್ತೋಪಸೃಪ್ಯವ್ಯಪದೇಶಾಚ್ಚ**

**ಸೂತ್ರಾರ್ಥ**

ಇವನನ್ನು ಮುಕ್ತರಿಗೆ ಪ್ರಾಪ್ಯನನ್ನಾಗಿ ಹೇಳಿರುವುದರಿಂದಲೂ, (ಇವನು ಪರಮಾತ್ಮಾ).

**ವಿವರಣೆ**

"ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯ ಮುಪೈತಿ"—ಇವನನ್ನು ಉಪಾಸಿಸಿದವನು ಪುಣ್ಯಪಾಪಗಳನ್ನು ಒದರಿಬಿಟ್ಟು ಮುಕ್ತನಾಗಿ ಇವನೊಂದಿಗೆ ಸಾಮ್ಯವನ್ನು ಹೊಂದುತ್ತಾನೆಂದೂ, "ಪರಾತ್ಪರಂ ಪುರುಷಮುಪೈತಿ ದಿವ್ಯಂ"—ಸರ್ವೋತ್ಕೃಷ್ಟನಾದ ಈ ಪುರುಷನನ್ನು ಮುಕ್ತನು ಹೊಂದುತ್ತಾನೆಂದೂ ಹೇಳುವುದರಿಂದ ಇವನು ಪರಮಾತ್ಮಾ. ಪ್ರಕೃತಿಯು ಸಂಸಾರದಶೆಯಲ್ಲಿ ಹೊಂದತಕ್ಕದ್ದೇ ಹೊರತು ಮೋಕ್ಷದಶೆಯಲ್ಲಿ ಹೊಂದತಕ್ಕದ್ದಲ್ಲ. ಅದಕ್ಕೆ ಪುರುಷನೆಂಬ ಹೆಸರೂ ಇಲ್ಲ.

ಸೂತ್ರ ೩—**ನಾನುಮಾನಮತಚ್ಛಬ್ದಾತ್ಪ್ರಾಣಭೃಚ್ಚ**

**ಸೂತ್ರಾರ್ಥ**

[ಅತಚ್ಛಬ್ದಾತ್] = (ಇಲ್ಲಿ) ಮೂಲಪ್ರಕೃತಿಯನ್ನು ಹೇಳುವ ಶಬ್ದವಿಲ್ಲದುದರಿಂದ, [ಅನುಮಾನಂ] = ಮೂಲಪ್ರಕೃತಿ (ಹೇಗೆ) [ನ] = ಇಲ್ಲಿ ಹೇಳಲ್ಪಟ್ಟಿಲ್ಲವೋ, (ಹಾಗೆಯೇ ಜೀವಾತ್ಮವಾಚಕ ಶಬ್ದವಿಲ್ಲದುದರಿಂದ,) [ಪ್ರಾಣಭೃಚ್ಚ] = ಜೀವನೂ (ಇಲ್ಲಿ) ಹೇಳಲ್ಪಡನು.

**ವಿವರಣೆ**

ಮೂಲಪ್ರಕೃತಿಯು ಅಚೇತನವಾದುದರಿಂದ ಆತ್ಮಾ ಎಂಬ ಪದ ಅದನ್ನು ಹೇಳದಿದ್ದಾಗ್ಯೂ, ಚೇತನನಾದ ಜೀವನು ಆತ್ಮಾ ಎಂಬುದಕ್ಕೆ ಅರ್ಥವಾಗ ಬಹುದು. ಅವನು ಸರ್ವಜ್ಞನೂ ಆಗಬಹುದಾದ್ದರಿಂದ ಇಲ್ಲಿ ಅವನನ್ನು ಹೇಳಬಹು ದಲ್ಲ!—ಎಂದಲ್ಲಿ, ಅಲ್ಪ ಶಕ್ತಿಯುಳ್ಳ ಜೀವನೂ ಭೂಮಿ ಮೊದಲಾದುದಕ್ಕೆ ಆಧಾರವಾ ಗಲಾರನಾದ್ದರಿಂದ ಅವನೂ ಇಲ್ಲಿ ಆತ್ಮಾ ಎಂಬ ಪದಕ್ಕೆ ಅರ್ಥವಾಗಲಾರನು.

ಸೂತ್ರ ೪—**ಭೇದವ್ಯಪದೇಶಾಚ್ಚ**

**ಸೂತ್ರಾರ್ಥ**

(ಜೀವನಿಗಿಂತ ಇವನನ್ನು) ಭಿನ್ನವಾಗಿ ಹೇಳುವುದರಿಂದಲೂ (ಇವನು ಪರ ಮಾತ್ಮಾ).

**ವಿವರಣೆ**

"ಅನೀಶಯಾ ಶೋಚತಿ ಮುಹ್ಯಮಾನಃ ಜುಷ್ಟಂ ಯದಾಪಶ್ಯತ್ಯನ್ಯಮೀಶಂ" —ಎಂದು ಪ್ರಕೃತಿಗೆ ಪರವಶನಾಗಿ ಮೋಹಗೊಂಡಿರುವ ಜೀವನು ತನಗಿಂತ ಭಿನ್ನವಾಗಿ ಅಕರ್ಮವಶ್ಯನಾಗಿರುವ ಪರಮಾತ್ಮನನ್ನೂ ಅವನ ಮಾಹಾತ್ಮ್ಯವನ್ನೂ ಯಾವಾಗ ಅರಿಯುವನೋ ಆಗ ಶೋಕಮೋಹಗಳನ್ನು ಬಿಡುವನೆಂದು, ಇವನನ್ನು ಜೀವನಿಗಿಂತ ಭಿನ್ನವಾಗಿ ಹೇಳಿರುವುದರಿಂದ ಇವನು ಪರಮಾತ್ಮಾ.

ಸೂತ್ರ ೫—**ಪ್ರಕರಣಾತ್**

**ಸೂತ್ರಾರ್ಥ**

ಇದು ಪರಮಾತ್ಮನನ್ನು ಪ್ರತಿಪಾದಿಸುವ ಪ್ರಕರಣವಾದ್ದರಿಂದ. (ಇಲ್ಲಿ ಹೇಳಲ್ಪಟ್ಟವನು ಜೀವನಲ್ಲ)

ಸೂತ್ರ ೬—**ಸ್ಥಿತ್ಯದನಾಭ್ಯಾಂ ಚ**

**ಸೂತ್ರಾರ್ಥ**

ಒಬ್ಬನಿಗೆ ಉತ್ತಮವಾದ ಇರುವಿಕೆಯನ್ನೂ (ಮತ್ತೊಬ್ಬನಿಗೆ ಅಂಥ ಇರುವಿಕೆಯಿಲ್ಲದೆ) ಕರ್ಮಫಲ ಭೋಗವನ್ನೂ ಹೇಳುವುದರಿಂದಲೂ, (ಜೀವನಿಗಿಂತ ಪರಮಾತ್ಮಾ ಭಿನ್ನನೆಂದು) ತೋರುವುದರಿಂದ, ಇಲ್ಲಿ ಹೇಳಲ್ಪಟ್ಟವನು ಜೀವನಾಗ ಲಾರನು.

**ವಿವರಣೆ**

"ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋ ಅಭಿಚಾಕಶೀತಿ," —ಅಂದರೆ ಆ ಇಬ್ಬರಲ್ಲಿ ಒಬ್ಬನು ಕರ್ಮಫಲವನ್ನು ಭುಜಿಸುವನು, ಮತ್ತೊಬ್ಬನು ಅದಿಲ್ಲದ ವನಾಗಿ ಬೆಳಗುತ್ತಾನೆ—ಎಂದು ಜೀವನಿಗೂ ಪರಮಾತ್ಮನಿಗೂ ಭೇದವನ್ನು ಹೇಳುವುದರಿಂದ, ಇಲ್ಲಿ ಮೋಕ್ಷಹೇತುವಾಗಿ ಹೇಳಲ್ಪಟ್ಟವನು ಜೀವನಾಗನು.

"ಯಸ್ಮಿನ್ ದ್ಯೌಃ ಪೃಥಿವೀ ಚಾನ್ತರಿಕ್ಷಮೋತಂ..."—ಇತ್ಯಾದಿ ಶ್ರುತಿಯಿಂದ ಯಾವ ಆತ್ಮನಲ್ಲಿ ಮನಸ್ಸು ಇತರ ಇಂದ್ರಿಯಗಳೊಡನೆ ಕೂಡಿ ಓತ (ನೈರಂತರ್ಯದಿಂದ ಸಂಬದ್ಧ) ವಾಗಿದೆಯೋ, "ಅರಾ ಇವರಥನಾ ಭೌಸಂಹತಾ ಯತ್ರನಾಡ್ಯಃ ಸ ಏಷೋಽನ್ತಶ್ಚರತೇ ಬಹುಧಾ ಜಾಯಮಾನಃ"॥ —ಎಂಬ ಶ್ರುತಿಯಂತೆ ಯಾವ ಆತ್ಮನು ದೇವಾದಿ ರೂಪದಿಂದ ನಾನಾ ಪ್ರಕಾರವಾಗಿ ಹುಟ್ಟುತ್ತಾನೆಯೋ, ನಾಡಿಗಳಿಗೆ ಆಧಾರನಾಗಿಯೂ ಕಂಡುಬರುತ್ತಾನೆಯೋ, ಮತ್ತು ಸರ್ವ ದೇಹಗಳಲ್ಲಿಯೂ ಹೃದಯದೊಳಗೆ ಸಂಚರಿಸುತ್ತಾನೆಯೋ, ಅವನು ಪುಣ್ಯಾಪುಣ್ಯ ಕರ್ಮಗಳ ಫಲವನ್ನುಣ್ಣುವ ಮತ್ತು ಇಂದ್ರಿಯಗಳುಳ್ಳ ಜೀವನೇ ಆಗಲಿ ಎಂದು ಶಂಕಿಸಿದಲ್ಲಿ, ನಿಖಿಲ ಜಗತ್ತುಗಳಿಗೂ ಆಧಾರನಾಗಿ ನಿರುಪಾಧಿಕ ಆತ್ಮನಾದ್ದರಿಂದಲೂ, "ಅಮೃತಸ್ಯೈಷ ಸೇತುಃ"—ಎಂಬಂತೆ ಮೋಕ್ಷಪ್ರದನಾದ್ದರಿಂದಲೂ, ಮುಕ್ತಾತ್ಮರಿಗೆ ಪ್ರಾಪ್ಯನಾದ್ದರಿಂದಲೂ, ಉಣ್ಣದವನಾಗಿದ್ದುಕೊಂಡೇ ಪ್ರಕಾಶಿಸುವುದರಿಂದಲೂ, ಇದು ಪರಮಾತ್ಮ ಪ್ರಕರಣವೇ ಆದ್ದರಿಂದಲೂ, ಇವನು ಜೀವನಿಗಿಂತ ಅನ್ಯನಾದ ಪರಮಪುರುಷನೆಂಬುದು ಪೂರ್ವೋಕ್ತ ಶಂಕೆಗೆ ಪರಿಹಾರವೆಂದು ತಿಳಿಯತಕ್ಕದ್ದು. ಸರ್ವವ್ಯಾಪ್ತನಾದ ಭಗವಂತನಲ್ಲಿ ಇಂದ್ರಿಯಾದಿಗಳು ಓತವಾಗಿದ್ದಲ್ಲಿ ಅನಿಷ್ಟವೇನು? ಸರ್ವಾಧಾರನಾದವನು ಇಂದ್ರಿಯಗಳಿಗೂ ಆಧಾರವೇ ಆಗಿದ್ದಾನೆಯಷ್ಟೆ! ಅವನು ಸ್ವಂತ ಇಚ್ಛೆಯಿಂದ ಬಹುವಿಧವಾಗಿ ಹುಟ್ಟಲೂ ಬಹುದು. ನಾಡಿಗಳೆಲ್ಲವೂ ಹೃದಯದೊಳಗಿರುವ ಪರಮಪುರುಷ ಸಂಬಂಧವುಳ್ಳವಾದ್ದರಿಂದ ನಾಡಿಗಳಿಗೂ ಅವನು ಆಧಾರನೆಂದರ್ಥ. ಸರ್ವವ್ಯಾಪಿಯಾದವನಿಗೆ ಅಂತಶ್ಚರಣ (ಸಂಚಾರ) ವೆಂಬುದು ಹೇಗೆ?—ಎಂದರೆ, ಭಗವಂತನ ಅಂತರ್ಯಾಮಿತ್ವ—ಎಂಬುದು ಎರಡು ವಿಧ. ಒಂದು ವಿಗ್ರಹಪರಿಗ್ರಹದ ಮೂಲಕ—ಮತ್ತೊಂದು ಸರ್ವವ್ಯಾಪ್ತವಾದ ಸ್ವರೂಪದಿಂದಲೇ ವಿಗ್ರಹದಿಂದ ದೇಹದೊಳಗೆ ಸಂಚರಿಸುವುದೆಂಬುದು ಮುಖ್ಯಾರ್ಥದಲ್ಲಿ. ಸ್ವರೂಪದಿಂದ ಅಂತಶ್ಚರಣವೆಂಬುದು ಅಂತರ್ಯಾಮಿಯಾಗಿದ್ದು ಅಧಿಷ್ಠಾನಮಾತ್ರವೆಂದರ್ಥ—"ಯಃ ಪೃಥಿವೀಮನ್ತರೇ ಸಂಚರನ್..." ಇತ್ಯಾದಿಯಲ್ಲಿಯಂತೆ—ಈ ರೀತಿಯಿಂದ ಮೇಲೆ ಹೇಳಿದ ಪೂರ್ವಪಕ್ಷ ಯುಕ್ತಿಗಳೆಲ್ಲವೂ ಅನ್ಯಥಾ ಸಿದ್ಧ.

## 2. ಭೂಮಾಧಿಕರಣ

### ಸೂತ್ರ ಭೂಮಾ ಸಂಪ್ರಸಾದಾದಧ್ಯುಪದೇಶಾತ್

[ಭೂಮವಿದ್ಯಾ]

**ಅಪವಾದ ಸಂಗತಿ**

(೧) ಪರಮಾತ್ಮ ಪ್ರಕರಣಕ್ಕೆ ವಿಚ್ಛೇದವಿಲ್ಲದ್ದರಿಂದ ಪರಮಾತ್ಮಪರತ್ವವನ್ನು ಸಾಧಿಸಿಯಾಯಿತು. ಅದೇ ರೀತಿ ಜೀವ ಪ್ರಕರಣಕ್ಕೂ ವಿಚ್ಛೇದ ವಿಲ್ಲದಿರುವುದರಿಂದ ಜೀವಪರತ್ವವನ್ನೇಕೆ ಸಾಧಿಸಬಾರದು?—ಎಂಬ ಶಂಕೆಯಿಂದ ಸಂಗತಿ. ಇದು ಪ್ರಮಾಣದ್ವಾರಾ ಹೇಳುವಸಂಗತಿ. (೨) ಅರ್ಥದ್ವಾರಾ ಮತ್ತೊಂದು ಸಂಗತಿಯೂ ಇಲ್ಲಿ ಉತ್ಥಿತವಾಗುತ್ತೆ—ಅದೇನೆಂದರೆ:—"ಓತಂ ಮನಃ ಪ್ರಾಣೈಶ್ಚ ಸರ್ವೈಃ" —ಎಂದು ಪ್ರಾಣ ಸಂಬಂಧವುಳ್ಳವನನ್ನು ಪರಮಾತ್ಮನೆನ್ನಲಾಯಿತು. ಇಲ್ಲಿ ಪ್ರಾಣ

ಸಂಬಂಧಿಯಾದವನಿಗೇ ಹಿಂಸಾಯೋಗ್ಯತ್ವ ಶ್ರುತವಾಗಿರುವುದರಿಂದ ಜೀವತ್ವವು ಪ್ರತೀತವಾಗುತ್ತೆ—ಎಂಬುದು.

**ವಿಷಯವಾಕ್ಯ**

ಛಾಂದೋಗ್ಯದಲ್ಲಿ—"ಯತ್ರನಾನ್ಯತ್ಪಶ್ಯತಿ ನಾನ್ಯತ್ ಶೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ, ಅಥ ಯತ್ರಾನ್ಯತ್ಪಶ್ಯತ್ಯನ್ಯಚ್ಛೃಣೋತ್ಯನ್ಯದ್ವಿಜಾನಾತಿತದಲ್ಪಂ"—ಎಂಬುದು.

**ಸೂತ್ರಾರ್ಥ**

[ಸಂಪ್ರಸಾದಾತ್ ಅಧಿ]=ಜೀವನಿಗಿಂತಲೂ ಮೇಲಾದ್ದಾಗಿ, [ಉಪದೇಶಾತ್] ಹೇಳುವುದರಿಂದ, [ಭೂಮಾ]=ಭೂಮಾ ಎಂದು ಹೇಳಲ್ಪಟ್ಟವನು (ಪರಮಾತ್ಮಾ).

**ವಿವರಣೆ**

ಈ ಅಧಿಕರಣದಲ್ಲಿ "ಭೂಮಾ"—ಅಂದರೆ ನಿರತಿಶಯ ಸುಖಸ್ವರೂಪಿ —ಎಂದು ಹೇಳಲ್ಪಟ್ಟವನು ಜೀವನೋ? ಪರಮಾತ್ಮನೋ?—ಎಂದು ಸಂಶಯ.

ಆತ್ಮೋಪದೇಶ ಮಾಡುವ ಇಲ್ಲಿ ನಾಮಾದಿಯಾಗಿ ಮೇಲ್ಮೇಲೆ ಹೇಳಿಕೊಂಡು ಹೋಗಿ, ಈ ಉಪದೇಶವನ್ನು ಜೀವನಲ್ಲಿ ಸಮಾಪ್ತಿಮಾಡಿರುವುದರಿಂದ, "ಅವನು ನಿರತಿಶಯ ಸುಖ ಸ್ವರೂಪಿ"—ಎಂದು ಹೇಳಲ್ಪಟ್ಟವನು ಜೀವನೇ ಆಗಬೇಕು—ಎಂದು ಪೂರ್ವಪಕ್ಷ.

"ಏಷ ತುವಾ ಅತಿವದತಿ ಯಸ್ಸತ್ಯೇನಾತಿವದತಿ"—ಅಂದರೆ, ತಾನು ಉಪಾಸಿಸುವ ಸತ್ಯಶಬ್ದವಾಚ್ಯನಾದ ಪರಮಾತ್ಮನನ್ನು ಯಾವನು ಶ್ಲಾಘಿಸುತ್ತಾನೆಯೋ, ಜೀವೋಪಾಸಕನಿಗಿಂತ ಭಿನ್ನವಾದ ಇವನೇ ಅತಿವಾದ (ತಾನು ಉಪಾಸಿಸುವ ದೇವತೆಯನ್ನು ಹೊಗಳುವುದು) ವನ್ನು ಮಾಡುವವನು ಎಂದು ಜೀವೋಪಾಸಕನಿಗಿಂತ ಪರಮಾತ್ಮೋಪಾಸಕನನ್ನು ಭಿನ್ನನೆಂದೂ ಉತ್ತಮನೆಂಬದಾಗಿಯೂ ಹೇಳಿ ಅಲ್ಲಿ ಆತ್ಮೋಪದೇಶವನ್ನು ಸಮಾಪ್ತಿಗೊಳಿಸಿರುವುದು. ಇದಕ್ಕೆ ಮುಂಚೆ ಜೀವನಲ್ಲಿ ಆತ್ಮೋಪದೇಶ ಸಮಾಪ್ತವಾಗಲಿಲ್ಲ—ಆದ್ದರಿಂದ ಸಮಾಪ್ತಿಯಲ್ಲಿ ಹೇಳಿದ ಪರಮಾತ್ಮನೇ ಇಲ್ಲಿ, "ಸಃ"—(ಅವನು) ಎಂದು ಹೇಳಿ "ಭೂಮಾ"—ನಿರತಿಶಯಸುಖರೂಪಿ ಎಂದು ಹೇಳಿದೆ. ಆದ್ದರಿಂದ ಹೀಗೆ ಇಲ್ಲಿ ಹೇಳಲ್ಪಟ್ಟವನು ಪರಮಾತ್ಮಾ ಎಂದು ಸಿದ್ಧಾಂತ.

ಸೂತ್ರ ೨—**ಧರ್ಮೋಪಪತ್ತೇಶ್ಚ**

**ಸೂತ್ರಾರ್ಥ**

ಮೇಲೆ ಹೇಳಿದ ಗುಣಗಳು ಪರಮಾತ್ಮನಲ್ಲಿಯೇ ಅನ್ವಯಿಸುವುದರಿಂದಲೂ [ಇವನು ಪರಮಾತ್ಮಾ].

**ವಿವರಣೆ**

ಈ ಪ್ರಕರಣದಲ್ಲಿ ಭೂಮಾವಿಗೆ ಹೇಳಿದ ಧರ್ಮಗಳು ಬ್ರಹ್ಮ ವೊಂದಕ್ಕೇ ಸಂಬಂಧಿಸಿದವು. ಅವು ಯಾವುವೆಂದರೆ:—ಅಳಿವಿಲ್ಲದಿರುವಿಕೆ. "ಸ್ವೇಮ ಹಿಮ್ನಿ ಪ್ರತಿಷ್ಠಿತ"—

ಎಂದು ಅನನ್ಯಾಧಾರತ್ವ. ತನ್ನ ಮಹಿಮೆಯಿಂದ ತಾನು ಬೆಳಗುವುದೂ ಎಲ್ಲೆಲ್ಲಿಯೂ ವ್ಯಾಪಿಸಿರುವುದೇ ಮುಂತಾದವು. ಇವು ಮತ್ತೊಂದಕ್ಕೆ ಸದೃಶವಲ್ಲವಾದ್ದರಿಂದ ಈ ಭೂಮಾ ಎಂಬುದು ಬ್ರಹ್ಮವೇ. ಮೇಲೂ, ಭೇದ ವಾಸನೆಯೂ ಅದಕ್ಕೆ ಮೂಲವಾದ ಅವಿದ್ಯೆಯೂ ನಶಿಸಿದ ಮೇಲೆ ನಿರ್ಗುಣ ಬ್ರಹ್ಮದಲ್ಲಿ ಲಯಿಸುವವನು ಬ್ರಹ್ಮಸ್ವರೂಪಕ್ಕಿಂತ ಬೇರೆಯಾದ ಜಗತ್ತನ್ನು ಕಾಣಲಾರನಾದ್ದರಿಂದ, "ಯತ್ರ ನಾನ್ಯತ್ಪಶ್ಯತಿ,"—ಎಂಬ ವಾಕ್ಯವೂ ನಿರ್ಗುಣ ಬ್ರಹ್ಮಪರವಾಗಿಯೇ ಇರುವುದೆಂದು ಅದ್ವೈತ ಸಿದ್ಧಾಂತ.

ಅನವಧಿಕಾತಿಶಯ ಸುಖರೂಪವಾದ ಬ್ರಹ್ಮವನ್ನು ಅನುಭವಿಸುವಾಗ ಅದನ್ನು ಅನುಭವಿಸುವವನು, ಅದೊಂದನ್ನು ಬಿಟ್ಟು ಮತ್ತೆ ಯಾವುದನ್ನೂ ಕಾಣುವುದಿಲ್ಲ, ಏಕೆಂದರೆ ಸಮಸ್ತ ವಸ್ತುಜಾತವೂ ಅವನು ಅನುಭವಿಸುವ ಪರಬ್ರಹ್ಮ ಸ್ವರೂಪದಲ್ಲಿಯೇ ಅಂತರ್ಗತವಾಗಿದೆ. ಅನುಭಾವ್ಯವಾದ ಸರ್ವವೂ ಸುಖರೂಪವಾದ್ದರಿಂದಲೇ ದುಃಖವನ್ನೂ ಕಾಣಲಾರನು. ಅನುಭವಿಸಲ್ಪಡುವ ವಸ್ತು ಪುರುಷನಿಗೆ ಅನುಕೂಲವಾಗಿ ಕಂಡುಬಂದಲ್ಲಿ ಅದೇ ಸುಖವೆಂಬುದು.

ಇದೇ ಜಗತ್ತು ಬ್ರಹ್ಮಕ್ಕಿಂತ ಬೇರೆಯಾದುದೆಂದು ಅನುಭವಿಸಲ್ಪಡುವಲ್ಲಿ ದುಃಖರೂಪವೂ ಪರಿಮಿತ ಸುಖರೂಪವೂ ಆಗಿದೆ. ಬ್ರಹ್ಮದ ವಿಭೂತಿಯಾದ್ದರಿಂದ ಬ್ರಹ್ಮಾತ್ಮಕವೆಂದು ಅನುಭವಿಸಲ್ಪಡುವಾಗ ಇದೇ ಜಗತ್ತು ಬರೀ ಸುಖರೂಪವೇ ಆಗುವುದೆಂದರೆ ಅದು ಹೇಗೆ?—ಎಂದರೆ, ಕರ್ಮವಶ್ಯರಾದ ಕ್ಷೇತ್ರಜ್ಞರಿಂದ ಬ್ರಹ್ಮಕ್ಕಿಂತ ಬೇರೆಯೆಂದು ಅನುಭವಿಸಲ್ಪಡುವಾಗ ಈ ಜಗತ್ತೆಲ್ಲವೂ ಅವರವರ ಕರ್ಮಾನುರೂಪವಾಗಿ ದುಃಖರೂಪವೂ ಪರಿಮಿತ ಸುಖರೂಪವೂ ಆಗಿರುತ್ತೆ. ಕರ್ಮರೂಪವಾದ ಅವಿದ್ಯಾ ವಿಮುಕ್ತನಿಗಾದರೋ—ಅದೇ ಜಗತ್ತು ವಿಭೂತಿ ಗುಣವಿಶಿಷ್ಟ ಬ್ರಹ್ಮಾನುಭವದಲ್ಲಿ ಅಂತರ್ಗತವಾಗಿರುವುದರಿಂದ ಸುಖರೂಪವೇ ಆಗುತ್ತದೆ. ಪಿತ್ತೋಪಹತನಿಗೆ ಅವನು ಕುಡಿಯುವ ಹಾಲು ಪಿತ್ತತಾರತಮ್ಯಕ್ಕೆ ತಕ್ಕ ಹಾಗೆ ಅಲ್ಪಸುಖರೂಪವೋ ಅಥವಾ ಬರೀ ಕಹಿಯೋ ಆಗಿರುತ್ತೆ. ಅದೇ ಹಾಲು ಪಿತ್ತವಿಕಾರವಿಲ್ಲದವನಿಗೆ ಸುಖರೂಪವೇ ಆಗಿರುತ್ತೆ. ಹಾಗೆಯೇ, ರಾಜಪುತ್ರನಿಗೆ ತಂದೆಯ ಲೀಲೋಪಕರಣವು ಅದೇ ರೀತಿ ಭಾವಿಸುವಲ್ಲಿ ಅತ್ಯಂತ ಪ್ರಿಯವಾಗಿಯೂ ಬೇರೆ ರೀತಿ ಅನುಭವಿಸುವಲ್ಲಿ ಅಪ್ರಿಯವೂ ಆಗಿರುತ್ತೆ. ಅದರಂತೆಯೇ ನಿರತಿಶಯಾನಂದ ಸ್ವರೂಪನೂ ಅನವಧಿಕಾತಿಶಯಾಸಂಖ್ಯೇಯ ಕಲ್ಯಾಣ ಗುಣಾಕರನೂ ಆದಂಥ ಪರಬ್ರಹ್ಮಕ್ಕೆ ಲೀಲೋಪಕರಣವಾದ ಜಗತ್ತನ್ನು ಬ್ರಹ್ಮಾತ್ಮಕವನ್ನಾಗಿಯೇ ಅನುಸಂಧಾನ ಮಾಡುವಾಗ ಅದು ನಿರತಿಶಯ ಪ್ರೀತಿರೂಪವೇ ಆಗಿರುತ್ತೆ. ಆದ್ದರಿಂದ ಜಗದೈಶ್ವರ್ಯ ವಿಶಿಷ್ಟವೂ ಅನವಧಿಕಾತಿಶಯ ಸುಖರೂಪವೂ ಆದ ಬ್ರಹ್ಮವನ್ನು ಅನುಭವಿಸುವವನು ಅದಕ್ಕಿಂತ ಬೇರೆ ಯಾವುದನ್ನೂ ಕಾಣುವುದಿಲ್ಲ. ದುಃಖವನ್ನೂ ಕಾಣುವುದಿಲ್ಲ. ಇದನ್ನೇ, "ಸ ವಾ ಏಷ ಏವಂ ಪಶ್ಯನ್ನೇವಂ ಮನ್ವಾನ ಏವಂ ವಿಜಾನನ್ ಆತ್ಮರತಿರಾತ್ಮಕ್ರೀಡ ಆತ್ಮಮಿಥುನ ಆತ್ಮಾನನ್ದ ಸ್ಸ ಸ್ವರಾಟ್ ಭವತಿ ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ।

ಅಥಯೇಽಸ್ಯಧಾತೋ ವಿದು ರನ್ಯರಾಜಾನಸ್ತೇ ಕ್ಷಯ್ಯಲೋಕಾ ಭವನ್ತಿ ತೇಷಾಂ ಸರ್ವೇಷು ಲೋಕೇಷ್ವಕಾಮ ಚಾರೋ ಭವತಿ"—ಎಂಬ ವಾಕ್ಯಶೇಷವೂ ಪ್ರತಿಪಾದಿಸುತ್ತದೆ. ಆದ್ದರಿಂದ ಪ್ರಾಣ ಶಬ್ದನಿರ್ದಿಷ್ಟನಾದ ಪ್ರತ್ಯಗಾತ್ಮನಿಗಿಂತ ಬೇರೆಯಾಗಿ ಸತ್ಯಶಬ್ದವಾಚ್ಯನಾದ ಬ್ರಹ್ಮವೇ 'ಭೂಮಾ' ಎಂದು ಉಪದೇಶಿಸಿರುವುದರಿಂದ 'ಭೂಮಾ'—ಎಂಬುದು ಪರಬ್ರಹ್ಮ.

ಸನತ್ಕುಮಾರರು ನಾರದರಿಗೆ ಉಪದೇಶಿಸಿದ ಈ ಭೂಮವಿದ್ಯಾವಾಕ್ಯ ಸಮುದಾಯದಲ್ಲಿ ಮೊದಲು ನಾಮಾತ್ಮಕ ಶಬ್ದ ಕಂಡುಬರುತ್ತೆ. ಅದಕ್ಕೆ ಮೇಲೆ ವಾಕ್, ಅದಕ್ಕೆ ಮೇಲೆ ಮನಸ್ಸು. ಅದಾದ ಮೇಲೆ ಸಂಕಲ್ಪ, ಅನಂತರ ಚಿತ್ತ, ತರುವಾಯ ಧ್ಯಾನ ಧ್ಯಾನದ ನಂತರ ವಿಜ್ಞಾನ ಆಮೇಲೆ ಬಲ, ಬಲದ ಅನಂತರ ಅನ್ನ, ಅನ್ನವಾದ ಮೇಲೆ ನೀರು, ಅದಾದ ಮೇಲೆ ತೇಜಸ್ಸು ಅನಂತರ ಆಕಾಶ, ಅದಾದ ಮೇಲೆ ಮನ್ಮಥ, ಮನ್ಮಥ ನಂತರ ದಿಕ್ಕು. ಅನಂತರ ಪ್ರಾಣಶಬ್ದವಾಚ್ಯನಾದ ಹಿಂಸಾಯೋಗ್ಯ ಜೀವ, ಇವೆಲ್ಲದರ ಮೇಲೆ ಸರ್ವನಿಯನ್ತೃವಾದ ಸತ್ಯಶಬ್ದವಾಚ್ಯನಾದ ಪರಮಾತ್ಮಾ. ಆದ್ದರಿಂದಲೇ "ತರತಿ ಶೋಕಮಾತ್ಮವಿತ್"—ಎಂದು ಉಪಕ್ರಮಿಸಿ ಭೂಮ ವಿಜ್ಞಾನವನ್ನು ಉಪದೇಶಿಸಿ, "ಆತ್ಮೈವೇದಗ್ಂ ಸರ್ವಂ"—ಎಂದು ಅದನ್ನೇ ಉಪಸಂಹರಿಸಿದೆ. ಆದ್ದರಿಂದ ಭೂಮ ಗುಣ ವಿಶಿಷ್ಟ—ಪರಮಾತ್ಮಾ.

### 3. ಅಕ್ಷರಾಧಿಕರಣ

ಸೂತ್ರ—**ಅಕ್ಷರಮಂಬರಾನ್ತಧೃತೇಃ**

[ಗಾರ್ಗ್ಯಕ್ಷರವಿದ್ಯಾ]

### ಸಂಗತಿ

ಇದರ ಹಿಂದಿನದಾದ ಭೂಮಾಧಿಕರಣದಲ್ಲಿ "ಸ್ವೇ ಮಹಿಮ್ನಿ ಪ್ರತಿಷ್ಠಿತ".—ಎಂದು' ಅನನ್ಯಾಧಾರತ್ವ ಹೇಳಲ್ಪಟ್ಟಿತು. ಆ ಸ್ವೇ ಮಹಿಮ್ನಿ ಪ್ರತಿಷ್ಠಿತತ್ವ"—ವು ಪರಮಾತ್ಮನಲ್ಲದವನ ವಿಚಾರದಲ್ಲಿಯೂ ಶ್ರುತವಾಗಿದೆಯೆಂಬ ಶಂಕೆಯಿಂದ—ಇಲ್ಲಿ ಅಪವಾದ ಸಂಗತಿ.'

ಪ್ರಕೃತೌ ಪುರುಷೇವ್ಯೈಷಾ ಸ್ವೇ ಮಹಿಮ್ನಿಪ್ರತಿಷ್ಠಿತಿಃ।
ಪ್ರೋಕ್ತಾಸ್ತೀತ್ಯಪವಾದೇನ ನ್ಯಾದಕ್ಷರ ನಯೋದಯಃ॥"

—ಎಂದು ನಯಸಂಗತಿ ಮಾಲಿಕೆಯಲ್ಲಿ ಇದನ್ನೇ ಹೇಳಿದೆ.

### ವಿಷಯವಾಕ್ಯ

ವಾಜಸನೇಯದಲ್ಲಿ, ಗಾರ್ಗಿಪ್ರಶ್ನದಲ್ಲಿ,—"ಸಹೋವಾ ಚೈತದ್ವೈತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದನ್ತಿ ಅಸ್ಥೂಲ ಮನಣ್ವಹ್ರಸ್ವಮದೀರ್ಘ ಮಲೋಹಿತ ಮಸ್ನೇಹಮಚ್ಛಾಯಂ",—ಇತ್ಯಾದಿ.

### ಸೂತ್ರಾರ್ಥ

[ಅಂಬರಾನ್ತಧೃತೇಃ =]ಆಕಾಶಕ್ಕೆ ಕಾರಣವಾದ ಮೂಲಪ್ರಕೃತಿ ಯನ್ನು ಧರಿಸಿರುವುದರಿಂದ, [ಅಕ್ಷರಂ] = ಅಕ್ಷರವೆಂದು ಹೇಳಲ್ಪಟ್ಟವನು. (ಪರಮಾತ್ಮಾ).

**ವಿವರಣೆ**

"ಏತದ್ವೈತದಕ್ಷರಂ ಗಾರ್ಗಿ",—ಇತ್ಯಾದಿ ವಿಷಯವಾಕ್ಯದಲ್ಲಿ ಹೇಳಲ್ಪಟ್ಟವನು ಜೀವನೋ, ಮೂಲಪ್ರಕೃತಿಯೋ? ಪರಮಾತ್ಮನೋ?—ಎಂದು ಸಂಶಯ. "ಕಸ್ಮಿನ್ನು ಖಲ್ವಾಕಾಶ ಓತಶ್ಚ ಪ್ರೋತಶ್ಚ",—ಎಂದು ಆಕಾಶಕ್ಕೆ ಆಧಾರ ಯಾವುದು?—ಎಂದು ಪ್ರಶ್ನಿಸಿದ್ದಕ್ಕೆ ಈ ವಾಕ್ಯ ಉತ್ತರವಾದ್ದರಿಂದ ಆಕಾಶಕ್ಕೆ ಆಧಾರವಾಗಿ ಹೇಳಲ್ಪಟ್ಟದು ಅದಕ್ಕೆ ಕಾರಣವಾದ ಮೂಲಪ್ರಕೃತಿಯೇ ಆಗಿರಬೇಕು. ಜೀವನೂ ಪೃಥಿವ್ಯಾದ್ಯ ಚೇತನ ವಸ್ತುವಿಗೆ ಆಧಾರನಾದ್ದರಿಂದ ಆಕಾಶಕ್ಕೆ ಆಧಾರವಾಗಿ ಹೇಳಲ್ಪಟ್ಟವನು ಜೀವನೂ ಆಗಬಹುದು. ಪರಮಾತ್ಮನಿಗೆ ಅಚಿತ್ಸಂಬಂಧವಿಲ್ಲವಾದ್ದರಿಂದ ಇವನು ಪರಮಾತ್ಮನಲ್ಲ—ಎಂದು ಪೂರ್ವಪಕ್ಷ.

ತ್ರಿಕಾಲವರ್ತಿಯಾಗಿರುವ ಸಕಲ ವಸ್ತುಗಳಿಗೂ ಆಧಾರವಾದ ಆಕಾಶಕ್ಕೆ ಆಧಾರ ಯಾವುದು? ಎಂಬ ಪ್ರಶ್ನವಾಕ್ಯದಲ್ಲಿ ಈ ಭೂತಾಕಾಶ ಆ ಸಕಲವಸ್ತುಗಳಿಗೂ ಆಧಾರ ವಲ್ಲದ್ದರಿಂದ ಅಂತಹ ಮೂಲಪ್ರಕೃತಿಯೇ ಆಕಾಶವೆಂದು ಹೇಳಲ್ಪಟ್ಟಿದೆ. ಅದಕ್ಕೆ ಜೀವನೂ ಮೂಲಪ್ರಕೃತಿಯೂ ಆಧಾರವಲ್ಲವಾದ್ದರಿಂದ, ಇಲ್ಲಿ ಮೂಲಪ್ರಕೃತಿಯಾದ ಆಕಾಶಕ್ಕೆ ಆಧಾರವಾಗಿ ಹೇಳಲ್ಪಟ್ಟವನು ಪರಮಾತ್ಮಾ—ಎಂದು ಸಿದ್ಧಾಂತ.

ಹಾಗಾದರೆ ಅಕ್ಷರಶಬ್ದ ನಿರ್ದಿಷ್ಟನಾದವನು ಜೀವನೇಕೆ ಆಗಬಾರದು? ಭೂತ ಸೂಕ್ಷ್ಮಪರ್ಯನ್ತವಾದ ಸಕಲ ಅಚೇತನ ವಸ್ತುಗಳಿಗೂ ಅವನು ಆಧಾರವೆಂಬುದು ಹೇಗೂ ಕೂಡುತ್ತದೆ. ಅಸ್ಥೂಲತ್ವವೇ ಮುಂತಾದ ಇಲ್ಲಿ ಹೇಳುವ ವಿಶೇಷಣಗಳೂ ಅವನಿಗೆ ಹೊಂದುತ್ತವೆ. "ಅವ್ಯಕ್ತಂ ಅಕ್ಷರೇಲಿಯತೇ", "ಕೂಟಸ್ಥೋಽಕ್ಷರಉಚ್ಯತೇ"—ಇತ್ಯಾದಿಗಳಲ್ಲಿ ಅವನಿಗೆ ಅಕ್ಷರನೆಂಬ ಪ್ರಯೋಗವೂ ಇದೆ—ಎಂದು ಶಂಕಿಸಿದರೆ ಅದಕ್ಕೆ ಸೂತ್ರಿಸಿದ್ದಾರೆ.

ಸೂತ್ರ ೨—**ಸಾ ಚ ಪ್ರಶಾಸನಾತ್**

**ಸೂತ್ರಾರ್ಥ**

[ಸಾ ಚ] ಆ ಧರಿಸುವಿಕೆಯೂ [ಪ್ರಶಾಸನಾತ್]= ಪ್ರಕೃಷ್ಟವಾದ (ಅಪ್ರತಿಹತ ವಾದ) ಆಜ್ಞೆಯಿಂದ (ಎಂದು ಹೇಳುವುದರಿಂದ, ಇವನು ಪರಮಾತ್ಮಾ)

**ವಿವರಣೆ**

"ಏತಸ್ಯ ವಾ ಅಕ್ಷರಸ್ಯಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ,"— ಈ ಅಕ್ಷರದ ಆಜ್ಞೆಯಿಂದ ಸೂರ್ಯಚಂದ್ರರೂ ಮತ್ತೆ ಸಮಸ್ತ ವಸ್ತುಗಳೂ ಧರಿಸಲ್ಪಟ್ಟಿವೆ—ಎಂದು ಸಮಸ್ತ ವಸ್ತುಗಳನ್ನೂ ತನ್ನ ಆಜ್ಞೆಯಿಂದ ಧರಿಸಿದ್ದಾನೆಂದು ಹೇಳುವುದರಿಂದ. ಈ ಅಕ್ಷರ ಪರಮಾತ್ಮಾ. ಈ ರೀತಿ ತನ್ನ ಶಾಸನದ ಮೂಲಕ ಸಕಲ ವಸ್ತುಗಳನ್ನೂ ಧರಿಸುವುದು ಬದ್ಧಜೀವನಿಗಾಗಲಿ, ಮುಕ್ತ ಜೀವನಿಗಾಗಲಿ ಸಂಭವಿಸದು—ಎಂದು ತಾತ್ಪರ್ಯ.

ಸೂತ್ರ ೩—**ಅನ್ಯಭಾವವ್ಯಾವೃತ್ತೇಶ್ಚ**

**ಸೂತ್ರಾರ್ಥ**

ಈ ಅಕ್ಷರ ಪರಮಪುರುಷನಲ್ಲದೆ ಮತ್ತೆ ಯಾವುದೂ ಅಲ್ಲವೆಂದು ಅದಕ್ಕೆ ಇತರವಾದ ಪ್ರಧಾನಾದಿ ಭಾವವನ್ನು ತಳ್ಳಿಹಾಕಿರುವುದರಿಂದಲೂ ಕೂಡ. [ಇವನುಪರಮಾತ್ಮಾ].

**ವಿವರಣೆ**

ವಾಕ್ಯಶೇಷದಲ್ಲಿ "ಏತದಕ್ಷರಂ ಗಾರ್ಗಿ ಅದೃಷ್ಟಂದ್ರಷ್ಟೃ ಅಶ್ರುತಂ ಶ್ರೋತೃ ಅಮತಂ ಮಂತೃ ಅವಿಜ್ಞಾತಂ ವಿಜ್ಞಾತೃ ನಾನ್ಯದತೋಽಸ್ತಿ ದ್ರಷ್ಟೃ ನಾನ್ಯದತೋಽಸ್ತಿ ಶ್ರೋತೃನಾನ್ಯದತೋಽಸ್ತಿಮಂತೃ ನಾನ್ಯದತೋಽಸ್ತಿ ವಿಜ್ಞಾತೃ ಏತಸ್ಮಿನ್ನು ಖಲ್ವಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚ"—ಎಂದು ಈ ಅಕ್ಷರ ಒಬ್ಬನ ಕಣ್ಣಿಗೂ ಗೋಚರಿಸತಕ್ಕದ್ದಲ್ಲ. ಇದು ಎಲ್ಲವನ್ನೂ ನೋಡುತ್ತೆ—ಎಂದು ಹೇಳಿರುವುದರಿಂದ ಈ ಗುಣಗಳು ಜೀವನಿಗೂ ಪ್ರಕೃತಿಗೂ ಇಲ್ಲವಾದ್ದರಿಂದ, ಇವನು ಪರಮಾತ್ಮಾ. ಯಾವುದನ್ನು ಅರಿಯದಿರುವುದರಿಂದ ಸಂಸಾರವೂ, ಅರಿಯುವುದರಿಂದ ಮೋಕ್ಷವೂ ಪ್ರಾಪ್ತವಾಗುತ್ತದೆಯೋ ಆ ಅಕ್ಷರ ಪರಬ್ರಹ್ಮವೆಂಬುದು ಸಿದ್ಧ.

## 4. ಈಕ್ಷತಿ ಕರ್ಮಾಧಿಕರಣ

ಸೂತ್ರ—**ಈಕ್ಷತಿ ಕರ್ಮವ್ಯಪದೇಶಾತ್ಸಃ**

ಇಲ್ಲಿಯವಿದ್ಯೆ [ಪ್ರಣವೋಪಾಸ್ಯಪರಮಪುರುಷವಿದ್ಯಾ] ಎಂಬುದು

**ಸಂಗತಿ**

(೧) ಹಿಂದಿನ ಅಧಿಕರಣದಲ್ಲಿ "ಅದೃಷ್ಟಂ ದ್ರಷ್ಟೃ"—ಎಂಬುದಾಗಿ ಪರಮಾತ್ಮ ದ್ರಷ್ಟೃವೆನ್ನಲಾಯಿತು. ಹಾಗಾದರೆ, ಇಲ್ಲಿ ಈಕ್ಷತಿ ಕರ್ಮವೆಂಬುದಾಗಿ ಹೇಳಲ್ಪಟ್ಟವನು ಪರಮಾತ್ಮನಲ್ಲ—ಎಂಬ ಶಂಕೆಯಿಂದ ಸಂಗತಿ. ಇದು ಪ್ರತ್ಯುದಾಹೃತಿ ಸಂಗತಿಯೆನಿಸುವುದು. (೨) ಹಿಂದಿನ ಅಧಿಕರಣದಲ್ಲಿ ಅರ್ಥವಿರೋಧದಿಂದ ಆಕಾಶ ಶಬ್ದ ಅಂಬರಾಂತ ಪರವೆನ್ನಲಾಯಿತು. ಹಾಗೆ ಅಂತರಿಕ್ಷ ಶಬ್ದಕ್ಕೆ ಮುಖ್ಯಾಂತರದಿಂದ ನಿರ್ವಾಹ ಹೇಳಲಾಗುವುದಿಲ್ಲವೆಂಬ ಶಂಕೆಯಿಂದಲೂ ಸಂಗತಿ.

ಸೂತ್ರದಲ್ಲಿಯ "ಸಃ"—ಎಂಬ ಈಪದವು ಪಾದದ ಎಲ್ಲಾ ಅಧಿಕರಣಗಳಲ್ಲಿಯೂ ಅನುವರ್ತಿಸುವ ಸಾಧ್ಯದ ವಿಷಯ. ಪ್ರಥಮಪಾದದಲ್ಲಿ "ಭೇದವ್ಯಪದೇಶಾಚ್ಚಾನ್ಯಃ" ಎಂಬದರಲ್ಲಿಯ ಅನ್ಯಶಬ್ದೋಕ್ತಿ ಆ ಪಾದದಲ್ಲಿಯ ಅಧಿಕರಣಗಳೆಲ್ಲದರಲ್ಲಿಯ ಸಾಧ್ಯ ಪ್ರತಿಜ್ಞೆಯ ಅನುವೃತ್ತಿಗಾಗಿ. ಎರಡನೆಯ ಪಾದದಲ್ಲಿಯ "ಅತ ಏವ ಚ ಸ ಬ್ರಹ್ಮ" —ಎಂಬದರ ಬ್ರಹ್ಮ ಶಬ್ದೋಕ್ತಿಯೂ, ನಾಲ್ಕನೆಯ ಪಾದದಲ್ಲಿಯ "ವದತೀತಿ ಚೇನ್ನ ಪ್ರಾಜ್ಞೋ ಹಿ ಪ್ರಕರಣಾತ್",—ಎಂಬದರಲ್ಲಿಯ ಪ್ರಾಜ್ಞ ಶಬ್ದೋಕ್ತಿಯೂ ಆಯಾ ಪಾದದಲ್ಲಿ ಹೀಗೆಯೇ ಸರ್ವಾಧಿಕರಣಗಳಲ್ಲಿಯ ಸಾಧ್ಯ ಪ್ರತಿಜ್ಞೆಯ ಅನುವೃತ್ತಿಗಾಗಿ— ಎಂದು ತಿಳಿಯತಕ್ಕದ್ದು.

ಈ ಅಧಿಕರಣ ಸೂತ್ರದಲ್ಲಿ "ಸಃ"—ಎಂಬ ಪುಲ್ಲಿಂಗ ನಿರ್ದೇಶ ಪರಮಪುರುಷನೆಂಬ ವಿವಕ್ಷೆಯಿಂದ.

**ವಿಷಯವಾಕ್ಯ**

ಆಥರ್ವಣಿಕರು ಪಠಿಸಿರುವ ಸತ್ಯಕಾಮ ಪ್ರಶ್ನೆಯಲ್ಲಿ,

"ಯಃ ಪುನರೇತಂ ತ್ರಿಮಾತ್ರೇಣೋ ಮಿತ್ಯನೇನೈವಾಕ್ಷರೇಣ ಪರಂ ಪುರುಷಮಭಿ ಧ್ಯಾಯೀತ ಸ ತೇಜಸಿ ಸೂರ್ಯೇ ಸಂಪನ್ನಃ ಯಥಾಪಾದೋದರಸ್ತ್ವಚಾ ವಿನಿರ್ಮುಚ್ಯತೇ ಏವಂ ಹೈವ ಸಪಾಪ್ಮನಾ ವಿನಿರ್ಮುಕ್ತಸ್ಸ ಸಾಮಭಿರುನ್ನೀ ಯತೇ ಬ್ರಹ್ಮಲೋಕಂ ಸ ಏತಸ್ಮಾಜ್ಜೀವ ಘನಾತ್ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ"—ಇತಿ.

**ಸೂತ್ರಾರ್ಥ**

[ವ್ಯಪದೇಶಾತ್] = ಪರಮಾತ್ಮಾ ಸಾಧಾರಣವಾದ ಧರ್ಮಗಳನ್ನು ಹೇಳು ವುದರಿಂದ, [ಈಕ್ಷತಿ ಕರ್ಮ] = "ಪುರುಷಮೀಕ್ಷತೇ".—ಎಂಬಲ್ಲಿ ದರ್ಶನಕ್ಕೆ ವಿಷಯವಾಗಿ ಹೇಳಲ್ಪಟ್ಟವನು [ಸಃ] = ಆ ಪರಮಾತ್ಮಾ.

**ವಿವರಣೆ**

"ಯಃ ಪುನರೇತಂ ತ್ರಿಮಾತ್ರೇಣೋಮಿತ್ಯನೇನೈವಾಕ್ಷರೇಣ ಪರಮುಪುರುಷ ಮಭಿಧ್ಯಾಯೀತ",—ಯಾವ ಪುರುಷನು ಮೂರು ಮಾತ್ರೆಗಳುಳ್ಳ 'ಓಂ'— ಎಂಬ ಅಕ್ಷರವಾದ ಪ್ರಣವದಿಂದ ಈ ಪರಮಪುರುಷನನ್ನು ಉಪಾಸಿಸುತ್ತಾನೆಯೋ, —ಎಂದು ಆರಂಭಿಸಿ "ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ"—ಪರಾತ್ಪರನಾದ ಪುರುಷನನ್ನು ಅವನು ಸಾಕ್ಷಾತ್ಕರಿಸುವನು ಎಂಬಲ್ಲಿ, ಚತುರ್ಮುಖ ಬ್ರಹ್ಮನೋ? ಪರಮಾತ್ಮನೋ? ಸಾಕ್ಷಾತ್ಕಾರಕ್ಕೆ ವಿಷಯವಾಗಿ ಹೇಳಲ್ಪಟ್ಟವನು ?—ಎಂದು ಸಂಶಯ.

ಒಂದು ಮಾತ್ರೆಯುಳ್ಳ ಪ್ರಣವವನ್ನು ಉಪಾಸಿಸುವವನಿಗೆ ಮನುಷ್ಯ ಲೋಕ ವುಂಟೆಂದೂ, ಎರಡು ಮಾತ್ರೆಗಳುಳ್ಳ ಪ್ರಣವವನ್ನು ಉಪಾಸಿಸುವವನಿಗೆ ಅಂತರಿಕ್ಷ ಲೋಕವುಂಟೆಂದೂ, ಹೇಳಿ, ಮೂರು ಮಾತ್ರೆಗಳುಳ್ಳ ಪ್ರಣವವನ್ನು ಉಪಾಸಿಸುವವನಿಗೆ ಬ್ರಹ್ಮಲೋಕದಲ್ಲಿರುವ ಪುರುಷಾರ್ಥವುಂಟಾಗುವುದೆಂದು ಹೇಳುವುದರಿಂದ, ಅಂತರಿಕ್ಷ ಲೋಕಕ್ಕೆ ಮೇಲ್ಭಾಗದಲ್ಲಿರುವ ಬ್ರಹ್ಮಲೋಕದಲ್ಲಿರುವ ಚತುರ್ಮುಖ ಬ್ರಹ್ಮನೇ ಇಲ್ಲಿ ಸಾಕ್ಷಾತ್ಕಾರಕ್ಕೆ ವಿಷಯವಾಗಿ ಹೇಳಲ್ಪಟ್ಟವನು—ಎಂದು ಪೂರ್ವಪಕ್ಷ.

ಸಾಕ್ಷಾತ್ಕಾರಕ್ಕೆ ವಿಷಯವಾಗಿ ಹೇಳಲ್ಪಟ್ಟ ಪುರುಷನ ಮಹಿಮೆಯನ್ನು ಹೇಳುವ ಮೇಲಿನ ವಾಕ್ಯದಲ್ಲಿ,"ಶಾನ್ತಮಜರ ಮಮೃತಮ್",—ಎಂದು, ಕಾಮಕ್ರೋಧಾದಿಗಳಿಲ್ಲ ದವನು, ಜನನಮರಣಾದಿ ವಿಕಾರವಿಲ್ಲದವನು, ಪರಮಭೋಗ್ಯಭೂತನು, ಎಂದು ಹೇಳುವುದರಿಂದ, ಸ್ವತಸ್ಸಿದ್ಧವಾದ ಈ ಗುಣಗಳು ಚತುರ್ಮುಖ ಬ್ರಹ್ಮನಿಗೆ ಕೂಡದುದ ರಿಂದ, ಇವನು ಪರಮಾತ್ಮಾ: ಇವನಿಗೆ ವಾಸಸ್ಥಾನವಾಗಿ ಹೇಳಲ್ಪಟ್ಟ ಬ್ರಹ್ಮಲೋಕವು ತ್ರಿಪಾದ್ವಿಭೂತಿಯಾದ ಪರಮಪದ—ಎಂದು ಸಿದ್ಧಾಂತ. "ಯಥಾ ಪಾದೋದರ ಸ್ತ್ವಚಾ ವಿನಿರ್ಮುಚ್ಯತೇ ಏವಂ ಹೈವ ಸ ಪಾಪ್ಮನಾವಿನಿರ್ಮುಕ್ತಃ ಸ ಸಾಮಭಿರುನ್ನೀಯತೇ ಬ್ರಹ್ಮಲೋಕಂ"—ಎಂದು ಸರ್ವಪಾಪ ವಿನಿರ್ಮುಕ್ತನಿಗೆ ಪ್ರಾಪ್ಯವಾಗಿ ಹೇಳಿರುವುದು ಚತುರ್ಮುಖನ ಸ್ಥಾನವಾಗದು.

"ಏತದ್ವೈ ಸತ್ಯಕಾಮ ಪರಂ ಚಾ ಪರಂ ಚ ಬ್ರಹ್ಮಯದೋಂಕಾರಸ್ತಸ್ಮಾದ್ವಿದ್ವಾನೇತೇನೈ ವಾಯತನೇನೈಕತರಮನ್ವೇತಿ";— ಎಂಬ ಪ್ರತಿವಚನದಲ್ಲಿ, 'ಅಪರಂ'— ಅಂದರೆ ಕಾರ್ಯರೂಪಬ್ರಹ್ಮ—ಇದನ್ನು ಐಹಿಕಾ ಮುಷ್ಮಿಕತ್ವದಿಂದ ಎರಡು ಭಾಗಮಾಡಿ, ಏಕಮಾತ್ರವಾದ ಪ್ರಣವವನ್ನು ಉಪಾಸಿಸುವವರಿಗೆ ಐಹಿಕವಾದ ಮನುಷ್ಯ ಲೋಕಾ ವಾಪ್ತಿರೂಪ ಫಲವನ್ನು ಹೇಳಿ, ೨ ಮಾತ್ರೆಯುಳ್ಳ ಪ್ರಣವವನ್ನು ಉಪಾಸಿಸುವವರಿಗೆ ಅಂತರಿಕ್ಷ ಶಬ್ದದಿಂದ ಉಪಲಕ್ಷಿತವಾದ ಆಮುಷ್ಮಿಕ ಫಲವನ್ನು ಹೇಳಿ, ಪರಬ್ರಹ್ಮ ವಾಚಿಯಾದ ತ್ರಿಮಾತ್ರೆಯುಳ್ಳ ಪ್ರಣವವನ್ನು ಉಪಾಸಿಸುವವರಿಗೆ ಪರಬ್ರಹ್ಮವೇ ಪ್ರಾಪ್ಯವೆಂದು ಉಪದೇಶಿಸಿದೆಯಾದ್ದರಿಂದ ಸರ್ವವೂ ಸಮಂಜಸ.

## 5. ದಹರಾಧಿಕರಣ

### ಸೂತ್ರ—ದಹರ ಉತ್ತರೇಭ್ಯಃ ॥

[ದಹರವಿದ್ಯಾ]

**ಪ್ರತ್ಯುದಾಹೃತಿ ಸಂಗತಿ**

(೧) ಹಿಂದಿನ ಅಧಿಕರಣದಲ್ಲಿ, "ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ"— ಎಂದು ಹೇಳಲ್ಪಟ್ಟ ಪುರುಷ—ಪರಮಾತ್ಮನೆಂದು ಸಾಧಿಸಿಯಾಯಿತು. ಇಲ್ಲಿ ಪುರಿಶಯನಾದ ಆಕಾಶ ಶಬ್ದವಾಚ್ಯ ಪರಮಾತ್ಮನಲ್ಲವೆಂಬುದು ನಿರಸ್ತವಾಗಿದೆ— ಎಂದು ಸಂಗತಿ. (೨) ಹಿಂದೆ 'ಬ್ರಹ್ಮಲೋಕ' ಶಬ್ದ ಪರಮಾತ್ಮನಸ್ಥಾನಪರವೆನ್ನಲಾಯಿತು. ಅದರಂತೆಯೇ ಇಲ್ಲಿಯೂ ಬ್ರಹ್ಮಲೋಕ ಶಬ್ದ—ಬ್ರಹ್ಮಪುರ ಶಬ್ದಗಳೂ ಸ್ಥಾನಪರವೇ ಆಗಲಿ–ಎಂಬ ಶಂಕೆಯಿಂದ ಸಂಗತಿ (೩) ಪೂರ್ವತ್ರ ಅನ್ತರಿಕ್ಷ ಶಬ್ದ ಪ್ರಸಿದ್ಧಾಂತರಿಕ್ಷ ಪರವಲ್ಲವೆನ್ನಲಾಯಿತು. ಹೀಗೆಯೇ ದಹರಾಕಾಶ ಶಬ್ದವೂ ಪ್ರಸಿದ್ಧಾಕಾಶಕ್ಕಿಂತ ಬೇರೆಯಾದದ್ದು—ಎಂದು ಸಂಗತಿ.

**ಆಕ್ಷೇಪ**

ಅಕ್ಷರಾಧಿಕರಣ ಮತ್ತು ದಹರಾಧಿಕರಣಗಳೆರಡರ ವಿಷಯವಾಕ್ಯಗಳಲ್ಲಿಯೂ 'ಆಕಾಶ' ಶಬ್ದ ಶ್ರುತವಾಗಿದೆ. ಈಕ್ಷತಿ ಕರ್ಮಾಧಿಕರಣದ ವಿಷಯವಾಕ್ಯದಲ್ಲಿ 'ಅಂತರಿಕ್ಷ' ಶಬ್ದ ಶ್ರುತವಾಗಿದೆ, ಆಕಾಶಶಬ್ದವಲ್ಲ. ಆದ್ದರಿಂದ ಅಕ್ಷರಾಧಿಕರಣದ ನಂತರ ದಹರಾಧಿಕರಣ ಬರಬೇಕಿತ್ತು. ದಹರಾಧಿಕರಣವಾದ ಮೇಲೆ ಈಕ್ಷತಿ ಕರ್ಮಾಧಿಕರಣ ಬರಬೇಕಿತ್ತು —ಎಂದಲ್ಲಿ, ಅಕ್ಷರ—ಈಕ್ಷತಿ ಕರ್ಮಾಧಿಕರಣಗಳಲ್ಲಿ ಆಕಾಶ—ಅಂತರಿಕ್ಷ ಶಬ್ದವಾಚ್ಯ ವಾದುದಕ್ಕಿಂತ ಅರ್ಥಾಂತರವಾದವನು ಪರಮಾತ್ಮ—ಎಂಬ ನಿರ್ಣಯದಿಂದ ಪರಸ್ಪರ ಸಂಗತಿ ಅತಿಶಯವಾದದ್ದು. ದಹರಾಧಿಕರಣದಲ್ಲಿಯಾದರೋ—ಆಕಾಶ ಶಬ್ದವಾಚ್ಯಕ್ಕೇ ಪರಮಾತ್ಮತ್ವ ವಿವಕ್ಷಿತ. ಆದ್ದರಿಂದ ಇದು ಹಿಂದಿನ ಎರಡು ಅಧಿಕರಣಗಳಾದ ಮೇಲೆ ಬಂದಿರುವುದೇ ಯುಕ್ತ.

**ವಿಷಯವಾಕ್ಯ**

ಛಾನ್ದೋಗ್ಯದಲ್ಲಿ—"ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ. ಪುಂಡರೀಕಂವೇಶ್ಮ ದಹರೋಽಸ್ಮಿನ್ನನ್ತರ ಆಕಾಶಃ ತಸ್ಮಿನ್ ಯದನ್ತಃ ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಂ"—ಎಂಬುದು.

**ಸೂತ್ರಾರ್ಥ**

[ಉತ್ತರೇಭ್ಯಃ] = ಉತ್ತರ ವಾಕ್ಯದಲ್ಲಿ ಹೇಳಿರುವ ಪರಮಾತ್ಮನ ಅಸಾಧಾರಣ ಗುಣಗಳಿಂದ [ದಹರಃ] = ದಹರಾಕಾಶವೆಂದು ಹೇಳಲ್ಪಟ್ಟವನು (ಪರಮಾತ್ಮನೆಂದು ನಿಶ್ಚಯಿಸತಕ್ಕದ್ದು.)

**ವಿವರಣೆ**

"ಅಥ ಯದಿದಮಸ್ಮಿನ್..." ಇತ್ಯಾದಿಯಾಗಿ ಮೇಲೆ ಹೇಳಿರುವ ವಿಷಯ ವಾಕ್ಯದಲ್ಲಿ ಹೃದಯ ಪುಂಡರೀಕ ಮಧ್ಯವರ್ತಿಯಾಗಿ, ದಹರಾಕಾಶ ಶಬ್ದದಿಂದ ಹೇಳಲ್ಪಟ್ಟವನು ಜೀವನೋ? ಭೂತಾಕಾಶವೋ? ಪರಮಾತ್ಮನೋ?—ಎಂದು ಸಂಶಯ.

ಆಕಾಶವೆಂಬ ಪದ ಭೂತಾಕಾಶದಲ್ಲಿ ಅಧಿಕವಾಗಿ ಪ್ರಸಿದ್ಧವಾಗಿರುವುದರಿಂದ ಅದೇ ಇಲ್ಲಿ ಹೇಳಲ್ಪಟ್ಟದ್ದು. ಮೇಲೆ ಈ ದಹರಾಕಾಶಕ್ಕೆ ಅಪಹತಪಾಪ್ಮತ್ವಾದಿ ಗುಣಗಳನ್ನು ಹೇಳುವುದರಿಂದ ಆ ಗುಣಗಳು ಭೂತಾಕಾಶಕ್ಕೆ ಕೂಡದುದರಿಂದ ಭೂತಾಕಾಶವಾಗದು ಎಂದಲ್ಲಿ ಆ ಗುಣಗಳು ಜೀವನಿಗೆ ಪ್ರಜಾಪತಿವಾಕ್ಯದಲ್ಲಿ ಹೇಳಲ್ಪಟ್ಟಿವೆ. ಆದ್ದರಿಂದ ಜೀವನೇ ಆ ಗುಣಗಳುಳ್ಳವನಾಗಿ ಇಲ್ಲಿ ದಹರಾಕಾಶವೆಂದು ಹೇಳಲ್ಪಟ್ಟವನು—ಎಂದು ಪೂರ್ವಪಕ್ಷ.

ಪ್ರಜಾಪತಿ ವಾಕ್ಯದಲ್ಲಿ ಮೊದಲು ಅನಾದಿ ಮಾಯೆಯಿಂದ ಮುಚ್ಚಲ್ಪಟ್ಟು ಪರಮಾತ್ಮನನ್ನು ಸೇರಿದ ಮೇಲೆ ಅಭಿವ್ಯಕ್ತವಾದ ಅಪಹತಪಾಪ್ಮತ್ವಾದಿ ಗುಣಗಳುಳ್ಳ ಜೀವನು ಹೇಳಲ್ಪಟ್ಟಿದ್ದಾನೆ. ಈ ವಾಕ್ಯವಾದರೋ ಮೇಲೆ ಸರ್ವದಾ ಭಾಸಮಾನವೂ ಅತಿರೋಹಿತ ಸ್ವಭಾವವೂ ಆದ ಅಪಹತಪಾಪ್ಮತ್ವಾದಿ ಗುಣಗಳನ್ನು ದಹರಾಕಾಶಕ್ಕೆ ಹೇಳಿದೆ. ಆದ್ದರಿಂದ ಪ್ರಜಾಪತಿ ವಾಕ್ಯದಲ್ಲಿ ಹೇಳಲ್ಪಟ್ಟ ಜೀವನಿಗಿಂತ ಭಿನ್ನನಾದ ಪರಮಾತ್ಮನೇ ದಹರಾಕಾಶ ಶಬ್ದಕ್ಕೆ ಅರ್ಥವೆಂದು ಸಿದ್ಧಾಂತ.

ಸೂತ್ರ ೨—**ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಂಗಂ ಚ**

**ಸೂತ್ರಾರ್ಥ**

[ಗತಿಶಬ್ದಾಭ್ಯಾಂ] = (ಜೀವರುಗಳ) ಗಮನದಿಂದಲೂ (ಬ್ರಹ್ಮ) ಶಬ್ದದಿಂದಲೂ (ದಹರಾಕಾಶವು ಪರಬ್ರಹ್ಮವೆಂದು ನಿಶ್ಚಯಿಸಲ್ಪಟ್ಟಿದೆ.) [ತಥಾಹಿ] = ಹಾಗೆಯೇ ಜೀವರುಗಳಿಗೆ ಪರಮಾತ್ಮನಲ್ಲಿ ಗಮನವು [ದೃಷ್ಟಮ್] = ಕಾಣಲ್ಪಟ್ಟಿದೆ. [ಲಿಂಗಂ ಚ] = ಈ ವಾಕ್ಯದಲ್ಲಿ ಹೇಳುವ ಗಮನವೇ ದಹರಾಕಾಶವು ಪರಮಾತ್ಮನೆಂಬುದಕ್ಕೆ ಹೇತುವಾಗಿದೆ.

**ವಿವರಣೆ**

ಒಳಗಿರುವ ಹಣವನ್ನು ಅರಿಯದೆಯೇ ಆ ಭೂಮಿಯ ಮೇಲೆ ಜನರು ಸಂಚರಿಸುವ ಹಾಗೆ ದಿನದಿನವೂ ಸುಷುಪ್ತಿ ಕಾಲದಲ್ಲಿ ಪರಮಾತ್ಮನನ್ನು ಸೇರಿಯೂ, ನಾನು ಪರಮಾತ್ಮನೊಡನೆ ಸೇರಿದ್ದೇನೆ ಎಂದು ಜನರು ಅರಿತಿರುವುದಿಲ್ಲ—ಎಂದು ಪ್ರಕರಣಾಂತರಗಳಲ್ಲಿ ಸುಷುಪ್ತಿ ಕಾಲದಲ್ಲಿ ಜೀವರು ಪರಮಾತ್ಮನನ್ನು ಹೊಂದುವರೆಂದು ಹೇಳುವುದರಿಂದ, ಸುಷುಪ್ತಿಕಾಲದಲ್ಲಿ ಜೀವರುಗಳಿಂದ ಹೊಂದಲ್ಪಟ್ಟವನು

ಪರಮಾತ್ಮನಾಗುತ್ತಾನೆ. ಈ ಪ್ರಕರಣದಲ್ಲಿ ದಹರಾಕಾಶವನ್ನು ಸುಷುಪ್ತಿಕಾಲದಲ್ಲಿ ಜೀವರುಗಳು ಹೊಂದುತ್ತಾರೆಂದು ಹೇಳಿರುವುದರಿಂದ, ಈ ದಹರಾಕಾಶವು ಪರಮಾತ್ಮ ನೆನ್ನಲು ಅಡ್ಡಿಯಿಲ್ಲ. ಮೇಲೆಯೂ, ಈ ದಹರಾಕಾಶವನ್ನು ಸರ್ವಾಧಾರವಾದ್ದರಿಂದ ಬ್ರಹ್ಮಲೋಕವೆಂದು ಹೇಳಿದೆ. ಬ್ರಹ್ಮಲೋಕವೆಂದರೆ ಬ್ರಹ್ಮ + ಏವ + ಲೋಕಃ) ಬ್ರಹ್ಮವೇ ಲೋಕ—ಅಂದರೆ ಬ್ರಹ್ಮವೆಂದರ್ಥ. "ಏತಯಾನಿಷಾದಸ್ಥಪತಿಂ ಯಾಜ ಯೇತ್"—ಎಂಬಲ್ಲಿ ನಿಷಾದಃ + ಏವ + ಸ್ಥಪತಿಃ) ಎಂಬಂತೆ ಈ ವಿಶೇಷಣದಿಂದಲೂ, ದಹರಾಕಾಶವು ಪರಮಾತ್ಮನೆಂದು ನಿಶ್ಚಯಿಸಲ್ಪಡುವುದು.

ಸೂತ್ರ ೩—**ಧೃತೇಶ್ಚ ಮಹಿಮ್ನಃ ಅಸ್ಯಾಸ್ಮಿನ್ನುಪಲಬ್ಧೇಃ**

**ಸೂತ್ರಾರ್ಥ**

[ಅಸ್ಯ] = ಈ ಪರಮಾತ್ಮನ [ಧೃತೇಃ] = ಜಗತ್ತನ್ನು ಧರಿಸುವುದೆಂಬ [ಮಹಿಮ್ನಃ] = ಮಾಹಾತ್ಮ್ಯಕ್ಕೆ [ಅಸ್ಮಿನ್] = ಈ ದಹರಾಕಾಶದಲ್ಲಿ [ಉಪಲಬ್ಧೇಃ] = = ಉಲ್ಲೇಖವಿರುವುದರಿಂದಲೂ (ದಹರಾಕಾಶವು ಪರಮಾತ್ಮಾ).

**ವಿವರಣೆ**

ಪ್ರಕರಣಾಂತರಗಳಲ್ಲಿ ಪರಮಾತ್ಮನೇ ಈ ಜಗತ್ತನ್ನು ಧರಿಸಿದ್ದಾನೆಂದು ಹೇಳಿದೆ. ಇಲ್ಲಿ ದಹರಾಕಾಶ ಜಗತ್ತನ್ನು ಧರಿಸಿರುವುದೆಂದು ಹೇಳಿರುವುದರಿಂದ, ಈ ದಹರಾಕಾಶವು ಪರಮಾತ್ಮವೆಂದು ನಿಶ್ಚಯಿಸಲ್ಪಡವುದು.

ಸೂತ್ರ ೪—**ಪ್ರಸಿದ್ಧೇಶ್ಚ**

**ಸೂತ್ರಾರ್ಥ**

ಆಕಾಶ ಶಬ್ದಕ್ಕೆ ಪರಮಾತ್ಮನಲ್ಲಿಯೂ ಪ್ರಸಿದ್ಧಿಯಿರುವುದರಿಂದಲೂ, (ದಹರಾಕಾಶ ಪರಮಾತ್ಮಾ).

**ವಿವರಣೆ**

"ಆಕಾಶ ಆನನ್ದೋ ನಸ್ಯಾತ್," — ಇತ್ಯಾದಿಯಾದ ಹಲವೆಡೆಗಳಲ್ಲಿ ಆಕಾಶ ಪದವು ಪರಮಾತ್ಮವಾಚಕವಾಗಿ ಪ್ರಯೋಗಿಸಲ್ಪಟ್ಟಿದೆ. ಆದ್ದರಿಂದ ಆಕಾಶವೆಂದು ಪರಮಾತ್ಮನಿಗೂ ಹೆಸರುಂಟು. ಆದರೆ ಪರಮಾತ್ಮನನ್ನೂ ಭೂತಾಕಾಶವನ್ನೂ— ಇವೆರಡನ್ನೂ ಹೇಳುವ ಆಕಾಶ ಪದವು ಇಲ್ಲಿ ಯಾರನ್ನು ಹೇಳುವುದಾಗಿ ನಿಶ್ಚಯಿಸ ಬೇಕೆಂದಲ್ಲಿ, ಇಲ್ಲಿ ದಹರಾಕಾಶಕ್ಕೆ ಪರಮಾತ್ಮನ ಗುಣಗಳನ್ನು ವಿಶೇಷಿಸಿ ಹೇಳಿರುವುದ ರಿಂದ ಪರಮಾತ್ಮನನ್ನೇ ಹೇಳುವುದೆಂದು ನಿಶ್ಚಯಿಸತಕ್ಕದ್ದು.

ಸೂತ್ರ ೫—**ಇತರ ಪರಾಮರ್ಶಾತ್ ಸ ಇತಿ ಚೇನ್ನಾ ಸಂಭವಾತ್**

**ಸೂತ್ರಾರ್ಥ**

[ಇತರ ಪರಾಮರ್ಶಾತ್] = ಪರಮಾತ್ಮನಿಗಿಂತ ಬೇರೆಯಾದ ಜೀವನನ್ನೂ (ಈ ಪ್ರಕರಣದಲ್ಲಿ) ಹೇಳುವುದರಿಂದ [ಸಃ] = ಆ ಜೀವನು (ದಹರಾಕಾಶ ಪದಕ್ಕೆ ಅರ್ಥ) [ಇತಿ ಚೇತ್] = ಎಂದಲ್ಲಿ, [ಅಸಂಭವಾತ್] = ಇವನಿಗೆ ಹೇಳಲ್ಪಟ್ಟ

ಎರಡು ವಾಕ್ಯಗಳಿಗೂ ಸಾಮರಸ್ಯವನ್ನೇ ಸೂತ್ರಕಾರರೂ, "ಉತ್ತರಾಚ್ಚೇದಾವಿರ್ಭೂತ ಸ್ವರೂಪಸ್ತು," "ಅನ್ಯಾರ್ಥಶ್ಚಪರಾಮರ್ಶಃ"—ಇತ್ಯಾದಿ ಸೂತ್ರಗಳಿಂದ, ತೋರಿಸಿದ್ದಾರೆ. ಆದ್ದರಿಂದ, ಈ ವಾಕ್ಯಗಳಿಗೆ ಪರಸ್ಪರ ಭೇದವನ್ನಾಗಲಿ, ಬಾಧವನ್ನಾಗಲಿ, ಪ್ರತ್ಯಗಾತ್ಮ ವಿದ್ಯೆ ಸ್ವತಂತ್ರ ವಿದ್ಯೆಯೆಂಬುದೇ ಮುಂತಾದ್ದನ್ನಾಗಲಿ ಕಲ್ಪಿಸಕೂಡದು.

## 6. ಪ್ರಮಿತಾಧಿಕರಣ

ಸೂತ್ರ—**ಶಬ್ದಾದೇವ ಪ್ರಮಿತಃ**

[ಅಂಗುಷ್ಠ ಪ್ರಮಿತವಿದ್ಯಾ]

**ಸಂಗತಿ**

ದಹರವಿದ್ಯೆಯಲ್ಲಿ "ಅಲ್ಪಶ್ರುತೇರಿತಿಚೇತ್ತದುಕ್ತಂ"— ಎಂಬಲ್ಲಿ ಅಲ್ಪ ಪರಿಮಾಣತ್ವವು ಭಗವಂತನಿಗೂ ಉಕ್ತಂ. ಅಲ್ಪಪರಿಮಾಣತ್ವ ವಿಶೇಷವು ಪರಮಾತ್ಮ ವ್ಯತಿರಿಕ್ತವಾದುದಕ್ಕೂ ಶ್ರುತವಾಗಿದೆ–ಇತಿ ಪ್ರತ್ಯುದಾಹೃತಿ ಸಂಗತಿಃ.

**ವಿಷಯವಾಕ್ಯಂ**

ಕಠವಲ್ಲೀಷು—"ಅಂಗುಷ್ಠಮಾತ್ರಃ ಪುರುಷೋಮಧ್ಯ ಆತ್ಮನಿ ತಿಷ್ಠತಿ। ಈಶಾನೋ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ಏತದ್ವೈತತ್," "ಅಂಗುಷ್ಠ ಮಾತ್ರಃ ಪುರುಷೋ ಜ್ಯೋತಿರಿವಾ ಧೂಮಕಃ। ಈಶಾನೋ ಭೂತ ಭವ್ಯಸ್ಯ ಸ ಏವಾ ದ್ಯಸ ಉಶ್ವಃ। ಏತದ್ವೈತತ್," "ಅಂಗುಷ್ಠಮಾತ್ರಃ ಪುರುಷೋಽನ್ತರಾತ್ಮಾಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ। ತಂಸ್ವಾಚ್ಛರೀರಾತ್ಪ್ರವೃಹೇನ್ಮುಂಜಾದಿವೈಷೀಕಾಂ ಧೈರ್ಯೇಣ। ತಂ ವಿದ್ಯಾಚ್ಛುಕ್ರಮಮೃತಂ,"—ಎಂದು, ಹೇಳಲ್ಪಟ್ಟಿದೆ.

**ಸೂತ್ರಾರ್ಥ**

[ಶಬ್ದಾತ್ ಏವ] = ಪರಮಾತ್ಮವಾಚಕ ಶಬ್ದದಿಂದಲೇ [ಪ್ರಮಿತಃ] = ಅಂಗುಷ್ಠ ಮಾತ್ರ ಪ್ರಮಾಣವಾಗಿ ಹೇಳಲ್ಪಟ್ಟವನು (ಪರಮಾತ್ಮಾ ಎಂದು ನಿಶ್ಚಯಿಸಲ್ಪಟ್ಟಿದ್ದಾನೆ).

**ವಿವರಣೆ**

ಈ ವಿಷಯವಾಕ್ಯದಲ್ಲಿ ಹೆಬ್ಬೆಟ್ಟಿನ ಅಳತೆಯುಳ್ಳವನೆಂದು ಹೇಳಲ್ಪಟ್ಟವನು ಜೀವನೋ ಪರಮಾತ್ಮನೋ?—ಎಂದು ಸಂಶಯ.

"ಪ್ರಾಣಾಧಿಪಸ್ಸಂಚರತಿ ಸ್ವಕರ್ಮಭಿರಂಗುಷ್ಠಮಾತ್ರಃ"—ಎಂದು ಸ್ಪಷ್ಟವಾಗಿಯೇ ಜೀವಪರವಾಗಿರುವ ವಾಕ್ಯದಲ್ಲಿ ಜೀವನು ಹೆಬ್ಬೆರಳಿನ ಅಳತೆಯುಳ್ಳವನಾಗಿ ಹೇಳಲ್ಪಟ್ಟಿರುವುದರಿಂದ, ಜೀವಪರತೆಯು ಅಸ್ಪಷ್ಟವಾಗಿರುವ ಮೇಲ್ಕಂಡ ವಿಷಯವಾಕ್ಯದಲ್ಲಿಯೂ ಹೆಬ್ಬೆರಳಿನ ಅಳತೆಯುಳ್ಳವನಾಗಿ ಹೇಳಲ್ಪಟ್ಟವನು ಜೀವನೇ—ಎಂದು ಪೂರ್ವಪಕ್ಷ.

"ಪ್ರಾಣಾಧಿಪಸ್ಸಂಚರತಿ ಸ್ವಕರ್ಮಭಿಃ"—ಅಂದರೆ, ತನ್ನ ಪುಣ್ಯ–ಪಾಪರೂಪ ಕರ್ಮಗಳಿಂದ ಪ್ರಾಣಾಧಿಪನು ಸಂಚರಿಸುತ್ತಾನೆ, ಎಂಬಲ್ಲಿ, 'ತನ್ನ ಕರ್ಮಗಳಿಂದ'—ಎಂಬ ಗುರುತಿನಮೂಲಕ ಆ ವಾಕ್ಯದಲ್ಲಿ ಹೇಳಲ್ಪಟ್ಟವನು ಜೀವ ನೆಂದು ನಿಶ್ಚಯಿಸುವ ಹಾಗೆಯೇ

"ಅಂಗುಷ್ಠಮಾತ್ರಃ ಪುರುಷಃ,"—ಎಂಬ ವಾಕ್ಯದಲ್ಲಿ, "ಈಶಾನೋ ಭೂತಭವ್ಯಸ್ಯ,"—ಅಂದರೆ, ತ್ರಿಕಾಲವರ್ತಿಯಾದ ಸಕಲ ವಸ್ತುಗಳಿಗೂ ನಿಯಾಮಕನೆಂದು ಪರಮಾತ್ಮನ ಲಕ್ಷಣವನ್ನು ಹೇಳಿರುವುದರಿಂದ ಈ ಲಕ್ಷಣದ ಮೂಲಕ ಈ ವಾಕ್ಯದಲ್ಲಿ ಹೆಬ್ಬೆರಳಿನ ಅಳತೆಯುಳ್ಳವನಾಗಿ ಹೇಳಲ್ಪಟ್ಟವನು ಪರಮಾತ್ಮನೆಂದೇ ನಿಶ್ಚಯಿಸಬೇಕು—ಎಂಬುದು ಸಿದ್ಧಾನ್ತ.

ಸೂತ್ರ ೨— **ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್**

**ಸೂತ್ರಾರ್ಥ**

[ಮನುಷ್ಯಾಧಿಕಾರತ್ವಾತ್] = (ಶಾಸ್ತ್ರವು) ಮನುಷ್ಯನಿಗೆ ಉಪಾಸನವನ್ನು ವಿಧಿಸುವುದಕ್ಕಾಗಿ ಪ್ರವರ್ತಿತವಾದುದರಿಂದ, [ಹೃದ್ಯಪೇಕ್ಷಯಾ ತು] = (ಮನುಷ್ಯರ) ಹೃದಯಾನುಗುಣವಾಗಿಯೇ (ಪರಮಾತ್ಮನನ್ನು ಹೆಬ್ಬೆರಳಿನ ಅಳತೆಯುಳ್ಳವನನ್ನಾಗಿ ಹೇಳಿದೆ).

**ವಿವರಣೆ**

ಪರಮಾತ್ಮ ಅಪರಿಚ್ಛಿನ್ನನಾಗಿರುವಲ್ಲಿ, ಅವನನ್ನು ಹೆಬ್ಬೆರಳಿನ ಅಳತೆಯುಳ್ಳವನೆಂದು ಹೇಳುವುದು ಯುಕ್ತವೋ?—ಎಂದರೆ, ಶಾಸ್ತ್ರ, ಮನುಷ್ಯರಿಗೆ ಪರಮಾತ್ಮೋಪಾಸನವನ್ನು ವಿಧಿಸುತ್ತದೆ. ಉಪಾಸನವೆಂಬುದು ಹೃದಯದಲ್ಲಿ ಧ್ಯಾನಿಸುವಿಕೆ. ಮನುಷ್ಯರ ಹೃದಯ ಹೆಬ್ಬೆರಳಿನ ಅಳತೆಯುಳ್ಳದ್ದರಿಂದ, ಅಷ್ಟಗಲವುಳ್ಳ ಹೃದಯದಲ್ಲಿ ಅಷ್ಟು ಅಳತೆಯುಳ್ಳ ಸ್ವರೂಪವನ್ನೇ ಧ್ಯಾನಿಸಬಹುದಾದು ದರಿಂದ, ಪರಮಾತ್ಮನನ್ನು ಹೆಬ್ಬೆರಳಿನ ಅಳತೆಯುಳ್ಳವನನನ್ನಾಗಿ ಹೇಳುವುದು ಸರಿ—ಎಂದು ಸಿದ್ಧಾನ್ತ.

## 7. ದೇವತಾಧಿಕರಣ

ಸೂತ್ರ—**ತದುಪರ್ಯಪಿ ಬಾದರಾಯಣ ಸ್ಸಂಭವಾತ್**

[ದೇವೋಪಾಸ್ಯ ಜ್ಯೋತಿರ್ವಿದ್ಯಾ]

**ಸಂಗತಿ**

ಹಿಂದಿನ ಅಧಿಕರಣದಲ್ಲಿ "ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್"—ಎಂದು ಬ್ರಹ್ಮೋಪಾಸನದಲ್ಲಿ ಮನುಷ್ಯರಿಗೆ ಅಧಿಕಾರವೆನ್ನಲಾಯಿತು ಹಾಗಾದಲ್ಲಿ ತಿರ್ಯಕ್ಕಿಗೆ ಮಾತ್ರವಲ್ಲದೆ ದೇವತೆಗಳಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂಬ ಶಂಕೆಯಿಂದ ಸಂಗತಿ—ಇದು ಅಪವಾದ ಸಂಗತಿ

**ಸೂತ್ರಾರ್ಥ**

[ಸಂಭವಾತ್] = ಉಪಾಸನ ಸಾಮಗ್ರಿಯುಂಟಾದ್ದರಿಂದ, [ತದುಪರಿ, ಅಪಿ] = ಮನುಷ್ಯರಿಗೆ ಮೇಲುಳ್ಳ ದೇವತೆಗಳಿಗೂ (ಉಪಾಸನದಲ್ಲಿ ಅಧಿಕಾರವುಂಟೆಂದು] [ಬಾದರಾಯಣಃ] = ಬಾದರಾಯಣರು (ಹೇಳುತ್ತಾರೆ).

**ವಿವರಣೆ**

ನಿತ್ಯಕರ್ಮಾನುಷ್ಠಾನದಿಂದ ರಾಗದ್ವೇಷಾದಿಗಳು ನಶಿಸಿ ನಿರ್ಮಲ ಚಿತ್ತವುಳ್ಳವನಿಗೆ ಉಪಾಸನದಲ್ಲಿ ಅಧಿಕಾರವುಂಟು. ದೇವತೆಗಳಿಗಾದರೋ—ಶರೀರವಿಲ್ಲದ್ದರಿಂದ ನಿತ್ಯಕರ್ಮಾನುಷ್ಠಾನ ಯೋಗ್ಯತೆಯೂ, ಅದರಿಂದ ಉಂಟಾಗಬೇಕಾದ ಚಿತ್ತ

ಗುಣಗಳು ಜೀವನಿಗೆ ಸಂಭವಿಸುವುದಿಲ್ಲವಾದ್ದರಿಂದ, [ನ] = ಜೀವನು ದಹರಾಕಾಶವಲ್ಲ. ದಹರವಾಕ್ಯ ಪ್ರಕರಣದಲ್ಲಿ ಹೇಳಲ್ಪಟ್ಟ ಪ್ರಜಾಪತಿವಾಕ್ಯ ದಹರವಾಕ್ಯಕ್ಕೆ ಶೇಷಭೂತವೇ ಆದದ್ದು. ಆ ಪ್ರಜಾಪತಿವಾಕ್ಯದಲ್ಲಿ ಹೇಳಿರುವುದೂ. ಪರಮಪುರುಷನ ಪ್ರಸಾದ ದಿಂದ ಲಬ್ಧವಾದ ತತ್ಸಾಮ್ಯದಶೆಯಿಂದ ಅಪಹತಪಾಪ್ಮತ್ವಾದಿ ಗುಣಗಳಿಂದ ಪರಿಷ್ಕೃತ ನಾದ ಜೀವನೇ.

**ವಿವರಣೆ**

ಈ ವಾಕ್ಯದಲ್ಲಿ ಜೀವನೇ ಪ್ರಸ್ತಾಪಿಸಲ್ಪಟ್ಟಿರುವುದರಿಂದ, ಅವನೇ ದಹರಾಕಾಶಕ್ಕೆ ಅರ್ಥವಾಗಬಹುದು ಎಂಬ ಶಂಕೆ ಕೂಡದು. ಏಕೆಂದರೆ, ಈ ದಹರಾ ಕಾಶಕ್ಕೆ ಹೇಳಿದ ಅಪಹತಪಾಪ್ಮತ್ವಾದಿ ಗುಣಗಳು ಪರಮಾತ್ಮನಿಗೇ ಯುಕ್ತವೇ ಹೊರತು ಜೀವನಿಗೆ ಅಲ್ಲ. ಆದ್ದರಿಂದ ದಹರಾಕಾಶ ಜೀವನಲ್ಲ.

ಸೂತ್ರ ೬—**ಉತ್ತರಾಚ್ಚೇದಾವಿರ್ಭೂತ ಸ್ವರೂಪಸ್ತು**

**ಸೂತ್ರಾರ್ಥ**

[ಉತ್ತರಾತ್ ಚೇತ್] = ಮೇಲಿನ ವಾಕ್ಯದಿಂದ (ಅಪಹತಪಾಪ್ಮತ್ವಾದಿ ಗುಣಗಳುಳ್ಳ) ಜೀವನು ತೋರುವನೆಂದಲ್ಲಿ, [ಆವಿರ್ಭೂತಸ್ವರೂಪಃ ತು] = ಅಭಿವ್ಯಕ್ತವಾದ ಸ್ವರೂಪವುಳ್ಳ ಜೀವನೇ ಆ ವಾಕ್ಯದಲ್ಲಿ ತೋರುವನು.

**ವಿವರಣೆ**

ಮೇಲೆ ಪ್ರಜಾಪತಿವಾಕ್ಯದಲ್ಲಿ ಅಪಹತಪಾಪ್ಮತ್ವಾದಿ ಗುಣಗಳು ಜೀವ ನಿಗೂ ಉಂಟೆಂದು ತೋರುವುದರಿಂದ ಆ ಗುಣಗಳುಳ್ಳದಾಗಿ ಹೇಳಲ್ಪಟ್ಟ ದಹರಾ ಕಾಶವೂ ಜೀವನೇ ಆಗಬಹುದೆಂದು ಶಂಕಿಸಕೂಡದು. ಏಕೆಂದರೆ:—ಅಲ್ಲಿ ಜೀವನಿಗೆ ಪುಣ್ಯಪಾಪರೂಪ ಕರ್ಮಗಳು ಕಳೆದ ಮೇಲೆ ಅಪಹತಪಾಪ್ಮತ್ವಾದಿ ಗುಣಗಳು ಅಭಿವ್ಯಕ್ತಗಳಾಗುವುದೆಂದು ಹೇಳಿದೆ. ಆದ್ದರಿಂದ, ಅಪಹತಪಾಪ್ಮತ್ವಾದಿ ಗುಣಗಳುಳ್ಳ ದ್ದೆಂದು ಹೇಳಲ್ಪಟ್ಟ ದಹರಾಕಾಶ ಜೀವನಲ್ಲ.

ಸೂತ್ರ ೭—**ಅನ್ಯಾರ್ಥಶ್ಚ ಪರಾಮರ್ಶಃ**

**ಸೂತ್ರಾರ್ಥ**

[ಪರಾಮರ್ಶಃ] = (ಇಲ್ಲಿ) ಜೀವನನ್ನು ಹೇಳುವುದು [ಅನ್ಯಾರ್ಥಃ ಚ] = ಬೇರೆ ಪ್ರಯೋಜನವುಳ್ಳದ್ದು.

**ವಿವರಣೆ**

ಆದರೆ, ಈ ಪ್ರಕರಣದಲ್ಲಿ ಜೀವನನ್ನು ಹೇಳಿರುವುದೇಕೆ?—ಎಂದರೆ, ತಿರೋಹಿತ ಸ್ವರೂಪನಾದ ಜೀವನು ದಹರಾಕಾಶಪದ ವಾಚ್ಯನಾದ ಪರಮಾತ್ಮನನ್ನು ಸೇರಿ ಸ್ವಸ್ವರೂಪಾವಿರ್ಭಾವವನ್ನು ಪಡೆಯುವನು—ಎಂದು ದಹರಾಕಾಶಕ್ಕೆ ಜಗ ದಾಧಾರತ್ವದಂತೆ ಜೀವ ಸ್ವರೂಪಾವಿರ್ಭಾವಕ್ಕೂ ಕಾರಣತ್ವವುಂಟೆಂದು ಹೇಳುವುದಕ್ಕಾಗಿ ಈ ಪ್ರಕರಣದಲ್ಲಿ ಜೀವನನ್ನು ಹೇಳಿದೆ. ಅಷ್ಟನ್ನು ಹೇಳಿದ ಮಾತ್ರಕ್ಕೇ ಜೀವನೇ ದಹರಾ ಕಾಶವೆಂದು ನಿಶ್ಚಯಿಸಕೂಡದು.

ಸೂತ್ರ ೮—**ಅಲ್ಪಶ್ರುತೇರಿತಿ ಚೇತ್ತದುಕ್ತಮ್**

**ಸೂತ್ರಾರ್ಥ**

[ಅಲ್ಪಶ್ರುತೇಃ] = (ದಹರಾಕಾಶ) ಅಲ್ಪಪರಿಮಾಣವುಳ್ಳದ್ದೆಂದು ಹೇಳುವುದರಿಂದ (ಆ ಪರಿಮಾಣವುಳ್ಳ ಜೀವನೇಯಾಗಬೇಕು. ಮಹತ್ಪರಿಮಾಣವುಳ್ಳ ಪರಮಾತ್ಮ ಆಗುವುದಕ್ಕಿಲ್ಲ) [ಇತಿ ಚೇತ್] = ಎಂದರೆ, [ತತ್] = ಈ ಪೂರ್ವಪಕ್ಷಕ್ಕೆ ಉತ್ತರ [ಉಕ್ತಂ] = (ಮಹತ್ಪರಿಮಾಣವುಳ್ಳ ಪರಮಾತ್ಮನಿಗೂ ಅಲ್ಪಪರಿಮಾಣವು ಧ್ಯಾನಾರ್ಥವಾಗಿ ಹೇಳಿದೆಯೆಂದು ಮೊದಲೇ) ಹೇಳಲ್ಪಟ್ಟಿದೆ.

ಸೂತ್ರ ೯—**ಅನುಕೃತೇಸ್ತಸ್ಯ ಚ**

**ಸೂತ್ರಾರ್ಥ**

(ತಸ್ಯ) = ಆ ಪರಮಾತ್ಮನ [ಅನುಕೃತೇಃ ಚ] ಸಾಮ್ಯವನ್ನು ಹೊಂದುವುದರಿಂದ (ಜೀವನು ಆವಿರ್ಭೂತ ಸ್ವರೂಪನಾಗಿ ಅಪಹತಪಾಪ್ಮತ್ವಾದಿ ಗುಣಗಳುಳ್ಳವನಾಗುವನು ಎಂದು ಹೇಳುವುದರಿಂದ ದಹರಾಕಾಶದೊಡನೆ ಸಾಮ್ಯ ಹೊಂದುವ ಜೀವನು ದಹರಾಕಾಶವಾಗಲಾರನು.

ಸೂತ್ರ ೧೦—**ಅಪಿಸ್ಮರ್ಯತೇ**

**ಸೂತ್ರಾರ್ಥ**

[ಸ್ಮರ್ಯತೇ, ಅಪಿ] = ಜೀವನು ಪರಮಾತ್ಮೋಪಾಸನದಿಂದ ಪರಮಾತ್ಮನೊಂದಿಗೆ ಸಾಮ್ಯವನ್ನು ಹೊಂದುವನೆಂದು. "ಇದಂ ಜ್ಞಾನಮುಪಾಶ್ರಿತ್ಯಮಮ ಸಾಧರ್ಮ್ಯಮಾಗತಾಃ।"—ಎಂದು ಗೀತೆಯಲ್ಲಿಯೂ ಹೇಳಿದೆ.

ಹಾಗಾದರೆ ಪ್ರಜಾಪತಿವಾಕ್ಯ ದಹರವಾಕ್ಯಕ್ಕಿಂತ ಭಿನ್ನವೇ ಆದಂತೆ. ಅದರಲ್ಲಿ ಪ್ರತಿಪಾದ್ಯನಾದ ಜೀವನೂ ಸ್ವತಂತ್ರನೇ. ಹೀಗೆ ನಿರಾಕಾಂಕ್ಷಗಳಾದ ಇವೆರಡು ವಾಕ್ಯಗಳಿಗೂ ಪರಸ್ಪರ ಸಂಬಂಧವನ್ನೇಕೆ ಉಪಪಾದಿಸಿದ್ದೀರಿ? ಎಂದು ಶಂಕಿಸಿದಲ್ಲಿ—ಉತ್ತರ:—ಇಲ್ಲಿ ನಾವು ಆಕಾಂಕ್ಷೆಯನ್ನು ಪರಿಕಲ್ಪಿಸಿಲ್ಲ. ವಾಕ್ಯಸ್ವಭಾವದಿಂದಲೇ ಇದು ಸಿದ್ಧ. ಹಿಂದಿನ ವಾಕ್ಯದಲ್ಲಿ ಹೇಳಿದ ಭಗವಂತ ಮೋಕ್ಷಪ್ರದನೆಂದು ಪ್ರತಿಪಾದಿಸುವುದಕ್ಕಾಗಿ ಜೀವನನ್ನು "ಸ ಏಷ ಸಂಪ್ರಸಾದೋಽಸ್ಮಾತ್ ಶರೀರಾತ್ ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಏಷ ಆತ್ಮೇತಿಹೋವಾ ಚ ಏತದಮೃತಮಭಯಮೇತದ್ಬ್ರಹ್ಮ"—ಎಂದು ಹೇಳಿದೆ. "ಸಂಪ್ರಸಾದ"—ಎಂದರೆ ಜೀವ. ಭಗವತ್ಸಂಬಂಧ ಜ್ಞಾನ ರಸಿಕತೆಯಿಂದ ಪ್ರಸನ್ನ ಸ್ವಭಾವವುಳ್ಳವನಾದ್ದರಿಂದ ಜೀವನು ಇಲ್ಲಿ ಸಂಪ್ರಸಾದನೆನ್ನಲ್ಪಟ್ಟಿದ್ದಾನೆ. ಉತ್ತರತ್ರ ಪ್ರಜಾಪತಿ ವಾಕ್ಯದಲ್ಲಿಯೂ ಪ್ರತಿಪಾದ್ಯನಾದ ಜೀವನಿಗೆ ಪ್ರಾಪ್ಯವಿಶೇಷವನ್ನು ನಿರ್ಧರಿಸುವುದಕ್ಕಾಗಿ ಆ ವಾಕ್ಯದಲ್ಲಿ ಪರಮಾತ್ಮ ಪರಿಪಠಿತನಾಗಿದ್ದಾನೆ. ಹೀಗೆ ಹಿಂದಿನ ಮತ್ತು ಮುಂದಿನ ವಾಕ್ಯಗಳೆರಡಕ್ಕೂ ಆಕಾಂಕ್ಷೆ, ಆಸಕ್ತಿ ಯೋಗ್ಯತೆಗಳಿಂದ ಪರಮಾತ್ಮ—ಜೀವಾತ್ಮರಿಬ್ಬರಿಗೂ ವಿಷಯ ಸಮನ್ವಿತವಾಗುವುದರಿಂದ ಅವಕ್ಕೆ ವಾಕ್ಯ ಭೇದವನ್ನು ಪರಿಕಲ್ಪಿಸಕೂಡದು—"ಸಂಭವತ್ಯೇಕವಾಕ್ಯತ್ವೇ ವಾಕ್ಯಭೇದಸ್ತು ನೇಷ್ಯತೇ"—ಎಂದು ನ್ಯಾಯವಿದೆ. ಹಾಗೆಯೇ ಪೂರ್ವೋತ್ತರ ವಾಕ್ಯಗಳಿಗೆ ಅನ್ಯೋನ್ಯ ಬಾಧವೂ ಶಂಕಿಸಲ್ಪಡತಕ್ಕದ್ದಲ್ಲ. ನೈರಪೇಕ್ಷ್ಯವೂ ಕಲ್ಪಿಸಲ್ಪಡತಕ್ಕದ್ದಲ್ಲ. ಈ

ವಾದ ಬ್ರಹ್ಮಚರ್ಯವೂ ದೇವತೆಗಳಿಗೆ ಉಂಟೆಂದು "ಏಕಶತಂಹವೈ ವರ್ಷಾಣಿ ಮಘವಾನ್ ಪ್ರಜಾಪತೌ ಬ್ರಹ್ಮಚರ್ಯಮುವಾಸ,"—ಇತ್ಯಾದಿಯಲ್ಲಿ ಶ್ರುತವಾಗಿದೆ. ಯಷ್ಟವ್ಯವಾದ ದೇವತಾಂತರವಿಲ್ಲದ್ದರಿಂದ ಯಜನ ಉಪಪನ್ನವೆಂಬುದೂ ಸರಿಯಲ್ಲ. ಭಗವಂತನೇ ನೇರವಾಗಿ ವಿಶೇಷ ಜ್ಞಾನ ಶಕ್ತ್ಯೈಶ್ವರ್ಯವುಳ್ಳವರಿಗೆ ಯಷ್ಟವ್ಯನಾಗಿದ್ದಾನೆ. ಅಗ್ನೀಂದ್ರಾದಿಗಳೂ ಆಯಾ ಯಜ್ಞಭಾಗಿಗಳಾಗಿರುವುದು ಆ ಭಗವಂತನ ಅನುಗ್ರಹದಿಂದಲೇ. ಆದ್ದರಿಂದ ದೇವತೆಗಳಿಗೆ ಕರ್ಮಾಧಿಕಾರವಿಲ್ಲದ್ದರಿಂದ ವಿದ್ಯಾಧಿಕಾರವಿಲ್ಲ ಅಥವಾ ವಿದ್ಯಾಮಾತ್ರದಲ್ಲಿ ಅಧಿಕಾರವೆಂಬುದು ಸರಿಯಲ್ಲ. ಸಾಂಗಬ್ರಹ್ಮವಿದ್ಯೆಯ ಅನುಷ್ಠಾನ ಸಾಮರ್ಥ್ಯವಿರುವುದರಿಂದ ದೇವತೆಗಳಿಗೂ ಬ್ರಹ್ಮವಿದ್ಯಾಧಿಕಾರವುಂಟೆಂಬುದು ಸಿದ್ಧ.

## ಸೂತ್ರ ೨—"**ವಿರೋಧಃ ಕರ್ಮಣೀತಿ ಚೇನ್ನಾನೇಕ ಪ್ರತಿ ಪತ್ತೇರ್ದರ್ಶನಾತ್**"

### ಸೂತ್ರಾರ್ಥ

[ಕರ್ಮಣಿ] = (ದೇವತೆಗಳಿಗೆ ಶರೀರವಿದೆಯೆಂದು ಒಪ್ಪಿಕೊಂಡಲ್ಲಿ) ಯಾಗಾದಿ ಕ್ರಿಯೆಯಲ್ಲಿ [ವಿರೋಧಃ] = ಅನುಪಪತ್ತಿ (ಸಂಭವಿಸುವುದು) [ಇತಿ ಚೇತ್] = ಎಂದಲ್ಲಿ [ಅನೇಕ ಪ್ರತಿಪತ್ತೇಃ] = (ದೇವತೆಗಳಿಗೆ) ಅನೇಕ ಶರೀರ ಪರಿಗ್ರಹವನ್ನು [ದರ್ಶನಾತ್] = ಕಾಣುವುದರಿಂದ = [ನ] = ಆ ವಿರೋಧ ಬರುವುದಿಲ್ಲ.

### ವಿವರಣೆ

ದೇವತೆಗಳಿಗೆ ಶರೀರವನ್ನು ಒಪ್ಪಿಕೊಂಡಲ್ಲಿ ಒಂದೇ ಕಾಲದಲ್ಲಿ ಅನೇಕ ಕಡೆಗಳಲ್ಲಿ ಯಾಗವನ್ನು ಮಾಡುವಾಗ ಆಯಾ ಕಡೆಗಳಲ್ಲಿ ಹವಿಸ್ಸನ್ನು ತೆಗೆದುಕೊಳ್ಳುವುದಕ್ಕಾಗಿ ಹೋಗಬೇಕಾಗಿ ಬರುವುದರಿಂದ ಒಂದು ಶರೀರದಿಂದಲೇ ಆಯಾ ಕಡೆಗಳಿಗೆ ಹೋಗಲು ಆಗುವುದಿಲ್ಲ. ಆದ್ದರಿಂದ ಅವರಿಗೆ ಶರೀರವನ್ನು ಒಪ್ಪಿಕೊಳ್ಳಕೂಡದು—ಎಂದಲ್ಲಿ, ತಪೋಮಹಿಮೆಯುಳ್ಳ ಸೌಭರಿ ಮುಂತಾದವರೂ ಅನೇಕ ಶರೀರಗಳನ್ನು ಒಂದೇ ಕಾಲದಲ್ಲಿ ಹೊಂದಿದ್ದುದನ್ನು ಕಾಣುವುದರಿಂದ, ಅದರಂತೆಯೇ ದೇವತೆಗಳೂ ಒಂದೇ ಕಾಲದಲ್ಲಿ, ಅನೇಕ ಶರೀರಗಳನ್ನು ಪರಿಗ್ರಹಿಸಿಕೊಂಡು ಅನೇಕ ಕಡೆಗಳಿಗೆ ಹೋಗಬಹುದಾದ್ದರಿಂದ ಇದರಲ್ಲಿ ವಿರೋಧವೊಂದೂ ಇಲ್ಲ.

## ಸೂತ್ರ ೩—**ಶಬ್ದ ಇತಿ ಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಂ**

### ಸೂತ್ರಾರ್ಥ

[**ಶಬ್ದೇ**] = (ಶರೀರವನ್ನೊಪ್ಪಿಕೊಂಡಲ್ಲಿ) ವೈದಿಕ ಶಬ್ದದಲ್ಲಿ (ವಿರೋಧ ಬರುವುದು) [ಇತಿ ಚೇತ್] = ಎಂದರೆ, [ಅತಃ ಪ್ರಭವಾತ್] = (ಇಂದ್ರಾದಿಗಳು) ಈ ಇಂದ್ರಾದಿ ವೈದಿಕ ಪದದಿಂದ ಉಂಟಾಗುವುದರಿಂದ [ನ] = ಆ ವಿರೋಧವೂ ಇಲ್ಲ. [ಪ್ರತ್ಯಕ್ಷಾನುಮಾನಾಭ್ಯಾಂ] = ಶ್ರುತಿ ಸ್ಮೃತಿಗಳಿಂದ ಇಂದ್ರಾದಿಗಳು ವೇದಶಬ್ದದಿಂದ ಪುನಃ ಪುನಃ ಉಂಟಾಗುವರೆಂದು ನಿಶ್ಚಯಿಸಲ್ಪಟ್ಟಿದೆ.

**ವಿವರಣೆ**

ದೇವತೆಗಳಿಗೆ ಏಕಕಾಲದಲ್ಲಿ ಅನೇಕ ಶರೀರಗಳನ್ನೊಪ್ಪಿಕೊಳ್ಳುವುದರಿಂದ ಮೇಲೆ ಹೇಳಿದ ವಿರೋಧ ತಪ್ಪಿದಾಗ್ಯೂ, ವೇದ ಅರ್ಥಶೂನ್ಯವೆಂಬ ವಿರೋಧ ತಪ್ಪದು. ಹೇಗೆಂದರೆ:—ಅವರಿಗೆ ಶರೀರವನ್ನು ಒಪ್ಪಿಕೊಂಡರೆ ಆ ಶರೀರ ಸಾವಯುವವಾಗಿರತಕ್ಕದ್ದು. ಆಗ್ಗೆ ಅದು ಅನಿತ್ಯ. ಹೀಗಾದಲ್ಲಿ ಆಯಾ ಶರೀರವುಂಟಾಗುವುದಕ್ಕೆ ಮುಂಚೆಯೂ ಅದು ನಶಿಸಿದ ನಂತರವೂ, ಸರ್ವದಾ ವಿದ್ಯಮಾನವಾದ ವೇದ ತನಗೆ ಅರ್ಥವಾದ ಈ ಶರೀರವಿಲ್ಲದಿರುವುದರಿಂದ, ನಿರರ್ಥಕವಾಗಿ ಬಿಡುವುದು ಅಲ್ಲದೆ ತಾನು ಅನಿತ್ಯವೂ ಆಗಬೇಕಾಗುವುದು—ಎಂದಲ್ಲಿ, ಇಂದ್ರನೆಂಬ ಹೆಸರು ಒಬ್ಬನಿಗೇ ನೇರಿದ್ದಲ್ಲ ಕಲಶವೆಂದರೆ ಆ ಆಕಾರವುಳ್ಳ ಸಕಲ ವಸ್ತುಗಳಿಗೂ ಹೆಸರಾಗಿರುವಂತೆ ಇಂದ್ರನೆಂದರೆ ಆ ಅಧಿಕಾರವುಳ್ಳವನಾಗಿ ಆ ಸ್ಥಾನಕ್ಕೆ ಬಂದವನಿಗೆಲ್ಲಾ ಹೆಸರಾಗುತ್ತೆ. ಮೊದಲಿದ್ದ ಇಂದ್ರ ನಶಿಸಿದ ಮೇಲೆ ಇಂದ್ರಾದಿಗಳ ಆಕಾರ ವಿಶೇಷವಾಚಕವಾದ ಇಂದ್ರಾದಿ ಶಬ್ದಗಳನ್ನು ಆಲೋಚಿಸಿ ಅದರಂತೆಯೇ ಬೇರೊಬ್ಬ ಇಂದ್ರನನ್ನು ಮೊದಲಿದ್ದ ಇಂದ್ರನ ಹಾಗೆಯೇ ಬ್ರಹ್ಮನು ಸೃಷ್ಟಿಸುತ್ತಾನೆ. ಇಂದ್ರಾದಿ ಶಬ್ದಗಳು ಗವಾದಿ ಶಬ್ದಗಳಂತೆ ಆಕೃತಿ ವಿಶೇಷವಾಚಕಗಳು. ದೇವದತ್ತಾದಿ ಶಬ್ದಗಳಂತೆ ವ್ಯಕ್ತಿ ವಿಶೇಷವಾಚಕಗಳಲ್ಲ. ಆದ್ದರಿಂದ ಆ ವಾಕ್ಯ ನಿರರ್ಥಕವಾಗದು. ಈ ವಿಷಯದಲ್ಲಿ ವೇದವೂ ಧರ್ಮಶಾಸ್ತ್ರಗಳೂ ಪ್ರಮಾಣ.

ಸೂತ್ರ ೪—**ಅತ ಏವ ಚ ನಿತ್ಯತ್ವಮ್**

**ಸೂತ್ರಾರ್ಥ**

[ಅತಃ ಏವ] = ಆದ್ದರಿಂದಲೇ [ನಿತ್ಯತ್ವಂ] = ವೇದಗಳಿಗೆ ನಿತ್ಯತ್ವ ಸಿದ್ಧಿಸುವುದು

**ವಿವರಣೆ**

ಇಂದ್ರಾದಿ ವೇದ ಶಬ್ದಗಳ ಮೂಲಕವೇ ಅದರಲ್ಲಿ ಹೇಳಿದ ಆಕಾರ ವಿಶಿಷ್ಟರಾದ ಇಂದ್ರಾದಿಗಳನ್ನೂ ಸೃಜಿಸುವನೆಂದು ಅಂಗೀಕರಿಸುವುದರಿಂದ ತಾನೇ, ಆಧುನಿಕರಾದ ವಿಶ್ವಾಮಿತ್ರಾದಿಗಳನ್ನು ಹೇಳುವುದರಿಂದ ಈ ವೇದ ನಿತ್ಯವೆಂದು ನಿಶ್ಚಯಿಸಲ್ಪಡುವುದು. ಪ್ರಳಯಾನಂತರ ಸೃಷ್ಟಿಕಾಲದಲ್ಲಿ ಬ್ರಹ್ಮನು "ವಿಶ್ವಾಮಿತ್ರಸ್ಯ ಸೂಕ್ತಂ ಭವತಿ",—ಇತ್ಯಾದಿಯಾದ ವೇದ ವಾಕ್ಯಗಳನ್ನು ಆಲೋಚಿಸಿ, ಅಧ್ಯಯನ ಮಾಡದೆಯೇ ಸ್ವರ ವರ್ಣಗಳು ತಪ್ಪದೆ ವೇದದಲ್ಲಿ ಕೆಲವು ಭಾಗಗಳನ್ನು ಸಾಕ್ಷಾತ್ಕರಿಸತಕ್ಕ ಶಕ್ತಿಯುಳ್ಳ ಜೀವರುಗಳನ್ನು ಪರಾಮರ್ಶಿಸಿ ವಿಶ್ವಾಮಿತ್ರಾದಿಗಳಾಗಿ ಸೃಷ್ಟಿಸುತ್ತಾನೆ. ಅವರುಗಳೂ ಆ ವೇದ ಭಾಗಗಳನ್ನು ಅಧ್ಯಯನ ಮಾಡದೆಯೇ ಯಥಾವತ್ತಾಗಿ ಅರಿಯುತ್ತಾರೆ. ಅವರುಗಳು ಅರಿತಭಾಗವಾದ್ದರಿಂದ ಅದರಲ್ಲಿ ಅವರ ಹೆಸರು ಬೆಳಗುತ್ತಿರುವುದು. ಹೀಗೆ ಅನಾದಿಸಿದ್ಧಗಳಾದ ಅಧಿಕಾರಿ ವಿಶೇಷಗಳನ್ನು ಹೇಳುವುದರಿಂದ ವಿಶ್ವಾಮಿತ್ರಾದಿ ಪದ ಘಟಿತವಾದ ವೇದಗಳು ಅನಿತ್ಯಗಳಾಗವು.

ನೈರ್ಮಲ್ಯವೂ ಇಲ್ಲವಾದ್ದರಿಂದ ಅವರಿಗೆ ಉಪಾಸನದಲ್ಲಿ ಅಧಿಕಾರವಿಲ್ಲ. ವಿವೇಕ, ವಿಮೋಕ, ಅಭ್ಯಾಸ, ಕ್ರಿಯೆ, ಕಲ್ಯಾಣ, ಅನವಸಾದ, ಅನುದ್ಧರ್ಷ—ಗಳೆಂಬ ಸಾಧನ ಸಪ್ತಕದಿಂದ ಅನುಗೃಹೀತವಾದ ಬ್ರಹ್ಮೋಪಾಸನವನ್ನು ಅನುಷ್ಠಿಸಲು ದೇವತೆಗಳಿಗೆ ಸಾಮರ್ಥ್ಯವಿಲ್ಲವೆಂದು ಭಾವ.

"ವಿಗ್ರಹೋ ಹವಿರಾದಾನಂ ಯುಗಪತ್ಕರ್ಮಸನ್ನಿಧಿಃ।

ತೃಪ್ತಿಃ ಫಲಪ್ರದಾನಂ ಚ ದೇವತಾನಾಂ ನ ವಿದ್ಯತೇ ।।" ಎಂದು ಜೈಮಿನೀಯರೆನ್ನುವರು. ದೇವತೆಗಳಿಗೆ ವಿಗ್ರಹವುಂಟೆಂದು ಪ್ರತಿಪಾದಿಸುವ ವೇದಾನ್ತವಾಕ್ಯ ಯಾವುದೂ ಕಾಣಿಸುವುದಿಲ್ಲ—ಆದ್ದರಿಂದ ದೇವತೆಗಳಿಗೆ ಉಪಾಸನದ ಬಗ್ಗೆ ಅರ್ಥಿತ್ವ—ಸಾಮರ್ಥ್ಯಗಳೆಂಬವು ಇಲ್ಲವಾಗಿ ಬ್ರಹ್ಮೋಪಾಸನದಲ್ಲಿ ಅಧಿಕಾರವಿಲ್ಲವೆಂಬದಾಗಿ ಪೂರ್ವ ಪಕ್ಷ.

ಸೃಷ್ಟಿಪ್ರಕರಣದಲ್ಲಿ ದೇವತೆಗಳಿಗೂ ಶರೀರವುಂಟೆಂದು, "ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ,"—ಇತ್ಯಾದಿ ವಾಕ್ಯಗಳಿಂದ ಕಂಡು ಬರುತ್ತೆ. ನಾಮರೂಪವ್ಯಾಕರಣ ಸಂಕಲ್ಪದಿಂದ ಪರಬ್ರಹ್ಮನು ಬ್ರಹ್ಮಾದಿಸ್ಥಾವರಾಂತವಾದ ದೇವ–ತಿರ್ಯಕ್–ಮನುಷ್ಯ ಸ್ಥಾವರಗಳೆಂಬ ನಾಲ್ಕು ವಿಧ ಭೂತ ಜಾತಗಳನ್ನೂ ಆಯಾ ಕರ್ಮೋಚಿತ ಶರೀರ ಮತ್ತು ಅದಕ್ಕೆ ತಕ್ಕ ಹೆಸರುಳ್ಳವುಗಳನ್ನಾಗಿ ಮಾಡಿದನು —ಎಂದು ಹೇಳಿದೆ. ಹೀಗೆಯೇ ಸೃಷ್ಟಿ ವಾಕ್ಯಗಳೆಲ್ಲದರಲ್ಲಿಯೂ ದೇವ—ತಿರ್ಯಕ್–ಮನುಷ್ಯ–ಸ್ಥಾವರಗಳೆಂಬ ನಾಲ್ಕು ವಿಧ ಸೃಷ್ಟಿ ಹೇಳಲ್ಪಟ್ಟಿದೆ. ಇದರಿಂದ ಶರೀರೇಂದ್ರಿಯಾದಿಗಳು ಅವರಿಗೆ ಉಂಟೆಂಬುದು ಸ್ಪಷ್ಟ. ಮನುಷ್ಯರಿಗಿರುವುದಕ್ಕಿಂತ ಇನ್ನೂ ಪಟುತರವಾದ ದೇಹೇಂದ್ರಿಯಾದಿಗಳೇ ಪುಣ್ಯವಶದಿಂದ ದೇವತೆಗಳಿಗಿವೆ. ಆದ್ದರಿಂದ ಅವರಿಗೆ ನಿತ್ಯ ಕರ್ಮಾನುಷ್ಠಾನ—ಚಿತ್ತನೈರ್ಮಲ್ಯಗಳಿಂದ ಮಾಡಬೇಕಾದ ಉಪಾಸನದಲ್ಲಿ ಸಾಮರ್ಥ್ಯವಿದೆ. ಆಧ್ಯಾತ್ಮಿಕಾದಿ ದುರ್ವಿಷಹ ದುಃಖಾಭಿತಾಪದಿಂದಲೂ ನಿರ್ದೋಷವೂ, ಕಲ್ಯಾಣಗುಣಸಾಗರವೂ ಆದ ಪರಬ್ರಹ್ಮದಲ್ಲಿ ನಿರತಿಶಯ ಭೋಗ್ಯತೆಯುಂಟೆಂಬುದರ ಅರಿವಿನಿಂದರಲೂ, ಅರ್ಥಿತ್ವವೂ ದೇವತೆಗಳಿಗೆ ಸಂಭವಿಸುತ್ತದೆ. ಉಪಾಸನಕ್ಕೆ ಪರಮಾತ್ಮ ಸ್ವರೂಪ, ಅವನನ್ನು ಉಪಾಸಿಸುವ ಬಗೆ ಹೇಗೆಂಬುದರ ತಿಳಿವಳಿಕೆ, ಅರ್ಥಿತ್ವ, ಶರೀರತ್ವ–ಗಳು ಸಾಮಗ್ರಿ. ದೇವತೆಗಳೂ ತಮಗೆ ಹಿಂದೆ ಉತ್ಪನ್ನವಾದ ಪರಮಾತ್ಮ ಸ್ವರೂಪ, ತದುಪಾಸನ ಪ್ರಕಾರಗಳನ್ನು ಮರೆತಿರುವುದಿಲ್ಲ. ಆದ್ದರಿಂದ ಜ್ಞಾನವೂ ತಾಪತ್ರಯಾಭಿಹತಿಯೂ, ಪರಮಾತ್ಮಜ್ಞಾನವೂ ಉಂಟಾದ್ದರಿಂದಲೂ, ಮೇಲೆ ಹೇಳಿದಂತೆ ಅರ್ಥಿತ್ವವೂ ಶರೀರವೂ ಇರುವುದರಿಂದ ಅವರುಗಳಿಗೆ ಅಧಿಕಾರವೂ ಉಂಟೆಂಬುದು ಸಿದ್ಧಾನ್ತ.

ಇದರ ಮೇಲೆ, ದೇವತೆಗಳಿಗೆ ಹೇಗೆ ವಿದ್ಯೆಯಲ್ಲಿ ಅಧಿಕಾರವಿದೆ? ಅವರು ತ್ರೈವರ್ಣಿಕರಲ್ಲದ್ದರಿಂದ ಅವರಿಗೆ ಉಪನಯನವಿಲ್ಲ. ಅಧ್ಯಯನಕ್ಕೆ ಉಪನಯನ ಅಂಗ. ಅವಿಲ್ಲದ ಮೇಲೆ ಅವರಿಗೆ ಅಧ್ಯಯನವಿಲ್ಲ—ಅದಿಲ್ಲದ್ದರಿಂದ ಅಧ್ಯಯನ ಸಿದ್ಧವಾದ ಸ್ವಾಧ್ಯಾ

ಯದಿಂದ ಲಬ್ಧವಾಗುವ ವಿದ್ಯೆಯೂ ಇಲ್ಲ. ಬ್ರಹ್ಮವಿದ್ಯೆಗೆ ಅಂಗಭೂತವಾದ ಕರ್ಮಾನುಷ್ಠಾನ ಯೋಗ್ಯತೆ ತಾನೇ ಅವರಿಗೆಲ್ಲಿದೆ? "ವಸನ್ತೇ ಬ್ರಾಹ್ಮಣೋಽಗ್ನೀನಾದಧೀತ ಗ್ರೀಷ್ಮೇ ರಾಜನ್ಯ ಆದಧೀತ ಶರದಿವೈಶ್ಯ ಆದಧೀತ",—ಎಂಬತೆ ತ್ರೈವರ್ಣಿಕರಲ್ಲದ ದೇವತೆಗಳಿಗೆ ಅಗ್ನ್ಯಾಧಾನವಿಧಿ ಕೂಡುವುದಿಲ್ಲ. ಅಗ್ನೀಂದ್ರಾದಿ ದೇವತೆಗಳಿಗೆ ಅಗ್ನಿಂದ್ರಾದಿ ದೇವತಾಭಾವದಿಂದ, ಅಗ್ನೀಂದ್ರಾದ್ಯುದ್ದೇಶ್ಯಕ ಹವಿಸ್ಸುಗಳ ಪ್ರಕ್ಷೇಪವೂ ಉಪಪನ್ನವಾಗದು. ಎಂದಲ್ಲಿ,—ಉತ್ತರ:—

ಉಪನಯನವಿಲ್ಲದ್ದರಿಂದ ಸಾಂಗವಿದ್ಯೆಯಲ್ಲಿ ಅಧಿಕಾರವಿಲ್ಲದಿಲ್ಲ. ಉಪನಯನ ಅಧ್ಯಯನಕ್ಕೆ ಅಂಗವೇ ಹೊರತು ಯಜ್ಞಾದಿ ಕರ್ಮ ಮತ್ತು ಬ್ರಹ್ಮೋಪಾಸನಗಳಿಗೆ ಅಂಗವಲ್ಲ. ಅಧ್ಯಯನವಿಲ್ಲದಿದ್ದಾಗ್ಗೂ ಸುಕೃತಪ್ರಕರ್ಷದಿಂದ ಪೂರ್ವಜನ್ಮ ವಿಶೇಷಗಳಲ್ಲಿ ಅಧೀತವಾದ ಸ್ವಾಧ್ಯಾಯ ಮತ್ತು ಅದರ ಅರ್ಥಗಳ ಸ್ಮರಣವಿದ್ದೇ ಇದೆ. ಪಿಶಾಚಾದಿಗಳೂ ಕೂಡ ಪೂರ್ವಜನ್ಮಸ್ಮರಣವನ್ನು ಹೊಂದಿವೆ. ದೇವತೆಗಳ ಬಗ್ಗೆ ಹೇಳತಕ್ಕದ್ದೇನು? ಉಪನಯನವಿಲ್ಲದ ಮಾತ್ರಕ್ಕೆ ಶೂದ್ರಾದಿಗಳಿಗಿರುವಂತೆ ಇವರಿಗೆ ವಿದ್ಯೆ ಮತ್ತು ಕರ್ಮಗಳಲ್ಲಿ ಅನಧಿಕಾರವೆಂಬುದೂ ಇಲ್ಲ. ಶೂದ್ರರಿಗೂ ಬ್ರಹ್ಮವಿದ್ಯೆಯಲ್ಲಿ ಅನಧಿಕಾರ ಉಪನಯನವಿಲ್ಲದ್ದರಿಂದಲ್ಲ. ಸಾಮರ್ಥ್ಯದ ಅಭಾವದಿಂದ ಅನುಗ್ರಹೀತವಾದ ಶಾಸ್ತ್ರನಿಷೇಧಪ್ರಯುಕ್ತವದು. ದೇವತೆಗಳಿಗಾದರೋ-ವಿದ್ಯೆಯಾಗಲಿ ಕರ್ಮಗಳಾಗಲಿ ಎಲ್ಲೂ ಪ್ರತಿಷಿದ್ಧವಾಗಿಲ್ಲ. ಪೂರ್ವಜನ್ಮಗಳಲ್ಲಿಯ ಜ್ಞಾನವೂ ಹೋಗಿಲ್ಲವಾದ್ದರಿಂದ ಸಾಮರ್ಥ್ಯವೂ ಸಿದ್ಧವಾಗಿದೆ. ಅಗ್ನ್ಯಾಧಾನಾದಿಗಳಿಗೆ ತ್ರೈವರ್ಣಿಕರೇ ಆಗಿರಬೇಕೆಂಬ ನಿಯಮ ಮನುಷ್ಯರಲ್ಲಿಯೇ ಹೊರತು ದೇವತೆಗಳಲ್ಲಿಲ್ಲ. "ದೇವಾವೈಸತ್ರಮಾಸತ", "ವಿಶ್ವಸೃಜಃ ಪ್ರಥಮಾಸ್ಸತ್ರಮಾಸತ".—ಇತ್ಯಾದಿ ಶ್ರುತಿಗಳಿಂದ ದೇವಾದಿಗಳ ಯಜ್ಞಾನುಷ್ಠಾನ ಕಂಡುಬಂದಿದೆ. ವಿಶೇಷತಃ ಇಂದ್ರಾದಿಗಳ ವೃತ್ರವಧಾದಿ ಜನಿತವಾದ ಕಲುಷಗಳ ಕ್ಷಾಲನಕ್ಕಾಗಿ—ಅವರ ಕೃತ್ವನುಷ್ಠಾನ ಸ್ಮೃತವಾಗಿಯೇ ಇದೆ. ಅಲ್ಲದೆ ಬ್ರಾಹ್ಮಣ್ಯಾದಿಕವು ದೇವತೆಗಳಲ್ಲಿಯೂ ಉಂಟು. ಅದು ಅದೃಷ್ಟ ವಿಶೇಷ ಸಂಬಂಧ ರೂಪ—ಜಾತಿ ರೂಪವಲ್ಲ. ಅಂದರೆ ಸಂತಾನ ವಿಶೇಷ ಪ್ರಸೂತತ್ವವಲ್ಲ. ಸಂತಾನ ವಿಶೇಷ ಪ್ರಸೂತತ್ವವೂ ಅದಕ್ಕೆ ತಕ್ಕ ಅದೃಷ್ಟ ಸಂಬಂಧದಿಂದಲೇ. ಅಲ್ಲದೆ ಸಂತಾನ ವಿಶೇಷ ಪ್ರಸೂತತ್ವವೇ ಬ್ರಾಹ್ಮಣ್ಯವೆಂದಲ್ಲಿ, ಮೊದಲು ಕ್ಷತ್ರಿಯ ಸಂತಾನ ಪ್ರಸೂತವಾಗಿದ್ದ ವಿಶ್ವಾಮಿತ್ರ ಪ್ರಭೃತಿಗಳಿಗೆ ಬ್ರಾಹ್ಮಣ್ಯಾದಿ ಸಿದ್ಧಿಸಿದುದು ಹೇಗೆ? ಇಂತಹ ಅದೃಷ್ಟ ವಿಶೇಷ ಸಂಬದ್ಧವಾದ ಬ್ರಾಹ್ಮಣ್ಯ ದೇವತೆಗಳಿಗೂ ಉಂಟು. ಇದಕ್ಕೆ ಪ್ರಮಾಣ ವಾಜಪೇಯ ಪ್ರಕರಣದಲ್ಲಿ, "ತಂಬೃಹಸ್ಪತಿರುದ ಯಜತ್ತೇನಾಯಜತ ತೇನೇನ್ದ್ರಮಯಾ ಜಯತ್"—ಎಂಬುದರಿಂದ ಬೃಹಸ್ಪತಿ ಮತ್ತು ಇಂದ್ರ—ಇವರು ವಾಜಪೇಯವನ್ನು ಅನುಷ್ಠಿಸಿದುದಾಗಿ ತಿಳಿಯುತ್ತೆ. ಆದ್ದರಿಂದಲೇ, "ಸವಾ ಏಷ ಬ್ರಾಹ್ಮಣಸ್ಯ ಚೈವ ರಾಜನ್ಯಸ್ಯ ಚ ಯಜ್ಞಃ" ಎಂದು ವಾಜಪೇಯವು ಬ್ರಹ್ಮಕ್ಷತ್ರಾಧಿಕಾರಕವೆಂದು ಕಂಡುಬರುವುದು, ಬೃಹಸ್ಪತಿ ಬ್ರಾಹ್ಮಣರೆಂದೂ, ಇಂದ್ರ ಕ್ಷತ್ರಿಯನೆಂದೂ ತಿಳಿಸುತ್ತದೆ. "ಬ್ರಹ್ಮಾ ಬೃಹಸ್ಪತಿಃ ಕ್ಷತ್ರಮಿಂದ್ರಃ"—"ಮರುತೋ ದೇವಾನಾಂ ವಿಶಃ"—ಇತ್ಯಾದಿಯಾಗಿ ಶ್ರುತಿಯಿದೆ. ಆದ್ದರಿಂದ ದೇವತಾ ವಿಶೇಷರಿಗೆ ಬ್ರಹ್ಮಕ್ಷತ್ರ—ವಿಡ್ವಿಭಾಗ ಸಿದ್ಧವಾದ್ದರಿಂದ ಅಗ್ನಿಸಂಬಂಧವೂ ಯುಕ್ತ. ವಿದ್ಯೆಗೆ ಅನುಗ್ರಾಹಕ

ದಾಗ್ಯೂ (ತನ್ನನ್ನು ತಾನು ಧ್ಯಾನ ಮಾಡಕೂಡದಾದಾಗ್ಯೂ ತನಗೆ ಅಂತರ್ಯಾಮಿಯಾದ ಪರಮಾತ್ಮನನ್ನು ಧ್ಯಾನಿಸಬಹುದೆಂದು ತಾತ್ಪರ್ಯ.) ಬ್ರಹ್ಮಾತ್ಮಕನೆಂದು ಉಪಾಸಿಸಬಹುದಾದ್ದರಿಂದ ಉಪಾಸಕರಾದ ವಸ್ವಾದಿಗಳಿಗೂ ಉಪಾಸ್ಯತ್ವ ಕೂಡುವುದು. ಈ ಕಲ್ಪದಲ್ಲಿ ತಾವು ವಸುಗಳಾಗಿದ್ದಾಗ್ಯೂ ಮುಂದಿನ ಕಲ್ಪದಲ್ಲಿ ತಾವು ವಸುಗಳಾಗುವುದಕ್ಕೋಸ್ಕರವೂ ಹೀಗೆ ಉಪಾಸನಮಾಡಬಹುದಾದ್ದರಿಂದ ವಸ್ವಾದಿಗಳಿಗೂ ಈ ವಿದ್ಯೆಯಲ್ಲಿ ಅಧಿಕಾರವುಂಟು ಎಂಬುದು ಸಿದ್ಧಾಂತ.

## 9. ಅಪಶೂದ್ರಾಧಿಕರಣ

ಸೂತ್ರ—**ಶುಗಸ್ಯ ತದನಾದರಶ್ರವಣಾತ್ತದಾದ್ರವಣಾ ತ್ಸೂಚ್ಯತೇ ಹಿ**

[ಸಂವರ್ಗವಿದ್ಯಾ]

### ಸಂಗತಿ

ಮನುಷ್ಯವ್ಯತಿರಿಕ್ತರಾದ ವಸ್ವಾದಿ ದೇವತಾ ವಿಶೇಷಗಳಿಗೂ, ಅರ್ಥಿತ್ವಸಾಮರ್ಥ್ಯಗಳಿರುವುದರಿಂದ ಬ್ರಹ್ಮೋಪಾಸನದಲ್ಲಿ ಅಧಿಕಾರವುಂಟೆನ್ನಲಾಯಿತು. ಅನಂತರ ಅರ್ಥಿತ್ವ—ಸಾಮರ್ಥ್ಯಗಳೇ ಇದಕ್ಕೆ ಪ್ರಯೋಜಕಗಳಾಗಿದ್ದಲ್ಲಿ, ಮನುಷ್ಯವಿಶೇಷರಾದ ಶೂದ್ರರಿಗೂ ಅಧಿಕಾರವಿರಬೇಕೆಂಬ ಶಂಕೆಯಿಂದ ಅಪವಾದ ಸಂಗತಿ.

### ಸೂತ್ರಾರ್ಥ

[ತದನಾದರಶ್ರವಣಾತ್] = ಹಂಸದ ಅನಾದರ ವಾಕ್ಯವನ್ನು ಕೇಳಿದುದರಿಂದ [ತದಾ=ಆಗ [ಆದ್ರವಣಾತ್] = (ಬ್ರಹ್ಮೋಪಾಸನಕ್ಕಾಗಿ) ಓಡುವುದರಿಂದ [ಅಸ್ಯ]=ಈ ಜಾನಶ್ರುತಿಗೆ [ಶುಕ್]=ದುಃಖವು [ಸೂಚ್ಯತೇ]=ಸೂಚಿಸಲ್ಪಡುವುದು. [ಹಿ]=ಆ ಕಾರಣದಿಂದಲೂ (ಅವನನ್ನು ಶೂದ್ರ! ಎಂದು ರೈಕ್ವರು ಕರೆದರು)

### ವಿವರಣೆ

ಬ್ರಹ್ಮವಿದ್ಯೆಯಲ್ಲಿ ಶೂದ್ರರಿಗೆ ಅಧಿಕಾರ ಉಂಟೇ, ಇಲ್ಲವೆ?—ಎಂದು ಸಂಶಯ. ಅವರಿಗೂ ದೇಹೇಂದ್ರಿಯಾದಿಗಳು ಉಂಟಾದ್ದರಿಂದ ಪರಮಾತ್ಮೋಪಾಸನಕ್ಕೆ ಬೇಕಾದ ಸಾಮರ್ಥವೂ ಮೋಕ್ಷೇಚ್ಛೆಯೂ ಉಂಟು. ವೇದಾಧ್ಯಯನದಲ್ಲಿ ಅಧಿಕಾರವಿಲ್ಲದಿದ್ದಾಗ್ಯೂ, ಪುರಾಣಾದಿಶ್ರವಣಗಳಲ್ಲಿ ಅಧಿಕಾರವುಂಟಾದ್ದರಿಂದ ಅದರಿಂದಲೇ ಪರಮಾತ್ಮೋಪಾಸನಕ್ಕೆ ಬೇಕಾದ ಪರಮಾತ್ಮಸ್ವರೂಪ—ತತ್ಪ್ರಾಪ್ತ್ಯುಪಾಯ ಜ್ಞಾನವುಳ್ಳವರಾಗಬಹುದು. ಶೂದ್ರಜಾತಿಯಲ್ಲಿ ಹುಟ್ಟಿದ ವಿದುರಾದಿಗಳಿಗೂ ಬ್ರಹ್ಮವಿದ್ಯೆಯುಂಟೆಂದು ಹಲವೆಡೆಗಳಲ್ಲಿಯೂ ಹೇಳಿರುತ್ತೆ. "ಆ ಜಹಾರೇ ಮಾ ಶೂದ್ರ!"—ಎಂದು ಶ್ರುತಿಯಿದೆ. "ನೀನು ಇವನ್ನು ಕೊಂಡು ಬಾ, ಇವನ್ನು ನಾನು ಅಂಗೀಕರಿಸಿ ನಿನಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸುತ್ತೇನೆ".—ಎಂದು ವೇದದಲ್ಲಿಯೂ ಜಾನಶ್ರುತಿಯನ್ನು ಕುರಿತು ರೈಕ್ವರು ಹೇಳಿದುದಾಗಿ ತಿಳಿದುಬರುತ್ತೆ. ಆದ್ದರಿಂದ ಶೂದ್ರರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟೆಂದು ಪೂರ್ವಪಕ್ಷ.

**ಸಿದ್ಧಾಂತ**

ವೇದಾಧ್ಯಯನ ಮಾಡಿ, ಅದರ ಅರ್ಥವನ್ನು ಪರಾಮರ್ಶಿಸಿ ಅದರಲ್ಲಿ ಉಂಟಾದ ಜ್ಞಾನವೇ ಪರಮಾತ್ಮೋಪಾಸನಕ್ಕೆ ಹೇತು. ಶೂದ್ರರಿಗೆ ವೇದಾಧ್ಯಯನವಿಲ್ಲದ್ದರಿಂದ ಉಪಾಸನಕ್ಕೆ ಸಾಮರ್ಥ್ಯವಿಲ್ಲ. ಪುರಾಣಶ್ರವಣಾದಿಗಳಿಂದುಂಟಾದ ಜ್ಞಾನ ವಿದುರಾದಿಗಳಿಗೆ ಮರೆಯದಿದ್ದು ಪ್ರಾರಬ್ಧಕರ್ಮವಶದಿಂದ ಈ ಜನ್ಮ ಬಂದಿತು. ಅದರಿಂದ ಈ ಜನ್ಮದಲ್ಲಿ ಬ್ರಹ್ಮನಿಷ್ಠರಾದರೆಂದು ತಿಳಿಯತಕ್ಕದ್ದು. ಎರಡು ಹಂಸಗಳು ಬಂದು ಅವರಲ್ಲಿ ಒಂದು ಜಾನಶ್ರುತಿಯನ್ನು ಸ್ತುತಿಸಲು, ಮತ್ತೊಂದು ಬ್ರಹ್ಮಜ್ಞಾನವಿಲ್ಲದಿದ್ದ ಇವನನ್ನೇಕೆ ಸ್ತೋತ್ರ ಮಾಡುವುದು? ಎಂದು ಇವನಿಗೆ ಅವಮಾನವಾಗುವಂತೆ ಹೇಳಲು ಅದನ್ನು ಜಾನಶ್ರುತಿಯು ಕೇಳಿ, "ನನಗೆ ಬ್ರಹ್ಮಜ್ಞಾನವಿಲ್ಲವಲ್ಲ?" ಎಂದು ವ್ಯಸನಪಟ್ಟದ್ದನ್ನು ಅರಿತು, ರೈಕ್ವರು "ಓ, ಶೂದ್ರಾ!"—ಎಂದು ಕರೆದರು. "ಶೂದ್ರ"—ಎಂಬುದಕ್ಕೆ ಶೂದ್ರ ಜಾತಿಯಲ್ಲಿ ಹುಟ್ಟಿದವನೆಂದು ಇಲ್ಲಿ ಅರ್ಥವಲ್ಲ. ತನಗೆ ಬ್ರಹ್ಮವಿದ್ಯೆಯಿಲ್ಲವೆಂದು ದುಃಖಪಡುವವನೆಂದರ್ಥ. ಆದ್ದರಿಂದ, ವೇದದಲ್ಲಿಯೂ ಶೂದ್ರನಿಗೆ ಬ್ರಹ್ಮವಿದ್ಯೆಯ ಉಪದೇಶವನ್ನು ಹೇಳಿಲ್ಲ. ಸಾಮರ್ಥ್ಯವಿಲ್ಲದ್ದರಿಂದ ಮೋಕ್ಷೇಚ್ಛೆ ಇದ್ದಾಗ್ಯೂ. ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂಬುದು ಸಿದ್ಧಾಂತ.

### ಸೂತ್ರ ೨—**ಕ್ಷತ್ರಿಯತ್ವಗತೇಶ್ಚ**

**ಸೂತ್ರಾರ್ಥ**

(ಜಾನಶ್ರುತಿಗೆ) ಕ್ಷತ್ರಿಯ ಧರ್ಮ ಕಾಣುವುದರಿಂದಲೂ, (ಇವನು ಶೂದ್ರನಲ್ಲ)

**ವಿವರಣೆ**

ಇವನು ಅನೇಕ ಗ್ರಾಮಗಳನ್ನು ಕೊಡುತ್ತಾನೆಂದೂ ಪಕ್ವಾನ್ನ ದಾನ ಮಾಡುವವನೆಂದೂ, ಇದೇ ಮುಂತಾದ ಕ್ಷತ್ರಿಯ ಧರ್ಮ ಕಾಣುವುದರಿಂದ ಇವನು ಕ್ಷತ್ರಿಯನೇ ಆಗಿರಬೇಕು.

### ಸೂತ್ರ ೩—**ಉತ್ತರತ್ರ ಚೈತ್ರರಥೇನ ಲಿಂಗಾತ್**

**ಸೂತ್ರಾರ್ಥ**

[ಉತ್ತರತ್ರ] = ಮುಂದಿನ ವಾಕ್ಯದಲ್ಲಿ [ಚೈತ್ರರಥೇನ] = ಚೈತ್ರರಥನೊಡನೆ. (ಕಾಪೇಯನೊಂದಿಗೆ ಸೇರಿಸಿ ಹೇಳುವುದೆಂಬ) [ಲಿಂಗಾತ್] = ಹೇತುವಿನಿಂದ. (ಈ ವಿದ್ಯೆಯಲ್ಲಿ ಬ್ರಾಹ್ಮಣ ಕ್ಷತ್ರಿಯರುಗಳಿಗೇ ಅನ್ವಯ ಕಾಣುವುದು)

**ವಿವರಣೆ**

ಈ ಸಂವರ್ಗ ವಿದ್ಯೆಯಲ್ಲಿ ಬ್ರಾಹ್ಮಣ–ಕ್ಷತ್ರಿಯರು ಹೊರತು ಇತರರನ್ನು ಹೇಳಿಲ್ಲ. "ಅಥಹ ಶೌನಕಂಚ ಕಾಪೇಯಮಭಿಪ್ರತಾರಿಣಂ..."–ಎಂದು ಈ ವಾಕ್ಯದಲ್ಲಿ ಶೌನಕರು–ಬ್ರಾಹ್ಮಣ; ಅಭಿಪ್ರತಾರಿ–ಚೈತ್ರರಥನೆಂಬ ಕ್ಷತ್ರಿಯ, ಇವನು ಕ್ಷತ್ರಿಯನೆನ್ನುವುದಕ್ಕೆ ಗುರುತೇನು?—ಎಂದಲ್ಲಿ, ಪ್ರಕರಣಾಂತರದಲ್ಲಿ ಕಾಪೇಯನೊಂದಿಗೆ ಸಹ ಪಠಿತನಾಗಿರುವವನನ್ನು ಚೈತ್ರರಥನೆಂಬ ಕ್ಷತ್ರಿಯನೆಂದು ಹೇಳಿದೆ. ಇಲ್ಲಿ ಅಭಿಪ್ರತಾರಿಯನ್ನು

ಸೂತ್ರ ೫.—**ಸಮಾನ ನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್ ಸ್ಮೃತೇಶ್ಚ**

**ಸೂತ್ರಾರ್ಥ**

[ಆವೃತ್ತೌ, ಅಪಿ] = ಅವ್ಯಾಕೃತಾದಿಗಳ ಮರು ಸೃಷ್ಟಿಯಲ್ಲಿಯೂ, [ಸಮಾನ ನಾಮರೂಪವತ್ವಾತ್, ಚ] = ಪೂರ್ವಕಲ್ಪದ ಪದಾರ್ಥಗಳಿಗೆ ಸಮಾನವಾದ ಹೆಸರನ್ನೂ ಆಕಾರವನ್ನೂ ಉಳ್ಳದುವುಗಳಾದ್ದರಿಂದಲೂ, [ಅವಿರೋಧಃ] = (ವೇದದ ನಿತ್ಯತ್ವದಲ್ಲಿ) ವಿರೋಧವಿಲ್ಲ. [ದರ್ಶನಾತ್] = ಈ ಅರ್ಥವೇದದಿಂದಲೂ, [ಸ್ಮೃತೇಃ ಚ] = ಸ್ಮೃತಿಯಿಂದಲೂ (ನಿಶ್ಚಯಿಸಲ್ಪಟ್ಟಿದೆ)

**ವಿವರಣೆ**

ಅವಾಂತರ ಪ್ರಳಯದಲ್ಲಿ ಬ್ರಹ್ಮನೂ ಮತ್ತೂ ಕೆಲವು ಪದಾರ್ಥಗಳೂ ಇರುವುವಾದ್ದರಿಂದ, ಆಗ ವೇದವಿದ್ದಾಗ್ಯೂ, ಸರ್ವವೂ ನಶಿಸಿಹೋದ ಮಹಾ ಪ್ರಳಯದನಂತರ, ಸೃಷ್ಟಿಯುಂಟಾಗುವಾಗ ವೇದವಿಲ್ಲದ್ದರಿಂದ, ಅದು ಹೇಗೆ ನಿತ್ಯ ವಾದೀತು?—ಎಂದಲ್ಲಿ, ಆ ಕಾಲದಲ್ಲಿಯೂ ಪರಮಪುರುಷನು ಹಿಂದಿನ ಕಲ್ಪಗಳಲ್ಲಿದ್ದ ಪದಾರ್ಥಗಳ ಹಾಗೆಯೇ ಸಕಲ ಪದಾರ್ಥಗಳನ್ನು ಸೃಜಿಸಿ, ಅದಕ್ಕೆ ಅದೇ ಹೆಸರಿಟ್ಟು ಅವಕ್ಕೆ ಅಂತರಾತ್ಮನಾಗಿದ್ದುಕೊಂಡು ಮೊದಲಿದ್ದ ಆನುಪೂರ್ವಿಯಂತೆಯೇ ವೇದವನ್ನು ಬ್ರಹ್ಮನಿಗೆ ಉಪದೇಶಿಸುತ್ತಾನೆಂದು ಶ್ರುತಿ ಸ್ಮೃತಿಗಳು ಹೇಳುವುದರಿಂದ ವೇದವನ್ನು ಅಪೌರುಷೇಯ ಮತ್ತು ನಿತ್ಯವೆನ್ನಲು ಅಡ್ಡಿಯಿಲ್ಲ. ವೇದ ನಿತ್ಯವೆಂದರೆ, ಮೊದಲು ಎಂತಹ ಆನುಪೂರ್ವಿಯಿದ್ದಿತೋ ಅದೇ ವಿಧವಾದ ಆನುಪೂರ್ವಿಯೊಡನೆಯೇ ಉಚ್ಚಾರವೂ ಮಾಡುವುದು. ಆದ್ದರಿಂದ ದೇವತೆಗಳಿಗೆ ಶರೀರವುಂಟೆಂದು ಸ್ಥಾಪಿಸುವುದರಿಂದ ಅವರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟೆಂದು ಸಿದ್ಧಾಂತ ಮಾಡಲ್ಪಟ್ಟಿದೆ.

## 8. ಮಧ್ವಧಿಕರಣ

ಸೂತ್ರ—**ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ**

**ಸಂಗತಿ**

ಪ್ರತ್ಯುದಾಹೃತಿ ಸಂಗತಿ:—ದೇವತಾಧಿಕರಣದಲ್ಲಿ ಉಪಾಸನ ಸಾಮಾನ್ಯದಲ್ಲಿ ದೇವತಾ ಸಾಮಾನ್ಯಕ್ಕೆ ಅಧಿಕಾರವುಂಟೆನ್ನಲಾಯಿತು. ಅನಂತರ ಉಪಾಸನ ವಿಶೇಷದಲ್ಲಿ ದೇವತಾ ವಿಶೇಷಕ್ಕೆ ಅಧಿಕಾರ ನಿರೂಪಿಸಲ್ಪಡುತ್ತೆ.

**ಸೂತ್ರಾರ್ಥ**

[ಅಸಂಭವಾತ್] = ಉಪಾಸ್ಯರಾದ ವಸ್ವಾದಿಗಳಿಗೆ ಉಪಾಸಕತ್ವವು ಸಂಭವಿಸ ದಾದ್ದರಿಂದ, [ಮಧ್ವಾದಿಷು] = ಮಧುವಿದ್ಯೆಯೇ ಮೊದಲಾದುವುಗಳಲ್ಲಿ [ಅನಧಿಕಾರಂ] = (ದೇವತೆಗಳಿಗೆ) ಅಧಿಕಾರವಿಲ್ಲವೆಂಬುದಾಗಿ (ಜೈಮಿನಿಃ] = ಜೈಮಿನಿ ಹೇಳುತ್ತಾರೆ.

**ವಿವರಣೆ**

"ಅಸೌವಾ ಆದಿತ್ಯೋದೇವ ಮಧು"—ಇತ್ಯಾದಿಯಾದ್ದು ಈ ಅಧಿಕರಣಕ್ಕೆ ವಿಷಯವಾಕ್ಯ. ಋಕ್, ಯಜುರ್, ಸಾಮವೇದಗಳಲ್ಲಿ ಹೇಳಿರುವ ಯಾಗಾದಿಗಳಲ್ಲಿ ಉಂಟಾದ ರಸವು ಸೂರ್ಯನಲ್ಲಿ ಹೋಗಿ ಸೇರುವುದು. ಸೂರ್ಯನು ಆ ರಸಸ್ವರೂಪಿಯಾಗಿದ್ದಾನೆ. ಆ ರಸಸ್ವರೂಪನಾದ ಸೂರ್ಯನ ಒಂದೊಂದು ಪಕ್ಕಗಳನ್ನು ವಸು ರುದ್ರ–ಆದಿತ್ಯ–ಮರುತ್–ಸಾಧ್ಯರೆಂಬ ಐದು ಗುಂಪಿನವರು ಭುಜಿಸುವರು. ಅವರುಗಳಿಂದ ಭುಜಿಸಲ್ಪಡುವ ಆ ಭಾಗವನ್ನು ಉಪಾಸಿಸಬೇಕು. ಆ ಅಂಶ ವಸುವಿನಿಂದ ಭುಜಿಸಲ್ಪಡುವುದೆಂದು ಉಪಾಸಿಸುವವನು ವಸುಸ್ವರೂಪಿಯಾಗುತ್ತಾನೆ—(ಹೀಗೆಯೇ ಮಿಕ್ಕ ಉಪಾಸಕರನ್ನೂ ತಿಳಿಯತಕ್ಕದ್ದು)—ಎಂದು ಈ ವಾಕ್ಯದ ಅರ್ಥ. ಈ ಉಪಾಸನದಲ್ಲಿ ವಸ್ವಾದಿಗಳಿಗೆ ಅಧಿಕಾರವುಂಟೋ ಇಲ್ಲವೋ?—ಎಂದು ಸಂಶಯ.

ತಾನು ತನ್ನನ್ನು ಉಪಾಸಿಸಕೂಡದಾದ್ದರಿಂದ, ಈ ಅಂಶ ವಸ್ವಾದಿಗಳಿಂದ ಭುಜಿಸಲ್ಪಡುವುದೆಂಬ ವಸ್ವಾದಿ ವಿಷಯವಾದ ಉಪಾಸನವನ್ನು ವಸ್ವಾದಿಗಳು ಅನುಷ್ಠಿಸಕೂಡದಾದ್ದರಿಂದ ಅವರಿಗೆ ಈ ಉಪಾಸನದಲ್ಲಿ ಅಧಿಕಾರವಿಲ್ಲ. ಅಲ್ಲದೆ, ತಾನು ಈಗ ವಸುವಾಗಿರುವುದರಿಂದ ವಸುವಾಗುವುದಕ್ಕಾಗಿ ಹೀಗೆ ಉಪಾಸನಮಾಡತಕ್ಕದ್ದೂ ಅಲ್ಲ ಎಂದು ಪೂರ್ವಪಕ್ಷಿಯಾದ ಜೈಮಿನಿಯ ಮತ.

ಸೂತ್ರ ೨—**ಜ್ಯೋತಿಷಿ ಭಾವಾಚ್ಚ**

**ಸೂತ್ರಾರ್ಥ**

[ಜ್ಯೋತಿಷಿ] = ಜ್ಯೋತಿಶ್ಶಬ್ದವಾಚ್ಯನಾದ ಪರಮಾತ್ಮನ ವಿಷಯದಲ್ಲಿ[ಭಾವಾತ್, ಚ] = ದೇವ ಮನುಷ್ಯ ತಿರ್ಯಕ್ಕುಗಳಿಗೂ ಅಧಿಕಾರವುಂಟಾದ್ದರಿಂದಲೂ; ಹೀಗೆ ಅಧಿಕಾರವುಂಟಾಗಿದ್ದುಕೊಂಡೇ—ಜ್ಯೋತಿಸ್ವರೂಪಿಗಳಿಗೂ ಜ್ಯೋತಿಸ್ಸಾಗಿರುವ ಪರಬ್ರಹ್ಮವನ್ನು ದೇವತೆಗಳು ಉಪಾಸಿಸುವರೆಂದು, "ತಂದೇವಾಜ್ಯೋತಿಷಾಂ ಜ್ಯೋತಿಃ"—ಎಂಬ ವಾಕ್ಯ ಹೇಳುತ್ತೆ. ಇದರಲ್ಲಿ ದೇವತೆಗಳು ಎಂಬುದಕ್ಕೆ ವಸ್ವಾದಿ ದೇವತೆಗಳು ಅರ್ಥ. ಅವರುಗಳಿಗೆ ಈ ವಾಕ್ಯದಲ್ಲಿ ಪ್ರತ್ಯೇಕವಾಗಿ ಉಪಾಸನವನ್ನು ಹೇಳಿರುವುದರಿಂದ ಈ ಉಪಾಸನದಲ್ಲಿ ಅಧಿಕಾರವಿಲ್ಲ—ಎಂದು ಪೂರ್ವಪಕ್ಷ.

ಸೂತ್ರ ೩—**ಭಾವಂತು ಬಾದರಾಯಣೋಽಸ್ತಿ ಹಿ**

**ಸೂತ್ರಾರ್ಥ**

[ಬಾದರಾಯಣಃ] = ಬಾದರಾಯಣರು, [ಭಾವಂ] = ಈ ಉಪಾಸನದಲ್ಲಿ ವಸ್ವಾದಿಗಳಿಗೂ ಅಧಿಕಾರವುಂಟೆಂಬುದನ್ನು [ಒಪ್ಪಿಕೊಂಡರು]. [ಅಸ್ತಿ, ಹಿ] = ಅವರುಗಳಿಗೆ ಉಪಾಸ್ಯತ್ವವೂ ಪ್ರಾಪ್ಯತ್ವವೂ ಉಂಟಲ್ಲವೆ!

**ವಿವರಣೆ**

ಮೇಲೆ ಹೇಳಿದ ಜೈಮಿನಿ ಮತವನ್ನು ಖಂಡಿಸುವ ಬಾದರಾಯಣರ ಮತವನ್ನೂ ಈ ಸೂತ್ರದಲ್ಲಿ ಹೇಳುತ್ತಾರೆ. ತನ್ನನ್ನು 'ನಾನು'—ಎಂದು ಉಪಾಸಿಸಕೂಡದಾ

**ಸೂತ್ರಾರ್ಥ**

[ಅರ್ಥಾನ್ತರತ್ವಾದಿ ವ್ಯಪದೇಶಾತ್] = ಜೀವಾತ್ಮನಿಗಿಂತ ಭಿನ್ನನಾದ ಪರಮಾತ್ಮನಿಗೆ ಅಸಾಧಾರಣಗಳಾದ ನಾಮರೂಪನಿರ್ವಾಹಕತ್ವವೇ ಮುಂತಾದ ಧರ್ಮಗಳನ್ನು (ಇವನಿಗೆ) ಹೇಳುವುದರಿಂದ [ಆಕಾಶಃ] = ಆಕಾಶ ಶಬ್ದ ಪ್ರತಿಪಾದ್ಯನು (ಪರಮಾತ್ಮಾ).

**ವಿವರಣೆ**

ಈ ವಿಷಯವಾಕ್ಯದಲ್ಲಿ ಆಕಾಶವೆಂದು ಹೇಳಲ್ಪಟ್ಟವನು ಮುಕ್ತ ಪುರುಷನೋ, ಪರಮಾತ್ಮನೋ, ಎಂದು ಸಂಶಯ. ಮೇಲಣ ವಾಕ್ಯಗಳಲ್ಲಿ ಮುಕ್ತನನ್ನು ಹೇಳಿರುವುದರಿಂದ, ಈ ವಾಕ್ಯಗಳಲ್ಲಿಯು ಆಕಾಶ ಶಬ್ದಕ್ಕೂ ಮುಕ್ತನೇ ಅರ್ಥವೆಂದು—ಪೂರ್ವಪಕ್ಷ.

ನಾಮರೂಪಗಳಿಂದ ಅಸ್ಪೃಷ್ಟನಾಗಿ, ಅವುಗಳಿಗೆ ನಿರ್ವಾಹಕನಾಗಿ ಬ್ರಹ್ಮತ್ವ—ಆತ್ಮತ್ವ—ಅಮೃತತ್ವ ಮುಂತಾದ ಧರ್ಮಗಳನ್ನುಳ್ಳವನಾಗಿ ಇದ್ದಾನೆಂದು, ಮುಕ್ತನಿಗೆ ಸಂಭವಿಸದ ಈ ಗುಣಗಳನ್ನುಳ್ಳವನು—ಎಂದು ಆಕಾಶವನ್ನು ವಿಶೇಷಿಸಿರುವುದರಿಂದ, ಇವನು ಮುಕ್ತನಿಗಿಂತ ಬೇರೆಯವನಾದ ಪರಮಾತ್ಮನೆಂದು ಸಿದ್ಧಾನ್ತ.

ಸೂತ್ರ ೨—**ಸುಷುಪ್ತ್ಯುತ್ಕ್ರಾನ್ತ್ಯೋರ್ಭೇದೇನ—"ವ್ಯಪದೇಶಾತ್"** ಎಂಬುದು ಇದರೊಡನೆ ಅನುವರ್ತಿಸುತ್ತೆ

**ಸೂತ್ರಾರ್ಥ**

[ಸುಷುಪ್ತ್ಯುತ್ಕ್ರಾನ್ತ್ಯೋಃ] = ನಿದ್ರಿಸುವಾಗಲೂ, ಮರಣಕಾಲದಲ್ಲಿಯೂ, [ಭೇದೇನ] = ಜೀವನಿಗಿಂತ ಬೇರೆಯಾಗಿ—[ವ್ಯಪದೇಶಾತ್] = ಪರಮಾತ್ಮನನ್ನು ಹೇಳುವುದರಿಂದ (ಜೀವನಿಗೂ ಪರಮಾತ್ಮನಿಗೂ ಐಕ್ಯವಿಲ್ಲ.)

**ವಿವರಣೆ**

"ನೇಹನಾನಾಸ್ತಿ", —ಜೀವನಿಗೂ ಪರಮಾತ್ಮನಿಗೂ ಭೇದವಿಲ್ಲವೆಂಬುದರಿಂದಲೂ, "ತತ್ತ್ವಮಸಿ",—ಎಂದು ಜೀವನೂ ಪರಮಾತ್ಮನೂ ಒಂದೇ ಎಂದೂ ಹೇಳುವುದರಿಂದಲೂ, ಮುಕ್ತಪುರುಷನಿಗಿಂತ ಪರಮಾತ್ಮಾ ಭಿನ್ನನೆಂದು ಹೇಳಕೂಡದು—ಎಂಬ ಶಂಕೆಗೆ, "ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ, ಪ್ರಾಜ್ಞೇನಾತ್ಮನಾನ್ವಾರೂಢಃ",—ಎಂದು ಮೂಢನಾಗಿರುವ ಜೀವನಿಗಿಂತ ಆಗಲೇ ಪರಮಪುರುಷನನ್ನು ಸರ್ವಜ್ಞನಾಗಿ ಹೇಳುವುದರಿಂದ, ಒಂದೇ ಕಾಲದಲ್ಲಿ ಒಬ್ಬನೇ ಅಜ್ಞನಾಗಿಯೂ, ಸರ್ವಜ್ಞನಾಗಿಯೂ, ಆಗಲಾರನಾದ್ದರಿಂದ ಇವರಿಬ್ಬರಿಗೂ ಐಕ್ಯವನ್ನು ಹೇಳಕೂಡದು. ಇವರುಗಳಿಗೆ ಭೇದವಿಲ್ಲವೆಂದು ಹೇಳಿರುವುದಕ್ಕೆ, ಗುಣ ದ್ರವ್ಯವನ್ನು ಬಿಟ್ಟು ಅಗಲಿರಲಾರದ್ದು ಹೇಗೋ ಹಾಗೆಯೇ ಜೀವನೂ ಪರಮಾತ್ಮನನ್ನು ಬಿಟ್ಟು ಅಗಲಿರಲಾರನೆಂದು ತಾತ್ಪರ್ಯ.

ಸೂತ್ರ ೩—**ಪತ್ಯಾದಿ ಶಬ್ದೇಭ್ಯಃ**

**ಸೂತ್ರಾರ್ಥ**

("ಸರ್ವಸ್ಯಾಧಿಪತಿಃ ಸರ್ವಸ್ಯವಶೀ",—ಇತ್ಯಾದಿಗಳಿಂದ ಆಕಾಶಶಬ್ದವಾಚ್ಯನನ್ನು) —'ಪತಿ' ಮುಂತಾದ ಶಬ್ದಗಳಿಂದ ವಿಶೇಷಿಸಿರುವುದರಿಂದ, ಸರ್ವಕ್ಕೂ ಅಧಿಪತಿಯಾದ ಇವನು ಪರಮಾತ್ಮನೆಂಬುದೇ ಸರಿ.

**ವಿವರಣೆ**

ಈ ವಾಕ್ಯದಲ್ಲಿ, "ಸರ್ವಸ್ಯ ವಶೀ ಸರ್ವಸ್ಯೇಶಾನಃ"—ಇತ್ಯಾದಿಯಾಗಿ ಈ ಆತ್ಮನನ್ನು ಸ್ವಾಮಿಯಾಗಿ ಹೇಳುವುದರಿಂದ, ಇವನು ಜೀವನಿಗಿಂತ ಬೇರೆಯಾದ ಪರಮಾತ್ಮಾ.

ಜಗದ್ವಿಧರಣತ್ವ. ಸರ್ವೇಶ್ವರತ್ವ—ಅನ್ನದತ್ವ ಮುಂತಾದುವು ಸೂತ್ರದಲ್ಲಿಯ 'ಆದಿ'-ಶಬ್ದದ ಅರ್ಥ.

## ಪಾದ 4. ಅಧಿಕರಣ—1 ಆನುಮಾನಿಕಾಧಿಕರಣ

### ಸೂತ್ರ—ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರ ರೂಪಕವಿನ್ಯಸ್ತ ಗೃಹೀತೇರ್ದರ್ಶಯತಿ ಚ

**ಸಂಗತಿ**

ಹಿಂದಿನ ಮೂರು ಪಾದಗಳಿಂದ, ಅಸ್ಪಷ್ಟತರ–ಅಸ್ಪಷ್ಟ–ಸ್ಪಷ್ಟರೂಪ ಜೀವಾದಿ ಲಿಂಗಕವಾದ ವಾಕ್ಯಗಳು ಜೀವಪರಗಳೆಂದು ಶಂಕಿಸಿ, ಪರಮಾತ್ಮಪರಗಳೆಂದು ನಿರ್ಣೀತವಾದುವು. ಅನಂತರ ಈ ನಾಲ್ಕನೇ ಪಾದದಲ್ಲಿ ಸ್ಪಷ್ಟತರ ಜೀವಾದಿ ಲಿಂಗಕ ವಾಕ್ಯಗಳು ಪರಮಾತ್ಮಪರಗಳಾಗಿ ನಿರ್ಣೀತವಾಗುತ್ತವೆ. ಇವೇ ಆಯಾ ಛಾಯಾನುಸಾರಿವಾಕ್ಯಗಳೆಂದೂ ಹೇಳಲ್ಪಟ್ಟಿವೆ–ಇದರಿಂದ ಬ್ರಹ್ಮವೇ ಜಗತ್ಕಾರಣವೆನ್ನುವುದನ್ನು ಸ್ಥಿರಪಡಿಸಿದ ಹಾಗಾಯಿತು.

**ಅಧಿಕರಣ ಸಂಗತಿ**

(1) ಹಿಂದೆ ಆಕಾಶಶಬ್ದ—ಅದರ ಹಿಂದಿನ ವಾಕ್ಯಗಳಲ್ಲಿ ಜೀವಪರವಾಗಿದೆಯೆಂದು ಶಂಕಿಸಿ—ಬ್ರಹ್ಮಲೋಕಪರವೆಂದು ಸೂಚಿತವಾಯಿತು. ಅದರಂತೆಯೇ ಇಲ್ಲಿಯೂ ಅವ್ಯಕ್ತ ಶಬ್ದಕ್ಕೆ ಸಾಂಖ್ಯರೆನ್ನುವ ಪ್ರಧಾನಪರತ್ವವನ್ನು ಶಂಕಿಸಿ, ರೂಪಕವಿನ್ಯಾಸ ಪ್ರತಿಪಾದಕವಾದ ವಾಕ್ಯಾಂತರದಲ್ಲಿ ಹೇಳಲ್ಪಟ್ಟ ಶರೀರಪರತ್ವವನ್ನು ಸ್ಥಾಪಿಸಲಾಗುತ್ತೆ.

(2) ಹಿಂದಿನ ಅಧಿಕರಣದಲ್ಲಿ ಜೀವ ಪ್ರತಿಪಾದ್ಯನೆಂಬುದನ್ನು ನಿರಾಕರಿಸಿ ಪರಮಾತ್ಮನೇ ಪ್ರತಿಪಾದ್ಯನೆನ್ನಲಾಯಿತು. ಇಲ್ಲಿಯಾದರೋ—ಪ್ರಧಾನವು ಪ್ರತಿಪಾದ್ಯವೆಂಬುದನ್ನು ನಿರಾಕರಿಸಿ ಪರಮಾತ್ಮನೇ ಪ್ರತಿಪಾದ್ಯನೆಂದು ಹೇಳಲ್ಪಡುತ್ತೆ. —ಇಲ್ಲಿ ಆಕ್ಷೇಪ ಸಂಗತಿ.

ಈ ಪಾದದಲ್ಲಿ ಎಂಟು ಅಧಿಕರಣಗಳಿವೆ. ಮೊದಲ ೬ ಅಧಿಕರಣಗಳಿಂದ ಸಾಂಖ್ಯರನ್ನೂ ಮಿಕ್ಕ ೨ ಅಧಿಕರಣಗಳಿಂದ ಯೋಗಮತವನ್ನೂ ಶಮನಮಾಡಿದೆ. ಒಟ್ಟು ೨ ಪೇಟಿಕೆಗಳು. ಮೊದಲನೆ ಪೇಟಿಕೆಯಲ್ಲಿ ೬ ಅಧಿಕರಣಗಳು. ಉಳಿದ ೨ ಅಧಿಕರಣಗಳು ಎರಡನೇ ಪೇಟಿಕೆಯುವು. ಮೊದಲನೇ ಪೇಟಿಕೆಯ ಮೊದಲೆರಡು ಅಧಿಕರಣಗಳಲ್ಲಿ ಕಪಿಲರಿಗೆ ಅಭಿಮತವಾದ ಪ್ರಧಾನದ ಪ್ರತಿಕ್ಷೇಪ. ಮುಂದಿನ ಒಂದು ಅಧಿಕರಣದಲ್ಲಿ ಕಪಿಲರಿಗೆ ಅಭಿಮತವಾದ ತತ್ತ್ವಸಂಖ್ಯೆಯ ಪ್ರತಿಕ್ಷೇಪ. ನಾಲ್ಕನೇ ಅಧಿಕರಣದಲ್ಲಿ ಅವ್ಯಾಕೃತ ಶಬ್ದಕ್ಕೆ ಪ್ರಕೃತಿದ್ವಾರವೃತ್ತಿಯಿಂದ ಪರಮಪುರುಷನೆಂಬ ಅರ್ಥದಲ್ಲಿಯೇ

ಕಾಪೇಯನ ಸಹಚಾರಿಯಾಗಿ ಹೇಳಿದೆ. ಇದರಿಂದ ಕಾಪೇಯ ಸಂಬಂಧ ಸಿದ್ಧ. ಆದ್ದರಿಂದ, ಕಾಪೇಯ ಪುರೋಹಿತಕನಾದ ಚೈತ್ರರಥ ಕ್ಷತ್ರಿಯನೆಂದು ಸಿದ್ಧ. ತಸ್ಮಾಚ್ಚೈತ್ರರಥೋನಾಮ್ಮೈಕಃ ಕ್ಷತ್ರಪತಿರ್ಜಾಯತೇ''—ಎಂದಿರುವುದರಿಂದಲೂ ಚೈತ್ರ ರಥ ಕ್ಷತ್ರಿಯನೆಂಬುದು ಸಿದ್ಧ. ಅಗ್ರ್ಯಪ್ರಾಯ ನ್ಯಾಯದಿಂದ ಬ್ರಾಹ್ಮಣ-ಕ್ಷತ್ರಿಯರಲ್ಲಿ ಅನ್ಯತರತ್ವ-ಪರಿಶೇಷೇಣ ಅವನಿಗೆ ಕ್ಷತ್ರಿಯತ್ವ ನಿಶ್ಚಿತವೆಂದು ತಾತ್ಪರ್ಯ.

ಸೂತ್ರ ೪—**ಸಂಸ್ಕಾರ ಪರಾಮರ್ಶಾತ್ ತದ ಭಾವಾಭಿಲಾಪಾಚ್ಚ**

**ಸೂತ್ರಾರ್ಥ**

[ಸಂಸ್ಕಾರಪರಾಮರ್ಶಾತ್] = (ವಿದ್ಯೋಪದೇಶಕ್ಕೆ ಅಂಗವಾಗಿ) ಉಪನಯನಾದಿ ಸಂಸ್ಕಾರವನ್ನು ಹೇಳುವುದರಿಂದಲೂ, [ತದಭಾವಾಭಿಲಾಪಾತ್ ಚ] = (ಶೂದ್ರನಿಗೆ ಸಂಸ್ಕಾರವೇ ಇಲ್ಲವೆಂದು ಹೇಳುವುದರಿಂದಲೂ, (ಬ್ರಹ್ಮವಿದ್ಯೆಯಲ್ಲಿ ಶೂದ್ರನಿಗೆ ಅಧಿಕಾರವಿಲ್ಲ).

ಸೂತ್ರ ೫—**ತದಭಾವನಿರ್ಧಾರಣೇ ಚ ಪ್ರವೃತ್ತೇಃ**

**ಸೂತ್ರಾರ್ಥ**

[ತದಭಾವ ನಿರ್ಧಾರಣೇಚ] = (ಜಾಬಾಲಿಗೆ) ಶೂದ್ರತ್ವವಿಲ್ಲವೆಂದು ನಿಶ್ಚಯವುಂಟಾದ ಮೇಲೆಯೇ. [ಪ್ರವೃತ್ತೇಃ] = (ಬ್ರಹ್ಮವಿದ್ಯೋಪದೇಶದಲ್ಲಿ) ಪ್ರವರ್ತಿಸಿರುವುದರಿಂದ (ಶೂದ್ರನಿಗೆ ಈ ವಿದ್ಯೆಯಲ್ಲಿ ಅಧಿಕಾರವಿಲ್ಲ.)

ಸೂತ್ರ ೬—**ಶ್ರವಣಾಧ್ಯಯನಾರ್ಥ ಪ್ರತಿಷೇಧಾತ್**

**ಸೂತ್ರಾರ್ಥ**

[ಶೂದ್ರನಿಗೆ ವೇದವನ್ನು] ಕೇಳುವುದೂ, ಹೇಳುವುದೂ, ಯಾಗಾದಿಗಳನ್ನು ಮಾಡುವುದೂ, ಕೂಡದೆಂದು ನಿಷೇಧಿಸಿರುವುದರಿಂದ (ವೇದವನ್ನು ಕೇಳದೆ ತನ್ಮೂಲವಾದ ಜ್ಞಾನವುಂಟಾಗದುದರಿಂದ ಅವನಿಗೆ ಈ ವಿದ್ಯೆಯಲ್ಲಿ ಅಧಿಕಾರವಿಲ್ಲ. ಶೂದ್ರಾದಿಗಳಿಗೆ ಭಾರತಾದಿ ಶ್ರವಣ ಅನುಮತವಾಗಿರುವುದೂ ಪಾಪಶಾಂತಿಗಾಗಿಯೇ ಹೊರತು ಉಪಾಸನಕ್ಕಾಗಿಯಲ್ಲ. ಶಾಸ್ತ್ರದಿಂದ ಪ್ರತಿಪನ್ನವಾದ ಅರ್ಥದ ವಿಶದೀಕರಣಕ್ಕಾಗಿಯೂ ಅಲ್ಲ. ವೇದಾಧ್ಯಯನವಿಲ್ಲದ್ದರಿಂದ ಆಪಾತ ಪ್ರತೀತಿಯೇ ಇಲ್ಲ. ಇನ್ನು ಅದರ ವಿಶದೀಕರಣವೆಲ್ಲಿ ಬಂತು?

**ಸೂತ್ರಾರ್ಥ**

''ಅಥ ಹಾಸ್ಯ ವೇದ ಮುಪಶೃಣ್ವತಃ ತ್ರಪುಜತುಭ್ಯಾಂ ಶ್ರೋತ್ರ ಪ್ರತಿಪೂರಣಂ ಉದಾಹರಣೇ ಜಿಹ್ವಾಚ್ಛೇದೋ ಧಾರಣೇ ಶರೀರಭೇದಃ''—ಅಂದರೆ, ಶೂದ್ರ ವೇದವನ್ನು ಕೇಳಿದಲ್ಲಿ ಅವನ ಕಿವಿಗಳ ತುಂಬ ಸೀಸ ಮತ್ತು ಅರಗನ್ನು ಕಾಯಿಸಿ ಸುರಿಯಬೇಕು. ಅಧ್ಯಯನ ಮಾಡಿದರೆ ನಾಲಿಗೆಯನ್ನು ಕತ್ತರಿಸಬೇಕು. ಹೃದಯದಲ್ಲಿ ಧರಿಸಿದರೆ, ಆ ಹೃದಯವನ್ನು ಸೀಳಬೇಕು ಎಂದು ಹೇಳುವುದರಿಂದ (ಶೂದ್ರನಿಗೆ ಇದರಲ್ಲಿ ಅಧಿಕಾರವಿಲ್ಲ—೧೪ ವಿದ್ಯಾಸ್ಥಾನಗಳನ್ನು ಓದಲೂ ಅವನಿಗೆ ಅಧಿಕಾರವಿಲ್ಲ.)

[ಅಪ ಶೂದ್ರಾಧಿಕರಣ ಸಮಾಪ್ತ]

ಸೂತ್ರ ೩—**ಕಂಪನಾತ್**

[ಈ ಸೂತ್ರ ಪ್ರಮಿತಾಧಿಕರಣದ ಶೇಷ]

**ಸೂತ್ರಾರ್ಥ**

(ಈ ಅಂಗುಷ್ಠಮಾತ್ರನಾದ ಪುರುಷನಲ್ಲಿ ಹೆದರಿ ಸಕಲ ಜಗತ್ತುಗಳೂ) ನಡುಗುವುದರಿಂದ, (ಅಂಗುಷ್ಠಪ್ರಮಿತನಾದ ಪುರುಷ ಪರಮಾತ್ಮಾ.) "ಯದಿದಂಕಿಂಚ ಜಗತ್ಸರ್ವಂ ಪ್ರಾಣ ಏಜತಿನಿಸ್ಸೃತಂ ಮಹದ್ಭಯಂ ವಜ್ರಮುದ್ಯತಂ..."—ಇತ್ಯಾದಿಯಿಂದ ಈ ಪುರುಷನಿಗೆ ಹೆದರಿ ಜಗತ್ತೆಲ್ಲಾ ನಡುಗುವುದೆಂದು ಹೇಳಿದೆ.

ಸೂತ್ರ ೪—**ಜ್ಯೋತಿರ್ದರ್ಶನಾತ್**

[ಈ ಸೂತ್ರವೂ ಪ್ರಮಿತಾಧಿಕರಣದ ಶೇಷ]

**ಸೂತ್ರಾರ್ಥ**

ಈ ಪ್ರಕರಣದಲ್ಲಿ ಸಕಲ ತೇಜಸ್ಸುಗಳಿಗೂ ಆಚ್ಛಾದಕವೂ ಸಕಲ ತೇಜಸ್ಸುಗಳಿಗೂ ಕಾರಣಭೂತವೂ ಅನುಗ್ರಾಹಕವೂ ಆದ ಜ್ಯೋತಿಸ್ಸು ಅಂಗುಷ್ಠಪ್ರಮಿತನಲ್ಲಿ ಕಂಡುಬರುತ್ತೆ. "ನ ತತ್ರಸೂರ್ಯೋಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋಭಾಂತಿ ಕುತೋಽಯಮಗ್ನಿಃ। ತಮೇವ ಭಾನ್ತಮನುಭಾತಿ ಸರ್ವಂ ತಸ್ಯಭಾಸಾ ಸರ್ವಮಿದಂ ವಿಭಾತಿ. ಪರಂಜ್ಯೋತಿರುಪಸಂಪದ್ಯ ತಂದೇವಾ ಜ್ಯೋತಿಷಾಂಜ್ಯೋತಿರಾಯು ರ್ಹೋಪಾಸತೇಽಮೃತಂ"—ಎಂದಿತ್ಯಾದಿಯಾದುವುಗಳಿಂದ ಅಂಗುಷ್ಠ ಪ್ರಮಿತ ವಿಷಯ ವಾಕ್ಯಗಳೆರಡರ ನಡುವೆ ಪರಬ್ರಹ್ಮಾಸಾಧಾರಣವಾದ ಜ್ಯೋತಿಷ್ಟ್ವವು ಅಂಗುಷ್ಠ ಪ್ರಮಿತನಲ್ಲಿರುವುದಾಗಿ ಶ್ರುತವಾಗಿದೆ. ಆದ್ದರಿಂದ ಅಂಗುಷ್ಠಪ್ರಮಿತವಾದವನು ಪರಬ್ರಹ್ಮ.

## 10. ಅರ್ಥಾನ್ತರತ್ವಾದಿವ್ಯಪದೇಶಾಧಿಕರಣ

ಸೂತ್ರ—**ಆಕಾಶೋಽರ್ಥಾನ್ತರತ್ವಾದಿವ್ಯಪದೇಶಾತ್**

**ಸಂಗತಿ**

ಹಿಂದೆ ದಹರಾಕಾಶಪರಬ್ರಹ್ಮವೆಂಬುದನ್ನು ಸಾಧಿಸಲು "ಅಲ್ಪಶ್ರುತೇರಿತಿಚೇತ್ತ ದುಕ್ತಂ"—ಎಂಬ ಸೂತ್ರದಿಂದ ಅಲ್ಪ ಶ್ರುತಿ ಪರಿಹೃತವಾಯಿತು. ಅಲ್ಪಶ್ರುತಿ ಪ್ರಸಂಗದಿಂದ ಅಂಗುಷ್ಠಪ್ರಮಿತನು ಪರಮಾತ್ಮನೆಂಬುದನ್ನು ಸಾಧಿಸಿಯಾಯಿತು. ಆ ಪ್ರಸಂಗದಿಂದ ಮೂರು ಅಧಿಕರಣಗಳು ಹೇಳಲ್ಪಟ್ಟವು. ಅನಂತರ ಹಿಂದೆ ಪ್ರಕೃತವಾಗಿದ್ದ ದಹರ ವಿದ್ಯೆ ಬುದ್ಧಿಸ್ಥವಾದ್ದರಿಂದ ಅದರ ಅನಂತರವಿರುವ "ಆಕಾಶೋಹ ವೈನಾಮ..."—ಇತ್ಯಾದಿ ಪ್ರಕರಣ ಜೀವಪರವೆಂದು ಶಂಕಿಸಿ ಪರಿಹರಿಸಲ್ಪಡುತ್ತೆಯೆಂಬದಾಗಿ ಸಂಗತಿ—ಇದು ಅಪವಾದ ಸಂಗತಿ.

**ವಿಷಯವಾಕ್ಯ**

ಛಾನ್ದೋಗ್ಯದಲ್ಲಿ—"ಆಕಾಶೋಹವೈನಾಮರೂಪಯೋರ್ನಿರ್ವಹಿತಾ ತೇಯ ದನ್ತರಾ ತದ್ಬ್ರಹ್ಮ ತದಮೃತಂ ಸ ಆತ್ಮಾ"—ಎಂಬುದು.

ಪರ್ಯವಸಾನವೆನ್ನಲಾಗಿದೆ. ಅನಂತರದ–"ಜಗದ್ವಾಚಿತ್ವಾತ್", "ವಾಕ್ಯಾನ್ವಯಾತ್"– ಎಂಬ ಎರಡು ಅಧಿಕರಣಗಳಲ್ಲಿ ಬದ್ಧಮುಕ್ತ ಜೀವರಿಬ್ಬರೂ ಪರತತ್ತ್ವವಾಗಲಾರರೆಂದು ಪ್ರತಿಪಾದಿತವಾಗಿದೆ.

ಅನಂತರದ ಪೇಟಿಕೆಯ ೨ ಅಧಿಕರಣಗಳಿಂದಲೂ ಯೋಗಾದಿ ತಂತ್ರಾಂತರೋಕ್ತವಾದ ನಿಮಿತ್ತಮಾತ್ರೇಶ್ವರ ವಾದವು ನಿರಸ್ತವಾಗಿದೆ.

**ವಿಷಯವಾಕ್ಯ**

ಕಠವಲ್ಲಿಯಲ್ಲಿ:—"ಇನ್ದ್ರಿಯೇಭ್ಯಃ ಪರಾಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ। ಮನಸಸ್ತು ಪರಾ ಬುದ್ಧಿಃ ಬುದ್ಧೇರಾತ್ಮಾಮಹಾನ್‌ಪರಃ।। ಮಹತಃಪರಮವ್ಯಕ್ತಂ ಅವ್ಯಕ್ತಾತ್ಪುರುಷಃ ಪರಃ । ಪುರುಷಾನ್ನಪರಂ ಕಿಂಚಿತ್ ಸಾಕಾಷ್ಠಾಸಾ ಪರಾ ಗತಿಃ॥"—ಎಂಬುದು.

**ಸೂತ್ರಾರ್ಥ**

[ಏಕೇಷಾಂ] = ಒಬ್ಬರ (ಶಾಖೆಯಲ್ಲಿ) [ಆನುಮಾನಿಕಂ, ಅಪಿ] = (ಸಾಂಖ್ಯರು ಹೇಳುವ) ಪ್ರಧಾನವೂ. (ಜಗತ್ಕಾರಣವಾಗಿ ಹೇಳಲ್ಪಟ್ಟಿದೆ) [ಇತಿ ಚೇತ್] = ಎಂದಲ್ಲಿ, [ಶರೀರ ರೂಪಕವಿನ್ಯಸ್ತ ಗೃಹೀತೇಃ] = ಶರೀರವೆಂಬ ರೂಪಕಸ್ಥಾನದಲ್ಲಿ (ರಥವಾಗಿ) ಹೇಳಲ್ಪಟ್ಟಿದ್ದನ್ನು ಗ್ರಹಿಸುವುದರಿಂದ, [ನ] = ಪ್ರಧಾನವು ಜಗತ್ಕಾರಣವಾಗಿ ಹೇಳಲ್ಪಟ್ಟಿಲ್ಲ. [ದರ್ಶಯತಿ ಚ] = ಶ್ರುತಿಯೂ ಹಾಗೆಯೇ ಹೇಳುವುದು.

**ವಿವರಣೆ**

ಮೇಲಣ ವಿಷಯವಾಕ್ಯದಲ್ಲಿಯ 'ಅವ್ಯಕ್ತ'—ಪದಕ್ಕೆ ಸಾಂಖ್ಯರು ಹೇಳುವ 'ಪ್ರಕೃತಿ'—ಎಂಬ ಅರ್ಥವೇ ಅಥವಾ ಅಲ್ಲವೇ?—ಎಂದು ಸಂಶಯ

ಸಾಂಖ್ಯರು ಹೇಳುವ ಸೃಷ್ಟಿಕ್ರಮ ತೋರುವುದರಿಂದ, ಈ ಅವ್ಯಕ್ತ ಪದಕ್ಕೆ ಅವರು ಹೇಳುವ ಪ್ರಧಾನವೇ ಅರ್ಥವೆಂದು ಪೂರ್ವ ಪಕ್ಷ.

ಹಿಂದಿನ ವಾಕ್ಯದಲ್ಲಿ ಶರೀರವನ್ನು ರಥವೆಂದೂ, ಇಂದ್ರಿಯಗಳನ್ನು ಕುದುರೆಗಳೆಂದೂ, ಮನಸ್ಸನ್ನು ಕಡಿವಾಳವೆಂದೂ ಹೇಳಿ, ಈ ವಾಕ್ಯದಲ್ಲಿ ಇಂದ್ರಿಯಾದಿಗಳನ್ನು ಆಯಾ ಪದಗಳಿಂದ ಹೇಳಿ, ಶರೀರವೆಂದು ಹೇಳಬೇಕಾದ ಸ್ಥಳದಲ್ಲಿ ಅವ್ಯಕ್ತವೆಂದು ಹೇಳಿರುವುದರಿಂದ ಅವ್ಯಕ್ತಪದಕ್ಕೆ ಶರೀರವೇ ಅರ್ಥವೆಂದು ಸಿದ್ಧಾನ್ತ.

ಸೂತ್ರ ೨—**ಸೂಕ್ಷ್ಮಂತು ತದರ್ಹತ್ವಾತ್**

**ಸೂತ್ರಾರ್ಥ**

[ಸೂಕ್ಷ್ಮಂ ತು] = ಅವ್ಯಕ್ತವೇ (ಅವಸ್ಥಾಂತರ ಹೊಂದಿ ಶರೀರವಾಗುವುದು) [ತದರ್ಹತ್ವಾತ್] = ಆ ಶರೀರಕ್ಕೆ ಉಪಾಸನಾದಿ ಯೋಗ್ಯತೆಯುಂಟಾದ್ದರಿಂದ, (ಕಾರಣ ವಾಚಿ ಶಬ್ದದಿಂದ ಕಾರ್ಯವನ್ನು ಹೇಳುವುದು)

**ವಿವರಣೆ**

'ಅವ್ಯಕ್ತ'—ವೆಂದರೆ ಮೂಲಪ್ರಕೃತಿಗೇ ಹೆಸರಾಗಿರುವಲ್ಲಿ ಆ ಪದ ಶರೀರವನ್ನು ಹೇಳುವುದು ಹೇಗೆ?—ಎಂದಲ್ಲಿ, ಶರೀರ ಆ ಮೂಲಪ್ರಕೃತಿಯಿಂದ ಉಂಟಾಗುವುದರಿಂದ ಕಾರಣವಾಚಕ ಶಬ್ದದಿಂದ ಕಾರ್ಯವನ್ನು ಇಲ್ಲಿ ಹೇಳಿದೆ. ಶರೀರವೇ ಪ್ರಕೃತದಲ್ಲಿ ಹೇಳಿರುವ ಉಪಾಸನಾದಿ ಕರ್ಮಗಳಿಗೆ ಯೋಗ್ಯವಾದ್ದರಿಂದ ವಶೀಕಾರ್ಯಗಳನ್ನು ಹೇಳುವ ಈ ಪ್ರಕರಣದಲ್ಲಿ ಶರೀರವನ್ನೇ ಹೇಳಬೇಕು.

ಸೂತ್ರ ೩—**ತದಧೀನತ್ವಾದರ್ಥವತ್**

**ಸೂತ್ರಾರ್ಥ**

[ತದಧೀನತ್ವಾತ್] = (ಶರೀರಾದಿಗಳು) ಆ ಪರಮಪುರುಷನಿಗೆ ಅಧೀನವಾದುದರಿಂದ [ಅರ್ಥವತ್] = (ಇಲ್ಲಿ ಅವನನ್ನು ಹೇಳುವುದು) ಸಪ್ರಯೋಜನವಾದದ್ದು.

**ವಿವರಣೆ**

ಆದರೆ, ಈ ಪ್ರಕರಣದಲ್ಲಿ, "ಪುರುಷಾನ್ನಪರಂಕಿಂಚಿತ್,"—ಎಂದು ಪರಮಪುರುಷನನ್ನು ಹೇಳುವುದೇಕೆ? ಎಂದಲ್ಲಿ, ಶರೀರ, ಇಂದ್ರಿಯ, ಆತ್ಮಾ ಮುಂತಾದ ಸಮಸ್ತವೂ ಅಂತರ್ಯಾಮಿಯಾದ ಪರಮಪುರುಷಾಧೀನವಾದ್ದರಿಂದ, ಅವನನ್ನು ವಶೀಕರಿಸದಿದ್ದಲ್ಲಿ ಉಪಾಸನೆ ನೆರವೇರುವುದಿಲ್ಲವಾದ್ದರಿಂದ, ಅವನನ್ನೂ ವಶೀಕರಿಸಬೇಕೆನ್ನುವುದಕ್ಕಾಗಿ ಪರಮಪುರುಷನನ್ನು ಇಲ್ಲಿ ಹೇಳಿದೆಯೆಂದು ತಾತ್ಪರ್ಯ.

ಸೂತ್ರ ೪—**ಜ್ಞೇಯತ್ವಾವಚನಾಚ್ಚ**

**ಸೂತ್ರಾರ್ಥ**

(ಮೂಲಪ್ರಕೃತಿಯನ್ನು) ಅರಿಯಬೇಕೆಂದು ಹೇಳಿಲ್ಲದುದರಿಂದಲೂ, (ಇದು ಮೂಲಪ್ರಕೃತಿಯಲ್ಲ.)

**ವಿವರಣೆ**

ಅವ್ಯಕ್ತವೆಂಬುದು ಇಲ್ಲಿ ಮೂಲಪ್ರಕೃತಿಯಾದಲ್ಲಿ, ಸಾಂಖ್ಯರು ಮೋಕ್ಷಾರ್ಥವಾಗಿ ಅದನ್ನು ಅರಿಯಬೇಕೆಂದು ಹೇಳುವುದರಿಂದ, ಇಲ್ಲಿಯೂ ಹಾಗೆಯೇ ಹೇಳಬೇಕಿತ್ತು. ಇಲ್ಲಿ ಹಾಗೆ ಹೇಳಿಲ್ಲವಾದ್ದರಿಂದ, ಇದು ಸಾಂಖ್ಯರು ಹೇಳುವ ಮೂಲಪ್ರಕೃತಿಯಲ್ಲ.

ಸೂತ್ರ ೫—**ವದತೀತಿಚೇನ್ನಪ್ರಾಜ್ಞೋಹಿ ಪ್ರಕರಣಾತ್**

**ಸೂತ್ರಾರ್ಥ**

[ವದತಿ] = "ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾರಸಂನಿತ್ಯಮಗಂಧವಚ್ಚಯತ್। ಅನಾದ್ಯನಂತಂ...ನಿಚಾಯ್ಯ..." ಎಂದು ಮೂಲಪ್ರಕೃತಿಗೆ ಜ್ಞೇಯತ್ವವನ್ನು ಮೇಲಣ ವಾಕ್ಯದಲ್ಲಿ ಹೇಳಿದೆ, [ಇತಿಃಚೇತ್] = ಎಂದಲ್ಲಿ [ನ] = ಹಾಗಲ್ಲ. [ಪ್ರಕರಣಾತ್] = ಪ್ರಕರಣದಿಂದ, [ಪ್ರಾಜ್ಞಃ, ಹಿ] = ಸರ್ವಜ್ಞನಾದ ಪರಮಪುರುಷನೇ ಹೇಳಲ್ಪಡುತ್ತಾನೆಯಷ್ಟೆ!

**ವಿವರಣೆ**

"ಮಹತಃ ಪರಂಧ್ರುವಂ ನಿಚಾಯ್ಯತಂ ಮೃತ್ಯುಮುಖಾತ್ ಪ್ರಮುಚ್ಯತೇ"—ಎಂಬ ವಾಕ್ಯದಲ್ಲಿ ಮಹತ್ತತ್ತ್ವಕ್ಕಿಂತ, ಮೇಲಾದ ಮೂಲಪ್ರಕೃತಿಯನ್ನು ಅರಿತ ನಂತರ ಸಂಸಾರದಿಂದ ಬಿಡಲ್ಪಡುವವನು—ಎಂದು ಮೂಲಪ್ರಕೃತಿಯನ್ನೂ ಜ್ಞೇಯವನ್ನಾಗಿ ಹೇಳಿದೆಯಾದ್ದರಿಂದ ಇಲ್ಲಿ ಅವ್ಯಕ್ತವೆಂಬುದು ಮೂಲಪ್ರಕೃತಿಯನ್ನೇ ಹೇಳುವುದು—ಎಂದಲ್ಲಿ, ಆ ಮೇಲಿನ ವಾಕ್ಯವು "ಅಶಬ್ದಮಸ್ಪರ್ಶಂ"—ಎಂದು ಉಪಕ್ರಮವಾಗಿ ಪರಮಾತ್ಮನನ್ನು ಹೇಳುವ ಪ್ರಕರಣವಾದ್ದರಿಂದ, ಆ ಪ್ರಕರಣದಲ್ಲಿ ಮೂಲ ಪ್ರಕೃತಿಯನ್ನು ಹೇಳದು. ಆದ್ದರಿಂದ ಪರಮಾತ್ಮನೇ ಅಲ್ಲಿ ಹೇಳಲ್ಪಟ್ಟಿರುವವನು.

ಸೂತ್ರ ೬—**ತ್ರಯಾಣಾಮೇವಚೈವಮುಪನ್ಯಾಸಃ ಪ್ರಶ್ನಶ್ಚ**

**ಸೂತ್ರಾರ್ಥ**

[ತ್ರಯಾಣಾಂ, ಏವ ಚ] = ಉಪಾಸಕ, ಉಪಾಸನ, ಉಪಾಸ್ಯ—ಈ ಮೂರಕ್ಕೇ ಹೀಗೆ [ಉಪನ್ಯಾಸಃ] = (ಈ ಪ್ರಕರಣದಲ್ಲಿ) ಉಪನ್ಯಾಸವೂ [ಪ್ರಶ್ನಃ, ಚ] = ಪ್ರಶ್ನವೂ (ಕಾಣಿಸುತ್ತವೆ)

**ವಿವರಣೆ**

ಈ ಪ್ರಕರಣದಲ್ಲಿ ಉಪಾಸಕನಾದ ಜೀವ, ಉಪಾಸನವಾದ ಭಕ್ತಿ, ಉಪಾಸನಾದ ಪರಮಪುರುಷ—ಈ ಮೂವರ ಸ್ವರೂಪ—ಸ್ವಭಾವಗಳನ್ನೇ ಶಿಷ್ಯ ಕೇಳಿದ್ದು. ಅದಕ್ಕೆ ಗುರು ತಕ್ಕ ಉತ್ತರ ಹೇಳುವುದೂ ಕಾಣುವುದು. ಮೂಲಪ್ರಕೃತಿಗೆ ಪ್ರಶ್ನವೂ ಉತ್ತರವೂ ಕಾಣದು. ಆದ್ದರಿಂದ, ಇಲ್ಲಿ ಜ್ಞೇಯವಾಗಿ ಹೇಳಲ್ಪಟ್ಟವನು ಪರಮಾತ್ಮಾ.

ಸೂತ್ರ ೭—**ಮಹದ್ವಚ್ಚ**

**ಸೂತ್ರಾರ್ಥ**

"ಬುದ್ಧೇರಾತ್ಮಾ ಮಹಾನ್ ಪರಃ"—ಎಂಬಲ್ಲಿಯ ಆತ್ಮ ಶಬ್ದ ಸಾಮಾನಾಧಿಕರಣ್ಯವುಳ್ಳ "ಮಹಾನ್"—ಎಂಬ ಪದದಿಂದ ಸಾಂಖ್ಯರು ಹೇಳುವ ಮಹತ್ತತ್ತ್ವ ಹೇಗೆ ಹೇಳಲ್ಪಡದೋ, ಹಾಗೆಯೇ "ಮಹತಃ ಪರಮವ್ಯಕ್ತಂ" ಎಂಬಲ್ಲಿಯೂ ಆತ್ಮವಾಚಿಯಾದ ಮಹತ್ತಿಗೆ ಪರವೆಂದು ಅವ್ಯಕ್ತವನ್ನು ಹೇಳಿರುವುದರಿಂದ, ಆ ಅವ್ಯಕ್ತ ಕಾಪಿಲತಂತ್ರ ಸಿದ್ಧವಾದ ಮೂಲಪ್ರಕೃತಿಯಲ್ಲ.

**ವಿವರಣೆ**

ಮೇಲೆ "ಆತ್ಮಾಮಹಾನ್ ಪರಃ"—ಎಂಬಲ್ಲಿ ಮಹಚ್ಛಬ್ದ ಮಹತ್ತತ್ತ್ವವನ್ನೇಕೆ ಹೇಳದು? ಎಂದಲ್ಲಿ, 'ಮಹಾನ್'—ಎಂಬುದು ಚೇತನವಾಚಿಯಾದ ಆತ್ಮ ಶಬ್ದಕ್ಕೆ ವಿಶೇಷಣವಾಗುವುದು ಉಚಿತ—ಏಕೆಂದರೆ ಆತ್ಮನಲ್ಲಿ ಮಹತ್ತ್ವವಿದೆ. ಆಗ್ಗೆ ಮಹತ್ ಶಬ್ದ ಮಹತ್ತತ್ತ್ವಪರ ಹೇಗಾದೀತು? ಇದಕ್ಕಾಗಿ 'ಮಹಾನ್'—ಎಂಬುದನ್ನು ಆತ್ಮ ಶಬ್ದಕ್ಕೆ ವಿಶೇಷ್ಯವನ್ನಾಗಿ ಯೋಜನೆಮಾಡಿ ಅದನ್ನು ಮಹತ್ತತ್ತ್ವ ಪರವಾಗಿಸಲು ಯೋಚಿಸಿದಲ್ಲಿ ಆಗ್ಗೆ ಅಚೇತನವಾದ ಮಹತ್ತತ್ತ್ವದಲ್ಲಿ ಆತ್ಮತ್ವ ಹೇಗೆ ಘಟಿಸುವುದು? ಆದ್ದರಿಂದ

'ಮಹಾನ್'—ಎಂಬುದರಿಂದ ವಿಶೇಷಿತನಾದ ಆತ್ಮನೇ—''ಮಹತಃಪರಂ''—ಎಂಬಲ್ಲಿ ರುವ 'ಮಹತ್'—ಶಬ್ದಕ್ಕೂ ವಿಷಯ. ಆತ್ಮತ್ತ್ವವೆಂಬುದು ಶರೀರ ಪ್ರತಿಸಂಬಂಧಿತ್ವ ರೂಪವಾದದ್ದು. ಈ ಶರೀರಪರವಾದದ್ದು ''ಮಹತಃಪರಂ ಅವ್ಯಕ್ತಂ''—ಎಂಬಲ್ಲಿರುವ ಅವ್ಯಕ್ತಶಬ್ದ. ಆದ್ದರಿಂದ 'ಮಹಾನ್' ಎಂಬುದು ಹೇಗೆ ಮಹತ್ತತ್ತ್ವಪರವಾಗದೋ ಆದರ ಮುಂದೆ ಬರುವ ಅವ್ಯಕ್ತ ಶಬ್ದವೂ ಮೂಲಪ್ರಕೃತಿ ಪರವಾಗದು.

ಈ ಅಧಿಕರಣದಲ್ಲಿಯ ಆಶಯ:—ಹಿಂದೆ, ''ಆತ್ಮಾನಂ ರಥಿನಂವಿದ್ಧಿ ಶರೀರಂ ರಥಮೇವಚ'' ಇತ್ಯಾದಿಯಿಂದ ಆತ್ಮ ಶರೀರಾದಿಗಳಿಗೆ ರಥಿರಥಾದಿಯಾಗಿ ರೂಪಣ ಮಾಡಲ್ಪಟ್ಟಿದೆ. ಹೀಗೆ ರೂಪಿತವಾದ ವಸ್ತುಗಳಲ್ಲಿ ಯಾವುದಕ್ಕಿಂತ ಯಾವುದಕ್ಕೆ ವಶೀ ಕಾರ್ಯತೆಯಲ್ಲಿ ಅತಿಶಯ?—ಎಂದಲ್ಲಿ, ''ಇಂದ್ರಿಯೇಭ್ಯಃ ಪರಾಹ್ಯರ್ಥಾ:...''— ಇತ್ಯಾದಿಯಿಂದ ಒಂದರಿಂದ ಒಂದಕ್ಕೆ ಅತಿಶಯವನ್ನು ಹೇಳುತ್ತಾ ಬಂದಿದೆ. ಇದರೊಳಗೆ ''ಆತ್ಮಾನಂ ರಥಿನಂವಿದ್ಧಿ''—ಇತ್ಯಾದಿಯಾಗಿ ಹಿಂದಿನ ಮಂತ್ರದಿಂದ ಉಕ್ತವಾದುವು ಗಳೆಲ್ಲವೂ ''ಇಂದ್ರಿಯೇಭ್ಯಃ ಪರಾಃ—''—ಇತ್ಯಾದಿಯಾದ ಮುಂದಿನ ಮಂತ್ರ ದಲ್ಲಿ ತಮ್ಮ ತಮ್ಮ ಶಬ್ದದಿಂದ ನಿರ್ದಿಷ್ಟವಾಗಿವೆ. ಇವುಗಳಲ್ಲಿ ಸ್ವಶಬ್ದ ಬಿಟ್ಟು ಹೋಗಿ ರುವುದು ''ಶರೀರಂ ರಥಮೇವ ಚ''—ಎಂಬಲ್ಲಿ ಹಿಂದೆ ಹೇಳಲ್ಪಟ್ಟ 'ಶರೀರ'— ಶಬ್ದಕ್ಕೆ ಮಾತ್ರ. ಪಾರಿಶೇಷ್ಯದಿಂದ ಆ ಶರೀರವೆಂಬುದೇ ಮುಂದಿನ ಮಂತ್ರದಲ್ಲಿಯ ಅವ್ಯಕ್ತ ಶಬ್ದದಿಂದ ಹೇಳಲ್ಪಟ್ಟಿದೆ. ಆದ್ದರಿಂದ ಇಲ್ಲಿಯ ಅವ್ಯಕ್ತ ಪದಕ್ಕೆ ಮೂಲ ಪ್ರಕೃತಿ ಅರ್ಥವಲ್ಲ ಶರೀರವೆಂದೇ ಅರ್ಥ.

## 2. ಚಮಸಾಧಿಕರಣ

### ಸೂತ್ರ—ಚಮಸವದವಿಶೇಷಾತ್

**ಸಂಗತಿ ಪ್ರತ್ಯುದಾಹೃತಿ:**

ಹಿಂದೆ ''ಆತ್ಮಾನಂ ರಥಿನಂವಿದ್ಧಿ ಶರೀರಂ ರಥಮೇವಚ''—ಇತ್ಯಾದಿ ರೂಪಕದಲ್ಲಿ ಕಾರ್ಯಭೂತವಾದ ಶರೀರವಾಚಿ ಶಬ್ದ ಶ್ರುತವಾದ್ದರಿಂದ, ಆ ಶರೀರವನ್ನೇ ಆದರ ಮುಂದಿನ ಮಂತ್ರ ಮಹತಃ ಪರಮವ್ಯಕ್ತಂ ಎಂಬಲ್ಲಿಯ ಅವ್ಯಕ್ತ ಶಬ್ದ ಹೇಳುತ್ತೆ ಎನ್ನಲಾಯಿತು. ಇಲ್ಲಿಯಾದರೋ—ಕಾರ್ಯಭೂತವಾದ ಶರೀರವಾಚಿ ಶಬ್ದ ಶ್ರುತವಲ್ಲದ್ದರಿಂದ ಕಾರಣವಾದ ಪ್ರಧಾನವೇ ಹೇಳಲ್ಪಡುತ್ತದೆ ಎಂಬ ಶಂಕೆ ಯಿಂದ ಸಂಗತಿ. ಅದನ್ನೇ—''ಪಾರಿಶೇಷ್ಯಸ್ಥಾನಮಾನೇನಾ ಜಾವಾಕ್ಯೇಸ್ತ ಇತ್ಯತಃ।

ಪ್ರತ್ಯುದಾಹರಣತ್ವೇನ ಚಮಸಾಖ್ಯಾನಯೋದಯಃ।''

—ಎಂದು ಪ್ರತ್ಯುದಾಹೃತಿ ಸಂಗತಿಯಲಕ್ಷಣ

**ವಿಷಯವಾಕ್ಯ**

ಅಥರ್ವಣದಲ್ಲಿ,—''ವಿಕಾರಜನನೀಮಜ್ಞಾಂ ಅಷ್ಟರೂಪಾ ಮಜಾಂ ಧ್ರುವಾಂ।—

''ಧ್ಯಾಯತೇಽಧ್ಯಾಸಿತಾ ತೇನ ತನ್ಯತೇ ಪ್ರೇರ್ಯತೇ ಪುನಃ

ಸೂಯತೇ ಪುರುಷಾರ್ಥಂ ಚ ತೇನೈವಾಧಿಷ್ಠಿತಾ ಜಗತ್॥''



''ಗೌರನಾದ್ಯನ್ತವತೀ ಸಾ ಜನಿತ್ರೀ ಭೂತಭಾವಿನೀ।
ಸಿತಾಸಿತಾ ಚ ರಕ್ತಾ ಚ ಸರ್ವಕಾಮದುಘಾವಿಭೋಃ
''ಪಿಬನ್ತ್ಯೇನಾ ಮ ವಿಷಮಾಂ ಅವಿಜ್ಞಾತಾಃ ಕುಮಾರಕಾಃ। ಏಕಸ್ತುಪಿಬತೇದೇವಃ ಸ್ವಚ್ಛನ್ದೋsತ್ರವಶಾನುಗಾಂ। ಧ್ಯಾನಕ್ರಿಯಾಭ್ಯಾಂ ಭಗವಾನ್ ಭುಂಕ್ತೇsಸೌ ಪ್ರಸಭಂ ವಿಭುಃ'' ಸರ್ವಸಾಧಾರಣೀಂ ದೋಗ್ಧ್ರೀಂ ಪೀಡ್ಯಮಾನಾಂ ತು ಯಜ್ವಭಿಃ''। ''ಚತುರ್ವಿಂಶತಿ ಸಂಖ್ಯಾತಂ ಅವ್ಯಕ್ತಂ ವ್ಯಕ್ತಮುಚ್ಯತೇ।।''—
''ಅಜಾಮೇಕಾಂ ಲೋಹಿತ ಶುಕ್ಲ ಕೃಷ್ಣಾಂ...''ಇತ್ಯಾದಿ.

**ಸೂತ್ರಾರ್ಥ**

[ಚಮಸವತ್] = ಚಮಸಕ್ಕೆ ಹೇಗೋ ಹಾಗೆ. [ಅವಿಶೇಷಾತ್] = ವಿಶೇಷ ಹೇತುವಿಲ್ಲದ್ದರಿಂದ. ('ಅಜಾ' ಎಂಬ ಪದ ಮೂಲಪ್ರಕೃತಿಯನ್ನು ಹೇಳದು.)

**ವಿವರಣೆ**

''ಅಜಾಮೇಕಾಂ ಲೋಹಿತ ಶುಕ್ಲ ಕೃಷ್ಣಾಂ ಬಹ್ವೀಂ ಪ್ರಜಾಂಸ್ಯಜಮಾನಾಗ್ಂ ಸರೂಪಾಃ''—ಇತ್ಯಾದಿಯಾದ ಈ ಅಧಿಕರಣದ ವಿಷಯವಾಕ್ಯದ ಅರ್ಥ.

ಕೆಂಪು, ಬಿಳುಪು, ಕಪ್ಪು—ಅಂದರೆ, ಸತ್ತ್ವ–ರಜಸ್–ತಮೋಮಯವಾಗಿ ತನಗೆ ಸಜಾತೀಯಗಳಾದ ಅನೇಕ ಪ್ರಜೆಗಳನ್ನು ಸೃಷ್ಟಿಸುವುದೂ, ಉತ್ಪತ್ತಿಯಿಲ್ಲದ್ದೂ ಆದ ಪ್ರಕೃತಿಯನ್ನು ಒಬ್ಬನು ಹೊಂದುತ್ತಾನೆ. ಮತ್ತೊಬ್ಬ ಬಿಡುತ್ತಾನೆ—ಎಂಬುದು. ''ಚಮ್ಯತೇ (ಪೀಯತೇ) + ಅನೇನ, ಇತಿ ಚಮಸಃ''—ಎಂದು ವ್ಯುತ್ಪನ್ನವಾದ ಚಮಸ ಶಬ್ದಕ್ಕೆ ಯಾಗದಲ್ಲಿ ಸೋಮರಸವನ್ನು ಪಾನಮಾಡಲು ಉಪಯೋಗಿಸುವ ಒಂದು ಪಾತ್ರೆ—ಅಂದರೆ ಯಾಗದಲ್ಲಿ ಉಪಯೋಗಿಸುವ ಸೌಟಿನ ಆಕಾರದ ಒಂದು ಮರದ ಪಾತ್ರೆ ಎಂದರ್ಥ. ಪ್ರಕೃತದಲ್ಲಿ ''ಅರ್ವಾಗ್ಬಿಲಶ್ಚಮಸಃ ಊರ್ಧ್ವಬುಧ್ನಃ''—ಎಂಬ ಮಂತ್ರದಲ್ಲಿ ' ಚಮಸ'–ಪದದಿಂದ ಭಕ್ಷಣಸಾಧನವಾದ ಪಾತ್ರೆಯೆಂದು ಮಾತ್ರವೇ ಅರ್ಥ ತೋರುತ್ತೆ. ಇದರಂತೆಯೇ ''ಅಜಾ''-ಶಬ್ದಕ್ಕೆ 'ನ ಜಾಯತೇ ಇತಿ ಅಜಾ'–(ಜನ್ಮವಿಲ್ಲದ್ದು) ಎಂದಿಷ್ಟೇ ಅರ್ಥ. ''ಯಥೇದಂ ತಚ್ಛಿರಃ ಏಷಹ್ಯರ್ವಾಗ್ಬಿಲಶ್ಚಮಸಃ'' ಊರ್ಧ್ವ ಬುಧ್ನಃ–ಇತ್ಯಾದಿ ವಾಕ್ಯಶೇಷದಿಂದ ಚಮಸ ವಿಶೇಷವಾದ ಶಿರಸ್ಸು—ಎಂದು ಅರ್ಥ ನಿಶ್ಚಯವಾಗುವುದು.

ಇದರಲ್ಲಿ 'ಅಜಾ'—ಎಂಬ ಪದವು ಸಾಂಖ್ಯರು ಹೇಳುವ ಅಬ್ರಹ್ಮಾತ್ಮಕ (ಬ್ರಹ್ಮಾತ್ಮಕವಲ್ಲದ) ವಾದ ಪ್ರಕೃತಿಯನ್ನು ಹೇಳುವುದೋ? ಇಲ್ಲವೋ?—ಎಂದು ಸಂಶಯ.

''ಅಜಾ'—ಎಂದು, ಉತ್ಪತ್ತಿಯಿಲ್ಲವೆಂದೂ, ಅನೇಕ ಪ್ರಜೆಗಳನ್ನು ತಾನೇ ಸ್ವತಂತ್ರವಾಗಿ ಸೃಷ್ಟಿಸುವುದೆಂದೂ ಹೇಳುವುದರಿಂದ ಸಾಂಖ್ಯರು ಹೇಳುವ ಅಬ್ರಹ್ಮಾತ್ಮಕ ಮೂಲಪ್ರಕೃತಿಯೇ 'ಅಜಾ'—ಎಂಬ ಪದಕ್ಕೆ ಅರ್ಥ—ಎಂದು ಪೂರ್ವಪಕ್ಷ.

"ಅಜಾ"—ಎಂದರೆ ಉತ್ಪತ್ತಿಯಿಲ್ಲದ್ದು ಎಂದು ಅರ್ಥ. ಉತ್ಪತ್ತಿಯಿಲ್ಲದ ವಸ್ತುಗಳು, ಅನೇಕವಿರಲಾಗಿ, ಅವುಗಳಲ್ಲಿ ಒಂದಾದ ಮೂಲಪ್ರಕೃತಿಯನ್ನೇ ಈ ಶಬ್ದ ಹೇಳುವುದೆಂದು ನಿಶ್ಚಯಿಸಲಾಗದು. ಈ ವಿಧವಾದ ಶಬ್ದಗಳಿಗೆ ಯೌಗಿಕ ಶಬ್ದಗಳೆಂದು ಹೆಸರು: ಅಂದರೆ, ತಾನು ಒಂದರ್ಥವನ್ನು ಹೇಳುವಾಗ ಅದರ ಗುಣಗಳನ್ನು ಕಂಡು ಹೇಳುವುದು ಈ ವಿಧವಾದ ಶಬ್ದಗಳು ವ್ಯಕ್ತಿವಿಶೇಷಗಳನ್ನೇ ಹೇಳತಕ್ಕ ಮತ್ತೊಂದು ಹೇತುವಿಲ್ಲದಿದ್ದಲ್ಲಿ ತಾವಾಗಿಯೇ ಒಂದು ವ್ಯಕ್ತಿಯನ್ನು ಅವು ತೋರಿಸಲಾರವು. ಇದಕ್ಕೆ ಲೋಕ ದೃಷ್ಟಾನ್ತ ಕೊಡುವುದಾದರೆ;— "ಪಾಚಕ"—(ಅಡಿಗೆ ಮಾಡುವವನು)—ಎಂದರೆ, ಇಷ್ಟುಮಾತ್ರದಿಂದಲೇ, ಈ ಉದ್ಯೋಗವುಳ್ಳವನು ಏರ್ಪಡುವನೇ ಹೊರತು, ಅವನು ಇಂತಹವನೆಂದು ಏರ್ಪಡನು. "ಪಾಚಕನು ರಾಮ'—ಎಂದಲ್ಲಿ, ಇಂತಹವನೆಂದು ಏರ್ಪಡುವನು. ಇಲ್ಲಿ ಅದು ಹೇಗೆಂದರೆ;— "ಅರ್ವಾಗ್ಬಿಲ ಊರ್ಧ್ವಬುಧ್ನಶ್ಚಮಸಃ,—ಎಂಬ ವಾಕ್ಯಕ್ಕೆ ಕೆಳಗಡೆಯಲ್ಲಿ ಬಾಯಿಯುಳ್ಳದ್ದಾಗಿ ಮೇಲ್ಗಡೆ ದಪ್ಪವಾಗಿರುವುದು 'ಚಮಸ'—ಎಂದರ್ಥ. ಚಮಸವೆಂಬುದು ಭಕ್ಷಣಕ್ಕೆ ಸಾಧನ. ಇದರಲ್ಲಿ ಚಮಸ ಪದಕ್ಕೆ ಕೆಳಗೆ ಹೇಳಿದ ಲಕ್ಷಣವುಳ್ಳ ಭಕ್ಷಣಸಾಧನವಾದ ಹೇತುವಾವುದೆಂದರೆ, "ಯಧೇದಂ ತಚ್ಛಿರಃ"—ಎಂದು ಮುಂದಿನ ವಾಕ್ಯದಲ್ಲಿ—ಈ ಚಮಸವನ್ನು ಶಿರಸ್ಸು ಎಂದು ಹೇಳುವುದರಿಂದ, ಆ ಹೇತುವಿನಿಂದ ಈ ಚಮಸ ಪದಕ್ಕೆ ಶಿರಸ್ಸು ಅರ್ಥವೆಂದು ನಿಶ್ಚಯಿಸಲ್ಪಡುತ್ತೆ. ಅದರಂತೆ ಪ್ರಕೃತದಲ್ಲಿ 'ಅಜಾ'—ಎಂಬ ಶಬ್ದಕ್ಕೆ ವಿಶೇಷ ಹೇತು ಒಂದೂ ಕಾಣದುದರಿಂದ ಇದು ಅಬ್ರಹ್ಮಾತ್ಮಕವಾದ ಮೂಲಪ್ರಕೃತಿಯೆಂದು ನಿಶ್ಚಯಿಸಲಾಗದು. ಅಲ್ಲದೆ, ಇದು ಅನೇಕ ಪ್ರಜೆಗಳನ್ನು ಸೃಷ್ಟಿಸುವುದೆಂದು ಹೇಳಿದೆಯಲ್ಲದೆ, ಸ್ವತಂತ್ರವಾಗಿ ಸೃಷ್ಟಿಸುವುದೆಂದು ಹೇಳಿಲ್ಲ. ಈ ಸೃಷ್ಟಿ ವೇದಾಂತಿಗಳು ಹೇಳುವಂತೆ ಬ್ರಹ್ಮಾತ್ಮಕವಾದ ಪ್ರಕೃತಿಗೂ ಕೂಡುವುದಾದ್ದರಿಂದ ಇದರಿಂದಲೂ ಅಬ್ರಹ್ಮಾತ್ಮಕವಾದ ಪ್ರಕೃತಿಯೆಂದು ನಿಶ್ಚಯಿಸಲಾಗದು.—ಎಂದು ಸಿದ್ಧಾನ್ತ.

ಸೂತ್ರ ೨—**ಜ್ಯೋತಿರುಪಕ್ರಮಾ ತು ತಥಾಹ್ಯಧೀಯತ ಏಕೇ**

**ಸೂತ್ರಾರ್ಥ**

[ಜ್ಯೋತಿರುಪಕ್ರಮಾ ತು] = (ಇಲ್ಲಿ ಹೇಳಲ್ಪಟ್ಟ ಪ್ರಕೃತಿ) ಪರಮಾತ್ಮನನ್ನು ಕಾರಣವಾಗಿಯುಳ್ಳ ಬ್ರಹ್ಮಾತ್ಮಕವಾದ, ಪ್ರಕೃತಿಯೇ [ತಥಾ, ಹಿ] = ಹಾಗೆಯೇ [ಏಕೇ] = ಒಬ್ಬರು (ತೈತ್ತಿರೀಯರು) [ ಅಧೀಯತೇ] = ಹೇಳುತ್ತಾರೆ. [ಜ್ಯೋತಿ = ಬ್ರಹ್ಮ]

**ವಿವರಣೆ**

ಇಲ್ಲಿ ಹೇಳಲ್ಪಟ್ಟ ಪ್ರಕೃತಿ ಪರಮಾತ್ಮನಿಂದ ಹುಟ್ಟಿದುದಾಗಿ ಬ್ರಹ್ಮಾತ್ಮಕವೆಂದು ವೇದಾಂತಿಗಳು ಹೇಳುವ ಪ್ರಕೃತಿಯೇ ಎಂದು ನಿಶ್ಚಯಿಸಲ್ಪಡುವುದು. ಹೇಗೆಂದರೆ:— ತೈತ್ತಿರೀಯ ಶಾಖೆಯಲ್ಲಿ."ಸಪ್ತಪ್ರಾಣಾಃ..."—ಎಂದು ಆರಂಭಿಸಿ ಸಕಲ ವಸ್ತುಗಳೂ ಪರಮಾತ್ಮನಿಂದ ಉತ್ಪನ್ನಗಳಾದ್ದರಿಂದ, ಅವನ್ನು ಬ್ರಹ್ಮಾತ್ಮಕವಾಗಿ ಅನುಸಂಧಾನ ಮಾಡಬೇಕೆಂದು ಹೇಳುವ ಸಮಯದಲ್ಲಿ, "'ಅಜಾಮೇಕಾಂ,"—ಎಂದು ಪ್ರಕೃತಿಯನ್ನು

ಹೇಳುವುದರಿಂದ, ಈ ಪ್ರಕೃತಿಯನ್ನೂ ಬ್ರಹ್ಮಾತ್ಮಕವನ್ನಾಗಿಯೇ ಅನುಸಂಧಾನಮಾಡಬೇಕೆಂದೇ ನಿಶ್ಚಯಿಸಲ್ಪಡುವುದು. ಅದರಂತೆಯೇ, ಆ ಮಂತ್ರದೊಡನೆ ಸಮಾನವಾದ ಈ ಮಂತ್ರದಲ್ಲಿಯೂ, ಆ ಬ್ರಹ್ಮಾತ್ಮಕವಾದ ಪ್ರಕೃತಿಯೇ ಆಗಿರಬೇಕೆಂದು ನಿಶ್ಚಯಿಸಲ್ಪಡುವುದು. ಆದ್ದರಿಂದ, ಸಾಂಖ್ಯರು ಹೇಳುವ ಬ್ರಹ್ಮಾತ್ಮಕವಲ್ಲದ ಪ್ರಕೃತಿ ಇಲ್ಲಿ ಹೇಳಲ್ಪಟ್ಟಿಲ್ಲ.

'ಜ್ಯೋತಿರುಪಕ್ರಮಾ'—ಎಂದರೆ— "ತಂದೇವಾ ಜ್ಯೋತಿಷಾಂ ಜ್ಯೋತಿಃ" "ಅಥಯದತಃ ಪರೋಜ್ಯೋತಿರ್ದೀಪ್ಯತೇ—ಇತ್ಯಾದಿ ಶ್ರುತಿ ಪ್ರಸಿದ್ಧಿಯಿರುವುದರಿಂದ —ಜ್ಯೋತಿಃ ಅಂದರೆ ಬ್ರಹ್ಮ—ಉಪಕ್ರಮ = ಕಾರಣ—ಬ್ರಹ್ಮಕಾರಣಿಕಾ—ಈ 'ಅಜಾ' ಅಂದರೆ ಪ್ರಕೃತಿಯು ಬ್ರಹ್ಮನನ್ನೇ ಕಾರಣವಾಗಿಯುಳ್ಳದೆಂದು ಅರ್ಥ.

## ಸೂತ್ರ ೩—**ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ**

### ಸೂತ್ರಾರ್ಥ

[ಕಲ್ಪನೋಪದೇಶಾತ್,ಚ] = ಉತ್ಪತ್ತಿಯನ್ನು ಉಪದೇಶಿಸುವುದರಿಂದಲೂ, [ಮಧ್ವಾದಿವತ್] = (ಸೂರ್ಯನಿಗೆ) ಮಧು ಸ್ವರೂಪವೆಂದಂತೆ [ಅವಿರೋಧಃ] = ಈ ಪ್ರಕೃತಿ ಉತ್ಪನ್ನವೆಂದೂ. 'ಅಜಾ', ಅಂದರೆ ಉತ್ಪನ್ನವಲ್ಲವೆಂದೂ ಹೇಳುವುದರಲ್ಲಿ ವಿರೋಧವಿಲ್ಲ.

### ವಿವರಣೆ

ಆದರೆ, ಈ ಪ್ರಕೃತಿ 'ಅಜಾ'—ಎಂದು ಉತ್ಪತ್ತಿಯಿಲ್ಲದ್ದೆಂದೂ, 'ಜ್ಯೋತಿರುಪಕ್ರಮಾ'—ಎಂದು ಪರಮಾತ್ಮನಿಂದ ಉಂಟಾದುದೆಂದೂ ಹೇಳುವುದು ಒಂದಕ್ಕೊಂದು ವಿರುದ್ಧವಲ್ಲವೋ?—ಎಂದಲ್ಲಿ, ಪ್ರಳಯಕಾಲದಲ್ಲಿ, ಈ ಪ್ರಕೃತಿ ಅತಿಸೂಕ್ಷ್ಮವಾಗಿ ಕಾರಣಾವಸ್ಥೆಯನ್ನು ಹೊಂದಿ ಪರಮಾತ್ಮನಿಗೆ ಶಕ್ತಿರೂಪವಾಗಿರುವುದರಿಂದ ಆ ಅವಸ್ಥೆಯ ಬಗ್ಗೆ ಇದು ಉತ್ಪತ್ತಿರಹಿತವೆಂದೂ ಸೃಷ್ಟಿಕಾಲದಲ್ಲಿ ಮೊದಲು ಸೂಕ್ಷ್ಮವಾಗಿದ್ದ ಪ್ರಕೃತಿಯೇ ಸ್ಥೂಲರೂಪವಾಗಿ ಪರಮಾತ್ಮನಿಂದ ಸೃಜಿಸಲ್ಪಡುವುದರಿಂದ, ಆ ಕಾರ್ಯಾವಸ್ಥೆಯ ಬಗ್ಗೆ ಪರಮಾತ್ಮನಿಂದ ಉಂಟಾಯಿತೆಂದೂ, ಅವಸ್ಥಾ ಭೇದಗಳನ್ನು ಕುರಿತು ಹೇಳುವುದರಿಂದ ವಿರೋಧವಿಲ್ಲ. ಇದಕ್ಕೆ ದೃಷ್ಟಾಂತ.— ಸೂರ್ಯನನ್ನು 'ಮಧು' ಎಂದು ಹೇಳಿದೆ. ಮಧುವೆಂದರೆ:—ವಸ್ವಾದಿಗಳು ಭುಜಿಸುವ ರಸಕ್ಕೆ ಆಧಾರವಾಗಿರುವಿಕೆ. ಮತ್ತೊಂದೆಡೆಯಲ್ಲಿ, ಆ ಸೂರ್ಯನನ್ನೇ ಉದಯಾಸ್ತಮಯಗಳೂ ನಾಮರೂಪಗಳೂ ಇಲ್ಲದವನೆಂದೂ ಹೇಳಿದೆ. ಹೀಗೆ ರಸಾಶ್ರಯವಾದ ರೂಪವುಳ್ಳವನೆಂದೂ, ರೂಪವಿಲ್ಲದವನೆಂದೂ, ಪರಸ್ಪರ ವಿರುದ್ಧವಾಗಿ ಹೇಳಿರುವ್ಯದಕ್ಕೆ ತಾತ್ಪರ್ಯ. ಕಾರ್ಯಾವಸ್ಥೆಯಲ್ಲಿ, ರಸಾಧಾರನೆಂದೂ, ಕಾರಣಾವಸ್ಥೆಯಲ್ಲಿ ನಾಮರೂಪಗಳಿಲ್ಲದವನೆಂದೂ ಹೇಳಿದೆಯೆಂದೂ ಸ್ವೀಕರಿಸುತ್ತಾರೆ. ಅದರಂತೆಯೇ ಇಲ್ಲಿಯೂ ತಿಳಿಯತಕ್ಕದ್ದು.

## 3. ಸಂಖ್ಯೋಪಸಂಗ್ರಹಾಧಿಕರಣ

ಸೂತ್ರ **ನಸಂಖ್ಯೋಪಸಂಗ್ರಹಾದಪಿ ನಾನಾ ಭಾವಾದತಿರೇಕಾಚ್ಚ**

ಇದು [ಅಜಾಶರೀರಕಬ್ರಹ್ಮವಿದ್ಯಾ]

### ಪ್ರತ್ಯುದಾಹೃತಿ ಸಂಗತಿ

ಅಜಾ ಶಬ್ದಕ್ಕೆ ಸ್ವತಂತ್ರ ಪ್ರಕೃತಿಯೆನ್ನಲು ವಿಶೇಷ ಹೇತುವಿಲ್ಲದ್ದರಿಂದ, ವಾಕ್ಯಾಂತರಕ್ಕೆ ಅನುಸಾರವಾಗಿ ಬ್ರಹ್ಮಾತ್ಮಕತ್ವವನ್ನು ಸಾಧಿಸಿಯಾಯಿತು. ಅದು ಸರಿಯಲ್ಲ—ಪರಮಾತ್ಮಪರವಾದಲ್ಲಿ ಸಂಖ್ಯೆ ಅಧಿಕವಾಗುತ್ತೆ. ಪರಮಾತ್ಮ ಎಂಬವನಿಲ್ಲದೆಯೇ ಸಂಖ್ಯೆ ಪೂರೈಸುತ್ತೆಯೆಂಬ ವಿಶೇಷ ನಿಶ್ಚಯ ಸಂಭವಿಸುವುದರಿಂದ ಪ್ರಕೃತಿ ಬ್ರಹ್ಮಾತ್ಮಕವಲ್ಲ—ಎಂಬ ಶಂಕೆಯಿಂದ ಸಂಗತಿ.

"ವಾಕ್ಯಾಂತರಸ್ಯ ಚಾ ಭಾವಾತ್ ತತ್ತ್ವಸಂಖ್ಯಾ ವಿರೋಧತಃ।
ಸಂಖ್ಯೋಪಸಂಗ್ರಹನಯೇ ಶಂಕಾತಃ ಪ್ರತ್ಯುದಾಹೃತಿಃ॥"—ಎಂದು ನಯಸಂಗತಿ ಮಾಲಿಕೆಯಲ್ಲಿ ಹೇಳಿದೆ.

### ವಿಷಯವಾಕ್ಯ

ವಾಜಸನೇಯಕದಲ್ಲಿ:—"ಯಸ್ಮಿನ್ ಪಂಚ ಪಂಚ ಜನಾ ಆಕಾಶಶ್ಚ ಪ್ರತಿಷ್ಠಿತಃ।
ತಮೇವಂ ಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽಮೃತಂ॥"—ಎಂಬುದು.

### ಸೂತ್ರಾರ್ಥ

[ಸಂಖ್ಯೋಪಸಂಗ್ರಹಾತ್ ಅಪಿ]—(ಪಂಚ ಪಂಚ ಜನಾಃ—ಎಂಬ ಶ್ರುತಿಯಲ್ಲಿ ಇಪ್ಪತ್ತೈದು ಎಂಬ) ಸಂಖ್ಯೆಯನ್ನು ಅರ್ಥವನ್ನಾಗಿ ತೆಗೆದುಕೊಂಡಾಗ್ಯೂ [ನಾನಾಭಾವಾತ್] = (ಸಾಂಖ್ಯರ ಪ್ರಕ್ರಿಯೆಗಿಂತ) ಬೇರೆ ವಿಧವಾದ ಪ್ರಕ್ರಿಯೆ ಕಾಣುವುದರಿಂದಲೂ, ಅತಿರೇಕಾತ್, ಚ] = ಇಪ್ಪತ್ತೈದಕ್ಕಿಂತ ಅಧಿಕವಾದ ತತ್ತ್ವ ಕಾಣುವುದರಿಂದಲೂ, [ನ] = (ಆ ವಾಕ್ಯದಲ್ಲಿ) ಇಪ್ಪತ್ತೈದು ತತ್ತ್ವಗಳು ಹೇಳಲ್ಪಟ್ಟಿಲ್ಲ.

### ವಿವರಣೆ

"ಯಸ್ಮಿನ್ ಪಂಚ ಪಂಚ ಜನಾ...॥"—ಎಂಬ ವಾಕ್ಯದಲ್ಲಿ ಪಂಚ ಪಂಚ ಜನಾಃ ಎಂದು ಸಾಂಖ್ಯರು ಹೇಳುವ ೨೫ ತತ್ತ್ವಗಳು ಹೇಳಲ್ಪಟ್ಟಿವೆಯೇ? ಇಲ್ಲವೇ—ಎಂದು ಸಂಶಯ. "ಪಂಚ ಜನಾಃ"—ಎಂಬಲ್ಲಿ, ೫ × ೫ = ೨೫, ಎಂದರ್ಥ. ಇದು ಮೋಕ್ಷ ಪ್ರಕರಣವಾದ್ದರಿಂದ, ಇಲ್ಲಿ ಹೇಳಿರುವ ಇಪ್ಪತ್ತೈದು, ಸಾಂಖ್ಯರು ಹೇಳುವ ಇಪ್ಪತ್ತೈದು ತತ್ತ್ವಗಳೇ ಆಗಿರಬೇಕು.—ಎಂದು ಪೂರ್ವಪಕ್ಷ.

ಇಲ್ಲಿ "ಪಂಚ, ಪಂಚ ಜನಾಃ"—ಎಂಬುದಕ್ಕೆ '೨೫'— ಎಂದರ್ಥವಲ್ಲ. ಹಾಗೆ ಅಂಗೀಕರಿಸಿದಾಗ್ಯೂ, "ಯಸ್ಮಿನ್ ಪಂಚ ಪಂಚ ಜನಾಃ "ಆಕಾಶಶ್ಚ ಪ್ರತಿಷ್ಠಿತಃ।"—ಅಂದರೆ, ಯಾವ ಬ್ರಹ್ಮದಲ್ಲಿ ಐದಾದ ಪಂಚ ಜನಗಳೂ, ಆಕಾಶವೂ ಇವೆಯೋ, (ಆ ಪರಬ್ರಹ್ಮವನ್ನು ಅರಿತು ಮುಕ್ತಿ ಹೊಂದುವನು)—ಎಂದು ಐದಾದ ಪಂಚ ಜನಗಳೂ

ಪರಮಾತ್ಮನನ್ನು ಆಧಾರವಾಗಿಯುಳ್ಳದ್ದು—ಎಂದು ಹೇಳುವುದರಿಂದ, ಸಾಂಖ್ಯರು ಹೇಳುವ ಪ್ರಕ್ರಿಯೆ ತಪ್ಪಿಬಿಟ್ಟಿತು. ಆದ್ದರಿಂದ ಇಲ್ಲಿ ಬ್ರಹ್ಮಾತ್ಮಕವಾದುದನ್ನು ಹೇಳಿತೇ ಹೊರತು ಸಾಂಖ್ಯರು ಹೇಳುವ ಅಬ್ರಹ್ಮಾತ್ಮಕವಾದ ೨೫ ತತ್ತ್ವಗಳು ಹೇಳಲ್ಪಟ್ಟಿಲ್ಲ. ಅಲ್ಲದೆ, ಅವರು ಒಪ್ಪಿಕೊಂಡದ್ದು ೨೫ ತತ್ತ್ವ. ಇಲ್ಲಿ ಅದಕ್ಕಿಂತ ಅಧಿಕವಾಗಿ ಅವಕ್ಕೆ ಆಧಾರವಾದ ಒಂದೂ, ಆಕಾಶವೂ ಹೇಳಲ್ಪಡುವುದರಿಂದ, ಇದು ಅವರು ಹೇಳುವ ೨೫ ತತ್ತ್ವಗಳಾಗದು—ಆದ್ದರಿಂದ ಇಲ್ಲಿ "ಪಂಚ ಜನಾ"—ಎಂಬುದು ಸಂಜ್ಞಾವಿಷಯ—ಪಂಚಜನರೆಂದು ಕೆಲವರಿರುವರು. ಅವರನ್ನು ಪಂಚ ಶಬ್ದ ವಿಶೇಷಿಸುತ್ತದೆ. ಏಳು ಸಪ್ತರ್ಷಿಗಳು ಎಂಬಂತೆ ಐದು ಪಂಚ ಜನರೆಂಬುದು ಸಿದ್ಧಾಂತ.

[ಹಾಗಾದರೆ ಆ ಐದು ಪಂಚಜನರೆಂಬವರು ಯಾರು?—ಎಂದರೆ ಉತ್ತರ ಕೆಳಗಿನ ಸೂತ್ರದಲ್ಲಿ ಕಾಣುತ್ತೆ.]

## ಸೂತ್ರ ೨—ಪ್ರಾಣಾದಯೋ ವಾಕ್ಯಶೇಷಾತ್

### ಸೂತ್ರಾರ್ಥ

"ಪ್ರಾಣಸ್ಯಪ್ರಾಣ ಮುತ ಚಕ್ಷುಷಶ್ಚಕ್ಷು ಶ್ರೋತ್ರಸ್ಯಶ್ರೋತ್ರಂ ಅನ್ನಸ್ಯಾನ್ನಂ ಮನಸೋ ಮನೋಯೇ ವಿದುಃ",—ಎಂಬ [ವಾಕ್ಯಶೇಷಾತ್] = ವಾಕ್ಯ ಶೇಷದಿಂದ [ಪ್ರಾಣಾದಯಃ] = (ಬ್ರಹ್ಮಾಶ್ರಯವಾದ) ಪ್ರಾಣ, ಚಕ್ಷುಸ್, ಶ್ರೋತ್ರ, ಅನ್ನ, ಮನಸ್ಸು, ಎಂಬ ಐವರು (ಆ ಪಂಚ ಜನರೆಂಬುವರು).

## ಸೂತ್ರ ೩—ಜ್ಯೋತಿಷೈಕೇಷಾಮಸತ್ಯನ್ನೇ

### ಸೂತ್ರಾರ್ಥ

[ಏಕೇಷಾಂ] = ಒಬ್ಬರ (ಕಾಣ್ವರುಗಳ) (ಪಾಠದಲ್ಲಿ) [ಅನ್ನೇ] = ಅನ್ನವು [ಅಸತಿ] = ಇಲ್ಲದಿದ್ದಾಗ್ಯೂ. [ಜ್ಯೋತಿಷಾ] = ಜ್ಯೋತಿಶ್ಶಬ್ದದಿಂದ ('ಪಂಚ ಜನಾಃ') —ಎಂದು ಹೇಳಲ್ಪಟ್ಟವರು ಇಂದ್ರಿಯಗಳೆಂದು ನಿಶ್ಚಯಿಸಲ್ಪಡುವುದು.

### ವಿವರಣೆ

ಕಾಣ್ವರಿಗೂ ಮಾಧ್ಯಂದಿನರಿಗೂ—"ಯಸ್ಮಿನ್ ಪಂಚ ಪಂಚ ಜನಾಃ..."ಎಂಬ ಮಂತ್ರ ಸಮಾನ. "ಪ್ರಾಣಸ್ಯ ಪ್ರಾಣಂ..."—ಇತ್ಯಾದಿ ವಾಕ್ಯಶೇಷದಲ್ಲಿ ಕಾಣ್ವರು 'ಅನ್ನ'—ಎಂಬುದನ್ನು ಹೇಳದೆ ಮಿಕ್ಕ ನಾಲ್ಕನ್ನು ಮಾತ್ರ ಹೇಳಿದ್ದಾರೆ. ಹೀಗಿರುವಲ್ಲಿ, 'ಪಂಚ ಜನ'—ಶಬ್ದಕ್ಕೆ ಇಂದ್ರಿಯಗಳೆಂದು ಅರ್ಥ ಹೇಗೆ ನಿಶ್ಚಯಿಸಲ್ಪಡುವುದು?—ಎಂದಲ್ಲಿ, ಆರಂಭದಲ್ಲಿ, "ತಂ ದೇವಾ ಜ್ಯೋತಿಷಾಂ ಜ್ಯೋತಿಃ ಆಯುರ್ಹೋಪಾಸತೇಽಮೃತಂ।" ಎಂದರೆ, ಪ್ರಕಾಶಕಗಳಿಗೆಲ್ಲಾ ಪ್ರಕಾಶಕನಾದವನು ಪರಮಾತ್ಮಾ—ಎಂದು ಹೇಳಿ, ಅಲ್ಲಿ ಪ್ರಕಾಶಕಗಳೆಂದು ಹೇಳಲ್ಪಟ್ಟವು ಯಾವುವು?—ಎಂದಲ್ಲಿ, "ಪಂಚ ಪಂಚ ಜನಾಃ",—ಎಂದು ಸಾಮಾನ್ಯವಾಗಿ ಹೇಳಿ, ತರುವಾಯ. "ಪ್ರಾಣಸ್ಯ ಪ್ರಾಣಂ··" —ಇತ್ಯಾದಿಯಾಗಿ ವಿವರಿಸಿದೆ. ಮೊದಲು ಪ್ರಕಾಶಕಗಳೆಂದು ಹೇಳಿ ಆ ಮೇಲೆ ಅವು ಐದು

ಎಂದು ವಿವರಿಸುವುದರಿಂದ, ಪಂಚೇಂದ್ರಿಯಗಳೇ ರೂಪಾದಿಗಳಿಗೆ ಪ್ರಕಾಶಕಗಳಾದ್ದರಿಂದ ಪ್ರಕಾಶಕವಾಚಕವಾದ ಜ್ಯೋತಿಶ್ಶಬ್ದದಿಂದ ಪಂಚಜನ ಶಬ್ದಕ್ಕೆ ಇಂದ್ರಿಯಗಳು ಅರ್ಥ ವೆಂದು ನಿಶ್ಚಯಿಸಲ್ಪಡುತ್ತೆ. ಪ್ರಾಣನೆಂದರೆ ತ್ವಗಿಂದ್ರಿಯ, ಅನ್ನವೆಂದರೆ ಘ್ರಾಣೇಂದ್ರಿಯವೂ ಮತ್ತು ರಸನೇಂದ್ರಿಯವೂ. ಆದ್ದರಿಂದ ಸರ್ವತ್ರ ವೇದಾಂತದಲ್ಲಿ ಸಂಖ್ಯೋಪಸಂಗ್ರಹದಿಂದಲಾಗಲಿ, ಅಥವಾ ಅದಿಲ್ಲದೆಯಾಗಲಿ ಕಾಪಿಲ ತಂತ್ರಸಿದ್ಧತತ್ತ್ವ ಪ್ರತೀತಿಯಿಲ್ಲವೆಂಬುದು ಸಿದ್ಧಾಂತ.

## 4. ಕಾರಣತ್ವಾಧಿಕರಣ

### ಸೂತ್ರ ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ

### ಸಂಗತಿ ಪ್ರತ್ಯುದಾಹೃತಿ

"ಯಸ್ಮಿನ್"—ಎಂದು ಸರ್ವತತ್ತ್ವಗಳು ಬ್ರಹ್ಮಾಶ್ರಯವಾದ್ದರಿಂದ ಪ್ರಧಾನ ಸ್ವತಂತ್ರ ಕಾರಣವಲ್ಲವೆನ್ನಲಾಯಿತು. ಆದರೆ ವೇದಾಂತಗಳಲ್ಲಿ "ಸದೇವ ಸೋಮ್ಯ..."—ಇತ್ಯಾದಿ ವಾಕ್ಯಗಳಿಂದ ಸತ್ಪೂರ್ವಿಕವಾಗಿ ಸೃಷ್ಟಿಯನ್ನು ಹೇಳಿದೆ. "ಅಸದ್ವಾ ಇದಮಗ್ರ ಆಸೀತ್"—"ಅಸದೇವೇದಮಗ್ರ ಆಸೀತ್ ತತ್ಸದಾಸೀತ್ ತತ್ಸಮಭವತ್—ಎಂಬುದರಿಂದ ಅಸತ್ಪೂರ್ವಿಕಾಗಿ ಸೃಷ್ಟಿಯನ್ನೂ ಹೇಳಿದೆ. ಹೀಗೆ ಸ್ರಷ್ಟೃವಿನ ವ್ಯವಸ್ಥೆಯಿಲ್ಲದುದರಿಂದ ಬ್ರಹ್ಮವೊಂದೇ ಕಾರಣವೆನ್ನಲಾಗುವುದಿಲ್ಲ. ಬ್ರಹ್ಮಾಶ್ರಯತ್ವವೂ ಇಲ್ಲಿ ಎಲ್ಲಕ್ಕೂ ಕಾಣದುದರಿಂದ, ಪ್ರಧಾನಕ್ಕೂ ಸ್ವತಂತ್ರಕಾರಣತ್ವ ಉಪಪನ್ನವಾಗುತ್ತೆ—ಎಂಬ ಶಂಕೆಯಿಂದ ಸಂಗತಿ.

### ವಿಷಯವಾಕ್ಯ

"ಸದೇವ ಸೋಮ್ಯೇದಮಗ್ರ ಆಸೀತ್..." ಅಸದ್ವಾ ಇದಮಗ್ರ ಆಸೀತ್"— "ತದ್ಧೇದಂ ತರ್ಹ್ಯವ್ಯಾಕೃತಮಾಸೀತ್ತನ್ನಾಮ ರೂಪಾಭ್ಯಾಂ ವ್ಯಾಕ್ರಿಯತ", "ಅಸದೇವೇದಮಗ್ರ ಆಸೀತ್"—ಇತ್ಯಾದಿ.

### ಸೂತ್ರಾರ್ಥ

[ಆಕಾಶಾದಿಷು] = ಆಕಾಶಾದಿ ಪದಗಳುಳ್ಳ ವಾಕ್ಯಗಳಲ್ಲಿ. [ಕಾರಣತ್ವೇನ] = ಕಾರಣತ್ವ ವಿಶಿಷ್ಟವಾಗಿ. [ಯಥಾವ್ಯಪದಿಷ್ಟೋಕ್ತೇಃ] = ಸರ್ವಜ್ಞತ್ವಾದಿ ಗುಣವಿಶಿಷ್ಟನನ್ನೇ ಹೇಳುವುದರಿಂದ (ವೇದಾಂತ ವಾಕ್ಯಗಳು ಪರಮಾತ್ಮಪರ) ಇಲ್ಲಿಯ [ಚ] ಶಬ್ದಕ್ಕೆ 'ತು'—ಎಂಬುದರ್ಥ.

### ವಿವರಣೆ

"ಆಕಾಶಾದಿಷು ಕಾರಣತ್ವೇನ"—ಆಕಾಶಾದೀನಾಂ (ಆಕಾಶಾದಿಗಳಿಗೆ) ಕಾರಣತ್ವೇನ ಎಂದರ್ಥ. ಅರ್ಥಸ್ವಾರಸ್ಯದಿಂದ ಇಲ್ಲಿ ಹೀಗೆ ವ್ಯಾಖ್ಯಾತವಾಗಿದೆ. ವೇದಾಂತ ದೀಪದಲ್ಲಿ ಸಪ್ತಮೀವಿಭಕ್ತಿ ಸ್ವಾರಸ್ಯದಿಂದ, "ಆಕಾಶಾದಿ ಪದ ಚಿಹ್ನಿತೇಷು ವಾಕ್ಯೇಷು"—ಎಂದು ವ್ಯಾಖ್ಯಾತವಾಗಿದೆ. "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ ತತ್ತೇಜೋಽಸೃಜತ—ಇತ್ಯಾದಿಷು ಸರ್ವಜ್ಞವಾದ ಬ್ರಹ್ಮವೇ ಕಾರಣವೆಂಬುದಾಗಿ ಹೇಳಲ್ಪಟ್ಟಿದೆ.

"ಯಥಾವ್ಯಪದಿಷ್ಟೋಕ್ತೇಃ"—ಎಂಬುದಕ್ಕೆ "ಜನ್ಮಾದ್ಯಸ್ಯಯತಃ"—ಇತ್ಯಾದಿಗಳಲ್ಲಿ ಪ್ರತಿಪಾದಿತವಾದ ಬ್ರಹ್ಮವೆಂದರ್ಥ. ಇದಕ್ಕೆ "ಯಥಾಶ್ರುತ್ಯಂತರೇಷು ವ್ಯಪದಿಷ್ಟಂ" —ಎಂದು ಇತರರು ವ್ಯಾಖ್ಯಾನ ಮಾಡಿದ್ದಾರೆ. ಅದು ಯುಕ್ತವಲ್ಲ. ಮತ್ತೆ ಶ್ರುತ್ಯಂತರ ಗಳಲ್ಲಿಯೂ ಪ್ರಧಾನವೇ ಪ್ರತಿಪಾದಿತವೆಂದಲ್ಲಿ ಅದಕ್ಕೇನು ಉತ್ತರ ಕೊಡುವುದು ? ಸ್ವತಃ ಚೇತನೈಕಾಂತವಾದ ಆತ್ಮ ಶಬ್ದದಿಂದ ಕೂಡಿದ ಪ್ರಕರಣ ಸ್ಮಾರಣಕ್ಕಾಗಿ 'ಆಕಾಶಾದಿಷು'—ಎಂದಿದೆ.

ವೇದಾಂತ ವಾಕ್ಯಗಳಲ್ಲಿ ಪ್ರಧಾನವು ಜಗತ್ಕಾರಣವಾಗಿ ಹೇಳಲ್ಪಟ್ಟಿದೆಯೋ ಅಥವಾ ಪರಮಾತ್ಮ ಜಗತ್ಕಾರಣವಾಗಿ ಹೇಳಲ್ಪಟ್ಟಿದ್ದಾನೆಯೋ ?—ಎಂದು ಸಂಶಯ.

"ತದ್ಧೇದಂ ತರ್ಹ್ಯವ್ಯಾಕೃತಮಾಸೀತ್ ತನ್ನಾಮ ರೂಪಾಭ್ಯಾಂ ವ್ಯಾಕ್ರಿಯತ"—ಎಂದು ಮೊದಲು ಅವ್ಯಾಕೃತವಿದ್ದಿತೆಂದೂ, ಅದೇ ನಾಮರೂಪಗಳನ್ನು ಹೊಂದಿ ಜಗದ್ರೂಪವಾಗಿ ಪರಿಣಮಿಸಿತೆಂದೂ ಹೇಳಿದೆ. ಅವ್ಯಾಕೃತವೆಂದರೆ ಪ್ರಕೃತಿ. ಮತ್ತೆ ಕೆಲವೆಡೆ ಗಳಲ್ಲಿಯೂ, "ಅಸದೇವೇದಮಗ್ರ ಆಸೀತ್,"—"ಅಸದ್ವಾ ಇದಮಗ್ರ ಆಸೀತ್,",—ಎಂದು, ಅಸತ್ತೇ ಮೊದಲಿದ್ದಿತು ಎಂದಿದೆ. ಇಲ್ಲಿಯ "ಅಸತ್"—ಪದಕ್ಕೆ ಅರ್ಥ, ಹಿಂದಿನ ವಾಕ್ಯದಲ್ಲಿ ಅವ್ಯಾಕೃತವೆಂದು ಹೇಳಿದ ಪ್ರಕೃತಿಯೇ ಎಂದು ನಿಶ್ಚಯಿಸಲ್ಪಡುತ್ತೆ. ಇತರ ಸೃಷ್ಟಿ ವಾಕ್ಯಗಳೂ ಈ ವಾಕ್ಯಗಳೊಡನೆ ಸಮಾನಾರ್ಥಕಗಳಾಗಬೇಕಾದ್ದರಿಂದ, ಆ ವಾಕ್ಯ ಗಳಲ್ಲಿಯೂ, ಇವುಗಳಲ್ಲಿ ಹೇಳಿದ ಪ್ರಕೃತಿಯೇ ಜಗತ್ಕಾರಣವಾಗಿ ಹೇಳಲ್ಪಟ್ಟಿದೆ—ಎಂದು ಪೂರ್ವಪಕ್ಷ. "ಸತ್ಯಂಜ್ಞಾನಮನನ್ತಂ ಬ್ರಹ್ಮ"—ಎಂದು ಆರಂಭಿಸಿ, "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ —ಇತ್ಯಾದಿ ವಾಕ್ಯಗಳಲ್ಲಿ ಸರ್ವಜ್ಞತ್ವ ಸತ್ಯಸಂಕಲ್ಪ ತ್ವಾದಿ ಗುಣಗಳುಳ್ಳ ಪರಮಪುರುಷನೇ ಜಗತ್ಕಾರಣವೆಂದು ಪ್ರತಿಪಾದಿಸಲ್ಪಟ್ಟಿದ್ದಾನೆಂದು ನಿಶ್ಚಿತವಾಗಿದೆ. ಅವ್ಯಾಕೃತವೆಂದರೂ ಅಸತ್ ಎಂದರೂ ನಾಮರೂಪ ವಿಭಾಗಗಳಿಲ್ಲ ದ್ದೆಂದು ಅರ್ಥ. ಕಾರಣಾವಸ್ಥೆಯಲ್ಲಿ ಆ ಪರಮಪುರುಷನಿಗೆ ದೇವಾದಿ ನಾಮರೂಪ ವಿಭಾಗ ಸಂಬಂಧವಿಲ್ಲದುದರಿಂದ ಅವನನ್ನು ಆಗ 'ಅಸತ್' ಎಂದೂ 'ಅವ್ಯಾಕೃತ' ವೆಂದೂ ಹೇಳಿದೆ. ಆದ್ದರಿಂದ ಸಕಲಕಾರಣ ವಾಕ್ಯಗಳೂ ಪರಮಾತ್ಮಪರಗಳೆಂದು ಸಿದ್ಧಾಂತ.

ಸೂತ್ರ ೨—**ಸಮಾಕರ್ಷಾತ್**

**ಸೂತ್ರಾರ್ಥ**

[ಸಮಾಕರ್ಷಾತ್] = (ಹಿಂದೆ ಸತ್ಯಸಂಕಲ್ಪನೆಂದು ಹೇಳಲ್ಪಟ್ಟ ಪರಮಪುರುಷನನ್ನೇ ಇಲ್ಲಿ) ಆಕರ್ಷಣಮಾಡಿಕೊಳ್ಳುವುದರಿಂದ, 'ಅಸದ್ವಾ'—ಎಂಬಲ್ಲಿಯೂ ಪರಮಾತ್ಮನೇ ಹೇಳಲ್ಪಟ್ಟಿದ್ದಾನೆ.

**ವಿವರಣೆ**

ಆದರೆ, "ಅಸದ್ವಾ ಇದಮಗ್ರ ಆಸೀತ್"—ಎಂದು ಯಾರನ್ನು ಹೇಳಿದೆ? ಎಂದಲ್ಲಿ, "ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯ"—ಎಂದು ಹಿಂದೆ "ನಾನು ನಾನಾರೂಪಿಯಾಗುವೆನು" ಎಂಬ ಸಂಕಲ್ಪವುಳ್ಳವನಾಗಿ ಹೇಳಲ್ಪಟ್ಟ ಪರಮಪುರುಷ

ನನ್ನೇ ಅನಂತರದಲ್ಲಿಯು ಈ ವಾಕ್ಯದಲ್ಲಿಯೂ ಆಕರ್ಷಿಸಿಕೊಳ್ಳಬೇಕಾದ್ದರಿಂದ, ಇಲ್ಲಿಯೂ ಆ ಪರಮಪುರುಷನನ್ನೇ ಹೇಳುತ್ತದೆ.

ಆದ್ದರಿಂದ "ಅಸದ್ವಾ ಇದಮಗ್ರ ಆಸೀತ್"—ಇತ್ಯಾದಿ ವಾಕ್ಯದಿಂದ ಪರಿದೃಶ್ಯಮಾನವಾದ ಪ್ರಪಂಚಕ್ಕೆ ಲಯಾವಸ್ಥತೆ ಮಾತ್ರ ಹೇಳಲ್ಪಟ್ಟಿದೆಯೇ ಹೊರತು ಚಿನ್ಮಾತ್ರರೂಪತ್ವ, ಅಸದ್ರೂಪತ್ವ ಅತ್ಯಂತಾಭಾವರೂಪತ್ವ ಅಥವಾ ಸದ್ರೂಪತ್ವಗಳು ಹೇಳಲ್ಪಟ್ಟಿಲ್ಲ. ಹಾಗಾದರೆ, "ನೈವೇಹ ಕಿಂಚ ನಾಗ್ರ ಆಸೀತ್,"—ಎಂಬ ವಾಕ್ಯ ಹೇಗೆ ಉಪಪನ್ನ ಎಂದರೆ, ಶೂನ್ಯತಾದಿಗಳು ನಿಷೇಧಿಸಲ್ಪಟ್ಟಿರುವುದರಿಂದ ಆ ವಾಕ್ಯ ವಿಲಯಪರವೆಂದು ತಿಳಿಯಬೇಕು. ವಿಲಯವೆಂದರೆ, ವೇದಾಂತ ಸಿದ್ಧಾಂತದಲ್ಲಿ ಅವಸ್ಥಾನ್ತರ ಪ್ರಾಪ್ತಿಯೇ ಹೊರತು ದ್ರವ್ಯ ಸ್ವರೂಪದ ನಾಶವಲ್ಲ. ದ್ರವ್ಯ ಸ್ವರೂಪನಾಶವೇ ವಿಲಯ ಎಂಬುದು ವೈಶೇಷಿಕಾದಿಗಳ ಪ್ರಲಾಪ. ಅದು ಪ್ರತ್ಯಕ್ಷಾದಿ ಪ್ರಮಾಣಗಳಿಗೆ ವಿರುದ್ಧವಾದ್ದರಿಂದ ಪ್ರಾಮಾಣಿಕರಿಗೆ ಅದು ನಿಷಿದ್ಧವೇ ಆಗಿದೆ. ಎಲ್ಲಾ ವಸ್ತುಗಳಿಗೂ ಕಾರಣಾವಸ್ಥೆಯಲ್ಲಿ ಅವ್ಯಾಕೃತತ್ವವೆಂಬುದು ನಾಮರೂಪ ವಿಭಾಗವಿಲ್ಲದುದೇ. ಅವ್ಯಾಕೃತತ್ವಾದ್ಯವಸ್ಥಾ ವಿಶಿಷ್ಟತತ್ತದ್ದ್ರವ್ಯ ಸಮೂಹಗಳಿಗೆಲ್ಲಾ ಅಂತರಾತ್ಮನಾದ ಪರಮಪುರುಷನೇ ಸತ್, ಅಸತ್, ಅವ್ಯಾಕೃತ—ಶಬ್ದಗಳಿಂದ ವಾಚ್ಯನೆಂದು ವೇದಾಂತ ಸಿದ್ಧಾಂತ ನಿಷ್ಣಾತರಿಂದ ವರ್ಣಿತವಾಗಿದೆ. ಆದ್ದರಿಂದ, ಅವ್ಯಾಕೃತ ಶಬ್ದಕ್ಕೆ ಭಗವತ್ಪರತ್ವವಿಲ್ಲವೆಂದು ಭ್ರಮಿಸಕೂಡದು.

## 5. ಜಗದ್ವಾಚಿತ್ವಾಧಿಕರಣ

### ಸೂತ್ರ—**ಜಗದ್ವಾಚಿತ್ವಾತ್**

[ಬಾಲಾಕಿವಿದ್ಯಾ]

### ಸಂಗತಿ

೧ ಹಿಂದೆ. ಅವ್ಯಾಕೃತಾದಿ ಸಮಾಖ್ಯಾಮಾತ್ರದಿಂದ ಪ್ರಕೃತಿಪರತ್ವವನ್ನು ಶಂಕಿಸಿ, ಅನನ್ಯಥಾಸಿದ್ಧ ಪ್ರಕರಣಾದಿಗಳ ಪ್ರಾಬಲ್ಯದಿಂದ ಅವ್ಯಾಕೃತಾದಿ ಶಬ್ದಗಳಿಗೆ ಪರಮಪುರುಷತ್ವವನ್ನು ಹೇಳಲಾಯಿತು. ಹಾಗಾದಲ್ಲಿ, ಕರ್ಮತ್ವಾದ್ಯನನ್ಯಥಾಸಿದ್ಧ ಲಿಂಗಬಲದಿಂದ ಸಮಾಕರ್ಷಿಸಲ್ಪಡುವ ಪಂಚವಿಂಶಕನಾದ ಪುರುಷನೇ ಪರತತ್ತ್ವವಾಗಲಿ—ಎಂಬ ಶಂಕೆಯಿಂದ ಸಂಗತಿ (ಅಪವಾದ ಸಂಗತಿ).

೨ ಹಿಂದೆ, ಅವ್ಯಾಕೃತ ಶಬ್ದ ಪ್ರಕೃತಿಪರವೆಂಬುದನ್ನು ನಿರಾಕರಿಸಿ ಅದಕ್ಕೆ ಪರಮಾತ್ಮಪರತ್ವ ನಿರ್ಣೀತವಾಯಿತು. ಈಗ ಕರ್ಮಶಬ್ದಕ್ಕೆ ಪುಣ್ಯಪಾಪರೂಪ ಕರ್ಮಪರತ್ವವನ್ನು ನಿರಾಕರಿಸಿ, ಕಾರ್ಯರೂಪ ಜಗದ್ವಾಚಿತ್ವವು ಹೇಳಲ್ಪಡುತ್ತೆ—ಎಂದೂ ಸಂಗತಿಯಿದೆ.

### ವಿಷಯವಾಕ್ಯ

ಕೌಷೀತಕ್ಯುಪನಿಷತ್ತಿನಲ್ಲಿ,—"ಬ್ರಹ್ಮತೇ ಬ್ರವಾಣಿ"—ಎಂದು ಉಪಕ್ರಮಿಸಿ, "ಯೋವೈಬಾಲಾಕ ಏತೇಷಾಂ ಪುರುಷಾಣಾಂ ಕರ್ತಾ ಯಸ್ಯವಾ ಏತತ್ಕರ್ಮ ಸವೈ ವೇದಿತವ್ಯಃ".

**ಸೂತ್ರಾರ್ಥ**

[ಜಗದ್ವಾಚಿತ್ವಾತ್] = (ಕರ್ಮಪದವು) ಜಗತ್ತಿಗೆ ವಾಚಕವಾದ್ದರಿಂದ, ಅರಿಯಲ್ಪಡತಕ್ಕವನಾಗಿ ಹೇಳಲ್ಪಟ್ಟವನು ಪರಮಪುರುಷ.

**ವಿವರಣೆ**

ಇದರ ವಿಷಯವಾಕ್ಯದಲ್ಲಿ ಅರಿಯಲ್ಪಡತಕ್ಕವನಾಗಿ ಹೇಳಲ್ಪಟ್ಟವನು ಜೀವನೋ, ಪರಮಪುರುಷನೋ ?—ಎಂದು ಸಂಶಯ.

''ಯಸ್ಯವೈತತ್ಕರ್ಮ''—ಅಂದರೆ ಈ ಪುಣ್ಯಪಾಪರೂಪ ಕರ್ಮ ಯಾವನಿಗೆ ಉಂಟೋ ಅವನು ವೇದಿತವ್ಯನೆಂದು ಹೇಳಿರುವುದರಿಂದ, ಪುಣ್ಯಪಾಪಗಳು ಪರಮ ಪುರುಷನಿಗೆ ಇಲ್ಲವಾಗಿ, ಅವನ್ನುಳ್ಳ ಜೀವನೇ ವೇದಿತವ್ಯನಾಗಿ ಹೇಳಲ್ಪಟ್ಟಿದ್ದಾನೆಂದು ಪೂರ್ವಪಕ್ಷ. ಕರ್ಮವೆಂದರೆ, ಮಾಡಲ್ಪಟ್ಟದ್ದು. ಅದು ಯಾವುದೆಂದರೆ ಲೋಕ. ಹೀಗೆ ಹೇಳದಿದ್ದಲ್ಲಿ, ಈ ಕರ್ಮವೆಂಬುದಕ್ಕೆ ಪ್ರಯೋಜನವಿಲ್ಲ. ಕರ್ಮವೆಂದರೇಯೇ ಸಾಕು. ಈ ಜಗತ್ತು ಯಾವನ ಸೃಷ್ಟಿಯೋ, ಅವನು—ಎಂದು ಆ ವಾಕ್ಯಕ್ಕೆ ಅರ್ಥ. ಈ ಜಗತ್ಸ್ರಷ್ಟೃತ್ವ ಜೀವನಿಗೆ ಕೂಡದುದರಿಂದ ಅದನ್ನುಳ್ಳ ಪರಮಪುರುಷನೇ ಇಲ್ಲಿ ವೇದಿತವ್ಯನಾಗಿ ಹೇಳಲ್ಪಟ್ಟವನೆಂದು ಸಿದ್ಧಾಂತ.

### ಸೂತ್ರ ೨—**ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇತ್ತದ್ವ್ಯಾಖ್ಯಾತಮ್**

**ಸೂತ್ರಾರ್ಥ**

[ಜೀವಮುಖ್ಯಪ್ರಾಣಲಿಂಗಾತ್] = (ಈ ವಾಕ್ಯದಲ್ಲಿ) ಜೀವಬೋಧಕವಾದ ಲಿಂಗವೂ ಮುಖ್ಯಪ್ರಾಣಬೋಧಕವಾದ ಲಿಂಗವೂ ಕಾಣುವುದರಿಂದ [ನ] = (ಇಲ್ಲಿ) ಪರಮಾತ್ಮನನ್ನು ಹೇಳಿಲ್ಲ. [ಇತಿ ಚೇತ್] = ಎಂದಲ್ಲಿ [ತತ್] = ಆ ವಿಷಯ [ವ್ಯಾಖ್ಯಾತಂ] = (ಹಿಂದೆಯೇ) ಹೇಳಲ್ಪಟ್ಟಿದೆ.

**ವಿವರಣೆ**

'ಏತೈರಾತ್ಮಭಿರ್ಭುಂಕ್ತೇ'—ಎಂದು ಇವನು ಭುಜಿಸುತ್ತಾನೆಂದು ಹೇಳಿದೆ. ಭೋಜನ ಜೀವನಿಗೇ ಹೊರತು ಪರಮಾತ್ಮನಿಗೆ ಸಂಭವಿಸದು. ''ಅಥಾಸ್ಮಿನ್ ಪ್ರಾಣ ಏವ''—ಎಂದು ಇವನನ್ನು ಪ್ರಾಣವೆಂದೂ ಹೇಳಿದೆ. ಈ ಹೇತುಗಳಿಂದ ಇವನು ಜೀವ ನಾದರೂ ಆಗಬೇಕು ಅಥವಾ ಪ್ರಾಣನಾದರೂ ಆಗಬೇಕು; ಪರಮಾತ್ಮನಾಗಕೂಡದು ಎಂದಲ್ಲಿ, ಪೂರ್ವಾಪರವಾಕ್ಯಸಂದರ್ಭಗಳಿಂದ ಇವನು ಪರಮಾತ್ಮನೆಂದು ನಿಶ್ಚಯಿಸಿದ ಮೇಲೆ, ಜೀವಾದಿ ವಾಚಕ ಶಬ್ದಗಳೂ ಜೀವಾದಿ ಶರೀರಕನಾದ ಪರಮಾತ್ಮನನ್ನೇ ಹೇಳು ವುದೆಂದು ಈ ಅರ್ಥ ಮೊದಲೇ ವ್ಯಾಖ್ಯಾತವಾಯಿತು. ಇಲ್ಲಿಯೂ ಈ ವಿಧವಾಗಿಯೇ ಗ್ರಹಿಸಬೇಕು.

### ಸೂತ್ರ ೩—**ಅನ್ಯಾರ್ಥಂತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ**

**ಸೂತ್ರಾರ್ಥ**

[ಅನ್ಯಾರ್ಥಂತು] = ಬೇರೆ ಪ್ರಯೋಜನಕ್ಕಾಗಿಯೇ (ಇಲ್ಲಿ ಜೀವನನ್ನು ಹೇಳು ವುದು) [ಪ್ರಶ್ನ ವ್ಯಾಖ್ಯಾನಾಭ್ಯಾಂ ಅಪಿ] = ಪ್ರಶ್ನೋತ್ತರಗಳಿಂದಲೂ, (ಈ ಅರ್ಥ

ನಿಶ್ಚಯಿಸಲ್ಪಡುವುದು) (ಎಂದು) [ಜೈಮಿನಿಃ]= ಜೈಮಿನಿ ಮಹರ್ಷಿ ಹೇಳಿದರು. [ಏಕೇ]=ಕೆಲವರು (ವಾಜಸನೇಯಿಗಳು) [ಏವಂ]= ಈ ವಿಧವಾದ ಅರ್ಥವನ್ನೇ ಸ್ಪಷ್ಟವಾಗಿ ಹೇಳಿದ್ದಾರೆ.

**ವಿವರಣೆ**

ಬಾಲಾಕಿಯೂ ಅಜಾತಶತ್ರುವೂ ನಿದ್ರಿಸುತ್ತಿದ್ದವನ ಬಳಿ ಹೋಗಿ ಪ್ರಾಣನ ಹೆಸರನ್ನು ಹೇಳಿ ಕೂಗಿದ್ದು, ದೊಣ್ಣೆಯಿಂದ ತಟ್ಟುವುದು ಮುಂತಾದ ವ್ಯಾಪಾರಗಳಿಂದ ಶರೀರೇಂದ್ರಿಯಾದಿಗಳಿಗಿಂತ ಅತಿರಿಕ್ತನಾದ ಜೀವನೊಬ್ಬನಿದ್ದಾನೆಂದು ಪ್ರತಿಪಾದಿಸುವುದಾಗಿ ಈ ವಾಕ್ಯ ತೋರಿಸುವುದರಿಂದ ಪರಮಾತ್ಮಪರವಾಗದೆಂದು ಪೂರ್ವಪಕ್ಷ.

ಶರೀರಾದಿಗಳಿಗಿಂತ ಅತಿರಿಕ್ತನಾಗಿ ಜೀವನಿರುವ ಹಾಗೆ, ಅವನಿಗಿಂತ ಅತಿರಿಕ್ತನಾದ ಪರಮಾತ್ಮ ಒಬ್ಬನುಂಟೆಂದು ಉಪದೇಶಿಸುವುದಕ್ಕಾಗಿ, ಈ ವಾಕ್ಯದಲ್ಲಿ ಜೀವನನ್ನು ಹೇಳಿತು. ಇದನ್ನು ಹೇಗೆ ಅರಿಯುವುದೆಂದಲ್ಲಿ,—ಪ್ರಶ್ನವೂ ಉತ್ತರವೂ ಪರಮಾತ್ಮ ವಿಷಯವಾಗಿಯೇ ಕಾಣುವುದು. ''ಕ್ವೈಷಏತದ್ಬಾಲಾಕೇ ಪುರುಷೋಶಯಿಷ್ಟ'',—ಎಂದು ಇದುವರಿಗೆ, ಈ ಜೀವ ಎಲ್ಲಿ ಹೋಗಿ ಮಲಗಿದ್ದ?—ಎಂಬುದು ಪ್ರಶ್ನೆ. ''ಅಥಾಸ್ಮಿನ್ ಪ್ರಾಣ ಏವೈಕಧಾ ಭವತಿ,''—ಎಂದು ಇದುವರಿಗೆ ಈ ಜೀವನು ಸಕಲ ಪ್ರಾಣಿಗಳ ಜೀವನ ಹೇತುವಾದ ಪರಮಾತ್ಮನಲ್ಲಿ ಏಕೀಭವಿಸಿದ್ದನೆಂಬುದು ಉತ್ತರ. ಈ ಪ್ರಶ್ನ—ಪ್ರತಿವಚನಗಳಿಂದ, ಈ ವಾಕ್ಯ ಪರಮಾತ್ಮಪರವೆಂದೇ ನಿಶ್ಚಯಿಸಲ್ಪಡುವುದು. ಈ ಸಂವಾದದಲ್ಲಿಯೇ ವಾಜಸನೇಯರು ಈ ವಾಕ್ಯವನ್ನು, ''ಯ ಏಷೋಽನ್ತರ್ಹೃದಯ ಆಕಾಶಃ,'' ಎಂಬದಾಗಿ, ಪರಮಾತ್ಮಪರವೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಈ ಅರ್ಥ ಜೈಮಿನಿ ಮುಂತಾದ ಮಹನೀಯರಿಗೂ ಸಮ್ಮತವಾದದ್ದು.

## 6. ವಾಕ್ಯಾನ್ವಯಾಧಿಕರಣ

### ಸೂತ್ರ—ವಾಕ್ಯಾನ್ವಯಾತ್

[ಮೈತ್ರೇಯೀವಿದ್ಯಾ]

**ಸಂಗತಿ ಪ್ರತ್ಯುದಾಹೃತಿ**

೧ ಬದ್ಧರಿಗೇ ಅಸಾಧಾರಣವಾದ ಕರ್ಮ ಸಂಬಂಧವಾಚಿ ಶಬ್ದದಿಂದ, ಕರ್ಮರಹಿತ ಶುದ್ಧಸ್ವರೂಪ ಪ್ರತಿಪಾದನವು ಲಾಕ್ಷಣಿಕವೆಂದು ಹೇಳಿ ಜೀವಪರತ್ವ ನಿರಸ್ತವಾಯಿತು. ಇಲ್ಲಿಯಾದರೋ ಬದ್ಧಮುಕ್ತರಿಬ್ಬರಿಗೂ ಸಾಧಾರಣವಾದ ಆತ್ಮಶಬ್ದ ನಿರ್ದೇಶವಿರುವುದರಿಂದಲೂ, ಮುಕ್ತರ ಲಿಂಗಶ್ರುತವಾಗಿರುವುದರಿಂದಲೂ ಶುದ್ಧ ಸ್ವರೂಪ ಪರತ್ವವು ಯುಕ್ತವೆಂಬ ಶಂಕೆಯಿಂದ ಸಂಗತಿ.

೨ ಕರ್ಮಶಬ್ದಕ್ಕೆ 'ಕ್ರಿಯತೆ ಇತಿ ಕರ್ಮ'—ಎಂಬ ವ್ಯುತ್ಪತ್ತಿಯಿಂದ ಪ್ರಕರಣ ಬ್ರಹ್ಮಪರವೆನ್ನಲಾಯಿತು. ಕರ್ಮಫಲಭೂತಭೋಕ್ತೃತ್ವ ಶ್ರುತವಾಗಿರುವುದರಿಂದ ಇದಕ್ಕೆ ಹಾಗೆ ವ್ಯುತ್ಪತ್ತಿ ವಿಶೇಷಪ್ರದರ್ಶನ ಸಂಭವಿಸದೆಂದು, ತಂತ್ರಸಿದ್ಧ ಪುರುಷ ಪರತ್ವವೆಂಬ ಶಂಕೆಯಿಂದ ಸಂಗತಿ.

ಈ ಅಧಿಕರಣವೂ ನಿರೀಶ್ವರಸಾಂಖ್ಯರ ನಿರಾಕರಣ ಪರ. ಇದರ ಮುಂದಿನವು ಸೇಶ್ವರಸಾಂಖ್ಯರ ನಿರಾಕರಣಪರ.

ಹಿಂದೆ, ಅಂದರೆ, ಈ ಪಾದದ ಆರಂಭದಲ್ಲಿ ಈ ಪಾದದ ಮೊದಲಿನ ೬ ಅಧಿಕರಣಗಳು ಸೇರಿ ಒಂದು ಪೇಟಿಕೆಯೆಂದು ಹೇಳಿಯಾಯಿತು. ಆದರೆ ಮೊದಲ ಮೂರು ಅಧಿಕರಣಗಳು ಸಾಂಖ್ಯೋಕ್ತ ಪ್ರಕ್ರಿಯೆಯನ್ನು ಆಶಂಕೆ ಮಾಡಿ ಪ್ರವೃತ್ತವಾದುದರಿಂದ ಅದನ್ನು ಒಂದು ಪೇಟಿಕೆಯನ್ನಾಗಿಯೂ, ಅನಂತರ ಅವ್ಯಾಕೃತಾದಿ ಕರ್ಮತ್ವಾದಿ ಲಿಂಗಗಳಿಂದ ಕೂಡಿ, ಜೀವ-ಬ್ರಹ್ಮರಿಗೆ ಐಕ್ಯೋಪದೇಶದ ಮೂಲಕ ಅತ್ಯಂತಾಭೇದ ಹೇಳತಕ್ಕದ್ದೆಂದು ಪ್ರಕೃತಿಯ ಅಧಿಷ್ಠಾತೃವಿಗೆ ಜೀವತ್ವವನ್ನು ಆಶಂಕೆ ಮಾಡಿ, ನಿರಾಕರಿಸಲ್ಪಡುತ್ತದೆಯಾದ್ದರಿಂದ, ಅನಂತರದ ಮೂರು ಅಧಿಕರಣಗಳನ್ನು ಪೇಟಿಕಾಂತರವನ್ನಾಗಿಯೂ ಆಚಾರ್ಯರು ಹೇಳಿದ್ದಾರೆ.

## ವಿಷಯವಾಕ್ಯ

ಬೃಹದಾರಣ್ಯಕದಲ್ಲಿ ಮೈತ್ರೇಯೀ ಬ್ರಾಹ್ಮಣದಲ್ಲಿ:—

"ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ"—ಎಂದು ಆರಂಭಿಸಿ, "ನವಾ ಅರೇ ಸರ್ವಸ್ಯ ಕಾಮಾಯ ಸರ್ವಂಪ್ರಿಯಂ ಭವತಿ ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ ಆತ್ಮಾವಾ ಅರೇ ದ್ರಷ್ಟವ್ಯ ಶ್ರೋತವ್ಯೋಮನ್ತವ್ಯೋ ನಿದಿಧ್ಯಾಸಿತವ್ಯಃ, ಮೈತ್ರೇಯ್ಯಾತ್ಮನಿ ಖಲ್ವರೇ ದೃಷ್ಟೇ ಶ್ರುತೇ ಮತೇ ವಿಜ್ಞಾತೇ ಇದಂ ಸರ್ವಂ ವಿದಿತಂ,"—

## ಸೂತ್ರಾರ್ಥ

[ವಾಕ್ಯಾನ್ವಯಾತ್] = ಹಿಂದಿನ ಮತ್ತು ಮುಂದಿನ ಸಕಲ ವಾಕ್ಯಗಳೂ ಪರಮಾತ್ಮನಲ್ಲಿಯೇ ಅನ್ವಯಿಸುವುದರಿಂದ, ('ದ್ರಷ್ಟವ್ಯ'ನೆಂದು ಹೇಳಲ್ಪಟ್ಟವನು ಪರಮಾತ್ಮಾ)

## ವಿವರಣೆ

ಮೇಲಿನ ವಿಷಯವಾಕ್ಯದಲ್ಲಿ 'ದ್ರಷ್ಟವ್ಯ'—ನಾಗಿ ಹೇಳಲ್ಪಟ್ಟವನು ಜೀವನೋ ಪರಮಾತ್ಮನೋ ?—ಎಂದು ಸಂಶಯ.

ಪತಿ—ಜಾಯಾ—ಪುತ್ರ—ಪಶ್ವಾದಿಗಳು ಆತ್ಮನಿಗೆ ಪ್ರಿಯಗಳಾಗಿರುವುವೆಂದು ಹೇಳಿ, ಅನಂತರ ಆ ಆತ್ಮನನ್ನು 'ದ್ರಷ್ಟವ್ಯ'—ನೆಂದು ಹೇಳುವುದರಿಂದ, ಪತಿ ಜಾಯಾದಿಗಳು ಪರಮಾತ್ಮನಿಗೆ ಪ್ರಿಯಗಳಾಗದ್ದರಿಂದ, ಇವನು ಜೀವನೇ ಆಗಿರಬೇಕು. ಇವನನ್ನೇ ಮೇಲೆಯೂ ದ್ರಷ್ಟವ್ಯನನ್ನಾಗಿ ಹೇಳಿದೆ. ಆದ್ದರಿಂದ ಈ ಪುರುಷಾಧಿಷ್ಠಿತವಾದ ಪ್ರಕೃತಿಯೇ ಜಗತ್ತಿಗೆ ಉಪಾದಾನಕಾರಣ—ಎಂದು ಪೂರ್ವಪಕ್ಷ. ಯಾವನ ಸಂಕಲ್ಪದಿಂದ ಪತಿ ಜಾಯಾದಿಗಳು [ಜಾಯಾ = ಪತ್ನೀ] ಪತ್ನ್ಯಾದಿಗಳಿಗೆ ಪ್ರಿಯರಾಗಿ ಆಗುವರೋ ಅವನು ದ್ರಷ್ಟವ್ಯನೆಂದು ಆ ವಾಕ್ಯಕ್ಕೆ ಅರ್ಥ. ಸರ್ವೇಶ್ವರನು ಅವರವರ ಕರ್ಮಾನುಗುಣವಾಗಿ ಕೆಲವು ವಸ್ತುಗಳನ್ನು ಅಪ್ರಿಯವನ್ನಾಗಿಯೂ ಕಲ್ಪಿಸುತ್ತಾನೆ. ಇವು ಪ್ರಿಯವಾಗುವುದು ಅವನ ಸಂಕಲ್ಪದಿಂದಲೇ. ಆದ್ದರಿಂದ, ಆ ಸರ್ವೇಶ್ವರನೇ ದ್ರಷ್ಟವ್ಯ

ನೆಂದು ಹೇಳಲ್ಪಟ್ಟವನು. ಹೀಗೆ ಹೇಳಿದರೇಯೇ, ಪೂರ್ವೋತ್ತರ ಸಕಲ "ವಾಕ್ಯಗಳೂ ಸಮರಸವಾಗಿ ಅನ್ವಯಿಸುವುದು-ಎಂದು ಸಿದ್ಧಾಂತ. "ಆತ್ಮನಸ್ತು ಕಾಮಾಯ" = ಎಂದರೆ. (ಕಾಮ್ಯನ್ತೆ ಇತಿ ಕಾಮಾಃ) ಎಂಬಂತೆ ಆತ್ಮನ ಕಾಮ ಸಂಪತ್ತಿಗಾಗಿ, ಅಂದರೆ ಇಷ್ಟಸಂಪತ್ತಿಗಾಗಿ ಅಂದರೆ ಸುಖಾದಿ ಸಂಪತ್ತಿಗಾಗಿ, ಅಥವಾ ಸಂಕಲ್ಪ ನೆರವೇರುವುದಕ್ಕಾಗಿ ಎಂದರ್ಥ. ಅಲ್ಲದೆ, ಜೀವಾತ್ಮನ ಇಷ್ಟ ಸಂಪತ್ತಿಗಾಗಿ ಪತ್ಯಾದಿಗಳು ಪ್ರಿಯರಾಗುತ್ತಾರೆಂದು ಹೇಳಿದಲ್ಲಿ ಆ ಜೀವನ ಸ್ವರೂಪ ಅನ್ವೇಷ್ಟವ್ಯ ವೆಂದಾಗುತ್ತದೆ. ಪ್ರಿಯವಾದುದೇ ಅನ್ವೇಷ್ಟವ್ಯ. ಅದೇ ಪುರುಷಾರ್ಥ. ಅದನ್ನು ಬಿಟ್ಟು ಪ್ರಿಯಕ್ಕೆ ಶೇಷಿಯಾದ ಜೀವನ ಪುತ್ರಪತ್ಯಾದಿ ವಿಯುಕ್ತ ಸ್ವರೂಪ ಅನ್ವೇಷ್ಟವ್ಯವಾಗದು. ಯಾವ ಕಾರಣದಿಂದ ಆತ್ಮನ ಇಷ್ಟಸಂಪತ್ತಿಗೋಸ್ಕರ ಪತ್ಯಾದಿಗಳು ಪ್ರಿಯರಾಗುತ್ತಾ ರೆಯೋ ಆ ಕಾರಣದಿಂದ ಪತ್ಯಾದಿ ಪ್ರಿಯ ಜನರನ್ನು ಬಿಟ್ಟು ಅವರಿಂದ ವಿಯುಕ್ತವಾದ ಆತ್ಮ ಸ್ವರೂಪವನ್ನು ಚಿಂತಿಸಬೇಕು—ಎಂಬುದು ಅಸಂಗತ. ಅಷ್ಟೇ ಅಲ್ಲ. ಪತ್ಯಾದಿ ಗಳಿಗೆ ಶೇಷವಾಗಿರುವುದರಿಂದ ಪತ್ಯಾದಿಗಳು ಪ್ರಿಯವಲ್ಲ, ಮತ್ತೇನೆಂದರೆ, ಆತ್ಮನಿಗೆ ಶೇಷವಾದ್ದರಿಂದ ಪತ್ಯಾದಿಗಳು ಪ್ರಿಯರು ಎಂದಲ್ಲಿ ತನಗೆ ಶೇಷವಾದ್ದರಿಂದ ಆ ಪತ್ಯಾದಿ ಗಳೇ ಅನ್ವೇಷ್ಟವ್ಯವೆಂದಾಗುತ್ತೆ. ಆಗ್ಗೆ ಬೇರೆಯೆಲ್ಲವನ್ನೂ ಬಿಟ್ಟು ಬಿಟ್ಟು ಆತ್ಮನೇ ಅನ್ವೇ ಷ್ಟವ್ಯ—ಎಂಬುದಕ್ಕೆ ವಿರೋಧವೂ ಆಗುತ್ತೆ. ಆದ್ದರಿಂದ ಪತ್ಯಾದಿಗಳೆಲ್ಲರನ್ನೂ ಬಿಟ್ಟು ಬಿಟ್ಟು ಆತ್ಮನೇ ಹೇಗೆ ಅನ್ವೇಷ್ಟವ್ಯನೆಂದಾಗುತ್ತದೆಯೋ ಹಾಗೆ ವಾಕ್ಯಾರ್ಥವನ್ನು ವರ್ಣಿಸ ಬೇಕು. ಅದು ಹೇಗೆಂದರೆ:—"ಅಮೃತತ್ವಸ್ಯತು ನಾಶಾಸ್ತಿ ವಿತ್ತೇನ"—ಎಂದು ವಿತ್ತಾದಿ ಗಳು ನಿತ್ಯ ನಿರ್ದೋಷ ನಿರತಿಶಯಾನಂದ ರೂಪವಾದ ಅಮೃತತ್ವಪ್ರಾಪ್ತಿಗೆ ಉಪಾಯ ವಲ್ಲವೆಂದು ಹೇಳಿ, ವಿತ್ತಪುತ್ರ ಪತಿ ಜಾಯಾದಿಗಳೆಲ್ಲವೂ ಸಾತಿಶಯ, ದುಃಖಮಿಶ್ರ ಕಾದಾಚಿತ್ಕ ಪ್ರಿಯವಾಗಿ ಅನುಭವಿಸಲ್ಪಡುವುದು ಪತ್ಯಾದಿ ಸ್ವರೂಪ ಪ್ರಯುಕ್ತವಲ್ಲ. ಮತ್ತೇನೆಂದರೆ, ನಿರತಿಶಯಾನಂದ ಸ್ವರೂಪನಾದ ಪರಮಾತ್ಮನ ಸಂಕಲ್ಪ ಪ್ರಯುಕ್ತ. ಆದ್ದರಿಂದ ಯಾವನೇಯೇ ತಾನೇ ನಿರತಿಶಯಾನಂದವುಳ್ಳವನಾಗಿದ್ದು, ಇತರರಿಗೂ ಪ್ರಿಯತ್ವಲೇಶವನ್ನು ಉಂಟುಮಾಡುತ್ತಾನೆಯೋ ಆ ಪರಮಾತ್ಮನೇ ದ್ರಷ್ಟವ್ಯ— ಎಂದು ಇಲ್ಲಿ ಉಪದೇಶಿಸಲ್ಪಟ್ಟಿದೆ. ಆದ್ದರಿಂದ "ನವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ—". ಅಂದರೆ, ಪತಿಜಾಯಾ ಪುತ್ರ—ವಿತ್ತಾದಿಗಳು ನನ್ನ ಪ್ರಯೋಜನ ಕ್ಕೋಸ್ಕರ, "ನಾನು ಇವನಿಗೆ ಇಷ್ಟನಾಗುತ್ತೇನೆ"—ಎಂದು ತನ್ನ ಸಂಕಲ್ಪದಿಂದ ಪ್ರಿಯ ರಾಗುವುದಿಲ್ಲ—ಮತ್ತೇನೆಂದರೆ ಆತ್ಮ—ಅಂದರೆ ಪರಮಾತ್ಮನು ತನ್ನ ಆರಾಧಕನಿಗೆ ಅಭಿಮತವಾದುದನ್ನು ಕೊಡಬೇಕೆಂಬ ಸ್ವಂತ ಇಷ್ಟದಿಂದ ಪತಿಜಾಯಾದಿಗಳು ಅವರಿಗೆ ಪ್ರಿಯವಾಗುವಂತೆ ಸಂಕಲ್ಪಿಸುವುದರಿಂದ, ಅವರು ಇಷ್ಟರಾಗುತ್ತಾರೆ. ಯಾವ ವಸ್ತುವೂ ಸ್ವರೂಪತಃ ಪ್ರಿಯವಾಗಲಿ, ಅಪ್ರಿಯವಾಗಲಿ ಅಲ್ಲ; ಹಾಗಿದ್ದಲ್ಲಿ ಸರ್ವದಾ ಸರ್ವರಿಗೂ ಅದು ಪ್ರಿಯವೋ ಅಪ್ರಿಯವೋ ಆಗಬೇಕಿತ್ತು. ಆದರೆ ಹಾಗಿಲ್ಲ. "ತದೇವ ಪ್ರೀತಯೇ ಭೂತ್ವಾಪುನರ್ದುಃ ಖಾಯ ಜಾಯತೇ । ತದೇವ ಕೋಪಾಯ ಯತಃ ಪ್ರಸಾದಾಯ ಚ ಜಾಯತೇ" 'ತಸ್ಮಾದ್ದುಃಖಾತ್ಮಕಂ ನಾಸ್ತಿ ನ ಚ ಕಿಂಚಿತ್ಸುಖಾತ್ಮಕಂ,"—ಎಂದಿದೆ. ಪರಮಾತ್ಮನೇ ಆರಾಧಕರ ಕರ್ಮಾನುಗುಣವಾಗಿ ದೇಶ-ಕಾಲ-ಸ್ವರೂಪ-ಪರಿಮಾಣ

ಗಳಿಗೆ ತಕ್ಕಂತೆ ಆಯಾಯಾವಸ್ತು ಅವರವರಿಗೆ ಪ್ರಿಯವಾಗುವಂತೆ ಸ್ವಸಂಕಲ್ಪದಿಂದ ಮಾಡು ತ್ತಾನೆ. 'ಆತ್ಮನಸ್ತು ಕಾಮಾಯ...'' ಎಂಬುದು ಜೀವಾತ್ಮಪರವೆಂದಾಗ್ಗೂ, ಜೀವಶಬ್ದವೂ ಪರಮಾತ್ಮನಿಗೇ ವಾಚಕವಾಗುವುದರಿಂದ, ''ದ್ರಷ್ಟವ್ಯಃ''—ಎಂಬುದು ಪರಮಾತ್ಮ ಪರವೇ ಆಗುತ್ತೆ. ''ಆತ್ಮನಸ್ತುಕಾಮಾಯ—' ''ಆತ್ಮಾವಾ ಅರೇ ದ್ರಷ್ಟವ್ಯಃ'' ಎಂಬಲ್ಲಿ ಉಭಯತ್ರ ಇರುವ ಆತ್ಮ ಶಬ್ದಗಳೂ ಏಕ ವಿಷಯ—ಅಂದರೆ ಪರಮಾತ್ಮ ನೆಂದೇ ಅರ್ಥ.

**ಸಂಗತಿ**

[ಮುಂದಿರುವ ಮೂರು ಸೂತ್ರಗಳಲ್ಲಿ ಮೊದಲನೆಯ ಎರಡು ಸೂತ್ರಗಳು ಮತಾಂತರ ಪರವಾದುವು. ಮೂರನೆಯದು ಸೂತ್ರಕಾರರಿಗೆ ಅಭಿಮತ. ಮತಾಂತರ ರೀತಿಯಿಂದಲೂ ಮೇಲಣ ವಾಕ್ಯದಲ್ಲಿಯ ಜೀವ ಶಬ್ದ ಪರಮಾತ್ಮವಾಚಕವೇ ಆಗು ತ್ತದೆಯೆಂಬುದಕ್ಕೆ ಮುಂದಿನ ಎರಡು ಸೂತ್ರಗಳನ್ನು ಇಲ್ಲಿ ಉದಾಹರಿಸಿದ್ದಾರೆ]

ಸೂತ್ರ ೨—**ಪ್ರತಿಜ್ಞಾಸಿದ್ಧೇರ್ಲಿಙ್ಗ ಮಾಶ್ಮರಥ್ಯಃ**

**ಸೂತ್ರಾರ್ಥ**

[ಪ್ರತಿಜ್ಞಾಸಿದ್ಧೇಃ] = ಏಕವಿಜ್ಞಾನದಿಂದ ಸರ್ವವಿಜ್ಞಾನ ಪ್ರತಿಜ್ಞೆ ಸಿದ್ಧಿಸು ವುದಕ್ಕಾಗಿ ಇದು [ಲಿಂಗ] = ಜೀವವಾಚಕ ಶಬ್ದದಿಂದ ಪರಮಾತ್ಮನನ್ನೇ ಹೇಳು ವುದು ಎಂದು [ಆಶ್ಮರಥ್ಯಃ]— ಆಶ್ಮರಥ್ಯರು ಹೇಳಿದ್ದಾರೆ. ಯಾದವ ಪ್ರಕಾಶರ ಮತವೂ ಈ ಸೂತ್ರದಲ್ಲಿ ಉಪನ್ಯಸ್ತವಾಗಿದೆ.

**ವಿವರಣೆ**

ಆದರೆ, ಈ ಪ್ರಕರಣದಲ್ಲಿ ಜೀವನನ್ನು ಹೇಳಿರುವುದೇಕೆ ?—ಎಂದರೆ, ಪರಮಾತ್ಮ ಜ್ಞಾನದಿಂದ ಜೀವಾದಿ ಸಕಲ ವಸ್ತುಗಳೂ ಜ್ಞಾತಗಳಾಗಿಬಿಡುತ್ತವೆ—ಎಂದು ಪ್ರತಿಜ್ಞೆ ಮಾಡಿದ್ದರಿಂದ ಜೀವನಿಗೂ ಪರಮಾತ್ಮನಿಗೂ ಭೇದವಿಲ್ಲದುದರಿಂದ ಜೀವವಾಚಕ ಶಬ್ದ ದಿಂದ ಪರಮಾನತ್ಮನ್ನೇ ಹೇಳಿದೆಯೆಂಬುದು ಆಶ್ಮರಥ್ಯರ ಮತ. ಜೀವನು ಬ್ರಹ್ಮದ ಕಾರ್ಯವಾದ್ದರಿಂದ ಬ್ರಹ್ಮದೊಡನೆ ಐಕ್ಯವೆಂದು ತಿಳಿಯುತ್ತೆ. ಹಾಗಿಲ್ಲದೆ ವ್ಯತಿರಿಕ್ತವಾಗಿ ದ್ದಲ್ಲಿ ಪರಮಾತ್ಮವಿಜ್ಞಾನದಿಂದ ಜೀವ ವಿಜ್ಞಾನ ಸಿದ್ಧಿಸದು—ಎಂದು ಅವರ ಮತ.

ಸೂತ್ರ ೩—**ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ**

**ಸೂತ್ರಾರ್ಥ**

[ಉತ್ಕ್ರಮಿಷ್ಯತಃ] = ಸಂಸಾರವನ್ನು ಬಿಟ್ಟು ಹೋಗುವವನಿಗೆ (ಏವಂಭಾವಾತ್] = ಬ್ರಹ್ಮಭಾವವುಂಟಾದುದರಿಂದ (ಜೀವವಾಚಕ ಶಬ್ದದಿಂದ ಪರಮಾತ್ಮನನ್ನು ಹೇಳಿದೆ) [ಇತಿ] = ಎಂದು [ಔಡುಲೋಮಿಃ] = ಔಡುಲೋಮಿಯೆಂಬವರು ಹೇಳಿದ್ದಾರೆ.

**ವಿವರಣೆ**

ಆಶ್ಮರಥ್ಯರ ಮತದಂತೆ ಜೀವನು ಬ್ರಹ್ಮದ ಕಾರ್ಯವೆಂದಲ್ಲಿ ''ನಜಾಯತೇ ಮ್ರಿಯತೇವಾ''—ಇತ್ಯಾದಿಯಿಂದ ಹೇಳಲ್ಪಟ್ಟ ಅಜತ್ವ ಶ್ರುತಿ ವಿರೋಧ, ಜೀವಾತ್ಮರ

ಪ್ರಾಚೀನ ಕರ್ಮಫಲ ಭೋಗಕ್ಕೋಸ್ಕರ ಜಗತ್ಸೃಷ್ಟಿ ಹೇಳಿರುವುದರಿಂದ ಇದಕ್ಕೂ ವಿರೋಧ. ಉಪಾಯಾನುಷ್ಠಾನ ವೈಯರ್ಥ್ಯ—ಹೇಗೆಂದರೆ, ಕಾರ್ಯರೂಪ ಜೀವನು ಕಾರಣರೂಪ ಬ್ರಹ್ಮವನ್ನು ಅಭೇದದಿಂದ ಹೊಂದುವುದರಿಂದ, ಕಾರಣಪ್ರಾಪ್ತಿಯೆಂಬುದು ಘಟಾದಿಗಳಂತೆ ವಿನಾಶರೂಪವಾದ್ದರಿಂದ ಮೋಕ್ಷವೆಂಬುದು ಅಪುರುಷಾರ್ಥ. ಈ ಮೋಕ್ಷಕ್ಕೆ ಉಪಾಯವಿಧಾನ ಮತ್ತು ಅದನ್ನು ಅನುಷ್ಠಿಸುವುದು—ಇದೆಲ್ಲವೂ ವ್ಯರ್ಥ—ಇತ್ಯಾದಿ ಪ್ರಕಾರಗಳಿಂದ ಆಶ್ಮರಥ್ಯ ಮತವನ್ನು ದೂಷಿಸಿ, ಔಡುಲೋಮಿಯೆಂಬವರು ವಿರುದ್ಧವಾದ ತಮ್ಮ ಮತಾಂತರವನ್ನು ಇಲ್ಲಿ ಹೇಳಿದ್ದಾರೆ.

ಸಂಸಾರದಲ್ಲಿ ಇರುವವರಿಗೂ ಜೀವನಿಗೂ ಪರಮಾತ್ಮನಿಗೂ ಭೇದವಿದ್ದಾಗ್ಯೂ. ಮುಕ್ತಿದೆಶೆಯಲ್ಲಿ ಭೇದವಿಲ್ಲದುದರಿಂದ, ಆ ಅಭೇದವನ್ನು ಕುರಿತು, ಜೀವವಾಚಕ ಶಬ್ದದಿಂದ ಪರಮಾತ್ಮನನ್ನು ಹೇಳಿದೆಯೆಂಬುದು ಔಡುಲೋಮಿಯ ಮತ.

### ಸೂತ್ರ ೪—**ಅವಸ್ಥಿತೇರಿತಿಕಾಶಕೃತ್ಸ್ನಃ**

**ಸೂತ್ರಾರ್ಥ**

[ಅವಸ್ಥಿತೇಃ] = (ಜೀವನೊಳಗೆ ಪರಮಾತ್ಮನು ಅಂತರ್ಯಾಮಿಯಾಗಿ) ಇರುವುದರಿಂದ, (ಜೀವವಾಚಕ ಶಬ್ದದಿಂದ ಪರಮಾತ್ಮನನ್ನು ಹೇಳಿದೆ) [ಇತಿ] = ಎಂದು [ಕಾಶಕೃತ್ಸ್ನಃ] = ಕಾಶಕೃತ್ಸ್ನರು ಹೇಳಿದ್ದಾರೆ,

**ವಿವರಣೆ**

ಜೀವಾತ್ಮನಿಗೆ ಪರಮಾತ್ಮ ಶರೀರಿಯಾದ್ದರಿಂದ, ದೇವದತ್ತಾದಿ ಶರೀರ ವಾಚಕ ಪದಗಳು ಆ ಶರೀರವುಳ್ಳ ಆತ್ಮನನ್ನು ಹೇಳುವ ಹಾಗೆ ಜೀವವಾಚಕ ಶಬ್ದ ಜೀವ ಶರೀರಿಯಾದ ಪರಮಾತ್ಮನನ್ನು ಹೇಳುವುದೆಂಬ ಅಭಿಪ್ರಾಯದಿಂದ ಜೀವವಾಚಕ ಶಬ್ದದಿಂದ ಪರಮಾತ್ಮನನ್ನು ಹೇಳಿದೆಯೆಂದು ಕಾಶಕೃತ್ಸ್ನರ ಮತ. ಇದೇ ಸೂತ್ರಕಾರರಿಗೆ ಅಭಿಮತ. ಇದರಿಂದ ಬ್ರಹ್ಮವೇ ಈ ವಾಕ್ಯದಲ್ಲಿ ಪ್ರತಿಪಾದಿತವಾದದ್ದು. ಪುರುಷನಾಗಲಿ ಅವನಿಂದ ಅಧಿಷ್ಠಿತವಾದ ಪ್ರಕೃತಿಯಾಗಲಿ ಅಲ್ಲವೆಂದಾಯಿತು.

## 7. ಪ್ರಕೃತ್ಯಧಿಕರಣ

### ಸೂತ್ರ—**ಪ್ರಕೃತಿಶ್ಚಪ್ರತಿಜ್ಞಾ ದೃಷ್ಟಾನ್ತಾನುಪರೋಧಾತ್**

**ಪೇಟಿಕಾ—೩ ಸಂಗತಿ**

ನಿರೀಶ್ವರ ಸಾಂಖ್ಯರ ನಿರಾಸವಾದ ಮೇಲೆ ಸೇಶ್ವರ ಸಾಂಖ್ಯರ ನಿರಾಸ.

**ಅಧಿಕರಣ ಸಂಗತಿಯು ಇಲ್ಲಿ ಆಕ್ಷೇಪ ಸಂಗತಿ**

ಹಿಂದೆ, "ಅವಸ್ಥಿತೇರಿತಿ ಕಾಶಕೃತ್ಸ್ನಃ"—ಎಂದು ಭಗವಂತ ನಿಯಾಮಕನಾಗಿರುವುದರಿಂದ ಜೀವನೊಡನೆ ಸಾಮಾನಾಧಿಕರಣ್ಯವಿದೆಯೆನ್ನಲು—ಫಮತ್ತೊಂದು ಆಕ್ಷೇಪ ತಲೆಯೆತ್ತುತ್ತೆ. ಅದೇನೆಂದರೆ—"ರಾಜಾ ರಾಷ್ಟ್ರಂ"—(ರಾಜನೇ ರಾಷ್ಟ್ರ)—ಎಂಬಲ್ಲಿ ರಾಷ್ಟ್ರಕ್ಕೆ ರಾಜನಿಯಾಮಕನಾಗಿದ್ದಾನೆಂದು ಅರ್ಥ. ಇಲ್ಲಿ ಸಾಮಾನಾಧಿಕರಣ್ಯ ಔಪಚಾರಿಕ,

ಅಲ್ಲದೆ ಉಪಾದಾನತ್ವವಿಲ್ಲ. ಹಾಗೆಯೇ ಇಲ್ಲಿಯೂ ಬ್ರಹ್ಮ ಜಗತ್ತಿಗೆ ನಿಮಿತ್ತಕಾರಣವೇ ಹೊರತು ಉಪಾದಾನಕಾರಣವಲ್ಲ—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಪ್ರತಿಜ್ಞಾದೃಷ್ಟಾನ್ತಾನುಪರೋಧಾತ್] = (ಏಕವಿಜ್ಞಾನೇನ ಸರ್ವವಿಜ್ಞಾನ) ಪ್ರತಿಜ್ಞೆಗೂ, ದೃಷ್ಟಾಂತಕ್ಕೂ ವಿರೋಧಬಾರದಿರುವುದಕ್ಕಾಗಿ [ಪ್ರಕೃತಿಃ] [ಚ] = ಉಪಾದಾನಕಾರಣವೂ (ಪರಮಪುರುಷನೇ ಎಂದು ಅಂಗೀಕರಿಸಬೇಕು).

**ವಿವರಣೆ**

ಸರ್ವೇಶ್ವರನು ಈ ಜಗತ್ತಿಗೆ ನಿಮಿತ್ತಕಾರಣ ಮಾತ್ರವೋ? ಅಥವಾ ಉಪಾದಾನ ಕಾರಣವೂ ಆಗುವನೋ?—ಎಂದು ಸಂಶಯ.

ಕಲಶಾದಿ ಕಾರ್ಯಗಳಿಗೆ ಉಪಾದಾನವಾದ ಮೃತ್ತಿಕಾದಿಗಳಿಗೂ, ನಿಮಿತ್ತ ಕಾರಣ ವಾದ ದಂಡ ಚಕ್ರಾದಿಗಳಿಗೂ ಅಭೇದ ಕಾಣದುದರಿಂದ, ಒಂದು ಕಾರ್ಯಕ್ಕೆ ನಿಮಿತ್ತೋ ಪಾದಾನಗಳು ಬೇರೆ ಬೇರೆಯೇ ಆಗಿರಬೇಕು. ಜಗತ್ತಿಗೂ ಈಶ್ವರ ನಿಮಿತ್ತ ಮಾತ್ರ. ಉಪಾದಾನವಾದಲ್ಲಿ ಪರಿಣಾಮಾದಿ ದೋಷಗಳೂ ಸಂಭವಿಸುವುವು. ಈ ಪರಿಣಾಮಾದಿ ಗಳು ನಿರ್ವಿಕಾರನಾದ ಸರ್ವೇಶ್ವರನಿಗೆ ಸಂಭವಿಸವು. ಆದ್ದರಿಂದ ಇವನು ನಿಮಿತ್ತಮಾತ್ರವೇ ಎಂದು ಪೂರ್ವಪಕ್ಷ.

ಮೃತ್ತಿಕಾದಿಗಳಿಗೆ ಸರ್ವಜ್ಞತ್ವವೂ, ಕುಲಾಲಾದಿಗಳಿಗೆ ಸರ್ವಶಕ್ತಿಯೂ ಇಲ್ಲದುದ ರಿಂದ ಅವುಗಳು ಪ್ರತ್ಯೇಕವಾಗಿ ಎರಡು ವಿಧವಾದ ಕಾರಣಗಳಾಗದಿದ್ದಾಗ್ಯೂ, ಸಮಸ್ತ ವಸ್ತುವಿಲಕ್ಷಣನೂ ಸರ್ವಜ್ಞನೂ ಸರ್ವಶಕ್ತನೂ, ಚಿದಚಿಚ್ಛರೀರಕನೂ ಶಾಸ್ತ್ರೈಕವೇದ್ಯನೂ ಆದ ಸರ್ವೇಶ್ವರನಿಗೆ ನಿಮಿತ್ತೋಪಾದಾನ ಕಾರಣತ್ವಗಳೆರಡೂ ಕೂಡುವುವು. ದೇವದತ್ತಾದಿ ಗಳು ಬಾಲನಾಗಿಯೂ ಯುವಾವಾಗಿಯೂ, ವೃದ್ಧವಾಗಿಯೂ ಪರಿಣಮಿಸಿದಾಗ್ಯೂ, ಆ ಬಾಲ್ಯ ಯೌವನಾದಿಗಳು ಶರೀರಮಾತ್ರದಲ್ಲಿಯೇ ಹೊರತು ಆತ್ಮನಿಗೆ ಹೇಗೆ ಅದರ ಸಂಬಂಧವಿರುವುದಿಲ್ಲವೋ ಹಾಗೆ ಸೂಕ್ಷ್ಮಚಿದಚಿಚ್ಛರೀರಕನಾದ ಸರ್ವೇಶ್ವರನು ಉಪಾದಾನವಾಗುವುದರಿಂದ, ಇವನು ಜಗದಾಕಾರವಾಗಿ ಪರಿಣಮಿಸುವಾಗ, ಆ ಪರಿ ಣಾಮ ಶನ್ನ ಶರೀರವಾದ ಚಿದಚಿದ್ವಸ್ತುಗತವಾದ್ದರಿಂದ ನಿರ್ವಿಕಾರನಾದ ತನಗೆ ಪರಿಣಾಮಾದಿ ದೋಷವೂ ಸಂಭವಿಸದು. ಮೇಲೆಯೂ ಪರಮಾತ್ಮಜ್ಞಾನದಿಂದ ಸರ್ವವೂ ಜ್ಞಾತವಾಗುವುದೆಂದು ಹೇಳಿದ ಪ್ರತಿಜ್ಞೆಯೂ ಮೃದ್ಘಟಾದಿ ದೃಷ್ಟಾಂತವೂ ಈ ಅರ್ಥ ದಲ್ಲಿಯೇ ಸಂಗತವಾಗುವುವು. ಅದು ಹೇಗೆಂದರೆ.—ನಿಮಿತ್ತವಾದ ಕುಲಾಲಾದಿ ಜ್ಞಾನ ದಿಂದ ಕಲಶಾದಿ ಕಾರ್ಯಗಳು ಇಂತಹ ಸ್ವರೂಪವೆಂದು ಅರಿಯಲ್ಪಡವು. ಉಪಾದಾನ ವಾದ ಮೃತ್ಪಿಂಡದ ಜ್ಞಾನದಿಂದ ಕಲಶಾದಿ ಕಾರ್ಯಗಳು ಮಣ್ಣೆಂದು ಅರಿಯಲ್ಪಡುವುವು. ಅದರ ಹಾಗೆಯೇ ಈಶ್ವರ ಉಪಾದಾನವಾದರೆ ಇವನ ಜ್ಞಾನದಿಂದ ಜಗತ್ತು ಜ್ಞಾತ ವಾಗುವುದು. ಆದ್ದರಿಂದ ಜಗತ್ತಿಗೆ ಸರ್ವೇಶ್ವರನು ಉಪಾದಾನ ಕಾರಣವೂ ಆಗುತ್ತಾ ನೆಂದು ಸಿದ್ಧಾಂತ.

ಸೂತ್ರ ೨—**ಅಭಿಧ್ಯೋಪದೇಶಾಚ್ಚ**

**ಸೂತ್ರಾರ್ಥ**

(ಬಹುಸ್ಯಾಂ)—ಎಂದು ಪರಮಪುರುಷನೇ, ನಾನೇ ಜಗದಾಕಾರನಾಗಿ ಬಹುವಿಧವಾಗಿ ಪರಿಣಮಿಸುತ್ತೇನೆ ಎಂದು ಸಂಕಲ್ಪಿಸಿಕೊಂಡನೆಂದು ಹೇಳುವುದರಿಂದಲೂ, (ಉಪಾದಾನಕಾರಣವಾಗುವನು).

ಸೂತ್ರ ೩—**ಸಾಕ್ಷಾಚ್ಚೋಭಯಾಮ್ನಾನಾತ್**

**ಸೂತ್ರಾರ್ಥ**

[ಸಾಕ್ಷಾತ್] =ನೇರವಾಗಿಯೇ [ಉಭಯಾಮ್ನಾನಾತ್‌ಚ=] = ನಿಮಿತ್ತೋಪಾದಾನಕಾರಣತ್ವಗಳೆರಡನ್ನೂ (ಪರಮಾತ್ಮನಿಗೆ) ಹೇಳುವುದರಿಂದಲೂ, ಅವನು (ಉಪಾದಾನ ಕಾರಣವಾಗುತ್ತಾನೆ).

**ವಿವರಣೆ**

"ಕಿಂಸ್ವಿದ್ವನಂ?"—ಎಂದು ಉಪಕ್ರಮಿಸಿ, ಈ ಜಗತ್ತಿಗೆ ಉಪಾದಾನಕಾರಣವಾವುದು? ನಿಮಿತ್ತ ಕಾರಣವಾವುದು?—ಎಂದು ಕೇಳಿದ್ದಕ್ಕೆ, 'ಬ್ರಹ್ಮವನಂ;'—ಎಂದು ಉಪಕ್ರಮಿಸಿ, ಪರಬ್ರಹ್ಮವೇ ಉಪಾದಾನವೂ ನಿಮಿತ್ತವೂ—ಎಂದು ಹೇಳುವುದರಿಂದ ಪರಮಪುರುಷನು ಉಪಾದಾನವಾಗಲೇನೂ ಅಡ್ಡಿಯಿಲ್ಲ.

ಸೂತ್ರ ೪—**ಆತ್ಮಕೃತೇಃ**

**ಸೂತ್ರಾರ್ಥ**

"ತದಾತ್ಮಾನಗ್ಂ ಸ್ವಯಮಕುರುತ",—ಎಂದು ತನ್ನನ್ನೇ (ಜಗದ್ರೂಪವಾಗಿ) ಮಾಡಿದನೆಂದು ಹೇಳುವುದರಿಂದಲೂ, (ಉಪಾದಾನಕಾರಣವಾಗುತ್ತಾನೆ.)

ಸೂತ್ರ ೫—**ಪರಿಣಾಮಾತ್**

**ಸೂತ್ರಾರ್ಥ**

(ಚಿದಚಿದ್ವಸ್ತುಶರೀರನಾದ ಪರಮಪುರುಷನೇ ಜಗದ್ರೂಪವಾಗಿ) ಪರಿಣಮಿವುದರಿಂದ (ಜಗದ್ಗತದೋಷ ಪರಮಪುರುಷನಿಗೆ ಸಂಭವಿಸದು).

**ವಿವರಣೆ**

ಪರಮಪುರುಷನೇ ಜಗದ್ರೂಪವಾಗಿ ಪರಿಣಮಿಸಿದಲ್ಲಿ ಅವನಿಗುಳ್ಳ (ಅನವಧಿಕಾತಿಶಯಜ್ಞಾನಾನಂದಾದಿ) ಗುಣಗಳು ಹೋಗಿ, ಜಗದ್ಗತವಾದದುಃಖ,ಅಜ್ಞಾನ, ಮುಂತಾದ ದೋಷಗಳು ಸಂಭವಿಸುವುದಲ್ಲವೆ?—ಎಂದಲ್ಲಿ, ಬ್ರಹ್ಮ ಅವಿದ್ಯೆಯಿಂದ ಆವರಿಸಲ್ಪಟ್ಟು ಜಗದ್ರೂಪವಾಗಿ ಪರಿಣಮಿಸುವುದೆಂದು ಹೇಳುವ ಅದ್ವೈತಮತದಲ್ಲಿ ಈ ದೋಷಗಳು ಸಂಭವಿಸುತ್ತವೆ. ನಾಮರೂಪಗಳಿಲ್ಲದೆ ಸೂಕ್ಷ್ಮವಾಗಿರುವ ಚಿದಚಿಚ್ಛರೀರಕನಾದ ಪರಮಪುರುಷನು ಸ್ಥೂಲ ಚಿದಚಿದ್ವಿಶಿಷ್ಟನಾಗಿ ಪರಿಣಮಿಸುತ್ತಾನೆಂದು ವೇದಾಂತಿಗಳು ಹೇಳುತ್ತಾರೆ. ಈ ಮತದಲ್ಲಿ ದುಃಖ ಅಜ್ಞಾನ ಮುಂತಾದ ದೋಷಗಳು ಚಿದಚಿತ್ತುಗಳಿಗೇ ಸೇರಿದವು. ಶರೀರದಲ್ಲುಳ್ಳ ಕಪ್ಪು, ಬಿಳುಪು, ಮುಂತಾದ ಬಣ್ಣಗಳು ಆತ್ಮನಿಗೆ

ಸಂಭವಿಸದಿರುವಂತೆಯೇ, ಆ ದೋಷಗಳು, ಇವಕ್ಕೆ ಆತ್ಮಾವಾದ, ಸಕಲಕಲ್ಯಾಣಗುಣಾಕರನಾದ ಪರಮಪುರುಷನಿಗೆ ಸಂಭವಿಸವು.

ಸೂತ್ರ ೬—**ಯೋನಿಶ್ಚ ಹಿ ಗೀಯತೇ**

**ಸೂತ್ರಾರ್ಥ**

[ಹಿ] = ಯಾವ ಕಾರಣದಿಂದ "ಯದ್ಭೂತಯೋನಿಂ," "ಪುರುಷಂ ಬ್ರಹ್ಮಯೋನಿಂ"—ಎಂಬುದಾಗಿ [ಯೋನಿಃಚ] = ಉಪಾದಾನಕಾರಣವಾಗಿಯೂ, [ಗೀಯತೇ] = ಹೇಳಲ್ಪಟ್ಟಿದ್ದಾನೆಯೋ. (ಆ ಕಾರಣದಿಂದ, ಪರಮಪುರುಷನು ಉಪಾದಾನಕಾರಣವಾಗುತ್ತಾನೆ.)

## 8. ಸರ್ವವ್ಯಾಖ್ಯಾನಾಧಿಕರಣ

ಸೂತ್ರ—**ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ**

ಇಲ್ಲಿ [ದ್ರುಹಿಣರುದ್ರಾದಿ ಶರೀರಕ ಬ್ರಹ್ಮವಿದ್ಯಾ]

**ಅತಿದೇಶ ಸಂಗತಿ**

ಶಾಸ್ತ್ರಾರಂಭದಲ್ಲಿ ಜನ್ಮಾದಿ ಸೂತ್ರದಿಂದ ಹೇಳಲ್ಪಟ್ಟ ಭಗವಂತನ ನಿಮಿತ್ತೋಪಾದಾನ ಕಾರಣತ್ವವು ಪ್ರಕೃತ್ಯಧಿಕರಣದಲ್ಲಿ ನಿಗಮಿತವಾಯಿತು. ಅನಂತರ—ಇದುವರೆಗೆ ಉದಾಹರಿಸಿ ಇನ್ನೂ ಉಳಿದಿರುವ ಶ್ರುತಿವಾಕ್ಯಗಳು ಅನಂತವಾಗಿವೆ. ಅವೆಲ್ಲವನ್ನೂ ಸಂಪೂರ್ಣವಾಗಿ ಹೇಳಲು ಸಾಧ್ಯವಿಲ್ಲದ್ದರಿಂದ ಅವೆಲ್ಲಕ್ಕೂ ಹಿಂದೆ ಹೇಳಿದ ಪ್ರಕಾರದಿಂದಲೇ ನಿರ್ವಾಹವನ್ನು ತಾವಾಗಿಯೇ ಊಹಿಸತಕ್ಕದ್ದು—ಎಂಬುದು ಈ ಅಧಿಕರಣಕ್ಕೆ ಸಂಗತಿ

ಈ ಅಧ್ಯಾಯದ ಮೊದಲನೆಯ ಪಾದದಲ್ಲಿ—ಪ್ರಮಾಣ–ಲಕ್ಷಣಗಳಿಂದ–ಸರ್ವ ವೇದಾಂತಗಳಲ್ಲಿಯೂ ಹೇಳಲ್ಪಟ್ಟ ಪರಮಪುರುಷನ ಪರಮಕಾರಣತ್ವವು ಸ್ಥಾಪಿತವಾಯಿತು.

ಎರಡು ಮತ್ತು ಮೂರನೇ ಪಾದಗಳಲ್ಲಿ—ಆ ಪರಮಪುರುಷನಿಗೂ ಅವನ ವಿಭೂತಿಯಾದ ಈ ಜಗತ್ತಿಗೂ ಇರುವ ಸಂಬಂಧ–ಪ್ರಕಾರಗಳು ಸ್ಥಾಪಿಸಲ್ಪಟ್ಟವು.

ಈ ನಾಲ್ಕನೇ ಪಾದದಲ್ಲಿ ಪ್ರತಿಪಕ್ಷನಿರಾಸ—ಹೀಗೆ ನಾಲ್ಕು ಪಾದಗಳ ಅರ್ಥ ವಿಭಾಗದ ಮೂಲಕ ಸಂಗತಿಯನ್ನು ಶ್ರೀ ವಿಷ್ಣುಚಿತ್ತಾರ್ಯರು ಹೇಳಿದ್ದಾರೆ.

ಕಿಶಿನೆಯದಾದ ಈ ಸರ್ವವ್ಯಾಖ್ಯಾನಾಧಿಕರಣವೆಂಬ ಅತಿ ದೇಶಾಧಿಕರಣದಲ್ಲಿ, ಹಿಂದೆ ನಿಶ್ಚಿತವಾದ ಕಾರಣವಾಕ್ಯಗಳ ಪ್ರಕ್ರಿಯೆಯಿಂದಲೇ ಅನಿಶ್ಚಿತವಾದ ಕಾರಣವಾಕ್ಯಗಳಿಗೂ ನಿರ್ವಾಹವಾಗತಕ್ಕದ್ದು. ಅಂತಹ ವಾಕ್ಯಗಳಲ್ಲಿ ಕೆಲವು.—

"ಹಿರಣ್ಯಗರ್ಭಸ್ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್...... ಎಂಬದಾಗಿ, ಹಿರಣ್ಯಗರ್ಭನಿಗೆ ಪಾರಮ್ಯಪ್ರತಿಪಾದಕದಂತಿರುವ ವಾಕ್ಯವಿದೆ. ಹಾಗೆಯೇ

"ನ ಸನ್ನ ಚಾಸಚ್ಛಿವ ಏವ ಕೇವಲಃ,"—ಎಂಬ ಮತ್ತೊಂದು ವಾಕ್ಯ ರುದ್ರನಿಗೆ ಪಾರಮ್ಯಪ್ರತಿಪಾದಕದಂತೆ ತೋರುತ್ತೆ. "ಯದಾ ತಮಸ್ತನ್ನದಿವಾ ನ ರಾತ್ರಿಃ"—ಎಂಬದಾಗಿ, ಪ್ರಳಯಕಾಲದಲ್ಲಿ ರುದ್ರನೊಬ್ಬನೇ ಇದ್ದುದಾಗಿ ಹೇಳುವಂತೆ ಆಪಾತತಃ ತೋರುತ್ತೆ.

ಇಂತಹ ವಾಕ್ಯಗಳು ಬಹುವಾಗಿವೆ. ಈ ವಾಕ್ಯಗಳಿಂದ, ನಾರಾಯಣನಿಗಿಂತ ಅಧಿಕವಾದ ದೇವತಾಂತರಗಳುಂಟೆಂಬ ಶಂಕಾ ವಿಶೇಷವನ್ನು ಸ್ತಂಭನಮಾಡುವುದಕ್ಕಾಗಿ, ಹಿಂದೆ ಹೇಳಿದ ನ್ಯಾಯ ವಿಶೇಷಗಳನ್ನೇ ಅನ್ಯತ್ರ ಅತಿದೇಶಮಾಡಿ ಹೇಳಿದ್ದಾರೆ ಸೂತ್ರಕಾರರು, ಈ ಅಧಿಕರಣದಿಂದ.

**ಸೂತ್ರಾರ್ಥ**

[ಏತೇನ] = ಈ ನ್ಯಾಯ ಸಮುದಾಯದಿಂದ, [ಸರ್ವೇ] = ಸಕಲವೇದಾಂತವಾಕ್ಯಗಳೂ, [ವ್ಯಾಖ್ಯಾತಾಃ] = ವ್ಯಾಖ್ಯಾನ ಮಾಡಲ್ಪಟ್ಟವು.

**ವಿವರಣೆ**

"ಜನ್ಮಾದ್ಯಸ್ಯ ಯತಃ"—ಎಂಬಲ್ಲಿಂದ ಹಿಡಿದು ಇಲ್ಲಿಯವರೆಗೆ ಹೇಳಿದ ನ್ಯಾಯ ಕಲಾಪಗಳಿಂದಲೇ, ಇಲ್ಲಿ ವಿಚಾರಮಾಡದ ಸಕಲ ವೇದಾನ್ತ ವಾಕ್ಯಗಳೂ ಪರಮಪುರುಷ ಪ್ರತಿಪಾದಕಗಳೆಂದು ಅರ್ಥನಿರ್ಣಯವನ್ನು ಮಾಡಿಕೊಳ್ಳತಕ್ಕದ್ದು. ಅಧ್ಯಾಯ ಮುಗಿಯಿತೆಂದು ಸೂಚಿಸುವುದಕ್ಕಾಗಿ. "ವ್ಯಾಖ್ಯಾತಾಃ"—ಎಂಬ ಪದ ದ್ವಿರುಕ್ತವಾಗಿದೆ.

ಇಲ್ಲಿಗೆ ಸಮುದಿತವಾದ ಅಧಿಕರಣಸಂಖ್ಯೆ—೩೫.

[ಪ್ರಥಮಾಧ್ಯಾಯ ಸಮಾಪ್ತ.]

ಈ ೪ನೇ ಪಾದದ ೮ ಅಧಿಕರಣಗಳಲ್ಲಿಯ ಪೂರ್ವಪಕ್ಷೋತ್ಥಾನ ಪ್ರಕ್ರಿಯೆ ಮತ್ತು ಅವುಗಳ ಪ್ರತಿಕ್ಷೇಪ.

ಪ್ರಥಮಾಧ್ಯಾಯದ ನಾಲ್ಕನೇ ಪಾದದಲ್ಲಿಯ ಎಂಟು ಅಧಿಕರಣಗಳೊಳಗೆ,

ಮೊದಲನೆಯದಾದ —ಆನುಮಾನಿಕಾಧಿಕರಣದಲ್ಲಿ—ಸಾಂಖ್ಯೋಕ್ತ ಪ್ರಕ್ರಿಯೆ.

ಎರಡನೆಯದಾದ—ಚಮಸಾಧಿಕರಣದಲ್ಲಿ—ಸಾಂಖ್ಯೋಕ್ತವಾದ ಅಬ್ರಹಾತ್ಮಕ ಪ್ರಧಾನದ ಸೃಷ್ಟಿ ಪ್ರಕ್ರಿಯೆ.

ಮೂರನೆಯದಾದ— ಸಂಖ್ಯೋಪಸಂಗ್ರಹಾಧಿಕರಣದಲ್ಲಿ — ಸಾಂಖ್ಯೋಕ್ತವಾದ ತತ್ತ್ವ ಸಂಖ್ಯಾಪರಿಕ್ಲೃಪ್ತಿ.

ನಾಲ್ಕನೆಯದಾದ—ಕಾರಣತ್ವಾಧಿಕರಣದಲ್ಲಿ—ಸಾಂಖ್ಯೋಕ್ತವಾದ ಅವ್ಯಾಕೃತೈಕ್ಯ.

ಐದನೆಯದಾದ—ಜಗದ್ವಾಚಿತ್ವಾಧಿಕರಣದಲ್ಲಿ ಕರ್ಮಶಬ್ದಕ್ಕೆ ಪುಣ್ಯಪಾಪರೂಪ ಸ್ವಕರ್ಮಪರತ್ವ.

ಆರನೆಯದಾದ— ವಾಕ್ಯಾನ್ವಯಾಧಿಕರಣದಲ್ಲಿ— ಪತಿಪುತ್ರಾದಿರೂಪ ಕರ್ಮ-ಫಲಕ್ಕೆ ಅವಶ್ಯಯೋಗಿತ್ವ.

ಏಳನೆಯದಾದ ಪ್ರಕೃತ್ಯಧಿಕರಣದಲ್ಲಿ—ನಿಮಿತ್ತೋಪಾದಾನಗಳಿಗೆ ಭೇದ.

ಎಂಟನೆಯದಾದ—ಸರ್ವವ್ಯಾಖ್ಯಾನಾಧಿಕರಣದಲ್ಲಿ—ಬ್ರಹ್ಮ — ರುದ್ರಾದಿಗಳಿಗೆ ಕಾರಣತ್ವ ಎಂಬ ಆಯಾ ಪಾದದ ಅರ್ಥಗಳನ್ನು ಪೂರ್ವಪಕ್ಷಮಾಡಿಕೊಂಡು ಅವುಗಳ ನಿರಾಕರಣವನ್ನು ಸೂತ್ರಕಾರರು ಮಾಡಿದ್ದಾರೆ.

## ಅಥ ದ್ವಿತೀಯಾಧ್ಯಾಯಃ

### ಅಧ್ಯಾಯ ಸಂಗತಿ

ಪ್ರಥಮಾಧ್ಯಾಯದಲ್ಲಿ ಅಸ್ಪಷ್ಟತರ ಜೀವಾದಿ ಲಿಂಗಕ ವಾಕ್ಯಗಳು ಪೂರ್ವಪಕ್ಷಿಯಿಂದ ನಾಲ್ಕು ಬಗೆಯಾಗಿ ಪುರಸ್ಕರಿಸಲ್ಪಟ್ಟವು—ತತ್ಪ್ರತಿಪಕ್ಷ ವಾಕ್ಯಗಳು ಸಿದ್ಧಾಂತಿಯಿಂದ ಪುರಸ್ಕೃತವಾದುವು. ಅವುಗಳಲ್ಲಿ ಪೂರ್ವಪಕ್ಷಯುಕ್ತಿಗಳು ಪೌಲಸ್ತ್ಯಪರಿಕರ ನ್ಯಾಯದಿಂದ ಒಂದೊಂದು ಪಾದದಲ್ಲಿಯೂ ಕ್ಷಯಿಸುತ್ತಾ ಬಂದವು. ಪ್ರಕ್ಷೀಣವಾದುವು ಮತ್ತೆ ತಲೆಯೆತ್ತಲಿಲ್ಲವಾದ್ದರಿಂದ ಮುಂದ ಮುಂದಿನ ಪಾದಗಳಲ್ಲಿ ತರಲ್ಪಟ್ಟ ಉಪಪತ್ತಿಗಳೂ, ವಾಕ್ಯಗಳೂ ನಿಸ್ಸಹಾಯತೆ ಮತ್ತು ದೌರ್ಬಲ್ಯದಿಂದ ಕ್ರಮವಾಗಿ ಕ್ಷೀಣವಾದುವು. ಸಿದ್ಧಾಂತ ಯುಕ್ತಿಗಳಾದರೋ—ಸುಗ್ರೀವ ಸೈನಿಕರಂತೆ ಪ್ರತಿ ಪಾದದಲ್ಲಿಯೂ ಪೂರ್ವಪಕ್ಷಿಗಳ ಪ್ರತಿಕ್ಷೇಪ ಮಾಡಿ ಅಕ್ಷತವಾಗಿರುವುದರಿಂದ, ಉತ್ತರೋತ್ತರ ಪ್ರತಿಪಾದ್ಯವಾದ ಶ್ರುತಿ ಸ್ಮೃತಿಯುಕ್ತ್ಯಾದಿಗಳು ಸಸಹಾಯಗಳಾಗಿ ಉತ್ತರೋತ್ತರ ಪ್ರಾಬಲ್ಯದಿಂದ, ಸಿದ್ಧಾಂತ ಪ್ರಕ್ರಿಯೆಯು ನಿಷ್ಕಂಟಕವಾಗಿರುವುದರಿಂದ ಸರ್ವತೋಮುಖವಾದ ವಿಜಯ ಸಿದ್ಧಿಯಾಗಿ ಸಾಂಖ್ಯಪಕ್ಷ ನಿರಸ್ತವಾಯಿತು. ಆದರೂ ಅವರು ಮತ್ತೆಯೂ, "ನಷ್ಟೇ ದ್ಯೂತೇ ಬಲ್ಬಜಂ ಕುರ್ಯಾತ್"—ಎಂಬ ನ್ಯಾಯದಿಂದ ಪ್ರಕೋಪಮಾತ್ರ ಪರತಂತ್ರರಾಗಿ ಯುಕ್ತಿಗಳಿಂದ ವಿರೋಧವನ್ನು ಹೇಳಲು ಎರಡನೆಯ ಅಧ್ಯಾಯದಲ್ಲಿ ಆರಂಭಿಸುತ್ತಾರೆ.

### ಅಧಿಕರಣ ಸಂಗತಿ ಅಪವಾದ ಸಂಗತಿ

ಪ್ರಥಮಾಧ್ಯಾಯದ ಪರಿಸಮಾಪ್ತಿಯಲ್ಲಿ ಸಾಂಖ್ಯ ಮತ್ತು ಯೋಗ ಪಕ್ಷಗಳು ಕ್ರಮವಾಗಿ ನಿರಸ್ತವಾಗಲು ಸಾಂಖ್ಯವಾದಿಯು ಮೊದಲು, ಅನಂತರ ಯೋಗವಾದಿ—ಹೀಗೆ ಇಬ್ಬರೂ ವೇದಾಂತ ವಿರೋಧವನ್ನು ಹೇಳುತ್ತಾರೆ ಎಂಬುದು ಅಧಿಕರಣಸಂಗತಿ—ಈ ಎರಡು ವಾದಿಗಳ ಅಧಿಕರಣಗಳೂ ಸೇರಿ ಒಂದೇ ಪೇಟಿಕೆಯೆನಿಸಿದೆ. ಒಳ್ಳೆಯ ತರ್ಕತಂತ್ರ ಕ್ರಮದಲ್ಲಿ ನಿಪುಣರಾದ ಮಹಾಬುದ್ಧಿಗಳಿಗೆ ಪ್ರಥಮಾಧ್ಯಾಯೋಕ್ತ ಪ್ರಕಾರದಿಂದ, ಸಂತೋಷ ಸಿದ್ಧಿಸಿದಾಗ್ಯೂ, ಮಂದ ಬುದ್ಧಿಗಳಿಗೆ ಹೈತುಕರ ಆಕ್ರಮಣವನ್ನು ಶಂಕಿಸಿದವರಾಗಿ ಅದರಲ್ಲಿ ಸ್ಥಾಪಿಸಿದ ಬ್ರಹ್ಮಕಾರಣತ್ವವನ್ನೇ ಸಂಭಾವನೀಯ ಸಮಸ್ತ ಪ್ರಕಾರ ದುರ್ಧರ್ಷಣತ್ವ ಖ್ಯಾಪನಕ್ಕಾಗಿ, ಸ್ಥೂಣಾನಿಖನನ ನ್ಯಾಯದಿಂದ ಸೂತ್ರಕಾರರೇ ಮುಂದೆ ಸ್ಥಿರಪಡಿಸುತ್ತಾರೆ. ಇದರಿಂದ ಪ್ರಥಮಾಧ್ಯಾಯೋಕ್ತವಾದ ಅರ್ಥದ ಸ್ಥಾಪನೆಯೇ ದ್ವಿತೀಯಾಧ್ಯಾಯದ ಕೃತ್ಯವಾದ ಹಾಗಾಯಿತು. ಹಾಗೂ ಪೌನರುಕ್ತ್ಯ ಶಂಕೆಗೆ ಅವಕಾಶವಿಲ್ಲ.

**ಸೂತ್ರಾರ್ಥ**

## ದ್ವಿತೀಯಾಧ್ಯಾಯೇ—ಪ್ರಥಮಃಪಾದಃ

[ ಈ ಅಧ್ಯಾಯಕ್ಕೆ ಅವಿರೋಧಾಧ್ಯಾಯವೆಂದು ಹೆಸರು]

[ಪ್ರಥಮಾಧ್ಯಾಯದಲ್ಲಿ ವೇದಾಂತ ವಾಕ್ಯಗಳು ಬ್ರಹ್ಮೈಕಕಾರಣಪರಗಳೆಂದು ವಾಕ್ಯ ತಾತ್ಪರ್ಯ ಪರ್ಯಾಲೋಚನೆಯಿಂದ ಸಮರ್ಥಿತವಾಯಿತು. ಇಲ್ಲಿ ಬಾಹ್ಯತರ್ಕ ವಿರೋಧ ಪರಿಹಾರ]

## 1. ಸ್ಮೃತ್ಯಧಿಕರಣ

ಸೂತ್ರ—**ಸ್ಮೃತ್ಯನವಕಾಶದೋಷಪ್ರಸಂಗ ಇತಿಚೇನ್ನಾನ್ಯಸ್ಮೃತ್ಯ-ನವಕಾಶದೋಷಪ್ರಸಂಗಾತ್**

**ಸೂತ್ರಾರ್ಥ**

[ಸ್ಮೃತ್ಯನವಕಾಶದೋಷಪ್ರಸಂಗ] = (ಕಪಿಲಸ್ಮೃತಿಯನ್ನು ಉಪಬೃಂಹಣವಾಗಿ ಅಂಗೀಕರಿಸದಿದ್ದಲ್ಲಿ ಅದರಿಂದಲೇ ಅರ್ಥನಿರ್ಣಯಮಾಡಬೇಕಾದ) ಅನಂತಸ್ಮೃತಿಗಳಿಗೆ ಅವಕಾಶವಿಲ್ಲವೆಂಬದಾದ ದೋಷ ಪ್ರಸಂಗಿಸುವುದು [ಇತಿ ಚೇತ್] = ಎಂದಲ್ಲಿ [ಅನ್ಯಸ್ಮೃತ್ಯನವಕಾಶ ದೋಷಪ್ರಸಂಗಾತ್] = ಬೇರೆಯಾದ (ಮನ್ವಾದಿ) ಸ್ಮೃತಿಗಳಿಗೆ ಅವಕಾಶವಿರುವುದಿಲ್ಲವಾದ ದೋಷ ಪ್ರಸಂಗಿಸುವುದರಿಂದ [ನ] = ಕಪಿಲಸ್ಮೃತಿಯನ್ನು ಉಪಬೃಂಹಣವನ್ನಾಗಿ ಸ್ವೀಕರಿಸಕೂಡದು.

**ವಿವರಣೆ**

ಮೊದಲಧ್ಯಾಯದಲ್ಲಿ ಬ್ರಹ್ಮವೇ ಜಗತ್ಕಾರಣವನ್ನಲಾಯಿತು. ಈ ಅಧ್ಯಾಯದಲ್ಲಿ ಅದರ ಮೇಲೆ ಬರುವ ಶಂಕೆಗಳನ್ನು ಪರಿಹರಿಸಿ ಅದನ್ನೇ ದೃಢೀಕರಿಸಿದೆ. ಕಪಿಲಸ್ಮೃತಿಯಲ್ಲಿ ಮೂಲಪ್ರಕೃತಿ ಜಗತ್ಕಾರಣವೆಂದಿದೆ. ಆ ಯುಕ್ತಿಗಳಿಂದ ಬ್ರಹ್ಮವೇ ಕಾರಣವೆಂಬವಾದ ಚಲಿಸುವುದೆ? ಇಲ್ಲವೆ?—ಎಂದು ಸಂಶಯ. ವೇದಾರ್ಥವು (ವೇದಗಳ ಅರ್ಥವು) ಮಂದಮತಿಗಳಿಗೆ ದುರ್ಗ್ರಹವಾಗಿದೆಯೆಂದು, ಅದಕ್ಕೆ ವ್ಯಾಖ್ಯಾನ ರೂಪವಾಗಿ ಕೇವಲ ತತ್ತ್ವಪರವಾಗಿ ಕಪಿಲಸ್ಮೃತಿ ಪ್ರವರ್ತಿತವಾಯಿತು. ಅದನ್ನು ಪ್ರಮಾಣವಾಗಿ ಸ್ವೀಕರಿಸದಿದ್ದಲ್ಲಿ. ಅದು ವ್ಯರ್ಥವಾಗಿಬಿಡುವುದು. ಆದ್ದರಿಂದ ಅದರಲ್ಲಿ ಹೇಳಿರುವ ಪ್ರಧಾನವೇ ಕಾರಣವೆಂಬ ವಾದವೇ ವೇದಸಮ್ಮತವೆಂದು ಅಂಗೀಕರಿಸಲ್ಪಡಬೇಕು—ಎಂದು ಪೂರ್ವಪಕ್ಷ. ಸ್ಮೃತಿಗೆ ವಿರೋಧವೆಂಬದಕ್ಕಾಗಿ ಶ್ರುತಿಯನ್ನು ಅನಾದರಿಸುವುದೆಂದರೇನು? —"ವಿರೋಧೇತ್ವನ ಪೇಕ್ಷಂ ಸ್ಯಾತ್ (ಅಸತಿಹ್ಯನುಮಾನಂ)"—ಎಂಬಂತೆ ಶ್ರುತಿ ವಿರುದ್ಧವಾದ ಸ್ಮೃತಿಯೇ ಅನಾದರಣೀಯವೆಂದಿದೆ? ನಿಜ. ಪ್ರತ್ಯಕ್ಷಶ್ರುತಿಗೆ ವಿರೋಧವಾದಲ್ಲಿ ಅದು ಹಾಗೆಯೇ.

"ಔದುಂಬರೀಂ ಸ್ಪೃಷ್ಟ್ವೋದ್ಗಾಯೇತ್"—ಎಂಬುದು ಶ್ರುತಿ. "ಔದುಂಬರೀ ಸರ್ವಾವೇಷ್ಟಯಿತವ್ಯಾ"—ಎಂಬುದು ಸ್ಮೃತಿ. ಇಲ್ಲಿ ಉದಾಹೃತ ಶ್ರುತಿಯಲ್ಲಿ ತಾನಾಗಿಯೇ ಅರ್ಥ ನಿಶ್ಚಯವಾಗುವ ಸಂಭವವಿದೆ. ಆದ್ದರಿಂದ ಇದಕ್ಕೆ ವಿರುದ್ಧವಾದ ಸ್ಮೃತಿ

ಅನಾದರಣೀಯ. ಪ್ರಕೃತದಲ್ಲಿಯಾದರೋ—ವೇದಾಂತ ವೇದ್ಯವಾದತತ್ತ್ವ ತಿಳಿಯಲು ಕಷ್ಟವಾದ್ದರಿಂದ, ಪರಮರ್ಷಿಪ್ರಣೀತವಾದ ಸ್ಮೃತಿಗೆ ವಿರೋಧವಾದಲ್ಲಿ ಇದೇ ಸರಿಯಾದ ಅರ್ಥವೆಂಬ ನಿಶ್ಚಯವಾಗದುದರಿಂದ, ಸ್ಮೃತಿಯಿಂದ ಅದಕ್ಕನುಗುಣವಾಗಿ ಶ್ರುತ್ಯರ್ಥವನ್ನು ವ್ಯತ್ಯಾಸಗೊಳಿಸುವುದು ವಿರುದ್ಧವಲ್ಲ. ಪ್ರಾಚೀನ ಭಾಗದಲ್ಲಿ ಹೇಳಿರುವ, ನಿಖಿಲಾಭ್ಯುದಯಗಳಿಗೂ ಸಾಧನಭೂತವಾದ ಅಗ್ನಿಹೋತ್ರ—ದರ್ಶಪೂರ್ಣಮಾಸ—ಜ್ಯೋತಿಷ್ಟೋಮಾದಿ ಕರ್ಮಗಳನ್ನು ಯಥಾವತ್ತಾಗಿ ಅಂಗೀಕರಿಸುವವರೂ "ಋಷಿಂ ಪ್ರಸೂತಂ ಕಪಿಲಂ".—ಇತ್ಯಾದಿ ವಾಕ್ಯಗಳಿಂದ ಆಪ್ತತಮರೆಂದು ಸಂಕೀರ್ತಿತರಾದ ಪರಮರ್ಷಿಯಾದ ಕಪಿಲರ ಸ್ಮೃತ್ಯುಪಬೃಂಹಣವಿಲ್ಲದೆ ಅಲ್ಪಶ್ರುತರಾದ ಮಂದಮತಿಗಳಿಗೆ ವೇದಾಂತಗಳ ಅರ್ಥ ನಿಶ್ಚಯವಾಗದುದರಿಂದಲೂ, ಯಥಾಶ್ರುತವಾದ ಅರ್ಥಗ್ರಹಣ ಮಾಡಿದಲ್ಲಿ ಆಪ್ತ ಪ್ರಣೀತ ಸಾಂಖ್ಯ ಸ್ಮೃತಿಗಳೆಲ್ಲಕ್ಕೂ ಅವಕಾಶವಿಲ್ಲದೆ ಹೋಗುವುದರಿಂದಲೂ, ಸ್ಮೃತಿ ಪ್ರಸಿದ್ಧವಾದ ಅರ್ಥವೇ ವೇದಾಂತವೇದ್ಯವೆಂದು ಬಲಾತ್ಕಾರದಿಂದ ಒಪ್ಪಬೇಕು. ಇದರಿಂದ ಬ್ರಹ್ಮವನ್ನೇ ಕಾರಣವಾಗಿ ಹೇಳುವ ಮನ್ವಾದಿ ಸ್ಮೃತಿಗಳಿಗೆ ಅವಕಾಶವಿಲ್ಲದೆ ಹೋಗುವುದಲ್ಲವೆ?—ಎಂದಲ್ಲಿ ಧರ್ಮಪ್ರತಿಪಾದನಪರವಾದ ಪ್ರಾಚೀನ ಭಾಗೋಪಬೃಂಹಣದಲ್ಲಿಯೇ ಅವಕ್ಕೆ ಅವಕಾಶವೊದಗಿದೆ. ಕಪಿಲಸ್ಮೃತಿಯಾದರೋ—ಸಂಪೂರ್ಣವಾಗಿ ತತ್ತ್ವ ಪ್ರತಿಪಾದನ ಪರವಾದ್ದರಿಂದ, ಇದನ್ನು ಒಪ್ಪದಿದ್ದಲ್ಲಿ ಇದಕ್ಕೆ ನಿರವಕಾಶತ್ವವೇ ಒದಗುವುದು—ಎಂಬುದು ಪೂರ್ವಪಕ್ಷಿಯ ಆಶಂಕೆ.

**ಇದಕ್ಕೆ ಉತ್ತರ**

ವೇದಾರ್ಥವನ್ನು ನಿಶ್ಚಯಿಸಲು ಉಪಬೃಂಹಣ ಬೇಕಾಗಿದ್ದರೂ ವೇದಗಳ ಅರ್ಥಕ್ಕೆ ವಿರುದ್ಧವಲ್ಲದ ಮನ್ವಾದಿ ಸ್ಮೃತಿಗಳನ್ನು ಉಪಬೃಂಹಣಗಳನ್ನಾಗಿ ಸ್ವೀಕರಿಸಬೇಕು. ಒಂದು ಕಪಿಲಸ್ಮೃತಿಗಾಗಿ ಮನ್ವಾದಿ ಸ್ಮೃತಿಗಳನ್ನು ಉಪಬೃಂಹಣವಾಗಿ ಸ್ವೀಕರಿಸದಿದ್ದಲ್ಲಿ, ಆ ಅನೇಕ ಸ್ಮೃತಿಗಳು ವ್ಯರ್ಥವೆನಿಸುವುವು. ಅವುಗಳು ತತ್ತ್ವವನ್ನೂ ಧರ್ಮವನ್ನೂ ಪ್ರತಿಪಾದಿಸುವುದರಿಂದ, ತತ್ತ್ವಾಂಶದಲ್ಲಿ ಅಪ್ರಮಾಣವಾದರೂ, ಧರ್ಮಪ್ರತಿಪಾದನಾಂಶದಲ್ಲಿ ಪ್ರಮಾಣವಾಗುವುದರಿಂದ ಅವುಗಳು ವ್ಯರ್ಥಗಳಲ್ಲವೆನ್ನಕೂಡದು. ಧರ್ಮವೆಂಬುದು ಪರಬ್ರಹ್ಮದ ಆರಾಧನ ರೂಪ. ಪರಬ್ರಹ್ಮಸಿದ್ಧಿಸದಿದ್ದಲ್ಲಿ ಇದರ ಆರಾಧನ ರೂಪವಾದ ಧರ್ಮವೂ ಪ್ರಮಾಣವಾಗದು. ಆದ್ದರಿಂದ ಅವು ವ್ಯರ್ಥವೆಂಬುದು ಸಿದ್ಧ. ಅದಕ್ಕಾಗಿ ಅವುಗಳನ್ನು ಪ್ರಮಾಣವನ್ನಾಗಿ ಸ್ವೀಕರಿಸಿ, ಬ್ರಹ್ಮಕಾರಣ ವಾದವೇ ವೇದಸಮ್ಮತವೆಂದು ಒಪ್ಪಬೇಕು—ಎಂಬುದು ಸಿದ್ಧಾಂತ.

ಮನ್ವಾದಿ ಸ್ಮೃತಿಗಳೆಲ್ಲವೂ ಬ್ರಹ್ಮವೇಕಾರಣವೆಂದು ಹೇಳುತ್ತವೆ—ಉದಾಹರಣೆಗೆ:—

**ಮನು**

"ಆಸೀದಿದಂ ತಮೋಭೂತಂ..." ಎಂದು ಆರಂಭಿಸಿ,
"ತತಸ್ಸ್ವಯಂ ಭೂರ್ಭಗವಾನ್ ಅವ್ಯಕ್ತೋವ್ಯಂಜಯನ್ನಿದಂ ।
ಮಹಾಭೂತಾದಿವೃತ್ತೌಜಾಃ ಪ್ರಾದುರಾಸೀತ್ತಮೋನುದಃ"
—"ಸೋಽಭಿಧ್ಯಾಯ ಶರೀರಾತ್ಸ್ವಾತ್ ಸಿಸೃಕ್ಷುರ್ವಿವಿಧಾಃ ಪ್ರಜಾಃ ।
ಅಪ ಏವಸಸರ್ಜಾದೌ ತಾಸುವೀರ್ಯಮಪಾಸೃಜತ್" ।।—ಇತ್ಯಾದಿ.

ಶ್ರೀ ಭಗವದ್ಗೀತಾ—"ಅಹಂಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಳಯಸ್ತಥಾ ।"
"ಅಹಂ ಸರ್ವಸ್ಯ ಪ್ರಭವಃಮತ್ತಸ್ಸರ್ವಂ ಪ್ರವರ್ತತೇ"—ಇತ್ಯಾದಿ.

ಮಹಾಭಾರತೇ—"ಕುತಸ್ಸೃಷ್ಟಮಿದಂ ಸರ್ವಂ ಜಗತ್‌ಸ್ಥಾವರ ಜಂಗಮಂ । ಪ್ರಳಯೇಚ ಕಮಭ್ಯೇತಿ ತನ್ಮೇಬ್ರೂಹಿ ಪಿತಾಮಹ"—ಎಂಬ ಪ್ರಶ್ನೆಗೆ. "ನಾರಾಯಣೋ ಜಗನ್ಮೂರ್ತಿಃ ಅನನ್ತಾತ್ಮಾಸನಾತನಃ। ತಸ್ಮಾದ ವ್ಯಕ್ತಮುತ್ಪನ್ನಂ ತ್ರಿಗುಣಂ ದ್ವಿಜಸತ್ತಮ—ಅವ್ಯಕ್ತಂ ಪುರುಷೇ ಬ್ರಹ್ಮನ್ನಿಷ್ಕ್ರಿಯೇ ಸಂಪ್ರಲೀಯತೇ ।"—ಇತ್ಯಾದಿ.

ಶ್ರೀ ಪರಾಶರರು—"ವಿಷ್ಣೋಸ್ಸಕಾಶಾದುದ್ಭೂತಂ ಜಗತ್ತತ್ರೈವ ಚ ಸ್ಥಿತಂ ।
ಸ್ಥಿತಿಸಂಯಮಕರ್ತಾऽಸೌ ಜಗತೋಽಸ್ಯ ಜಗಚ್ಚಸಃ ।।"

ಆಪಸ್ತಂಬ.—"ಪೂಃ ಪ್ರಾಣಿನಸ್ಸರ್ವಏವ ಗುಹಾಶಯಸ್ಯ ಅಹನ್ಯಮಾನಸ್ಯವಿಕಲ್ಮಷಸ್ಯ" —ಎಂದು ಆರಂಭವಾಗಿ, "ತಸ್ಮಾತ್ಕಾಯಾಃ ಪ್ರಭವನ್ತಿ ಸರ್ವೇ ಸಮೂಲಂ ಶಾಶ್ವತಿಕಸ್ಸ ನಿತ್ಯಃ ।।" ಇತ್ಯಾದಿ. ಕಪಿಲಸ್ಮೃತಿಯಿಂದ ವೇದಾನ್ತ ವಾಕ್ಯಗಳ ಅರ್ಥವ್ಯವಸ್ಥೆಯೆಂದಲ್ಲಿ, ಈ ಸ್ಮೃತಿಗಳೆಲ್ಲಕ್ಕೂ ಅವಕಾಶ ತಪ್ಪಿಹೋಗಿ ದೊಡ್ಡ ದೋಷ ಸಂಭವಿಸುವುದು. ಉಪ ಬೃಂಹಣವೆಂದರೆ ಶ್ರುತಿಪ್ರತಿಪನ್ನವಾದ ಅರ್ಥವನ್ನು ವಿಶದಪಡಿಸುವುದು. ವಿರುದ್ಧವಾದ ಸ್ಮೃತಿಗಳಿಂದ ಅದು ಶಕ್ಯವಲ್ಲ. "ಋಷಿಂ ಪ್ರಸೂತಂ ಕಪಿಲಂ"—ಎಂದು ಆಪ್ತರೆಂದು ಸಂಕೀರ್ತಿತರಾದ್ದರಿಂದ ಕಪಿಲರ ಸ್ಮೃತ್ಯನುಸಾರವಾಗಿ ವೇದಾಂತಾರ್ಥ ವ್ಯವಸ್ಥಾಪನವು ನ್ಯಾಯವೆಂದಲ್ಲಿ, ಅತಿಶಯಿತಜ್ಞಾನವುಳ್ಳವರೆಲ್ಲರಿಗೂ ನಿದರ್ಶನವಾಗಿ ಶ್ರುತಿಸ್ಮೃತಿಗಳಲ್ಲಿ ಕೊಂಡಾಡಲ್ಪಟ್ಟ ಬೃಹಸ್ಪತಿಯಿಂದ ಪ್ರಣೀತವಾದ ಲೋಕಾಯತ ಮತದಿಂದಲೂ ಶ್ರುತ್ಯರ್ಥವನ್ನು ವ್ಯವಸ್ಥೆಮಾಡುವ ಪ್ರಸಂಗವೊದಗೀತು !

[ಸ್ವಯೋಗ ಮಹಿಮೆಯಿಂದ ವಸ್ತು ತತ್ತ್ವವನ್ನು ಚೆನ್ನಾಗಿ ಅರಿತವರಾದ್ದರಿಂದ ಆ ಕಪಿಲರ ಸ್ಮೃತಿಗೆ ಅನುಸಾರವಾಗಿ ವೇದಾಂತಾರ್ಥವನ್ನು ವ್ಯವಸ್ಥೆಮಾಡತಕ್ಕದ್ದು— ಎಂದಲ್ಲಿ ಅದಕ್ಕೆ ಉತ್ತರ ಮುಂದಿನ ಸೂತ್ರದಲ್ಲಿ ಪರಿತವಾಗಿದೆ].

### ಸೂತ್ರ ೨—ಇತರೇಷಾಂ ಚಾನುಪಲಬ್ಧೇಃ

### ಸೂತ್ರಾರ್ಥ

[ಇತರೇಷಾಂ] = ಇತರರಾದ ಮನ್ವಾದಿಗಳಿಗೆ [ಅನುಪಲಬ್ಧೇಃ ಚ] = (ಪ್ರಧಾನ ಕಾರಣತ್ವ ತೋರದುದರಿಂದ. (ಅದು ವೇದ ಸಮ್ಮತವಲ್ಲ)

### ವಿವರಣೆ

ಪ್ರತ್ಯಕ್ಷಗಳಲ್ಲದ ನಕಲ ವಸ್ತುಗಳನ್ನೂ ಸಾಕ್ಷಾತ್ಕರಿಸಬಲ್ಲ ಯೋಗಮಹಿಮೆಯುಳ್ಳ ಕಪಿಲ ಮಹಾಮುನಿಗೆ ಬ್ರಹ್ಮವೇ ಕಾರಣವೆಂಬುದು ಗೋಚರವಾಗದುದರಿಂದ, ಬ್ರಹ್ಮ ಕಾರಣವೆಂಬ ಪಕ್ಷ ಪ್ರಾಮಾಣಿಕವಲ್ಲವೆಂದಲ್ಲಿ, ವೇದಾರ್ಥ ಬಲ್ಲವರಲ್ಲಿ ಮೂರ್ಧನ್ಯರಾಗಿ, ಪ್ರಾಮಾಣಿಕರೆಂದು. "ಯದ್ವೈ ಕಿಂಚನ ಮನುರವದತ್ ತದ್ಭೇಷಜಂ"—ಇತ್ಯಾದಿಯಾಗಿ ಶ್ರುತಿ ಸ್ಮೃತಿಗಳಲ್ಲಿ ಪ್ರತಿಪಾದಿತರಾಗಿ, ಸಕಲ ಅತೀಂದ್ರಿಯಾರ್ಥವೇತ್ತೃಗಳಾದ ಮನ್ವಾದಿ

ಗಳಿಗೆ ಪ್ರಧಾನಕಾರಣತ್ವವು ತೋರದುದರಿಂದ ಪ್ರಧಾನಕಾರಣತ್ವಪಕ್ಷವು ಪ್ರಾಮಾಣಿಕ ವಲ್ಲ. ವೇದಾಂತ ವಿರುದ್ಧವಾದ ಅರ್ಥವನ್ನು ಪ್ರತಿಪಾದಿಸುವ ಕಪಿಲಸ್ಮೃತಿ ಕಪಿಲರ ಭ್ರಾಂತಿಯಿಂದ ಕಲ್ಪಿಸಲ್ಪಟ್ಟದ್ದು ಎಂದು ನಿಶ್ಚಯಿಸಲ್ಪಡುವುದು.

## 2. ಯೋಗಪ್ರತ್ಯುಕ್ತ್ಯಧಿಕರಣ

### ಸೂತ್ರ—**ಏತೇನ ಯೋಗಃ ಪ್ರತ್ಯುಕ್ತಃ**

**ಸಂಗತಿ ಅತಿದೇಶ**

ಯೋಗ ಸ್ಮೃತಿ ಈಶ್ವರನನ್ನು ಅಂಗೀಕರಿಸಿದೆ. ಮೋಕ್ಷಸಾಧನವೆಂದು ವೇದಾಂತ ವಿಹಿತವಾದ ಯೋಗವನ್ನು ಹೇಳಿರುವುದರಿಂದ. ಅದನ್ನು ಹೇಳಿದ ಹಿರಣ್ಯಗರ್ಭನು ಸರ್ವ ವೇದಾಂತ ಪ್ರವರ್ತನದಲ್ಲಿ ಅಧಿಕೃತನಾದ್ದರಿಂದ, ಅಂತಹ ಸ್ಮೃತಿಯಿಂದ ವೇದಾಂತದ ಉಪಬೃಂಹಣಮಾಡುವುದು ನ್ಯಾಯುವೆಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಏತೇನ] = ವೇದಾಂತಾರ್ಥಗಳಿಗೆ ವಿರುದ್ಧವಾದುದರಿಂದಲೇ, (ಯೋಗಃ) = ಯೋಗಸ್ಮೃತಿಯೂ, [ಪ್ರತ್ಯುಕ್ತಃ] = ನಿರಸನಮಾಡಲ್ಪಟ್ಟಿತು.

**ವಿವರಣೆ**

ಯೋಗಸ್ಮೃತಿಯು ವೇದಾಂತಕ್ಕೆ ಉಪಬೃಂಹಣವಾಗುವುದೇ? ಇಲ್ಲವೆ?—ಎಂದು ಸಂಶಯ. ಯೋಗಸ್ಮೃತಿಯನ್ನು ಸಕಲ ವೇದ ಪ್ರವರ್ತಕನಾದ ಬ್ರಹ್ಮ ಪ್ರವರ್ತನಗೊಳಿ ಸಿರುವುದರಿಂದಲೂ, ಆ ಸ್ಮೃತಿಯಲ್ಲಿ ಈಶ್ವರನನ್ನು ಒಪ್ಪಿಕೊಂಡಿರುವುದರಿಂದಲೂ, ಅದರಿಂದಲೇ ಪ್ರಧಾನಕಾರಣ ವಾದದಲ್ಲಿ ವೇದಾಂತಾರ್ಥವನ್ನು ನಿಶ್ಚಯಿಸಬಹುದು— ಎಂದು ಪೂರ್ವಪಕ್ಷ.

ಕಪಿಲಸ್ಮೃತಿಯಂತೆ ಇದೂ ವೇದಾಂತಾರ್ಥಕ್ಕೆ ವಿರುದ್ಧವಾದ್ದರಿಂದ ಇದನ್ನೂ ಪ್ರಾಮಾಣಿಕವನ್ನಾಗಿ ಒಪ್ಪಲಾಗದು. ಬ್ರಹ್ಮ ವೇದಪ್ರದರ್ಶಕನಾಗಿದ್ದಾಗ್ಯೂ ಅವನೂ ಸಂಸಾರ ಸಂಬಂಧವುಳ್ಳವನಾದ್ದರಿಂದ ಭ್ರಮಿಸುವುದುಂಟು. ಅವನ ಭ್ರಾಂತಿಯಿಂದ ಅದು ಕಲ್ಪಿತವಾದದ್ದು ಎಂಬುದು ಸಿದ್ಧಾಂತ.

## 3. ನ ವಿಲಕ್ಷಣತ್ವಾಧಿಕರಣ

### ಸೂತ್ರ—**ನ ವಿಲಕ್ಷಣತ್ವಾದಸ್ಯತಥಾತ್ವಂ ಚ ಶಬ್ದಾತ್**

**ಆಕ್ಷೇಪ ಸಂಗತಿ**

ಮನ್ವಾದಿ ಸ್ಮೃತಿಗಳಿಂದ ಉಪಬೃಂಹಣ ಮಾಡತಕ್ಕದ್ದೆನ್ನಲಾಯಿತು. ಆದರೆ ಮನ್ವಾದಿ ಸ್ಮೃತಿಗಳು ತರ್ಕವಿರುದ್ಧ. ಸಾಂಖ್ಯಸ್ಮೃತಿ ತರ್ಕಾನುಗೃಹೀತ. ಆದ್ದರಿಂದ ಇದರಿಂದಲೇ ಉಪಬೃಂಹಣವಾಗತಕ್ಕದ್ದೆಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಅಸ್ಯ] = ಈ ಜಗತ್ತಿಗೆ [ವಿಲಕ್ಷಣತ್ವಾತ್] = (ಬ್ರಹ್ಮಕ್ಕಿಂತ) ವೈಲಕ್ಷಣ್ಯವುಂಟಾದ್ದ ರಿಂದ [ನ] = ಬ್ರಹ್ಮಕಾರಣವೆಂಬ ಪ್ರತಿಪಾದನೆ ಕೂಡದು. [ತಥಾತ್ವಂಚ] = ಆ ವೈಲ ಕ್ಷಣ್ಯವೂ, [ಶಬ್ದಾತ್] = ಶಬ್ದದಿಂದ (ವೇದವಾಕ್ಯದಿಂದ) (ಅರಿಯಲ್ಪಡುವುದು)

**ವಿವರಣೆ**

ವೇದಾಂತವಾಕ್ಯವು ಪ್ರಧಾನವನ್ನು ಕಾರಣವಾಗಿ ಹೇಳುವುದೋ, ಬ್ರಹ್ಮವನ್ನು ಕಾರಣವನ್ನಾಗಿ ಹೇಳುವುದೋ?—ಎಂದು ಸಂಶಯ.

ಜ್ಞಾನಶೂನ್ಯವಾಗಿ ಜಡವಾಗಿರುವ ಕಲಶಾದಿಗಳೂ ಮೃತ್ತೂ, ಪೃಥ್ವಿಯಾದಂತೆ, ಕಾರ್ಯಕಾರಣಗಳೆರಡೂ ಒಂದೇ ದ್ರವ್ಯವಾಗಿ ಏಕರೂಪವಾಗಿರಬೇಕು. ಜಗತ್ತಿಗಿಂತ ಸರ್ವಜ್ಞನಾಗಿ ಚೇತನನಾದ ಸರ್ವೇಶ್ವರನು ವಿಲಕ್ಷಣನಾಗಿ ಭಿನ್ನದ್ರವ್ಯವಾದುದರಿಂದ, ಸರ್ವೇಶ್ವರನು ಕಾರಣನಾಗನು. ಜಗತ್ತೂ ಪ್ರಕೃತಿಯೂ ಜಡವಾಗಿ ಏಕರೂಪವಾಗಿರುವುದರಿಂದ, ಆ ಪ್ರಕೃತಿಯೇ ಜಗತ್ಕಾರಣವಾಗಬೇಕು. ಜಗತ್ತು ಈಶ್ವರನಿಗಿಂತ ವಿಲಕ್ಷಣವೆಂಬುದನ್ನೂ, "ವಿಜ್ಞಾನಂ ಚಾವಿಜ್ಞಾನಂ ಚ"—ಎಂಬ ಶ್ರುತಿಯೇ ಹೇಳುತ್ತೆ. "ಅವಿಜ್ಞಾನಂ,"—ಎಂದರೆ ಜ್ಞಾನ ಶೂನ್ಯವಾದ ಜಗತ್ತು. ಆದ್ದರಿಂದ ವೇದಾನ್ತವು ಪ್ರಧಾನವನ್ನೇ ಕಾರಣವನ್ನಾಗಿ ಹೇಳುವುದು—ಎಂದು ಪೂರ್ವಪಕ್ಷ.

ಸೂತ್ರ ೨—**ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ**

**ಸೂತ್ರಾರ್ಥ**

[ ತು ]-ಶಬ್ದವು ಮೇಲಿನ ಶಂಕಾನಿವೃತ್ತಿಗಾಗಿರುವುದು [ವಿಶೇಷಾನುಗತಿಭ್ಯಾಂ] = (ದೇವತೆಯೆಂಬ) ವಿಶೇಷಣದಿಂದಲೂ, (ಚಕ್ಷುರಾದಿಗಳಲ್ಲಿ) ಪ್ರವೇಶಿಸುವುದರಿಂದಲೂ (ಅಭಿಮಾನಿವ್ಯಪದೇಶಃ] = (ಪೃಥಿವ್ಯಾದಿಪದಗಳು) ಪೃಥಿವ್ಯಾದಿಪದಗಳಿಗೆ ಅಭಿಮಾನಿಗಳಾದ ದೇವತೆಗಳಿಗೆ ವ್ಯಪದೇಶವಾಗಿರುವುವು.

**ವಿವರಣೆ**

"ಆಪೋವಾ ಅಕಾಮಯನ್ತ",—(ನೀರು ಇಚ್ಛಿಸಿತು), "ತಂಪೃಥಿವ್ಯಬ್ರವೀತ್", —(ಅದನ್ನು ಕುರಿತು ಪೃಥಿವಿಯು ಹೇಳಿತು)—ಇತ್ಯಾದಿಯಾಗಿ ಪೃಥಿವ್ಯಾದಿಗಳಿಗೂ ಜ್ಞಾನವುಂಟೆಂದು ಹೇಳುವುದರಿಂದ ಅವುಗಳೂ ಚೇತನಗಳಾಗಿ, ಚೇತನನಾದ ಸರ್ವೇಶ್ವರನಿಗೆ ಸಜಾತೀಯವಾಗಿ ಇರುವುದರಿಂದ ಅವುಗಳಿಗೆ ಬ್ರಹ್ಮಕಾರಣವಾಗಬಹುದಲ್ಲವೆ?—ಎಂದಲ್ಲಿ, ಪೃಥಿವಿಯು ಹೇಳಿತೆನ್ನುವಾಗ ಪೃಥಿವಿಯೆಂದು ಜಡವಾದ ಈ ಪೃಥಿವಿಯನ್ನು ಹೇಳಿಲ್ಲ. ಅದಕ್ಕೆ ಅಭಿಮಾನಿಯಾದ ದೇವತೆಯನ್ನು ಹೇಳುವುದು. ಹಾಗೆಯೇ ಜಲಾದಿ ಪದಗಳಲ್ಲಿಯೂ ತಿಳಿಯತಕ್ಕದ್ದು. ಆ ದೇವತೆಗಳು ಜ್ಞಾನವುಳ್ಳವುಗಳಾದಾಗ್ಯೂ, ಕಾಣಿಸುವ ಪೃಥಿವ್ಯಾದಿಗಳು ಜಡಗಳಾದ್ದರಿಂದ ಇವುಗಳನ್ನು ಕುರಿತು ವಿಜಾತೀಯನಾದ ಈಶ್ವರನು ಕಾರಣನಾಗನು. ಪೃಥಿವ್ಯಾದಿ ಪದಗಳಿಗೆ ಅವುಗಳಿಗೆ ಅಭಿಮಾನಿಗಳಾದ ದೇವತೆಗಳೇ ಅರ್ಥವೆಂದು ಹೇಳಲು ಕಾರಣವೇನು?—ಎಂದಲ್ಲಿ, "ಇಮಾ ಸ್ತಿಸ್ರೋ ದೇವತಾಃ," (ಈ ಮೂರು ದೇವತೆಗಳು) ಎಂದು ದೇವತೆಯೆಂಬ ಶಬ್ದದಿಂದ, ಪೃಥಿವೀ–ಜಲ–ತೇಜಸ್ಸುಗಳನ್ನು ಹೇಳುವುದರಿಂದಲೂ "ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್,"–(ಅಗ್ನಿ ವಾಗ್ದೇವತೆಯಾಗಿದ್ದುಕೊಂಡು ಮುಖವನ್ನು ಹೊಕ್ಕಿತು) ಇತ್ಯಾದಿಯಾಗಿ, ಅಗ್ನ್ಯಾದಿಗಳಿಗೆ ಪ್ರವೇಶ ಹೇಳುವುದರಿಂದಲೂ, ಇವೆರಡೂ ಅಚೇತನವಾದ ಈ ಪೃಥಿವ್ಯಾದಿಗಳಿಗೆ ಕೂಡದುದರಿಂದ ಆ ಪದಗಳಿಗೆ ಅಭಿಮಾನಿ ದೇವತೆಗಳೇ ಅರ್ಥವೆಂದು

ನಿಶ್ಚಯಿಸಲ್ಪಡುವುದು. ಆದ್ದರಿಂದ ಪ್ರಧಾನಕಾರಣವಾದವೇ ವೇದಾಂತ ಸಮ್ಮತ—ಎಂದು ಪೂರ್ವಪಕ್ಷ.

ಸೂತ್ರ ೩—**ದೃಶ್ಯತೇತು**

**ಸೂತ್ರಾರ್ಥ**

[ದೃಶ್ಯತೇ] = (ವಿಲಕ್ಷಣ ವಸ್ತುವಿನಿಂದ ಅದಕ್ಕಿಂತ ವಿಲಕ್ಷಣ ವಸ್ತುವಿನ ಉತ್ಪತ್ತಿ ಕಾಣುವುದಲ್ಲವೇ ! ಮೇಲಿನ ಪೂರ್ವ ಪಕ್ಷವನ್ನು ತಳ್ಳಿಹಾಕುವುದು ಇಲ್ಲಿಯ [ತು]—ಎಂಬ ಶಬ್ದ

**ವಿವರಣೆ**

ಮೇಲೆ ಹೇಳಿದ ಪೂರ್ವಪಕ್ಷವನ್ನು ನಿರಾಕರಿಸಿದ್ದಾರೆ.—ವಿಲಕ್ಷಣ ವಸ್ತುಗಳಿಗೆ ಕಾರ್ಯಕಾರಣ ಭಾವವಿಲ್ಲವೆಂಬ ನಿಯಮವಿಲ್ಲ. ಮಾಕ್ಷಿಕದಿಂದ ಅನೇಕ ಜೇನು ಹುಳುಗಳೂ ಗೋಮಯದಿಂದ ಚೇಳೂ ಉಂಟಾಗುವುದು ಕಂಡಿದೆ. ಅದರಂತೆಯೇ ಚೇತನನಾಗಿ ವಿಲಕ್ಷಣನಾದ ಈಶ್ವರನಿಂದ ಅಚೇತನವಾದ ಜಗತ್ತೂ ಉಂಟಾಗಬಹುದು. ಆದ್ದರಿಂದ ಬ್ರಹ್ಮಕಾರಣವೆಂಬ ವಾದ ಉಪಪನ್ನವಾಗುತ್ತೆ. ವೇದಾಂತವೂ ಈ ಪಕ್ಷವನ್ನೇ ಪ್ರತಿಪಾದಿಸುವುದು—ಎಂದು ಸಿದ್ಧಾಂತ.

ಸೂತ್ರ ೪—**ಅಸದಿತಿಚೇನ್ನ ಪ್ರತಿಷೇಧಮಾತ್ರತ್ವಾತ್**

**ಸೂತ್ರಾರ್ಥ**

[ಅಸತ್] = (ಈ ಪಕ್ಷದಲ್ಲಿ ಕಾರ್ಯೋತ್ಪತ್ತಿಗೆ ಮೊದಲು) ಕಾರಣ ಅಸತ್ತು—(ಅಂದರೆ ಇಲ್ಲದ್ದು) [ಇತಿ ಚೇತ್] = ಎಂದಲ್ಲಿ, [ಪ್ರತಿಷೇಧಮಾತ್ರತ್ವಾತ್] = (ಕಾರ್ಯಕಾರಣಗಳು ಏಕರೂಪಗಳಾಗಿಯೇ ಆಗಿರಬೇಕು ಎಂಬ ನಿಯತ್ತಿಗೆ) ಪ್ರತಿಷೇಧ ಮಾತ್ರ ಹೇಳುವುದರಿಂದ [ನ] = ಅಸತ್ಕಾರ್ಯವಾದವಿಲ್ಲ.

**ವಿವರಣೆ**

ಕಾರ್ಯವಾದ ಘಟವೂ ಕಾರಣವಾದ ಮೃತ್ತೂ ಪೃಥ್ವಿಯೇ, ಘಟ ಉಂಟಾಗುವುದಕ್ಕೆ ಮುಂಚೆ ಮೃತ್ಪಿಂಡದಲ್ಲಿ ಅಡಗಿರುವುದು ತರುವಾಯ ಉಂಟಾಗುವುದು. ಉಂಟಾಗುವುದೆಂಬುದು ನಾಮರೂಪಗಳನ್ನು ಹೊಂದುವುದು. ಮೊದಲು ಇಲ್ಲದಿದ್ದದ್ದು ಈಗ ಉಂಟಾಯಿತೆಂದು ಅರ್ಥವಲ್ಲ. ಇಲ್ಲದ ವಸ್ತು ಉಂಟಾದಲ್ಲಿ ಕುದುರೆಗೆ ಕೊಂಬೂ ಉಂಟಾಗಬೇಕಾಗಿ ಬರುವುದು. ಪಿಂಡವಾಗಿದ್ದರೆ ಮೃತ್ ಎಂದೂ ಆ ಅವಸ್ಥೆಯನ್ನು ಬಿಟ್ಟು ಬೇರೆ ವಿಧವಾಗಿ ಬಾಯಿ ಹೊಟ್ಟೆಗಳುಳ್ಳ ಆಕಾರವನ್ನು ಹೊಂದಿದರೆ ಘಟವೆಂದೂ ವ್ಯವಹರಿಸಲ್ಪಡುವುದು. ಇದಕ್ಕೆ ಸತ್ಕಾರ್ಯವಾದವೆನ್ನುವರು. ಇದೇ ವೇದಾಂತಿಗಳಿಗೆ ಅಭಿಮತವಾದದ್ದು. ಈಗ ಕಾರ್ಯವಾದ ಜಗತ್ತಿಗೆ ವಿಲಕ್ಷಣವಾದ ಬ್ರಹ್ಮವು ಕಾರಣವಾದರೆ ಇವೆರಡೂ ಏಕದ್ರವ್ಯವಲ್ಲದ್ದರಿಂದ ಜಗತ್ತು ಉಂಟಾಗುವುದಕ್ಕೆ ಮುಂಚೆ ಬ್ರಹ್ಮದಲ್ಲಿ ಲೀನವಾಗಿದೆಯೆಂದು ಅಂಗೀಕರಿಸಕೂಡದು. ಒಂದು ಜಾತಿಯ ವಸ್ತುವಿನಲ್ಲಿ ಮತ್ತೊಂದು ಜಾತಿ ವಸ್ತು ಲೀನವೂ ಆಗದು. ಆದ್ದರಿಂದ ಜಗತ್ತು ಉಂಟಾಗುವುದಕ್ಕೆ ಮುಂಚೆ ಇಲ್ಲವೆಂದೇ ಒಪ್ಪಬೇಕು. ಇದರಿಂದ ಅಸತ್ಕಾರ್ಯವಾದ ಸಿದ್ಧಿಸುವುದು.

ಎಂದಲ್ಲಿ ಈ ಘಟ ಮೃತ್ತು ಎನ್ನುವ ಹಾಗೆ ಈ ಸಕಲ ಜಗತ್ತು ಬ್ರಹ್ಮವೆಂದು ಹೇಳುವ "ಸರ್ವಂ ಖಲ್ವಿದಂಬ್ರಹ್ಮ"—ಎಂಬ ಶ್ರುತಿಯೂ ಅಪಾರ್ಥವಾಗುವುದಲ್ಲವೆ ?—ಆದ್ದರಿಂದ ನಾವು ಕಾರ್ಯಕಾರಣಗಳು ಏಕರೂಪವಾಗಿಯೇ ಇರಬೇಕೆಂಬ ನಿಯಮ ವಿಲ್ಲವೆಂದೇ ಹೇಳಿದೆವು. ಕಾರ್ಯಕಾರಣಗಳು ಏಕದ್ರವ್ಯವೆನ್ನುವುದು ನಮಗೆ ಇಷ್ಟವೇ. ಒಂದು ದ್ರವ್ಯವೇ ಕಾರಣಾವಸ್ಥೆಯನ್ನು ಬಿಟ್ಟು ಕಾರ್ಯಾವಸ್ಥೆಯನ್ನು ಹೊಂದು ವಾಗ ಕಾರಣದಶೆಯೊಂದಿಗೆ ಸಮಾನ ಲಕ್ಷಣವನ್ನೂ ಹೊಂದಬಹುದು. ಅದಕ್ಕಿಂತ ವಿಲಕ್ಷಣವೂ ಆಗಬಹುದೆಂದೇ ನಾವು ಹೇಳಿದ್ದು. ಆದ್ದರಿಂದ ನೀವು ಹೇಳಿದ ದೋಷಗಳಿಗೆ ಅವಕಾಶವಿಲ್ಲವೆಂದು ಸಿದ್ಧಾಂತ.

ಸೂತ್ರ ೮—**ಅಪೀತೌ ತದ್ವತ್ಪ್ರಸಂಗಾದಸಮಂಜಸಂ**

**ಸೂತ್ರಾರ್ಥ**

[ಅಪೀತೌ] = (ಜಗತ್ತು ಬ್ರಹ್ಮದಲ್ಲಿ) ಲಯಿಸುವಾಗ (ಅದರಿಂದ ಉತ್ಪನ್ನವಾಗು ವಾಗಲೂ,) [ತದ್ವತ್] = ಮೃದ್ದ್ರವ್ಯದ ಹಾಗೆ [ಪ್ರಸಂಗಾತ್] = (ಕಾರ್ಯದ ಗುಣ ಗಳು ಕಾರ್ಯದಲ್ಲಿ) ಪ್ರಸಂಗಿಸುವುದರಿಂದ [ಅಸಮಂಜಸಂ] = (ವೇದಾಂತವಾಕ್ಯ) ಸರಿಯಾದ ಅರ್ಥವನ್ನು ಪ್ರತಿಪಾದಿಸಲಾರದು.

**ವಿವರಣೆ**

ಕಾರಣವಾದ, ಬ್ರಹ್ಮವೇ ಕಾರ್ಯವಾದ ಜಗತ್ತಾಗಿ ಪರಿಣಮಿಸುವುದೆಂದಲ್ಲಿ, ಮೃತ್ತಿಗೂ ಕಾರಣಾವಸ್ಥೆಯಲ್ಲಿಯುಳ್ಳ ಪಿಂಡಾಕಾರವೂ ಕಾರ್ಯಾವಸ್ಥೆಯಲ್ಲಿಯುಳ್ಳ ಘಟಾಕಾರವೂ ಸಂಭವಿಸುವಂತೆ, ದೋಷಗಂಧರಹಿತವಾಗಿ ಜ್ಞಾನಾನಂದ ಸ್ವರೂಪ ವಾದ ಬ್ರಹ್ಮಕ್ಕೆ ಜಗತ್ತಿನಲ್ಲಿರುವ ಉತ್ಪತ್ತಿವಿನಾಶಗಳೂ ದುಃಖಜ್ಞಾನಗಳೂ ಸೇರುವುವು ಎಂದು ಒಪ್ಪಿಕೊಳ್ಳಬೇಕು. ಬ್ರಹ್ಮ ಜಡ—ಅಜಡ, ಸುಖಿ—ದುಃಖಿ, ದುಷ್ಟ—ನಿರ್ದುಷ್ಟ—ಎಂಬ ವಿರುದ್ಧಾರ್ಥಗಳನ್ನು ಹೇಳುವುದರಿಂದ, ವೇದಾಂತವಾಕ್ಯ ಅಪ್ರಮಾಣವೆಂದು ಹೇಳಬೇಕಾಗುವುದು—ಎಂದು ಪೂರ್ವಪಕ್ಷ.

ಸೂತ್ರ ೯—**ನ ತು ದೃಷ್ಟಾನ್ತಭಾವಾತ್**

**ಸೂತ್ರಾರ್ಥ**

(ಒಬ್ಬರಿಗೇ ಕಾರಣಾವಸ್ಥೆ—ಕಾರ್ಯಾವಸ್ಥೆಗಳೆಂಬ ಎರಡು ಅವಸ್ಥೆಗಳ ಸಂಬಂಧ ವಿದ್ದಾಗ್ಯೂ ಗುಣದೋಷಗಳು ವ್ಯವಸ್ಥಿತಗಳೆನ್ನುವುದರಲ್ಲಿ) ದೃಷ್ಟಾಂತವಿರುವುದರಿಂದ [ನ] = (ಬ್ರಹ್ಮಕ್ಕೆ ಜಗತ್ತಲ್ಲುಳ್ಳ ದೋಷಗಳು) ಸಂಭವಿಸವು. ಹೇಯ ಸಂಬಂಧದ ಗಂಧವೂ ಇಲ್ಲವೆನ್ನುವುದಕ್ಕಾಗಿ ಇಲ್ಲಿ [ತು]—ಎಂಬ ಶಬ್ದವಿದೆ.

**ವಿವರಣೆ**

ಈ ಸೂತ್ರದಲ್ಲಿ ಮೇಲಿನ ಪೂರ್ವಪಕ್ಷಕ್ಕೆ ಸಮಾಧಾನ ಹೇಳುತ್ತಾರೆ.—ಒಬ್ಬ ಮನುಷ್ಯ ಬಾಲನಾಗಿದ್ದು, ಯುವಕನಾಗಿ, ಅನಂತರ ವೃದ್ಧನಾಗಿ ಪರಿಣಮಿಸಿದಾಗ್ಯೂ, ಬಾಲ್ಯ, ಯೌವನ, ವಾರ್ಧಕಗಳೆಂಬ ಅವಸ್ಥೆಗಳು ಶರೀರದಲ್ಲಿರುವುವು. ಆತ್ಮನಿಗೆ ಸಂಭ ವಿಸವು. ಅದರಂತೆ ಚಿದಚಿತ್ತುಗಳನ್ನು ಶರೀರವಾಗಿಯುಳ್ಳ ಈಶ್ವರನು ಜಗದ್ರೂಪ

ವಾಗಿ ಪರಿಣಮಿಸಿದರೆ, ಆ ಜಗತ್ತಿನಲ್ಲಿರುವ ಉತ್ಪತ್ತಿವಿನಾಶಾದಿ ದೋಷಗಳು ಶರೀರ ಗಳಾದ ಚಿದಚಿತ್ತುಗಳಲ್ಲಿಯೇ ಇರುವುವು. ಅದಕ್ಕೆ ಅಂತರಾತ್ಮನಾದ ಸರ್ವೇಶ್ವರನಲ್ಲಿ ಸಂಭವಿಸವು. ಅವನ ಸ್ವರೂಪ ನಿತ್ಯಾನಂದರೂಪವಾಗಿಯೇ ಇರುವುದು. ಆದ್ದರಿಂದ ಆ ಈಶ್ವರ ಸ್ವರೂಪವನ್ನು ಪ್ರತಿಪಾದಿಸುವ ವೇದಕ್ಕೆ ಅಪ್ರಾಮಾಣ್ಯವೂ ಬಾರದು.

### ಸೂತ್ರ ೭—ಸ್ವಪಕ್ಷದೋಷಾಚ್ಚ

**ಸೂತ್ರಾರ್ಥ**

ತಮ್ಮ ಪಕ್ಷದಲ್ಲಿ ದೋಷವಿರುವುದರಿಂದಲೂ, ( ಆ ಪಕ್ಷವನ್ನು ಬಿಟ್ಟು ಈ ವೇದಾಂತಿಮತವನ್ನೇ ಪರಿಗ್ರಹಿಸಬೇಕು.)

**ವಿವರಣೆ**

ವೇದಾಂತಿ ಮತವನ್ನು ಅವಲಂಬಿಸುವುದಕ್ಕೆ ಕಾರಣ, ಈ ಪಕ್ಷದಲ್ಲಿ ದೋಷವಿಲ್ಲ ದುದೇ ಎಂಬುದು. ಕಪಿಲಪಕ್ಷದಲ್ಲಿ ದೋಷಗಳೂ ಉಂಟು. ಅವು ಯಾವುವೆಂದರೆ.— ಆತ್ಮಾ ನಿರ್ಮಲಸ್ವರೂಪ. ಅವನಿಗೆ ಪ್ರಕೃತಿ ಸಾನ್ನಿಧ್ಯವೂ. ಅದರಿಂದ ಆತ್ಮನಲ್ಲಿ ಪ್ರಕೃತಿ ಧರ್ಮಾಧ್ಯಾಸವೂ ಉಂಟಾದರೆ, ಈ ಜಗತ್ತು ಉಂಟಾಗುವುದು ಎಂದು ಅವರ ಪಕ್ಷ. ಅದರಲ್ಲಿ ಪ್ರಕೃತಿಸಾನ್ನಿಧ್ಯವೆಂಬುದು ಪ್ರಕೃತಿಯ ಸದ್ಭಾವ. ಅಂದರೆ, ಇರುವುದೇ ಆದರೆ, ಈ ವಿಧವಾದ ಸಾನ್ನಿಧ್ಯ ಮುಕ್ತನಿಗೂ ಉಂಟಾಗುವುದರಿಂದ, ಅವನಿಗೂ ಸಂಸಾರ ಪ್ರಸಂಗವುಂಟಾದೀತು. ವಿಕಾರವನ್ನು ಹೊಂದಿದ ಪ್ರಕೃತಿಯ ಸದ್ಭಾವವೇ ತಾನೇ ಪ್ರಕೃತಿ ಸಾನ್ನಿಧ್ಯವೆಂದಲ್ಲಿ, ಅಧ್ಯಾಸಕ್ಕೆ, ಅಂದರೆ ಪ್ರಕೃತಿಯಲ್ಲಿಯ ಕರ್ತೃತ್ವ ಭೋಕ್ತೃತ್ವ ಗುಣ ಗಳು ಆತ್ಮನಲ್ಲಿ ಪ್ರತಿಫಲಿಸುವುದಕ್ಕೆ, ಪ್ರಕೃತಿಯ ವಿಕಾರ ಕಾರಣವೆಂದಾಯಿತು. ವಿಕಾರಕ್ಕೆ ಅಧ್ಯಾಸ ಕಾರಣವೆಂದು ಮುಂಚೆಯೇ ಹೇಳಿದೆ. ಹೀಗೆ ಪರಸ್ಪರ ವಿರುದ್ಧವಾಗಿರುವುದ ರಿಂದ, ಆ ಮತ ದೋಷಯುಕ್ತವಾಗಿ ಅಸಂಗತವಾಗುವುದು. ಆದ್ದರಿಂದ ಅದನ್ನು ಬಿಟ್ಟು ಈ ಮತವನ್ನೇ ಆಶ್ರಯಿಸಬೇಕು.

### ಸೂತ್ರ ೮—ತರ್ಕಾಪ್ರತಿಷ್ಠಾನಾದಪಿ

**ಸೂತ್ರಾರ್ಥ**

ಯುಕ್ತಿಗೆ ಎಲ್ಲಿಯೂ ಅಂದರೆ ಒಂದು ಕಡೆಯಲ್ಲಿಯೂ ನಿಲವು ಇಲ್ಲದುದರಿಂ ದಲೂ, (ಆ ಪಕ್ಷ ಅನಾದರಣೀಯ.)

**ವಿವರಣೆ**

ನಾಸ್ತಿಕರ ಯುಕ್ತಿಗಳಿಂದ ಕಾಪಿಲರುಗಳ ಯುಕ್ತಿ ಬಾಧಿತವಾದುದರಿಂದಲೂ, ಯುಕ್ತಿಗೆ ಅದರಲ್ಲಿ (ಅತೀಂದ್ರಿಯ ವಿಷಯದಲ್ಲಿ) ಒಂದೆಡೆಯಲ್ಲಿ ನಿಲವು ಇಲ್ಲದುದ ರಿಂದಲೂ ಯುಕ್ತಿಯನ್ನೇ ಮುಖ್ಯವಾಗಿ ಸ್ವೀಕರಿಸಿರುವ ಕಾಪಿಲ ಮತ ಸಮೀಚೀನವಲ್ಲ.

ಸೂತ್ರ ೯—**ಅನ್ಯಥಾನುಮೇಯಂ ಮಿತಿಚೇದೇವಮಪ್ಯನಿರ್ಮೋಕ್ಷ ಪ್ರಸಂಗಃ**

**ಸೂತ್ರಾರ್ಥ**

[ಅನ್ಯಥಾ] = ಬೇರೆ ವಿಧವಾಗಿ [ಅನುಮೇಯಂ] = ಊಹಿಸತಕ್ಕದ್ದು. [ಇತಿ ಚೇತ್] = ಎಂದಲ್ಲಿ, [ಏವಂ, ಅಪಿ] = ಹೀಗೆ ಊಹಿಸಿದಾಗ್ಯೂ, [ಅನಿರ್ಮೋಕ್ಷ ಪ್ರಸಂಗಃ] = (ಯುಕ್ತಿಗೆ) ಕೊನೆಯಿಲ್ಲದುದೇ ಪ್ರಸಂಗಿಸುವುದು.

**ವಿವರಣೆ**

ಈಗ ಇರುವ ಯುಕ್ತಿಗಳು ನಾಸ್ತಿಕರ ಯುಕ್ತಿಗಳಿಂದ ಬಾಧಿಸಲ್ಪಟ್ಟಿದ್ದಾಗ್ಯೂ, ಇನ್ನು ಅವರ ಯುಕ್ತಿಗಳಿಂದ ಬಾಧಿಸಲ್ಪಡದಂತಹ ಬೇರೆ ವಿಧವಾದ ಯುಕ್ತಿಗಳಿಂದ ಈ ಮತವನ್ನು ಸ್ಥಾಪಿಸುವೆವು—ಎಂದಲ್ಲಿ, ಈಗಿರುವ ಯುಕ್ತಿಗಳಿಗಿಂತ ಮೇಲಾದ ಯುಕ್ತಿಗಳನ್ನು ನೀವು ಹೇಳಿದಾಗ್ಯೂ, ಇನ್ನು ಮುಂದೆ ನಿಮಗಿಂತ ಯುಕ್ತಿವಂತನಾಗಿ ಹುಟ್ಟುವವನೊಬ್ಬನು ನಿಮಗೆ ಮೇಲೆ ಯುಕ್ತಿಗಳನ್ನು ಹೇಳಿದರೆ ಆಗ್ಗೆ ನಿಮ್ಮ ಯುಕ್ತಿ ನಿಲ್ಲದು. ಹೀಗೆ ಮೇಲ್ಮೇಲೆ ಯುಕ್ತಿಯನ್ನೂ ಹೇಳಿಕೊಂಡು ಹೋದಲ್ಲಿ, ಅದಕ್ಕೆಂದೂ ಮುಗಿವು ಕಾಣುವುದಿಲ್ಲ. ಆದ್ದರಿಂದ ಆ ಮತವನ್ನು ಬಿಟ್ಟುಬಿಡತಕ್ಕದ್ದು. ಹಳೆಯ ತರ್ಕಕ್ಕೆ ಹಳೆಯ ತರ್ಕದಿಂದ ಪ್ರತಿಹತಿಯಿರುವಂತೆ ಹೊಸ ತರ್ಕಮಾಡುವುದಾದರೆ ಅದಕ್ಕೆ ಹೊಸ ತರ್ಕದಿಂದಲೇ ಪ್ರತಿಹತಿ ಸಿದ್ಧ. ಆದ್ದರಿಂದ, ಅತೀಂದ್ರಿಯವಾದ ವಿಷಯದಲ್ಲಿ ಶಾಸ್ತ್ರವೇ ಪ್ರಮಾಣ. ಅದರ ಉಪಬೃಂಹಣಕ್ಕಾಗಿಯೇ ತರ್ಕಗ್ರಹೀತವಾಗಬೇಕು.

"ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾವಿರೋಧಿನಾ ।
ಯಸ್ತರ್ಕೇಣಾನುಸನ್ಧತ್ತೇ ಸ ಧರ್ಮಂ ವೇದ ನೇತರಃ ।।"—ಎಂದಿದೆ.

'ವೇದಶಾಸ್ತ್ರ'—ಎಂಬುದಕ್ಕೆ ವೇದವೆಂಬ ಶಾಸ್ತ್ರವೆಂದರ್ಥ.

"ಪಿತೃದೇವ ಮನುಷ್ಯಾಣಾಂ ವೇದಶ್ಚಕ್ಷುಸ್ಸನಾತನಂ ।
ಅತರ್ಕ್ಯಂ ಚಾ ಪ್ರಮೇಯಂ ಚ ವೇದ ಶಾಸ್ತ್ರ ಮಿತಿ ಸ್ಥಿತಿಃ' ।।".

ಅತರ್ಕ್ಯ = ಬಾಧಕಕ್ಕೆ ಗೋಚರವಾಗದ್ದು. ಅಪ್ರಮೇಯಂ = ಸಾಧಕನಿಗೆ ಅಗೋಚರವಾದದ್ದು.

## 4. ಶಿಷ್ಟಾ ಪರಿಗ್ರಹಾಧಿಕರಣ

ಸೂತ್ರ —**ಏತೇನ ಶಿಷ್ಟಾಪರಿಗ್ರಹಾ ಅಪಿವ್ಯಾಖ್ಯಾತಾಃ**

**ಅತಿದೇಶ ಸಂಗತಿ** ಈ ಸಾಂಖ್ಯಪಕ್ಷಕ್ಷಪಣದಿಂದ ಕೇವಲ ತರ್ಕಸಾಧನವಾದ ಯೋಗಾದಿ ಮಿಕ್ಕ ಮತಗಳೂ ಕ್ಷಪಿತವೆಂಬುದು ಸಂಗತಿ.

**ಸೂತ್ರಾರ್ಥ**

[ಏತೇನ] = ಯುಕ್ತಿಗೆ ಒಂದೆಡೆಯಲ್ಲಿ ನಿಲುವು ಇಲ್ಲದ್ದರಿಂದ. [ಶಿಷ್ಟಾಪರಿಗ್ರಹಾಃ, ಅಪಿ] = ಶಿಷ್ಟರಿಂದ ಅಂಗೀಕರಿಸಲ್ಪಡದ ಮಿಕ್ಕ ಮತಗಳೂ [ವ್ಯಾಖ್ಯಾತಾಃ] = (ನಿರಸ್ತಗಳೆಂದು) ವ್ಯಾಖ್ಯಾನ ಮಾಡಲ್ಪಟ್ಟವು.

**ವಿವರಣೆ**

ಮಿಕ್ಕ ವೈಶೇಷಿಕ ಮತವೇ ಮುಂತಾದುವೂ ಯುಕ್ತಿಮಾತ್ರವನ್ನೇ ಪ್ರಧಾನವಾಗಿ ಹೊಂದಿರುವುದರಿಂದ, ಮೇಲೆ ಹೇಳಿದ ಹೇತುವಿನಿಂದಲೇ ನಿರಸನಮಾಡಲ್ಪಟ್ಟವೆಂದು ತಿಳಿಯಬೇಕು. ವೇದ ಪರಿಗ್ರಹವಿಲ್ಲದವುಗಳಾದ ಕಣಾದ ಅಕ್ಷಪಾದ. ಕ್ಷಪಣಕ, ಭಿಕ್ಷು ಪಕ್ಷಗಳೆಲ್ಲವೂ ಪರಮಾಣುಕಾರಣವಾದಿಗಳಾದ್ದರಿಂದ ಕಾರಣವಸ್ತುವಿಷಯವಾದ ತರ್ಕ ಅಪ್ರತಿಷ್ಠಿತವೆನ್ನುವುದು ಹೇಗೆ ? ಎಂಬುದು ಇಲ್ಲಿ ಅಧಿಕವಾದ ಆಶಂಕೆ. ಇದರ ಪರಿಗ್ರಹಕ್ಕಾಗಿ ಈ ಅಧಿಕರಣ ರಚಿತವಾಗಿದೆ.

ಪರಿಹಾರ—ಇವೆಲ್ಲವೂ ತರ್ಕಮೂಲವಾಗಿ ಪರಮಾಣು ಕಾರಣವಾದಿಗಳೇ ಆದಾಗ್ಯೂ, ಪರಮಾಣು ಸ್ವರೂಪದಲ್ಲಿ ಮಾಧ್ಯಮಿಕರು ಶೂನ್ಯಾತ್ಮಕತ್ವವನ್ನೂ, ಯೋಗಾಚಾರರು ಜ್ಞಾನಾತ್ಮಕತ್ವವನ್ನೂ ಮೂರು ವಿಧ ಬೌದ್ಧರೂ ಕ್ಷಣಿಕತ್ವವನ್ನೂ—ಹೀಗೆ ಇನ್ನೂ ಇತರ ಮತಸ್ಥರೂ ವಿಸಂವಾದವನ್ನೂ ಹೇಳುವುದರಿಂದ ಕೇವಲ ತರ್ಕ ಅಪ್ರತಿಷ್ಠಿತ ವೆಂದು ಪರಿಹಾರ. ಪ್ರತಿಷ್ಠಾನ = ಪ್ರಕೃಷ್ಟಸ್ಥಿತಿಕ ಅಥವಾ ಸ್ಥಾಯಿತ್ವ.

## 5. ಭೋಕ್ತ್ರಾಪತ್ತ್ಯಧಿಕರಣ

ಸೂತ್ರ—**ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್**

**ಅಪವಾದ ಸಂಗತಿ**

"ನ ತು ದೃಷ್ಟಾನ್ತ ಭಾವಾತ್"—ಎಂಬಲ್ಲಿ ಶರೀರದಲ್ಲಿಯ ಬಾಲತ್ವ–ಯುವತ್ವಾದಿ ಧರ್ಮಗಳು ಶರೀರಿಯಲ್ಲಿ ಪ್ರಸಂಗಿಸದುದನ್ನು ದೃಷ್ಟಾಂತವಾಗಿಟ್ಟುಕೊಂಡು, ಪರಮಾತ್ಮನಲ್ಲಿ ಅವನ ಶರೀರವಾದ ಚಿದಚಿತ್ತುಗಳಲ್ಲಿಯ ದೋಷ ಪ್ರಸಂಗಿಸುವುದಿಲ್ಲ ವೆನ್ನಲಾಯಿತು. ಇಲ್ಲಿ ಶರೀರ ಸಂಸರ್ಗಪ್ರಯುಕ್ತ ಭೋಕ್ತೃತ್ವ ಪ್ರಸಂಗ ಪರಿಹರಿಸಲ್ಪಡುತ್ತೆ.

**ಸೂತ್ರಾರ್ಥ**

[ಭೋಕ್ತ್ರಾಪತ್ತೇಃ] = (ಈಶ್ವರನಿಗೂ) ಸುಖದುಃಖಾನುಭವ ಪ್ರಸಂಗಿಸುವುದರಿಂದ, [ಅವಿಭಾಗಃ] = ಜೀವನಿಗೂ ಈಶ್ವರನಿಗೂ ಭೇದ ಸಂಭವಿಸದು. [ಚೇತ್] = ಎಂದಲ್ಲಿ [ಲೋಕವತ್] = ಲೋಕದಲ್ಲಿ ಹೇಗೋ ಹಾಗೆ [ಸ್ಯಾತ್] = ಜೀವೇಶ್ವರ ಭೇದ ಸಂಭವಿಸುತ್ತೆ.

**ವಿವರಣೆ**

ಕರ್ಮವಶ್ಯನಾಗಿ ದುಃಖಿಯಾದ ಜೀವನಿಗಿಂತ ನಿರತಿಶಯಾನಂದ ಸ್ವರೂಪನಾದ ಈಶ್ವರ ವಿಲಕ್ಷಣನೆಂದು ಸಿದ್ಧಾನ್ತ. ಈಶ್ವರನಿಗೂ ಚಿದಚಿತ್ತುಗಳೆಂಬ ಶರೀರವುಂಟಾದ್ದರಿಂದ, ಶರೀರದಲ್ಲಿರುವವರಿಗೂ ಜೀವನಿಗೆ ಹೇಗೋ ಹಾಗೆ ಅವನಿಗೂ ಸುಖದುಃಖಾನುಭವವುಂಟು. ಆದ್ದರಿಂದ ಜೀವನಿಗಿಂತ ಈಶ್ವರ ವಿಲಕ್ಷಣನೆಂದು ಪ್ರತ್ಯೇಕಿಸಿ ಹೇಳಲಾಗುವುದಿಲ್ಲ ಎಂದು ಪೂರ್ವಪಕ್ಷ.

''ನಹವೈ ಸಶರೀರಸ್ಯ ಪ್ರಿಯಾಪ್ರಿಯಯೋರಪಹತಿರಸ್ತಿ''—ಎಂಬುದು ಕರ್ಮಾರಬ್ಧದೇಹ ವಿಷಯ. ''ಸ ಏಕಧಾ ಭವತಿ''—ಎಂದು ಮುಕ್ತನಿಗೂ ಶರೀರವುಂಟೆಂದು ಹೇಳುವುದರಿಂದ ಅವನಿಗೆ ದುಃಖಾನುಭವವಿಲ್ಲದ್ದರಿಂದ, ದುಃಖಾನುಭವಕ್ಕೆ ಶರೀರ ಸಂಬಂಧಮಾತ್ರವೇ ಹೇತುವಲ್ಲ. ಶಾಸ್ತ್ರದಲ್ಲಿ ವಿಧಿಸಿದ ವಿಧಿಗೆ ಒಳಪಟ್ಟವನಾಗಿದ್ದು, ಆ ವಿಧಿಯನ್ನು ಆಚರಿಸದೆ ಅತಿಕ್ರಮಿಸಿದಲ್ಲಿ, ಅದೇ ದುಃಖಾನುಭವಕ್ಕೆ ಹೇತು. ಈಶ್ವರನು ಶಾಸ್ತ್ರವಿಧಿಗೆ ಒಳಪಟ್ಟವನಲ್ಲವಾದ್ದರಿಂದ ಶರೀರವುಳ್ಳವನಾದಾಗ್ಯೂ,ಅವನಿಗೆ ದುಃಖಾನುಭವ ಗಂಧವೂ ಸಂಭವಿಸದು. ಲೋಕದಲ್ಲಿ ರಾಜನ ಆಜ್ಞೆಯನ್ನು ಅತಿಕ್ರಮಿಸಿದಲ್ಲಿ ಜನಗಳಿಗೆ ದಂಡನೆಯುಂಟು. ರಾಜನಿಗೆ ಅದಿಲ್ಲ. ಅದರಂತೆಯೇ, ಇಲ್ಲಿಯೂ ತಿಳಿಯತಕ್ಕದ್ದು. ಆದ್ದರಿಂದ ಈಶ್ವರನಿಗೆ ಯಾವ ವಿಧದಲ್ಲಿಯೂ ದುಃಖಾನುಭವ ಸಂಭವಿಸದು. ಇದರಿಂದ ಜೀವೇಶ್ವರರುಗಳಿಗೆ ವೈಲಕ್ಷಣ್ಯ ಸಂಭವಿಸುವುದೆಂದು ಸಿದ್ಧಾನ್ತ.

ಮೃತ್ ಸುವರ್ಣಾದಿಗಳಂತೆ ಬ್ರಹ್ಮಕ್ಕೆ ರೂಪಪರಿಣಾಮವನ್ನು ಸಿದ್ಧಾಂತದಲ್ಲಿ ಅಂಗೀಕರಿಸಿಲ್ಲವಾದ್ದರಿಂದ ಜಗದ್ಗತವಾದ ಅಪುರುಷಾರ್ಥಾದಿಗಳು ಬ್ರಹ್ಮದಲ್ಲಿ ಪ್ರಸಂಗಿಸಲು ಅವಕಾಶವಿಲ್ಲ. ಹಾಗೂ, ಮೃತ್ಸುವರ್ಣಾದಿಗಳ ಪರಿಣಾಮರೂಪಗಳಾದ ಘಟ—ಶರಾವ—ಕಟಕ-ಮುಕುಟಾದಿ ವಿಭಾಗದಂತೆ ಭೋಕ್ತೃ—ಭೋಗ್ಯವಿಭಾಗ ಉಪಪನ್ನವಾಗುವುದು. ಬ್ರಹ್ಮಕ್ಕೆ ಸ್ವರೂಪ ಪರಿಣಾಮವನ್ನು ಅಂಗೀಕರಿಸಿದಲ್ಲಿಯಾದರೋ ಬ್ರಹ್ಮವೇ ಭೋಕ್ತೃ-ಭೋಗ್ಯ ಎರಡೂ ಆಗುವುದರಿಂದ ನಿರ್ವಿಕಾರಶ್ರುತಿಗಳು ಅಸಮಂಜಸವೆಂದೇ ಏರ್ಪಡುವುದು.

## 6. ಆರಂಭಣಾಧಿಕರಣ

### ಸೂತ್ರ—ತದನನ್ಯತ್ವಂ ಆರಂಭಣ ಶಬ್ದಾದಿಭ್ಯಃ

**ಅಪವಾದ ಸಂಗತಿ**

೧ ನ ವಿಲಕ್ಷಣತ್ವಾಧಿಕರಣದಲ್ಲಿ ಕಾರ್ಯ—ಕಾರಣಗಳಿಗೆ ಸಾಲಕ್ಷಣ್ಯವನ್ನು ಹೇಳುವ ಸಾಂಖ್ಯರನ್ನು, ಕಾರ್ಯಕಾರಣಗಳಿಗೆ ವೈಲಕ್ಷಣ್ಯವನ್ನು ಉಪಪಾದಿಸುವುದರ ಮೂಲಕ ನಿರಾಕರಿಸಿಯಾಯಿತು. ಈಗ ಮತ್ತೆ, ಕಾರ್ಯಕಾರಣಗಳಿಗೆ ವೈಲಕ್ಷಣ್ಯವಿರುವಂತೆಯೇ ಸ್ವರೂಪ ಭೇದವೂ ಪ್ರಸಂಗಿಸುವುದು—ಇದರಿಂದ ಅಸತ್ಕಾರ್ಯವಾದ ಸಿದ್ಧಿಸುವುದು ಎನ್ನುವ ವೈಶೇಷಿಕರ (ಅರ್ಧವೈನಾಶಿಕರ) ಪ್ರತಿಕ್ಷೇಪ ಮಾಡಲಾಗುತ್ತೆ.

'' ವೈಲಕ್ಷಣ್ಯೇ ಕಾರ್ಯಹೇತ್ವೋಃ ಅಸತ್ಕಾರ್ಯಾಭ್ಯುಪಾಗಮಾತ್ ।
ಆರಂಭಣಾಧಿಕರಣಮಪವಾದ ನಿರಾಸಕೃತ್ ।। ''—ಎಂದು ಈ ಸಂಗತಿಯು

**ಲಕ್ಷಣ**

೨ '' ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್ '',—ಇತ್ಯಾದಿಯಲ್ಲಿ, ಕಾರಣಭೂತವಾದ ಬ್ರಹ್ಮಕ್ಕಿಂತ ಕಾರ್ಯರೂಪವಾದ ಜಗತ್ ಬೇರೆಯಾದದ್ದು ಅಲ್ಲ (ಅನನ್ಯತ್) ಎಂದು ಉಪಪಾದಿಸಿಯಾಯಿತು. ಈಗ ಅದೇ ಅನನ್ಯತ್ವವನ್ನು ಆಕ್ಷೇಪಿಸಿ ಸಮಾಧಾನ ಪಡಿಸಲಾಗುತ್ತೆ.

**ವಿಷಯವಾಕ್ಯ**

"ವಾಚಾರಂಭಣಂ ವಿಕಾರೋನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ" "ಸದೇವ ಸೋಮ್ಯೇದ ಮಗ್ರ ಆಸೀತ್ ಏಕಮೇವಾದ್ವಿತೀಯಂ ತದೈಕ್ಷತ ಬಹುಸ್ಯಾಂ ಪ್ರಜಾ ಯೇಯೇತಿ ತತ್ತೇಜೋಽಸೃಜತ." "ಅನೇನ ಜೀವೇನಾತ್ಮನಾನುಪ್ರವಿಶ್ಯ," "ಸನ್ಮೂಲಾಃ ಸೋಮ್ಯೇಮಾಸ್ಸರ್ವಾಃ ಪ್ರಜಾಸ್ಸದಾಯತನಾಸ್ಸತ್ ಪ್ರತಿಷ್ಠಾಃ ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ," —ಎಂಬವು.

[ಆರಂಭಣ ಶಬ್ದಃ + ಆದಿಃ + ಯೇಷಾಂ ವಾಕ್ಯಾನಾಂ = ಆರಂಭಣಶಬ್ದಾದೀನಿ.]

**ಸೂತ್ರಾರ್ಥ**

[ಆರಂಭಣಶಬ್ದಾದಿಭ್ಯಃ] = ಆರಂಭಣ ಶಬ್ದವನ್ನು ಆದಿಯಾಗಿಯುಳ್ಳ ವಾಕ್ಯಗಳಿಂದ [ತದನನ್ಯತ್ವಂ] = ಪರಮಾತ್ಮನಿಗಿಂತ (ಜಗತ್ತಿಗೆ) ಅಭೇದ (ಸಿದ್ಧಿಸುವುದು.)

**ವಿವರಣೆ**

ಪರಮಾತ್ಮನಿಂದ ಉತ್ಪನ್ನವಾದ ಜಗತ್ತು ಪರಮಾತ್ಮನಿಗಿಂತ ಬೇರೆಯಾದದ್ದೋ, ಅಲ್ಲವೋ ?—ಎಂದು ಸಂಶಯ. ಕಾರ್ಯ–ಕಾರಣಗಳಿಗೆ ಭೇದವುಂಟೇ ? ಇಲ್ಲವೇ? —ಎಂಬ ಸಂಶಯ ಇದರಿಂದ ಫಲಿಸುತ್ತದೆ. ಕಾರ್ಯ–ಕಾರಣಗಳಿಗೆ ಭೇದವಿಲ್ಲವೆಂದಲ್ಲಿ ಕಾರಣ ಹೇಗೋ ಹಾಗೆ ಕಾರ್ಯವೂ ಮೊದಲೇ ಇದೆಯೆಂದು ಒಪ್ಪಿಕೊಳ್ಳತಕ್ಕದ್ದೇ, ಹಾಗಾದಲ್ಲಿ ಒಂದು ಕಾರ್ಯಕ್ಕಾಗಿ, ಲೋಕದಲ್ಲಿ ನಡೆಸುವ ಯತ್ನ ವ್ಯರ್ಥವಾಗುವುದು. ಕಾರಣದಲ್ಲಿ 'ಮೃತ್'—ಎಂದೂ, ಕಾರ್ಯದಲ್ಲಿ ಘಟವೆಂದೂ ಬೇರೆಬೇರೆ ವಿಧವಾದ ವ್ಯವಹಾರ ಕಾಣಿಸುತ್ತದೆ. ಅದೂ ಇಲ್ಲದೆ ಹೋಗಬೇಕಾಗುವುದು. ಆದ್ದರಿಂದ ಈ ಅನುಪಪತ್ತಿಗಳು ಬಾರದಿರುವುದಕ್ಕಾಗಿ ಕಾರ್ಯ–ಕಾರಣಗಳಿಗೆ ಭೇದವನ್ನು ಒಪ್ಪಬೇಕು—ಎಂದು ಪೂರ್ವಪಕ್ಷ.

"ವಾಚಾರಂಭಣಂ ವಿಕಾರೋ ನಾಮಧೇಯಂ," "ಸ ದೇವಸೋಮ್ಯೇದ ಮಗ್ರ ಆಸೀತ್."—ಇತ್ಯಾದಿ ವಾಕ್ಯಗಳು ಕಾರ್ಯವಾದ ಜಗತ್ತಿಗೂ ಕಾರಣವಾದ ಬ್ರಹ್ಮಕ್ಕೂ ಅಭೇದವನ್ನೇ ಹೇಳುವುದರಿಂದ, ಕಾರ್ಯ–ಕಾರಣಗಳಿಗೆ ಅಭೇದವೆಂಬುದೇ ಸರಿ. ಕಾರಣವಾದ 'ಮೃತ್'—ಎಂಬ ದ್ರವ್ಯವೇ ಪಿಂಡವಾದ ಅವಸ್ಥೆಯನ್ನು ಬಿಟ್ಟು ಘಟರೂಪವಾದ ಅವಸ್ಥೆಯನ್ನು ಹೊಂದುವುದರಿಂದ, ಕಾರ್ಯ–ಕಾರಣಗಳಲ್ಲಿ ಬೇರೆ ಬೇರೆ ವಿಧವಾದ ವ್ಯವಹಾರಗಳು ಕಾಣಿಸುತ್ತವೆ. ಆ ಅವಸ್ಥಾಪ್ರಾಪ್ತಿಗಾಗಿಯೇ ಲೋಕದಲ್ಲಿ ಯತ್ನಿಸುತ್ತಾರೆ. ಆದ್ದರಿಂದ ಮೇಲೆ ಹೇಳಿದ ಅನುಪಪತ್ತಿಯೊಂದೂ ಸಂಭವಿಸದು. ಅಲ್ಲದೆ, ಕಾರಣಾವಸ್ಥೆಯಲ್ಲಿಯ ಮೃತ್ತೇ ಕಾರ್ಯಾವಸ್ಥೆಯಲ್ಲಿಯ ಘಟದಲ್ಲಿಯೂ ಕಾಣುವುದರಿಂದ, ಅದನ್ನು ಬಿಟ್ಟು, ಕಾಣಿಸದೇ ಇರುವ ಬೇರೊಂದು ದ್ರವ್ಯವನ್ನು ಕಲ್ಪಿಸುವುದು ಅನುಚಿತ. ಆದ್ದರಿಂದ, ಕಾರ್ಯ–ಕಾರಣಗಳಿಗೆ ಭೇದವಿಲ್ಲ.

ವಾಚಾ—**ಆರಂಭಣಂ** = [ಆರಭ್ಯತೇ = ಆಲಭ್ಯತೆ(ಸ್ಪೃಶ್ಯತೇ)] = ಆರಂಭಣಂ.

ವಾಚಾ = ವಾಕ್ಪೂರ್ವಕ ವ್ಯವಹಾರಕ್ಕಾಗಿ—"ಘಟದಿಂದ ನೀರನ್ನು ತಾ"—ಇತ್ಯಾದಿ ವ್ಯವಹಾರ. ಈ ವ್ಯವಹಾರ ಸಿದ್ಧಿಸುವುದಕ್ಕಾಗಿ, ಅದೇ ಮೃದ್ದ್ರವ್ಯದಿಂದ ಘಟ

ರೂಪವಾದ ಪೃಥುಬುಧ್ನೋದರತ್ವಾದಿ ಲಕ್ಷಣವಿಕಾರ—ಇದಕ್ಕಾಗಿ ಘಟ—ಇತ್ಯಾದಿ ನಾಮಧೇಯ (ಹೆಸರು) 'ಮೃತ್'—ಎಂಬ ದ್ರವ್ಯಕ್ಕೇ ಉಂಟಾಗುತ್ತೆ. ಜಲವನ್ನು ತರುವುದೇ ಮುಂತಾದ ವ್ಯವಹಾರ ವಿಶೇಷ ಸಿದ್ಧಿಗಾಗಿ "ಮೃತ್"—ಎಂಬ ದ್ರವ್ಯವೇ ಆಕಾರಾಂತರ, ನಾಮಧೇಯಾಂತರಗಳನ್ನು ಹೊಂದುತ್ತದೆಯೆಂದು ಅರ್ಥ. ಆದ್ದರಿಂದ ಘಟಾದಿಯೂ ಮೃತ್ತಿಕೆ—ಎಂಬುದೇ ಸತ್ಯ; ಮೃತ್ತಿಕಾದ್ರವ್ಯವೆಂಬುದೇ ಸತ್ಯವೆಂದರ್ಥ ವೆಂದು ಪ್ರಮಾಣತಃ ತಿಳಿಯುತ್ತದೆಯೇ ಹೊರತು ದ್ರವ್ಯಾಂತರವೆಂಬುದು ಸತ್ಯವಲ್ಲ. ಆದ್ದರಿಂದ ಮೃತ್ 'ಹಿರಣ್ಯ'—ಮುಂತಾದ ದ್ರವ್ಯಕ್ಕೇ, ಆಕಾರಾಂತರಕ್ಕೆ ಭಾಕ್ಕಾಗಿರು ವುದು ಮಾತ್ರದಿಂದಲೇ, ಬುದ್ಧಿ ಶಬ್ದಾಂತರಾದಿಗಳೂ ಕಾರ್ಯವಿಶೇಷಗಳೂ ಕಂಡು ಬರುತ್ತವೆ. ಮೃತ್ತಿಕೆಯೆಂಬುದು ಇದ್ದುಕೊಂಡಿರುವಾಗಲೇ "ಘಟ ನಷ್ಟವಾಯಿತು" ಎಂಬ ವ್ಯವಹಾರವಿರುವುದರಿಂದ, ಕಾರಣಕ್ಕಿಂತ ಕಾರ್ಯಬೇರೆಯೆನ್ನಬೇಡವೆ ?–ಎಂದರೆ ಅದರ ಉತ್ಪತ್ತಿ ವಿನಾಶಗಳೆಂಬುವೆಲ್ಲವೂ ಕಾರಣಭೂತ ದ್ರವ್ಯದ ಅವಸ್ಥಾ ವಿಶೇಷವೇ ಆದ್ದರಿಂದ ಈ ಶಂಕೆಗೆ ಅವಕಾಶವಿಲ್ಲ. ಘಟಾದ್ಯವಸ್ಥೆಯನ್ನು ಹೊಂದುವ ಮೃದಾದಿ ದ್ರವ್ಯಕ್ಕೇ ಘಟ, ಕಲಶ, ಕರಕ, ಇತ್ಯಾದಿ ವ್ಯವಹಾರಕ್ಕೆ ಕಾರಣವಾದ್ದರಿಂದಲೇ ಕಾರಕ ವ್ಯಾಪಾರಕ್ಕೂ ಅರ್ಥವಿದ್ದಂತಾಯಿತು. ಘಟಾದಿಗಳಿಗೆ ಉತ್ಪತ್ತಿಯನ್ನು ಅಂಗೀಕರಿಸಿ ದಾಗ್ಗೂ ಇರತಕ್ಕ ದ್ರವ್ಯಕ್ಕೇ ಉತ್ಪತ್ತಿಯನ್ನು ಹೇಳುವುದರಿಂದ, ಸತ್ಕಾರ್ಯವಾದವೇ ಫಲಿಸಿದ ಹಾಗಾಯಿತು. ಅಸತ್ಕಾರ್ಯವಾದಿಗೂ ಕೂಡ ಉತ್ಪತ್ತಿಗೆ ಅನುತ್ಪತ್ತಿ ಹೇಳಿದಲ್ಲಿ ಸತ್ಕಾರ್ಯವಾದ ಪ್ರಸಂಗ ತಪ್ಪಿದ್ದಲ್ಲ. ಉತ್ಪತ್ತಿಯುಂಟೆಂದಲ್ಲಿ, ಅನವಸ್ಥಾ ಪ್ರಸಂಗ. ನಮಗಾದರೋ ಅವಸ್ಥೆಯೇ ಉತ್ಪತ್ತಿಯಾದ್ದರಿಂದ, ಅವಸ್ಥೆಗೂ ಉತ್ಪತ್ತಿ ಹೇಳುವಲ್ಲಿ ಉತ್ಪತ್ತಿಗೆ ಉತ್ಪತ್ತಿ ಚೋದನದಂತೆಯೇ ಆಗುತ್ತದೆ. ವಸ್ತು ಮೊದಲೇ ಇದೆ; ಮತ್ತೆ ಅದು ಉತ್ಪನ್ನವಾಗುತ್ತೆ—ಎಂಬುದು ವಿಪ್ರತಿಷಿದ್ಧವಲ್ಲವೆ ? ಎಂದಲ್ಲಿ—ಉತ್ಪತ್ತಿ ವಿನಾ ಶಗಳ ಯಾಥಾತ್ಮ್ಯವನ್ನರಿಯದವರ ಚೋದ್ಯವಿದು. ಇರುವ ದ್ರವ್ಯಕ್ಕೆ ಉತ್ತರೋತ್ತರ ಅವಸ್ಥೆಯುಂಟಾಗುವುದು ಪೂರ್ವ ಪೂರ್ವ ಅವಸ್ಥೆಗಳ ವಿನಾಶ ಮತ್ತು ಹಾಗೆ ಉಂಟಾದ ತನ್ನ ಅವಸ್ಥೆಯ ಉತ್ಪತ್ತಿಯೂ ಕೂಡ. ಆದ್ದರಿಂದ ಸರ್ವಾವಸ್ಥೆಗಳಲ್ಲಿಯ ಆಯಾ ಅವಸ್ಥಾಶ್ರಯವಾದ ಅದೇ ದ್ರವ್ಯವಿರುತ್ತಿರುವುದರಿಂದ ಸತ್ಕಾರ್ಯವಾದಕ್ಕೆ ವಿರೋಧ ವಿಲ್ಲ. ಮೊದಲು ಇಲ್ಲದಿದ್ದ ಘಟಾದ್ಯವಸ್ಥೆ ಅನಂತರ ಉಂಟಾಗುವುದರಿಂದ ಅಸತ್ಕಾರ್ಯ ವಿಲ್ಲ. ಮೊದಲು ಇಲ್ಲದಿದ್ದ ಘಟಾದ್ಯವಸ್ಥೆ ಅನಂತರ ಉಂಟಾಗುವುರಿಂದ ಅಸತ್ಕಾರ್ಯ ವಾದವಾಗುವುದಿಲ್ಲವೆ ?—ಎಂದರೆ, ಅಸತ್ಕಾರ್ಯವಾದಿಗೂ ಉತ್ಪತ್ತಿಗೆ ಉತ್ಪತ್ತಿಯಿಲ್ಲ ವೆನ್ನುವುದರಿಂದ ಸತ್ಕಾರ್ಯವಾದವೇ ಪ್ರಸಂಗಿಸಿದ ಹಾಗಾಗುತ್ತೆಯೆಂದು ಮೇಲೆಯೇ ಹೇಳಿದೆ. ಅದಕ್ಕಾಗಿ ಉತ್ಪತ್ತಿಯನ್ನು ಹೇಳುವಲ್ಲಿ ಅನವಸ್ಥಾ ಪ್ರಸಂಗ ಅಪರಿಹಾರ್ಯ. ನಮಗಾದರೋ—ಅವಸ್ಥೆಗಳು ಅಪೃಥಕ್ಸಿದ್ಧಧರ್ಮವಾದ್ದರಿಂದ ಅವಸ್ಥೆಯುಳ್ಳ ದ್ರವ್ಯಕ್ಕೇ ಉತ್ಪತ್ತ್ಯಾದಿಗಳೆಲ್ಲವೂ ಎಂಬುದರಲ್ಲಿ ಏನೂ ಅವದ್ಯವಿಲ್ಲ. ಕಪಾಲತ್ವ—ಚೂರ್ಣತ್ವ —ಪಿಂಡತ್ವಾವಸ್ಥಾತ್ಯಾಗದಿಂದ ಘಟತ್ವಾವಸ್ಥೆಯಂತೆ ಒಂದಾಗಿರುವ ಅವಸ್ಥೆ ಹೋದರೆ ಅನೇಕವೆಂಬ ಅವಸ್ಥೆ—ಬಹುತ್ವಾವಸ್ಥೆ ಹೋಯಿತೆಂದರೆ ಏಕತ್ವಾವಸ್ಥೆಯಾದ್ದರಿಂದ ಅವಿರುದ್ಧ. ಹಾಗೆಯೇ,

" ಸದೇವ ಸೋಮ್ಯೇದಮಗ್ರ ಆಸೀತ್ ಏಕಮೇವಾದ್ವಿತೀಯಂ "—ಅಂದರೆ 'ಸತ್, ಏವ, ಇದಂ'=ಈಗ ನಾಮರೂಪ ವೇಷದಿಂದ ನಾನಾ ರೂಪವಾಗಿರುವ ಜಗತ್ತು ಮೊದಲು, ನಾಮರೂಪ ವಿಭಾಗವಿಲ್ಲದ್ದರಿಂದ ಒಂದೇ ಆಗಿದ್ದಿತು. ಈ ಜಗತ್ತು ಹಿಂದೆ ಇದ್ದದ್ದೇ—ಅಂದರೆ, ಇದಕ್ಕೆ ಸೃಷ್ಟ್ಯಾದಿಗಳು ಉಪಪನ್ನವಾಗುವುದು ಹೇಗೆ? ಎಂದರೆ, ಸರ್ವಶಕ್ತಿಯುಳ್ಳೋಣದರಿಂದ ಬೇರೊಬ್ಬ ಅಧಿಷ್ಠಾತೃವಿನ ಅಪೇಕ್ಷೆಯಿಲ್ಲದೆ ಅದ್ವಿತೀಯವೂ ಎನಿಸಿರುವುದರಿಂದ ಅನನ್ಯತ್ವವೇ ಉಪಪಾದಿತವಾಗುತ್ತೆ. " ತದೈಕ್ಷತ ಬಹುಸ್ಯಾಂ ಪ್ರಜಾಯೇಯ "—ಎಂದು ಸೃಷ್ಟಿಸಲ್ಪಡಲಿದ್ದ ತೇಜಃ ಪ್ರಭೃತಿ ವಿವಿಧ ವಿಚಿತ್ರ—ಸ್ಥಿರ—ತ್ರಸರೂಪ ಜಗದ್ರೂಪದಿಂದ ತಾನೇ ಬಹುವಾಗಬೇಕೆಂದು ಬ್ರಹ್ಮವು ಸಂಕಲ್ಪಿಸಿ ಹಾಗೆಯೇ ತಾನೇ ಬಹುವಾಗಿ ಆಯಿತು. ಆದ್ದರಿಂದ ಕಾರ್ಯರೂಪವಾದ ಈ ಜಗತ್ತು ಪರಮ ಕಾರಣವಾದ ಪರಬ್ರಹ್ಮವೇ ಆದ್ದರಿಂದ ಅದಕ್ಕಿಂತ ಅನನ್ಯವೂ ಎಂದು ನಿಶ್ಚಯಿಸಲ್ಪಟ್ಟಿದೆ. " ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ. "—ಎಂದು ಹೇಳಿರುವಂತೆ ಬ್ರಹ್ಮವು ತನ್ನನ್ನು ಆತ್ಮವಾಗಿಯುಳ್ಳ ಜೀವನೊಡನೆ ಆತ್ಮವಾಗಿ ಅನುಪ್ರವೇಶ ಮಾಡಿದ್ದರಿಂದಲೇ ನಾಮ—ರೂಪ ವಿಭಾಗ ವುಂಟಾದುದು. ಇದು " ತತ್ಸೃಷ್ಟ್ವಾ. ತದೇವಾನು ಪ್ರಾವಿಶತ್ ತದನುಪ್ರವಿಶ್ಯ ಸಚ್ಚತ್ಯಚ್ಚಾ ಭವತ್. ;"—ಎಂಬ ಶ್ರುತ್ಯಂತರದಿಂದ ಸ್ಪಷ್ಟವಾಗುತ್ತೆ. ಕಾರ್ಯಾವಸ್ಥವೂ—ಕಾರಣಾವಸ್ಥವೂ ಆದ ಸ್ಥೂಲ-ಸೂಕ್ಷ್ಮ ಚಿದಚಿತ್—ವಸ್ತುಗಳೆಲ್ಲಕ್ಕೂ ಪರಬ್ರಹ್ಮವು ಶರೀರಿ(ಆತ್ಮಾ), ಇವು ಅವನಿಗೆ ಶರೀರವೆಂಬುದು ಅಂತರ್ಯಾಮಿ ಬ್ರಾಹ್ಮಣಾದಿಗಳಲ್ಲಿ ಸಿದ್ಧವಾಗಿದೆ. ಜೀವ ಸಹಿತವಾದ ಜಗತ್ತಿನಲ್ಲಿ ಬ್ರಹ್ಮ ಆತ್ಮವಾಗಿದ್ದುಕೊಂಡು ನಾಮ ರೂಪ ವ್ಯಾಕರಣ ಮಾಡುವುದಾಗಿ ಹೇಳಿರುವುದರಿಂದ, ಚೇತನಾ ಚೇತನಗಳನ್ನು ಶರೀರ ವಾಗಿಯುಳ್ಳ ಬ್ರಹ್ಮವೇ ಜಗತ್ತೆನಿಸಿ, " ಸ ದೇವೇದಮಗ್ರ ಏಕಮೇವಾಸೀತ್ "—, ಇತ್ಯಾದಿ ಸರ್ವವೂ ಬಹು ಚೆನ್ನಾಗಿ ಉಪಪನ್ನವಾಗುತ್ತೆ. ಚೇತನಾ ಚೇತನ ಶರೀರಕವಾಗಿ, ಅವನ್ನು, ವಿಶೇಷಣವಾಗಿಯುಳ್ಳ ಬ್ರಹ್ಮವೇ ಸರ್ವದಾ ಸರ್ವಶಬ್ದಗಳಿಂದಲೂ ಹೇಳಲ್ಪಟ್ಟಿದೆ. ಕೆಲವು ವೇಳೆ ನಾಮರೂಪ ವಿಭಾಗಗಳಿಲ್ಲದ ಮತ್ತು ಪ್ರತ್ಯೇಕಿಸಿ ಹೇಳಲ್ಪಡಲಾಗದ ಸೂಕ್ಷ್ಮದಶಾಪನ್ನ ಚೇತನಾ ಚೇತನಗಳನ್ನು ಶರೀರವಾಗಿ ಹೊಂದಿ ಆಬ್ರಹ್ಮ ಕಾರಣಾ ವಸ್ಥವಾದ ಬ್ರಹ್ಮವೆನಿಸಿದೆ. ಕೆಲವು ವೇಳೆಗಳಲ್ಲಿ ನಾಮರೂಪ ವಿಭಾಗಗಳನ್ನು ಹೊಂದಿದ ಸ್ಥೂಲ ಚೇತನಾ ಚೇತನ ವಸ್ತು ಶರೀರಕವಾಗಿ ಕಾರ್ಯಾವಸ್ಥವಾದ ಬ್ರಹ್ಮ ವೆನಿಸಿದೆಯಾದ್ದರಿಂದ ಹೀಗೆ ಕಾರಣರೂಪವಾದ ಬ್ರಹ್ಮದಿಂದ ಕಾರ್ಯರೂಪವಾದ ಜಗತ್ತು ಬೇರೆಯಲ್ಲ—ಆದ್ದರಿಂದಲೇ 'ಅನನ್ಯತ್' ಎನಿಸಿದೆಯೆಂಬುದೇ ಇಲ್ಲಿಯ ತತ್ತ್ವ. ವಿಶಿಷ್ಟ ವಾದ ಕಾರಣದಿಂದ ವಿಶಿಷ್ಟವಾಧ ಕಾರ್ಯವುಂಟಾಗುತ್ತೆಯಾಗಿ ಶರೀರ—ಶರೀರಿ ಭಾವವೇ ಮುಂತಾದುವೂ ಉಪಪನ್ನವಾಗುತ್ತೆ.

ಕಾರ್ಯವಾದ ಜಗತ್ತನ್ನು ಮಿಥ್ಯೆಯೆಂದು ಹೇಳಿ ಕಾರ್ಯ—ಕಾರಣಗಳಿಗೆ ಅನನ್ಯ ತ್ವವನ್ನು ಸಾಧಿಸಲು ಯತ್ನಿಸುವ ಬ್ರಹ್ಮಾಜ್ಞಾನವಾದಿಗಳ ಪಕ್ಷದಲ್ಲಿ ಕಾರ್ಯ—ಕಾರಣ ಗಳಿಗೆ ಅನನ್ಯತ್ವ ಸಾಧಿಸಲಾಗುವುದಿಲ್ಲ—ಏಕೆಂದರೆ, ಸತ್ಯ ಮಿಥ್ಯಾರ್ಥಗಳಿಗೆ ಐಕ್ಯವೆಂ

ಬುದು ಹೇಗಾದೀತು ? ಹಾಗಾದಲ್ಲಿ, ಜಗತ್ತೇ ಸತ್ಯ. ಬ್ರಹ್ಮ ಮಿಥ್ಯಾ ಎಂದೂ ಎನಿಸಬಹುದಾಗುತ್ತೆ.

ಭಾಸ್ಕರರು—ಕಾರ್ಯವೂ ಪಾರಮಾರ್ಥಿಕವೆಂದು ಒಪ್ಪಿಕೊಂಡೇ, ಜೀವ—ಬ್ರಹ್ಮರಿಗೆ ಅನ್ಯತ್ವ ಔಪಾಧಿಕ, ಅನನ್ಯತ್ವ ಸ್ವಾಭಾವಿಕ, ಅಚಿತ್ ಮತ್ತು ಬ್ರಹ್ಮಕ್ಕೆ ಇವೆರಡೂ ಸ್ವಾಭಾವಿಕವೆಂದು ವರ್ಣಿಸುತ್ತಾರೆ. ಅವರ ಪಕ್ಷದಲ್ಲಿ, ಉಪಾಧಿ ಮತ್ತು ಬ್ರಹ್ಮ—ಇವೆರಡನ್ನೂ ಬಿಟ್ಟು ಬೇರೆ ವಸ್ತುವಿಲ್ಲವಾದ್ದರಿಂದ, ನಿರವಯವೂ ಅಖಂಡಿತವೂ ಆದ ಬ್ರಹ್ಮಕ್ಕೇ ಉಪಾಧಿ ಸಂಬಂಧದಿಂದ ಬ್ರಹ್ಮ ಸ್ವರೂಪಕ್ಕೇ ಹೇಯಾಕಾರ ಪರಿಣಮಿಸುವುದರಿಂದಲೂ, ಶಕ್ತಿ ಪರಿಣಾಮವನ್ನು ಒಪ್ಪಿದಾಗ್ಯೂ, ಆ ಶಕ್ತಿಯೂ ಬ್ರಹ್ಮಾನನ್ಯವಾದ್ದರಿಂದ, ಜೀವ—ಬ್ರಹ್ಮರಿಗೆ ಕರ್ಮವಶ್ಯತ್ವ, ಅಪಹತಪಾಪ್ಮತ್ವಾದಿ ವ್ಯವಸ್ಥೆಯನ್ನು ಹೇಳುವ ಮತ್ತು ಅಚಿದ್ಬ್ರಹ್ಮಗಳಿಗೆ ಅಪರಿಣಾಮವನ್ನು ಹೇಳುವ ಶ್ರುತಿಗಳಿಗೂ ವ್ಯಾಕೋಪವುಂಟಾಗುವುದು.

ಸನ್ಮಾತ್ರ ದ್ರವ್ಯವೇ ಸರ್ವಾವಸ್ಥೆಗಳಲ್ಲಿಯೂ ಇರುತ್ತೆಯಾಗಿ ಜಗತ್ತಿಗೂ ಬ್ರಹ್ಮಕ್ಕೂ ಅನನ್ಯತ್ವವನ್ನು ಹೇಳುವ ಯಾದವ ಪ್ರಕಾಶರ ಮತದಲ್ಲಿಯೂ, ಸದಾ ಸರ್ವಜ್ಞವೂ ಸರ್ವ ಶಕ್ತಿಯೂ ಸತ್ಯಸಂಕಲ್ಪವೂ ನಿರವದ್ಯವೂ ದೇಶಕಾಲಾನವಚ್ಛಿನ್ನವೂ ಅನವಧಿಕಾತಿಶಯಾನಂದವೂ ಪರಮ ಕಾರಣವೂ ಆದುದು ಬ್ರಹ್ಮವೆಂದು ಸಾರುತ್ತಿರುವ ಸಕಲ ಶ್ರುತಿ—ಸ್ಮೃತೀತಿಹಾಸ ಪುರಾಣ ನ್ಯಾಯಗಳಿಗೂ ವಿರೋಧವಿದೆ. ಸದಾತ್ಮಕವಾಗಿ ಸರ್ವಕ್ಕೂ ಅಭಿನ್ನವಾದಲ್ಲಿ, ಬ್ರಹ್ಮ ಸರ್ವಜ್ಞವಾದುದರಿಂದ ಸರ್ವಸ್ವಭಾವ ಪ್ರತಿಸಂಧಾನದಿಂದ ಸರ್ವಗುಣ—ದೋಷಗಳ ಸಂಕರವೂ ಬ್ರಹ್ಮಕ್ಕೆ ಏರ್ಪಡುವುದು.

ಆದ್ದರಿಂದ ಮೇಲೆ ಸಿದ್ಧಾಂತ ಮಾಡಿದ ರೀತಿಯಲ್ಲಿಯೇ ಅನನ್ಯತ್ವವೆಂಬುದನ್ನು ಅಂಗೀಕರಿಸತಕ್ಕದ್ದು.

### ಸೂತ್ರ ೨—**ಭಾವೇ ಚೋಪಲಬ್ಧೇಃ**

**ಸೂತ್ರಾರ್ಥ**

[ಭಾವೇ ಚ] = ಕಾರ್ಯದಲ್ಲಿಯೂ, [ಉಪಲಬ್ಧೇಃ] = (ಕಾರಣ) ಕಾಣಿಸುವುದರಿಂದ (ಕಾರ್ಯ—ಕಾರಣಗಳು ಒಂದೇ).

**ವಿವರಣೆ**

ಘಟವೇ ಮುಂತಾದ ಕಾರ್ಯದಲ್ಲಿಯೂ ಕಾರಣವಾದ ಮೃತ್ ಎಂಬ ದ್ರವ್ಯವೇ ಕಾಣುವುದರಿಂದ ಕಾರ್ಯ—ಕಾರಣಗಳಿಗೆ ಭೇದವಿಲ್ಲ. ಕುಂಡಲಾದಿ ಕಾರ್ಯವಿರುತ್ತಿರುವಾಗಲೇ ಕಾರಣಭೂತವಾದ ಹಿರಣ್ಯ ಕಾಣಿಸುತ್ತೆ. ಹೀಗೆ ಹಿರಣ್ಯಾದಿ ದ್ರವ್ಯಾಂತರಗಳಲ್ಲಿ ಮೃತ್ತೇ ಮುಂತಾದ್ದು ಕಾಣಿಸದು. ಆದ್ದರಿಂದ ಕಾರಣಭೂತದ್ರವ್ಯವೇ ಅವಸ್ಥಾಂತರವನ್ನು ಹೊಂದಿ ಕಾರ್ಯವೆನ್ನಲ್ಪಡುತ್ತದೆ. ಹಾಗಾದರೆ, ಗೋಮಯಾದಿಗಳಿಂದ ಹುಟ್ಟಿದ ಚೇಳು ಮುಂತಾದುದರಲ್ಲಿ 'ಇದು ಗೋಮಯ'—ಎಂದು ತೋರುವುದಿಲ್ಲವೇಕೆ ?—ಎಂದರೆ, ಅಲ್ಲಿಯೂ ಆದ್ಯ ಕಾರಣಭೂತವಾದ ಪೃಥಿವೀ ದ್ರವ್ಯವು

ಪ್ರತ್ಯಭಿಜ್ಞಾತವಾಗುತ್ತೆ. ಅಗ್ನಿಕಾರ್ಯವಾದ ಧೂಮದಲ್ಲಿ ಅಗ್ನಿಯ ಪ್ರತ್ಯಭಿಜ್ಞೆಯಾಗುವುದಿಲ್ಲವೇಕೆ? –ಎಂದಲ್ಲಿ ಅಗ್ನಿ ನಿಮಿತ್ತಕಾರಣಮಾತ್ರವಾದ್ದರಿಂದ ಅಲ್ಲಿ ಪ್ರತ್ಯಭಿಜ್ಞೆಯಾಗದಿದ್ದಲ್ಲಿ ದೋಷವಿಲ್ಲ. ಅಗ್ನಿಯಲ್ಲಿ ಹಾಕಿದ ಹಸೀ ಕಟ್ಟಿಗೆಯಿಂದಲ್ಲವೇ ಧೂಮ ಹುಟ್ಟತಕ್ಕದ್ದು! ಕಾರ್ಯದ ಜತೆಯಲ್ಲಿಯೇ ಅದೇ ಇದು ಎಂದು ಕಾರಣದ್ರವ್ಯವೂ ಕಾಣುವುದರಿಂದ ಬುದ್ಧಿ ಶಬ್ದಾನ್ತರಾದಿಗಳು ಆ ದ್ರವ್ಯದ ಅವಸ್ಥಾಭೇದ ಮಾತ್ರವನ್ನೇ ನಿಬಂಧನವಾಗಿಯುಳ್ಳವೆಂದು ನಿಶ್ಚಿತವಾಗುತ್ತೆ. ಆದ್ದರಿಂದ ಕಾರಣಕ್ಕಿಂತ ಕಾರ್ಯ ಅನ್ಯವಲ್ಲ.

ಸೂತ್ರ —೩ **ಸತ್ತ್ವಾಚ್ಚಾಪರಸ್ಯ**

### ಸೂತ್ರಾರ್ಥ

[ಅಪರಸ್ಯ] = ಕಾರ್ಯಕ್ಕೆ [ಸತ್ತ್ವಾತ್ ಚ] = (ಕಾರಣದಲ್ಲಿ) ಇರುವಿಕೆಯಿಂದಲೂ. ಕಾರ್ಯ–ಕಾರಣಗಳು ಪರಸ್ಪರ ಅಭಿನ್ನ.

### ವಿವರಣೆ

ಒಬ್ಬನು ಒಂದು ಜಾಗಕ್ಕೆ ಹೋಗುವಾಗ ದಾರಿಯಲ್ಲಿ ಮೃತ್ಪಿಂಡ (ಮಣ್ಣುಮುದ್ದೆ) ವನ್ನು ಕಂಡು, ಮತ್ತೆ ಅಲ್ಲಿಂದ ಹಿಂತಿರುಗಿ ಬರುವಾಗ, ಆ ಮೃತ್ಪಿಂಡಗಳಿಂದಾದ ಕಲಶಾದಿಗಳನ್ನು ನೋಡಿ, ಈ ಕಲಶಾದಿಗಳು ಇದಕ್ಕೆ ಮುಂಚೆ ಮೃತ್ಪಿಂಡಗಳಾಗಿದ್ದುವು —ಎಂದು ಹೇಳುತ್ತಾನೆ. ಇದರಿಂದ ಕಾರಣದಲ್ಲಿ ಕಾರ್ಯವಿದೆಯೆಂದು ಒಪ್ಪಿಕೊಳ್ಳಬೇಕು. ಆದ್ದರಿಂದ ಕಾರ್ಯ—ಕಾರಣಗಳಿಗೆ ಭೇದವಿಲ್ಲ.

ಸೂತ್ರ ೪—**ಅಸದ್ವ್ಯಪದೇಶಾನ್ನೇತಿಚೇನ್ನ ಧರ್ಮಾನ್ತರೇಣವಾಕ್ಯಶೇಷಾತ್ ಯುಕ್ತೇಃ ಶಬ್ದಾನ್ತರಾಚ್ಚ**

### ಸೂತ್ರಾರ್ಥ

[ಅಸದ್ವ್ಯಪದೇಶಾತ್] = (ಕಾರಣಾವಸ್ಥೆಯಲ್ಲಿ ಕಾರ್ಯವೆಂಬುದು ಇಲ್ಲವೆಂದು ಹೇಳುವುದರಿಂದ, [ನ] = ಕಾರ್ಯ ಮುಂಚೆ ಇಲ್ಲ [ಇತಿ ಚೇತ್] = ಎಂದಲ್ಲಿ, [ನ] = ಹಾಗಲ್ಲ, [ಧರ್ಮಾನ್ತರೇಣ] = ಅವಸ್ಥಾಂತರದೊಡನೆ ಕೂಡಿ ಇರುವುದರಿಂದ, (ಇಲ್ಲವೆಂದು ಹೇಳುವುದು) [ವಾಕ್ಯಶೇಷಾತ್] = ಮುಂದಿನ ವಾಕ್ಯದಿಂದಲೂ,[ಯುಕ್ತೇಃ] = ಯುಕ್ತಿಯಿಂದಲೂ, [ಶಬ್ದಾನ್ತರಾತ್ ಚ] = (ಸಮಾನ ಪ್ರಕರಣದಲ್ಲಿಯುಳ್ಳ) ಬೇರೆ ಶಬ್ದದಿಂದಲೂ, (ಕಾರ್ಯ ಮುಂಚೆ ಇದೆಯೆಂದೇ ಸಿದ್ಧವಾಗುವುದು).

### ವಿವರಣೆ

"ಅಸದ್ವಾ ಇದಮಗ್ರ ಆಸೀತ್" —ಎಂದರೆ, "ಈ ಕಾರ್ಯ ಮೊದಲು ಇಲ್ಲದಾಗಿದ್ದಿತು."—ಎನ್ನುವುದರಿಂದ, ಕಲಶಾದಿ ಕಾರ್ಯ ಮೊದಲು ಮೃತ್ಪಿಂಡಾದಿ ಕಾರಣದಲ್ಲಿದ್ದಿತೆನ್ನುವುದು ಸಂಭವಿಸದೆಂದಲ್ಲಿ, ಅದಕ್ಕೆ ಕಾರಣ, ಆಗ ಕಲಶಾವಸ್ಥೆಯನ್ನು ಬಿಟ್ಟು ಪಿಂಡರೂಪವಾದ ಬೇರೆ ಅವಸ್ಥೆಯನ್ನು ಹೊಂದಿರುವುದರಿಂದ, ಅದು ಇಲ್ಲವೆನ್ನಲಾಯಿತು. ಅದನ್ನು ಹೇಗೆ ಅರಿಯುವುದೆಂದಲ್ಲಿ, ವಾಕ್ಯಶೇಷವಾದ, "ತದಸದೇವಸನ್ಮನೋಽಕುರುತ

ಸ್ಯಾಮಿತಿ "—ಎಂಬಲ್ಲಿ, ಆ ಅಸತ್ತು ಸಂಕಲ್ಪಿಸಿತೆಂದು ಹೇಳುವುದರಿಂದ, ಶೂನ್ಯವಾಗಿದ್ದಲ್ಲಿ ಸಂಕಲ್ಪ ಕೂಡದುದರಿಂದ ಮೊದಲೇ ಇದೆಯೆಂದೇ ಅಲ್ಲವೇ ನಿಶ್ಚಯಿಸಲ್ಪಡುವುದು. ಯುಕ್ತಿಯೂ ಹೀಗೆಯೇ ಕಾಣುವುದು, ಅಂದರೆ, ಘಟ ಇದೆಯೆಂದೂ ಇಲ್ಲವೆಂದೂ ಹೇಳಿದಲ್ಲಿ ಮೊದಲು ಒಂದು ಅವಸ್ಥೆಯನ್ನೂ ಅನಂತರ ಒಂದು ಅವಸ್ಥೆಯನ್ನೂ ಹೊಂದಿರುವ ವಸ್ತುವೇ ಕಾಣುವುದೇ ಹೊರತು, ವಸ್ತು ಶೂನ್ಯವಾಗಿ ಕಾಣಿಸುವುದಿಲ್ಲ. ಅಲ್ಲದೆ, ಈ ವಾಕ್ಯಕ್ಕೆ ಸಮಾನವಾದ "ಸದೇವಸೋಮ್ಯೇದಮಗ್ರ ಆಸೀತ್"—ಎಂಬಲ್ಲಿಯೂ ಇಲ್ಲಿ 'ಅಸತ್'—ಎಂದು ಹೇಳಿದೆಡೆಯಲ್ಲಿ ಅಲ್ಲಿ "ಸತ್"—ಎಂದೂ ಹೇಳುವುದರಿಂದ, ಇಲ್ಲಿಯೂ ಅವಸ್ಥಾಂತರಾಪನ್ನವಾದ ವಸ್ತುವೇ ಹೇಳಲ್ಪಟ್ಟಿದೆಯೆಂದು ನಿಶ್ಚಯಿಸಬೇಕು. ಆದ್ದರಿಂದ ಕಾರ್ಯವು ಕಾರಣಾವಸ್ಥೆಯಲ್ಲಿ ಇದೆಯೆಂದು ಸಿದ್ಧಾಂತ.

### ಸೂತ್ರ ೫—**ಪಟವಚ್ಚ**

**ಸೂತ್ರಾರ್ಥ**

(ನೂಲು) ಬಟ್ಟೆಯಾಗುವಂತೆಯೂ. (ಬ್ರಹ್ಮ ಜಗತ್ತಾಗುವುದು), ಅಂದರೆ, ನೂಲುಗಳು ಒಂದಕ್ಕೊಂದು ಸೇರಿದಲ್ಲಿ 'ಪಟ' (ಬಟ್ಟೆ)—ಎಂಬ ಹೆಸರನ್ನೂ, ಬೇರೆ ವಿಧವಾದ ಆಕಾರವನ್ನೂ ಹೊಂದಿ, ಉಡುವುದೇ ಮುಂತಾದ ಕಾರ್ಯಗಳಿಗೆ ಉಪಯೋಗವಾಗುವ ಹಾಗೆ, ಬ್ರಹ್ಮವೂ ಜಗದ್ರೂಪವಾಗಿ ಪರಿಣಮಿಸಿ ನಾಮರೂಪಗಳನ್ನು ಹೊಂದುವುದು.

### ಸೂತ್ರ ೬—**ಯಥಾ ಚ ಪ್ರಾಣಾದಿಃ**

**ಸೂತ್ರಾರ್ಥ**

[ಯಥಾ] = ಹೇಗೆ, [ಪ್ರಾಣಾದಿಃ] = ಪ್ರಾಣಗಳು (ಬೇರೆಬೇರೆ ವೃತ್ತಿಗಳನ್ನು ಹೊಂದುವುದೋ ಹಾಗೆಯೇ. ಬ್ರಹ್ಮವೂ. ಅಂದರೆ, ಶರೀರದಲ್ಲಿರುವ ಒಂದೇ ಪ್ರಾಣವು ವೃತ್ತಿವಿಶೇಷದಿಂದ ಪ್ರಾಣ – ಅಪಾನ – ವ್ಯಾನ – ಉದಾನ–ಸಮಾನ – ಗಳೆಂಬ ಬೇರೆ ಬೇರೆ ಹೆಸರುಗಳನ್ನು ಹೊಂದುವಂತೆಯೇ, ಬ್ರಹ್ಮವೂ ಜಗದ್ರೂಪದಿಂದ ಪರಿಣಮಿಸಿ ಬೇರೆ ಬೇರೆ ಹೆಸರುಗಳನ್ನು ಹೊಂದುವುದು. ಆದ್ದರಿಂದ ಜಗತ್ತಿಗೂ ಬ್ರಹ್ಮಕ್ಕೂ ಅಭೇದ. ಸೂಕ್ಷ್ಮ ಚಿದಚಿದ್ವಿಶಿಷ್ಟವಾದ ಬ್ರಹ್ಮವೇ ಸ್ಥೂಲ ಚಿದಚಿದ್ವಿಶಿಷ್ಟವಾಗಿ ಹುಟ್ಟುತ್ತದೆ—ಯೆಂಬುದೇ ಸರ್ವಶ್ರುತಿಗಳಿಗೂ ಅನುಗುಣವಾದ ಜಗದುತ್ಪತ್ತಿ ಪ್ರಕಾರ ಇದರಿಂದ ಆಯಾವಾದಿಗಳಿಂದ ಪರಿಕಲ್ಪಿತವಾದ, ವೇದ ವಿರುದ್ಧವಾದ ಅಸತ್ಪಕ್ಷಗಳು —ಅಂದರೆ, ಜಗದುತ್ಪತ್ತಿ ವಿಷಯದಲ್ಲಿ, ರಜ್ಜು ಮುಂತಾದುದರಲ್ಲಿ ಸರ್ಪ, ಭೂದಳನ ಅಂಬುಧಾರೆ—ಇತ್ಯಾದಿಗಳಂತೆ ಬ್ರಹ್ಮದಲ್ಲಿ ಮಿಥ್ಯಾಪರಿಕಲ್ಪಿತ—ಎಂಬ ವಿವರ್ತವಾದವೂ

ಚಿದಚಿದೀಶ್ವರಾಕಾರದಿಂದ ತ್ರ್ಯಂಶ (ಮೂರು ಅಂಶಗಳು) ವುಳ್ಳ ಬ್ರಹ್ಮದಲ್ಲಿಯು ಅಚಿದಂಶದ ಪರಮಾರ್ಥಪರಿಣತಿಯೆಂಬ ವಾದವೂ

ಚಿದಚಿದೀಶ್ವರರೆಂಬ ಮೂರು ವಿಧ ಶಕ್ತ್ಯಾತ್ಮಕವಾದ ಬ್ರಹ್ಮದಲ್ಲಿ ಆಯಾ ಶಕ್ತಿ ವಿಶೇಷ ಸೃಷ್ಟಿಯೇ ಜಗತ್ತೆಂಬ ವಾದವೂ

ಕೂರ್ಮದ ಅವಯವು ಅಭಿವ್ಯಕ್ತವಾಗುವಂತೆ ಬ್ರಹ್ಮದಲ್ಲಿ ಮೊದಲಿದ್ದ ಕಾರ್ಯವೇ ಅನಂತರ ಅಭಿವ್ಯಕ್ತವೆಂಬ ವಾದವೂ,

ಮೊಗ್ಗಾಗಿರುವಾಗ ಅರಳದಿದ್ದರೂ ಹೂ ಕಾಲ ಬಂದಾಗ ಅರಳುವಂತೆ, ಕಾಲ ವಿಶೇಷದಲ್ಲಿ ಉಲ್ಲಾಸಗೊಳ್ಳುವುದೇ ಪ್ರಪಂಚದ ಉತ್ಪತ್ತಿಯೆಂಬ ವಾದವೂ,

ಚೀಲದೊಳಗಿನ ದ್ರವ್ಯವನ್ನು ಹೊರಗೆಡಹವುದರಂತೆ ಪ್ರಪಂಚಸೃಷ್ಟಿ—ಎಂಬ ವಿಸೃಷ್ಟಿವಾದವೂ,

ಸನ್ಮಾತ್ರ ಬ್ರಹ್ಮವೇ ಪ್ರಪಂಚಾಕಾರದಿಂದ ಪರಿಣತವಾಗಿದೆಯೆಂಬ ವಿಕೃತಿವಾದವೂ

ಕೆಲವು ಸಮಯದಲ್ಲಿ "ಅಗ್ನೇರಾಪಃ"—(ಅಗ್ನಿಯಿಂದ ನೀರು ಉತ್ಪನ್ನ) ಎಂದೂ, ಕೆಲವು ವೇಳೆ "ಅದ್ಭ್ಯೋಽಗ್ನಿಃ" (ನೀರಿನಿಂದ ಬೆಂಕಿ ಹುಟ್ಟಿತು)—ಎಂದೂ, ಹೇಳಿರುವು ದರಿಂದ, ಜಗತ್ಸೃಷ್ಟಿ ಕ್ರಮದಲ್ಲಿ ಇದು ಹೀಗೆಯೇ ಎಂಬ ಒಂದು ನಿಯಮವಿಲ್ಲವೆಂದೂ —ಇದೇ ಮೊದಲಾಗಿ ವೇದದ ವಾಕ್ಯಗಳಲ್ಲಿ ಏಕೈಕ ದೇಶ ಪರಿಗ್ರಹಣದಿಂದ ಆಯಾ ಅರ್ಥವೇ ಸ್ವರಸವಾದುದೆಂಬ ವ್ಯರ್ಥಪರಿಕಲ್ಪನೆಗಳುಳ್ಳ ವಿರುದ್ಧ ಸಿದ್ಧಾಂತಗಳೆಲ್ಲವೂ ಸರ್ವಶ್ರುತಿಗಳಿಗೂ ಐಕರಸ್ಯ ಕಾಣುವುದರಲ್ಲಿಯೇ ಪ್ರಣಯವುಳ್ಳ ಸಿದ್ಧಾಂತಿಗಳಿಂದ ನಿರಸನೀಯಗಳೆಂದು ತಿಳಿಯತಕ್ಕದ್ದು.

## 7. ಇತರ ವ್ಯಪದೇಶಾಧಿಕರಣ

ಸೂತ್ರ—**ಇತರ ವ್ಯಪದೇಶಾದ್ಧಿತಾಕರಣಾದಿ ದೋಷಪ್ರಸಕ್ತಿಃ**

### ಅಧಿಕರಣ ಸಂಗತಿ

ಹಿಂದೆ ಹೇಳಿರುವಂತೆ ಜಗತ್ತು ಅನನ್ಯವೆಂದಲ್ಲಿ, ಜೀವನಿಗೂ ಬ್ರಹ್ಮಭಾವವನ್ನು ಉಪಪಾದಿಸಿದಹಾಗಾಯಿತು. ಅಗ್ಗ, ಸಾರ್ವಜ್ಞ್ಯ—ಸತ್ಯಸಂಕಲ್ಪತ್ವಾದಿಯುತವಾದ ಬ್ರಹ್ಮ ತನಗೆ ಹಿತಕರವಾದ ಜಗತ್ತನ್ನು ನಿರ್ಮಿಸದೆ, ಆಧ್ಯಾತ್ಮಿಕಾಧಿದೈವಿಕಾಧಿಭೌತಿಕಾನಂತ ದುಃಖಾಕರವಾದ ಜಗತ್ತನ್ನು ಸೃಷ್ಟಿಸಿರುವುದೇ ಮುಂತಾದ ಅನೇಕ ದೋಷಗಳು ಬ್ರಹ್ಮಕ್ಕೇ ಪ್ರಸಂಗಿಸುವುವೆಂಬ ಆಶಂಕೆಯಿಂದ ಸಂಗತಿ.

### ಸೂತ್ರಾರ್ಥ

[ಇತರ ವ್ಯಪದೇಶಾತ್] = (ಪರಮಾತ್ಮನನ್ನು) ಇತರನಾದ ಜೀವನೆಂದು ಹೇಳು ವುದರಿಂದ, [ಹಿತಾಕರಣಾದಿ ದೋಷ ಪ್ರಸಕ್ತಿಃ] = (ಪರಮಾತ್ಮನು ಜಗತ್ತನ್ನು ಸೃಷ್ಟಿ ಸಿದರೆ) (ತನಗೆ) ಹಿತವಾದುದನ್ನು ಮಾಡಿಕೊಳ್ಳದಿರುವುದೂ ಅಹಿತವನ್ನು ಮಾಡಿ ಕೊಂಡಿರುವುದೂ ಮುಂತಾದ ದೋಷಗಳು ಸಂಭವಿಸುವುವು.

### ವಿವರಣೆ

"ತತ್ತ್ವಮಸಿ"—(ಆ ಬ್ರಹ್ಮವೇ ನೀನು ಆಗಿದ್ದೀಯೆ), "**ಅಯಮಾತ್ಮಾಬ್ರಹ್ಮ**" —(ಈ ಜೀವಾತ್ಮ ಬ್ರಹ್ಮಸ್ವರೂಪನು)—ಎಂದು ಹೇಳುವ ವಾಕ್ಯಗಳಿಂದ, ಈ ಜಗತ್ತಿ ನಲ್ಲಿ ಸೇರಿದ ಜೀವನಿಗೂ ಪರಬ್ರಹ್ಮಕ್ಕೂ ಭೇದವಿಲ್ಲವೆಂದು ಒಪ್ಪಿಕೊಂಡಲ್ಲಿ ಆ ಬ್ರಹ್ಮ ವನ್ನು ಜಗತ್ಕಾರಣವನ್ನಾಗಿ ಹೇಳಕೂಡದು. ಏಕೆಂದರೆ,—ಈ ಜಗತ್ತು ಜೀವರುಗಳಿಗೆ

ಬಹು ದುಃಖಜನಕವಾಗಿರುವುದರಿಂದ ಬ್ರಹ್ಮಕ್ಕೂ ದುಃಖಜನಕವೇ ಆಗಿದೆ. ತಾನು ಸರ್ವಜ್ಞನಾಗಿ ನೆನೆಸಿದಂತೆ ಮಾಡಬಲ್ಲ ಸತ್ಯಸಂಕಲ್ಪನೂ ಆಗಿದ್ದು, ತನಗೆ ಸುಖ ಜನಕವಾದ ಜಗತ್ತನ್ನು ಸೃಷ್ಟಿಸಬೇಕಾಗಿರುವಲ್ಲಿ, ಅದನ್ನು ಬಿಟ್ಟು ತನಗೆ ಅತ್ಯಂತ ದುಃಖಜನಕವಾದ ಜಗತ್ತನ್ನು ಸೃಷ್ಟಿಸುವುದು ಅನುಚಿತ—ಇತ್ಯಾದಿಯಾದ ಅನುಪಪತ್ತಿಗಳು ಉಂಟಾಗುವುದರಿಂದ, ಬ್ರಹ್ಮ ಜಗತ್ಕಾರಣವಲ್ಲ—ಎಂದು ಪೂರ್ವಪಕ್ಷ.

### ಸೂತ್ರ ೨—**ಅಧಿಕಂ ತು ಭೇದ ನಿರ್ದೇಶಾತ್**

**ಸೂತ್ರಾರ್ಥ**

[ಭೇದ ನಿರ್ದೇಶಾತ್] = ಜೀವಬ್ರಹ್ಮರುಗಳಿಗೆ (ವೇದದಲ್ಲಿ) ಭೇದ (ಉಂಟೆಂದು) ಹೇಳಿರುವುದರಿಂದ, [ಅಧಿಕಂ ತು] = ಜೀವನಿಗಿಂತ ಬ್ರಹ್ಮ ಬೇರೆಯಾದದ್ದೇ—

**ವಿವರಣೆ**

ಮೇಲೆ ಹೇಳಿದ ಪೂರ್ವಪಕ್ಷಕ್ಕೆ ಇಲ್ಲಿ ಸಮಾಧಾನವನ್ನು ಹೇಳುತ್ತಾರೆ:— "ಕರಣಾಧಿಪಾಧಿಪಃ,"— ("ಇಂದ್ರಿಯಗಳಿಗೆ ಯಜಮಾನನಾದ ಜೀವನಿಗೂ ಯಜಮಾನ") "ಪ್ರಧಾನ ಕ್ಷೇತ್ರಜ್ಞಪತಿರ್ಗುಣೇಶಃ", ("ಮೂಲಪ್ರಕೃತಿಗೂ ಜೀವನಿಗೂ ಸ್ವಾಮಿ")—ಇಂತಹವನು ಪರಮಾತ್ಮಾ—"ಯ ಆತ್ಮನಿತಿಷ್ಠನ್ ಆತ್ಮನೋಽನ್ತರಃ" —"ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ."—"ಜ್ಞಾಜ್ಞೌದ್ವಾವಜಾವೀಶನೀಶೌ" —ಇದೇ ಮೊದಲಾದ ವಾಕ್ಯಗಳಿಂದ ಜೀವನಿಗಿಂತ ಪರಬ್ರಹ್ಮ ಬೇರೆಯೆಂದು ಹೇಳುವುದರಿಂದ, ಜೀವಬ್ರಹ್ಮರೊಂದೆಂಬುದಿಲ್ಲ. ಹಿಂದೆ ಜೀವ ಬ್ರಹ್ಮರಿಗೆ ಭೇದವಿಲ್ಲವೆಂದದ್ದು ಜೀವನು ಬ್ರಹ್ಮಕ್ಕೆ ಶರೀರವಾದುದರಿಂದ, ಇವನು ಚೇತನನೆಂದಿರುವ ಕಡೆ, ಕಣ್ಣಿಗೆ ಕಾಣುವ ಜಡವಾದ ಶರೀರವನ್ನು ತೋರಿಸಿ, ಅದನ್ನು ಚೇತನವನ್ನಾಗಿ ಹೇಳಿದರೆ, ಈ ಶರೀರವನ್ನುಳ್ಳವನು ಚೇತನನೆಂದು ಅರ್ಥವಾಗಿ ಆ ಶರೀರಕ್ಕೂ ಚೇತನನಿಗೂ ಅಭೇದವಾದ ವ್ಯವಹಾರವುಂಟಾಗುವಂತೆ, ಇಲ್ಲಿಯೂ ಜೀವನನ್ನು ಶರೀರವನ್ನಾಗಿಯುಳ್ಳದ್ದು ಬ್ರಹ್ಮ—ಎಂದು ಅರ್ಥವಾಗಿ ಅವೆರಡೂ ಅಭೇದವಾಗಿ ವ್ಯವಹರಿಸಲ್ಪಡುವುದು. ಆದ್ದರಿಂದ, ಅದರಲ್ಲಿ ಒಂದೂ ಅನುಪಪತ್ತಿಯಿಲ್ಲವಾದ್ದರಿಂದ, ಬ್ರಹ್ಮ ಜಗತ್ತಿಗೆ ಕಾರಣವಾಗಬಹುದೆಂಬುದು ಸಿದ್ಧಾನ್ತ.

### ಸೂತ್ರ ೩—**ಅಶ್ಮಾದಿವಚ್ಚ ತದನುಪಪತ್ತಿಃ**

**ಸೂತ್ರಾರ್ಥ**

[ಅಶ್ಮಾದಿವತ್,ಚ] = ಕಲ್ಲು ಮುಂತಾದುವುಗಳಿಗೆ ಹೇಗೋ ಹಾಗೆ. [ತದನುಪಪತ್ತಿಃ] = ಜೀವನಿಗೂ ಬ್ರಹ್ಮದೊಂದಿಗೆ ಅಭೇದ ಸಂಭವಿಸದು.

**ವಿವರಣೆ**

ಜೀವ—ಬ್ರಹ್ಮರುಗಳಿಗೆ ಅಭೇದ ಕೂಡದೆಂಬುದರಲ್ಲಿ ಯುಕ್ತಿಯೂ ಉಂಟೆನ್ನುತ್ತಾರೆ. ಅದೇನೆಂದರೆ, ಜಡವಾದ ಶಿಲಾಕಾಷ್ಠಾದಿಗಳು ಸ್ವಯಂ ಪ್ರಕಾಶವಾದ ಬ್ರಹ್ಮಸ್ವರೂಪ ಹೇಗೆ ಆಗವೋ, ಹಾಗೆಯೇ ದುಃಖಿಯಾದ ಜೀವನಿಗೂ ಆನಂದರೂಪಿಯಾದ ಬ್ರಹ್ಮಕ್ಕೂ ಕೂಡ ಅಭೇದ ಸಂಭವಿಸದು.

## ೮. ಉಪಸಂಹಾರದರ್ಶನಾಧಿಕರಣಂ

### ಸೂತ್ರ—ಉಪಸಂಹಾರದರ್ಶನಾನ್ನೇತಿಚೇನ್ನಕ್ಷೀರವದ್ಧಿ

### ಆಕ್ಷೇಪ ಸಂಗತಿ

ಸರ್ವಜ್ಞವೂ ಸತ್ಯ ಸಂಕಲ್ಪವೂ ಆದ ಪರಬ್ರಹ್ಮಕ್ಕೆ ಸ್ಥೂಲ ಸೂಕ್ಷ್ಮಾವಸ್ಥ ಸರ್ವ ಚೇತನಾಚೇತನ ವಸ್ತುಶರೀರಿಯಾಗಿ ಸರ್ವ ಪ್ರಕಾರವಾದುದರಿಂದ. ಸರ್ವಾತ್ಮತ್ವ—ಸಕಲೇತರ ವಿಲಕ್ಷಣತ್ವಗಳು ಅವಿರುದ್ಧವೆಂದು ಸ್ಥಾಪಿತವಾಯಿತು. ಈಗ ಸತ್ಯಸಂಕಲ್ಪವಾದ ಪರಬ್ರಹ್ಮಕ್ಕೆ ಸಂಕಲ್ಪಮಾತ್ರದಿಂದ ವಿಚಿತ್ರ ಜಗತ್ತನ್ನು ಸೃಷ್ಟಿಸುವಿಕೆ ವಿರುದ್ಧವಲ್ಲವೆಂದು ಸ್ಥಾಪಿತವಾಗುತ್ತೆ.

### ಸೂತ್ರಾರ್ಥ

[ಉಪಸಂಹಾರದರ್ಶನಾತ್] =(ಸೃಷ್ಟಿಸುವವನಿಗೆ ಸಾಮಗ್ರಿಗಳ) ಸೇರುವಿಕೆ ಕಾಣುವುದರಿಂದ [ನ] = (ಅದಿಲ್ಲದ ಪರಬ್ರಹ್ಮ) ಜಗತ್ಕಾರಣವಾಗದು. [ಇತಿ ಚೇತ್] = ಎಂದಲ್ಲಿ (ನ) = ಈ ಶಂಕೆ ಕೂಡದು. [ಕ್ಷೀರವತ್ ಹಿ] = ಕ್ಷೀರದಂತೆ (ಜಗತ್ಕಾರಣ ಸಂಭವಿಸುವುದೆಂಬುದು) ಪ್ರಸಿದ್ಧವಲ್ಲವೆ ?

### ವಿವರಣೆ

ಲೋಕದಲ್ಲಿ ಒಬ್ಬನು ಒಂದು ಕಾರ್ಯ ಮಾಡುವಾಗ ಅದಕ್ಕೆ ಆವಶ್ಯಕವಾದ ಅನೇಕ ಸಾಮಗ್ರಿಗಳನ್ನು ಸೇರಿಸಿಟ್ಟುಕೊಂಡು ಅದನ್ನು ಮಾಡುವನು. ಅದರ ಹಾಗೆಯೇ ಪರಮಾತ್ಮನೂ ಜಗತ್ತನ್ನು ಸೃಷ್ಟಿಸುವಾಗ ಅನೇಕ ಸಾಮಗ್ರಿಗಳನ್ನುಳ್ಳವನಾಗಿಯೇ ಸೃಷ್ಟಿಸಬೇಕು. "ಸ ದೇವ ಸೋಮ್ಯ"—ಎಂಬ ಶ್ರುತಿಯಲ್ಲಿ ಜಗತ್ಸೃಷ್ಟಿಗೆ ಮುಂಚೆ ಪರಮಾತ್ಮನು ಒಂದು ಉಪಕರಣವೂ ಇಲ್ಲದವನಾಗಿದ್ದನೆಂದು ಹೇಳಿದೆಯಾದ್ದರಿಂದ ಉಪಕರಣವಿಲ್ಲದ ಆ ಪರಮಾತ್ಮನಿಗೆ ಜಗತ್ಕಾರಣತ್ವವು ಕೂಡದೆಂದು ಪೂರ್ವಪಕ್ಷ.

ಕಾರ್ಯವನ್ನು ಮಾಡುವಾಗ ಅನೇಕ ಸಾಮಗ್ರಿಗಳು ಬೇಕೆಂಬ ನಿಯಮವಿಲ್ಲ. ಅದು ಹೇಗೆಂದರೆ—ಹಾಲು ಮೊಸರಾಗುವಾಗ ಯಾವ ಸಾಮಗ್ರಿಯೂ ಇಲ್ಲದೆಯೇ ತಾನೇ ಮೊಸರಾಗುವುದು. ಅದರ ಹಾಗೆಯೇ ಪರಮಾತ್ಮನೂ ಸಾಮಗ್ರಿ ಶೂನ್ಯನಾಗಿ ಜಗತ್ತನ್ನು ಸೃಷ್ಟಿಸಬಹುದೆಂದು ಸಿದ್ಧಾನ್ತ.

### ಸೂತ್ರ ೨—ದೇವಾದಿವದಪಿ ಲೋಕೇ

### ಸೂತ್ರಾರ್ಥ

[ಲೋಕೇ] = (ತಮ್ಮತಮ್ಮ) ಲೋಕದಲ್ಲಿ [ದೇವಾದಿವತ್,ಅಪಿ] = (ಇಂದ್ರಾದಿ) ದೇವತೆಗಳು (ತಮ್ಮ ಸಂಕಲ್ಪದಿಂದಲೇ ತಮಗೆ ಬೇಕಾದ ಪದಾರ್ಥಗಳನ್ನು ಸಾಮಗ್ರಿ ಶೂನ್ಯರಾಗಿಯೇ ಸೃಷ್ಟಿಸುವುದು) ಹೇಗೋ ಹಾಗೆ. (ಸಾಮಗ್ರೀ ಶೂನ್ಯನಾದ ಪರಮಾತ್ಮನೂ ಸಂಕಲ್ಪದಿಂದಲೇ ಜಗತ್ತನ್ನು ಸೃಷ್ಟಿಸಬಹುದು).

[ದೇವಾದಿಗಳ ದೃಷ್ಟಾಂತ—ವೈದಿಕ ದೃಷ್ಟಾಂತವಾಗಿ ಇಲ್ಲಿ ಕೊಡಲ್ಪಟ್ಟಿದೆ. ದೇವಾದಿಗಳ ಶಕ್ತಿ ವೇದದಿಂದ ತಿಳಿಯಲ್ಪಡತಕ್ಕದ್ದು. ಹಾಗೆಯೇ ಭಗವಂತನ ಶಕ್ತಿ

ಯನ್ನೂ ವೇದದಿಂದಲೇ ತಿಳಿಯಬೇಕಾಗಿದೆ. ಸಂಕಲ್ಪಮಾತ್ರದಿಂದ ನಡೆಸುವ ಸೃಷ್ಟಿಯನ್ನೇ ನಾವು ಸುಖವಾಗಿ ಗ್ರಹಿಸುವುದಕ್ಕೋಸ್ಕರ ಈ ವೈದಿಕ ದೃಷ್ಟಾಂತವನ್ನೂ ಅನುಗ್ರಹಿಸಿದ್ದಾರೆ.]

## 9. ಕೃತ್ಸ್ನಪ್ರಸಕ್ತ್ಯಧಿಕರಣ

### ಸೂತ್ರ—**ಕೃತ್ಸ್ನಪ್ರಸಕ್ತಿರ್ನಿರವಯವತ್ವಶಬ್ದಕೋಪೋ ವಾ**

### ಪ್ರತ್ಯುದಾಹೃತಿ ಸಂಗತಿ

ಕ್ಷೀರೋದಕಾದಿಕಂ ಸಾಂಶಂ ನಿರಂಶಂ ಬ್ರಹ್ಮಸಂಮತಂ ।
ಕೃತ್ಸ್ನಪ್ರಸಕ್ತ್ಯಧಿಕೃತೌ ಸಂಗತಿಃ ಪ್ರತ್ಯುದಾಹೃತಿಃ ।।—

ಮೇಲೆ ದೃಷ್ಟಾಂತವಾಗಿ ಉಪನ್ಯಸ್ತವಾದ ಕ್ಷೀರ—ಜಲ ಮುಂತಾದುವು ಸಾವಯವ. (ಅವಯವವುಳ್ಳವು) ಹಾಗೆಯೇ ದಾರ್ಷ್ಟಾಂತಿಕ ಬ್ರಹ್ಮವೂ ಸಾವಯವವೇ ಆಗಿರಬೇಕು. ನಿರವಯವವೆಂದಲ್ಲಿ ಕೃತ್ಸ್ನಪ್ರಸಕ್ತಿಯಾಗಬೇಕಾಗುವುದು—ಎಂಬ ಶಂಕೆಯಿಂದ ಸಂಗತಿ.

### ವಿಷಯವಾಕ್ಯ

"ಸ ದೇವ ಸೋಮ್ಯೇದಮಗ್ರ ಆಸೀತ್," "ಇದಂವಾ ಅಗ್ರೇ ನೈವಕಿಂಚನಾಸೀತ್" —" ಆತ್ಮಾ ವಾ ಇದ ಮೇಕ ಏವಾಗ್ರ ಆಸೀತ್ "—ಇತ್ಯಾದಿ.

### ಸೂತ್ರಾರ್ಥ

[ಕೃತ್ಸ್ನಪ್ರಸಕ್ತಿಃ] = ನಿರವಯವವಾದ (ಬ್ರಹ್ಮದ) ಸಂಪೂರ್ಣ ಸ್ವರೂಪವೂ ಜಗದ್ರೂಪವಾಗಿ ಉಪಯೋಗಿಸಲ್ಪಡಬೇಕಾಗಿಬರುವುದು. [ನಿರವಯವತ್ವ ಶಬ್ದ ಕೋಪಃ ವಾ] = (ಇದಕ್ಕಾಗಿ ಬ್ರಹ್ಮ ಸಾವಯವವೆಂದಲ್ಲಿ) ಬ್ರಹ್ಮ ನಿರವಯವ ಎಂಬ ಶಬ್ದ ಬಾಧಿತವಾಗುವುದು.

### ವಿವರಣೆ

ಬ್ರಹ್ಮ ನಿರವಯವವಾದ್ದರಿಂದ ಅವಯವರೂಪ ಅಂಶವಿಲ್ಲದುದರಿಂದ, ಜಗತ್ತಾಗಿ ಪರಿಣಮಿಸುವಾಗ, ಈ ಅಂಶ ಜಗದ್ರೂಪವಾಗಿ ಪರಿಣಮಿಸಿತು. ಮಿಕ್ಕ ಅಂಶ ನಿತ್ಯವಿಭೂತಿಯಲ್ಲಿದೆಯೆಂದು ಹೇಳಲಾಗದು. ಸಂಪೂರ್ಣಸ್ವರೂಪವೂ ಜಗದ್ರೂಪವಾಗಿ ಪರಿಣಮಿಸಿಬಿಟ್ಟಿತು ಎನ್ನಬೇಕು. ಆದರೆ, ನಿತ್ಯ ವಿಭೂತಿಯಲ್ಲಿ ಬ್ರಹ್ಮ ವಿಲ್ಲದೆ ಹೋಗಬೇಕಾಗುವುದು. ಈ ಅನುಪಪತ್ತಿಗಾಗಿ ಬ್ರಹ್ಮ ಸಾವಯವವೆಂದು ಹೇಳಿ, ಅದರ ಸ್ವಲ್ಪ ಅಂಶ ಜಗತ್ತಾಗಿ ಪರಿಣಮಿಸಿ ಮಿಕ್ಕ ಅಂಶ ನಿತ್ಯ ವಿಭೂತಿಯಲ್ಲಿದೆಯೆಂದಲ್ಲಿ ಬ್ರಹ್ಮ ನಿರವಯವವೆಂದು ಹೇಳುವ ಶ್ರುತಿಗಳು ಅನ್ವಯಿಸಲಾರವು. ಆದ್ದರಿಂದ ಬ್ರಹ್ಮ ಜಗತ್ತಿಗೆ ಕಾರಣವಾಗದು—ಎಂದು ಪೂರ್ವಪಕ್ಷ.

### ಸೂತ್ರ ೨—**ಶ್ರುತೇಸ್ತು ಶಬ್ದಮೂಲತ್ವಾತ್**

### ಸೂತ್ರಾರ್ಥ

[ಶ್ರುತೇಃ] = (ಈ ವಿಷಯದಲ್ಲಿ) ವೇದವೇ ಪ್ರಮಾಣವಾದ್ದರಿಂದ (ಈ ಶಂಕೆಗೆ ಅವಕಾಶವಿಲ್ಲ) [ಶಬ್ದ ಮೂಲತ್ವಾತ್] = ವೇದವಾಕ್ಯವೇ (ಈಶ್ವರನಿರುವುದಕ್ಕೆ) ಪ್ರಮಾಣ

ವಾದ್ದರಿಂದ, (ಆ ಈಶ್ವರನು ಲೋಕ ವಿಜಾತೀಯನಾದ್ದರಿಂದ ನಿರವಯವನಾದ ಅವನು ಜಗತ್ಕಾರಣವಾಗಬಹುದು.

**ವಿವರಣೆ**

ಮೇಲ್ಕಂಡ ಪೂರ್ವಪಕ್ಷಕ್ಕೆ ಸಮಾಧಾನ;—ಲೋಕದೃಷ್ಟಾಂತದಿಂದ ಹೀಗೆ ಶಂಕಿಸ ಕೂಡದು. ಬ್ರಹ್ಮವುಂಟೆಂಬುದಕ್ಕೆ ವೇದವೇ ಪ್ರಮಾಣ. ಇತರ ಪ್ರಮಾಣವಿಲ್ಲ. ಆದ್ದರಿಂದ ಅದು ಲೋಕವಿಜಾತೀಯ. ಲೋಕದಲ್ಲಿ ನಿರವಯವ ವಸ್ತುವಿನ ವಿಷಯವಾಗಿ ಉಂಟಾಗ ಬೇಕಾದ ಶಂಕೆಯನ್ನು ಲೋಕ ವಿಜಾತೀಯವಾದ ಬ್ರಹ್ಮದ ವಿಷಯದಲ್ಲಿ ಮಾಡಕೂಡದು. ಇದು ನಿರವಯವವಾಗಿದ್ದಾಗ್ಯೂ ಜಗದ್ರೂಪವಾಗಿ ಪರಿಣಮಿಸುವುದೆನ್ನುವುದರಲ್ಲಿಯೂ ವೇದವೇ ಪ್ರಮಾಣವಾದ್ದರಿಂದ, ಬ್ರಹ್ಮನನ್ನು ಒಪ್ಪಿಕೊಂಡಂತೆಯೇ ಇದನ್ನೂ ಒಪ್ಪಿಕೊಳ್ಳ ಬೇಕು. ಆದ್ದರಿಂದ, ಬ್ರಹ್ಮ ಜಗತ್ಕಾರಣವಾಗದೆಂಬ ಶಂಕೆಯಿಲ್ಲ—ಎಂದು ಸಿದ್ಧಾಂತ.

ಸೂತ್ರ ೩—**ಆತ್ಮನಿ ಚೈವಂ ವಿಚಿತ್ರಾಶ್ಚ ಹಿ**

**ಸೂತ್ರಾರ್ಥ**

[ಆತ್ಮನಿಚ] = ಜೀವಾತ್ಮನಲ್ಲಿಯೂ [ಏವಂ] =(ವಿಜಾತೀಯವಾದ್ದರಿಂದ) ಅಚೇತನವಾದ ಧರ್ಮಗಳು (ಜಡತ್ವಾದಿಗಳು) ಪ್ರಸಂಗಿಸುವುದಿಲ್ಲ. [ವಿಚಿತ್ರಾಃಚ ಹಿ] =(ಅಚೇತನಗಳಾದ ಅಗ್ನ್ಯಾದಿಗಳಲ್ಲಿಯೂ) ವಿಚಿತ್ರ ಶಕ್ತಿಗಳು ಕಾಣಿಸುವುದಲ್ಲವೇ !

**ವಿವರಣೆ**

ಜೀವನಲ್ಲಿ ಪ್ರಕೃತಿಧರ್ಮವೇಕೆ ಸಂಭವಿಸದೆಂದಲ್ಲಿ, ಪ್ರಕೃತಿಗಿಂತಲೂ ಜೀವ ವಿಜಾತೀಯನಾದ್ದರಿಂದ—ಎನ್ನಬೇಕು. ಹಾಗೆಯೇ ಈಶ್ವರನೂ ವಿಜಾತೀಯನಾದ್ದರಿಂದ ನೀವು ಹೇಳುವ ಶಂಕೆಗಳಿಗೆ ಅವಕಾಶವಿಲ್ಲ. ಅಚೇತನಗಳಾದ ನೀರು, ಅಗ್ನಿ ಮುಂತಾದುವೂ ಪರಸ್ಪರ ವಿಜಾತೀಯವಾದ ಶೈತ್ಯ, ಉಷ್ಣ ಮುಂತಾದ ಗುಣಗಳುಳ್ಳವುಗಳಾಗಿ ಕಾಣಿಸು ವುವು. ಅದರಂತೆಯೇ ವಿಜಾತೀಯನಾದ ಈಶ್ವರನಲ್ಲಿಯೂ ವಿಜಾತೀಯ ಶಕ್ತಿಗಳು ಸಾವಿರಗಟ್ಲೆಯಾಗಿ ಉಂಟಾಗಬಹುದೆಂಬುದಕ್ಕೆ "ನಿರ್ಗುಣಸ್ಯಾಪ್ರಮೇಯಸ್ಯ ಶುದ್ಧ ಸ್ಯಾಪ್ಯಮಲಾತ್ಮನಃ । ಕಥಂ ಸರ್ಗಾದಿಕರ್ತೃತ್ವಂ ಬ್ರಹ್ಮಣೋಽಭ್ಯುಪಗಮ್ಯತೇ "—ಎಂಬ ಸಾಮಾನ್ಯ ದೃಷ್ಟಿಯ ಪರಿಚೋದನೆಗೆ,

"ಶಕ್ತಯಃ ಸರ್ವಭಾವಾನಾಂ ಅಚಿನ್ತ್ಯ ಜ್ಞಾನಗೋಚರಾಃ ।ಯತೋಽತೋ ಬ್ರಹ್ಮಣಸ್ತಾಸ್ತುಸರ್ಗಾದ್ಯಾಭಾವಶಕ್ತಯಃ ಭವನ್ತಿ ತಪತಾಂ ಶ್ರೇಷ್ಠಪಾವಕಸ್ಯ ಯಥೋಷ್ಣತಾ"—ಇತ್ಯಾದಿ ಶ್ರೀ ಪರಾಶರ ಶ್ರೀ ಸೂಕ್ತಿಯಲ್ಲಿ ಪರಿಹಾರವಿದೆ. ಶ್ರುತಿಯೂ

"ಕಿಂ ಸ್ವಿದ್ವನಂ ಕ ಉಸವೃಕ್ಷ ಆಸೀದ್ಯತೋ ದ್ಯಾವಾಪೃಥಿವೀನಿಷ್ಟತಕ್ಷುಃ । ಮನೀಷಿ ಣೋ ಮನಸಾ ಪೃಚ್ಛತೇ ದುತದ್ಯದಧ್ಯತಿಷ್ಠದ್ಭುವನಾನಿ ಧಾರಯನ್ । ಬ್ರಹ್ಮವನಂ ಬ್ರಹ್ಮಸ ವೃಕ್ಷ ಆಸೀದ್ಯತೋ ದ್ಯಾವಾ ಪೃಥಿವೀನಿಷ್ಟತಕ್ಷುಃ । ಮನೀಷಿಣೋ ಮನಸಾ ವಿಬ್ರವೀಮಿವಃ ಬ್ರಹ್ಮಾಧ್ಯತಿಷ್ಠದ್ಭುವನಾನಿ ಧಾರಯನ್ "—ಎಂದಿದೆ. ಸಾಮಾನ್ಯತಃ ದೃಷ್ಟವಾದ ಚೋದ್ಯವು ಸರ್ವವಸ್ತು ವಿಲಕ್ಷಣವಾದ ಪರಬ್ರಹ್ಮದಲ್ಲಿ ಬರುವುದಕ್ಕಿಲ್ಲ. ಅಲ್ಲದೆ,

### ಸೂತ್ರ ೪—ಸ್ವಪಕ್ಷದೋಷಾ ಚ್ಚ

**ಸೂತ್ರಾರ್ಥ**

ತಮ್ಮ (ಕಪಿಲರ )ಪಕ್ಷದಲ್ಲಿ ದೋಷವಿರುವುದರಿಂದಲೂ, (ಬ್ರಹ್ಮಕಾರಣವಾದವೇ ಒಪ್ಪಲು ಯೋಗ್ಯವಾದುದು)

**ವಿವರಣೆ**

ಪ್ರಧಾನ ಕಾರಣವಾದದ ಪಕ್ಷದಲ್ಲಿ ಪ್ರಧಾನವು ಲೌಕಿಕ ವಸ್ತು ಸಜಾತೀಯವಾದ್ದರಿಂದ ಲೌಕಿಕ ವಸ್ತುಗಳನ್ನು ದೃಷ್ಟಾನ್ತವಾಗಿಟ್ಟುಕೊಂಡು ನೀವು ಹೇಳುವ ದೋಷಗಳು ಪ್ರಧಾನಕ್ಕೇ ಸಂಭವಿಸುವುವು. ಆದ್ದರಿಂದ ಪ್ರಧಾನವನ್ನು ಕಾರಣವನ್ನಾಗಿ ಹೇಳಕೂಡದು. ಪ್ರಧಾನವೂ ನಿರವಯವವಷ್ಟೇ ಮಹದಾದಿ ವಿಚಿತ್ರಜಗತ್ತಿನ ಆರಂಭ ಅದರಿಂದ ಹೇಗಾಗುತ್ತೆ? ಪರಮಾಣು ಕಾರಣವಾದದಲ್ಲಿಯೂ ಅಣುಗಳೂ ನಿರಂಶ—ನಿಷ್ಪ್ರದೇಶಗಳು. ಪ್ರದೇಶ ಭೇದವಿಲ್ಲದೆ ಪರಸ್ಪರ ಸೇರಿದಾಗ್ಲೂ ಸ್ಥೂಲ ಕಾರ್ಯಾರಂಭ ಅವುಗಳಿಂದಾಗದು—ಇತ್ಯಾದಿ ದೋಷಗಳಿವೆ.

### ಸೂತ್ರ ೫—ಸರ್ವೋಪೇತಾ ಚ ತದ್ದರ್ಶನಾತ್

**ಸೂತ್ರಾರ್ಥ**

[ತದ್ದರ್ಶನಾತ್] = (ಈಶ್ವರನು ಸರ್ವಶಕ್ತಿಯುಳ್ಳವನೆಂದು ಪ್ರತಿಪಾದಿಸುವ) ವೇದ ಕಾಣುವುದರಿಂದಲೂ [ಸರ್ವೋಪೇತಾ ಚ] = ಈಶ್ವರ ಸರ್ವಶಕ್ತಿಯುಳ್ಳವನು.

**ವಿವರಣೆ**

ಸರ್ವೇಶ್ವರನೆಂಬ ಆ ಪರದೇವತೆಯು ಸರ್ವಶಕ್ತಿಯುಳ್ಳದೆಂಬುದು, ಸಕಲ ವಸ್ತು ವಿಜಾತೀಯವೆಂಬ ಮಾತ್ರದಿಂದಲೇ ಅಲ್ಲ, ಸಕಲೇತರ ವಿಜಾತೀಯವಾದ ಆ ಪರದೇವತೆಯು ಸರ್ವಶಕ್ತಿಯುಕ್ತವಾದುದೆಂದು, ಶ್ರುತಿಗಳೂ ಹೇಳುತ್ತವೆ;—" ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ " " ಅಪಹತ ಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ— "—ಎಂದು ಸಕಲೇತರ ವಿಸಜಾತೀಯತೆಯನ್ನು ಆ ಪರದೇವತೆಗೆ ಪ್ರತಿಪಾದಿಸಿ, " ಸತ್ಯಕಾಮಸ್ಸತ್ಯಸಂಕಲ್ಪಃ "—ಎಂದು ಸರ್ವಶಕ್ತಿಯೋಗವನ್ನೂ ಶ್ರುತಿಗಳು ಪ್ರತಿಪಾದಿಸಿವೆ. ಹಾಗೆಯೇ, " ಮನೋಮಯಃಪ್ರಾಣಶರೀರೋ ಭಾರೂಪಸ್ಸತ್ಯಸಂಕಲ್ಪ ಆಕಾಶಾತ್ಮಾ ಸರ್ವಕರ್ಮಾ ಸರ್ವಕಾಮಸ್ಸರ್ವಗನ್ಧಸ್ಸರ್ವರಸ ಸರ್ವಮಿದಮಭ್ಯಾತ್ತೋಽವಾಕ್ಯನಾದರಃ"—ಎಂದೂ ಶ್ರುತವಾಗಿದೆ.

### ಸೂತ್ರ ೬—ವಿಕರಣತ್ವಾನ್ನೇತಿಚೇತ್ತದುಕ್ತಂ

**ಸೂತ್ರಾರ್ಥ**

[ವಿಕರಣತ್ವಾತ್] = (ಈಶ್ವರನಿಗೆ) ಉಪಕರಣವಿಲ್ಲದುದರಿಂದ [ನ] = (ಅವನು) ಜಗತ್ಕಾರಣವಾಗಲಾರನು [ಇತಿ ಚೇತ್] = ಎಂದಲ್ಲಿ, [ತದುಕ್ತಂ] = ಇದಕ್ಕೆ ಸಮಾಧಾನ (ಹಿಂದೆಯೇ) ಹೇಳಲ್ಪಟ್ಟಿದೆ.

**ವಿವರಣೆ**

"ನ ತಸ್ಯಕಾರ್ಯಂ ಕರಣಂ ಚ ವಿದ್ಯತೇ"—ಎಂಬಂತೆ ಈಶ್ವರನಿಗೆ ಕರಣ, ಅಂದರೆ ಸಾಮಗ್ರಿಯು ಇಲ್ಲದಿರುವುದರಿಂದ ಸೃಷ್ಟಿಸಾಮರ್ಥ್ಯ ಅವನಿಗೆ ಇಲ್ಲವೆಂದಲ್ಲಿ, ಇದಕ್ಕೆ ಸಮಾಧಾನ, "ಶಬ್ದ ಮೂಲತ್ವಾತ್." "ವಿಚಿತ್ರಾಶ್ಚ ಹಿ"—ಎಂಬುದರಿಂದ ಹೇಳಲ್ಪಟ್ಟಿದೆ. ಶಬ್ದೈಕ ಪ್ರಮಾಣಕವೂ ಸಕಲೇತರ ವಿಲಕ್ಷಣವೂ ಆದ ಬ್ರಹ್ಮ ಆಯಾ ಕರಣವಿಲ್ಲದೆಯೇ ಆಯಾ ಕಾರ್ಯ ಸಮರ್ಥವೆಂದರ್ಥ. "ಪಶ್ಯತ್ಯಚಕ್ಷುಃ ಸಶೃಣೋತ್ಯಕರ್ಣಃ ಅಪಾಣಿಪಾದೋ ಜವನೋಗ್ರಹೀತಾ"—ಇತ್ಯಾದಿಯಾಗಿ ಶ್ರುತಿಗಳು ಹೇಳುತ್ತವೆ. [ಕರಣ = ಇಂದ್ರಿಯ] ಕಾರ್ಯಕ್ಕೆ ಇಲ್ಲಿ ಶರೀರವೆಂದೂ ಅರ್ಥ. "ಉಪಸಂಹಾರ ದರ್ಶನಾತ್..."—ಎಂಬ ಸೂತ್ರದಲ್ಲಿ ಪರಿಕರಗಳಿಲ್ಲದಿದ್ದಾಗ್ಯೂ, ಈಶ್ವರನಿಗೆ ಸಂಕಲ್ಪಮಾತ್ರದಿಂದ ಸೃಷ್ಟಿ ಉಪಪನ್ನವೆನ್ನಲಾಯಿತು. ಇಲ್ಲಿಯಾದರೋ—ದಂಡ ಚಕ್ರಾದಿ ಪರಿಕರ ನಿರಪೇಕ್ಷನಾಗಿದ್ದಾಗ್ಯೂ, ಕರಣ ಕಳೇಬರಗಳು ಬೇಕಲ್ಲವೆ?—ಎಂಬ ಶಂಕೆ ಪರಿಹೃತವಾಗಿದೆ.

ಈ ಅಧಿಕರಣದಿಂದ ಶರೀರಾತ್ಮ ಭಾವವನ್ನೊಪ್ಪದ ನ್ಯಾಯವಾದಿಗಳೂ ನಿರಸ್ತರಾಗಿದ್ದಾರೆ;—ಹೇಗೆಂದರೆ;— ಪರಮಾಣುದ್ವಯ ಸಂಯೋಗದಿಂದ ದ್ವ್ಯಣುಕಾದಿ ಸೃಷ್ಟಿಯೆಂಬುದು ವೈಶೇಷಿಕರ ಪ್ರಕ್ರಿಯೆ. ಜಗತ್ಕರ್ತೃವಾದ ಈಶ್ವರನು ತಾನು ವಿಭುವಾಗಿದ್ದುಕೊಂಡೇ ಪರಮಾಣುಗಳೊಡನೆ ಸೇರಿ ಅವಕ್ಕೆ ಅಧಿಷ್ಠಾತೃವಾಗಿದ್ದಾನೆಂದು ಅವರೆನ್ನುತ್ತಾರೆ. ಮಾಧ್ಯಮಿಕನು ಅವರ ವಾದವನ್ನು ನಿರಾಕರಿಸುತ್ತಾನೆ;—ಹೇಗೆಂದರೆ; ಪರಮಾಣುಗಳು ಪೂರ್ಣವಾಗಿ ಒಂದರೊಡನೊಂದು ಸೇರುತ್ತವೆಯೆ? ಅಥವಾ ಏಕದೇಶದಿಂದಲೇ? ಪೂರ್ಣವಾಗಿ—ಎಂದಲ್ಲಿ, ಪರಮಾಣುಗಳೆರಡೂ ಒಂದರಲ್ಲೊಂದು: ಮುಳುಗಿ ಹೋಗುವುದರಿಂದ, ಅಧಿಕ ಪರಿಮಾಣದ್ವ್ಯಣುಕಾದಿ ಕಾರ್ಯ ಆರಂಭವಾಗುವುದಿಲ್ಲ. ಏಕದೇಶದಿಂದ—ಎಂದಲ್ಲಿ, ಅವು ಸಾಂಶವೆಂದಾಗುತ್ತೆ. ಹೀಗೆಯೇ ಪರಮಾಣು ಮತ್ತು ಈಶ್ವರನಿಗೆ ಪರಸ್ಪರ ಪೂರ್ಣ ಸಂಯೋಗವೆಂದಲ್ಲಿ, ಅವರಿಬ್ಬರ ಪರಿಮಾಣತುಲ್ಯವೆಂದಾಗುತ್ತೆ. ಹಾಗೂ ಪರಮಾಣು ಈಶ್ವರನಂತೆ ವಿಭುವೋ ಅಥವಾ ಈಶ್ವರನೇ ಪರಮಾಣುವಿನಂತೆ ಅಣುವೋ ಆಗುವ ಪ್ರಸಂಗವೊದಗುತ್ತೆ. ಈಶ್ವರ—ಪರಮಾಣುಗಳು ಏಕದೇಶದಿಂದ ಪರಸ್ಪರ ಸಂಯುಕ್ತವಾಗುತ್ತವೆಯೆಂದಲ್ಲಿ ಅವು ಸಾಂಶವೆಂದಾಗುತ್ತೆ—ಆಗ್ಗೆ ನಿರವಯವ ದ್ರವ್ಯವೇ ಇಲ್ಲವೆಂದಾಗುತ್ತೆ. ಹೀಗೆ ಮಾಧ್ಯಮಿಕನು ತನ್ನ ಮೇಲೆ ಆರೋಪಿಸುವ ದೂಷಣವನ್ನು ವೈಶೇಷಿಕನು ವೇದಾಂತಿಯ ಮೇಲೆ ಹೇಳುವವನಾಗಿ ಮಾಧ್ಯಮಿಕ ಪಕ್ಷವಾದ ಶೂನ್ಯವಾದದಲ್ಲಿಯೇ ತಾನು ಮುಳುಗಿ ಹೋಗುತ್ತಾನೆ.

ಸಾಂಖ್ಯರ ಪ್ರಕ್ರಿಯೆಯಾದರೋ,—ಪ್ರಕೃತಿಯೇ ಪ್ರಪಂಚವನ್ನು ಸೃಷ್ಟಿಸುತ್ತದೆ, ಆ ಮೂಲಪ್ರಕೃತಿ ವಿಭು. ಅದು ಸತ್ತ್ವರಜಸ್ತಮೋ ಗುಣಗಳ ಸಂಘಾತರೂಪ. ಅದು ಸೃಷ್ಟಿಕಾರ್ಯವನ್ನು ಮಾಡುವಾಗ ತನ್ನ ಸತ್ತ್ವರಜಸ್ತಮೋಗುಣಗಳ ಪರಸ್ಪರ ಸಂಯೋಗದಿಂದ ಮಾಡುತ್ತದೆಯೇ? ಅಥವಾ ಒಂದೊಂದರೊಡನೆಯ ಸಂಯೋಗ

ದಿಂದ ಮಾಡುತ್ತದೆಯೋ?—ಅಲ್ಲದೆ ಸಂಯೋಗದಿಂದ—ಎಂದಲ್ಲಿ, ಸತ್ತ್ವರಜಸ್ತಮೋ ಗುಣಗಳು ಪೂರ್ಣವಾಗಿ ಪರಸ್ಪರ ಸಂಯೋಗ ಹೊಂದುತ್ತವೆಯೋ ? ಅಥವಾ ಏಕ ದೇಶದಿಂದಲೋ ?, ಪೂರ್ಣವಾಗಿಯಾದಲ್ಲಿ, ಸತ್ತ್ವ—ರಜಸ್—ತಮೋ—ಗುಣಗಳು ಮೂರೂ ಒಂದೇ ಕಾರ್ಯದಲ್ಲಿ ವಿನಿಯುಕ್ತವಾಗಿಬಿಡುವುದರಿಂದ, ಮತ್ತೊಂದು ಕಾರ್ಯವಾರಂಭಿಸಲು ಅವುಗಳಲ್ಲಿ ಏನೂ ಉಳಿದಿರುವುದಿಲ್ಲ. ಏಕದೇಶದಿಂದ ಮಾತ್ರ ಸಂಬಂಧ ಹೇಳುವಲ್ಲಿ, ಆಗ್ಗೆ ಆ ಸತ್ತ್ವ—ರಜ—ಸ್ತಮೋಗುಣಗಳು ಸಾಂಶವೆಂದಾಗುತ್ತೆ. ಆಗ ವಿಭುತ್ವ ಕಲ್ಪನೆ ಹೋದಂತೆಯೇ. ಒಂದೊಂದಾಗಿಯೇ ಸತ್ತ್ವರಜಸ್ತಮೋಗುಣ ಗಳು ಕಾರಣವೆಂದಲ್ಲಿ ಆಗ್ಗೆ ಕಾರ್ಯ ತ್ರಿಗುಣಾತ್ಮಕವೆಂದಾಗಲಾರದು. ಒಂದು ಕಾರ್ಯ ಸತ್ತ್ವದಿಂದಾಗುತ್ತೆ. ಮತ್ತೊಂದು ರಜಸ್ಸಿನಿಂದ, ಇನ್ನೊಂದು ತಮಸ್ಸಿನಿಂದ—ಇತ್ಯಾದಿ ದೂಷಣ ಕಲಾಪಗಳಿಗೆ ಸಾಂಖ್ಯ ಪ್ರಕ್ರಿಯೆ ತುತ್ತಾಗುತ್ತೆ. ಈ ದೋಷದಿಂದ ನ್ಯೂನ ಸೃಷ್ಟಿಗೆ ಅವಕಾಶವೇ ಇಲ್ಲದಂತಾಗುತ್ತೆ. ಈ ಸಾಂಖ್ಯಾದಿ ಪಕ್ಷಪ್ರತಿಕ್ಷೇಪದಿಂದಲೇ ಮಾಯಾವಾದಿಗಳೂ, ಭಾಸ್ಕರೀಯರೂ, ಯಾದವ ಪ್ರಕಾಶೀಯರೂ ಪ್ರತಿಕ್ಷಿಪ್ತರಾದಂ ತೆಯೇ ! ಇವರು ಕ್ರಮವಾಗಿ ಮಾಯೆ, ಉಪಾಧಿ ಶಕ್ತಿ ಎಂಬವುಗಳಿಂದ ಬ್ರಹ್ಮ ಉಪಹಿತವೆನ್ನುವವರು. ನಮ್ಮಮತವಾದರೋ ಶ್ರುತಿಗೆ ಅನುಕೂಲವಾಗಿರುವುದರಿಂದ ಅಕ್ಷತವಾಗಿದೆ.

## 10. ನಪ್ರಯೋಜನವತ್ತ್ವಾಧಿಕರಣ

### ಸೂತ್ರ—**ನ ಪ್ರಯೋಜನವತ್ತ್ವಾತ್**

**ಆಕ್ಷೇಪ ಸಂಗತಿ**

ಈಶ್ವರನು ಸೃಷ್ಟಿಗೆ ಮೊದಲು ಒಬ್ಬನೇ ಇದ್ದುಕೊಂಡು ಸಕಲೇತರ ವಿಲಕ್ಷಣನಾದ್ದ ರಿಂದ, ಸರ್ವಾರ್ಥಶಕ್ತಿಯುಳ್ಳವನಾಗಿ ತಾನೊಬ್ಬನೇ ವಿವಿಧ ವಿಚಿತ್ರ ಜಗತ್ತನ್ನು ಸೃಷ್ಟಿಸ ಬಲ್ಲವನಾದರೂ, ಜಗತ್ಸೃಷ್ಟಿಗೆ ಅವನು ಕಾರಣನಾಗಲಾರ—ಏಕೆಂದರೆ, ವಿಚಿತ್ರ ಸೃಷ್ಟಿಗೆ ಪ್ರಯೋಜನವಿರಬೇಕು. ಪರಿಪೂರ್ಣನಾದ ಈಶ್ವರನಿಗೆ ಅದರಿಂದೇನು ಪ್ರಯೋಜನ ವಾಗತಕ್ಕದ್ದಿದೆ ?—ಎಂಬ ಆಶಂಕೆಯಿಂದ ಸಂಗತಿ.

"ಪ್ರಯೋಜನಂ ವಿನಾನೇಶೋ ವಿಚಿತ್ರಂ ಸ್ರಷ್ಟುಮರ್ಹತಿ ।
ಇತಿ ಪ್ರಯೋಜನನಯೇ ಪ್ರೋಕ್ತಮಾಕ್ಷೇಪದೂಷಣಂ ॥"—ಎಂದಿದೆ.

**ಸೂತ್ರಾರ್ಥ**

(ಕಾರ್ಯವೆಲ್ಲವೂ) ಪ್ರಯೋಜನವುಳ್ಳದ್ದೇ ಆದ್ದರಿಂದ [ನ] = (ಪರಿಪೂರ್ಣನಾದ ಈಶ್ವರನಿಗೆ ಪ್ರಯೋಜನವಾಗತಕ್ಕದ್ದೇನೂ ಇಲ್ಲದುದರಿಂದ) ಈಶ್ವರನಿಗೆ ಜಗತ್ಕಾರಣತ್ವ ಕೂಡುವುದಿಲ್ಲ.

**ವಿವರಣೆ**

ಒಬ್ಬನು ಒಂದು ಕಾರ್ಯವನ್ನು ಮಾಡುವಾಗ ಒಂದು ಪ್ರಯೋಜನವನ್ನು ಉದ್ದೇಶಿಸಿಯೇ ಮಾಡುತ್ತಾನೆ. ಅಂದರೆ, ತಾನೊಂದು ಫಲವನ್ನು ಪಡೆಯ

ಬೇಕೆಂಬುದೋ ಅಥವಾ ಮತ್ತೊಬ್ಬನಿಗೆ ಒಳ್ಳೆಯದಾಗುವುದಕ್ಕಾಗಿಯಾದರೋ ಮಾಡುತ್ತಾನೆ. ಈಶ್ವರ ಅವಾಪ್ತಸಮಸ್ತಕಾಮ. ತನಗೊಂದು ಫಲದಲ್ಲಿಯೂ ಅಪೇಕ್ಷೆಯಿಲ್ಲವಾಗಿ, ತನ್ನ ಪ್ರಯೋಜನಕ್ಕಾಗಿ ಜಗತ್ತನ್ನು ಸೃಷ್ಟಿಸುತ್ತಾನೆನ್ನಕೂಡದು. ಈ ಸಂಸಾರ ಜೀವರಿಗೆ ನರಕವಾಸವೇ ಮುಂತಾದ ಅನೇಕ ದುಃಖಗಳಿಗೆ ಕಾರಣವಾದ್ದರಿಂದ, ಅವರಿಗೆ ಇದು ಒಳ್ಳೆಯದಕ್ಕಲ್ಲ. ಆದ್ದರಿಂದ ಅವರ ಪ್ರಯೋಜನಕ್ಕಾಗಿಯೆಂದೂ ಹೇಳಲಾಗದು. ಹೀಗೆ ಯಾವ ವಿಧವಾದ ಪ್ರಯೋಜನವೂ ಇಲ್ಲದ್ದರಿಂದ, ಈಶ್ವರನಿಗೆ ಜಗತ್ಸೃಷ್ಟಿ ಸಂಭವಿಸದೆಂದು ಪೂರ್ವಪಕ್ಷ.

### ಸೂತ್ರ ೨—**ಲೋಕವತ್ತು ಲೀಲಾ ಕೈವಲ್ಯಂ**

**ಸೂತ್ರಾರ್ಥ**

[ಲೀಲಾ ಕೈವಲ್ಯಂ] = ಕೇವಲ ಲೀಲೆಯೇ ಜಗತ್ಸೃಷ್ಟಿಗೆ ಪ್ರಯೋಜನ. (ಅದು ಹೇಗೆಂದರೆ) [ಲೋಕವತ್] = ಲೋಕದಲ್ಲಿ ರಾಜರುಗಳಿಗೆ ಚೆಂಡಾಡುವ ವ್ಯಾಪಾರ ಹೇಗೋ ಹಾಗೆ.

**ವಿವರಣೆ**

ಈ ಶಂಕೆಗೆ ಸಮಾಧಾನ ಹೇಳುತ್ತಾರೆ—ಲೋಕದಲ್ಲಿ ರಾಜನಾದವನು ಸಮಸ್ತ ಕಾಮಗಳಿಂದ ಪರಿಪೂರ್ಣನಾಗಿದ್ದಾಗ್ಗೂ, ವಿನೋದಕ್ಕಾಗಿ ಚೆಂಡಾಟ, ಬೇಟೆಯಾಡುವುದು ಮುಂತಾದ ವ್ಯಾಪಾರಗಳನ್ನು ಮಾಡುವಂತೆ, ಈ ಜಗತ್ಸೃಷ್ಟಿಯಲ್ಲಿ ಈಶ್ವರನಿಗೆ ಮತ್ತೊಂದು ಪ್ರಯೋಜನವಿಲ್ಲದಿದ್ದಾಗ್ಗೂ, ಲೀಲೆಗೋಸ್ಕರವೇ ಈ ಜಗತ್ತನ್ನು ಸೃಷ್ಟಿಸುತ್ತಾನೆಂದು ಸಿದ್ಧಾಂತ. ಸ್ವಸಂಕಲ್ಪಮಾತ್ರದಿಂದ ಕ್ಲೃಪ್ತವಾದ ಜಗಜ್ಜನ್ಮಸ್ಥಿತಿಧ್ವಂಸಾದಿಗಳಿಗೆ ಲೀಲೆಯೇ ಪ್ರಯೋಜನವೆಂದು ಭಾವ.

### ಸೂತ್ರ ೩—**ವೈಷಮ್ಯ ನೈರ್ಘೃಣ್ಯೇ ನ ಸಾಪೇಕ್ಷತ್ವಾತ್ತಥಾಹಿ ದರ್ಶಯತಿ**

**ಸೂತ್ರಾರ್ಥ**

[ವೈಷಮ್ಯನೈರ್ಘೃಣ್ಯೇ] = (ಈಶ್ವರ ಜಗತ್ಸ್ರಷ್ಟೃವಾದಲ್ಲಿ ಅವನಿಗೆ) ವೈಷಮ್ಯವೂ ನಿರ್ದಯತ್ವವೂ ಪ್ರಸಂಗಿಸುವುದು—(ಎಂದಲ್ಲಿ), [ನ] = ಅವು ಸಂಭವಿಸವು. (ಏಕೆಂದರೆ) [ಸಾಪೇಕ್ಷತ್ವಾತ್] = ಚೇತನರುಗಳ ಕರ್ಮಸಾಪೇಕ್ಷನಾಗಿರುವುದರಿಂದ [ತಥಾಹಿ] = ಹಾಗೆಯೇ [ದರ್ಶಯತಿ] = ವೇದವಾಕ್ಯ ತಿಳಿಸುವುದು.

**ವಿವರಣೆ**

ಈ ಜಗತ್ತಿಗೆ ಈಶ್ವರನು ಕರ್ತೃವೆಂದು ಒಪ್ಪಿಕೊಂಡಲ್ಲಿ, ಕೆಲವರನ್ನು ಜಾತಿ, ಗುಣ, ವಿದ್ಯೆ, ಸಂಪತ್ತು ಮುಂತಾದುವುಗಳಿಲ್ಲದವರನ್ನಾಗಿಯೂ, ಘೋರ ದುಃಖಿಗಳನ್ನಾಗಿಯೂ ಕೀಳಾಗಿಯೂ; ಹೀಗೆ ವಿಷಮವಾಗಿ ಸೃಷ್ಟಿಸಿರುವುದರಿಂದ, ಅವನಿಗೆ ವೈಷಮ್ಯ (ಪಕ್ಷಪಾತ) ಬರುವುದು. ಜೀವರುಗಳನ್ನು ಈ ದುಃಖಮಯವಾದ ಸಂಸಾರದಲ್ಲಿ ಸೃಷ್ಟಿಸುವುದರಿಂದ, ಅವನು ನಿರ್ದಯನೂ ಆಗುವನು. ಹೀಗೆ ಈ ಎರಡು ದೋಷಗಳೂ ಸಂಭವಿಸುವುದರಿಂದ, ಅವನಿಗೆ ಜಗತ್ಕಾರಣತ್ವ ಕೂಡದು ಎಂದು ಪೂರ್ವಪಕ್ಷ.

ಈಶ್ವರ ಜಗತ್ತನ್ನು ಸೃಷ್ಟಿಸುವಾಗ ಜನ್ಮಾಂತರದಲ್ಲಿ ಮಾಡಿದ, ಆಯಾ ಚೇತನರ ಪುಣ್ಯಪಾಪ ಕರ್ಮಗಳನ್ನು ನೋಡಿ ತದನುಗುಣವಾಗಿ ಪುಣ್ಯವಂತರನ್ನು ಉಚ್ಚರನ್ನಾಗಿಯೂ. (ಮೇಲಾಗಿಯೂ). ಪಾಪಿಗಳನ್ನು ಕೀಳಾದವರನ್ನಾಗಿಯೂ ಸೃಜಿಸುವನು. ಈ ಮೇಲ್ಮೆಯೂ ಕೀಳ್ಮೆಯೂ. ದುಃಖಾನುಭವವೂ, ಚೇತನರುಗಳ ಕರ್ಮಾನುಗುಣವಾದ್ದರಿಂದ, ಈಶ್ವರನಿಗೆ ಪಕ್ಷಪಾತವೂ, ನಿರ್ದಯತ್ವವೂ ಸಂಭವಿಸದು—ಎಂದು ಸಿದ್ಧಾಂತ. ವೇದದಲ್ಲಿಯೂ. "ಸಾಧುಕಾರೀ ಸಾಧುರ್ಭವತಿ, ಪಾಪಕಾರೀ ಪಾಪೋ ಭವತಿ."—(ಪುಣ್ಯಮಾಡಿದವನು ಪುಣ್ಯವಂತನಾಗಿ ಹುಟ್ಟುತ್ತಾನೆ, ಪಾಪ ಮಾಡಿದವನು ಪಾಪಿಯಾಗಿ ಹುಟ್ಟುತ್ತಾನೆ) ಎಂದು ಅವರವರುಗಳ ಕರ್ಮವೇ ಅವರವರ ಸುಖದುಃಖಗಳಿಗೆ ಅಸಾಧಾರಣ ಕಾರಣವೆಂದು.

"ನಿಮಿತ್ತಮಾತ್ರಮೇವಾಸೌ ಸೃಜ್ಯಾನಾಂ ಸರ್ಗಕರ್ಮಣಿ ।
ಪ್ರಧಾನ ಕಾರಣೀಭೂತಾ ಯತೋವೈಸೃಜ್ಯ ಶಕ್ತಯಃ" ।।—
"ನಿಮಿತ್ತಮಾತ್ರಂಮುಕ್ತ್ವೈವ ನಾನ್ಯತ್ಕಿಂ ಚಿದಪೇಕ್ಷತೇ ।
ನೀಯತೇ ತಪತಾಂ ಶ್ರೇಷ್ಠ ಸ್ವಶಕ್ತ್ಯಾವಸ್ತುವಸ್ತುತಾಂ" ।।—

ಇತ್ಯಾದಿಯಿಂದ ಹೇಳಿದೆ. 'ಸ್ವಶಕ್ತ್ಯಾ'=ಸ್ವಕರ್ಮದಿಂದಲೇ ದೇವಾದಿ ವಸ್ತುತಾ ಪ್ರಾಪ್ತಿಯೆಂದರ್ಥ. ಈಶ್ವರ "ನಿಮಿತ್ತಮಾತ್ರಂ"—ಎಂದರೆ ಅಪ್ರಧಾನ ಕಾರಣ. ಪ್ರಾಧಾನ್ಯವೆಂದರೆ ಅಸಾಧಾರಣ ಕಾರಣ. ಕ್ಷೇತ್ರ ಸಲಿಲಾದಿಗಳು ಸರ್ವಕ್ಕೂ ಸಾಧಾರಣ ಕಾರಣ. ಆಯಾ ಬೀಜದಲ್ಲಿಯ ಶಕ್ತಿವಿಶೇಷಗಳು ಅಂಕುರ ವಿಶೇಷೋತ್ಪತ್ತಿಗೆ ಅಸಾಧಾರಣ ಕಾರಣ. ಹಾಗೆಯೇ ಈಶ್ವರ ಸಾಧಾರಣ ಕಾರಣವಾದ್ದರಿಂದ. ನಿಮಿತ್ತಮಾತ್ರ. ಚೇತನರ ಕರ್ಮಗಳು ವಿಷಮ ಸೃಷ್ಟಿಗೆ ಅಸಾಧಾರಣ ಕಾರಣವಾದ್ದರಿಂದ ಅದಕ್ಕೆ ಪ್ರಾಧಾನ್ಯವೆಂದರ್ಥ.

## ಸೂತ್ರ ೪—**ನ ಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾದುಪಪದ್ಯತೇ ಚಾಪ್ಯುಪಲಭ್ಯತೇ ಚ**

### ಸೂತ್ರಾರ್ಥ

[ಅವಿಭಾಗಾತ್]=(ಸೃಷ್ಟಿಗೆ ಮುಂಚೆ) ಜೀವನೆಂಬ ವಿಭಾಗವಿಲ್ಲದ್ದರಿಂದ, [ಕರ್ಮ]=ಪುಣ್ಯಪಾಪರೂಪ ಕರ್ಮವೂ[ನ]= ಇಲ್ಲ. [ಇತಿಚೇತ್]=ಎಂದಲ್ಲಿ,[ನ]= ಹಾಗಿಲ್ಲ. (ಏಕೆಂದರೆ)[ಅನಾದಿತ್ವಾತ್]= (ಜೀವನೂ ಕರ್ಮವೂ) ಅನಾದಿಯಾದ್ದರಿಂದ [ಉಪಪದ್ಯತೇ,ಚ]=(ಜೀವನು ಅನಾದಿಯಾದಾಗ್ಯೂ ಸೃಷ್ಟಿಗೆ ಮುಂಚೆ, ವಿಭಾಗವಿಲ್ಲವೆಂಬುದೂ) ಉಪಪನ್ನವಾಗುವುದು. [ಉಪಪದ್ಯತೇಚ]=(ಜೀವ ಅನಾದಿಯೆಂಬುದು ಶ್ರುತಿ ಸ್ಮೃತಿಗಳಲ್ಲಿಯೂ) ಕಂಡು ಬರುತ್ತೆ.

### ವಿವರಣೆ

"ಸ ದೇವಸೋಮ್ಯೇದಮಗ್ರ ಆಸೀತ್"—ಎಂದು, ಈ ಜಗತ್ಸೃಷ್ಟಿಗೆ ಮುಂಚೆ ಚಿದಚಿತ್ತುಗಳೊಂದೂ ಇಲ್ಲ. ಪರಮಾತ್ಮನೊಬ್ಬನೇ ಇದ್ದನೆಂದಿರುವುದರಿಂದ, ಸೃಷ್ಟಿಗೆ

ಮುಂಚೆ ಜೀವನಿಲ್ಲ, ಅವನಿಲ್ಲದಿದ್ದಾಗ ಅವನ ಪುಣ್ಯಪಾಪರೂಪ ಕರ್ಮವೂ ಇಲ್ಲ. ಆದ್ದರಿಂದ, ಆ ಕರ್ಮದಿಂದ ವಿಷಮವಾಗಿ ಸೃಷ್ಟಿಸುತ್ತಾನೆಂದು ಹೇಳಕೂಡದು—ಎಂದು ಪೂರ್ವಪಕ್ಷ.

ಜೀವನನ್ನೂ ಅವನ ಕರ್ಮ ಪ್ರವಾಹವನ್ನೂ ಅನಾದಿಯೆಂದು ಒಪ್ಪದಿದ್ದಲ್ಲಿ, ಜೀವನು ಮುಂಚೆ ಮಾಡಿದ ಪುಣ್ಯ ಪಾಪಗಳನ್ನು ಈಗ ಅನುಭವಿಸುತ್ತಾನೆಯೆಂದೂ, ಈಗ ಮಾಡುತ್ತಿರುವ ಪುಣ್ಯಪಾಪಗಳನ್ನು ಅನುಭವಿಸುವವನಾಗಿಲ್ಲವೆಂದೂ ಇದೇ ಮುಂತಾದ ದೋಷಗಳು ಬರುವುವು. ಹಿಂದೆ ಮಾಡಿದುದನ್ನು ಈಗ ಅನುಭವಿಸಿದಲ್ಲಿ, ಎಲ್ಲರೂ ಸುಖಿಯಾಗಿಯೋ ಅಥವಾ ಎಲ್ಲರೂ ದುಃಖಿಯಾಗಿಯೋ ಆಗಬೇಕೇ ಹೊರತು, ಒಬ್ಬನು ಸುಖಿಯಾಗಿಯೂ ಒಬ್ಬ ದುಃಖಿಯಾಗಿಯೂ, ಆಗಕೂಡದು. ಈಗ ಮಾಡುವ ಕರ್ಮವನ್ನು ಅನುಭವಿಸದೆ ಹೋದಲ್ಲಿ. "ಅವಶ್ಯಮನುಭೋಕ್ತವ್ಯಂ" (ಮಾಡಿದ ಕರ್ಮವನ್ನು ಅನುಭವಿಸಿಯೇ ತೀರಬೇಕು)—ಎಂಬ ಶಾಸ್ತ್ರ ವ್ಯರ್ಥವಾಗಿ ಬಿಡುವುದು. ಆದ್ದರಿಂದ, ಜೀವನೂ, ಅವನ ಕರ್ಮವೂ ಅನಾದಿಯೆಂದೇ ಒಪ್ಪಿಕೊಳ್ಳ ಬೇಕು. "ಜ್ಞಾ ಜ್ಞೌ ದ್ವಾವಜಾವೀಶನೀಶೌ,"—(ಸರ್ವಜ್ಞನಾದ ಈಶ್ವರನೂ ಅಜ್ಞನಾದ ಜೀವನೂ. ಇವರಿಬ್ಬರೂ ಉತ್ಪತ್ತಿ ಶೂನ್ಯರು)—ಎಂದು ವೇದದಲ್ಲಿ ಅನೇಕ ಕಡೆಗಳಲ್ಲಿ ಹೇಳಿದೆ. ಜೀವನು ಅನಾದಿಯಾಗಿದ್ದಾಗ್ಯೂ, ಸೃಷ್ಟಿಗೆ ಮುಂಚೆ ದೇವಮನುಷ್ಯಾದಿ ನಾಮರೂಪಗಳೊಂದೂ ಇಲ್ಲದೆ ಸೂಕ್ಷ್ಮಾವಸ್ಥೆಯನ್ನು ಹೊಂದಿ, ಅವನು ಇಲ್ಲವೆನ್ನುವಂತೆಯೇ ಇದ್ದುದರಿಂದ ಈಶ್ವರನೊಬ್ಬನೇ ಇದ್ದಾನೆಂದು ಹೇಳಿದೆ. ಆದ್ದರಿಂದ ಆ ವಾಕ್ಯಕ್ಕೂ ವಿರೋಧವಿಲ್ಲವೆಂದು ಸಿದ್ಧಾಂತ.

ಸೂತ್ರ ೫—**ಸರ್ವಧರ್ಮೋಪಪತ್ತೇಶ್ಚ**

[ಈ ಸೂತ್ರ ಎಲ್ಲಾ ಅಧಿಕರಣಗಳಿಗೂ ಶೇಷಭೂತವಾದದ್ದು.]

**ಸೂತ್ರಾರ್ಥ**

(ಕಾರಣತ್ವೋಪಯೋಗಿಗಳಾದ) ಸಕಲ ಧರ್ಮಗಳೂ (ಈಶ್ವರನಲ್ಲಿ) ಉಪಪನ್ನವಾಗುವುದರಿಂದಲೂ, (ಬ್ರಹ್ಮವೇ ಕಾರಣವೆಂಬ ವಾದ ಉಪಪನ್ನ).

**ವಿವರಣೆ**

ಪರಮಾಣುಗಳೂ, ಪ್ರಧಾನವೂ, ಸೃಷ್ಟಿಗೆ ಉಪಯುಕ್ತವಾದ ಶಕ್ತಿಯಿಲ್ಲದವುಗಳಾದ್ದರಿಂದ ಜಗತ್ತಿಗೆ ಕಾರಣಗಳಾಗಲಾರವು. ಪರಮಾತ್ಮನು ಸಮಸ್ತ ಶಕ್ತಿಯುಳ್ಳವನಾದ್ದರಿಂದ, ಅವನೇ ಜಗತ್ತಿಗೆ ಕಾರಣವೆಂದು ಸಿದ್ಧಾಂತ.

## ಪಾದ 3. ಅಧಿಕರಣ 1 ರಚನಾನುಪಪತ್ತ್ಯಧಿಕರಣ

ಸೂತ್ರ—**ರಚನಾನುಪಪತ್ತೇಶ್ಚ ನಾನುಮಾನಂ ಪ್ರವೃತ್ತೇಶ್ಚ**

**ಪಾದಸಂಗತಿ**

೧) ಹಿಂದಿನ ಪಾದದಲ್ಲಿ ವೇದಾಂತ ವಾಕ್ಯಗಳಿಗೆ ಸ್ಮೃತಿ ನ್ಯಾಯಗಳಿಂದ ಬಾಧೆ ನಿರಸ್ತವಾದಲಾಗಿ, ಇಲ್ಲಿ, ಅದೇ ಪರಪಕ್ಷಗಳಿಗೆ ಶಾರೀರಕ ನ್ಯಾಯದಿಂದ ಬಾಧೆಯನ್ನು ಪ್ರತಿಪಾದಿಸಲಾಗುತ್ತೆ.

೨) ಅಥವಾ ಹಿಂದೆ, ಶಾರೀರಕ ಶಾಸ್ತ್ರಕ್ಕೆ ಪರಪಕ್ಷಗಳಿಂದ ಬಂದ ಬಾಧೆಯನ್ನು ಪರಿಹರಿಸಿಯಾಯಿತು. ಈಗ ಆ ಪರಪಕ್ಷಗಳಿಂದ ಅದೇ ಶಾಸ್ತ್ರಕ್ಕೆ ಬಂದ ಪ್ರತಿರೋಧವು ಪರಿಹರಿಸಲ್ಪಡುತ್ತೆ.

೩) ಅಥವಾ ಸ್ವಪಕ್ಷದಲ್ಲಿ ಪರೋದ್ಭಾವಿತವಾದ ದೋಷಗಳು ಪರಿಹೃತವಾದುವು. ಹೀಗೆ ಪರಪಕ್ಷವೂ ಉಪಪನ್ನವೆಂಬ ಸಂಶಯ ಪಾರ್ಶ್ವಸ್ಥರಿಗೆ ನಿವರ್ತಿಸಲೆಂದು ಪರನಿರಾಕರಣಾರಂಭವು ವಿಮರ್ಶಿಸಲ್ಪಡುತ್ತೆ. ಸ್ವಪಕ್ಷ ಸ್ಥಾಪನ—ಪರಪಕ್ಷ ನಿರಾಕರಣಗಳಿಂದ ಅರ್ಥ ನಿರ್ಣಯವಾಗತಕ್ಕದ್ದೆಂದು ತಜ್ಞರ ಅಭಿಪ್ರಾಯ. ಹಿಂದೆ ಬಾಧೆಯನ್ನು ಪರಿಹರಿಸಿಯಾಯಿತು. ಪಕ್ಷಾಂತರಗಳೂ ವೇದಾಂತಕ್ಕೆ ಸಮಾನವಾದುವೆಂಬ ಭ್ರಾಂತಿ ಸಿದ್ಧವಾದ ಪ್ರಕರಣ ಸಮತೆಯು ಈ ತರ್ಕಪಾದದಿಂದ ವಾರಿತವಾಗುವುದರಿಂದ ಈ ಪಾದಾರಂಭವೂ ಸಫಲವಾದುದು.

**ಅಧಿಕರಣ ಸಂಗತಿ**

ಹಿಂದಿನ ಅಧಿಕರಣದಲ್ಲಿ ಪ್ರಯೋಜನಾಭಾವದಿಂದ ಬ್ರಹ್ಮ ನಿಮಿತ್ತವೆಂಬುದರ ಬಗ್ಗೆ ಹೇಳಿದ ಅನುಪಪತ್ತಿ ಪರಿಹೃತವಾಯಿತು. ಈಗ ಪರಪಕ್ಷದಲ್ಲಿಯ ಅನುಪಪತ್ತಿ ಹೇಳಲ್ಪಡುತ್ತೆ.

**ಸೂತ್ರಾರ್ಥ**

[ರಚನಾನುಪಪತ್ತೇಃ,ಚ] = (ಪ್ರಧಾನಕ್ಕೆ) ಸೃಷ್ಟಿಸುವುದರಲ್ಲಿರುವ ಅನುಪಪತ್ತಿಯಿಂದಲೂ, [ಪ್ರವೃತ್ತೇಃ,ಚ] = (ಸೃಷ್ಟಿಯಲ್ಲಿ) ಪ್ರವೃತ್ತಿಯ (ಅನುಪಪತ್ತಿಯಿಂದಲೂ) [ಅನುಮಾನಂ] = ಮೂಲ ಪ್ರಕೃತಿ [ನ] = ಜಗತ್ಕಾರಣವಾಗದು.

**ವಿವರಣೆ**

ಈ ಪಾದದಲ್ಲಿ ಸ್ವಪಕ್ಷರಕ್ಷಣಕ್ಕಾಗಿ ಪರಪಕ್ಷಗಳಲ್ಲಿರುವ ದೋಷಗಳನ್ನು ಹೇಳುತ್ತಾರೆ. ಪ್ರಧಾನ ಜಗತ್ಕಾರಣವಾಗುವುದೆ? ಆಗದೆ?—ಎಂದು ಈ ಅಧಿಕರಣದಲ್ಲಿ ವಿಚಾರಿಸಲ್ಪಡುವುದು. ಜಗತ್ತು ಸುಖದುಃಖ ಮೋಹಾತ್ಮಕವಾಗಿದೆ. ಅದರಲ್ಲಿ ಸುಖ ಸತ್ತ್ವಗುಣದ ಕಾರ್ಯ, ದುಃಖ ರಜೋಗುಣದ ಕಾರ್ಯ, ಮೋಹ ತಮೋಗುಣದ ಕಾರ್ಯ—ಈ ಕಾರಣದಿಂದ ಜಗತ್ತೂ ಸತ್ತ್ವರಜಸ್ತಮೋಮಯವಾಗಿದೆ. ಈ ವಿಧವಾದ ಜಗತ್ತಿಗೆ, ಇದಕ್ಕೆ ಅನುರೂಪವಾದ ವಸ್ತುವೇ ಕಾರಣವಾಗಬೇಕು. ಮೃನ್ಮಯವಾದ ಘಟಾದಿಗಳಿಗೆ, ಅವಕ್ಕೆ ಅನುರೂಪವಾದ ಮೃತ್ಪಿಂಡವೇ ಕಾರಣವಾಗಿರುವಂತೆ, ಈ ಜಗತ್ತಿಗೂ ಇದಕ್ಕೆ ಅನುರೂಪವಾಗಿ ಸತ್ತ್ವರಜಸ್ತಮೋರೂಪವಾದ ಪ್ರಕೃತಿಯೇ ಕಾರಣವಾಗಬೇಕೆಂದು ಪೂರ್ವಪಕ್ಷ.

ಗೃಹ, ರಥ ಮುಂತಾದುವುಗಳ ರಚನೆಗೆ ಮರ ಕಾರಣವಾದಾಗ್ಯೂ ಅದು ಅಚೇತನವಾದ್ದರಿಂದ, ಒಬ್ಬ ಪುರುಷನ ಪ್ರಯತ್ನವಿಲ್ಲದೆ ತಾನೇ ಗೃಹಾದಿಗಳನ್ನು ರಚಿಸಲು ಸಮರ್ಥವಾಗದು. ಅದರಹಾಗೆಯೇ, ಪ್ರಧಾನ ಅಚೇತನವಾದ್ದರಿಂದ ಒಬ್ಬ ಪುರುಷನ ಅಪೇಕ್ಷೆಯಿಲ್ಲದೆ ಈ ವಿಚಿತ್ರವಾದ ಜಗತ್ತನ್ನು ಸೃಷ್ಟಿಸಲು ಸಮರ್ಥವಲ್ಲ. ಆದ್ದರಿಂದ ಪ್ರಕೃತಿ ಜಗತ್ಕಾರಣವಾಗದು—ಎಂದು ಸಿದ್ಧಾಂತ.

ಹಿಂದೆ ಈಕ್ಷತ್ಯಧಿಕರಣವಲ್ಲಿ ವೈದಿಕವಾಕ್ಯಗಳು ಪ್ರಧಾನ ಪ್ರತಿಪಾದಕಗಳಲ್ಲ ವೆಂದಿಷ್ಟು ಮಾತ್ರ ಹೇಳಲ್ಪಟ್ಟಿತು. ಇಲ್ಲಿ ಆ ಪ್ರಧಾನಕಾರಣವಾದ ಪಕ್ಷದ ಸ್ವರೂಪ ವನ್ನೇ ಪ್ರತಿಕ್ಷೇಪಿಸಲಾಗಿದೆಯಾದ್ದರಿಂದ. ಪೌನರುಕ್ತ್ಯ ಶಂಕೆಗೆ ಆಸ್ಪದವಿಲ್ಲ.

ಈ ಕಪಿಲ ಮತದಲ್ಲಿ ವೈದಿಕರಿಗೆ ಅಭಿಮತವಾದ ಸತ್ಕಾರ್ಯವಾದವನ್ನು ಹೇಳಿರುವುದರಿಂದ ಅದು ಸತ್ಪಕ್ಷದಲ್ಲಿಡಲು ಯೋಗ್ಯವೆಂಬ ಭ್ರಮೆ ಹೆಚ್ಚಾಗಿ ಉಂಟಾಗ ಬಹುದಾದ್ದರಿಂದ ಮೊದಲು ಈ ಕಾಪಿಲಮತದ ನಿರಾಸವನ್ನೇ ಆರಂಭಿಸಿದ್ದಾರೆ.

"ಮೂಲ ಪ್ರಕೃತಿ ರವಿಕೃತಿರ್ಮಹದಾದ್ಯಾಃ ಪ್ರಕೃತಿವಿಕೃತಯಸ್ಸಪ್ತ ।
ಷೋಡಶಕಶ್ಚ ವಿಕಾರೋನ ಪ್ರಕೃತಿರ್ನವಿಕೃತಿಃ ಪುರುಷಃ ॥";—ಎಂಬುದು ಸಾಂಖ್ಯದರ್ಶನದಲ್ಲಿಯ ತತ್ತ್ವ ಸಂಗ್ರಹ.

ಮೂಲ ಪ್ರಕೃತಿಯೆಂಬುದು ಸತ್ತ್ವ—ರಜಸ್—ತಮಸ್ಸುಗಳ ಸಾಮ್ಯರೂಪವೂ, ಸ್ವಯಂ ಅಚೇತನವೂ ಅನೇಕ ಚೇತನರ ಭೋಗ ಮತ್ತು ಅಪವರ್ಗಕ್ಕೋಸ್ಕರ ವಿರತಕ್ಕದ್ದೂ ನಿತ್ಯವೂ. ಸರ್ವಗತವೂ, ಸತತ ವಿಕಾರ ಹೊಂದುವುದೂ ಆದ ಪ್ರಕೃತಿ. ಇದು ಇತರ ವಿಕೃತಿಯೂ ಅಲ್ಲ—ತಾನೇ ಪರಮಕಾರಣ. ಮಹದಾದಿಗಳು ಅದರ ವಿಕಾರಗಳಾಗಿದ್ದು ಮಿಕ್ಕವಕ್ಕೆ ಪ್ರಕೃತಿಯೂ ಆಗಿವೆ. ಈ ಮಹದಾದಿಗಳು ಏಳು—ಮಹಾನ್. ಅಹಂಕಾರ, ಶಬ್ದತನ್ಮಾತ್ರ. ಸ್ಪರ್ಶತನ್ಮಾತ್ರ, ರೂಪತನ್ಮಾತ್ರ, ರಸತನ್ಮಾತ್ರ, ಗಂಧತನ್ಮಾತ್ರಗಳೇ ಆ ಏಳು. ಅದರಲ್ಲಿ ಅಹಂಕಾರವೆಂಬುದು ವೈಕಾರಿಕ, ತೈಜಸ. ಭೂತಾದಿ—ಎಂದು ಮೂರು ವಿಧ. ಇವು ಕ್ರಮವಾಗಿ ಸಾತ್ತ್ವಿಕ, ರಾಜಸ—ತಾಮಸವೆಂಬುವು. ಇವುಗಳಲ್ಲಿ ವೈಕಾರಿಕವು ಸಾತ್ತ್ವಿಕ ಇಂದ್ರಿಯಾದಿ. ಭೂತಾದಿಯು ತಾಮಸ ಮಹಾಭೂತಗಳಿಗೆ ಹೇತುವಾದ ತನ್ಮಾತ್ರಕ್ಕೆ ಹೇತು. ತೈಜಸವೆಂಬುದು ರಾಜಸ—ಇದು ಮೇಲಿನವೆರಡಕ್ಕೂ ಅನುಗ್ರಾಹಕ. ಆಕಾಶಾದಿ ಗಳು ಐದು ಮಹಾಭೂತಗಳು. ಶ್ರೋತ್ರಾದಿಗಳು ಐದು ಜ್ಞಾನೇಂದ್ರಿಯಗಳು, ವಾಗಾದಿ ಐದು ಕರ್ಮೇಂದ್ರಿಯಗಳು, ಮನಸ್ಸು—ಎಂದು ಕೇವಲ ವಿಕಾರಗಳು ಹದಿನಾರು. ಪುರುಷ ನಿಷ್ಪರಿಣಾಮಿಯಾದ್ದರಿಂದ ಇತರ ಪ್ರಕೃತಿಯಾಗಲಿ ವಿಕೃತಿಯಾಗಲಿ ಅಲ್ಲ. ಆದ್ದರಿಂದಲೇ ನಿರ್ಧರ್ಮಕ ಚೈತನ್ಯರೂಪ, ನಿತ್ಯ, ನಿಷ್ಕ್ರಿಯ, ಸರ್ವಗತ, ಒಂದೊಂದು ಶರೀರದಲ್ಲಿಯೂ ಬೇರೆ ಬೇರೆಯಾಗಿದ್ದಾನೆ. ನಿರ್ವಿಕಾರನೂ ನಿಷ್ಕ್ರಿಯನೂ ಆದ್ದರಿಂದ ಅವನು ಕರ್ತೃವಲ್ಲ, ಭೋಕ್ತೃವೂ ಅಲ್ಲ. ತತ್ತ್ವ ಹೀಗಿದ್ದಾಗ್ಗೂ ಮೂಢರು ಪ್ರಕೃತಿ ಪುರುಷರು ಪರಸ್ಪರ ಹತ್ತಿರವಿರುವುದರಿಂದಲೇ ಪುರುಷನ ಚೈತನ್ಯವನ್ನು ಪ್ರಕೃತಿಯಲ್ಲಿ ಆರೋಪಿಸಿ ಪ್ರಕೃತಿಯ ಕರ್ತೃತ್ವವನ್ನು ಜಪಾಪುಷ್ಪದ ಕೆಂಪು ಬಣ್ಣವನ್ನು ಸ್ಫಟಿಕಮಣಿಯಲ್ಲಿ ಆರೋಪಿಸುವಂತೆ ಪುರುಷನಲ್ಲಿ ಆರೋಪಿಸಿ, ನಾನು ಕರ್ತಾ, ಭೋಕ್ತಾ ಎಂದು ತಿಳಿಯುತ್ತಾರೆ. ಹಿಗೇ ಅಜ್ಞಾನದಿಂದ ಭೋಗ, ತತ್ತ್ವಜ್ಞಾನದಿಂದ ಅಪವರ್ಗ.—ಎಂಬುದು ಸಾಂಖ್ಯ ತತ್ತ್ವದ ಸಂಗ್ರಹ. ಇದನ್ನು ಪ್ರತ್ಯಕ್ಷ—ಅನುಮಾನ ಗಳಿಂದ ಅವರು ಸಾಧಿಸುತ್ತಾರೆ. ಅದರೊಳಗೆ ಪ್ರತ್ಯಕ್ಷ ಸಿದ್ಧವಾದ ಪದಾರ್ಥಗಳಲ್ಲಿ ಕಪಿಲರೂ, ಸತ್ಕಾರ್ಯವಾದವನ್ನು ಒಪ್ಪಿಕೊಂಡಿರುವುದರಿಂದಲೂ, ಸಮವಾಯವನ್ನು ಒಪ್ಪದಿರುವುದರಿಂದಲೂ, ಹೆಚ್ಚು ವಿವಾದವಿಲ್ಲ. ಆಗಮವೂ ಕಪಿಲಪ್ರೋಕ್ತವೆಂಬುದು

ಧರ್ಮವಿಚಾರಾರಂಭದಲ್ಲಿಯೇ ನಿರಸ್ತವಾಗಿದೆ. ವೇದವು ಪ್ರಧಾನಾದಿ ಪರವಲ್ಲವೆಂಬುದೂ ಈ ಶಾರೀರಕ ಶಾಸ್ತ್ರದ ಪ್ರಥಮಾಧ್ಯಾಯದಲ್ಲಿಯೇ ದರ್ಶಿತವಾಗಿದೆ. ಪ್ರಧಾನವೇ ಜಗತ್ಕಾರಣ—ಎಂಬ ಅನುಮಾನವೊಂದು ಉಳಿದಿದೆ, ಇದನ್ನು ನಿರಸನಮಾಡಿದರೆ ಅವರದೆಲ್ಲವೂ ನಿರಸ್ತವಾದಂತೆ ಎಂದು, ಅದನ್ನು ಮಾತ್ರ ಇಲ್ಲಿ ನಿರಸನ ಮಾಡಿದ್ದಾರೆ. ಸಾಂಖ್ಯರ ವರ್ಣನೆ ಹೇಗೆಂದರೆ;—

ಜಗತ್ತೆಲ್ಲಕ್ಕೂ ಒಂದೇ ಒಂದು ಮೂಲವೆಂಬುದನ್ನು ಅಂಗೀಕರಿಸಬೇಕು. ಅನೇಕ ಗಳಿಂದ ಕಾರ್ಯೋತ್ಪತ್ತಿಯೆಂದಲ್ಲಿ ಕಾರಣ ವಿಷಯದಲ್ಲಿ ಅನವಸ್ಥಾ ಪ್ರಸಂಗ ಬರುತ್ತೆ. ತಂತು ಪ್ರಭೃತಿಗಳು ಅವಯವಗಳಾಗಿದ್ದುಕೊಂಡು ತಮ್ಮ ಆರು ಪಾರ್ಶ್ವಗಳಿಂದ ಒಂದರೊಡನೊಂದು ಸೇರಿ ಅವಯವಿಯಾದ ವಸ್ತ್ರಾದಿಗಳನ್ನು ನಿರ್ಮಿಸುತ್ತವೆ. ಆ ತಂತ್ವಾದಿಗಳೂ ಹಾಗೆಯೇ ತಮ್ಮ ಅವಯವಗಳಿಂದ ಉತ್ಪನ್ನವಾಗುತ್ತವೆ. ಆ ಅವಯವ ಗಳೂ ಹಾಗೆಯೇ ತಮ್ಮ ಅವಯವಗಳೊಡನೆ ಸೇರಿ ಉತ್ಪನ್ನ ಎಂದು ಅನವಸ್ಥಾ ಪ್ರಸಂಗ. ಹಾಗೆಯೇ ಪರಮಾಣುಗಳೂ ಕೂಡ ತಮ್ಮ ಆರು ಪಾರ್ಶ್ವಗಳಿಂದ ಪರಸ್ಪರ ಕೂಡಿಯೇ ಕಾರ್ಯವನ್ನು ಉಂಟುಮಾಡಬೇಕು. ಇಲ್ಲದಿದ್ದಲ್ಲಿ ಪೃಥುತ್ವ (ಗಾತ್ರ) ಉಪಪನ್ನವಾಗದು—ಪರಮಾಣುಗಳೂ ಅಂಶಿಯಾದ್ದರಿಂದ ತಮ್ಮ ಅಂಶದಿಂದ ಹಾಗೆಯೇ ಉತ್ಪನ್ನವಾಗಬೇಕು. ಅವೂ ಸ್ವಾಂಶಗಳಿಂದ,—ಎಂದು ಹೀಗೆಯೇ ಹೇಳುತ್ತಾ ಹೋದಲ್ಲಿ ಕಾರಣಕ್ಕೆ ಎಲ್ಲಿಯೂ ನಿಲುಗಡೆಯೇ ಇರುವದಿಲ್ಲ. ಆದ್ದರಿಂದ ಕಾರಣದ ಬಗ್ಗೆ ವ್ಯವಸ್ಥೆ ಸಿದ್ಧಿಸುವುದಕ್ಕಾಗಿ ಒಂದೇ ಒಂದು ದ್ರವ್ಯವು ವಿವಿಧ ವಿಚಿತ್ರ ಪರಿಣಾಮ ಶಕ್ತಿಯುಕ್ತವಾಗಿ, ಅಪ್ರಚ್ಯುತ ಸ್ವರೂಪವಾಗಿಯೇ ಮಹದಾದ್ಯನಂತಾ ವಸ್ಥಾಶ್ರಯವಾಗಿ ಕಾರಣವೆಂಬುದನ್ನು ಅವಶ್ಯವಾಗಿ ಆಶ್ರಯಿಸಬೇಕು. ಆ ಒಂದೇ ಒಂದು ಕಾರಣವಾದ ವಸ್ತು ಗುಣತ್ರಯ ಸಾಮ್ಯರೂಪವಾದ ಪ್ರಧಾನವೆಂಬುದು.— ಎಂದು ಕಲ್ಪಿಸಿ, ಆ ಕಲ್ಪನೆಗೆ ಕೆಳಗೆ ಹೇಳುವ ಹೇತುಗಳನ್ನೂ ಉಪನ್ಯಸಿಸುತ್ತಾರೆ,—

"ಭೇದಾನಾಂ ಪರಿಮಾಣಾತ್ ಸಮನ್ವಯಾತ್ ಶಕ್ತಿತಃ ಪ್ರವೃತ್ತೇಶ್ಚ ।
ಕಾರಣಕಾರ್ಯವಿಭಾಗಾತ್ ಅವಿಭಾಗಾತ್ ವೈಶ್ವರೂಪ್ಯಸ್ಯ ।। ಕಾರಣ_
ಮಸ್ತ್ಯವ್ಯಕ್ತಂ..."—ಎಂಬುದು.

ವಿಶ್ವರೂಪವೇ ವೈಶ್ವರೂಪ್ಯ. ವಿಚಿತ್ರ ಸನ್ನಿವೇಶವುಳ್ಳ ತನು ಭುವನಾದಿ ಸಮಸ್ತ ಜಗತ್ತೂ ತನಗೆ ಸರೂಪವಾದ ಅವ್ಯಕ್ತವನ್ನೇ ಕಾರಣವಾಗಿಯುಳ್ಳದ್ದು, ಏಕೆಂದರೆ ಅದು ಕಾರ್ಯವಾದ್ದರಿಂದ—ಇತ್ಯಾದಿ.

ಆದ್ದರಿಂದ ತ್ರಿಗುಣವಾದ ಜಗತ್ತು ಗುಣತ್ರಯ ಸಾಮ್ಯರೂಪವಾದ ಪ್ರಧಾನ ವನ್ನೇ ಕಾರಣವಾಗಿಯುಳ್ಳದ್ದು ಎಂದು ಅವರ ನಿರ್ಣಯ.

ಸಿದ್ಧಾಂತ ರೀತ್ಯಾ—ಪ್ರತ್ಯನುಮಾನದಿಂದ ಇದರ ಖಂಡನೆ;—

ಅವರು ಹೇಳುವ ಪ್ರಧಾನವು ವಿಚಿತ್ರ ಜಗದ್ರಚನೆಯಲ್ಲಿ ಸಮರ್ಥವಲ್ಲ, ಏಕೆಂದರೆ. ಅದು ಅಚೇತನವಾಗಿದ್ದುಕೊಂಡು ತತ್ಸ್ವಭಾವವನ್ನು ಬಲ್ಲವನಿಂದ ಅಧಿಷ್ಠಿತವಲ್ಲದ್ದರಿಂದ, "ಯದೇವಂ ತತ್ತಥಾ"—ಇತ್ಯಾದಿ—ಪ್ರಕಾರ.

ಸೂತ್ರ ೨—**ಪಯೋಽಂಬುವಚ್ಚೇತ್ತತ್ರಾಪಿ**

**ಸೂತ್ರಾರ್ಥ**

[ಪಯೋಽಂಬುವತ್ ಚೇತ್] = ಹಾಲಿನಂತೆಯೂ ಜಲದಂತೆಯೂ. (ಪ್ರಕೃತಿಯೂ ಜಗತ್ತನ್ನು ಸೃಷ್ಟಿಸುವುದು)' ಎಂದಲ್ಲಿ, [ತತ್ರ, ಅಪಿ] = ಆ ಹಾಲು, ನೀರುಗಳಲ್ಲಿಯೂ, (ಪರಮಪುರುಷ ಅಧಿಷ್ಠಿತನಾಗಿದ್ದಾನೆ)

**ವಿವರಣೆ**

ಒಂದು ಪುರುಷ ಪ್ರಯತ್ನವಿಲ್ಲದೆಯೇ ಹಾಲು ಮೊಸರಾಗುವುದು. ಜಲ ಮಧುರವಾದ ಎಳನೀರಾಗುವುದು, ಹುಳಿಯಾದ ನಿಂಬೆ ಹಣ್ಣಿನ ರಸವಾಗುವುದು, ಅದರಂತೆಯೇ, ಪ್ರಕೃತಿಯೂ ತಾನೇ ಜಗತ್ತಿನ ರೂಪವಾಗಿ ಪರಿಣಮಿಸುಬಹುದಲ್ಲವೆ ?—ಎಂದಲ್ಲಿ, "ಯೋಽಪ್ಸು ತಿಷ್ಠನ್,"—ಎಂದು ಜಲ ಮುಂತಾದುದರಲ್ಲಿಯೂ ಪರಮ ಪುರುಷ ಅಂತರ್ಯಾಮಿಯಾಗಿದ್ದಾನೆಂದು ಹೇಳುವುದರಿಂದ, ಜಲಾದಿಗಳೂ ಪರಮ ಪುರುಷನ ಪ್ರಯತ್ನದಿಂದಲೇ ಎಳನೀರು ಮುಂತಾದುದಾಗಿ ಪರಿಣಮಿಸುವುದೆಂದೇ ಹೇಳಬೇಕಾಗಿರುವುದರಿಂದ. ಅವು ದೃಷ್ಟಾಂತವಾಗವು.

ಸೂತ್ರ ೩—**ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್**

**ಸೂತ್ರಾರ್ಥ**

[ಅನಪೇಕ್ಷತ್ವಾತ್] = ಪುರುಷಾಪೇಕ್ಷೆಯಿಲ್ಲದುದರಿಂದ, [ವ್ಯತಿರೇಕಾನವಸ್ಥಿತೇಃಚ] = ಸೃಷ್ಟಿಯಿಲ್ಲದಿರಕೂಡದೆಂಬ ದೋಷ ಬರುವುದರಿಂದಲೂ. (ಅದು ಜಗತ್ಕಾರಣ ವಾಗದು).

**ವಿವರಣೆ**

ಪುರುಷನಾದರೆ ಅವನು ತನಗೆ ಇಚ್ಚೆಯಿರುವಾಗ ಸೃಷ್ಟಿಸುವುದು. ಇಚ್ಚೆಯಿಲ್ಲದಾಗ ಸೃಷ್ಟಿಸದಿರುವುದು ಕೂಡುವುದು. ಅಚೇತನವಾದ ಪ್ರಧಾನಕ್ಕೆ ಇಚ್ಚೆಯಿಲ್ಲದ್ದರಿಂದ, ಇದೇ ಜಗತ್ಕಾರಣವೆಂಬ ಪಕ್ಷದಲ್ಲಿ, ಯಾವಾಗಲೂ, ಸೃಷ್ಟಿಸಿಕೊಂಡೇ ಇರಬೇಕು. ಅಲ್ಲದೆ ಯಾವಾಗಲೂ, ಸೃಷ್ಟಿಸದೆಯೇ ಇರಬೇಕು—ಇತ್ಯಾದಿ ದೋಷ ಬರುವುದು.

ಸೂತ್ರ ೪—**ಅನ್ಯತ್ರಾಭಾವಾಚ್ಚ ನ ತೃಣಾದಿವತ್**

**ಸೂತ್ರಾರ್ಥ**

[ಅನ್ಯತ್ರ] = ಎತ್ತು ಮೇಯುವ ಹುಲ್ಲಿನಲ್ಲಿ [ಅಭಾವಾತ್‌ಚ] = ಹಾಲಾಗಿ ಪರಿಣಮಿಸುವುದು ಇಲ್ಲದುದರಿಂದಲೂ [ತೃಣಾದಿವತ್] = ಹುಲ್ಲು ಹಾಲಾಗುವ ಹಾಗೆ (ಪ್ರಧಾನ ಜಗತ್ತಾಗುವುದೆಂಬುದು) [ನ] = ಕೂಡದು.

**ವಿವರಣೆ**

ಹಸು ಹುಲ್ಲನ್ನು ತಿಂದಲ್ಲಿ ಆ ಹುಲ್ಲು ತಾನೇ ಹಾಲಾಗಿ ಪರಿಣಮಿಸುವುದು. ಅದಕ್ಕೆ ಒಬ್ಬ ಪುರುಷನ ಪ್ರಯತ್ನ ಕಾಣುವುದಿಲ್ಲ. ಹಾಗೆಯೇ ಪ್ರಕೃತಿಯೂ ಸ್ವತಂತ್ರವಾಗಿ ಜಗದ್ರೂಪವಾಗಿ ಪರಿಣಮಿಸಬಹುದಲ್ಲವೆ ?—ಎಂದಲ್ಲಿ, ಆ ಹುಲ್ಲನ್ನೇ ಎತ್ತು ತಿಂದಲ್ಲಿ

ಅದು ಹಾಲಾಗಿ ಪರಿಣಮಿಸದು. ಆದ್ದರಿಂದ, ಹಸು ತಿನ್ನುವ ಹುಲ್ಲನ್ನೂ ಪರಮ ಪುರುಷನೇ ಹಾಲಾಗಿ ಪರಿಣಾಮಗೊಳಿಸುವನೆಂದು ಒಪ್ಪಬೇಕಾದ್ದರಿಂದ ಅದೂ ದೃಷ್ಟಾಂತವಾಗದು

ಸೂತ್ರ ೫— **ಪುರುಷಾಶ್ಮವದಿತಿ ಚೇತ್ತಥಾಽಪಿ**

**ಸೂತ್ರಾರ್ಥ**

[ಪುರುಷಾಶ್ಮವತ್] = ಕುರುಡನಾದ, ಕಾಲುಳ್ಳ ಪುರುಷನಂತೆಯೂ. ಕಬ್ಬಿಣ ದಂತೆಯೂ, (ಜೀವನು ಪ್ರಕೃತಿಯನ್ನು ಪರಿಣಾಮಗೊಳಿಸುತ್ತಾನೆ) [ಇತಿ ಚೇತ್] = ಎಂದಲ್ಲಿ [ತಥಾಽಪಿ] = ಹಾಗೂ ಕೂಡ, (ಪ್ರಧಾನವು ಜಗತ್ಸೃಷ್ಟಿಯಲ್ಲಿ ಪ್ರವರ್ತಿಸದು.)

**ವಿವರಣೆ**

ಅಯಸ್ಕಾಂತ ಶಿಲೆಯ ಸಾಮೀಪ್ಯದಿಂದ ಅಚೇತನವಾದ ಕಬ್ಬಿಣವು ಇತ್ತ ಚಲಿಸಲು ತೊಡಗುವುದು. ಕಾಲುಳ್ಳ ಒಬ್ಬ ಕುರುಡನು ತಾನೇ ಒಂದೆಡೆಗೆ ಹೋಗಲು ಅಸಮರ್ಥ ನಾದಾಗ್ಯೂ, ಕಣ್ಣುಳ್ಳ ಒಬ್ಬ ಹೆಳವನು (ಕುಂಟ) ತಾನೇ ಒಂದೆಡೆಗೆ ಹೋಗಲು ಶಕ್ತಿ ಯಿಲ್ಲದವನಾದಾಗ್ಯೂ, ಈ ಕುಂಟ, ಆ ಕುರುಡನ ಮೇಲೆ ಏರಿಕೊಂಡು. 'ಹೀಗೇಹೋಗು' —ಎಂದು ಹೇಳಿದಲ್ಲಿ ಆ ಕುರುಡ ಹೋಗುತ್ತಾನೆ. ಅದರಂತೆಯೇ, ಈ ಪ್ರಕೃತಿಗೆ ತಾನೇ ಸೃಷ್ಟಿಸುವ ಶಕ್ತಿಯಿಲ್ಲದಿದ್ದಾಗ್ಯೂ ಜೀವನು ವ್ಯಾಪಾರ ಶೂನ್ಯನಾಗಿದ್ದಾಗ್ಯೂ, ಈ ಜೀವನು ತಾನು ಹತ್ತಿರವಿದ್ದು, ಅಚೇತನವಾದ ಪ್ರಕೃತಿಯನ್ನು ಜಗತ್ಸೃಷ್ಟಿಯಲ್ಲಿ ಪ್ರೇರೇಪಿಸುತ್ತಾನೆ. ಪ್ರೇರಿಸುವುದೆಂಬುದು ಹತ್ತಿರವಿರುವವಿಕೆಯೇ. ಅದರಿಂದ ಪ್ರಕೃತಿ ಜಗತ್ತನ್ನು ಸೃಷ್ಟಿಸುವುದೆನ್ನಬಹುದು—ಎಂದಲ್ಲಿ, ಚಂದ್ರಕಾಂತಶಿಲೆ ಯಾವುದೋ ಒಂದು ವೇಳೆಯಲ್ಲಿ ತಾನು ಕಬ್ಬಿಣದ ಬಳಿಯಿರುವುದು. ಆಗ ಅದರ ಸಂಬಂಧದಿಂದ ಕಬ್ಬಿಣ ಚಲಿಸುವುದು. ಅದು ಬಳಿಯಿಲ್ಲದಿದ್ದಾಗ ಚಲಿಸದು. ಕುಂಟ ಯಾವುದೋ ಒಂದು ವೇಳೆಯಲ್ಲಿ ತಾನು ಹಾದಿಯನ್ನು ತೋರಿಸುತ್ತಾನೆ. ಆಗ ಮಾತ್ರವೇ ಕುರುಡ ಹೋಗುತ್ತಾನೆ; ಬೇರೆ ಸಮಯದಲ್ಲಿ ಹೋಗನು. ಇಲ್ಲಿ ಪುರುಷ ಯಾವಾಗಲೂ ಪ್ರಕೃತಿಯ ಸಮೀಪದಲ್ಲಿಯೇ ಇರುವುದರಿಂದ, ಪ್ರಕೃತಿ ಯಾವಾಗಲೂ ಜಗತ್ತನ್ನು ಸೃಷ್ಟಿಸಬೇಕು ಪ್ರಳಯ ಕಾಲ ಬರಕೂಡದು. ಆದ್ದರಿಂದ ಅವೆರಡೂ ಇಲ್ಲಿಗೆ ದೃಷ್ಟಾಂತವಲ್ಲ.

ಸೂತ್ರ ೬—**ಅಂಗಿತ್ವಾನುಪಪತ್ತೇಶ್ಚ**

**ಸೂತ್ರಾರ್ಥ**

ಅಂಗಿತ್ವ ಕೂಡದುದರಿಂದಲೂ, (ಪ್ರಕೃತಿಯು ಜಗತ್ಕಾರಣವಾಗದು)

**ವಿವರಣೆ**

ಪ್ರಳಯದಲ್ಲಿ ಸತ್ತ್ವರಜಸ್ತಮೋಗುಣಗಳು ಸಮವಾಗಿರುವುವೆಂದೂ, ಸೃಷ್ಟಿ ಕಾಲದಲ್ಲಿ ವೈಷಮ್ಯ ಹೊಂದಿ ಒಂದು ಅಧಿಕವಾಗಿಯೂ ಮತ್ತೆರಡು ಕಡಿಮೆಯಾಗಿಯೂ ಇರುವುದೆಂದೂ, ಈ ವಿಷಮಾವಸ್ಥೆಯೇ ಸೃಷ್ಟಿಗೆ ಕಾರಣವೆಂದೂ ಹೇಳಿದಲ್ಲಿ, ಪ್ರಳಯದಲ್ಲಿ ಸಮವಾಗಿದ್ದ ಪ್ರಕೃತಿ ಸೃಷ್ಟಿಕಾಲದಲ್ಲಿ ವಿಷಮಾವಸ್ಥೆಯನ್ನು ಹೊಂದಲು

ಕಾರಣವಿಲ್ಲದ್ದರಿಂದ, ಆಗ ಸೃಷ್ಟಿಸಕೂಡದು. (ಅಂಗಿಯೆಂಬುದು—ಮೂರು ಗುಣಗಳಲ್ಲಿ ಯಾವುದು ಅಧಿಕವಾಗಿರುವುದೋ ಅದಕ್ಕೆ ಅಂಗಿಯೆಂದೂ, ಕಡಿಮೆಯಾಗಿರುವ ಮತ್ತೆ ರಡಕ್ಕೂ ಅಂಗವೆಂದೂ ಹೆಸರು.) ಆದ್ದರಿಂದ ಪ್ರಕೃತಿಗೆ ಜಗತ್ಕಾರಣತ್ವ ಸಂಭವಿಸದು.

ಸೂತ್ರ ೭—**ಅನ್ಯಥಾನುಮಿತೌ ಚ ಜ್ಞಶಕ್ತಿವಿಯೋಗಾತ್**

**ಸೂತ್ರಾರ್ಥ**

[ಅನ್ಯಥಾ] = ಬೇರೆ ಪ್ರಕಾರದಿಂದ [ಅನು ಮಿತೌ,ಚ] = ಊಹಿಸಲೂ, [ಜ್ಞಶಕ್ತಿ ವಿಯೋಗಾತ್] = ಪುರುಷನ ಜ್ಞಾನಶಕ್ತಿಯಿಲ್ಲದುದರಿಂದ, (ಮೇಲೆ ಹೇಳಿದ ದೋಷ ಗಳು ಸಂಭವಿಸುವುವು.)

ಸಾಂಖ್ಯರು ಹೇಳುವ ಅರ್ಥಗಳೆಲ್ಲವೂ ವೃಷಲೋದ್ವಾಹ ಮಂತ್ರ ನ್ಯಾಯದಂತೆ ಪರಸ್ಪರ ವಿರುದ್ಧ ಸ್ವಭಾವವುಳ್ಳವುಗಳಾದ್ದರಿಂದ, ಪರಿಹಾಸಾಸ್ಪದ. ಹೇಗೆಂದರೆ ಪುರುಷರಿಗೆ ಭೋಗಾಪವರ್ಗ ಪ್ರವೃತ್ತಿಯೇ ಮೊದಲಾದವನ್ನು ಫಲವನ್ನಾಗಿ ತಾವೇ ಹೇಳುವರು. ಅನಂತರ. "ಸಂಸರತಿ ಬಧ್ಯತೇ ಮುಚ್ಯತೇ ಚ ನಾನಾಶ್ರಯಾ ಪ್ರಕೃತಿಃ"—ಎಂದು ಪ್ರಕೃತಿಗೇ ಭೋಗಾಪವರ್ಗವನ್ನು ಹೇಳುವರು. ಇದು ಒಂದು ವಿರೋಧ. "ಸಂಘಾತ ಪರಾರ್ಥತ್ವಾತ್..."—ಇತ್ಯಾದಿಯಿಂದ ಪ್ರಕೃತಿಗೆ ಪುರುಷನು ದ್ರಷ್ಟೃವೆನ್ನುವರು. ಅದೇ ದ್ರಷ್ಟೃತ್ವವನ್ನು ಮತ್ತೆ ಅಲ್ಲಲ್ಲಿ ಅಂತಃಕರಣಕ್ಕೂ ಹೇಳುವರು. ಇದು ಎರಡನೇ ವಿರೋಧ. ಬದ್ಧನಾದ ಜೀವನ ಮುಕ್ತಿಗಾಗಿ ಸಾಂಖ್ಯ ಶಾಸ್ತ್ರವನ್ನು ಶ್ರೀ ಕಪಿಲರು ರಚಿಸಿದ ರೆನ್ನುವರು. ಜೀವನು ನಿತ್ಯಮುಕ್ತನೆಂದು ಪರಸ್ಪರ ವ್ಯಾಹತೋಕ್ತಿಯನ್ನಾಡುವರು. ಇದು ಮತ್ತೊಂದು ವಿರೋಧ. ಆದ್ದರಿಂದ ಪರಸ್ಪರ ವಿರುದ್ಧ ವ್ಯವಹಾರ ಪ್ರವರ್ತಕ ವಾದ ಜೈನಸಿದ್ಧಾಂತದ ಭಕ್ತರನ್ನಾಗಿ ಸಾಂಖ್ಯರನ್ನು ಶ್ರೀಮದಾಚಾರ್ಯರು ಹೇಳಿದ್ದಾರೆ. ಏಕೆಂದರೆ ಜೈನರ "ಸ್ಯಾದಸ್ತಿ" ಮುಂತಾದ ಸಪ್ತಭಂಗೀ ಪ್ರಲಾಪ ಇದರಂತೆಯೇ ವ್ಯಾಹತ ಭಾಷಿಯಾಗಿದೆ. 'ವೃಷಲೋದ್ವಾಹ'—ಎಂಬುದು ದ್ರಮಿಡ ದೇಶದಲ್ಲಿಯ ವ್ಯವಹಾರ. —ಅಲ್ಲಿ ಪುರೋಹಿತರು, "ಅಶ್ಮಾನಂ ಪಾದೇನ ಪ್ರಹರ, ಪ್ರಹೃತ್ಯ ಚ ನ ಪ್ರಹರಾಮೀತಿ ವದ, ಅಸತ್ಯವಚನ ಪ್ರಾಯಶ್ಚಿತ್ತಾರ್ಥಂ ಅಸ್ಮಾಕಂ ದ್ರೋಣದ್ವಯ ಪರಿಮಿತಂ ಧಾನ್ಯಂ ಪ್ರಯಚ್ಛ."—ಎಂಬ ಮಂತ್ರವನ್ನು ಶೂದ್ರ ವಿವಾಹದಲ್ಲಿ ಹೇಳಿಸುತ್ತಾರೆ. ಸಾಂಖ್ಯ ಸಿದ್ಧಾಂತವೆಲ್ಲವೂ ಇದರಂತೆಯೇ ಪರಿಹಾಸಾಸ್ಪದವಾಗಿದೆ.

**ವಿವರಣೆ**

ಈಗ ಹೇಳಿದ ಯುಕ್ತಿಗಳನ್ನು ಬಿಟ್ಟು ಬೇರೆ ವಿಧವಾದ ಯುಕ್ತಿಯಿಂದ ಪ್ರಧಾನ ಜಗತ್ಕಾರಣವೆಂದು ಊಹಿಸಿದಾಗ್ಲೂ, ಅದಕ್ಕೆ ಆಗ ಜ್ಞಾನವಿಲ್ಲದುದರಿಂದ. ಜಗತ್ಸೃಷ್ಟಿಯಾಗದು. ಆದ್ದರಿಂದ ಹೇಗೊ ಅನುಮಾನದಿಂದ ಪ್ರಧಾನಕ್ಕೆ ಕಾರಣತ್ವ ಸಿದ್ಧಿಸದು.

### ಸೂತ್ರ ೮—ಅಭ್ಯುಪಗಮೇಽಪ್ಯರ್ಥಾಭಾವಾತ್

#### ಸೂತ್ರಾರ್ಥ

[ಅಭ್ಯುಪಗಮೇ ಅಪಿ] = (ಪ್ರಧಾನವನ್ನು) ಕಾರಣವನ್ನಾಗಿ ಒಪ್ಪಿಕೊಂಡಾಗ್ಯೂ, [ಅರ್ಥಾಭಾವಾತ್] = (ಅದರಿಂದ) ಪ್ರಯೋಜನವಿಲ್ಲದುದರಿಂದ (ಅದು ಸಿದ್ಧಿಸದು)

#### ವಿವರಣೆ

ಜೀವನಿಗೆ ಸಂಸಾರ ಮೋಕ್ಷಗಳು ಸಿದ್ಧಿಸುವುದಕ್ಕಾಗಿ ಪ್ರಕೃತಿಯನ್ನು ಒಪ್ಪಿಕೊಳ್ಳಬೇಕು. ನಿರ್ವಿಕಾರನಾದ ಜೀವನಿಗೆ ಪ್ರಕೃತಿ ಸನ್ನಿಧಾನದಿಂದ ಪ್ರಕೃತಿಯ ಧರ್ಮಗಳು ಜೀವನಲ್ಲಿ ಪ್ರತಿಫಲಿಸುವುವು. ಇದೇ ಸಂಸಾರ. ಪ್ರಕೃತಿ—ಪುರುಷರ ವಿವೇಚನೆಯನ್ನು ಮಾಡಿ, ಅನಂತರ, ಯೋಗಾಭ್ಯಾಸದಿಂದ ಪ್ರಕೃತಿಧರ್ಮವು ಜೀವನಲ್ಲಿ ಪ್ರತಿಫಲಿಸದಿರುವುದೇ ಮೋಕ್ಷವೆಂದು ಸ್ವೀಕರಿಸುತ್ತಾರೆ. ಸಂಸಾರ ಈ ವಿಧವಾದಲ್ಲಿ, ಪ್ರಕೃತಿಯೂ ಜೀವನೂ ಎರಡೂ ನಿತ್ಯವಾಗಿ ಸರ್ವಗತವಾದ್ದರಿಂದ ಎರಡಕ್ಕೂ ಸನ್ನಿಧಾನವು ನಿತ್ಯವಾದ್ದರಿಂದ ನಿತ್ಯಸಂಸಾರವೇ ಪ್ರಸಂಗಿಸುವುದು. ಮೋಕ್ಷವೇ ಉಂಟಾಗದು. ಮೋಕ್ಷಕ್ಕೂ ಈ ಸನ್ನಿಧಾನವೇ ಕಾರಣವಾದಲ್ಲಿ ಸಂಸಾರ ಸಿದ್ಧಿಸದು. ಆದ್ದರಿಂದ ಇದನ್ನು ಒಪ್ಪಿಕೊಳ್ಳುವುದರಲ್ಲಿ ಒಂದು ಪ್ರಯೋಜನವೂ ಇಲ್ಲ.

### ಸೂತ್ರ ೯—ವಿಪ್ರತಿಷೇಧಾಚ್ಚಾಸಮಂಜಸಂ

#### ಸೂತ್ರಾರ್ಥ

[ವಿಪ್ರತಿಷೇಧಾತ್,ಚ] = ಪರಸ್ಪರ ವಿರುದ್ಧವಾದುದರಿಂದಲೂ, [ಅಸಮಂಜಸಂ] = (ಈ ಮತ) ಸಮೀಚೀನವಲ್ಲ.

#### ವಿವರಣೆ

ಪ್ರಕೃತಿ ಜೀವನ ಸಂಸಾರ ಮೋಕ್ಷಗಳಿಗಾಗಿ ಇರುವುದು. ಅದರ ಸನ್ನಿಧಾನದಿಂದ ಜೀವನು ಕರ್ತಾವಾಗಿಯೂ ಭೋಕ್ತಾವಾಗಿಯೂ ಆಗುವನು. ಅದರ ಸನ್ನಿಧಾನವನ್ನೇ ಹೇತುವಾಗಿಟ್ಟುಕೊಂಡು ಮುಕ್ತನಾಗುತ್ತಾನೆ. ಜೀವ ನಿರ್ವಿಕಾರ. ಇವನು ಕರ್ತಾವಾಗಿಯೂ ಭೋಕ್ತಾವಾಗಿಯೂ ಆಗುವುದಿಲ್ಲ. ಜೀವನಿಗೆ ಸಂಸಾರಬಂಧವೂ ಮೋಕ್ಷವೂ ಸಿದ್ಧಿಸವು. ನಿತ್ಯಮುಕ್ತನೆಂದೂ ಪರಸ್ಪರ ವಿರುದ್ಧವಾಗಿ ಹೇಳುವುದರಿಂದ, ಈ ಮತ ಸಯುಕ್ತಿಕವಲ್ಲ.

## 2. ಮಹದ್ದೀರ್ಘಾಧಿಕರಣ

### ಸೂತ್ರ—ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಂ

#### ಪ್ರತ್ಯುದಾಹೃತಿ ಸಂಗತಿ

ಪ್ರಧಾನಕಾರಣವಾದವು, ಯುಕ್ತ್ಯಾಭಾಸ ಮೂಲವಾದ್ದರಿಂದಲೂ ವಿಪ್ರತಿಷಿದ್ಧವಾದ್ದರಿಂದಲೂ, ಅಸಮಂಜಸವೆನ್ನಲಾಯಿತು. ಈಗ, ಪರಮಾಣು ಕಾರಣವಾದವೂ ಅಸಮಂಜಸವೆಂದು ಪ್ರತಿಪಾದಿತವಾಗುತ್ತೆ.

[ಅಸಮಂಜಸವೆಂಬುದು ಇಲ್ಲಿಗೆ ಹಿಂದಿನ ಸೂತ್ರದಿಂದ ಅನುವರ್ತಿಸುತ್ತೆ.]

**ಸಂಗತಿ**

(೧) ಅನುಮಾನದಿಂದ ಪರಿಕಲ್ಪ್ಯವಾದ ಮೂಲ ಪ್ರಕೃತಿಯೇ ಪ್ರಪಂಚಕ್ಕೆ ಕಾರಣವೆಂಬ ಸಾಂಖ್ಯಪಕ್ಷ ಹಿಂದೆ ಪ್ರತಿಕ್ಷಿಪ್ತವಾಯಿತು. ಈಗ ಮತ್ತೆ, ಅನುಮಾನದಿಂದ ಪರಿಕಲ್ಪ್ಯಗಳಾದ ನಾನಾ ಭೂತ ಪರಮಾಣುಗಳು ಪ್ರಪಂಚಕ್ಕೆ ಕಾರಣ—ಎಂಬ ಪರಿಕಲ್ಪನೆ ನಿಷೇಧಿಸಲ್ಪಡುತ್ತೆ—ಎಂದು ಒಂದು ಸಂಗತಿ.

(೨) ಈಶ್ವರನಿಂದ ಅಧಿಷ್ಠಿತವಲ್ಲದ ಪ್ರಧಾನವೇ ಕಾರಣವೆಂಬ ವಾದಿಯನ್ನು ಹಿಂದೆ ನಿರಾಕರಿಸಿದರು. ಈಗ ಮತ್ತೆ ನಿಮಿತ್ತಮಾತ್ರವಾದ ಈಶ್ವರಾಧಿಷ್ಠಿತ ಪರಮಾಣುಗಳೇ ಉಪಾದಾನಕಾರಣವೆಂಬ ವಾದಿಯು ಈಗ ನಿರಾಕರಿಸಲ್ಪಡುತ್ತಾನೆ.—ಎಂಬುದು ಮತ್ತೊಂದು ಸಂಗತಿ.

[ಶೈವ ಮತವೂ ಪ್ರಧಾನಕಾರಣವಾದಿಯಾದಾಗ್ಯೂ, ಅದರ ಖಂಡನೆಯನ್ನು ಮುಂದಕ್ಕೆ ಹಾಕಿಕೊಂಡಿರುವುದು ಅದರಲ್ಲಿರುವ ಬಾಹ್ಯತ್ವದ ಆಧಿಕ್ಯದಿಂದ.

ವೈಶೇಷಿಕರೂ ಬೌದ್ಧರೂ—ಇಬ್ಬರೂ ಪರಮಾಣುಕಾರಣವಾದಿಗಳಾದಾಗ್ಯೂ, ಸಾಂಖ್ಯದಂತೆ ಅದರಲ್ಲಿಯೂ ವೈದಿಕತ್ವಾಭಿಮಾನ ಮಾತ್ರದಿಂದ, ವೈಶೇಷಿಕ ಮತ ನಿರಾಕರಣವನ್ನೇ ಮೊದಲು ತೆಗೆದುಕೊಂಡಿದ್ದಾರೆ.]

ವೈಶೇಷಿಕರ ನಿರಾಸವನ್ನು ಹಿಂದೆ ಆರಂಭಣಾಧಿಕರಣದಲ್ಲಿಯೇ ಮಾಡಿಯಾಯಿತು—ಮತ್ತೆ ಇಲ್ಲಿ ಏಕೆ?—ಎಂದಲ್ಲಿ, ಹಿಂದೆ ನಿರಾಸಮಾಡಿದ್ದಕ್ಕಿಂತ ಈಗ ಮಾಡುವ ನಿರಾಸದಲ್ಲಿ ವೈಷಮ್ಯವುಂಟು. ಹಿಂದೆ, ವೈಶೇಷಿಕರು ಹೇಳುವ—ಅಸತ್ಕಾರ್ಯವಾದ ನಿರಸನವಾಯಿತು. ಇಲ್ಲಿ ಅವರು ಹೇಳುವ, ಸಮವಾಯಿಕಾರಣ, ಅಸಮವಾಯಿಕಾರಣ, ನಿಮಿತ್ತಕಾರಣ ಮುಂತಾದ ಪ್ರಕ್ರಿಯೆಯಲ್ಲಿಯ ಭೇದಗಳನ್ನು ನಿರಸನಮಾಡುತ್ತಾರೆ.

**ಸೂತ್ರಾರ್ಥ**

[ಹ್ರಸ್ವಪರಿಮಂಡಲಾಭ್ಯಾಂ] = ದ್ವ್ಯಣುಕದಿಂದಲೂ ಪರಮಾಣುವಿನಿಂದಲೂ. [ಮಹದ್ದೀರ್ಘವತ್ ವಾ] = ಮಹತ್ವ—ದೀರ್ಘತ್ವ ಗುಣಗಳುಳ್ಳ ತ್ರ್ಯಣುಕಗಳ (ದ್ವ್ಯಣುಕಗಳು) ಉತ್ಪತ್ತಿಯಂತೆ, ಮಿಕ್ಕವೂ (ಅಸಮಂಜಸ.) ಮೂರು ದ್ವ್ಯಣುಕಗಳು ಸೇರಿದರೆ ಒಂದು ತ್ರ್ಯಣುಕವಾಗುತ್ತೆ. ಪರಮಾಣುಗಳು ಸೇರಿ ದ್ವ್ಯಣುಕ ತ್ರ್ಯಣುಕಗಳು ಉತ್ಪನ್ನವಾಗುವ ಕ್ರಮದಿಂದ ಜಗತ್ತೂ ಉತ್ಪನ್ನವಾಗುವುದೆಂಬ ಅಸಮಂಜಸ ವಾದದಂತೆ ಗಗನ ನಿತ್ಯತ್ವವೆಂಬುದೇ ಮುಂತಾದ ಮಿಕ್ಕ ವಾದಗಳೂ ಅಸಮಂಜಸವೆಂದರ್ಥ.

**ವಿವರಣೆ**

ಈ ಅಧಿಕರಣದಲ್ಲಿ ಕಾಣಾದ ಮತ (ವೈಶೇಷಿಕಮತ) ವನ್ನು ನಿರಸನ ಮಾಡುತ್ತಾರೆ. ನಾನಾ ಅವಯವಗಳು ಸೇರಿದಲ್ಲಿ ಅವಯವಿ ಎಂಬ ಒಂದು ವಸ್ತು ಉಂಟಾ

ಗುವುದು. ಆ ಅವಯುವಗಳು ಅಧಿಕವಾಗಿ ಸೇರಿದರೆ, ಮೇರುವಿನಂತಹ ದೊಡ್ಡ ವಸ್ತುವೂ, ಅಲ್ಪವಾಗಿ ಸೇರಿದರೆ ಸಾಸವೆಯಂತಹ ಸಣ್ಣ ವಸ್ತುವೂ ಉಂಟಾಗುವುವು. ಹೀಗೆ ಅವಯುವಗಳು ಕಡಿಮೆಯಾದ ಹಾಗೆಲ್ಲಾ, ಅದಕ್ಕೆ ಒಂದೆಡೆಯಲ್ಲಿ ಎಲ್ಲೆಯನ್ನು ಹೇಳಿ ನಿಲ್ಲಿಸಬೇಕು. ಆ ಎಲ್ಲೆಯಾದ ಅವಯುವ ಪರಮಾಣು. ಆ ಪರಮಾಣುಗಳು ಸರ್ವೇಶ್ವರನ ಸಂಕಲ್ಪದಿಂದ ಒಂದಕ್ಕೊಂದು ಸೇರಿ ದ್ವ್ಯಣುಕವೇ ಮುಂತಾದ ಜಗತ್ತು ಉಂಟಾಗುತ್ತೆ—ಎಂದು ಕಾಣಾದರು ಹೇಳುತ್ತಾರೆ.

ಇದು ಅಸಮಂಜಸ—ಏಕೆಂದರೆ, ಒಂದು ಅವಯುವಕ್ಕೆ ನಾಲ್ಕು ದಿಕ್ಕುಗಳಲ್ಲಿ ನಾಲ್ಕೂ ಮೇಲೆ ಮತ್ತು ಕೆಳಗೆ ಎಂದು ಎರಡೂ, ಒಟ್ಟು ಆರು ಪಕ್ಕಗಳುಂಟು. ಆ ಆರು ಪಕ್ಕಗಳೊಡನೆ ಸೇರಿ (ನೂಲು) ಮುಂತಾದ ಅವಯುವಗಳು ಒಂದಕ್ಕೊಂದು ಸೇರಿ ವಸ್ತ್ರ ಮುಂತಾದ ಅವಯುವಿಯುಂಟಾಗುವಂತೆ ದ್ವ್ಯಣುಕ ವುಂಟಾಗುವಾಗಲೂ. ಪರಮಾಣುಗಳು ತಮ್ಮ ಆರು ಪಕ್ಕಗಳೊಡನೆ ಒಂದರೊಡ ನೊಂದು ಸೇರಿ ದ್ವ್ಯಣುಕವನ್ನು ಉಂಟುಮಾಡುವುವೆಂದು ಅಂಗೀಕರಿಸಬೇಕು. ಪರ ಮಾಣು ನಿರವಯುವವಾದಲ್ಲಿ, ಅವು ಸಾವಿರಾರು ಸೇರಿದರೂ ಒಂದು ದೊಡ್ಡ ವಸ್ತುವನ್ನು ಉಂಟುಮಾಡಲಾರವು. ಆದ್ದರಿಂದ ಅವಕ್ಕೂ ಅವಯುವವುಂಟೆನ್ನಬೇಕು. ಹೀಗೆಯೇ ಅವುಗಳ ಅವಯುವಕ್ಕೂ. ಈ ಯುಕ್ತಿಯಿಂದ ಅವಯುವಕ್ಕೆ ಕೆಳಗಿನ ಎಲ್ಲೆ ಇರುವುದಾಗಿ ಏರ್ಪಡುವುದಿಲ್ಲ. ಆದ್ದರಿಂದ ಪರಮಾಣುಗಳು ಜಗತ್ಕಾರಣವಾಗಲಾರವು. ಇದರಂತೆಯೇ ಅವರು ಒಪ್ಪಿಕೊಂಡ ಮಿಕ್ಕವೂ ಅಸಂಗತವಾದ್ದರಿಂದ, ಆ ಮತ ಅಸಮಂಜಸ.

[ ಇಲ್ಲಿ. ಹ್ರಸ್ವ = ದ್ವ್ಯಣುಕ, ಪರಿಮಂಡಲ = ಪರಮಾಣು. ಮಹದ್ದೀರ್ಘ = ತ್ರ್ಯಣುಕ.] [ವಿಪಾಕಃ = ಫಲಾಪ್ತಿ] [ಮಿಕ್ಕ ಅಸಮಂಜಸ ಯಾವುದು ?—ಎಂದರೆ —ಮುಂದಿನ ಸೂತ್ರದಲ್ಲಿ ಉತ್ತರವಿದೆ.].

ಸೂತ್ರ ೨—**ಉಭಯಥಾಪಿ ನ ಕರ್ಮಾತಸ್ತದಭಾವಃ**

**ಸೂತ್ರಾರ್ಥ**

[ಉಭಯಥಾ.ಅಪಿ] = ಅದೃಷ್ಟರೂಪ ಕರ್ಮವನ್ನು ಚೇತನರಲ್ಲಿ ಒಪ್ಪಿಕೊಂ ಡಾಗ್ಗೂ, ಪರಮಾಣುವಿನಲ್ಲಿಯೂ ಒಪ್ಪಿಕೊಂಡಾಗ್ಗೂ, [ಕರ್ಮ] = ಅದೃಷ್ಟವೆಂಬದು, [ನ] = ಕಾದಾಚಿತ್ಕವಾಗಕೂಡದು. [ಅತಃ] = ಆದ್ದರಿಂದ. [ತದಭಾವಃ] = ಕರ್ಮದಿಂದ ಪರಮಾಣು ಸಂಯೋಗ ಕೂಡದು.

**ವಿವರಣೆ**

ಇಲ್ಲಿಂದ ಹಿಡಿದು ಅವರುಗಳ ಅಸಂಗತಿಯನ್ನು ಹೇಳಿದೆ:—ಅದೃಷ್ಟ ಪರಿಪಕ್ವ ವಾದರೆ, ಪರಮಾಣುವಿನಲ್ಲಿ ಕ್ರಿಯೆ ಉಂಟಾಗುವುದು. ಆದ್ದರಿಂದ ಜಗತ್ತು ಉಂಟಾಗುತ್ತದೆ ಯೆನ್ನುತ್ತಾರೆ. ಆ ಅದೃಷ್ಟ ಜೀವನಲ್ಲಿಯಾಗಲೀ ಇರಬಹುದು, ಪರಮಾಣುವಿನಲ್ಲಿ ಯಾದರೂ ಇರಬಹುದು. ಎಲ್ಲಿದ್ದಾಗ್ಗೂ, ಅದು ನಿತ್ಯವಾದ್ದರಿಂದ, ಇದಕ್ಕೆ ಮುಂಚೆ ಆ ಅದೃಷ್ಟದಿಂದ ಪರಮಾಣುಗಳು ಸೇರಿ, ಜಗತ್ತು ಏಕೆ ಉಂಟಾಗಲಿಲ್ಲ ? ಅದು

ಈಗತಾನೇ ಪರಿಪಕ್ವವಾಯಿತೆಂದಲ್ಲಿ, ಇಷ್ಟೊಂದು ಜೀವರುಗಳ ಅದೃಷ್ಟ ಒಂದೇ ಕಾಲದಲ್ಲಿ ಪರಿಪಕ್ವವಾಯಿತೆಂಬುದಕ್ಕೆ ಪ್ರಮಾಣವೇನು ? ಸರ್ವೇಶ್ವರನ ಸಂಕಲ್ಪದಿಂದ ಪರಮಾಣುವಿನಲ್ಲಿ ಕ್ರಿಯೆ ಉಂಟಾಯಿತೆಂದಲ್ಲಿ, ಶಾಸ್ತ್ರಯೋನಿತ್ವಾಧಿಕರಣದಲ್ಲಿ ಹೇಳಿರುವಂತೆ ನಮ್ಮ ಅನುಮಾನದಿಂದ ಈಶ್ವರ ಸಿದ್ಧಿಸುವುದಿಲ್ಲವಾದ್ದರಿಂದ, ಅವನ ಸಂಕಲ್ಪದಿಂದ ಉಂಟಾಯಿತೆನ್ನುವುದೂ ಕೂಡದು. ಆದ್ದರಿಂದ ಪರಮಾಣುವಿನಲ್ಲಿ ಕ್ರಿಯೆ ಉಂಟಾಗುವುದಕ್ಕೆ ಕಾರಣವಿಲ್ಲದ್ದರಿಂದ, ಜಗತ್ಸೃಷ್ಟಿ ಸಿದ್ಧಿಸದು.

ಸೂತ್ರ ೩—**ಸಮವಾಯಾಭ್ಯುಪಗಮಾಚ್ಚ ಸಾಮ್ಯಾದನವಸ್ಥಿತೇಃ**

**ಸೂತ್ರಾರ್ಥ**

[ಸಮವಾಯಾಭ್ಯುಪಗಮಾತ್,ಚ] = ಸಮವಾಯವೆಂಬ ಸಂಬಂಧವನ್ನು ಒಪ್ಪಿಕೊಳ್ಳುವುದರಿಂದಲೂ, [ಸಾಮ್ಯಾತ್] = (ಸಮವಾಯಕ್ಕೂ ಒಂದು ಸಂಬಂಧ ಬೇಕೆಂಬ) ನಿಯಮದ ಸಾಮ್ಯದಿಂದ, [ಅನವಸ್ಥಿತೇಃ] = ಅನವಸ್ಥಾ ಪ್ರಸಂಗ ಬರುವುದರಿಂದ, (ಈ ಮತ ಅಸಮಂಜಸ)

**ವಿವರಣೆ**

ಘಟಾದಿಗಳು ಭೂತಲದಲ್ಲಿರುವಾಗ, ಅವೆರಡಕ್ಕೂ ಸಂಯೋಗವೆಂಬ ಒಂದು ಸಂಬಂಧ ಕಾಣಿಸುವುದು. ಸಂಯೋಗ ಶಬ್ದ ಪರಂಪರೆಯಿಂದ ಸಂಬಂಧ ಹೇಳುವುದು. ಇದರಿಂದ, ಒಂದು ಮತ್ತೊಂದರಲ್ಲಿರುವಾಗ, ಅವೆರಡಕ್ಕೂ ಒಂದು ಸಂಬಂಧ ಬೇಕು. ಅದು ಸಂಯೋಗವೆಂದೂ ಸ್ವರೂಪವೆಂದೂ ಹಲವು ವಿಧವಾಗಿರುವುದು. ಸಂಯೋಗವೆಂಬುದು—ಯಾವ ದ್ರವ್ಯ ಮೊದಲು ಒಂದೆಡೆಯಲ್ಲಿದ್ದು ಅನಂತರ ಮತ್ತೆಲ್ಲಿ ಬಂದು ಸೇರುವುದೋ, ಅವೆರಡಕ್ಕೂ ಉಂಟಾದ ಸಂಬಂಧ. ಅದು ಮತ್ತೊಂದಕ್ಕೆ ಸಂಬಂಧವಾಗದು. ಹೀಗೆಯೇ, ರೂಪಾದಿ ಗುಣಗಳಿಗೂ ದ್ರವ್ಯಕ್ಕೂ ಒಂದು ಸಂಬಂಧ ಬೇಕೆಂದು, ಸಮವಾಯವೆಂಬ ಒಂದು ಸಂಬಂಧವನ್ನು ಅಂಗೀಕರಿಸಿದ್ದಾರೆ. ಹೀಗಾದಲ್ಲಿ, ಸಮವಾಯಕ್ಕೂ ದ್ರವ್ಯಕ್ಕೂ ಒಂದು ಸಂಬಂಧ ಬೇಕಾದ್ದರಿಂದ, ಅದಕ್ಕಾಗಿ ಮತ್ತೊಂದು ಸಂಬಂಧವನ್ನಂಗೀಕರಿಸಬೇಕು. ಅದಕ್ಕೂ ಹಾಗೆಯೇ—ಎಂದು ಅನವಸ್ಥೆ ಬರುವುದು. ಸಮವಾಯಕ್ಕೆ ಸ್ವರೂಪವೇ ಸಂಬಂಧವೆಂದಲ್ಲಿ, ರೂಪಾದಿಗಳಿಗೂ ಕೂಡ ಸ್ವರೂಪವೇ ಸಂಬಂಧವೆಂದು ಹೇಳಬಹುದಾದ್ದರಿಂದ, ಸಮವಾಯ ಸಿದ್ಧಿಸದು.

ಪೃಥಕ್ಸಿದ್ಧವಾದುವುಗಳಿಗೆ ಆಧಾರಾಧೇಯಭಾವಕ್ಕೆ ಉಪಪಾದಕವಾದ ಸಂಬಂಧ ಸಂಯೋಗ ಸಂಬಂಧವೆನಿಸುವುದು. ಅಪೃಥಕ್ಸಿದ್ಧವಾದುವುಗಳಿಗೆ ಆಧಾರಾಧೇಯಭಾವೋಪಪಾದಕ ಸಂಬಂಧ ಸಮವಾಯ ಸಂಬಂಧ. ಸಂಯೋಗವೆಂಬುದು ಪ್ರತ್ಯಕ್ಷಸಿದ್ಧ. ಅನುಪಲಬ್ಧವಾದ ಸಮವಾಯವನ್ನು ಕಲ್ಪಿಸಿ, ಅದಕ್ಕೆ ಮತ್ತೊಂದು ಉಪಪಾದಕವನ್ನು ಬೇಕಿಲ್ಲವೆನ್ನುವುದಕ್ಕಿಂತ, ಪ್ರತ್ಯಕ್ಷ ಸಿದ್ಧವಾದ ಅಪೃಥಕ್ಸಿದ್ಧ ಜಾತಿ ಗುಣಗಳ ಆಧಾರಾಧೇಯಭಾವ ಸಂಬಂಧಕ್ಕೇ ಉಪಪಾದಕಾಂತರ ಬೇಕಿಲ್ಲವೆಂಬುದೇ ಯುಕ್ತ. "ಧರ್ಮಿಕಲ್ಪನಾತೋ ವರಂ ಧರ್ಮಕಲ್ಪನಂ" ';—ಎಂದೂ ಲಾಘವ ನ್ಯಾಯವಿದೆ.

## ಸೂತ್ರ ೪—**ನಿತ್ಯಮೇವ ಚ ಭಾವಾತ್**

**ಸೂತ್ರಾರ್ಥ**

[ನಿತ್ಯಂ ಏವ] = ನಿತ್ಯವಾಗಿಯೇ,, [ಭಾವಾತ್,ಚ] = (ಗುಣಗುಣಿಗಳು) ಇರುವುದರಿಂದಲೂ, (ಕಾರ್ಯಕಾರಣಭಾವ ಸಿದ್ಧಿಸದು).

**ವಿವರಣೆ**

ಸಮವಾಯವೆಂಬ ಸಂಬಂಧ ನಿತ್ಯವಾದಲ್ಲಿ, ಅದು ನಿರಾಶ್ರಯವಾಗಿರುವುದಿಲ್ಲವಾದ್ದರಿಂದ, ಅದಕ್ಕೆ ಆಶ್ರಯವಾದ ಅವಯವ—ಅವಯವಿಗಳೆಂಬ ಘಟ—ಕಪಾಲಗಳೂ ನಿತ್ಯವಾಗಬೇಕು. ಆಗ್ಗೆ ಒಂದು ಕಾರಣವೆಂದೂ ಮತ್ತೊಂದು ಕಾರ್ಯವೆಂದೂ ಸಿದ್ಧಿಸದು. ಆದ್ದರಿಂದ ಅಸಮಂಜಸ.

## ಸೂತ್ರ ೫—**ರೂಪಾದಿಮತ್ತ್ವಾಚ್ಚ ವಿಪರ್ಯಯೋದರ್ಶನಾತ್**

**ಸೂತ್ರಾರ್ಥ**

[ರೂಪಾದಿಮತ್ತ್ವಾತ್] = (ಪೃಥಿವೀ–ಜಲ–ತೇಜೋ—ವಾಯು ಪರಮಾಣುಗಳು) ರೂಪ – ರಸ – ಗಂಧ – ಸ್ಪರ್ಶಗಳುಳ್ಳವುಗಳಾದ್ದರಿಂದ, [ದರ್ಶನಾತ್,ಚ] = (ರೂಪಾದಿಗಳುಳ್ಳ ಘಟಾದಿಗಳು ಅನಿತ್ಯವಾಗಿ) ಕಾಣುವುದರಿಂದಲೂ, [ವಿಪರ್ಯಯಃ = (ಪರಮಾಣುಗಳಿಗೂ) ಅನಿತ್ಯತ್ವ ಬರುವುದು.

**ವಿವರಣೆ**

ಘಟವೇ ಮುಂತಾದ ರೂಪವುಳ್ಳ ವಸ್ತುಗಳು ಅನಿತ್ಯವಾಗಿ ಕಾಣುವುದರಿಂದ, ತದನುಗುಣವಾಗಿ, ರೂಪವುಳ್ಳವುಗಳೆಲ್ಲವೂ ಅನಿತ್ಯಗಳೆಂದು ವ್ಯಾಪ್ತಿ ಸಿದ್ಧಿಸುವುದರಿಂದ, ರೂಪವುಳ್ಳ ಪರಮಾಣುವೂ ಅನಿತ್ಯವಾಗಬೇಕು. ಅದುದರಿಂದಲೂ ಅಸಮಂಜಸ.

[ಈ ದೋಷ ಪರಿಹಾರಕ್ಕಾಗಿ, ಪರಮಾಣುಗಳಿಗೆ ರೂಪಾದಿಗಳನ್ನು ಅಂಗೀಕರಿಸೆವು—ಎಂದಲ್ಲಿ ಮುಂದಿನ ಸೂತ್ರ ಹೇಳಿದ್ದಾರೆ.]

## ಸೂತ್ರ ೬—**ಉಭಯಥಾ ಚ ದೋಷಾತ್**

**ಸೂತ್ರಾರ್ಥ**

[ಉಭಯಥಾ,ಚ.] = ರೂಪಾದಿಗಳನ್ನು ಪರಮಾಣುಗಳಲ್ಲಿ ಒಪ್ಪಿಕೊಂಡಾಗೂ ಒಪ್ಪಿಕೊಳ್ಳದಿದ್ದಾಗ್ಗೂ, [ದೋಷಾತ್] = ದೋಷ ಸಂಭವಿಸುವುದರಿಂದ, (ಈ ಮತ ಅಸಂಗತ).

**ವಿವರಣೆ**

ನೂಲು ಬಿಳುಪಾದರೆ ಅದರಿಂದುಂಟಾಗುವ ವಸ್ತ್ರವೂ ಬಿಳುಪಾಗಿಯೂ, ಕಪ್ಪಗಿದ್ದಲ್ಲಿ ಕಪ್ಪಾಗಿಯೂ ಕಾಣುವುದರಿಂದ, ಕಾರಣದಲ್ಲಿ ಯಾವ ಗುಣವಿದೆಯೋ ಅದೇ ಗುಣ ಕಾರ್ಯದಲ್ಲಿಯೂ ಉಂಟಾಗುವುದು. ಮತ್ತೊಂದು ಗುಣವುಂಟಾಗದು. ಹೀಗಿರುವಲ್ಲಿ, ಕಾರ್ಯವಾದ ಜಗತ್ತಿನಲ್ಲಿ ರೂಪಕಾಣುವುದರಿಂದ,ಅದಕ್ಕೆ ಕಾರಣವಾಗಿ ಪರಮಾಣು

ಗಳಲ್ಲಿ ರೂಪವನ್ನು ಒಪ್ಪಿಕೊಳ್ಳಬೇಕು. ಹಾಗೆ ಪರಮಾಣುಗಳಲ್ಲಿ ರೂಪಾದಿಗಳನ್ನು ಒಪ್ಪಿಕೊಂಡಲ್ಲಿ, ಮೇಲೆ ಹೇಳಿದ ವ್ಯಾಪ್ತಿಯಿಂದ, ಅವು ಅನಿತ್ಯವಾಗುವುವು. ಅದಕ್ಕಾಗಿ ಅವುಗಳಲ್ಲಿ ರೂಪಾದಿಗಳನ್ನು ಒಪ್ಪಿಕೊಳ್ಳದೇ ಹೋದಲ್ಲಿ, ಕಾರಣವು ರೂಪ ಶೂನ್ಯವಾದರೆ, ಕಾರ್ಯವೂ ರೂಪಶೂನ್ಯವಾಗುವುದರಿಂದ, ಪರಮಾಣುವನ್ನು ಕಾರಣವಾಗಿಯುಳ್ಳ ಜಗತ್ತೂ ರೂಪಶೂನ್ಯವಾಬೇಕಾಗುವುದು. ಹೀಗೆ ಎರಡು ವಿಧಗಳಲ್ಲಿಯೂ, ದೋಷ ತಪ್ಪದು. ಅದುದರಿಂದಲೂ ಅಸಮಂಜಸ.

### ಸೂತ್ರ ೭—ಅಪರಿಗ್ರಹಾಚ್ಚಾತ್ಯನ್ತಮನಪೇಕ್ಷಾ

**ಸೂತ್ರಾರ್ಥ**

[ಅಪರಿಗ್ರಹಾತ್.ಚ] = (ಈ ಮತವನ್ನು ಶಿಷ್ಟರುಗಳು) ಪರಿಗ್ರಹಿಸದಿರುವುದರಿಂದಲೂ. [ಅತ್ಯನ್ತಾನಪೇಕ್ಷಾ] = ಅತ್ಯಂತವಾಗಿ ಉಪೇಕ್ಷಿಸತಕ್ಕದ್ದು.

**ವಿವರಣೆ**

ಸಾಂಖ್ಯಮತದಲ್ಲಿ ವೇದವಿರುದ್ಧಾರ್ಥಗಳಿದ್ದಾಗ್ಯೂ, ಸತ್ಕಾರ್ಯವಾದ ಮುಂತಾದ ಕೆಲವು ಅರ್ಥಗಳು ವೈದಿಕ ಸಂಮತವಾಗಿವೆ. ಇವರಲ್ಲಿ ಎಲ್ಲವೂ ವೇದವಿರುದ್ಧವಾದ್ದರಿಂದ, ಇದನ್ನು ವೈದಿಕರು ಸ್ವಲ್ಪವೂ ಅಂಗೀಕರಿಸಕೂಡದು.

## 3. ಸಮುದಾಯಾಧಿಕರಣ

### ಸೂತ್ರ—ಸಮುದಾಯ ಉಭಯಹೇತುಕೇಽಪಿತದಪ್ರಾಪ್ತಿಃ

**ಪ್ರತ್ಯುದಾಹೃತಿ ಸಂಗತಿ**

ಪರಮಾಣು ಕಾರಣವಾದಿಗಳಾದ ವೈಶೇಷಿಕರ ನಿರಸನವಾಯಿತು. ಸೌಗತರೂ ಜಗತ್ತಿಗೆ ಪರಮಾಣುಗಳನ್ನು ಕಾರಣವನ್ನಾಗಿ ಹೇಳುವುದರಿಂದ, ಅವರ ಮತದಲ್ಲಿಯೂ ಜಗದುತ್ಪತ್ತಿತದ್ವ್ಯವಹಾರಾದಿಗಳು ಉಪಪನ್ನವಾಗವೆಂದು ಇಲ್ಲಿ ಹೇಳುತ್ತಾರೆ.

**ಸೂತ್ರಾರ್ಥ**

[ಉಭಯ ಹೇತುಕೇ ಅಪಿ] = ಪರಮಾಣುಗಳನ್ನು ಹೇತುವಾಗಿಯುಳ್ಳದ್ದೂ, ಪೃಥಿವ್ಯಾದಿಗಳನ್ನು ಹೇತುವಾಗಿಯುಳ್ಳದ್ದೂ, ಆದ [ಸಮುದಾಯೇ] = ಪೃಥಿವ್ಯಾದಿ ಸಮುದಾಯದಲ್ಲಿಯೂ ಶರೀರೇಂದ್ರಿಯಾದಿ ಸಮುದಾಯದಲ್ಲಿಯೂ, [ತದಪ್ರಾಪ್ತಿಃ] = ಸಮುದಾಯತ್ವ ಪ್ರಾಪ್ತಿ (ಜಗದ್ರೂಪವಾದ ಸಮುದಾಯೋತ್ಪತ್ತಿ) ಸಂಭವಿಸದು.

**ವಿವರಣೆ**

ಈ ಅಧಿಕರಣದಲ್ಲಿ ವೈಭಾಷಿಕನನ್ನೂ ಸೌತ್ರಾಂತಿಕನನ್ನೂ ನಿರಸನ ಮಾಡುತ್ತಾರೆ. —ಇವರಿಬ್ಬರೂ ಪೃಥ್ವೀಜಲ ತೇಜೋವಾಯುಗಳೆಂಬ ನಾಲ್ಕು ವಿಧವಾದ ಪರಮಾಣುಗಳುಂಟು. ಅವು ಗುಂಪಾಗಿ ಸೇರಿದರೆ ಪೃಥಿವ್ಯಾದಿ ನಾಲ್ಕು ಭೂತಗಳುಂಟಾಗುತ್ತವೆ. ಆ ನಾಲ್ಕು ಭೂತಗಳೂ ಸೇರಿದರೆ ಶರೀರೇಂದ್ರಿಯಾದಿಗಳುಂಟಾಗುವುವು. ಜ್ಞಾನ ಪರಂಪರೆಯೇ ಆತ್ಮಾ. ಇವೆಲ್ಲವೂ ಮೊದಲನೇ ಕ್ಷಣದಲ್ಲಿ ಉಂಟಾಗಿ ಎರಡನೇ ಕ್ಷಣದಲ್ಲಿ ನಶಿಸುವುದರಿಂದ ಕ್ಷಣಿಕಗಳು—ಎನ್ನುವರು. ಇದು ಅಸಂಗತ. ಏಕೆಂದರೆ;—ಪರ

ಮಾಣುಗಳು ಮೊದಲನೇ ಕ್ಷಣದಲ್ಲಿ ಉತ್ಪನ್ನವಾಗಿ ಎರಡನೇ ಕ್ಷಣದಲ್ಲಿ ಸೇರಿ ಮೂರನೇ ಕ್ಷಣದಲ್ಲಿ ಪೃಥಿವ್ಯಾದಿಯಾಗಿ, ಅನಂತರ, ಅವನ್ನು ಕಾರ್ಯದಲ್ಲಿ ಉಪಯೋಗಿಸಿಕೊಳ್ಳಬೇಕು. ಪರಮಾಣುಗಳೂ ಪೃಥಿವ್ಯಾದಿಗಳೂ ಕ್ಷಣಿಕವಾದಲ್ಲಿ, ಅವು ಒಂದರೊಡನೊಂದು ಸೇರಬೇಕಾದ ಸಮಯದಲ್ಲಿಯೇ ನಷ್ಟವಾಗಿ ಬಿಟ್ಟಿದ್ದರಿಂದ ಅವುಗಳಿಂದ ಪೃಥಿವ್ಯಾದಿಗಳೂ ಅವುಗಳಿಂದ ಶರೀರಾದಿಗಳೂ ಉಂಟಾಗಲಾರವು.

### ಸೂತ್ರ ೨—ಇತರೇತರ ಪ್ರತ್ಯಯತ್ವಾದುಪಪನ್ನಮಿತಿಚೇನ್ನ ಸಂಘಾತ ಭಾವಾನಿಮಿತ್ತತ್ವಾತ್

**ಸೂತ್ರಾರ್ಥ**

[ಇತರೇತರ ಪ್ರತ್ಯಯತ್ವಾತ್] = ಅವಿದ್ಯೆಯಿಂದ ಹಿಡಿದು ಪೃಥಿವ್ಯಾದ್ಯನೇಕ ಪದಾರ್ಥಗಳು ಒಂದಕ್ಕೊಂದು ಕಾರಣವಾಗಿಯುಳ್ಳದಾದ್ದರಿಂದ, [ಉಪಪನ್ನಂ] = (ಜಗದುತ್ಪತ್ತಿ) ಉಪಪನ್ನವಾಗುವುದು. [ಇತಿ ಚೇತ್] = ಎಂದಲ್ಲಿ, [ಸಂಘಾತ ಭಾವಾ ನಿಮಿತ್ತತ್ವಾತ್] = (ಅವಿದ್ಯೆಗೆ)ಸಮುದಾಯದ ಕಾರ್ಯವಾದ ವ್ಯವಹಾರಾದಿಗಳನ್ನು ಕುರಿತು ಕಾರಣತ್ವವಿಲ್ಲದುದರಿಂದ, [ನ] = (ಅದೂ) ಸಂಭವಿಸದು.

**ವಿವರಣೆ**

ಪರಮಾಣುಗಳು ಕ್ಷಣಿಕವಾದಾಗ್ಯೂ ಜಗದುತ್ಪತ್ತಿ ಸಂಭವಿಸುವುದು. ಹೇಗೆಂದರೆ —ಅಸ್ಥಿರವಾದ ಪೃಥಿವ್ಯಾದಿಗಳಲ್ಲಿ ಸ್ಥಿರವೆಂಬ ಜ್ಞಾನವೇ ಅವಿದ್ಯೆ—ಅಂದರೆ ಅಜ್ಞಾನ. ಆ ಅವಿದ್ಯೆಯಿಂದ ರಾಗದ್ವೇಷಾದಿಗಳು, ಅವುಗಳಿಂದ ಚಿತ್ತಾಭಿಜ್ವಲನವೆಂಬ ವಿಜ್ಞಾನ, ಅದರಿಂದ ದ್ರವ್ಯೋತ್ಪತ್ತಿ, ಅದರಿಂದ ಇಂದ್ರಿಯೋತ್ಪತ್ತಿ, ಅದರಿಂದ ಶರೀರೋತ್ಪತ್ತಿ. ಅದರಿಂದ ಜ್ಞಾನ, ಅದರಿಂದ ಮತ್ತೆಯೂ ಅವಿದ್ಯೆ—ಈ ರೀತಿ ಚಕ್ರದಂತೆ ಇವುಗಳೇ ಮತ್ತೆ ಮತ್ತೆ ಉಂಟಾಗುವುವು. ಆದ್ದರಿಂದ ಜಗದುತ್ಪತ್ತಿಯಲ್ಲಿ ಅನುಪಪತ್ತಿಯಿಲ್ಲ, ಎಂದಲ್ಲಿ, ಆದರೂ, ಅಸ್ಥಿರದಲ್ಲಿ ಸ್ಥಿರವೆಂಬ ಅವಿದ್ಯೆಯಿಂದ ಅಸ್ಥಿರವಾದ ಜಗತ್ತು ಸ್ಥಿರವಾಗಲಾರದು. ಅದರಿಂದ ಒಂದು ಕಾರ್ಯವೂ ಸಾಧಿಸಲ್ಪಡದು. ಆತ್ಮವೂ ಅನಿತ್ಯವಾದ್ದರಿಂದ ಜ್ಞಾನ ಹುಟ್ಟಿದ ಮರುಕ್ಷಣದಲ್ಲಿಯೇ ನಶಿಸಿ ಹೋಗುವುದರಿಂದ ಅದರಿಂದ ರಾಗ ದ್ವೇಷಾದಿಗಳು ಯಾರಿಗೆ ಉಂಟಾದೀತು ? ಆದ್ದರಿಂದ ಈ ಮತ ಸರಿಯಲ್ಲ.

### ಸೂತ್ರ ೩—ಉತ್ತರೋತ್ಪಾದೇ ಚ ಪೂರ್ವನಿರೋಧಾತ್

**ಸೂತ್ರಾರ್ಥ**

[ಉತ್ತರೋತ್ಪಾದೇ] = ಉತ್ತರಕ್ಷಣ ಉಂಟಾಗುವ ಸಮಯದಲ್ಲಿ [ಪೂರ್ವನಿರೋಧಾತ್,ಚ] ಪೂರ್ವಕ್ಷಣ ನಶಿಸುವುದರಿಂದಲೂ, (ಜಗದುತ್ಪತ್ತಿ ಕೂಡುವುದಿಲ್ಲ).

ಅಲ್ಲದೆ, ಘಟವುಂಟಾಗುವುದಕ್ಕೆ ಕಾರಣವಾವುದು ? ಅದಕ್ಕೆ ಮುಂಚಿನ ಕ್ಷಣ ಕಾರಣವೆಂದಲ್ಲಿ ಆ ಕ್ಷಣವು ಘಟವುಂಟಾಗುವಾಗ ನಶಿಸಿ ಹೋದುದರಿಂದ, ಘಟವುಂಟಾಗ ಕೂಡದು. ಪೂರ್ವಕ್ಷಣಾಭಾವವೇ ಹೇತುವೆಂದಲ್ಲಿ ಈ ಅಭಾವ ಎಲ್ಲಕ್ಕೂ ಸಮಾನವಾದ್ದ

ರಿಂದ. ಘಟವುಂಟಾಗುವಾಗ ಮತ್ತೆಲ್ಲಿ ವಸ್ತುಗಳೂ ಉಂಟಾಗಬೇಕಾಗುವುದು. ಘಟಾಧಿಕರಣ ಪೂರ್ವಕ್ಷಣಾಭಾವ ರೂಪಕಾರಣದಿಂದ ಘಟಜಾತಿಯೇ ಉಂಟಾಗುವುದೆಂದಲ್ಲಿ ದೇಶಾಂತರದಲ್ಲಿರುವ ಘಟವೂ ಇಲ್ಲಿ ಉಂಟಾಗಬೇಕು. ಒಂದು ವ್ಯಕ್ತಿಯೇ ಉಂಟಾಗುವುದೆಂದಲ್ಲಿ, ಯಾವ ವ್ಯಕ್ತಿಯುಂಟಾಗುವುದೋ ಅದನ್ನು ಹೇಳಬೇಕು. ಯಾವ ದೇಶದಲ್ಲಿ ಯಾವ ವ್ಯಕ್ತಿಯಿದ್ದಿತೋ, ಆ ದೇಶದಲ್ಲಿ ತದ್ದೇಶ ಸಂಬಂಧಿಯಾದ ವ್ಯಕ್ತಿಯೇ ಉಂಟಾಗುವುದೆಂದಲ್ಲಿ, ಪೂರ್ವೋತ್ತರ ಕ್ಷಣಗಳಲ್ಲಿ ಒಂದು ದೇಶವನ್ನು ಸ್ಥಿರವಾಗಿ ಅಂಗೀಕರಿಸದಿರುವುದರಿಂದ ಇದೂ ಸಂಭವಿಸದು.

ಸೂತ್ರ ೪—**ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯಮನ್ಯಥಾ**

**ಸೂತ್ರಾರ್ಥ**

[ಅಸತಿ] = ಕಾರಣವಿಲ್ಲದೆಯೇ ಕಾರ್ಯವುಂಟಾಗುವುದೆಂದಲ್ಲಿ [ಪ್ರತಿಜ್ಞೋಪರೋಧಃ] (ಇಂದ್ರಿಯ. ಪ್ರಕಾಶ, ವಿಷಯ ಮುಂತಾದ ಕಾರಣಗಳಿಂದ ಪದಾರ್ಥ ದರ್ಶನಾದಿ ಕಾರ್ಯವುಟಾಗುವುದೆಂಬ ನಿಮ್ಮ) ಪ್ರತಿಜ್ಞೆಗೆ ವಿರೋಧ ಬರುವುದು. [ಅನ್ಯಥಾ] = ಈ ಅಸಂಪಪತ್ತಿ ಹೋಗುವುದಕ್ಕಾಗಿ, ಪೂರ್ವಘಟಕ್ಕೆ ಕಾರಣವಾದ ಕ್ಷಣವೇ ಈ ಘಟೋತ್ಪತ್ತಿಯವರಿಗೆ ಇರುವುದೆಂದು ಒಪ್ಪಿಕೊಂಡಲ್ಲಿ, [ಯೌಗಪದ್ಯಂ] = ಪೂರ್ವಘಟಕ್ಷಣವೂ ಈಗ ಉಂಟಾದ ಕ್ಷಣವೂ ಒಂದೇ ಕಾಲದಲ್ಲಿ ತೋರಬೇಕಾಗುವುದು. (ಹಾಗೆ ತೋರುವುದಿಲ್ಲವಾದ್ದರಿಂದ. ಈ ಕಾರ್ಯಕಾರಣಭಾವ ಸರಿಯಲ್ಲ.)

ಸೂತ್ರ ೫—**ಪ್ರತಿಸಂಖ್ಯಾಪ್ರತಿಸಂಖ್ಯಾ ನಿರೋಧಾಪ್ರಾಪ್ತಿರವಿಚ್ಛೇದಾತ್**

**ಸೂತ್ರಾರ್ಥ**

[ಅವಿಚ್ಛೇದಾತ್] = (ಮೃತ್ಪಿಂಡಾದಿಗಳಿಗೆ) ಪ್ರತಿಸಂಖ್ಯಾನಿರೋಧವೆಂಬ ಸ್ಥೂಲ ವಿನಾಶವಾಗಲಿ ಅಪ್ರತಿಸಂಖ್ಯಾನಿರೋಧವೆಂಬ ಸೂಕ್ಷ್ಮವಿನಾಶವಾಗಲಿ ಕಾಣದುದರಿಂದ, ದ್ರವ್ಯಕ್ಕೆ ಹೇಗೂ ನಿರನ್ವಯ ವಿನಾಶ ಸಂಭವಿಸದು.

**ವಿವರಣೆ**

ಘಟಾದಿಗಳು ದಂಡ ಮುಂತಾದುವುಗಳಿಂದ ಏಟು ತಗುಲಿ ಮುರಿದಲ್ಲಿ, ಆ ನಾಶಕ್ಕೆ ಪ್ರತಿಸಂಖ್ಯಾನಿರೋಧವೆಂದೂ, ಪ್ರತಿಕ್ಷಣದಲ್ಲಿಯೂ ಉಂಟಾಗುವ ಘಟನಾಶಕ್ಕೆ ಅಪ್ರತಿಸಂಖ್ಯಾನಿರೋಧವೆಂದೂ ಹೆಸರು. ಮೊದಲನೆಯದು ಸ್ಥೂಲವಿನಾಶ. ಎರಡನೆಯದು ಸೂಕ್ಷ್ಮವಿನಾಶ. ಈ ಎರಡು ವಿಧವಾದ ನಾಶವೂ ದ್ರವ್ಯಕ್ಕೆ ಸಂಭವಿಸದು. ಏಕೆಂದರೆ—ವಿನಾಶವೆಂಬುದು ದ್ರವ್ಯಕ್ಕೆ ಒಂದು ಅವಸ್ಥೆಯೆಂದೂ, ಅದು ದ್ರವ್ಯವನ್ನೇ ಆಶ್ರಯಿಸಿರುವುದೆಂದೂ, ನಮ್ಮ ಹಾಗೆ ನೀವು ಒಪ್ಪಿಕೊಳ್ಳುವುದಿಲ್ಲ. ವಿನಾಶವೆಂಬ ಅವಸ್ಥೆಗೆ ಆಶ್ರಯವೇ ಇಲ್ಲವೆನ್ನುವಿರಿ. ನಾವು ಇದಕ್ಕೆ ಮುಂಚೆಯೇ, ಆರಂಭಣಾಧಿಕರಣದಲ್ಲಿ ಉತ್ಪತ್ತಿವಿನಾಶಗಳು ಅವಸ್ಥಾ ವಿಶೇಷಗಳೆಂದೂ ಅವು ಒಂದು ದ್ರವ್ಯವನ್ನು ಆಶ್ರಯಿಸಿಯೇ ಇರುವುವೆಂದೂ ಸ್ಥಾಪಿಸಿದ್ದೇವೆ. ಆದ್ದರಿಂದ ನೀವು ಹೇಳುವ ನಿರನ್ವಯ ವಿನಾಶ ಸಂಭವಿಸುವುದಿಲ್ಲ.

ಸೂತ್ರ ೭—**ಉಭಯಥಾ ಚ ದೋಷಾತ್**

**ಸೂತ್ರಾರ್ಥ**

[ಉಭಯಥಾ, ಚ] = ತುಚ್ಛದಿಂದ ಜಗತ್ತು ಉಂಟಾಗುತ್ತೆ ಎಂದಾಗೂ ಉತ್ಪನ್ನವಾದ ಜಗತ್ತು ತುಚ್ಛವೆಂದಾಗ್ಯೂ [ದೋಷಾತ್] = ದೋಷ ಸಂಭವಿಸುವುದರಿಂದ. (ಈ ಮತ ಅಸಂಗತ)

**ವಿವರಣೆ**

ತುಚ್ಛವೆನ್ನುವುದು ಕುದುರೆಯ ಕೊಂಬಿನಂತೆ, ಇಲ್ಲದವಸ್ತುವನ್ನು. ಜಗತ್ತು ನಿಮಗೂ ಕಾಣಿಸುವುದರಿಂದ ಅದನ್ನು ತುಚ್ಛವೆನ್ನಲಾಗದು. ತುಚ್ಛದಿಂದ ಜಗತ್ತು ಉಂಟಾಗುವುದೆಂದು ನೀವು ಹಿಂದೆ ಅಂದಂತೆ ಒಪ್ಪಿಕೊಂಡಲ್ಲಿ, ಮೃತ್ತಿನಿಂದ ಮೃನ್ಮಯವಾದ ಘಟ, ಸುವರ್ಣದಿಂದ ಸುವರ್ಣಮಯವಾದ ಮಕುಟಾದಿಗಳೇ ಉಂಟಾಗುವುದು ಕಾಣುವುದರಿಂದ, ತುಚ್ಛದಿಂದ ಉಂಟಾದ ಜಗತ್ತೂ ತುಚ್ಛವೇ ಆದೀತು. ಅದರಿಂದ ಯಾವ ಪ್ರಯೋಜನವೂ ಸಿದ್ಧಿಸದು.

ಸೂತ್ರ ೭—**ಆಕಾಶೇ ಚಾ ವಿಶೇಷಾತ್**

**ಸೂತ್ರಾರ್ಥ**

[ಅವಿಶೇಷಾತ್] = ಮಿಕ್ಕ ಪದಾರ್ಥಗಳ ಜ್ಞಾನಕ್ಕಿಂತ ಆಕಾಶ ಜ್ಞಾನಕ್ಕೆ ವಿಶೇಷವಿಲ್ಲದುದರಿಂದ, [ಆಕಾಶೇ,ಚ] = ಆಕಾಶದಲ್ಲಿಯೂ (ತುಚ್ಛಸ್ವರೂಪತ್ವ ಸಂಭವಿಸದು)

**ವಿವರಣೆ**

ಆಕಾಶ ಇಲ್ಲವೆಂದು ನೀವು ಅಂದದ್ದು ಸರಿಯಲ್ಲ. ಏಕೆಂದರೆ—ಅಲ್ಲಿ ಎತ್ತರವಾಗಿ ಹುಟ್ಟಿ ಮರೆಸುವುದೆಂದಲ್ಲಿ, 'ಅಲ್ಲಿ'—ಎಂಬ ಪದಕ್ಕೆ ಅರ್ಥ ಇಂಥದೆಂದು ಹೇಳಬೇಕು, ಅದು ಪೃಥ್ವೀ ಜಲ ತೇಜಸ್ಸು ವಾಯುಗಳಾಗವು. ಆದ್ದರಿಂದ, 'ಅಲ್ಲಿ' 'ಇಲ್ಲಿ' ಎಂದು, ಪ್ರತ್ಯಕ್ಷವಾಗಿ ಕಾಣುವ ದೇಶ ವಿಶೇಷವಾದ ಆಕಾಶವನ್ನು ಪ್ರತ್ಯಕ್ಷವಾಗಿ ಕಾಣುವ ಪೃಥಿವ್ಯಾದಿಗಳಂತೆ ಒಪ್ಪಲೇ ಬೇಕು.

ಸೂತ್ರ ೮—**ಅನುಸ್ಮೃತೇಶ್ಚ**

**ಸೂತ್ರಾರ್ಥ**

ಪ್ರತ್ಯಭಿಜ್ಞೆಯಿಂದಲೂ, (ಘಟಾದಿಗಳನ್ನು ಕ್ಷಣಿಕವೆನ್ನಲಾಗದು)

**ವಿವರಣೆ**

ನಾನು ಮುಂಚೆ ನೋಡಿದ ವಸ್ತುವನ್ನು ಈಗ ನೋಡುತ್ತಿದ್ದೇನೆ—ಎಂದು ಲೋಕದಲ್ಲಿ ಹೇಳುತ್ತಾರೆ. ಘಟವನ್ನು ನೋಡುವವನೂ, ಕ್ಷಣಿಕವಾದಲ್ಲಿ, ಮುಂಚೆ ನೋಡಿದ್ದ ಕೂಡಲೆ ಆ ಘಟವೂ ಅದನ್ನು ನೋಡಿದ್ದವನೂ ನಶಿಸಿ ಹೋದುದರಿಂದ ಅದನ್ನು ಈಗ ನೋಡುತ್ತಿದ್ದೇನೆ ಎಂದು ಹೇಳಕೂಡದು. ದೀಪ ಪ್ರತಿಕ್ಷಣವೂ ನಶಿಸಿ ಹೋದಾಗ್ಯೂ, ಮುಂಚೆ ನೋಡಿದ್ದ ದೀಪವೇ ಇದೆಂದು ಹೇಳುತ್ತಾರೆ. ಅದಕ್ಕೆ ಕಾರಣ ಈ ದೀಪ ಆ ದೀಪದಂತೆಯೇ ಇರುವುದು. ಅದರಂತೆಯೇ ಇಲ್ಲಿಯೂ ಸಾಮ್ಯವನ್ನು

ಕಂಡು ಅದೇ ಇದು ಎನ್ನುವರು—ಎಂದಲ್ಲಿ, ಅದರಲ್ಲಿಯೂ ಆಗ ನೋಡಿದವನು ಈಗಲೂ ಇರಬೇಕಾಗಿರುವುದರಿಂದ, ನಿಮ್ಮ ಮತದಲ್ಲಿ ಅದು ಇಲ್ಲದುದರಿಂದ, ಅಸಂಗತವಾಗುವುದು

ಸೂತ್ರ ೯—**ನಾಸತೋಽದೃಷ್ಟತ್ವಾತ್**

**ಸೂತ್ರಾರ್ಥ**

. [ಅದೃಷ್ಟತ್ವಾತ್] = (ನಶಿಸಿದ ವಸ್ತುವಿನ ಧರ್ಮ ಮತ್ತೊಂದರಲ್ಲಿ ಸಂಗಮಿಸುವುದನ್ನು) ಕಾಣದುದರಿಂದ,[ಅಸತಃ] = ಇಲ್ಲದ ಪದಾರ್ಥದ (ಧರ್ಮ) [ನ] = ಜ್ಞಾನದಲ್ಲಿ ಸಂಕ್ರಮಿಸದು.

**ವಿವರಣೆ**

ಸೌತ್ರಾಂತಿಕನು ಘಟಾದಿ ಪದಾರ್ಥಗಳು ನಶಿಸುವಾಗ ತನ್ನ ನೀಲ—ಪೀತ—ಪೃಥು—ಬುಧ್ನೋದರ ಮುಂತಾದ ಆಕಾರಗಳನ್ನು ಜ್ಞಾನದಲ್ಲಿ ತೋರಿಸಿಬಿಟ್ಟು ಹೋಗುವುವು. ಅದರಿಂದ ಜ್ಞಾನ ಆ ಆಕಾರಗಳನ್ನು ಹೊಂದಿ ಒಂದಕ್ಕೊಂದು ವಿಲಕ್ಷಣವಾಗಿರುವುದು. ಜ್ಞಾನ ವಿಲಕ್ಷಣವಾಗಿರುವುದಕ್ಕೆ ಮೂಲವಾದ ವಿಷಯಗಳು ವಿಲಕ್ಷಣಗಳಾಗಿ ಮುಂಚೆ ಉಂಟಾಗಿರಬೇಕು—ಎಂದು ಜಗತ್ತು ಉಂಟೆಂದು ಊಹಿಸುತ್ತಾನೆ. ಅವನಿಗೆ ಜಗತ್ತು ಪ್ರತ್ಯಕ್ಷಸಿದ್ಧವಲ್ಲ. ಅವನ ಮತವನ್ನು ನಿರಸನ ಮಾಡುತ್ತಾರೆ;—ಘಟಾದಿಗಳು ನಶಿಸಿದಲ್ಲಿ ಅವುಗಳ ರೂಪಾದಿಗಳು ಮತ್ತೊಂದರಲ್ಲಿ ಸಂಕ್ರಮಿಸುವುದು ಕಾಣದುದರಿಂದ ಘಟ ನಶಿಸುವಾಗ ಅದರ ನೀಲಾದ್ಯಾಕಾರವು ಜ್ಞಾನದಲ್ಲಿ ಸಂಕ್ರಮಿಸುವುದೆಂಬುದು ಅಸಂಗತ.

ಸೂತ್ರ ೧೦—**ಉದಾಸೀನಾನಾಮಪಿ ಚೈವಂ ಸಿದ್ಧಿಃ**

**ಸೂತ್ರಾರ್ಥ**

[ಏವಂಚ] = ಹೀಗಾದಲ್ಲಿ, [ಉದಾಸೀನಾನಾಂ. ಅಪಿ] = ಪ್ರಯತ್ನಮಾಡದೆ ಇರತಕ್ಕವರಿಗೂ [ಸಿದ್ಧಿ] = ಫಲವು ಸಿದ್ಧಿಸಬೇಕಾಗಿ ಬರುವುದು.

**ವಿವರಣೆ**

ಇದು ವೈಭಾಷಿಕ—ಸೌತ್ರಾಂತಿಕರಿಬ್ಬರಿಗೂ ದೂಷಣ —ಎಲ್ಲವೂ ಕ್ಷಣಿಕವಾದಲ್ಲಿ, ಒಂದು ಪ್ರಯೋಜನವನ್ನು ಕುರಿತು ಪ್ರಯತ್ನವನ್ನು ಮಾಡಿದವನು ಒಡನೆ ನಶಿಸಿಹೋದ. ಅವನು ಅರಿತಿದ್ದ ಪ್ರಯೋಜನವನ್ನು ಈಗ ಮತ್ತೊಬ್ಬನು ಪ್ರಯತ್ನವಿಲ್ಲದೆಯೇ ಹೊಂದುತ್ತಾನೆ—ಎಂದು ಒಪ್ಪಿಕೊಳ್ಳಬೇಕು—ಹೀಗಾದಲ್ಲಿ ಒಂದು ಪ್ರಯೋಜನವನ್ನು ಉದ್ದೇಶಿಸಿ ಪ್ರಯತ್ನ ಮಾಡುವುದು ವ್ಯರ್ಥವಾಗಿ, ಪ್ರಯತ್ನವಿಲ್ಲದೆಯೇ ಸರ್ವರಿಗೂ ಸಮಸ್ತ ಪ್ರಯೋಜನಗಳೂ ಸಿದ್ಧಿಸಬೇಕಾಗಿ ಬರುವುದು.

ಇಲ್ಲಿ ಕೆಲವರ ಚೋದ್ಯವೇನೆಂದರೆ:—ಬುದ್ಧನೂ ಭಗವದವತಾರವೆಂದು ಪರಿಗಣಿತನಾಗಿದ್ದಾನೆ. ಅವನೂ ಸರ್ವಜ್ಞ, ಸರ್ವಸುಹೃತ್, ಸರ್ವಜ್ಞನಾದ್ದರಿಂದ ಅವನು ಭ್ರಾಂತನೆನ್ನಲಾಗದು. ಸರ್ವಸುಹೃತ್ ಆದ್ದರಿಂದ ವಿಪ್ರಲಂಭಕನೂ ಅಲ್ಲ, ಅವನ ಉಪದೇಶವನ್ನು ನಿರಾಕರಿಸಿದಲ್ಲಿ ಭಗವದುಕ್ತವಾದ ಪಾಂಚರಾತ್ರ ಶಾಸ್ತ್ರವನ್ನೂ ನಿರಾ

ಕರಿಸಬೇಕಲ್ಲವೇ—ಎಂಬುದು. ಇದಕ್ಕೆ ಸಮಾಧಾನ—ಬೌದ್ಧ ಮತ್ತು ಪಾಂಚರಾತ್ರದ ಪ್ರವರ್ತನ ಪ್ರಕಾರದಲ್ಲಿಯು ವೈಷಮ್ಯದಿಂದೆನ್ನಬೇಕು. "ಏಷಏವಾ ಸಾಧುಕರ್ಮಕಾರ ಯತಿ ಯಮಧೋನಿನೀಷತಿ," — "ಕ್ಷಿಪಾಮ್ಯಜಸ್ರಮಶುಭಾನ್ ಆಸುರೀಷ್ವೇವ ಯೋನಿಷು," ...ಇತ್ಯಾದಿ ಪ್ರಕಾರಗಳಿಂದ, ತನಗೆ ಅನಿಷ್ಟವಾದ ರಾಜಸ—ತಾಮಸರ ಪ್ರಮಥನಕ್ಕಾಗಿ ಬುದ್ಧನಾಗಿ ಅವತರಿಸಿ ಭಗವಂತ ಅವರ ಮೋಹನಾದಿಗಳಲ್ಲಿ ಪ್ರವೃತ್ತನಾಗಿದ್ದಾನೆಂಬುದು ಪ್ರಮಾಣಸಿದ್ಧವಾಗಿದೆ. ಆದ್ದರಿಂದ ಬೌದ್ಧಮತವು ಪ್ರಾಮಾಣಿಕರಿಗೆ ಗ್ರಾಹ್ಯವಲ್ಲ.ಪಾಂಚರಾತ್ರವಾದರೋ—ಆಶ್ರಿತ—ಸಂರಕ್ಷಣಕ್ಕಾಗಿ ಪ್ರವೃತ್ತವಾದ್ದರಿಂದ ತತ್ತ್ವವನ್ನೇ ಬೋಧಿಸುತ್ತದೆಯಾಗಿ—ಇದು ನಿಶ್ರೇಯಸ್ಸನ್ನು ಬಯಸುವವರಿಗೆ ಪರಮ ಗ್ರಾಹ್ಯವೆನ್ನಬೇಕು.

## 4. ಉಪಲಬ್ಧ್ಯಧಿಕರಣ

### ಸೂತ್ರ—**ನಾ ಭಾವ ಉಪಲಬ್ಧೇಃ**

### ಸಂಗತಿ

ಬಾಹ್ಯಾರ್ಥಗಳು ಅಸ್ಥಿರವೆನ್ನುವ ವೈಭಾಷಿಕ—ಸೌತ್ರಾಂತಿಕರ ನಿರಸನಾನಂತರ, ಬಾಹ್ಯಾರ್ಥಗಳಿಲ್ಲವೆಂದು ವಾದಿಸುವ ಯೋಗಾಚಾರರ ಮತ ಈಗ ನಿರಸ್ತವಾಗುತ್ತೆ. ಇದು ಪ್ರತ್ಯುದಾಹೃತಿ ಸಂಗತಿ.

### ಸೂತ್ರಾರ್ಥ

[ಉಪಲಬ್ಧೇಃ] = (ಜ್ಞಾನವು ಸಕರ್ಮಕವಾಗಿಯೂ ಸಕರ್ತೃಕವಾಗಿಯೂ) ಕಾಣಿಸುವುದರಿಂದ [ಅಭಾವಃ] = ಜ್ಞಾನಾತಿರಿಕ್ತವಾದ ವಸ್ತುಗಳಿಲ್ಲವೆಂಬುದು [ನ] = ಸಿದ್ಧಿಸದು.

### ವಿವರಣೆ

ಇದರಲ್ಲಿ ಯೋಗಾಚಾರರನ್ನೂ ನಿರಸನ ಮಾಡಿದ್ದಾರೆ:—ಅವನು, ಜ್ಞಾನಮಾತ್ರವೇ ಇರುವುದೆಂಬುದು, ಅದಕ್ಕಿಂತ ಅತಿರಿಕ್ತವಾದ ಪದಾರ್ಥಗಳು ಇಲ್ಲ. ಆ ಜ್ಞಾನವೇ ನೀಲ ಪೀತಾದಿ ಸಮಸ್ತ ಆಕಾರಗಳನ್ನೂ ಉಳ್ಳದ್ದು. ಆ ಆಕಾರವುಳ್ಳ ಹೃದಯದಲ್ಲಿರುವ ಜ್ಞಾನವೇ ಹೊರಗೆ ಘಟಾದಿ ಪದಾರ್ಥಗಳಂತೆ ಭ್ರಮದಿಂದ ಕಾಣುವುದು. ಘಟಾದಿಗಳನ್ನು ಒಪ್ಪಿಕೊಂಡವನೂ, ಜಡಗಳಾದ ಅವು ತಾವೇ ಪ್ರಕಾಶಿಸಲಾರವಾದ್ದರಿಂದ ಅವು ಪ್ರಕಾಶಿಸುವುದಕ್ಕಾಗಿ ಜ್ಞಾನವನ್ನು ಅಂಗೀಕರಿಸಬೇಕು. ಆಗ್ಗೆ ಪದಾರ್ಥ, ಜ್ಞಾನ—ಎಂದು ಎರಡನ್ನು ಅಂಗೀಕರಿಸುವುದಕ್ಕಿಂತಲೂ, ಜ್ಞಾನವೊಂದನ್ನೇ ಅಂಗೀಕರಿಸುವುದು ಉಚಿತ. ಆದ್ದರಿಂದಲೇ, ಸಕಲ ವ್ಯವಹಾರಗಳೂ ನಡೆಯುವುದು—ಎನ್ನುತ್ತಾನೆ. 'ನಾನು ಇದನ್ನು ಅರಿಯುತ್ತೇನೆ'—ಎನ್ನುವಾಗ; 'ನಾನು'—ಎಂಬ ಜ್ಞಾನಕ್ಕೆ ಆಶ್ರಯವಾದ ಕರ್ತೃವೂ, 'ಇದನ್ನು'—ಎಂದು ಅದಕ್ಕೆ ವಿಷಯವಾದ ಕರ್ಮವೂ ಜ್ಞಾನಕ್ಕಿಂತ ಬೇರೆಯಾಗಿ ತೋರಿ, 'ಅರಿಯುತ್ತೇನೆ'—ಎಂದು ಜ್ಞಾನವೂ ಬೇರೆಯಾಗಿ ತೋರಿಕೊಂಡಿರುವಾಗ, ಈ ಮೂರರಲ್ಲಿ ಒಂದನ್ನು ಒಪ್ಪಿಕೊಂಡು, ಪ್ರತ್ಯಕ್ಷವಾಗಿ ಕಾಣುವ ಮಿಕ್ಕ ಎರಡನ್ನೂ ಇಲ್ಲವೆನ್ನುವುದು ಅನುಚಿತ. ಆದ್ದರಿಂದ ಈ ಮತ ಸಯುಕ್ತಿಕವಲ್ಲ.

ಸೂತ್ರ ೨—**ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್**

**ಸೂತ್ರಾರ್ಥ**

[ವೈಧರ್ಮ್ಯಾತ್,ಚ] = ಸ್ವಪ್ನದಲ್ಲಿ ಕಾಣಿಸುವ ಪದಾರ್ಥಗಳಿಗಿಂತ, ಈ ಪದಾರ್ಥಗಳು ವಿಜಾತೀಯವಾದ್ದರಿಂದ,[ಸ್ವಪ್ನಾದಿವತ್] = ಸ್ವಪ್ನದಲ್ಲಿ ಕಾಣುವ ಪದಾರ್ಥಗಳಂತೆ [ನ] = (ಈ ಪದಾರ್ಥಗಳು) ಆಗವು.

**ವಿವರಣೆ**

ಇಲ್ಲದ ಪದಾರ್ಥಗಳೇ ಸ್ವಪ್ನದಲ್ಲಿ ಭ್ರಮದಿಂದ ಕಾಣಿಸುವಂತೆ; ಇಲ್ಲದ ಪದಾರ್ಥಗಳೇ ನಮಗೆ ಈಗ ಭ್ರಮದಿಂದ ಕಾಣಿಸುವುವು. ಅವು ವಾಸ್ತವವಲ್ಲ—ಎಂದಲ್ಲಿ, ಅದಕ್ಕೂ ಇದಕ್ಕೂ, ಭೇದವುಂಟು. ಸ್ವಪ್ನದಲ್ಲಿ ಕಂಡ ಪದಾರ್ಥಗಳು ಎಚ್ಚರಗೊಂಡಮೇಲೆ ಕಾಣಿಸುವುದಿಲ್ಲವಾದ್ದರಿಂದ, ನಿದ್ರೆಯಲ್ಲಿ ಉಂಟಾದ ಇಂದ್ರಿಯ ದೋಷದಿಂದ ಅಸತ್ಯವಾದುವುಗಳೇ ನಮ್ಮಿಂದ ಸತ್ಯದಂತೆ ಕಾಣಲ್ಪಟ್ಟವು—ಎಂದು ಒಪ್ಪಿಕೊಳ್ಳುತ್ತೇವೆ. ಇಲ್ಲಿ ಕಾಣುವ ಪದಾರ್ಥಗಳು ಸ್ಥಿರವಾಗಿ ಕಾಣಿಸುವುದರಿಂದಲೂ, ಆ ವಿಧವಾದ ದೋಷಗಳೊಂದೂ ಇಲ್ಲವಾದ್ದರಿಂದಲೂ. ಅವುಗಳಂತೆ ಈ ಪದಾರ್ಥಗಳನ್ನು ಅಸತ್ಯವೆಂದು ಅಂಗೀಕರಿಸಕೂಡದು.

ಸೂತ್ರ ೩—**ನ ಭಾವೋಽನುಪಲಬ್ಧೇಃ**

**ಸೂತ್ರಾರ್ಥ**

[ಅನುಪಲಬ್ಧೇಃ] = ಪ್ರತ್ಯಕ್ಷವಲ್ಲವಾದ್ದರಿಂದ [ಭಾವಃ] = ಜ್ಞಾನದ ಸತ್ತೆ [ನ] = ಉಪಪನ್ನವಾಗದು.

**ವಿವರಣೆ**

ಪ್ರತ್ಯಕ್ಷಸಿದ್ಧವಾಗಿ ಅಬಾಧಿತವಾದ ವಿಷಯಗಳನ್ನು ಒಪ್ಪಿಕೊಳ್ಳದೆ, ಅಪ್ರತ್ಯಕ್ಷ ಜ್ಞಾನವನ್ನು ಅಂಗೀಕರಿಸುವುದು ಯುಕ್ತಿಮತ್ತಲ್ಲ.

## 5. ಸರ್ವಥಾನುಪಪತ್ತ್ಯಧಿಕರಣ

ಸೂತ್ರ—**ಸರ್ವಥಾನುಪಪತ್ತೇಶ್ಚ**

**ಸಂಗತಿ**

ಸರ್ವಥಾ ಏನೂ ಇಲ್ಲವೇ ಇಲ್ಲ—ಎಂಬಲ್ಲಿ ಯಾವ ದೋಷವೂ ಇಲ್ಲವೆಂದು ಮಾಧ್ಯಮಿಕ ವಾದಿಯು ಈಗ ತಲೆಯೆತ್ತುತ್ತಾನೆ—ಇದು ಪ್ರತ್ಯುದಾಹೃತಿ ಸಂಗತಿ.—ಇವನು ಸರ್ವಶೂನ್ಯವಾದಿಯಾದ ಬೌದ್ಧ.

**ಸೂತ್ರಾರ್ಥ**

[ಸರ್ವಥಾ,ಚ,] = ಸರ್ವಪ್ರಕಾರದಿಂದಲೂ, [ಅನುಪಪತ್ತೇಃ] = ಉಪಪತ್ತಿ ಇಲ್ಲವಾದ್ದರಿಂದ (ಮಾಧ್ಯಮಿಕ ಮತ ಅಸಂಗತ).

### ವಿವರಣೆ

ಇಲ್ಲಿ ಮಾಧ್ಯಮಿಕ ಮತವನ್ನೂ ನಿರಸನ ಮಾಡಿದ್ದಾರೆ:—ಅವನು, ಜ್ಞಾನ, ಜ್ಞೇಯ, ಜ್ಞಾತಾ—ಎಂಬ ಪದಾರ್ಥಗಳೊಂದೂ ಇಲ್ಲ, ಸರ್ವವೂ ಭ್ರಾಂತಿಯಿಂದ ತೋರುತ್ತೆ. ಪದಾರ್ಥಗಳನ್ನು ಒಪ್ಪಿಕೊಂಡಲ್ಲಿ, ಅದಕ್ಕೆ ಉತ್ಪತ್ತಿಯನ್ನು ಹೇಳಬೇಕು—ಆ ಉತ್ಪತ್ತಿಗೆ ಕಾರಣ ಭಾವವೆಂದೂ, ಅಭಾವವೆಂದೂ ಹೇಳಲಾಗುವುದಿಲ್ಲ. ಭಾವದಿಂದ ಉಂಟಾಗುವುದೆಂದರೆ, ಮೃತ್ತು ಪಿಂಡವಾಗಿರುವಾಗ, ಘಟವಾಗದು. ಅದನ್ನು ತುಳಿದು ಮರ್ದಿಸಿದ ನಂತರವೇ ಘಟವಾಗುವುದು. ಆಗ ಮೃತ್ಪಿಂಡ ನಶಿಸಿದ್ದರಿಂದ ಭಾವದಿಂದ ಘಟೋತ್ಪತ್ತಿಯಿಲ್ಲ. ಅಭಾವದಿಂದ ಉತ್ಪನ್ನವಾಗುವುದೆಂದಲ್ಲಿ, ಅಭಾವದಿಂದ ಉತ್ಪನ್ನವಾದದ್ದು ಅಭಾವವೇ ಆಗಿಬಿಡುವುದು. ಕಾರ್ಯ ಅಭಾವವಾದರೆ ಅದು ಒಂದು ಪ್ರಯೋಜನಕ್ಕೂ ಉಪಯೋಗವಾಗದು. ಹೀಗೆ ಪದಾರ್ಥೋತ್ಪತ್ತಿಯನ್ನು ನಿರೂಪಿಸಲಾಗದುದರಿಂದ, ಸರ್ವವೂ ಶೂನ್ಯವೆಂದೇ ಸಿದ್ಧಿಸುವುದು—ಎನ್ನುತ್ತಾನೆ. ಭಾವವೆಂದೂ ಅಭಾವವೆಂದೂ ಪದಾರ್ಥದ ಅವಸ್ಥಾ ವಿಶೇಷಗಳು. ಭಾವವೆಂದು ಆಗ ಇರುವ ಅವಸ್ಥೆಯನ್ನು ಹೇಳುತ್ತೆ. ಅಭಾವವೆಂದು ಕಾಲಾಂತರದಲ್ಲಿರುವ ಅವಸ್ಥೆಯನ್ನು ಹೇಳುತ್ತೆ. ನೀನು ಭಾವವೆಂದರೂ ಅಭಾವವೆಂದರೂ ಆಯಾ ಅವಸ್ಥೆಗಳುಳ್ಳ ಒಂದು ಧರ್ಮಿರೂಪವಾದ ಪದಾರ್ಥ ಸಿದ್ಧಿಸುವುದೇ ಹೊರತು ನೀನು ಹೇಳುವ ಸರ್ವಶೂನ್ಯ ಸಿದ್ಧಿಸದು. ಆದ್ದರಿಂದ ನಿನ್ನಮತ ಅಸಂಗತವೆನ್ನುತ್ತಾರೆ.

## 6. ಏಕಸ್ಮಿನ್ನಸಂಭವಾಧಿಕರಣ

## ಸೂತ್ರ—ನೈಕಸ್ಮಿನ್ ಅಸಂಭವಾತ್

### ಸಂಗತಿ

ಸೌಗತರ ನಿರಸನವಾಯಿತು. ಜೈನರೂ ಪರಮಾಣು ಕಾರಣತ್ವಾದಿಯನ್ನು ಜಗತ್ತಿಗೆ ಹೇಳುವುದರಿಂದ, ಮುಂದೆ ಜೈನಪಕ್ಷ ಪ್ರತಿಕ್ಷೇಪವನ್ನು ಮಾಡುತ್ತಾರೆ—ಇದು ಪ್ರತ್ಯುದಾಹೃತಿ ಸಂಗತಿ.

### ಸೂತ್ರಾರ್ಥ

[ಏಕಸ್ಮಿನ್] = ಒಂದು ವಸ್ತುವಿನಲ್ಲಿ, [ಅಸಂಭವಾತ್] = ವಿರುದ್ಧ ಧರ್ಮಗಳು ಸಂಭವಿಸುವುದಿಲ್ಲವಾದ್ದರಿಂದ, [ನ] = (ಜೈನಮತ) ಸಮೀಚೀನವಲ್ಲ.

### ವಿವರಣೆ

ಇದರಲ್ಲಿ ಜೈನಮತವನ್ನು ನಿರಾಸಮಾಡಿದ್ದಾರೆ;—ಅವರು ಕಾರ್ಯ—ಕಾರಣ ರೂಪವಾದ ಈ ಜಗತ್ತು ಏಕವಾಗಿಯೂ ಅನೇಕವಾಗಿಯೂ, ನಿತ್ಯವಾಗಿಯೂ, ಅನಿತ್ಯವಾಗಿಯೂ, ಭಿನ್ನವಾಗಿಯೂ, ಅಭಿನ್ನವಾಗಿಯೂ ಇದೆ. ಕಾರಣರೂಪವೆಂಬುದು ಮೃತ್ತು. ಅದು ಕಾರ್ಯಾವಸ್ಥೆಯಲ್ಲಿಯೂ ಕಾರಣಾವಸ್ಥೆಯಲ್ಲಿಯೂ ಕಾಣುವುದರಿಂದ, ನಿತ್ಯವಾಗಿಯೂ ಏಕರೂಪವಾಗಿಯೂ ಅಭಿನ್ನವಾಗಿಯೂ ಇರುತ್ತೆ. ಕಾರ್ಯರೂಪವೆಂಬುದು ಘಟಾವಸ್ಥೆ. ಅದು ಕೆಲವು ವೇಳೆ ಕಂಡೂ, ಕೆಲವು ವೇಳೆ ಕಾಣದೆಯೂ

ಇರುವುದರಿಂದ ಅನಿತ್ಯವಾಗಿ ಘಟ, ಶರಾವೆ,—ಎಂದು ಬೇರೆ ಬೇರೆಯಾಗಿ ಕಾಣುವುದರಿಂದ ಅನಿತ್ಯವೂ ಭಿನ್ನವೂ ಆಗಿದೆ. ಹೀಗೆಯೇ. ಸಕಲ ವಸ್ತುಗಳೂ ಪರಸ್ಪರ ವಿರುದ್ಧ ಧರ್ಮಯುಕ್ತಗಳಾಗಿವೆಯೆನ್ನುವರು. ಕಾರಣರೂಪದಿಂದ, ಅಂದರೆ ದ್ರವ್ಯರೂಪದಿಂದ ನಿತ್ಯ, ಏಕ, ಅಭಿನ್ನವೆಂದೂ. ಕಾರ್ಯರೂಪದಿಂದ..ಅಂದರೆ ಅವಸ್ಥಾರೂಪದಿಂದ. ಅನಿತ್ಯ ಅನೇಕ, ಅಭಿನ್ನವೆಂದೂ ಹೇಳಿದ್ದು ಕೂಡದು. ಅನಿತ್ಯವೆಂಬುದು. ಉತ್ಪತ್ತಿ—ವಿನಾಶಗಳುಳ್ಳದ್ದು. ನಿತ್ಯವೆಂಬುದು—ಉತ್ಪತ್ತಿ ವಿನಾಶಗಳಿಲ್ಲದ್ದು. ಭಿನ್ನವೆಂಬುದು—ವಿರುದ್ಧ ಧರ್ಮವನ್ನುಳ್ಳದ್ದು. ಅಭಿನ್ನವೆಂಬುದು ವಿರುದ್ಧ ಧರ್ಮವಿಲ್ಲದ್ದು. ಪರಸ್ಪರ ವಿರುದ್ಧಗಳಾದ ಇವು ಕತ್ತಲೆ ಮತ್ತು ಬೆಳಕಿನಂತೆ ಒಂದೆಡೆಯಲ್ಲಿ ಸೇರವು. ಧರ್ಮಿಯಾದ ದ್ರವ್ಯವು ನಿತ್ಯ, ಏಕ, ಭಿನ್ನ, ಎಂದೂ ಅದರಲ್ಲಿ ವಿಶೇಷಣವಾದ ಅವಸ್ಥೆ ಅನಿತ್ಯ, ಅನೇಕ. ಭಿನ್ನವೆಂದೂ ಹೇಳಿದಲ್ಲಿ, ಒಂದೆಡೆಯಲ್ಲಿ ವಿರುದ್ಧ ಧರ್ಮಗಳು ಹೇಗೆ ಸೇರಿದವು? ಹೀಗೆ ಅರ್ಥ ಪರ್ಯಾಲೋಚನೆಯಿಲ್ಲದೆ ಹೇಳುವ ಈ ಮತ ಸಯುಕ್ತಿಕವಲ್ಲ.

ಸೂತ್ರ ೨—**ಏವಂ ಚಾತ್ಮಾಕಾಽತ್ಸ್ನ್ಯಂ**

### ಸೂತ್ರಾರ್ಥ

[ಏವಂ] = ಹೀಗೆಯೇ [ಆತ್ಮಾ ಅಕಾತ್ಸ್ನ್ಯಂ ಚ] = ಆತ್ಮಕ್ಕೆ ಅಪೂರ್ತಿಯೂ ಆ ಮತದಲ್ಲಿ ಬರುವುದು.

### ವಿವರಣೆ

ಆತ್ಮವೆಂಬುದು ಆಯಾ ದೇಹ ಪರಿಮಾಣಕ್ಕೆ ತಕ್ಕಂತೆ ಇದೆಯೆಂದವರೆನ್ನುವರು. —ಆದರೆ, ಅದು ಆನೆಯ ದೇಹದಲ್ಲಿರುವಾಗ ಅದಕ್ಕೆ ತಕ್ಕ ಪರಿಮಾಣದಿಂದ ದೊಡ್ಡದಾಗಿರುವುದು. ಅದೇ ಆತ್ಮ ಆ ದೇಹವನ್ನು ಬಿಟ್ಟು ಇರುವೆಯ ಶರೀರವನ್ನು ಹೊಕ್ಕರೆ ಅಷ್ಟು ದೊಡ್ಡದಾಗಿದ್ದ ಆತ್ಮಾ ಇರುವೆಯ ಶರೀರದಲ್ಲಿ ಅಡಗದಿದ್ದುದರಿಂದ ಇರುವೆಯ ಶರೀರದಲ್ಲಿ ಆತ್ಮಾ ಪೂರ್ಣವಾಗಿ ಇರುವುದಿಲ್ಲವೆಂದು ಅಂಗೀಕರಿಸಬೇಕು.

ಸೂತ್ರ ೩—**ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ**

### ಸೂತ್ರಾರ್ಥ

[ಪರ್ಯಾಯಾತ್. ಅಪಿ] = ಆತ್ಮಾ ಅಲ್ಪ ಪರಿಮಾಣವನ್ನು ಹೊಂದಿದರೂ [ವಿಕಾರಾದಿಭ್ಯಃ] = ವಿಕಾರ ಮುಂತಾದುವು ಸಂಭವಿಸುವುದರಿಂದ [ಅವಿರೋಧಃ] = ವಿರೋಧವಿಲ್ಲವೆಂಬುದು [ನ] = ಇಲ್ಲ,.

### ವಿವರಣೆ

ಆತ್ಮನು ಗಜ ಶರೀರವನ್ನು ಬಿಟ್ಟು ಪಿಪೀಲಿಕಾ ಇರುವೆಯ ಶರೀರದಲ್ಲಿ ಪ್ರವೇಶಿಸುವಾಗ, ಪಿಪೀಲಿಕಾ ಶರೀರದ ಅಳತೆಗೆ ತಕ್ಕಂತೆ ಸೂಕ್ಷ್ಮವಾಗಿ ಬಿಡುವುದೆಂದಲ್ಲಿ, ಸ್ಥೂಲ ಸೂಕ್ಷ್ಮಾವಸ್ಥೆಗಳನ್ನು ಹೊಂದುವುದೆಂದು ಒಪ್ಪಿಕೊಂಡಲ್ಲಿ, ಘಟಾದಿಗಳಿಗೆ ಹೇಗೋ ಹಾಗೆ ಉತ್ಪತ್ತಿವಿನಾಶಾದಿ ದೋಷಗಳು ಪ್ರಸಂಗಿಸುವುವು.

ಸೂತ್ರ ೪—**ಅಂತ್ಯಾವಸ್ಥಿತೇ ಶ್ಚೋಭಯನಿತ್ಯತ್ವಾದವಿಶೇಷಃ**

**ಸೂತ್ರಾರ್ಥ**

[ಅಂತ್ಯಾವಸ್ಥಿತೇಃ] = ಕಡೆಯಲ್ಲಿ (ಮೋಕ್ಷದಲ್ಲಿ) ಉಂಟಾಗುವ ಪರಿಮಾಣಕ್ಕೆ (ಹಿಂದೆ ಎಂದೂ ಏಕರೂಪವಾದ) ಸ್ಥಿತಿಯುಂಟಾಗುವುದರಿಂದ,[ಉಭಯ ನಿತ್ಯತ್ವಾತ್, ಚ] = ಆ ಪರಿಮಾಣವೂ. ಆತ್ಮವೂ ನಿತ್ಯವಾಗಿರುವುದರಿಂದಲೂ, [ಅವಿಶೇಷಃ] = ಪೂರ್ವಾವಸ್ಥೆಯಲ್ಲಿಯೂ ವಿಶೇಷ ಸಂಭವಿಸದು. (ಮುಂಚೆಯೂ ಅದೇ ಪರಿಮಾಣ ವನ್ನೇ ಅಂಗೀಕರಿಸಬೇಕೆಂದು ತಾತ್ಪರ್ಯ.)

**ವಿವರಣೆ**

ಜೀವನಿಗೆ ಸಂಸಾರದಶೆಯಲ್ಲಿ ಶರೀರದಲ್ಲಿ ಶರೀರಾನುಗುಣ ಪರಿಮಾಣವನ್ನು ಅಂಗೀಕರಿಸಿದರೂ, ಮೋಕ್ಷವುಂಟಾದಮೇಲೆ, ಆಗ ಉಂಟಾಗುವ ದೇಹೋಪಾಧಿಕವಲ್ಲದ ಪರಿಮಾಣಕ್ಕೆ ಅನಂತರ ನಾಶವಿಲ್ಲದ್ದರಿಂದ (ನಿತ್ಯವಾದ್ದರಿಂದ), ಅದೇ ಪರಿಮಾಣವನ್ನೇ ಮುಂಚೆಯೂ ಅಂಗೀಕರಿಸಬೇಕಾಗಿರುವಲ್ಲಿ. ಈಗ ಬೇರೆ ಬೇರೆ ಪರಿಮಾಣವನ್ನು ಅಂಗೀಕರಿಸುವುದು ಅಯುಕ್ತ.

## 7. ಪಶುಪತ್ಯಧಿಕರಣ

ಸೂತ್ರ—**ಪತ್ಯುರಸಾಮಂಜಸ್ಯಾತ್**

**ಸಂಗತಿ**

ಕಪಿಲ, ಕಾಣಾದ, ಸುಗತ, ಆರ್ಹತ ಮತಗಳು ಅಸಾಮಂಜಸ್ಯದಿಂದಲೂ, ವೇದ ಬಾಹ್ಯವಾದ್ದರಿಂದಲೂ, ಶ್ರೇಯೋಽರ್ಥಿಗಳಿಗೆ ಅನಾದರಣೀಯವೆನ್ನಲಾಯಿತು. ಈಗ ಪಶುಪತಿ ಮತವೂ ಅಸಾಮಂಜಸ್ಯದಿಂದಲೂ, ವೇದವಿರುದ್ಧವಾದ್ದರಿಂದಲೂ ಅನಾದರ ಣೀಯವೆನ್ನುತ್ತಾರೆ. ಪಾಶುಪತರೂ ಸಾಂಖ್ಯರಂತೆ ಪ್ರಧಾನವನ್ನೇ ಜಗತ್ಕಾರಣವನ್ನಾಗಿ ಹೇಳುವರು. ಆದ್ದರಿಂದ ಕಪಿಲಮತದ ನಿರಸನಾ ನಂತರವೇ ಇದರ ನಿರಸನವು ನ್ಯಾಯವಾದಾಗ್ಯೂ, ಸೌಗತಾರ್ಹಮತಗಳ ನಿರಾಸಾನಂತರ ಇದನ್ನು ಪ್ರತಿಕ್ಷೇಪಿಸುವುದು ಈ ಮತ ಅತ್ಯಂತ ವೇದಬಾಹ್ಯವೆಂಬುದನ್ನು ತಿಳಿಸುವುದಕ್ಕೋಸ್ಕರ.

**ಸೂತ್ರಾರ್ಥ**

[ಪತ್ಯುಃ] = ಪಶುಪತಿಯ (ಮತ) [ಅಸಾಮಂಜಸ್ಯಾತ್] = (ವಿರುದ್ಧಾರ್ಥ ಪ್ರತಿ ಪಾದಕವಾಗಿ) ಅಸಮಂಜಸವಾದ್ದರಿಂದ [ನ] = ಆದರಣೀಯವಲ್ಲ. (ಹಿಂದೆ ಬಂದ 'ನೈಕಸ್ಮಿನ್ನಸಂಭವಾತ್"—ಎಂಬ ಸೂತ್ರದಲ್ಲಿಯ 'ನ'—ಕಾರ ಇಲ್ಲೂ ಅನುವರ್ತಿಸುತ್ತೆ)

**ವಿವರಣೆ**

ಇದರಲ್ಲಿ ಪಾಶುಪತರನ್ನು ನಿರಸನಮಾಡಿದ್ದಾರೆ;—ಪಶುಪತಿಯಾದ ರುದ್ರ ಸರ್ವ ಜ್ಞನಾದ್ದರಿಂದಲೂ, ಅವನು ಮೋಕ್ಷಸ್ವರೂಪವನ್ನೂ ಅದರ ಸಾಧನದ ಸ್ವರೂಪವನ್ನೂ ಅರಿಯಗೊಳಿಸುವುದಕ್ಕೋಸ್ಕರವೇ ಈ ಆಗಮವನ್ನು . ಉಪದೇಶಿಸಿರುವುದರಿಂದಲೂ ಈ ಮತ ಎಲ್ಲರಿಗೂ ಆದರಣೀಯವೆಂದು ಪೂರ್ವಪಕ್ಷ. ಅಪೌರುಷೇಯವಾಗಿ ನಿತ್ಯ

ನಿರ್ದೋಷವಾಗಿ ಸ್ವತಃ ಪ್ರಮಾಣವಾದ ವೇದದಲ್ಲಿ ಹೇಳಿದ ಅರ್ಥಗಳಿಗಿಂತ, ಈ ಆಗಮದಲ್ಲಿ ವಿರುದ್ಧವಾದ ಅರ್ಥಗಳು ಹೇಳಲ್ಪಟ್ಟಿವೆ. ಅವು ಯಾವುವೆಂದರೆ;—ಈಶ್ವರ ಜಗತ್ತಿಗೆ ನಿಮಿತ್ತಕಾರಣ, ಪ್ರಕೃತಿ ಉಪಾದಾನಕಾರಣ, ಸದಾಶಿವನೇ ಪರತತ್ತ್ವ. ಸುರಾಕುಂಭಸ್ಥಾಪನ, ಅದರಲ್ಲಿ ಪರದೇವತಾರ್ಚನ ಮುಂತಾದುವು ಮೋಕ್ಷಸಾಧನ,—ಇತ್ಯಾದಿಗಳು. ಆದ್ದರಿಂದ ಈ ಮತವನ್ನು ಶಿಷ್ಟರು ಅಂಗೀಕರಿಸಕೂಡದು—ಎಂದು ಸಿದ್ಧಾನ್ತ.

### ಸೂತ್ರ ೨—ಸಂಬನ್ಧಾನುಪಪತ್ತೇಶ್ಚ

ಈ ಸೂತ್ರ ಅಧಿಕ. ಇದು ಶಂಕರಭಾಷ್ಯದಲ್ಲಿದೆ.

### ಸೂತ್ರ ೩—ಅಧಿಷ್ಠಾನಾನುಪಪತ್ತೇಶ್ಚ

**ಸೂತ್ರಾರ್ಥ**

(ಈಶ್ವರನು ಪ್ರಧಾನಕ್ಕೆ) ಅಧಿಷ್ಠಾನವೆಂಬುದು ಅನುಪಪನ್ನವಾದ್ದರಿಂದಲೂ, (ಈ ಮತ ಸಮೀಚೀನವಲ್ಲ).

**ವಿವರಣೆ**

ಜಗತ್ಕಾರಣವಾದ ಪ್ರಧಾನ ಅಚೇತನವಾದ್ದರಿಂದ ತಾನೇ ಜಗತ್ತನ್ನು ಸೃಷ್ಟಿಸಲು ಸಮರ್ಥವಲ್ಲ. ಒಬ್ಬ ಪುರುಷನೇ ಅದರಿಂದ ಜಗತ್ತನ್ನು ಸೃಷ್ಟಿಸಬೇಕು.—ಎಂಬ ಅನುಮಾನದಿಂದ ಈಶ್ವರನನ್ನು ಒಪ್ಪಿಕೊಂಡು, ಅವನು ಜಗತ್ಸೃಷ್ಟಿಗಾಗಿ, ಪ್ರಧಾನವನ್ನು ಅಧಿಷ್ಠಿಸುತ್ತಾನೆನ್ನುವರು. ಲೋಕದಲ್ಲಿ ಘಟಾದಿಗಳಿಗೆ ಕರ್ತೃಗಳಾದ ಕುಲಾಲಾದಿಗಳು ಶರೀರವುಳ್ಳವರಾಗಿಯೇ, ಮೃತ್ಪಿಂಡಾದಿ ಕಾರಣಗಳನ್ನು ಅಧಿಷ್ಠಿಸಿ ಸೃಷ್ಟಿಸುವರು. ಅದರಂತೆಯೇ, ಪ್ರಧಾನವನ್ನು ಅಧಿಷ್ಠಿಸುವ ನಿಮಿತ್ತಭೂತನಾದ ಈಶ್ವರನಿಗೂ ಶರೀರ ಸಿದ್ಧಿಸುವುದು. ಅವನಿಗೆ ಶರೀರವನ್ನು ಒಪ್ಪಿಕೊಂಡಲ್ಲಿ, ಅದು ಸಾವಯವವಾದ್ದರಿಂದ ನಿತ್ಯವೆಂದರೂ ಅನಿತ್ಯವೆಂದರೂ, ಹಿಂದೆ ಶಾಸ್ತ್ರಯೋನ್ಯಧಿಕರಣದಲ್ಲಿ ಅದಕ್ಕೆ ದೂಷಣವನ್ನು ಹೇಳಿದೆ. ಶರೀರವನ್ನು ಒಪ್ಪಿಕೊಳ್ಳದೇ ಹೋದಲ್ಲಿ, ಪ್ರಧಾನಕ್ಕೆ ಅಧಿಷ್ಠಾನವಾಗಲಾರ. ಆದ್ದರಿಂದ ಆ ಮತವು ಯುಕ್ತಿಯುಕ್ತವಲ್ಲ.

### ಸೂತ್ರ ೪—ಕರಣವಚ್ಚೇನ್ನ ಭೋಗಾದಿಭ್ಯಃ

**ಸೂತ್ರಾರ್ಥ**

[ಕರಣವತ್, ಚೇತ್] = ಇಂದ್ರಿಯಗಳಿಗೂ ಶರೀರಕ್ಕೂ ಅಶರೀರಿಯಾದ ಜೀವ ಅಧಿಷ್ಠಾನವಾಗುವಂತೆ, ಅಶರೀರಿಯಾದ ಈಶ್ವರನು ಪ್ರಧಾನಕ್ಕೆ ಅಧಿಷ್ಠಾನವಾಗಬಹುದು—ಎಂದಲ್ಲಿ [ಭೋಗಾದಿಭ್ಯಃ] = ಪುಣ್ಯಪಾಪಾನುಭವವೇ ಮುಂತಾದುದು ಪ್ರಸಂಗಿಸುವುದಾದ್ದರಿಂದ [ನ] = ಹಾಗೆ ಈಶ್ವರನಿಗೆ ಸಂಭವಿಸದು. (ಅಂದರೆ, ಜೀವನಿಗೆ ಕರ್ಮಾನುಭವಕ್ಕಾಗಿ ಇಂದ್ರಿಯಾದ್ಯಧಿಷ್ಠಾನವುಂಟು. ಈಶ್ವರನಿಗೆ ಕರ್ಮಾನುಭವವಿಲ್ಲದ್ದರಿಂದ ಅದು ಕೂಡದು. ಅಧಿಷ್ಠಾನವನ್ನು ಒಪ್ಪಿಕೊಂಡಲ್ಲಿ, ಜೀವನಂತೆಯೇ ಕರ್ಮಾನುಭವ ಮೊದಲಾದುವನ್ನೂ ಈಶ್ವರನಿಗೆ ಒಪ್ಪಿಕೊಳ್ಳಬೇಕಾಗುವುದು.)

### ಸೂತ್ರ ೫—ಅನ್ತವತ್ತ್ವಮಸರ್ವಜ್ಞತಾ ವಾ

**ಸೂತ್ರಾರ್ಥ**

[ಅನ್ತವತ್ತ್ವಂ] = ವಿನಾಶವನ್ನು ಹೊಂದುವುದೂ. [ಅಸರ್ವಜ್ಞತಾವಾ] = ಸರ್ವ ವಿಷಯ ಜ್ಞಾನವಿಲ್ಲದೇ ಹೋಗುವುದೂ. (ಪ್ರಸಂಗಿಸುವುವು)

**ವಿವರಣೆ**

ಈಶ್ವರನಿಗೆ ಪ್ರಧಾನಾಧಿಷ್ಠಾನವು ಸಿದ್ಧಿಸುವುದಕ್ಕಾಗಿ ಶರೀರವೂ, ಆ ಶರೀರ ಸಿದ್ಧಿಸುವುದಕ್ಕಾಗಿ ಪುಣ್ಯಪಾಪಗಳೂ ಉಂಟೆಂದು ಒಪ್ಪಿಕೊಂಡಲ್ಲಿ, ಜೀವನ ಹಾಗೆಯೇ ಈಶ್ವರನೂ ಜನ್ಮ ಮರಣಗಳನ್ನು ಉಳ್ಳವನಾಗುವನು. ಹೀಗೆ ಕರ್ಮಪರವಶನಾದ ಮೇಲೆ ಅವನಿಗೆ ಸರ್ವಜ್ಞತ್ವವೂ ಸಿದ್ಧಿಸದು.—ಇತ್ಯಾದಿ ದೋಷಗಳುಂಟಾಗುವುದರಿಂದ ಈ ಮತ ಸಮೀಚೀನವಲ್ಲ.

## 8. ಉತ್ಪತ್ತ್ಯಸಂಭವಾಧಿಕರಣ

### ಸೂತ್ರ—ಉತ್ಪತ್ತ್ಯಸಂಭವಾತ್

**ಅಪವಾದ ಸಂಗತಿ**

ಕಪಿಲಾದಿ ತಂತ್ರದಂತೆಯೇ ಭಾವಿಸಿ ಭಗವದಭಿಹಿತ ಪರಮ ನಿಶ್ರೇಯಸ ಸಾಧನವನ್ನು ಬೋಧಿಸುವ ಪಂಚರಾತ್ರ ತಂತ್ರದಲ್ಲಿಯೂ ಅಪ್ರಾಮಾಣ್ಯವನ್ನು ಆಶಂಕಿಸಿ, ನಿರಾಕರಿಸುತ್ತಾರೆ.

**ಇಲ್ಲೊಂದು ಆಶಂಕೆ ಹುಟ್ಟುತ್ತೆ**

ಪ್ರತಿಮತದ ದಮನ—ಈ ಪಾದದ ವಿಷಯ ವೇದ ಪ್ರಾಮಾಣ್ಯದಿಂದ ವೇದಕ್ಕೆ ಉಪಬೃಂಹಣವಾದ ಶ್ರೀ ಪಾಂಚರಾತ್ರ ಪ್ರಾಮಾಣ್ಯವೂ ಪೂರ್ವಕಾಂಡದ ಸ್ಮೃತ್ಯಧಿಕರಣದಲ್ಲಿಯೇ ಸಿದ್ಧ. ಆದ್ದರಿಂದ ಅದು ಇಲ್ಲಿ ವರ್ಣಿಸತಕ್ಕದ್ದಲ್ಲ. ಈ ಪಂಚರಾತ್ರ ಪ್ರಾಮಾಣ್ಯದ ಸಾಧನೆ ಅರ್ಥಾಂತರವಾದ್ದರಿಂದ ಪ್ರತಿಮತದಮನರೂಪವಾದ ಈ ತರ್ಕಪಾದದಲ್ಲಿ ಇದಕ್ಕೆ ಸಂಗತಿಯೂ ಇಲ್ಲ—ಎಂಬುದೇ ಆಶಂಕೆ.

ಇದರ ನಿರಾಕರಣ ಪ್ರಕಾರವಾದರೋ:—ಪ್ರತಿಮತದಮನರೂಪವಾದ ಈ ತರ್ಕಪಾದದೊಡನೆ ಪ್ರಕಾರಾಂತರದಿಂದ ಇದಕ್ಕೆ ಅರ್ಥೈಕ್ಯವಿದೆ. ಶ್ರೀ ಪಂಚರಾತ್ರವು ವೇದಕ್ಕೆ ಪ್ರತ್ಯರ್ಥಿಯೆಂಬುದನ್ನು ಇಲ್ಲಿ ನಿವಾರಿಸಲಾಗಿದೆ. ಹಿಂದೆಯೂ ಸಾಂಖ್ಯಾಧಿಕರಣಾದಿಯಲ್ಲಿಯೂ, ಆ ತಂತ್ರಗಳ ವೇದ ಪ್ರತ್ಯರ್ಥಿತ್ವವೇ ನಿವಾರಿಸಲ್ಪಟಿದೆ. ಶ್ರೀ ಪಾಂಚರಾತ್ರವಾದರೋ ವೇದಕ್ಕೆ ಅನುಕೂಲವಾದ್ದರಿಂದ ವೇದಪ್ರತ್ಯರ್ಥಿಯಲ್ಲ. ಸಾಂಖ್ಯಾದಿಗಳು ಕುತ್ಸಿತಯುಕ್ತಿಮೂಲವಾದ್ದರಿಂದ ದುರ್ಬಲಗಳಾದ ಕಾರಣ ವೇದಪ್ರತ್ಯರ್ಥಿಗಳೆಂಬುದನ್ನು ಮಾತ್ರ ನಿರಾಕರಿಸಲಾಗಿದೆ. ಹೀಗೆ ಈ ತಂತ್ರಗಳೆರಡರಲ್ಲಿಯೂ ವೇದ ಪ್ರತ್ಯರ್ಥಿತ್ವ ನಿರಾಕರಣವು ಸಮಾನವಾದ್ದರಿಂದ ಉಭಯತ್ರ ಅರ್ಥ ಅನುವರ್ತಿಸುತ್ತದೆಯಾದ್ದರಿಂದ ಈ ಪಾದದಲ್ಲಿ ಶ್ರೀ ಪಾಂಚರಾತ್ರ ಪ್ರಾಮಾಣ್ಯದ ಸಾಧನವು ದೋಷವಲ್ಲ. ಪೂರ್ವಕಾಂಡದಲ್ಲಿ ಪಾಂಚರಾತ್ರ ಪ್ರಾಮಾಣ್ಯದ ಸಾಧನೆ—ಇಲ್ಲಿ

ಪಾಂಚರಾತ್ರವು ವೇದ ವಿರುದ್ಧ ವೆಂಬ ಶಂಕೆಯು ನಿರಾಕರಣೆಯಾದ್ದರಿಂದ ವಿಷಯ ಭೇದವೂ ಸಿದ್ಧಿಸಿದೆ—ಎಂಬುದು.

**ಸೂತ್ರಾರ್ಥ**

(ಜೀವನಿಗೆ) ಉತ್ಪತ್ತಿ ಅಸಂಭವವಾದ್ದರಿಂದ (ಜೀವನಿಗೆ ಉತ್ಪತ್ತಿ ಹೇಳುವ ಪಾಂಚ ರಾತ್ರ ಪ್ರಮಾಣವಲ್ಲ.)

**ವಿವರಣೆ**

ಈ ಅಧಿಕರಣದಲ್ಲಿ ಭಗವತ್ಪ್ರೋಕ್ತವಾದ ಪಾಂಚರಾತ್ರವು ವೇದದ ಹಾಗೆ ಪ್ರಮಾಣ ತಮವೆಂದು ಸ್ಥಾಪಿಸುತ್ತಾರೆ (ಪಂಚ + ಇತರಾಣಿ—ಶಾಸ್ತ್ರಾಣಿ + ರಾತ್ರೀಯನ್ತೇ.) ಎಂಬ ಪಂಚರಾತ್ರ ಶಬ್ದ ನಿರ್ವಚನದಿಂದ ಹಿಂದೆ ಬಂದ ಕಾಪಿಲ—ಕಾಣಾದ-ಸೌಗತ—ಆರ್ಹತ —ಪಾಶುಪತಗಳಿಗಿಂತ ಈ ಶಾಸ್ತ್ರಕ್ಕೆ ವ್ಯಾವೃತ್ತಿ ವಿಶೇಷತಃ ಪ್ರಕಾಶಿತವಾಗಿದೆ. ಇದಕ್ಕಾಗಿ ಮೊದಲು ಪೂರ್ವಪಕ್ಷವನ್ನು ತೋರಿಸುತ್ತಾರೆ— ಸಾಂಖ್ಯಸ್ಮೃತಿಯಂತೆಯೂ ಶೈವಾ ಗಮದಂತೆಯೂ, ಪಂಚರಾತ್ರದಲ್ಲಿಯೂ ಕೆಲವು ವೇದವಿರುದ್ಧವಾದ ಅರ್ಥಗಳು ಪ್ರತಿ ಪಾದಿತವಾಗಿವೆ. ಅವು, "ವಾಸುದೇವಾತ್ ಸಂಕರ್ಷಣೋ ನಾಮ ಜೀವೋ ಜಾಯತೇ," —(ಎಂದರೆ, ಸಂಕರ್ಷಣನೆಂಬ ಜೀವ ಹುಟ್ಟುತ್ತಾನೆ)—ಎಂದು ಹೇಳಿದೆ ಇದು. "ನ ಜಾಯತೇ ಮ್ರಿಯತೇವಾ"—ಎಂದು ಜೀವನಿಗೆ ಉತ್ಪತ್ತಿ ವಿನಾಶಗಳಿಲ್ಲವೆಂದು ಹೇಳುವ ವೇದಕ್ಕೆ ವಿರುದ್ಧ. ಅಲ್ಲದೆ ನಾಲ್ಕು ವೇದಗಳಲ್ಲಿಯೂ ಪರಮಪುರುಷಾರ್ಥ ಇಂಥದೆಂದು ತಿಳಿಯದೆ ಅನಂತರ ಈ ಪಂಚರಾತ್ರವನ್ನು ಕಲಿತರು—ಎಂದು ವೇದ ವನ್ನು ಅನಾದರಿಸಿ ಹೇಳಿದೆ. ಆದ್ದರಿಂದ, ಈ ಆಗಮವೂ ಅಪ್ರಮಾಣ—ಎಂಬುದು ಪೂರ್ವಪಕ್ಷ.

### ಸೂತ್ರ ೨—**ನ ಚ ಕರ್ತುಃ ಕರಣವತ್**

**ಸೂತ್ರಾರ್ಥ**

[ಕರ್ತುಃ] = ಕರ್ತಾವಾದ ಜೀವನಿಂದ [ಕರಣಂ] = ಇಂದ್ರಿಯವಾದ ಮನಸ್ಸು (ಉಂಟಾಯಿತೆಂಬುದು ವೇದವಿರುದ್ಧವಾದ್ದರಿಂದ) [ನ] = ಸಂಭವಿಸದು.

**ವಿವರಣೆ**

ಅಲ್ಲದೆ. "ಸಂಕರ್ಷಣಾತ್ ಪ್ರದ್ಯುಮ್ನ ಸಂಜ್ಞಂ ಮನ ಉತ್ಪದ್ಯತೇ"—ಅಂದರೆ. ಸಂಕರ್ಷಣನಿಂದ ಪ್ರದ್ಯುಮ್ನನೆಂಬ ಮನಸ್ಸು ಉಂಟಾಯಿತೆಂದು ಹೇಳಿದೆ. ವೇದದಲ್ಲಿ. "ಏತಸ್ಮಾಜ್ಜಾಯತೇ ಪ್ರಾಣೋ ಮನಃ"...—ಎಂದು, ಈ ಪರಮಾತ್ಮನಿಂದ ಮನಸ್ಸು ಉಂಟಾಯಿತೆಂದು ಹೇಳಿದೆ. ಆದ್ದರಿಂದ, ಇದೂ ವೇದವಿರುದ್ಧ. ಹಾಗೆಯೇ ಈ ಆಗಮವೂ ಪ್ರಮಾಣವಾಗತಕ್ಕದ್ದಲ್ಲ—ಎಂದು ಪೂರ್ವಪಕ್ಷ.

### ಸೂತ್ರ ೩—**ವಿಜ್ಞಾನಾದಿ ಭಾವೇವಾ ತದಪ್ರತಿಷೇಧಃ**

**ಸೂತ್ರಾರ್ಥ**

[ವಿಜ್ಞಾನಾದಿ ಭಾವೇ ವಾ] = (ಸಂಕರ್ಷಣಾದಿಗಳಿಗೆ) ಜ್ಞಾನ ಸ್ವರೂಪವೂ ಜಗತ್ಕಾರಣವೂ ಆದ ಪರಮಾತ್ಮನ ಸ್ವರೂಪತ್ವ ಸಿದ್ಧಿಸುವುದೆಂಬುದರ ಮಟ್ಟಿಗೆ

[ತದ ಪ್ರತಿಷೇಧಃ] = ಪಾಂಚರಾತ್ರಕ್ಕೆ ಪ್ರಾಮಾಣ್ಯ ಪ್ರತಿಷೇಧವಿಲ್ಲ. (ವಿಜ್ಞಾನಂ + ಚ + ಆದಿ + ಚ.ಇತಿ ಪರಬ್ರಹ್ಮವೇ ವಿಜ್ಞಾನಾದಿ)

**ವಿವರಣೆ**

ಮೇಲೆ ಹೇಳಿದ ಪೂರ್ವಪಕ್ಷವನ್ನು ಇಲ್ಲಿ ನಿರಸನ ಮಾಡುತ್ತಾರೆ;—ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರು ಪರಬ್ರಹ್ಮವಾದ ವಾಸುದೇವನ ಸ್ವರೂಪರು. ಆದ್ದರಿಂದ ಸಂಕರ್ಷಣಾದಿಗಳಿಗೆ ಹೇಳಿದ ಉತ್ಪತ್ತಿ.''ಅಜಾಯಮಾನೋ ಬಹುಧಾವಿಜಾಯತೇ'' —ಎಂದು ಕರ್ಮಾಧೀನವಾದ ಉತ್ಪತ್ತಿಯಿಲ್ಲದೆ ಸ್ವೇಚ್ಛೆಯಿಂದ ಜಗದ್ರಕ್ಷಣಕ್ಕಾಗಿ ಮಾಡಿದ ಅವತಾರವಾದ್ದರಿಂದ ನೀವು ಹೇಳಿದ ದೋಷ ಬಾರದು. ಸಂಕರ್ಷಣನೆಂಬ ಒಂದು ಜೀವನ ಹೆಸರಲ್ಲ. ಪ್ರದ್ಯುಮ್ನನೆಂದೂ ಒಂದು ಮನಸ್ಸು ಇಲ್ಲ. ಆ ವಾಕ್ಯಗಳಿಗೆ ಅರ್ಥ.— ಜೀವನಿಗೆ ಅಧಿಷ್ಠಾತಾವಾದ ಸಂಕರ್ಷಣನೂ ಮನಸ್ಸಿಗೆ ಅಧಿಷ್ಠಾತಾವಾದ ಪ್ರದ್ಯುಮ್ನನೂ ಅವತರಿಸಿದರೆಂದರ್ಥ. ''ಸಾಂಗೇಷುವೇದೇಷು ನಿಷ್ಠಾಮಲಭಮಾನಃ ಶಾಂಡಿಲ್ಯಃ ಪಾಂಚ ರಾತ್ರಮಧೀತವಾನ್ ಇತಿ" ಹಿಂದೆ ವೇದವನ್ನು ಅನಾದರಿಸಿ ಹೇಳಿದ್ದು ಪ್ರಾತಃ ಪ್ರಾತರನೃತಂತೇವದನ್ತಿ ಪುರೋದಯಾಜ್ಜುಹ್ವತಿಯೇಽಗ್ನಿ ಹೋತ್ರಂ"—ಎಂದು ಅನುದಿತ ಹೋಮವನ್ನು ನಿಂದಿಸುವಾಗ ಉದಿತ ಹೋಮವನ್ನು ಪ್ರಶಂಸಿ ಸುವವರಂತೆಯೇ ಹೊರತು ವೇದವನ್ನು ನಿಂದಿಸುವುದರಲ್ಲಿ ತಾತ್ಪರ್ಯವಿಲ್ಲ. ಈ ಆಗಮದಲ್ಲಿ ಪ್ರಾಮಾಣ್ಯ ಜ್ಞಾನವುಂಟಾಗುವುದಕ್ಕಾಗಿ ಹಾಗೆ ಹೇಳಿದೆ. ಆದ್ದರಿಂದ, ವೇದಕ್ಕೆ ವಿರುದ್ಧವಾದ ಅಂಶಗಳೊಂದನ್ನೂ ಇದರಲ್ಲಿ ಹೇಳಿಲ್ಲವಾದ್ದರಿಂದಲೂ. ವೇದದಲ್ಲಿ ಹೇಳಿರುವ ಹಾಗೆ, ಜಗತ್ತಿಗೆ ಉಪಾದಾನ ನಿಮಿತ್ತ ಕಾರಣಗಳೂ, ಪ್ರಾಪ್ಯನೂ ಪರತತ್ತ್ವವೂ ಪರಮಪುರುಷನಾದ ಶ್ರೀಮನ್ನಾರಾಯಣನೆಂದೂ ಅವನ ವಿಷಯವಾಗಿ ಕರ್ಮ ಜ್ಞಾನ ಭಕ್ತಿ ಪೂಜೆಗಳು ಮಾಡತಕ್ಕವೆಂದೂ, ಹೇಳುವುದರಿಂದಲೂ ಪಾಂಚರಾತ್ರವು ಮುಖ್ಯ ಪ್ರಮಾಣವಾದದ್ದು—ಎಂದು ಸಿದ್ಧಾಂತ.

**ಟಿಪ್ಪಣಿ**

[ಮೇಲಣ—''ಅನುದಿತಹೋಮ'' —ಎಂಬುದಕ್ಕೆ ಸೂರ್ಯೋದಯಕ್ಕೆ ಮುಂಚೆ-ಮಾಡುವ ಹೋಮವೆಂದೂ "ಉದಿತಹೋಮ"—ಎಂಬುದಕ್ಕೆ ಸೂರ್ಯೋದಯ ವಾದಮೇಲೆ ಮಾಡುವ ಹೋಮವೆಂದೂ ಅರ್ಥ]

ಸೂತ್ರ ೪—**ವಿಪ್ರತಿಷೇಧಾಚ್ಚ**

**ಸೂತ್ರಾರ್ಥ**

(ಪಾಂಚರಾತ್ರದಲ್ಲಿ) ಜೀವರ ಉತ್ಪತ್ತಿಯನ್ನು ನಿಷೇಧಿಸುವುದರಿಂದಲೂ, ಇದು ಪ್ರಮಾಣತಮ.

**ವಿವರಣೆ**

ಈ ಆಗಮದಲ್ಲಿ ''ಸಹ್ಯನಾದಿರನನ್ತಶ್ಚ"—ಎಂದು ಜೀವನಿಗೆ ಉತ್ಪತ್ತಿ ವಿನಾಶ ಗಳಿಲ್ಲವೆಂದು ಹೇಳಿರುವುದರಿಂದ. ಸಂಕರ್ಷಣನು ಹುಟ್ಟುತ್ತಾನೆ—ಎಂದದ್ದು ಜೀವೋ

ತ್ಪತ್ತಿಯನ್ನು ಹೇಳಿದ್ದಲ್ಲ. ಪರಮಪುರುಷನ ಅವತಾರ ವಿಶೇಷವನ್ನು ಹೇಳಿದ್ದು. ಆದ್ದರಿಂದ ಇದರಲ್ಲಿ ವೇದಕ್ಕೆ ವಿರುದ್ಧವಾದ ಅರ್ಥವೊಂದೂ ಇಲ್ಲ. ಇದು ವೇದವಂತೆಯೇ ಪ್ರಮಾಣತಮವೆಂದು ಸಿದ್ಧಾಂತ.

## ಪಾದ—3 1. ವಿಯದಧಿಕರಣ

## ಸೂತ್ರ —ನ ವಿಯದ ಶ್ರುತೇಃ

### ಪಾದಸಂಗತಿ

ಕಾರಣ ವಿಷಯದಲ್ಲಿ ಬಾಹ್ಯರು ಹೇಳುವ ವಿರೋಧಗಳ ಪರಿಹಾರಪರ ಈ ಅಧ್ಯಾಯದ ಮೊದಲೆರಡು ಪಾದಗಳು. ಅನಂತರದ ಈ ಎರಡು ಪಾದಗಳು ಕಾರ್ಯ ವಿಷಯದಲ್ಲಿ ಪರೋಕ್ತಗಳಾದ ವಿರೋಧಗಳ ಪರಿಹಾರಪರಗಳು. ಸಾಂಖ್ಯಾದಿವೇದ ಬಾಹ್ಯತಂತ್ರಗಳು ನ್ಯಾಯಾಭಾಸ ಮೂಲಗಳಾದ್ದರಿಂದ—ಅಸಾಮಂಜಸ್ಯವನ್ನು ಹೇಳಿ, ಅನಂತರ ತಮ್ಮ ಪಕ್ಷಕ್ಕೆ ವಿಪ್ರತಿಷೇಧಾದಿ ದೋಷಗಂಧವೂ ಇಲ್ಲವೆಂದು ಪ್ರಕಾಶಪಡಿಸುವುದಕ್ಕಾಗಿ, ಚೇತನಾ ಚೇತನಾತ್ಮಕ ಪ್ರಪಂಚದ ಕಾರ್ಯಪ್ರಕಾರವನ್ನು ಶೋಧನೆ ಮಾಡುತ್ತಾರೆ.

### ಟಿಪ್ಪಣಿ

[ನ್ಯಾಯಾಭಾಸ—ಎಂದರೆ ನ್ಯಾಯದಂತೆ ಹೊರಕ್ಕೆ ಕಾಣತಕ್ಕವು, ವಸ್ತುತಃ ನ್ಯಾಯವಾದುವಲ್ಲ.]

### ಅಧಿಕರಣ ಸಂಗತಿ

ಶ್ರೀ ಪಾಂಚರಾತ್ರಾಧಿಕರಣದಲ್ಲಿ ಜೀವೋತ್ಪತ್ತಿವಾದವು, ಜೀವರಿಗೆ ಅಭಿಮಾನಿಯಾದ ಸಂಕರ್ಷಣಾದಿ ಪರವಾದ್ದರಿಂದ ಔಪಚಾರಿಕವೆಂದರು. ಹಾಗಾದಲ್ಲಿ ಅದೇ ನ್ಯಾಯದಿಂದ, ವಿಯದುತ್ಪತ್ತಿವಾದವೂ ಔಪಚಾರಿಕವೇ ಆಗಲಿ—ಎಂಬ ಶಂಕೆಯಿಂದ ಅಪವಾದ ಸಂಗತಿ.

### ಸೂತ್ರಾರ್ಥ

[ವಿಯತ್] = ಆಕಾಶವು [ನ] = ಉತ್ಪನ್ನವಲ್ಲ. (ನಿತ್ಯ) [ಅಶ್ರುತೇಃ) = (ಅಸಂಭಾವಿತವಾದ ಅರ್ಥಕ್ಕೆ) ಶ್ರವಣ ಕೂಡದುದರಿಂದ. (ಶ್ರುತಿಯಲ್ಲಿ ಹೇಳಿದ ಆಕಾಶೋತ್ಪತ್ತಿ ಗೌಣ).

### ವಿವರಣೆ

ಈ ಪಾದದಲ್ಲಿಯೂ ಮುಂದಿನ ಪಾದದಲ್ಲಿಯೂ, ವೇದಾಂತ ವಾಕ್ಯಗಳಿಗೆ ಪರಸ್ಪರ ವಿರೋಧವಿಲ್ಲವೆಂದು ಸಮರ್ಥಿಸುತ್ತಾರೆ. ಹಿಂದೆ ಜೀವನಿಗೆ ಉತ್ಪತ್ತಿಯಿಲ್ಲವೆಂದರು. ಜೀವನಂತೆಯೇ ಆಕಾಶವೂ ನಿರವಯವವಾದ್ದರಿಂದಲೂ, ಲೋಕದಲ್ಲಿ ಸಾವಯವವಾದ ಪದಾರ್ಥಗಳಿಗೇ ಉತ್ಪತ್ತಿ ಕಾಣಿಸುವುದರಿಂದಲೂ, ಆಕಾಶಕ್ಕೂ ಉತ್ಪತ್ತಿ ಕೂಡದು. "ಆತ್ಮನ ಆಕಾಶಸ್ಸಂಭೂತಃ"—ಎಂಬ ವೇದವಾಕ್ಯ, ಆಕಾಶಕ್ಕೆ ಇಲ್ಲದ

ಉತ್ಪತ್ತಿಯನ್ನು ಹೇಳಲಾರದಾದ್ದರಿಂದ, ಜೀವನುಂಟಾಗುತ್ತಾನೆ—ಎಂದು ಹೇಳಿರುವಂತೆ ಆಕಾಶವುಂಟಾಯಿತೆನ್ನುವುದೂ ಗೌಣವಾಗಿಯೇ ಅಂಗೀಕರಿಸಲ್ಪಡಬೇಕು. ಅಂದರೆ, ಸೂಕ್ಷ್ಮವಾಗಿದ್ದ ಆಕಾಶ ಸ್ಥೂಲಾವಸ್ಥೆಯನ್ನು ಹೊಂದಿತೆಂಬುದಕ್ಕೆ ಅರ್ಥ—ಎಂದು ಪೂರ್ವಪಕ್ಷ.

ಸೂತ್ರ ೨—**ಅಸ್ತಿ ತು**

**ಸೂತ್ರಾರ್ಥ**

ಆಕಾಶಕ್ಕೆ ಉತ್ಪತ್ತಿ ಉಂಟು.

**ವಿವರಣೆ**

ಅತೀಂದ್ರಿಯವಾದ ಅರ್ಥಗಳನ್ನು ಪ್ರತಿಪಾದಿಸುವ ವೇದದಲ್ಲಿ ಆಕಾಶೋತ್ಪತ್ತಿಯನ್ನು ಹೇಳಿರುವುದರಿಂದ, ಆಕಾಶವುಂಟಾಗುವುದೆಂದು ಒಪ್ಪಿಕೊಳ್ಳಬೇಕು. ಪ್ರಬಲ ಪ್ರಮಾಣವಾದ ವೇದದಲ್ಲಿ ಹೇಳಿದ ಅರ್ಥಕ್ಕೆ ವಿರುದ್ಧವಾಗಿ, ನಿರವಯವವಾದ್ದರಿಂದ ಆಕಾಶಕ್ಕೆ ಉತ್ಪತ್ತಿ ಕೂಡದೆಂಬ ಯುಕ್ತಿ ಪ್ರವರ್ತಿಸದು. ಆತ್ಮಾವಿಗೂ ಉತ್ಪತ್ತಿ ಇಲ್ಲವೆಂದು ಅಂಗೀಕರಿಸುವುದು ವೇದದಲ್ಲಿ ಹೇಳಿರುವುದರಿಂದಲೇ ಹೊರತು ಯುಕ್ತಿಯಿಂದಲ್ಲ—ಎಂದು ಸಿದ್ಧಾಂತ.

ಸೂತ್ರ ೩—**ಗೌಣ್ಯಸಂಭವಾಚ್ಛಬ್ದಾಚ್ಚ**

**ಸೂತ್ರಾರ್ಥ**

[ಅಸಂಭವಾತ್] = (ತೇಜಸ್ಸು ಉಂಟಾದ ಮೇಲೆ ಆಕಾಶೋತ್ಪತ್ತಿ) ಕೂಡದುದರಿಂದಲೂ, [ಶಬ್ದಾತ್,ಚ.] = (ಆಕಾಶಕ್ಕೆ ನಾಶವಿಲ್ಲವೆಂದು ಹೇಳುವ) ವಚನದಿಂದಲೂ, [ಗೌಣೀ] = (ವೇದದಲ್ಲಿ ಹೇಳಿದ ಆಕಾಶೋತ್ಪತ್ತಿ) ಗೌಣವೇ ಆಗಬೇಕು.

**ವಿವರಣೆ**

ಛಾಂದೋಗ್ಯದಲ್ಲಿ ಜಗತ್ತನ್ನು ಸೃಷ್ಟಿಸುವಾಗ ಮೊದಲು "ತತ್ತೇಜೋಽಸೃಜತ" ಎಂದು ತೇಜಸ್ಸು ಉಂಟಾದುದಾಗಿ ಹೇಳಿದೆ. ಆಕಾಶ ಉತ್ಪನ್ನವಾದಲ್ಲಿ ಅದಕ್ಕೆ ಮುಂಚೆಯೇ ಅದರ ಉತ್ಪತ್ತಿಯನ್ನು ಹೇಳಬೇಕು. ಹಾಗೆ ಹೇಳಿಲ್ಲ. ತೇಜಸ್ಸಿಗೆ ಆದಿಕಾರಣವಾದ ಆಕಾಶ ತೇಜಸ್ಸಾದ ಮೇಲೆ ಉತ್ಪನ್ನವಾಗುವುದೆಂದೆನ್ನಕೂಡದು ಅಲ್ಲದೆ. "ವಾಯುಶ್ಚಾನ್ತರಿಕ್ಷಂ ಚೈತದಮೃತಂ"—ಎಂದು ಆಕಾಶಕ್ಕೆ ನಾಶವಿಲ್ಲವೆಂದೂ ಹೇಳಿದೆ. ಯಾವುದಕ್ಕೆ ನಾಶವಿಲ್ಲವೋ ಅದಕ್ಕೆ ಉತ್ಪತ್ತಿಯೂ ಇಲ್ಲ. ಆದ್ದರಿಂದ ಆಕಾಶ ಉಂಟಾಗುವುದೆಂದು ಹೇಳುವ ಶ್ರುತಿಗೆ ಸೂಕ್ಷ್ಮವಾಗಿದ್ದ ಆಕಾಶ ಸ್ಥೂಲಾವಸ್ಥೆಯನ್ನು ಹೊಂದಿತೆಂಬ ಗೌಣವಾದ ಉತ್ಪತ್ತಿಯನ್ನು ಹೇಳಿದೆಯೆಂದು ಅಂಗೀಕರಿಸಬೇಕು. —ಎಂದು ಪೂರ್ವಪಕ್ಷ.

ಸೂತ್ರ ೪—**ಸ್ಯಾಚ್ಚೈಕಸ್ಯ ಬ್ರಹ್ಮಶಬ್ದವತ್**

**ಸೂತ್ರಾರ್ಥ**

[ಬ್ರಹ್ಮಶಬ್ದವತ್] = ಬ್ರಹ್ಮಶಬ್ದಕ್ಕೆ ಹೇಗೋ ಹಾಗೆ [ಏಕಸ್ಯ] = "ಆತ್ಮನ **ಆಕಾಶಸ್ಸಂಭೂತಃ**"—ಎಂಬಲ್ಲಿಯ ಒಂದು ಸಂಭೂತ ಶಬ್ದಕ್ಕೇ [ಸ್ಯಾತ್,ಚ] = **(ಗೌಣೋತ್ಪತ್ತಿಯೂ ಮುಖ್ಯೋತ್ಪತ್ತಿಯೂ)** ಅರ್ಥವಾಗಬಹುದು.

**ವಿವರಣೆ**

ಆದರೆ, "ಆತ್ಮನ ಆಕಾಶಸ್ಸಂಭೂತಃ"—ಎಂಬ ವಾಕ್ಯದಲ್ಲಿರುವ ಸಂಭೂತ ಶಬ್ದವನ್ನೇ, "ವಾಯೋರಗ್ನಿಃ"—ಇತ್ಯಾದಿ ಮುಂದಿನ ವಾಕ್ಯಗಳಲ್ಲಿ ಇಟ್ಟುಕೊಳ್ಳಬೇಕಾದ್ದರಿಂದ. ಆ ಒಂದು ಸಂಭೂತಿ ಶಬ್ದಕ್ಕೇ ಒಂದೆಡೆಯಲ್ಲಿ ಗೌಣೋತ್ಪತ್ತಿಯೂ, "ವಾಯೋರಗ್ನಿಃ"—ಇತ್ಯಾದಿ ಮಿಕ್ಕ ಸ್ಥಳಗಳಲ್ಲಿ ಮುಖ್ಯೋತ್ಪತ್ತಿಯೂ ಅರ್ಥವಾಗ ಕೂಡದೆಂದಲ್ಲಿ, "ತಸ್ಮಾದೇತದ್ಬ್ರಹ್ಮ ನಾಮರೂಪಮನ್ನಂಚ ಜಾಯತೇ."—ಎಂಬಲ್ಲಿ ಬ್ರಹ್ಮಪದಕ್ಕೆ ಮೂಲಪ್ರಕೃತಿಯೆಂಬ ಅರ್ಥವನ್ನೂ, ಅದೇ ಪ್ರಕರಣದಲ್ಲಿರುವ, "ತಪಸಾ ಚೀಯತೇ ಬ್ರಹ್ಮ"—ಎಂಬ ವಾಕ್ಯದಲ್ಲಿರುವ ಬ್ರಹ್ಮಪದಕ್ಕೆ ಪರಮಾತ್ಮಾ ಎಂಬ ಅರ್ಥವಾಗಿ, ಹೀಗೆ ಒಂದು ಪ್ರಕರಣದಲ್ಲಿಯ ಒಂದು ಪದಕ್ಕೆ ಎರಡು ಅರ್ಥವಾದಂತೆ ಇಲ್ಲಿಯೂ ಒಂದು ಸಂಭೂತ ಶಬ್ದಕ್ಕೆ ಎರಡು ವಿಧವಾದ ಉತ್ಪತ್ತಿಯೂ ಅರ್ಥವಾಗ ಬಹುದು.—ಎಂದು ಪೂರ್ವಪಕ್ಷ.

ಸೂತ್ರ ೫—**ಪ್ರತಿಜ್ಞಾಹಾನಿರವ್ಯತಿರೇಕಾತ್**

**ಸೂತ್ರಾರ್ಥ**

[ಅವ್ಯತಿರೇಕಾತ್] = (ಆಕಾಶವು ಬ್ರಹ್ಮದಿಂದ ಸೃಷ್ಟವಾದ ಪದಾರ್ಥಗಳಿಗಿಂತ) ಅತಿರಿಕ್ತವಲ್ಲದ್ದರಿಂದ [ಪ್ರತಿಜ್ಞಾಹಾನಿಃ] = (ಬ್ರಹ್ಮ ಸ್ವರೂಪವನ್ನು ಅರಿತರೆ ಸರ್ವ—ವನ್ನೂ ಅರಿತಂತಾಗುವುದು ಎಂಬ) ಪ್ರತಿಜ್ಞೆಗೆ ಹಾನಿ ಬರದು.

**ವಿವರಣೆ**

ಮೇಲಿನ ಪೂರ್ವಪಕ್ಷವನ್ನು ನಿರಸನಮಾಡುತ್ತಾರೆ:—"ಯೇನಾಶ್ರುತಂ..." —ಎಂದು ಉಪಕ್ರಮಿಸಿ, ಪರಬ್ರಹ್ಮವನ್ನು ಅರಿತರೆ ಮತ್ತೆಲ್ಲಾ ಪದಾರ್ಥಗಳೂ ಅರಿಯಲ್ಪಟ್ಟಂತಾಗುವುವು—ಎಂದು ಮೊದಲು ಹೇಳಿದೆ. ಅದು ಹೇಗೆಂದರೆ,—ಕಾರಣ ವಾದ ಮೃತ್ಪಿಂಡವನ್ನು ಅರಿತರೆ, ಅದರ ಕಾರ್ಯವಾದ ಘಟಸ್ವರೂಪವೂ ಅರಿಯಲಟ್ಟಂತೆ ಆಗುವ ಹಾಗೆ, ಸಕಲ ಜಗತ್ತಿಗೂ ಬ್ರಹ್ಮ ಕಾರಣವಾದ್ದರಿಂದ ಅದನ್ನು ಅರಿತಲ್ಲಿ ಸಕಲವನ್ನೂ ಅರಿತಂತೆಯೇ ಎಂದರ್ಥ. ಅದರಲ್ಲಿ, ಆಕಾಶ, ಬ್ರಹ್ಮದಿಂದ ಉತ್ಪನ್ನವಾಗದಿದ್ದಲ್ಲಿ, ಇದು ಬ್ರಹ್ಮದ ಕಾರ್ಯವಲ್ಲದ್ದರಿಂದ, ಬ್ರಹ್ಮಜ್ಞಾನದಿಂದ ಆಕಾಶದ ಸ್ವರೂಪ ಅರಿಯಲ್ಪಡದು. ಆದರಿಂದ ಹಿಂದೆ ಹೇಳಿದ ಪ್ರತಿಜ್ಞೆ ಕೆಟ್ಟು ಹೋದೀತು. ಅದು ಕೆಟ್ಟು ಹೋಗದಿರುವುದಕ್ಕಾಗಿ ಆಕಾಶವೂ ಬ್ರಹ್ಮದಿಂದಲೇ ಉತ್ಪನ್ನವಾಯಿತೆಂದು ಅಂಗೀಕರಿಸಬೇಕು ಎಂದು ಸಿದ್ಧಾಂತ.

ಸೂತ್ರ ೬—**ಶಬ್ದೇಭ್ಯಃ**

**ಸೂತ್ರಾರ್ಥ**

ಶಬ್ದಗಳಿಂದಲೂ (ಆಕಾಶೋತ್ಪತ್ತಿಯನ್ನು ಒಪ್ಪಬೇಕು).

**ವಿವರಣೆ**

ಸೃಷ್ಟಿಗೆ ಮುಂಚೆ ಬ್ರಹ್ಮ ಒಂದೇ ಇದ್ದಿತೆಂದೂ, ಇವೆಲ್ಲವೂ ಬ್ರಹ್ಮಸ್ವರೂಪವೇ ಎಂದೂ ಹೇಳುವುದರಿಂದ ಮೊದಲು ಆಕಾಶವಿಲ್ಲವೆಂದೂ ಅನಂತರ ಉಟಾಯಿತೆಂದೂ ಸ್ಪಷ್ಟವಾಗಿ ತೋರುವುದು. ಛಾಂದೋಗ್ಯದಲ್ಲಿ ಆಕಾಶೋತ್ಪತ್ತಿಯನ್ನು ಹೇಳದೆ ತೇಜಸ್ಸಿನ ಉತ್ಪತ್ತಿಯನ್ನು ಮೊದಲೇ ಹೇಳಿದಾಗ್ಯೂ, ಅದು ತೈತ್ತಿರೀಯದಲ್ಲಿ ಆಕಾಶೋತ್ಪತ್ತಿಯನ್ನು ಹೇಳುವ ವಾಕ್ಯಕ್ಕೆ ಬಾಧಕವಾಗದೆಂದು ತಾತ್ಪರ್ಯ.

ಸೂತ್ರ ೭—**ಯಾವದ್ವಿಕಾರಂತು ವಿಭಾಗೋಲೋಕವತ್**

**ಸೂತ್ರಾರ್ಥ**

[ಲೋಕವತ್] = ಲೋಕದಲ್ಲಿರುವಂತೆ [ಯಾವದ್ವಿಕಾರಂ] = ಆಕಾಶ ಮುಂತಾದ ಸಕಲ ವಸ್ತುಗಳೂ ಜನ್ಯ (ಎಂದು ಅಂಗೀಕರಿಸಿರುವುದರಿಂದ) [ವಿಭಾಗಃ] = ಉತ್ಪತ್ತಿ (ಹೇಳಲ್ಪಟ್ಟಿತು).

**ವಿವರಣೆ**

ಲೋಕದಲ್ಲಿ "ಈ ನಾಲ್ವರೂ ದೇವದತ್ತನ ಪುತ್ರರು"—ಎಂದು ಹೇಳಿ, ಅವರಲ್ಲಿ ಇಬ್ಬರ ಜನನದ ಬಗೆಯನ್ನು ಹೇಳಿ ಮಿಕ್ಕ ಇಬ್ಬರಿಗೂ ಹೇಳದೆ ಹೋದಾಗ್ಯೂ ಆ ಇಬ್ಬರೂ ದೇವದತ್ತನಿಗೆ ಪುತ್ರರಲ್ಲವೆಂದು ತೋರಲಾರರು. ಅದರಂತೆಯೇ, "ಐತದಾತ್ಮ್ಯಂ"—ಎಂದು ಇದೆಲ್ಲವೂ ಪರಮಾತ್ಮನ ಕಾರ್ಯವೆಂದು ಹೇಳುವುದರಿಂದ, ಆಕಾಶಕ್ಕೆ ಪ್ರತ್ಯೇಕವಾಗಿ ಉತ್ಪತ್ತಿಯನ್ನು ಹೇಳದಿದ್ದಾಗ್ಯೂ, ಪರಮಾತ್ಮನಿಂದ ಉಂಟಾಯಿತೆಂದು ಸಿದ್ಧಿಸಲು ಅಡ್ಡಿಯಿಲ್ಲ.

ಸೂತ್ರ ೮—**ಏತೇನ ಮಾತರಿಶ್ವಾ ವ್ಯಾಖ್ಯಾತಃ**

**ಸೂತ್ರಾರ್ಥ**

[ಏತೇನ] = ಈ ಯುಕ್ತಿಯಿಂದಲೇ [ಮಾತರಿಶ್ವಾ] = (ವಿನಾಶವಿಲ್ಲದವನೆಂದು ಹೇಳಲ್ಪಟ್ಟ) ವಾಯುವೂ, [ವ್ಯಾಖ್ಯಾತಃ] = (ಪರಮಾತ್ಮನಿಂದಲೇ ಉಂಟಾದನೆಂದು) ಹೇಳಿದಹಾಗಾಯಿತು.

ಸೂತ್ರ ೯—**ಅಸಂಭವಸ್ತು ಸತೋऽನುಪಪತ್ತೇಃ**

**ಸೂತ್ರಾರ್ಥ**

[ಸತಃ] = ಪರಮಾತ್ಮನಿಗೇ [ಅಸಂಭವಃ] = ಉತ್ಪತ್ತ್ಯಭಾವ (ಉತ್ಪತ್ತಿಯಿಲ್ಲವೆಂದು ಹೇಳಲ್ಪಟ್ಟಿತು.) [ಅನುಪಪತ್ತೇಃ] = (ಪರಮಾತ್ಮ ಜ್ಞಾನದಿಂದ ಸಕಲ ವಸ್ತು ವಿಷಯಕಜ್ಞಾನ ಉಂಟಾಗುವುದೆಂಬುದು, ಇವು ಪರಮಾತ್ಮನಿಂದ ಉತ್ಪನ್ನವಾಗದೇ ಹೋದಲ್ಲಿ) ಕೂಡದೆ ಹೋಗುವುದರಿಂದ, (ಇವು ಪರಮಾತ್ಮನ ಕಾರ್ಯಗಳೆಂದೇ ಹೇಳಲ್ಪಟ್ಟವು.)

## 2. ತೇಜೋऽಧಿಕರಣ

ಸೂತ್ರ—**ತೇಜೋತಸ್ತಥಾಹ್ಯಾಹ**

**ಅಪವಾದ ಸಂಗತಿ**

ಬ್ರಹ್ಮವ್ಯತಿರಿಕ್ತವೆಲ್ಲವೂ ಬ್ರಹ್ಮದ ಕಾರ್ಯವೆನ್ನಲಾಯಿತು. ಈಗ ವ್ಯವಹಿತ ಕಾರ್ಯಗಳಾದ ಮಹದಾದಿತತ್ತ್ವಗಳ ಉತ್ಪತ್ತಿ ಕೇವಲ ಅವುಗಳ ಪೂರ್ವಾಪೂರ್ವ

ತತ್ತ್ವಗಳಿಂದ ಮಾತ್ರವೇ ಆದದ್ದೋ ಅಥವಾ ಆಯಾ ತತ್ತ್ವ ರೂಪವಾದ ಬ್ರಹ್ಮ ದಿಂದಲೋ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಅತಃ] = ಈ ವಾಯುವಿನಿಂದ [ತೇಜಃ] = ತೇಜಸ್ಸು (ಉಂಟಾಯಿತು) [ತಥಾಹಿ] = ಹಾಗೆಯೇ [ಆಹ] = ಹೇಳಿದೆ.

**ವಿವರಣೆ**

ಈ ಅಧಿಕರಣದಲ್ಲಿ ತೇಜಸ್ಸು ಮುಂತಾದ ಪದಾರ್ಥಗಳೂ ಪರಮಾತ್ಮನಿಂದಲೇ ಆದುವು ಎನ್ನುತ್ತಾರೆ. "ವಾಯೋರಗ್ನಿಃ"—ಎಂದರೆ, ವಾಯುವಿನಿಂದ ಅಗ್ನಿ ಉಂಟಾಯಿತೆಂದು ವೇದದಲ್ಲಿ ಹೇಳುವುದರಿಂದ ಅಗ್ನಿಗೆ ವಾಯುವೇ ಕಾರಣ, ಪರಮಾತ್ಮನಲ್ಲ. "ಏತಸ್ಮಾಜ್ಜಾಯತೇ..."—ಎಂಬ ವಾಕ್ಯದಲ್ಲಿ ಪರಮಾತ್ಮನನ್ನು ಇದಕ್ಕೆ ಕಾರಣವನ್ನಾಗಿ ಹೇಳಿದ್ದಾಗ್ಯೂ. ತೇಜಸ್ಸಿಗೆ ಕಾರಣ ವಾಯು. ವಾಯುವಿಗೆ ಕಾರಣ ಆಕಾಶ, ಆಕಾಶಕ್ಕೆ ಕಾರಣ ಪರಮಾತ್ಮಾ. ಹೀಗೆ ಪರಂಪರೆಯಿಂದ ಕಾರಣವೆಂಬ ಅಭಿಪ್ರಾಯದಿಂದ ಪರಮಾತ್ಮನನ್ನು ಕಾರಣವನ್ನಾಗಿ ಹೇಳಿದೆ—ಎಂದು ಪೂರ್ವಪಕ್ಷ

ಸೂತ್ರ ೨—**ಆಪಃ "ಆಪೋಽತಸ್ತಥಾಹ್ಯಾಹ"**

ಎಂದು "ಅತಸ್ತಥಾಹ್ಯಾಹ" ಎಂಬುದರ ಅನುಷಂಗದಿಂದ ಪೂರ್ತಿ ಸೂತ್ರ

**ಸೂತ್ರಾರ್ಥ**

[ಆಪಃ] = ಜಲ (ಅತಃ = ಈ ತೇಜಸ್ಸಿನಿಂದ ಉಂಟಾಯಿತು) [ತಥಾಹಿ] = ಹಾಗೆಯೇ [ಆಹ] = ವೇದ ಹೇಳಿದೆ.

**ವಿವರಣೆ**

ಹಾಗೆಯೇ, "ಅಗ್ನೇರಾಪಃ",—ಎಂದು ಅಗ್ನಿಯಿಂದ ಜಲವುಂಟಾಯಿತೆಂದು ಹೇಳುವುದರಿಂದ, ಜಲಕ್ಕೆ ಕಾರಣ ಅಗ್ನಿಯೇ ಆಗಿದೆ; ಪರಮಾತ್ಮನಲ್ಲ—ಎಂದ ಪೂರ್ವಪಕ್ಷ.

ಸೂತ್ರ ೩—**ಪೃಥಿವೀ**

ಇಲ್ಲಿಯೂ " ಅತಸ್ತಥಾಹ್ಯಾಹ "—ಎಂಬುದು ಅನುಷಂಗಿಸುತ್ತೆ

**ಸೂತ್ರಾರ್ಥ**

[ಪೃಥಿವೀ] = ಭೂಮಿ (ಅತಃ) = ಈ ಜಲದಿಂದ ಉಂಟಾಯಿತು [ತಥಾಹ್ಯಾಹ] = ಹಾಗೆಯೇ ವೇದ ಹೇಳಿದೆ.

**ವಿವರಣೆ**

"ತಾ ಅನ್ನಮಸೃಜನ್ತ"—ಅಂದರೆ, ಆ ಜಲ 'ಅನ್ನ' ವೆಂದು ಹೇಳಲ್ಪಟ್ಟ ಪೃಥಿವಿಯನ್ನು ಸೃಷ್ಟಿಸಿತೆಂದು ಹೇಳುವುದರಿಂದ ಪೃಥಿವಿಗೆ ಜಲವೇ ಕಾರಣ—ಪರಮಾತ್ಮಾ ಕಾರಣನಲ್ಲವೆಂದು ಪೂರ್ವಪಕ್ಷ.

### ಸೂತ್ರ ೪—ಅಧಿಕಾರರೂಪ ಶಬ್ದಾನ್ತರೇಭ್ಯಃ

**ಸೂತ್ರಾರ್ಥ**

(ಅಧಿಕಾರ ರೂಪ ಶಬ್ದಾನ್ತರೇಭ್ಯಃ] = ಪ್ರಕರಣದಿಂದಲೂ, (ಮುಂದೆ ಹೇಳುವ) ವರ್ಣದಿಂದಲೂ, (ಸಮಾನ ಪ್ರಕರಣಸ್ಥ) ಶಬ್ದದಿಂದಲೂ ಅನ್ನವೆಂಬ ಪದಕ್ಕೆ—ಪೃಥಿವೀ ಅರ್ಥವೆಂದು ನಿಶ್ಚಯಿಸಲ್ಪಡುತ್ತೆ.

**ವಿವರಣೆ**

ಅನ್ನವೆಂದರೆ, ಪೃಥಿವಿಗೆ ಹೇಗೆ ಹೆಸರಾಗುತ್ತೆ?—ಎಂದಲ್ಲಿ, ಪಂಚಭೂತಗಳನ್ನು ಹೇಳುವ ಈ ಪ್ರಕರಣದಲ್ಲಿ ಮಿಕ್ಕವುಗಳನ್ನು ಹೇಳಿ, ಪೃಥಿವಿಯನ್ನು ಹೇಳಬೇಕಾದೆಡೆಯಲ್ಲಿ ಅನ್ನವೆಂದು ಹೇಳಿದೆ. ಮುಂದಿನ ವಾಕ್ಯದಲ್ಲಿ ಪೃಥಿವಿಗೆ ಉಂಟಾದ ಕೃಷ್ಣವರ್ಣವನ್ನು, ''ಯತ್ ಕೃಷ್ಣಂತದನ್ನಸ್ಯ,''—ಎಂದು ಅನ್ನಕ್ಕೆ ಹೇಳಿದೆ. ಇದರೊಂದಿಗೆ ಸಮಾನವಾದ ಮತ್ತೊಂದು ಸೃಷ್ಟಿ ಪ್ರಕರಣದಲ್ಲಿ,''ಅದ್ಭ್ಯಃ ಪೃಥಿವೀ,''—ಎಂದು ಜಲದಿಂದ ಪೃಥಿವೀ ಉಂಟಾಯಿತೆಂದು ಸ್ಪಷ್ಟವಾಗಿ ಹೇಳಿದ. ಹೀಗೆ ಈ ಹೇತುಗಳಿಂದ ಇಲ್ಲಿಯು ಅನ್ನ ಪದಕ್ಕೆ ಪೃಥಿವಿಯೇ ಅರ್ಥವೆಂದು ನಿಶ್ಚಯಿಸಲ್ಪಡುತ್ತೆ—ಎಂದು ಪೂರ್ವಪಕ್ಷ.

### ಸೂತ್ರ ೫—ತದಭಿಧ್ಯಾನಾ ದೇವತು ತಲ್ಲಿಂಗಾತ್‌ಸಃ

**ಸೂತ್ರಾರ್ಥ**

[ತಲ್ಲಿಂಗಾತ್] = ಅವುಗಳ ಸೃಷ್ಟಿಗೆ ಹೇತುವಾಗಿ [ತದಭಿಧ್ಯಾನಾತ್] = ಪರಮಾತ್ಮನ ಸಂಕಲ್ಪವನ್ನು ಹೇಳುವುದರಿಂದ, [ಸಃ ಏವ] = ಆ ಪರಮಾತ್ಮನೇ (ಅದಕ್ಕೆ ಕಾರಣ) [ತು] = ಎಂಬುದು ಮೇಲೆ ಹೇಳಿದ ಪೂರ್ವಪಕ್ಷಕ್ಕಿಂತ ಬೇರಾವ ಸಿದ್ಧಾನ್ತ ರೂಪವಾದ ಅರ್ಥವನ್ನು ಹೇಳುವುದೆನ್ನುವುದಕ್ಕಾಗಿ.

**ವಿವರಣೆ**

ಮೇಲಿನ ಪೂರ್ವಪಕ್ಷಗಳನ್ನು ನಿರಸನ ಮಾಡುತ್ತಾರೆ;—''ತತ್ತೇಜ ಐಕ್ಷತ, ಬಹುಸ್ಯಾಂ ಪ್ರಜಾಯೇಯ"—ಎಂದು ಆ ತೇಜಸ್ಸು ಸಂಕಲ್ಪಿಸಿ ಅನಂತರ ಜಲವನ್ನು ಸೃಷ್ಟಿಸಿತೆಂದು ಹೇಳುವುದರಿಂದ ಅಚೇತನವಾದ ತೇಜಸ್ಸಿಗೆ ಚೇತನ ಧರ್ಮವಾದ ಸಂಕಲ್ಪ ಕೂಡದುದರಿಂದ ಹಾಗೆ ಸಂಕಲ್ಪಿಸಿದವನು ತೇಜಶ್ಶರೀರಕನಾದ ಪರಮಾತ್ಮಾ. ಅವನೇ ತೇಜಃ ಪದದಿಂದ ಹೇಳಲ್ಪಟ್ಟವನು. ಆದ್ದರಿಂದ ಬರೀ ತೇಜಸ್ಸನ್ನು ಜಲಕ್ಕೆ ಕಾರಣವಾಗಿ ಹೇಳಿಲ್ಲ. ಅದನ್ನು ಶರೀರವಾಗಿಯುಳ್ಳ ಪರಮಾತ್ಮನೇ ಕಾರಣವಾಗಿ ಹೇಳಲ್ಪಟ್ಟವನಾದ್ದರಿಂದ, ಅವನೇ ಜಲಾದಿಗಳಿಗೆ ಕಾರಣನೆಂದು ಸಿದ್ಧಾನ್ತ.

### ಸೂತ್ರ ೬—ವಿಪರ್ಯಯೇಣತುಕ್ರಮೋಽತ ಉಪಪದ್ಯತೇ ಚ

**ಸೂತ್ರಾರ್ಥ**

[ಅತಃ] = ಪರಮಾತ್ಮನಿಂದ ಜಲಾದಿಗಳು ಉಂಟಾದುದರಿಂದಲೇ [ವಿಪರ್ಯಯೇಣ] = (ಇಲ್ಲಿ ಹೇಳಿದ ಕ್ರಮಕ್ಕಿಂತ) ಬೇರೆ ವಿಧವಾಗಿ ಹೇಳಲ್ಪಟ್ಟ [ಕ್ರಮಃ] = ಸೃಷ್ಟಿ ಕ್ರಮವೂ [ಉಪಪದ್ಯತೇ] = ಉಪಪನ್ನವಾಗುತ್ತೆ.

**ವಿವರಣೆ**

ಸಮಸ್ತ ವಸ್ತುಗಳಿಗೂ ಪರಮಾತ್ಮನೇ ಕಾರಣನೆಂದು ಒಪ್ಪಿಕೊಳ್ಳುವುದರಿಂದ ಆಕಾಶದಿಂದ ವಾಯು, ಅದರಿಂದ ಅಗ್ನಿ, ಅದರಿಂದ ನೀರು, ಅದರಿಂದ ಪೃಥ್ವೀ ಉಂಟಾಯಿತೆಂದು ಹೇಳಿದೆ, ಸೃಷ್ಟಿ ಕ್ರಮಕ್ಕೆ ವಿಪರೀತವಾಗಿ, "ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿಚ ಖಂ ವಾಯುಃ..."—ಇತ್ಯಾದಿ ವಾಕ್ಯದಲ್ಲಿ ಪರಮಾತ್ಮನಿಂದಲೇ ಪ್ರಾಣ, ಮನಸ್ಸು, ಇಂದ್ರಿಯ, ಆಕಾಶ, ವಾಯು, ಅಗ್ನಿ ಮುಂತಾದುವು ಉಂಟಾಯಿತೆಂದು ಹೇಳಿದುದೂ ಉಪಪನ್ನವಾಗುವುದು. ಆದ್ದರಿಂದ ಪರಮಾತ್ಮನೇ ಇವಕ್ಕೆ ಕಾರಣ.

ಸೂತ್ರ ೭—**ಅನ್ತರಾ ವಿಜ್ಞಾನಮನಸೀ ಕ್ರಮೇಣ ತಲ್ಲಿಂಗಾದಿತಿ ಚೇನ್ನಾವಿಶೇಷಾತ್**

**ಸೂತ್ರಾರ್ಥ**

[ತಲ್ಲಿಂಗಾತ್] = ಈ ಕ್ರಮದಿಂದ ಲಯ ತೋರುವುದೆಂಬ ಹೇತುವಿನಿಂದ[ಅನ್ತರಾ] = ತನ್ಮಾತ್ರೆಗಳಿಗೂ ಆಕಾಶಕ್ಕೂ ನಡುವೆ, [ಕ್ರಮೇಣ] = ಕ್ರಮವಾಗಿ [ವಿಜ್ಞಾನಮನಸೀ] = ಇಂದ್ರಿಯಗಳೂ ಮನಸ್ಸೂ (ಉಂಟಾಗುವುದೆಂದು ಈ ವಾಕ್ಯದ ಅರ್ಥ) ವಿಜ್ಞಾನಕ್ಕೆ ಸಾಧನವಾದ್ದರಿಂದ ಇಲ್ಲಿ ವಿಜ್ಞಾನವೆಂದರೆ ಇಂದ್ರಿಯಗಳೆಂದರ್ಥ [ಇತಿ ಚೇತ್] = ಎಂದಲ್ಲಿ, [ಅವಿಶೇಷಾತ್] = (ಪ್ರಾಣ ಶಬ್ದಕ್ಕೂ ಆಕಾಶವಾಚಕ ಶಬ್ದಕ್ಕೂ ಆಯಾ ಶರೀರಕನಾದ ಪರಮಾತ್ಮನೇ ಅರ್ಥವೆಂದು ಹೇಳಬೇಕಾದುದರಿಂದ, "ಏತಸ್ಮಾಜ್ಜಾಯತೇ ಪ್ರಾಣಃ"—ಎಂಬುದಕ್ಕೂ, "ಏತಸ್ಮಾಜ್ಜಾಯತೇ ಖಂ,"—ಎಂಬುದಕ್ಕೂ) ವಿಶೇಷವಿಲ್ಲದುದರಿಂದ, [ನ] = ಹಾಗೆ ಎನ್ನಕೂಡದು. ಈ ವಾಕ್ಯ ಸಾಕ್ಷಾತ್ ಪರಮಾತ್ಮಪರವೆಂದೇ ಸ್ವೀಕರಿಸಬೇಕು.

**ವಿವರಣೆ**

ಪ್ರಳಯ ಕ್ರಮದಲ್ಲಿ ಆಕಾಶ ಇಂದ್ರಿಯಗಳಲ್ಲಿಯೂ, ಅವು ತನ್ಮಾತ್ರೆಗಳಲ್ಲಿಯೂ ಲೀನವಾಗುವುದೆಂದು ಹೇಳಿದೆ. ಲಯಕ್ರಮದಂತೆಯೇ ಸೃಷ್ಟಿಕ್ರಮವಾದ್ದರಿಂದ ಕ್ರಮವಾಗಿ ತನ್ಮಾತ್ರೆಗಳಿಂದ ಇಂದ್ರಿಯಗಳೂ, ಅವುಗಳಿಂದ ಆಕಾಶವೂ ಉಂಟಾಯಿತೆಂದು ಅಂಗೀಕರಿಸಬೇಕು. ಆ ಕ್ರಮವನ್ನೇ, "ಏತಸ್ಮಾಜ್ಜಾಯತೇ ಪ್ರಾಣಃ,"—ಇತ್ಯಾದಿ ವಾಕ್ಯ ಹೇಳುವುದು. ಎಲ್ಲವೂ ಪರಮಾತ್ಮನಿಂದ ಉಂಟಾಗುವುದೆಂದು ಈ ವಾಕ್ಯಕ್ಕೆ ತಾತ್ಪರ್ಯವಲ್ಲವೆಂದು ಪೂರ್ವಪಕ್ಷ. ಸೃಷ್ಟಿಕ್ರಮವನ್ನು ಈ ವಿಧವಾಗಿ ಒಪ್ಪಿಕೊಂಡಾಗ್ಯೂ ಆಕಾಶ ವಾಯ್ವಾದಿ ಶಬ್ದಗಳಂತೆ ಇಂದ್ರಿಯಮನಃ ಪ್ರಾಣ ಶಬ್ದಗಳೂ ಅವನ್ನು ಶರೀರವಾಗಿಯುಳ್ಳ ಪರಮಾತ್ಮನಿಗೇ ವಾಚಕವಾದ್ದರಿಂದ ಅವನ್ನು ಶರೀರವಾಗಿಯುಳ್ಳ ಪರಮಾತ್ಮನಿಂದಲೇ ಆಯಾ ಪದಾರ್ಥಗಳು ಉಂಟಾಯಿತೆಂದೇ ಅಂಗೀಕರಿಸಬೇಕು. ಆದ್ದರಿಂದ, ಈ ವಾಕ್ಯ ಸರ್ವವಿಧಕ್ಕೂ ಪರಮಾತ್ಮನೇ ಕಾರಣವೆನ್ನುವುದೆಂಬುದರಲ್ಲಿ ಕುಂದಿಲ್ಲವೆಂದು ಸಿದ್ಧಾನ್ತ.

ಸೂತ್ರ ೮— **ಚರಾಚರವ್ಯಪಾಶ್ರಯಸ್ತು ಸ್ಯಾತ್ತದ್ವ್ಯಪದೇಶೋ-ಭಾಕ್ತಸ್ತದ್ಭಾವಭಾವಿತ್ವಾತ್**

**ಸೂತ್ರಾರ್ಥ**

[ತದ್ಭಾವ ಭಾವಿತ್ವಾತ್] = (ಪರಮಾತ್ಮನು) ಅವುಗಳಲ್ಲಿ ಆತ್ಮಾವಾಗಿ ಅನು ಪ್ರವೇಶಿಸಿರುವುದರಿಂದ, [ಚರಾಚರವ್ಯಪಾಶ್ರಯಃ] = ಜಂಗಮ ಸ್ಥಾವರಗಳನ್ನು ಆಶ್ರಯಿಸಿರುವ (ಹೇಳುವ) [ತದ್ವ್ಯಪದೇಶಃ] = ತೇಜಸ್ಸು, ವಾಯು ಮುಂತಾದ ಶಬ್ದ [ಅಭಾಕ್ತಃ] = (ಪರಮಾತ್ಮನಲ್ಲಿ) ಮುಖ್ಯವಾಗಿ [ಸ್ಯಾತ್] = ಆಗುತ್ತೆ.

**ವಿವರಣೆ**

ಲೋಕದಲ್ಲಿ ತೇಜಸ್ಸು ವಾಯು ಮೊದಲಾದುವುಗಳಿಗೂ ವಾಚಕಗಳಾಗಿ ಪ್ರಸಿದ್ಧವಾಗಿರುವ ಶಬ್ದಗಳು ಪರಮಾತ್ಮನಿಗೆ ವಾಚಕಗಳಾಗಿ ಹೇಗೆ ಆದಾವು?—ಎಂದಲ್ಲಿ ಸಕಲ ಪದಾರ್ಥಗಳಲ್ಲಿಯೂ ಪರಮಾತ್ಮ ಅಂತರ್ಯಾಮಿಯಾಗಿ ಪ್ರವೇಶಿಸಿ ಅವಕ್ಕೆ ಆತ್ಮಾವಾಗಿ ಇದ್ದಾನೆ. ಅವನಿಗೆ ಇವೆಲ್ಲವೂ ಶರೀರವಾಗಿವೆ. ಶರೀರವನ್ನು ಹೇಳುವ ಶಬ್ದಗಳು ಆ ಶರೀರದೊಂದಿಗೆ ಕೂಡಿರುವ ಆತ್ಮವನ್ನೇ ಹೇಳುವುವಾದ್ದರಿಂದ, ಸಕಲ ಶಬ್ದಗಳೂ ಅವಕ್ಕೆ ಅರ್ಥವಾಗುವ ವಸ್ತುಗಳಿಗೆ ಅಂತರ್ಯಾಮಿಯಾದ ಪರಮಾತ್ಮನನ್ನೇ ಹೇಳಲು ತಡೆಯಿಲ್ಲ.

## 3. ಆತ್ಮಾಧಿಕರಣ

ಸೂತ್ರ—**ನಾತ್ಮಾ ಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ**

**ಅಪವಾದ ಸಂಗತಿ**

ವಿಯದಧಿಕರಣದಲ್ಲಿ ಪರವಾದಿಗಳಿಂದ ನಿತ್ಯವೆಂದು ಹೇಳಲ್ಪಟ್ಟ ವಿಯದಾದಿಗಳಿಗೆ ಉತ್ಪತ್ತಿಯುಂಟೆಂದು ಸ್ಥಾಪಿಸಲಾಯಿತು. ಅನಂತರದ ತೇಜೋಽಧಿಕರಣದಲ್ಲಿ, ಎಲ್ಲಾ ವಸ್ತುಗಳಿಗೂ ಅವುಗಳ ಹಿಂದಿನ ತತ್ತ್ವಗಳನ್ನೇ ಶರೀರವಾಗಿಯುಳ್ಳ ಪರಬ್ರಹ್ಮದಿಂದಲೇ ಸಾಕ್ಷಾತ್ತಾಗಿ ಉತ್ಪತ್ತಿಯೆಂದು ನಿಯಮಿತವಾಯಿತು. ಈಗ ಮತ್ತೆ ಪರವಾದಿಗಳಿಂದ ನಿತ್ಯವೆನ್ನಲ್ಪಟ್ಟ ಆಕಾಶಾದಿಗೆ ಹೇಗೋಹಾಗೆ, ಆತ್ಮನಿಗೂ ಕಾರ್ಯತ್ವವಿರಲಿ—ಎಂದು ಆಶಂಕಿಸಿ ವಿಶೇಷ ಸಂಗತಿ ಅಥವಾ, ಹಿಂದೆ ಅಚೇತನಗಳ ಉತ್ಪತ್ತಿ ಪ್ರಕಾರ ಚಿಂತಿತವಾಯಿತು. ಈಗ ಜೀವೋತ್ಪತ್ತಿವಾದಗಳಿಗೂ ಪ್ರಕಾರಾಂತರ ಪ್ರದರ್ಶನದಿಂದ ಅನ್ಯಥಾ ಸಿದ್ಧಿ ಮಾಡಲ್ಪಡುತ್ತೆ.

**ಸೂತ್ರಾರ್ಥ**

[ಶ್ರುತೇಃ] = ಜೀವನಿಗೆ ಉತ್ಪತ್ತಿಯಿಲ್ಲವೆಂದು ಹೇಳುವ ಶ್ರುತಿಯಿಂದಲೂ, [ತಾಭ್ಯಃ] = ಆ ಶ್ರುತಿ ವಾಕ್ಯಗಳಿಂದ [ನಿತ್ಯತ್ವಾತ್,ಚ] = ನಿತ್ವತ್ಯ ತೋರುವುದರಿಂದಲೂ, [ಆತ್ಮಾ] = ಜೀವನು [ನ] = ಹುಟ್ಟಿಲ್ಲದವನು.

**ವಿವರಣೆ**

ಇದರಲ್ಲಿ ಜೀವಾತ್ಮನು ನಿತ್ಯನೆಂದು ಸ್ಥಾಪಿಸುತ್ತಾರೆ;—ಜೀವಾತ್ಮನಿಗೆ ಉತ್ಪತ್ತಿಯನ್ನು ಒಪ್ಪಿಕೊಳ್ಳದಿದ್ದಲ್ಲಿ ಅವನು ಬ್ರಹ್ಮ ಸೃಷ್ಟಿಯಲ್ಲಿ ಸೇರದೆ ಹೋಗುವುದರಿಂದ,

ಬ್ರಹ್ಮಜ್ಞಾನದಿಂದ ಜೀವಾತ್ಮಜ್ಞಾನ ಉಂಟಾಗುವುದಿಲ್ಲವಾದ್ದರಿಂದ, ಮೊದಲು ಹೇಳಿದ ಏಕ ವಿಜ್ಞಾನದಿಂದ ಸರ್ವವಿಜ್ಞಾನವೆಂಬ ಪ್ರತಿಜ್ಞೆಗೆ ಭಂಗ ಬರುವುದು. ಅಲ್ಲದೆ, ''ತೋಯೇನ ಜೀವಾನ್ ವ್ಯಸಸರ್ಜಭೂಮ್ಯಾಂ''—ಅಂದರೆ, ''ಜಲದೊಡನೆ ಜೀವರುಗಳನ್ನೂ ಭೂಮಿಯಲ್ಲಿ ಬಿಟ್ಟನು. (ಸೃಷ್ಟಿಸಿದನು)'';—ಎಂದೂ, ''ಪ್ರಜಾಪತಿಃ ಪ್ರಜಾ ಅಸೃಜತ,''—ಅಂದರೆ, ''ಬ್ರಹ್ಮಾ ಪ್ರಜೆಗಳನ್ನು ಸೃಷ್ಟಿಸಿದ''—ಇತ್ಯಾದಿಯಾಗಿ ಹೇಳಿದೆ, ಆದ್ದರಿಂದ ಜೀವನಿಗೂ ಉತ್ಪತ್ತಿಯನ್ನು ಒಪ್ಪಿಕೊಳ್ಳಬೇಕು. ಜೀವನು ನಿತ್ಯನೆಂದು ಹೇಳುವ ವಾಕ್ಯಗಳಿಗೆ ಬಹುಕಾಲವಿರತಕ್ಕವನು—ಎಂದು ಗೌಣವಾಗಿ ಅರ್ಥವನ್ನು ಹೇಳಬೇಕು —ಎಂದು ಪೂರ್ವಪಕ್ಷ.

''ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್''—ಎಂದು ಜೀವನಿಗೆ ಉತ್ಪತ್ತಿ ನಾಶಗಳಿಲ್ಲವೆಂದು ಹೇಳುವುದರಿಂದಲೂ, ಜೀವನನ್ನು ಅನಿತ್ಯವೆಂದು ಒಪ್ಪಿಕೊಂಡಲ್ಲಿ, ಅವನು ಹುಟ್ಟಿದೊಡನೆ ಅವನು ಅನುಭವಿಸುವ ಸುಖದುಃಖಗಳಿಗೆ ಪುಣ್ಯಪಾಪ ರೂಪ ಹೇತುಗಳಿಲ್ಲವಾದ್ದರಿಂದ, ಕಾರಣವಿಲ್ಲದೆಯೇ ಕಾರ್ಯವುಂಟಾಯಿತೆಂಬ ದೋಷವೂ, ಅವನು ನಶಿಸುವುದಕ್ಕೆ ಮುಂಚೆ ಮಾಡಿದ ಪುಣ್ಯಾಪಾಪಗಳಿಗೆ ಫಲವಿಲ್ಲದೆ ಹೋಗುವುದೂ, ಈಶ್ವರನು ಕಾರಣವಿಲ್ಲದೆಯೇ ಒಬ್ಬನನ್ನು ಮೇಲಾಗಿಯೂ ಮತ್ತೊಬ್ಬನನ್ನು ಕೀಳಾಗಿಯೂ ಸೃಷ್ಟಿಸುವನೆಂಬ ನಿರ್ದಯತ್ವ ಸಂಭವಿಸುವಿಕೆ ಎಂಬ ಈ ದೋಷಗಳು ಬರುವುದರಿಂದಲೂ, ಈ ಪಕ್ಷವನ್ನು ಬಿಟ್ಟು,'' ನಿತ್ಯೋನಿತ್ಯಾನಾಂ''—ಎಂದು ವೇದದಲ್ಲಿ ಹೇಳಿರುವಂತೆ ಜೀವ ನಿತ್ಯವೆಂದೇ ಅಂಗೀಕರಿಸಬೇಕೆಂದು ಸಿದ್ಧಾನ್ತ.

ಹೀಗೆ ನಿತ್ಯನೆಂದು ತಿಳಿಯಲ್ಪಟ್ಟ ಜೀವನಿಗೆ ದೇಹೇಂದ್ರಿಯಾದಿ ಸುಂಬಧವೇ ಜನ್ಮ —ದೇಹೇಂದ್ರಿಯಾದಿ ವಿಶ್ಲೇಷವೇ ನಾಶವೆಂದೂ ಸಿದ್ಧ.

ಮೇಲೆ ಹೇಳಿದ ಅರ್ಥಕ್ಕೆ ಪ್ರತಿಷೇಧರೂಪವಾದ ಲೋಕಾಯತಪಕ್ಷದಂತೆ, ದೇಹವೇ ಆತ್ಮಾ ಎಂದಲ್ಲಿ, ದೇಹವು ಕ್ಷಣಪರಿಣಾಮಿಯಾದ್ದರಿಂದ ಆತ್ಮನಿಗೂ ಜನ್ಮವುಂಟಾಗಬೇಕಾಗುವುದು. ''ವೀತರಾಗಜನ್ಮದರ್ಶನಾತ್''—ಎಂಬ ನ್ಯಾಯವಾದಿಗಳಿಂದ ನಿರಸ್ತವಾಗಿರುವ ಪ್ರಕಾರ, ಅದು ಘಟಿಸದು. ಹೇಗೆಂದರೆ, ಹುಟ್ಟಿದ ಮಗುವಿಗೆ ಆ ಕ್ಷಣವೇ ಸ್ತನ್ಯದಲ್ಲಿ ಅಭಿಲಾಷೆ ಹುಟ್ಟುತ್ತೆ. ಹಿಂದಿನ ಜನ್ಮದ ಅನುಭವವಿಲ್ಲದೆ ಅದು ಸಂಭವಿಸದು. ಅದಕ್ಕಾಗಿ ಹಿಂದಿನ ಮತ್ತು ಮುಂದಿನ ಜನ್ಮಗಳೆರಡರಲ್ಲಿಯೂ ಜೀವ ಅನುವರ್ತಿಸುವನನ್ನಬೇಕು. ದೇಹವೇ ಚೈತನ್ಯವಾದಲ್ಲಿ ದೇಹದ ಅವಯವಗಳಲ್ಲಿಯೂ ಚೈತನ್ಯ ಅವಶ್ಯವಿರಬೇಕು. ಕಾರಣ ಗುಣಪ್ರಕ್ರಮದಿಂದ ಕಾರ್ಯಗುಣಗಳು ಆರಂಭವಾಗುವುವೆಂಬುದು ನ್ಯಾಯ. ಹೀಗೆ ದೇಹ ಮತ್ತು ದೇಹದ ಅವಯವಗಳಲ್ಲಿ ಪ್ರತ್ಯೇಕವಾಗಿ ಚೈತನ್ಯವನ್ನು ಅಂಗೀಕರಿಸಿದಲ್ಲಿ, ಅನೇಕ ಚೈತನ್ಯ ಪ್ರಸಂಗವೊದಗುತ್ತೆ. ಚೇತನರಲ್ಲಿ ಒಬ್ಬರ ಮನಸ್ಸಿನಂತೆ ಮತ್ತೊಬ್ಬರ ಮನಸ್ಸಿಲ್ಲದೇ ಒಟ್ಟು ನಾನಾ ಮನಸ್ಕತ್ವ ಕಾರಣದಿಂದ ಶರೀರೋನ್ಮಾಥ ಪ್ರಸಂಗಿಸುತ್ತೆ,—ಇತ್ಯಾದಿ ದೂಷಣಗಳು ಅನುಸಂಧೇಯ.

ಇದಕ್ಕೆ ಚಾರ್ವಾಕರ ಉತ್ತರ:—

ಪೃಥಿವೀ, ಅಪ್, ತೇಜಸ್ಸು, ವಾಯು ಎಂಬ ತತ್ತ್ವಗಳ ಸಂಘಾತದಿಂದ, ಕಿಣ್ವಾದಿಗಳಿಂದ ಮದ ಶಕ್ತಿ ಹುಟ್ಟುವಂತೆ, ಚೈತನ್ಯ ಹುಟ್ಟುತ್ತೆ. ಪೃಥಿವ್ಯಾದಿಗಳು ಒಂದಾಗಿ ಸೇರದೆ ಚೈತನ್ಯ ಹುಟ್ಟುವುದಿಲ್ಲ. ಅವುಗಳ ಸಂಹತಾವಸ್ಥೆಯಲ್ಲಿಯೇ ಚೈತನ್ಯಯೋಗ ವುಂಟಾಗುವುದು. ಹೀಗೆ ಕರಚರಣಾದಿಗಳು ದೇಹಾವಸ್ಥೆಯನ್ನು ಹೊಂದಿದರೇಯೇ ಚೈತನ್ಯ. ದೇಹಕ್ಕೆ ಚೈತನ್ಯಗುಣಯೋಗವಿರುವುದರಿಂದ ದೇಹವೇ ಚೇತನ. ದೇಹದ ಅವಯವಗಳಲ್ಲಿ ಪ್ರತ್ಯೇಕಶಃ ಚೈತನ್ಯವಿಲ್ಲ ದೇಹರೂಪವಾದ ಪೃಥಿವ್ಯಪ್ತೇಜೋವಾಯ್ವಾತ್ಮಕ ಸಂಘಾತವೇ ಚೈತನ್ಯ—ನಿದರ್ಶನಕ್ಕಾಗಿ—ಕ್ರಮುಕ ತಾಂಬೂಲ ಚೂರ್ಣ (ಅಡಿಕೆ ಎಲೆ, ಸುಣ್ಣ) ಗಳು ಮೂರು ಒಟ್ಟುಗೂಡಿದೇರೇಯೇ ರಾಗಾಶ್ರಯತ್ವವೇ ಹೊರತು ಪ್ರತ್ಯೇಕವಾಗಿದ್ದಲ್ಲಿ ಇಲ್ಲ. ಕಿಣ್ವ– ಎಂದರೆ ಮದ್ಯೋತ್ಪತ್ತಿಯ ಮೂಲ ದ್ರವ್ಯಗಳಲ್ಲಿ ಒಂದು. ಕಿಣ್ವವೇ ಮುಂತಾದ ಮದೋತ್ಪತ್ತಿ ಮೂಲ ದ್ರವ್ಯಗಳೆಲ್ಲ ಒಟ್ಟು ಸೇರಿದಾಗಲೇ ಅವಕ್ಕೆ ಮದ ಹೇತುತ್ವ ಶಕ್ತಿಯೇ ಹೊರತು, ಅವಕ್ಕೆ ಪ್ರತ್ಯೇಕವಾಗಿ ಆ ಶಕ್ತಿಯಿಲ್ಲ. ಅದೇ ರೀತಿ ಕರಚರಣಾದಿಗಳು ಸಂಹತವಾದಾಗಲೇ ಅವು ಜ್ಞಾನಾಶ್ರಯವಾದ್ದರಿಂದ, 'ಅನೇಕ ಚೇತನೋಪಲಂಭ ಪ್ರಸಂಗ ದೋಷ ಒಂದೇ ದೇಹದಲ್ಲಿಲ್ಲ. ಕರಕ (ಆಲಿಕಲ್ಲು) ರೂಪವಾಗಿ ಪರಿಣತವಾದ ಜಲಕ್ಕೆ ಕಾಠಿನ್ಯವೇ ಹೊರತು ಹಾಗೆ ಪರಿಣತವಾಗದ ಜಲಕ್ಕೆ ಪ್ರತ್ಯೇಕ ಕಾಠಿನ್ಯವಿಲ್ಲ. ಬಿಳುಪು—ಕೆಂಪು—ಕಪ್ಪು ನೂಲುಗಳಲ್ಲಿ ಪ್ರತ್ಯೇಕವಾಗಿದ್ದಾಗ ಚಿತ್ರ ರೂಪವಿಲ್ಲದಿದ್ದರೂ ಅವು ಒಟ್ಟಾಗಿ ಸೇರಿ ನೇಯಲ್ಪಟ್ಟಾಗ ಚಿತ್ರರೂಪ ಕಾಣಿಸುತ್ತದೆ. ಇತ್ಯಾದಿ.

ಈ ಚಾರ್ವಾಕರು ಕೊಡುವ ದೃಷ್ಟಾನ್ತ—ದಾರ್ಷ್ಟಾಂತಿಕಗಳಿಗೆ ಪರಸ್ಪರ ವೈಷಮ್ಯವನ್ನು ಸಿದ್ಧಾಂತಿ ತೋರಿಸಿ ಅವರು ಹೇಳಿದ್ದನ್ನು ನಿರಾಕರಿಸುತ್ತಾರೆ. ಹೇಗೆಂದರೆ;— ಅಡಕೆ, ಎಲೆ, ಸುಣ್ಣಗಳಲ್ಲಿ ಅವು ಒಟ್ಟುಗೂಡಿ ಅವಯವಿಯಾದಾಗ ಯಾವ ರಾಗ ಕಂಡು ಬರುತ್ತದೆಯೋ ಆ ರಾಗ ಆ ಅವಯವಿಯ ಅವಯವಗಳಾದ ಅಡಕೆ,ಎಲೆ, ಸುಣ್ಣಗಳಲ್ಲಿ ಪ್ರತ್ಯೇಕವಾಗಿಯೂ ಇದ್ದೇ ಇದೆ. ಕಾರಣಕ್ರಮದಿಂದ ಕಾರ್ಯದ ಗುಣಾರಂಭವೆಂದು ವೈಶೇಷಿಕರು ಉಪಪಾದಿಸಿದ್ದಾರೆ. ಇದೇ ನ್ಯಾಯ ಕರಕದಲ್ಲಿಯೂ ಉಪಪನ್ನವಾಗುತ್ತೆ. ಚಿತ್ರಪಟದಲ್ಲಿಯ ಚಿತ್ರರೂಪ ತಂತುಗಳಲ್ಲಿ ಪ್ರತ್ಯೇಕವಾಗಿ ಕಾಣಿಸದಿದ್ದರೂ ಆ ಜಾತೀಯವಾದ ರೂಪ ಸಾಮಾನ್ಯವು ಪ್ರತ್ಯೇಕವಾಗಿರುವ ಅವಯವ ಭೂತವಾದ ಶುಕ್ಲಾದಿ ತಂತುಗಳಲ್ಲಿಯೂ ಇದ್ದೇಇದೆ. ಹಾಗೆಯೇ ಇಲ್ಲಿಯೂ, ದೇಹದಲ್ಲಿರುವ ಜ್ಞಾನ ವಿಶೇಷ ಅದರ ಅವಯವವಾದ ಕರಚರಣಾದಿಗಳಲ್ಲಿ ಇಲ್ಲದಿದ್ದಾಗ್ಯೂ, ಆ ಜಾತೀಯವಾದ ಜ್ಞಾನಾಂತರ ಅವುಗಳಲ್ಲಿ ಇದೆಯಾದ್ದರಿಂದ, ಒಂದು ಅವಯವಿಯಾದ ದೇಹದಲ್ಲಿ ಅವಯವ ಪ್ರಯುಕ್ತ ಅನೇಕ ಚೇತನೋಪಲಂಭ ಪ್ರಸಂಗಕ್ಕೆ ಆಸ್ಪದವಿದ್ದೇಇದೆ. ಚಾರ್ವಾಕರೆನ್ನುವ ಮೇಲ್ಕಂಡ ಯುಕ್ತಿವಿರೋಧ ಮಾತ್ರವಲ್ಲದೆ ಅವರ ದೇಹಾತ್ಮವಾದದಲ್ಲಿ ಪ್ರತ್ಯಕ್ಷ ವಿರೋಧವೂ ಇದೆ. ಹೇಗೆಂದರೆ, ನನ್ನ ಮನೆ, ನನ್ನ ದೇಹ, ಇದು ನನ್ನ ಕೆಲಸ—ಇತ್ಯಾದಿ ಪ್ರತ್ಯಕ್ಷ ವ್ಯತಿರೇಕ ದೃಷ್ಟಾನ್ತಗಳಿಂದ ದೇಹಕ್ಕಿಂತ ಆತ್ಮ ಅತಿರಿಕ್ತವೆಂದೇ ಕಂಡು ಬರುತ್ತೆ. ಇದರಿಂದ ದೇಹಾತ್ಮರಿಗೆ ಭೇದ ಸ್ಪಷ್ಟ. ನಾನು

ಸ್ಥೂಲ, ನಾನು ಕೃಶ "ಸ್ಥೂಲೋಽಹಂ, ಕೃಶೋಽಹಂ" —ಇತ್ಯಾದಿ ವ್ಯವಹಾರಗಳಲ್ಲಿ ಸಾಮಾನಾಧಿಕರಣ್ಯದಿಂದ ಕಂಡುಬರುವ ದೇಹಾತ್ಮೈಕ್ಯ ಬುದ್ಧಿಯಾದರೋ—ಅನೇಕ ಶ್ರುತಿ ಸ್ಮೃತಿ ವಿರುದ್ಧವಾದ್ದರಿಂದ, ಭ್ರಾಂತಿಯೆನ್ನಬೇಕು. ಈ ಭ್ರಾಂತಿ ದೇಹ-ಆತ್ಮರ ಸಂಸರ್ಗ ವಿಶೇಷ ರೂಪದೋಷ ಪ್ರಯುಕ್ತವಾದುದು. ತಪ್ತವಾದ ಅಯಃಪಿಂಡವೂ ಅದರಲ್ಲಿ ಸೇರಿರುವ ಅಗ್ನಿಯೂ ಪರಸ್ಪರ ಭಿನ್ನವಾದಾಗ್ಯೂ ಅವೆರಡರ ಸಂಸರ್ಗ ವಿಶೇಷದಿಂದ ಅಯಃಪಿಂಡವು ಸುಡುತ್ತದೆ—ಎಂಬ ಭ್ರಮುವುಂಟಾಗುತ್ತೆ.

"ದೇಹಏವ ಆತ್ಮಾ ಅಹಂಬುದ್ಧಿಗೋಚರತ್ವಾತ್.

ಸಂಪ್ರತಿಪನ್ನಾಹಂ ಬುದ್ಧಿ ಗೋಚರಾತ್ಮವತ್"—ಎಂದು ದೇಹಾತ್ಮೈಕ್ಯ ಸಾಧಿಸಲು ಚಾರ್ವಾಕರು ಹೇಳುವ ಅನುಮಾನವೂ ಬಾಧಿತ. ಏಕರೂಪ ಬುದ್ಧಿಗೋಚರತಾ ಮಾತ್ರದಿಂದಲೇ ದೇಹಾತ್ಮರಿಗೆ ಐಕ್ಯ ಸಂಭವಿಸುವುದಿಲ್ಲ. ಶುಕ್ತಿಯಲ್ಲಿ ರಜತ ಬುದ್ಧಿಯುಂಟಾದ ಮಾತ್ರಕ್ಕೇ ಶುಕ್ತಿರಜತವಾದೀತೆ? ದೇಹಾತ್ಮೈಕ್ಯಾನುಮಾನಕ್ಷೇಪಕ್ಕೆ ಮೂರು ಹೇತುಗಳನ್ನು ಹೇಳುತ್ತಾರೆ.

ಒಂದು—"ದರ್ಶನಸ್ಪರ್ಶನಾಭ್ಯಾಂ ಏಕಾರ್ಥಗ್ರಹಣಾತ್"—ಇತ್ಯಾದಿ ಸೂತ್ರೋಕ್ತವಾದ ಬಲವದನುಮಾನ—"ಯೋಽಹಂ ಘಟಮದ್ರಾಕ್ಷಂ ಸೋಽಹಮಿದಾನೀಂ ಸ್ಪೃಶಾಮಿ ಇತಿ ಪ್ರತ್ಯಭಿಜ್ಞಯಾ, ಯಃ ಪೂರ್ವಮದ್ರಾಕ್ಷೀತ್, ಯಶ್ಚೇದಾನೀಂ ಸ್ಪೃಶತಿ, ಸಏಕ—ಏವ, ಅಬಾಧಿತೈಕ್ಯ ಪ್ರತೀತಿವಿಷಯತ್ವಾತ್ ಯೋದೇವರಥಃ ಚೈತ್ರೇ ಮಯಾ ನಿರಮೀಯತ ಸ ಏವಾಯಂ ಭಾದ್ರಪದೇ ದೃಶ್ಯತೇ—ಇತ್ಯಾದ್ಯೈಕ್ಯ ಪ್ರತೀತಿ ವಿಷಯ ರಥಾದಿವತ್— ಇತ್ಯಾದಿ ರೂಪವಾದುದು ಈ ಅನುಮಾನ ಶರೀರ.

ಎರಡನೆಯದು—ಜೀವಾತ್ಮನು ಅನೇಕವಾದ ಪೂರ್ವೋತ್ತರ ಶರೀರಗಳಲ್ಲಿ ಅನುವರ್ತಿಸದಿದ್ದಲ್ಲಿ, ಜಾತಮಾತ್ರನಾದ ಅವನಿಗೆ ಸ್ತನ್ಯಾಭಿಲಾಷೆಯುಂಟಾಗದು ಎಂದು "ವೀತರಾಗ ಜನ್ಮಾದರ್ಶನಾತ್"—ಎಂಬ ಸೂತ್ರಾಭಿಪ್ರೇತತರ್ಕದಿಂದ ವ್ಯಕ್ತವಾಗುತ್ತೆ.

ಮತ್ತೊಂದು ಹೇತು—"ನಿತ್ಯೋನಿತ್ಯಾನಾಂ..."—ಇತ್ಯಾದಿ ಶಾಸ್ತ್ರ.

ಹೀಗೆ ಈ ಅಧಿಕರಣದಲ್ಲಿ ದೇಹಾತ್ಮವಾದಿಗಳೂ, ಅವರ ಜಾತಿಗೆ ಸೇರಿದ ಸರ್ವ ಪಕ್ಷಾಂತರಗಳೂ—ಪ್ರತ್ಯಕ್ಷ, ಅನುಮಾನ, ಸತ್ತರ್ಕಸಹಿತವಾದ ಸ್ಮೃತೀತಿಹಾಸ ಪುರಾಣೋಪಬ್ರಂಹಿತಗಳಾದ ಶ್ರುತಿಗಳಿಂದ ನಿರ್ಧೂತವಾದುವು.

## 4. ಜ್ಞಾಧಿಕರಣ

### ಸೂತ್ರ—**ಜ್ಞೋಽತಏವ**

**ಸಂಗತಿ**

ವಿಯದಾದಿಗಳಂತೆ, ಜೀವನಿಗೆ ಉತ್ಪತ್ತಿಯಿಲ್ಲವೆನ್ನಲಾಯಿತು. ಆ ಪ್ರಸಂಗದಿಂದ ಜೀವನ ಸ್ವರೂಪ ನಿರೂಪಿಸಲ್ಪಡುತ್ತೆಯಾದ್ದರಿಂದ ಪ್ರಾಸಂಗಿಕ ಸಂಗತಿ.

**ಸೂತ್ರಾರ್ಥ**

[ಅತಃ] = ಈ ವೇದದಿಂದ [ಜ್ಞಃ, ಏವ] = (ಜೀವ) ಜ್ಞಾನಾಶ್ರಯನೇ ಆಗಿದ್ದಾನೆ.

**ವಿವರಣೆ**

ಜೀವ ಜ್ಞಾನ ಸ್ವರೂಪನೋ, ಅಥವಾ ಜಡಸ್ವರೂಪನಾಗಿದ್ದು ಕಾಲ ವಿಶೇಷ ಗಳಲ್ಲಿಯೇ ಜ್ಞಾನವುಳ್ಳವನೋ? ಅಥವಾ ಯಾವಾಗಲೂ ಜ್ಞಾನವುಳ್ಳವನೋ?—ಎಂದು ಸಂಶಯು. "ವಿಜ್ಞಾನಂ ಯಜ್ಞಂ ತನುತೇ"—(ಜ್ಞಾನ ಸ್ವರೂಪನಾದ ಆತ್ಮಾ ಯಜ್ಞವನ್ನು ಮಾಡುತ್ತಾನೆ.)—ಎಂದೂ, "ವಿಜ್ಞಾನೇ ತಿಷ್ಠನ್" (ಜ್ಞಾನ ಸ್ವರೂಪ ನಾದ ಜೀವಾತ್ಮನಲ್ಲಿ ಪರಮಾತ್ಮಾ ಇದ್ದಾನೆ)—ಎಂದಿದೇ ಮುಂತಾದ ಅನೇಕ ವಾಕ್ಯಗಳು ಇರುವುದರಿಂದ ಜೀವನು ಜ್ಞಾನ ಸ್ವರೂಪನಾಗಿರಬಹುದು. ನಿದ್ರೆಯಲ್ಲಿಯೂ ಮೂರ್ಛೆ ಯಲ್ಲಿಯೂ, ಜ್ಞಾನವಿಲ್ಲದುದರಿಂದ, "ನ ಪ್ರೇತ್ಯಸಂಜ್ಞಾಸ್ತಿ"—ಎಂದು ಮುಕ್ತಿಯಲ್ಲಿ ಜ್ಞಾನವಿಲ್ಲವೆಂದು ಹೇಳುವುದರಿಂದಲೂ, ಜೀವನಾದವನು ಜಡಸ್ವರೂಪನಾಗಿ ಕೆಲವು ಕಾಲವಿಶೇಷಗಳಲ್ಲಿ ಜ್ಞಾನವುಳ್ಳವನಾಗುತ್ತಾನೆ ಎಂದೂ ಹೇಳಬಹುದು, ಯಾವಾಗಲೂ ಜ್ಞಾನಾಶ್ರಯನೆಂಬುದು ಕೂಡದು.—ಎಂದು ಪೂರ್ವಪಕ್ಷ.

"ಅಥ ಯೋ ವೇದೇದಂ ಜಿಘ್ರಾಣಿತಿ ಸ ಆತ್ಮಾ"—ಯಾವನು ವಾಸನೆ ಹಿಡಿಯು ತ್ತೇನೆನ್ನುವನೋ ಅವನೇ ಜೀವನೆಂದು ಸಂಸಾರದಶೆಯಲ್ಲಿಯೂ, "ಸರ್ವಂಹ ಪಶ್ಯಃ ಪಶ್ಯತಿ"—ಎಂದು ಸರ್ವವಿಷಯು ಜ್ಞಾನವುಳ್ಳವನೆಂದು ಮುಕ್ತಿದಶೆಯಲ್ಲಿಯೂ ಜೀವ ನನ್ನು ಜ್ಞಾನವುಳ್ಳವನನ್ನಾಗಿ ಹೇಳುವುದರಿಂದ, ಯಾವಾಗಲೂ ಜ್ಞಾನವುಳ್ಳವನೇ ಆಗಿದ್ದಾನೆ. ನಿದ್ರೆಯಲ್ಲಿಯೂ ಮೂರ್ಛೆಯಲ್ಲಿಯೂ ಜ್ಞಾನವಿದ್ದಾಗ್ಯೂ, ಆಗ ಸಂಕೋಚ ವನ್ನು ಹೊಂದುವುದರಿಂದ ಪ್ರಕಾಶಿಸುವುದಿಲ್ಲ. ಅಷ್ಟು ಮಾತ್ರದಿಂದ ಜಡ ಸ್ವರೂಪನಾಗಿ ಕೆಲವು ಸಮಯಗಳಲ್ಲಿ ಜ್ಞಾನವುಳ್ಳವನು, ಮಿಕ್ಕ ಕಾಲಗಳಲ್ಲಿ ಜ್ಞಾನವಿಲ್ಲದವನು—ಎನ್ನ ಕೂಡದು. ಜ್ಞಾನದಂತೆ ಆತ್ಮನೂ ಸ್ವಯಂಪ್ರಕಾಶನಾದ್ದರಿಂದಲೂ ಜ್ಞಾನ ಜೀವನಿಗೆ ಮುಖ್ಯ ಗುಣವಾದುದರಿಂದಲೂ, ಜೀವನು ಜ್ಞಾನಸ್ವರೂಪನೆನಿಸಿದ್ದಾನೆ. ಅದು ಗೌಣ. ಮುಕ್ತಿಯಲ್ಲಿ ಜ್ಞಾನವಿಲ್ಲವೆನ್ನುವುದಕ್ಕೆ ಸಂಸಾರ ಜ್ಞಾನವಿಲ್ಲವೆಂದರ್ಥ. ಆದ್ದರಿಂದ ಮೊದಲು ಹೇಳಿದ ಪಕ್ಷಗಳನ್ನು ಬಿಟ್ಟು ಯಾವಾಗಲೂ ಜ್ಞಾನವುಳ್ಳವನೆಂದೇ ಅಂಗೀ ಕರಿಸಬೇಕೆಂದು ಸಿದ್ಧಾಂತ.

ಸೂತ್ರ ೨—**ಉತ್ಕ್ರಾಂತಿಗತ್ಯಾಗತೀನಾಂ**

**ಸೂತ್ರಾರ್ಥ**

ಶರೀರವನ್ನು ಬಿಟ್ಟು ಹೊರ ಹೊರಡುವುದು, ಲೋಕಾಂತರಕ್ಕೆ ಹೋಗುವುದು, ಅಲ್ಲಿಂದ ಬರುವುದು. ಇವುಗಳನ್ನು ಜೀವನಿಗೆ ವೇದ ಹೇಳುವುದರಿಂದ ಜೀವನು ವಿಭುವಲ್ಲ.

**ವಿವರಣೆ**

ಈ ಅಧಿಕರಣದಲ್ಲಿ ಜೀವ ವಿಭುವಲ್ಲವೆನ್ನುತ್ತಾರೆ:—"ಏಷ ಆತ್ಮಾನಿಷ್ಕ್ರಾಮತಿ' (ಈ ಜೀವಾತ್ಮ ಹೊರಕ್ಕೆ ಹೊರಡುತ್ತಾನೆ)—ಎಂದೂ,"ಅಸ್ಮಾಲ್ಲೋಕಾತ್ ಪ್ರಯನ್ತಿ" —ಇತ್ಯಾದಿಯಲ್ಲಿ (ಈ ಲೋಕದಿಂದ ಚಂದ್ರಲೋಕವೇ ಮುಂತಾದುದಕ್ಕೆ ಹೋಗು ತ್ತಾನೆಂದೂ)"ಅಸ್ಮಾಲ್ಲೋಕಾತ್ ಪುನರೇತಿ,"—(ಆ ಲೋಕದಿಂದ ಮತ್ತೆ ಇಲ್ಲಿಗೇ ಬರುತ್ತಾನೆ.) ಎಂದೂ ಹೇಳುವುದರಿಂದ ಜೀವನು ಅಣುಸ್ವರೂಪನೆಂದೇ ಒಪ್ಪಿ ಕೊಳ್ಳಬೇಕು.

ಸೂತ್ರ ೩—**ಸ್ವಾತ್ಮನಾ ಚೋತ್ತರಯೋಃ**

**ಸೂತ್ರಾರ್ಥ**

[ಉತ್ತರಯೋಃ] = ಅನಂತರದ ಗಮನಾಗಮನಗಳಿಗೆ [ಸ್ವಾತ್ಮನಾ,ಚ] = ತನ್ನ ಸ್ವರೂಪದಿಂದಲೇ (ಸಂಭವವನ್ನು ಹೇಳಬೇಕು)

**ವಿವರಣೆ**

ಮೇಲೆ ಹೇಳಿದ ಮೂರರಲ್ಲಿ ಮೊದಲನೆಯದಾದ ಉತ್ಕ್ರಾನ್ತಿಯೆಂಬುದು ಶರೀರನಾಶವೆಂದು ಒಪ್ಪಿಕೊಂಡು ಅದಕ್ಕೆ ಒಂದು ವಿಧವಾದ ಸಮಾಧಾನ ಹೇಳಿದಾಗ್ಯೂ, ಅನಂತರ ಹೇಳಿದ ಹೋಗುಬರುವುಗಳು ಆತ್ಮಾವಿನಿಂದಲೇ ನಡೆಯಬೇಕಾದ್ದರಿಂದ ಆತ್ಮಾ ವಿಭುವಾದಲ್ಲಿ ಅವು ಸುತರಾಂ ಕೂಡುವುದಿಲ್ಲ.

ಸೂತ್ರ ೪—**ನಾಣುರತಚ್ಛ್ರುತೇರಿತಿ ಚೇನ್ನೇತರಾಧಿಕಾರಾತ್**

**ಸೂತ್ರಾರ್ಥ**

[ಅತಚ್ಛ್ರುತೇಃ] = (ಜೀವನನ್ನು) ಅಣುಭಿನ್ನವಾದ 'ಮಹಾನ್'—ಎನ್ನುವುದರಿಂದ, [ಅಣುಃ] = ಅಣುಸ್ವರೂಪನಾಗಿ [ನ] = ಆಗಲಾರನು. [ಇತಿಚೇತ್] = ಎಂದಲ್ಲಿ [ಇತರಾಧಿಕಾರಾತ್] = ಇತರನಾದ ಪರಮಾತ್ಮಾಧಿಕಾರವಾದ್ದರಿಂದ [ನ] = ಹಾಗಲ್ಲ.

**ವಿವರಣೆ**

ಜೀವನನ್ನು ಹೇಳುವ ಪ್ರಕರಣದಲ್ಲಿ 'ವಿಭು'—ಎಂದು ಹೇಳಿರುವುದರಿಂದ ಅವನು ಅಣುವಾಗಲಾರನು. "ಮಹಾನ್ ಅಜ ಆತ್ಮಾ"—ಎಂದು ಜೀವನನ್ನು 'ಮಹಾನ್'—ಎಂದು ಹೇಳಿದೆಯಷ್ಟೆ!—ಎಂದಲ್ಲಿ, ಈ ವಾಕ್ಯಕ್ಕೆ ಮುಂಚೆಯೇ ಜೀವ ಪ್ರಕರಣ ಮುಗಿದು ಅನಂತರ ಆರಂಭವಾದ ಪರಮಾತ್ಮಾಧಿಕರಣದಲ್ಲಿ ಈ ವಾಕ್ಯವಿರುವುದರಿಂದ, ಈ ವಾಕ್ಯದಲ್ಲಿ ವಿಭುವೆಂದು ಪರಮಾತ್ಮನನ್ನೇ ಹೇಳಿದೆ. ಜೀವನನ್ನು ಹೇಳಿಲ್ಲ.

ಸೂತ್ರ ೫—**ಸ್ವಶಬ್ದೋನ್ಮಾನಾಭ್ಯಾಂ ಚ**

**ಸೂತ್ರಾರ್ಥ**

ಅಣುವೆಂಬ ಶಬ್ದದಿಂದಲೂ, ಅಣು ಸದೃಶವಾದ ವಸ್ತುವನ್ನು ಎತ್ತಿ ಅದರ ಪ್ರಮಾಣವನ್ನು ದೃಷ್ಟಾಂತವಾಗಿ ಜೀವನಿಗೆ ಹೇಳಿರುವುದರಿಂದಲೂ, (ಜೀವನು ಅಣು).

**ವಿವರಣೆ**

"ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ ಯಸ್ಮಿನ್ ಪ್ರಾಣಃ ಪಂಚದಾಸಂವಿವೇಶ" (ಈ ಜೀವಾತ್ಮಾ ಅಣು ಸ್ವರೂಪ) ಎಂದೂ, "ಆರಾಗ್ರಮಾತ್ರೋಹ್ಯವರೋಽಪಿ ದೃಷ್ಟಃ" (ಬತ್ತದ ತುದಿಯಲ್ಲಿರುವ ಮುಳ್ಳಿನ ತುದಿಯ ಅಳತೆಯುಳ್ಳವನು)—ಎಂದೂ ಸ್ಪಷ್ಟವಾಗಿ ಹೇಳಿರುವುದರಿಂದ ಜೀವನು ಅಣು ಸ್ವರೂಪ.

### ಸೂತ್ರ ೬—ಅವಿರೋಧಶ್ಚನ್ದನವತ್

**ಸೂತ್ರಾರ್ಥ**

[ಚನ್ದನವತ್] = ಗಂಧದಂತೆ [ಅವಿರೋಧಃ] = ವಿರೋಧವಿಲ್ಲ.

**ವಿವರಣೆ**

ಆತ್ಮಾ ಅಣುವಾದರೆ ಶರೀರದಲ್ಲಿ ಒಂದೆಡೆಯಲ್ಲಿರಬೇಕು. ಆಗ ಶರೀರದಲ್ಲಿ ಇತರ ಅವಯವಗಳಲ್ಲಿ ಆಗುವ ಸುಖ ದುಃಖಗಳನ್ನು ಹೇಗೆ ಅನುಭವಿಸುತ್ತಾನ?—ಎಂದಲ್ಲಿ ಗಂಧವನ್ನು ಒಂದೆಡೆಯಲ್ಲಿ ಹಚ್ಚಿಕೊಂಡಾಗ್ಲೂ ಅದು ಶರೀರದ ಆದ್ಯಂತ ಸಂತೋಷ ಜನಕವಾಗುವಂತೆ ಆತ್ಮಾ ಒಂದೆಡೆಯಲ್ಲಿದ್ದಾಗ್ಲೂ, ಶರೀರಾದ್ಯಂತದಲ್ಲುಳ್ಳ ಸುಖ ದುಃಖ ಗಳನ್ನು ಅನುಭವಿಸುತ್ತಾನೆಂದು ಕೆಲವರೆನ್ನುತ್ತಾರೆ

### ಸೂತ್ರ ೭—ಅವಸ್ಥಿತಿ ವೈಶೇಷ್ಯಾದಿತಿಚೇನ್ನಾಭ್ಯುಪಗಮಾದ್ಧೃದಿಹಿ

**ಸೂತ್ರಾರ್ಥ**

[ಅವಸ್ಥಿತಿ ವೈಶೇಷ್ಯಾತ್] = (ಚಂದನವು) ಶರೀರದಲ್ಲಿ ಒಂದು ಸ್ಥಳದಲ್ಲಿರುವು ದರಿಂದ ಅದು ಆಪಾದಮಸ್ತಕ ಸುಖಜನಕವಾಗಬಹುದು. ಆತ್ಮಾ ಹಾಗೆ ಒಂದು ಸ್ಥಳದಲ್ಲಿಲ್ಲದುದರಿಂದ, ಇವನು ಆಪಾದಮಸ್ತಕ ಸುಖದುಃಖಾನುಭವವನ್ನು ಮಾಡ ಕೂಡದು [ಇತಿ ಚೇತ್] = ಎಂದಲ್ಲಿ [ಹೃದಿ] = ("ಹೃದ್ಯನ್ತರ್ಜ್ಯೋತಿಃ") ಎಂದು ಜೀವನಿಗೂ ಹೃದಯದಲ್ಲಿ [ಅಭ್ಯುಪಗಮಾತ್] = (ಸ್ಥಿತಿ) ಒಪ್ಪಿಕೊಳ್ಳುವುದರಿಂದ [ನ] = ಆ ಅನುಪಪತ್ತಿಯಿಲ್ಲ

### ಸೂತ್ರ ೮—ಗುಣಾದ್ವಾಽಲೋಕವತ್

**ಸೂತ್ರಾರ್ಥ**

[ಆಲೋಕವತ್] = ಬೆಳಕಿನಂತೆ [ಗುಣಾತ್,ವಾ] = (ತನ್ನ) ಗುಣವಾದ ಜ್ಞಾನ ದಲ್ಲಿಯೇ (ಸುಖದುಃಖಗಳನ್ನು ಅನುಭವಿಸುತ್ತಾನೆ)

**ವಿವರಣೆ**

ಇದರಲ್ಲಿ ತಮ್ಮ ಮತವನ್ನು ಹೇಳುತ್ತಾರೆ—ದೀಪಾದಿಗಳ ಬೆಳಕು, ದೀಪ ಒಂದೆಡೆಯಲ್ಲಿದ್ದರೂ, ತಾನು ಇತರ ಸ್ಥಳಗಳಲ್ಲಿಯೂ ಹರಡಿ ಅಲ್ಲಲ್ಲಿರುವ ಪದಾರ್ಥ ಗಳನ್ನು ಪ್ರಕಾಶಪಡಿಸುವಂತೆ. ಆತ್ಮಾ ಶರೀರದಲ್ಲಿ ಒಂದೇ ಸ್ಥಳದಲ್ಲಿದ್ದರೂ ಅದರ ಜ್ಞಾನ ಮಿಕ್ಕ ಅವಯವಗಳಲ್ಲಿ ವ್ಯಾಪಿಸಿ ಸುಖ ದುಃಖಗಳನ್ನು ಅನುಭವಿಸುವಂತೆ ಮಾಡುತ್ತದೆ

### ಸೂತ್ರ ೯—ವ್ಯತಿರೇಕೋ ಗಂಧವತ್ ತಥಾಹಿ ದರ್ಶಯತಿ

**ಸೂತ್ರಾರ್ಥ**

[ಗಂಧವತ್] = ಗಂಧದಂತೆ [ವ್ಯತಿರೇಕಃ] = ಭೇದ (ಅಂಗೀಕರಿಸಬೇಕು) [ತಥಾಹಿ] = ಹಾಗೆಯೇ [ದರ್ಶಯತಿ] = ವೇದ ಹೇಳುತ್ತದೆ.

**ವಿವರಣೆ**

"ವಿಜ್ಞಾನಂ ಯಜ್ಞಂ ತನುತೇ",—ಇತ್ಯಾದಿ ವಾಕ್ಯಗಳಲ್ಲಿ ಆತ್ಮಾವನ್ನು ಜ್ಞಾನ ಸ್ವರೂಪವಾಗಿ ಹೇಳುವುದರಿಂದ, ಹಾಗೆಯೇ ಅಂಗೀಕರಿಸಬೇಕಾದುದರಿಂದ. ಆತ್ಮಾ ಒಂದೆಡೆಯಲ್ಲಿ ಇರುವುದೆಂದೂ, ಅದರ ಗುಣವಾಗಿ, ಅದಕ್ಕಿಂತ ಬೇರೆಯಾದ ಜ್ಞಾನ ಎಲ್ಲೆಲ್ಲಿಯೂ ವ್ಯಾಪಿಸುವುದೆಂದೂ ಹೇಳಲಾಗದೆಂದಲ್ಲಿ, ಗಂಧವುವಾಸನೆಯುಳ್ಳದ್ದು ಎಂದರೆ, ಗಂಧಕ್ಕಿಂತ ವಾಸನೆ ಬೇರೆಯೆಂದು ತೋರುವಂತೆ, 'ನಾನು ಅರಿಯುತ್ತೇನೆ,' —ಎಂಬಲ್ಲಿಯೂ 'ನಾನು'—ಎಂದು, ಆತ್ಮನೂ, ಅವನಿಗಿಂತ ಭಿನ್ನವಾದ ಜ್ಞಾನವೆಂಬು ದೊಂದೂ ತೋರುವುದರಿಂದಲೂ, "ಜಾನಾತಿ".—ಎಂದು ವೇದದಲ್ಲಿಯೂ, ಜೀವನಿ ಗಿಂತ ಜ್ಞಾನವನ್ನು ಬೇರೆಯೆಂದು ಹೇಳುವುದರಿಂದಲೂ. ಆತ್ಮನಿಗಿಂತ ಜ್ಞಾನ ಬೇರೆ.

ಸೂತ್ರ ೧೦—**ಪೃಥಗುಪದೇಶಾತ್**

**ಸೂತ್ರಾರ್ಥ**

("ನ ವಿಜ್ಞಾತುರ್ವಿಜ್ಞಾತೇಃ ವಿಪರಿಲೋಪೋವಿದ್ಯತೇ" = ಅಂದರೆ, ಜ್ಞಾತೃ ವಾದ ಆತ್ಮನ ಜ್ಞಾನಕ್ಕೆ ನಾಶವಿಲ್ಲವೆಂದು ಆತ್ಮನನ್ನೂ ಅದರ ಜ್ಞಾನವನ್ನೂ) ಪ್ರತ್ಯೇಕಿಸಿ ಹೇಳುವುದರಿಂದ (ಆತ್ಮನಿಗಿಂತ ಜ್ಞಾನ ಬೇರೆ)

ಸೂತ್ರ ೧೧—**ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್**

**ಸೂತ್ರಾರ್ಥ**

[ತದ್ಗುಣ ಸಾರತ್ವಾತ್] = ಜ್ಞಾನವೆಂಬ ಗುಣವನ್ನು ಸಾರವಾಗಿ ಉಳ್ಳದ್ದರಿಂದ [ಪ್ರಾಜ್ಞವತ್] = ಸರ್ವಜ್ಞನಾದ ಈಶ್ವರ ಜ್ಞಾನಸ್ವರೂಪನೆಂದು ಹೇಳಲ್ಪಡುವಂತೆ [ತದ್ವ್ಯಪದೇಶಃ] = ಜ್ಞಾನಸ್ವರೂಪನೆಂದು ಹೇಳಲ್ಪಡುತ್ತಾನೆ.

**ವಿವರಣೆ**

ಆದರೆ, ಆತ್ಮವನ್ನು ಜ್ಞಾನವೆಂದು ಹೇಳುವುದೇಕೆ?—ಎಂದಲ್ಲಿ, ಜ್ಞಾನವೇ ಇವನಿಗೆ ಪ್ರಧಾನವಾದ ಗುಣ. ಆದರಿಂದ ಇವನನ್ನು ಜ್ಞಾನವೆನ್ನುವುದು. ಇದಕ್ಕೆ ದೃಷ್ಟಾಂತ:—ಸರ್ವಜ್ಞನಾದ ಪರಮಾತ್ಮನನ್ನು "ಸತ್ಯಂ ಜ್ಞಾನಮನನ್ತಂ ಬ್ರಹ್ಮ"— ಎಂದು ಜ್ಞಾನ ಸ್ವರೂಪನನ್ನಾಗಿ ಹೇಳಿರುವಂತೆ, ಇಲ್ಲಿಯೂ. ಕಂಡುಕೊಳ್ಳುವುದು. ಲೋಕದಲ್ಲಿಯೂ. ಒಬ್ಬನು ವೇದಾಧ್ಯಯನವನ್ನು ಚೆನ್ನಾಗಿಮಾಡಿದ್ದರೆ, ಅವನನ್ನು ವೇದಮೂರ್ತಿ ಎನ್ನುತ್ತಾರೆ.

ಸೂತ್ರ ೧೨—**ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್**

**ಸೂತ್ರಾರ್ಥ**

[ಯಾವದಾತ್ಮಭಾವಿತ್ವಾತ್, ಚ] =ಜ್ಞಾನ ಆತ್ಮ ಇರುವ ಪರ್ಯಂತವೂ ಇರುವ ಅದರ ಧರ್ಮವಾದ್ದರಿಂದಲೂ, [ತದ್ದರ್ಶನಾತ್] = ಹಾಗೆಯೇ ಲೋಕದಲ್ಲಿ ಕಾಣುವು ದರಿಂದಲೂ, [ನ ದೋಷಃ] = ಜ್ಞಾನವೆಂಬ ಶಬ್ದದಿಂದ ಆತ್ಮವನ್ನು ಹೇಳುವುದರಲ್ಲಿ ದೋಷವಿಲ್ಲ.

**ವಿವರಣೆ**

"ಗೋ"—ಎಂಬ ಪದಕ್ಕೆ ಹಸುವಿನ ಆಕಾರವೆಂದು ಅರ್ಥವಾಗಿದ್ದರೂ, ಆ ಆಕಾರ ಹಸು ಇರುವವರಿಗೂ ಅದರಲ್ಲಿ ಇರುವುದರಿಂದ ಹಸುವನ್ನೂ "ಗೋ"—ಎಂದು ಹೇಳುತ್ತಾರೆ. ಅದರಂತೆಯೇ, ಜ್ಞಾನ ಆತ್ಮವನ್ನು ಯಾವಾಗಲೂ ಆಶ್ರಯಿಸಿರುವುದರಿಂದ ಅವನನ್ನು ಜ್ಞಾನವೆನ್ನಬಹುದು. ಇದರಲ್ಲಿ ಬಾಧಕವಿಲ್ಲ.

ಸೂತ್ರ ೧೩—**ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿಯೋಗಾತ್**

**ಸೂತ್ರಾರ್ಥ**

[ಸತಃ] = ಇರುವ [ಅಸ್ಯ] = ಈ ಜ್ಞಾನಕ್ಕೆ [ಪುಂಸ್ತ್ವಾದಿವತ್] = ಪುಂಸ್ತ್ವ ವೆಂಬ ಧಾತುವಿನಂತೆ [ಅಭಿವ್ಯಕ್ತಿಯೋಗಾತ್] = ಅಭಿವ್ಯಕ್ತಿ ಸಂಭವಿಸುವುದರಿಂದ, (ಜ್ಞಾನ ಯಾವಧಾತ್ಮಭಾವಿ)

**ವಿವರಣೆ**

ನಿದ್ರೆ, ಮೂರ್ಛೆ, ಮುಂತಾದ ಅವಸ್ಥೆಗಳಲ್ಲಿ ಜ್ಞಾನ ಕಾಣದುದರಿಂದ ಆತ್ಮನಿರುವ ಪರ್ಯಂತ ಜ್ಞಾನವಿರುವುದೆಂದು ಹೇಗೆ ಹೇಳುವದು?—ಎಂದಲ್ಲಿ, ಜ್ಞಾನ ಆಗಲೂ ಉಂಟು. ಆದರೆ, ಆಗ ಸಂಕೋಚ ಹೊಂದಿ ಪ್ರಕಾಶಿಸದಂತೆ ಇರುತ್ತೆ. ನಿದ್ರೆಯಿಂದೆಚ್ಚರಗೊಂಡು ಎದ್ದಾಗ, ಪ್ರಕಾಶಿಸುತ್ತದೆ. ಇದಕ್ಕೆ ದೃಷ್ಟಾಂತ— ಶರೀರದಲ್ಲಿ ರೇತಸ್ಸೆಂಬ ಒಂದು ಧಾತುವುಂಟು. ಅದೇ ಪುಂಸ್ತ್ವವೆಂಬುದು. ಆ ಧಾತು ಇಲ್ಲದಿದ್ದಲ್ಲಿ ಸಪ್ತಧಾತುಮಯವಾದ ಶರೀರವೇ ಆಗದು. ಆದ್ದರಿಂದ, ಶರೀರದಲ್ಲಿ ಬಾಲ್ಯ ಮೊದಲ್ಗೊಂಡು ಅದು ಇದೆಯೆಂದು ಅಂಗೀಕರಿಸಬೇಕು. ಇದ್ದಾಗ್ಯೂ, ಬಾಲ್ಯದಲ್ಲಿ ಪ್ರಕಾಶಿಸದು. ಯೌವನದಲ್ಲಿ ಪ್ರಕಾಶಿಸುವುದು. ಅದರಂತೆಯೇ ಇಲ್ಲಿಯೂ ಕಂಡುಕೊಳ್ಳುವುದು.

ಸೂತ್ರ ೧೪—**ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಂಗೋಽನ್ಯತರ ನಿಯಮೋವಾನ್ಯಥಾ**

**ಸೂತ್ರಾರ್ಥ**

[ಅನ್ಯಥಾ] = ಆತ್ಮಾ ಜ್ಞಾನ ಸ್ವರೂಪನೆಂದಾಗ್ಯೂ, ವಿಭುವೆಂದಾಗೂ [ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಂಗಃ] = ನಿತ್ಯವಾಗಿ ಜ್ಞಾನ ಪ್ರಕಾಶವೂ ಅಪ್ರಕಾಶವೂ ಬರಬೇಕಾಗುವುದು. [ಅನ್ಯತರ ನಿಯಮೋ ,ವಾ] = ಎರಡರಲ್ಲಿ ಒಂದೇ ಯಾವಾಗಲೂ ಉಂಟಾಗಬೇಕಾಗಿಯಾದರೂ ಬರುವುದು.

**ವಿವರಣೆ**

ಆತ್ಮಾ ಜ್ಞಾನಸ್ವರೂಪನೆಂದರೆ, ಆತ್ಮಾ ಒಂದು ಕಾಲದಲ್ಲಿ ಪ್ರಕಾಶಿಸಿ ಒಂದು ಕಾಲದಲ್ಲಿ ಪ್ರಕಾಶಿಸದೆಯೂ ಇರಕೂಡದು. ಏಕೆಂದರೆ. ಆತ್ಮಾ ಪ್ರಕಾಶಿಸುವುದಕ್ಕೆ ಜ್ಞಾನ ಕಾರಣ. ಆತ್ಮನೇ ಜ್ಞಾನಸ್ವರೂಪನಾಗಿ ಅದು ನಿತ್ಯವೂ ಆಗಿದೆ. ಆದ್ದರಿಂದ ಯಾವಾಗಲೂ, ಪ್ರಕಾಶಿಸಬೇಕು, ಹಾಗೆ ಪ್ರಕಾಶಿಸುವುದಿಲ್ಲ. ಜ್ಞಾನವಿರುವಾಗ ಪ್ರಕಾಶಿಸದಿರಲು ಬೇರೊಂದು ಸರಿಯಾದ ಕಾರಣ ಕೂಡದುದರಿಂದ, ಅದಕ್ಕೂ ಜ್ಞಾನವೇ

ಕಾರಣವೆನ್ನಬೇಕು. ಆದ್ದರಿಂದ ನಿತ್ಯವಾಗಿ ಪ್ರಕಾಶಿಸದೆಯೂ ಇರಬೇಕು. ಹೀಗೆ ಪ್ರಕಾಶಿಸುವುದಕ್ಕೂ ಪ್ರಕಾಶಿಸದೆ ಇರುವುದಕ್ಕೂ ಒಂದೇ ಕಾರಣವಾಗುವುದು ಕೂಡದುದರಿಂದ, ಇವೆರಡರಲ್ಲಿ ಯಾವುದೋ ಒಂದೇ ಒಂದು ನಿತ್ಯವಾಗಿರಬೇಕು. ಮತ್ತೊಂದು ಯಾವಾಗಲೂ ಉಂಟಾಗಕೂಡದು, ಹೀಗೆಯೇ ಆತ್ಮಾ ವಿಭುವಾದರೆ, ಸಮಸ್ತ ಆತ್ಮಗಳೊಡನೆಯೂ ಮನಸ್ಸು ಸರ್ವದಾ ಸೇರಿರುವುದರಿಂದ, ಎಲ್ಲರಿಗೂ ಯಾವಾಗಲೂ ಜ್ಞಾನವುಂಟಾಗಬೇಕಾಗಿಬರುವುದು. ಆದ್ದರಿಂದ ಆತ್ಮಾ ಜ್ಞಾನವೂ ಅಲ್ಲ, ವಿಭುವೂ ಅಲ್ಲ-

## 5. ಕರ್ತ್ರಧಿಕರಣ

### ಸೂತ್ರ—ಕರ್ತಾ ಶಾಸ್ತ್ರಾರ್ಥವತ್ತ್ವಾತ್

**ಸಂಗತಿ**

ಜೀವಾತ್ಮನು ಜ್ಞಾತೃ ಮತ್ತು ಅಣುವಿನ ಪರಿಮಾಣವುಳ್ಳವನು—ಎನ್ನಲಾಯಿತು. ಈಗ ಅವನೇ ಕರ್ತೃವೇ? ಅಥವಾ ತಾನು ಕರ್ತೃವಾಗಿಲ್ಲದೆಯೋ ಅಚೇತನವಾದ ಸತ್ತ್ವಾದಿ ಗುಣಗಳ ಕರ್ತೃತ್ವವನ್ನು ತನ್ನಲ್ಲಿ ಆರೋಪಿಸಿಕೊಂಡಿದ್ದಾನೆಯೋ?—ಎಂದು ಚಿಂತಿಸಲ್ಪಡುತ್ತೆ. [ ಈ ಪ್ರಕರಣದಲ್ಲಿ "ಜ್ಞಾನೈಕಗುಣಸಾರಸ್ಯ ನಿರ್ವಿಕಾರಸ್ಯ ಚಾತ್ಮನಃ । ಅಪೋದಿತೇ ಚ , ಕರ್ತೃತ್ವೇಽಭವೇತ್ಕರ್ತೃ ನಯೋಽಯಂ ।।"—ಎಂಬುದು ನಯ ಸಂಗತಿ ಮಾಲೆಯಲ್ಲಿ ಶ್ಲೋಕ]

**ಸೂತ್ರಾರ್ಥ**

[ಶಾಸ್ತ್ರಾರ್ಥವತ್ತ್ವಾತ್] = ಶಾಸ್ತ್ರ ಪ್ರಯೋಜನವತ್ತ್ವಾದ್ದರಿಂದ, [ಕರ್ತಾ] = (ಆತ್ಮಾ) ಕರ್ತೃವಾಗುತ್ತಾನೆ.

**ವಿವರಣೆ**

ಈ ಅಧಿಕರಣದಲ್ಲಿ ಆತ್ಮಾವಿಗೆ ಕರ್ತೃತ್ವವುಂಟೆಂದು ಸಾಧಿಸುತ್ತಾರೆ;—"ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿಮನ್ಯತೇ"—ಅಂದರೆ ಆತ್ಮಾ ಅಹಂಕಾರದಿಂದ ಮೂಢನಾಗಿ (ಯಥಾರ್ಥಜ್ಞಾನ ಶೂನ್ಯನಾಗಿ) ನಾನು ಕರ್ತಾ ಎಂದು ಭಾವಿಸುತ್ತಾನೆ. "ನಾನ್ಯಂ ಗುಣೇಭ್ಯಃ ಕರ್ತಾರಂ..."—ಅಂದರೆ, ಸತ್ತ್ವ—ರಜಸ್—ತಮೋಗುಣಗಳಿಗಿಂತ ಬೇರೆ ಕರ್ತಾ ಇಲ್ಲ—ಎಂದು ಹೇಳಿರುವುದರಿಂದ, ಪ್ರಕೃತಿಯೇ ಕರ್ತ್ರೀ—ಆತ್ಮಾ ಕರ್ತೃವಲ್ಲ ಎಂದು ಪೂರ್ವಪಕ್ಷ.

ಸ್ವರ್ಗಾದಿ ಲೋಕಗಳನ್ನು ಹೊಂದುವುದಕ್ಕಾಗಿ, ಯಜ್ಞಯಾಗಾದಿಗಳನ್ನು ಮಾಡು—ಎಂದು ಶಾಸ್ತ್ರ ವಿಧಿಸುತ್ತೆ. ಹೇಳಿದ್ದನ್ನು ಅರಿತುಕೊಂಡು ಮಾಡಬಲ್ಲ ಪುರುಷನನ್ನು ಉದ್ದೇಶಿಸಿಯೇ ಒಂದು ಅರ್ಥವನ್ನು ಶಾಸ್ತ್ರ ವಿಧಿಸುತ್ತೆ. ಪ್ರಕೃತಿಗೆ ಜ್ಞಾನವಿಲ್ಲದ್ದರಿಂದ ಅದನ್ನು ಉದ್ದೇಶಿಸಿ ವಿಧಿಸಕೂಡದು. ಆತ್ಮಾವಿಗೆ ಕರ್ತೃತ್ವವಿಲ್ಲವೆಂದಲ್ಲಿ ಇವನನ್ನು ಉದ್ದೇಶಿಸಿ ವಿಧಿಸಿ ಉಪಯೋಗವಿಲ್ಲ. ಆಗ್ಗೆ ಶಾಸ್ತ್ರ ನಿರರ್ಥಕವಾಗಿಬಿಡುವುದು. ಹಾಗೆ ಆಗದಿರುವುದಕ್ಕಾಗಿ, ಜೀವಾತ್ಮನು ಕರ್ತೃವೆಂದು ಅಂಗೀಕರಿಸಬೇಕು—ಎಂದು ಸಿದ್ಧಾಂತ-

ಸೂತ್ರ ೨—**ಉಪಾದಾನಾದ್ವಿಹಾರೋಪದೇಶಾ ಚ್ಚ**

**ಸೂತ್ರಾರ್ಥ**

[ಉಪಾದಾನಾತ್] = "ಏವ ಮೇವೈಷ ಏತಾನ್ ಪ್ರಾಣಾನ್ ಗೃಹೀತ್ವಾ..." ;— ಅಂದರೆ, "ಈ ಆತ್ಮನು ಈ ಪ್ರಾಣಗಳನ್ನು ತೆಗೆದುಕೊಂಡು"—ಎಂದು ಆತ್ಮನು ಪ್ರಾಣಗಳನ್ನು ಹಿಡಿದು ಕೊಳ್ಳುವುದನ್ನು ಹೇಳುವುದರಿಂದಲೂ, [ವಿಹಾರೋಪದೇಶಾತ್,ಚ] = "ಯಥಾಕಾಮಂ ಪರಿವರ್ತತೇ",—ಅಂದರೆ, ಇಷ್ಟಬಂದಂತೆ ವಿಹರಿಸುತ್ತಾನೆ— ಎಂದು ವಿಹರಣವನ್ನು ಹೇಳಿರುವುದರಿಂದಲೂ, ಈ ಎರಡು ಕರ್ಮಗಳನ್ನೂ ಆತ್ಮನು ಮಾಡುತ್ತಾನೆಂದು ಹೇಳುವುದರಿಂದ. ಆತ್ಮಾ ಕರ್ತೃವೆಂಬುದು ಸಿದ್ಧ.

ಸೂತ್ರ ೩—**ವ್ಯಪದೇಶಾ ಚ್ಚ ಕ್ರಿಯಾಯಾಂ ನ ಚೇನ್ನಿರ್ದೇಶ ವಿಪರ್ಯಯಃ**

**ಸೂತ್ರಾರ್ಥ**

[ಕ್ರಿಯಾಯಾಂ] = ಯಜ್ಞಾದಿ ಕಾರ್ಯಗಳಲ್ಲಿ [ವ್ಯಪದೇಶಾತ್, ಚ] = (ಆತ್ಮಾವನ್ನು ಕರ್ತೃವೆಂದು) ಹೇಳುವುದರಿಂದಲೂ, (ಆತ್ಮಾ ಕರ್ತೃವಾಗುತ್ತಾನೆ.) [ನ ಚೇತ್] = (ಹೀಗೆ) ಇಲ್ಲದೆ ಹೋದಲ್ಲಿ, [ನಿರ್ದೇಶವಿಪರ್ಯಯಃ] = ಬೇರೆ ವಿಧವಾಗಿ (ತೃತೀಯಾಂತವಾಗಿ) ಹೇಳಬೇಕಾಗಿ ಬರುವುದು. ಅಂದರೆ, "ವಿಜ್ಞಾನಂ ಯಜ್ಞಂತನುತೇ, ಕರ್ಮಾಣಿತನುತೇಪಿ ಚ"—ಎಂದು ಲೌಕಿಕ ವೈದಿಕ ಕ್ರಿಯೆಗಳಲ್ಲಿ ಆತ್ಮನಿಗೆ ಕರ್ತೃತ್ವವನ್ನು ಹೇಳಿದೆ. ಇಲ್ಲಿ ವಿಜ್ಞಾನ ಶಬ್ದದಿಂದ ಆತ್ಮವನ್ನು ಹೇಳಿಲ್ಲ, ಅಂತಃಕರಣ (ಬುದ್ಧಿ) ಯನ್ನು ಹೇಳಿದೆಯೆನ್ನುವಲ್ಲಿ, ಆಗ್ಗೆ, ಬುದ್ಧಿ ಕರಣವಾದ್ದರಿಂದ, "ವಿಜ್ಞಾನೇನ"—(ವಿಜ್ಞಾನದಿಂದ) —ಎಂದು ತೃತೀಯಾ ವಿಭಕ್ತಿ ನಿರ್ದಿಷ್ಟವಾಗಿರಬೇಕೆಂದಾದೀತು.

ಸೂತ್ರ ೪—**ಉಪಲಬ್ಧಿ ವದನಿಯಮಃ**

**ಸೂತ್ರಾರ್ಥ**

[ಉಪಲಬ್ಧಿ ವತ್] = ಜ್ಞಾನದಂತೆಯೇ, [ಅನಿಯಮಃ] = ಭೋಕ್ತೃತ್ವನಿಯಮ, ವಿಲ್ಲದೇ ಹೋಗಬೇಕಾಗಿ ಬರುವುದು.

**ವಿವರಣೆ**

ಪ್ರಕೃತಿಗೆ ಕರ್ತೃತ್ವವನ್ನೂ ಆತ್ಮನಿಗೆ ಭೋಕ್ತೃತ್ವವನ್ನೂ ಒಪ್ಪಿಕೊಂಡು ಅದರ ಸಾನ್ನಿಧ್ಯದಿಂದ ಆತ್ಮನಿಗೆ ಸುಖಾದ್ಯನುಭವವೆಂದು ಅಂಗೀಕರಿಸಿದಲ್ಲಿ, ಪ್ರಕೃತಿ ಸಕಲ ಆತ್ಮರಿಗೂ ಸಮಾನವಾದ್ದರಿಂದ ಅದರ ಸಾನ್ನಿಧ್ಯವುಳ್ಳ ಈ ಆತ್ಮನಿಗೆ ಹೇಗೋ ಹಾಗೆ ಮಿಕ್ಕ ಆತ್ಮರಿಗೂ ಸಮಾನವಾದ ಸುಖ ದುಃಖಗಳುಂಟಾಗಬೇಕಾಗಿ ಬರುವುದು. ಪ್ರಕೃತಿ ಸರ್ವಸಾಧಾರಣವಾದಾಗ್ಯೂ ಆಯಾ ಆತ್ಮರಿಗೇ ಅಸಾಧಾರಣವಾದ ಅನ್ತಃ ಕರಣವುಂಟು. ಅದರ ಸಾನ್ನಿಧ್ಯದಿಂದಲೇ ಸುಖದುಃಖಾನುಭವ ಹುಟ್ಟುವುದೆಂದಲ್ಲಿ ಆದರೂ, ಆತ್ಮ ಸರ್ವವ್ಯಾಪಿಯಾದ್ದರಿಂದ ಸಕಲ ಅಂತಃಕರಣಗಳೊಡನೆಯೂ ಸಾನ್ನಿಧ್ಯ

ಸಕಲ ಆತ್ಮರಿಗೂ ಉಂಟಾಗುವುದರಿಂದ ಸರ್ವರಿಗೂ ಸಮಾನವಾಗಿ ಸುಖಾದ್ಯನುಭವ ಪ್ರಸಂಗಿಸುವುದು. ಆದ್ದರಿಂದ ಕರ್ತಾ ಆತ್ಮಾವೇ ಆಗಬೇಕು.

ಸೂತ್ರ ೫—**ಶಕ್ತಿವಿಪರ್ಯಯಾತ್**

**ಸೂತ್ರಾರ್ಥ**

ಭೋಕ್ತೃತ್ವ ಶಕ್ತಿಗೆ ಹಾನಿ ಬರುವುದರಿಂದ. (ಆತ್ಮಾ ಕರ್ತಾವಾಗಬೇಕು).

**ವಿವರಣೆ**

ಯಾವನು ಪುಣ್ಯಪಾಪಗಳನ್ನು ಮಾಡುತ್ತಾನೆಯೋ ಅವನೇ ಅದರ ಫಲವಾದ ಸುಖ ದುಃಖಗಳನ್ನು ಅನುಭವಿಸುತ್ತಾನೆ. ಮತ್ತೊಬ್ಬನಿಗೆ ಆ ಅನುಭವ ಸಂಭವಿಸದು ಬುದ್ಧಿಯೇ ಪುಣ್ಯಪಾಪಗಳನ್ನು ಮಾಡುವುದಾದಲ್ಲಿ ಆತ್ಮನು ಸುಖಾದಿಗಳನ್ನು ಅನುಭವಿಸದೆ ಹೋಗುವನು. ಆದ್ದರಿಂದ ಆತ್ಮನೇ ಕರ್ತೃವೂ ಭೋಕ್ತೃವೂ ಆಗಿರುವನು.

ಸೂತ್ರ ೬—**ಸಮಾಧ್ಯಭಾವಾಚ್ಚ**

**ಸೂತ್ರಾರ್ಥ**

ಸಮಾಧಿಯು ಸಂಭವಿಸದಾದ್ದರಿಂಲೂ, (ಪ್ರಕೃತಿಗೆ ಕರ್ತೃತ್ವ ಕೂಡದು)

**ವಿವರಣೆ**

ಪ್ರಕೃತಿಗಿಂತ ಆತ್ಮನು ಭಿನ್ನನೆಂದು ಏಕಾಗ್ರಚಿತ್ತನಾಗಿ ಧ್ಯಾನಿಸುವುದೇ ಮೋಕ್ಷ ಸಾಧನವೆಂದು ಹೇಳಿದೆ. ಪ್ರಕೃತಿಯೇ ಧ್ಯಾನ ಮಾಡುವುದೆಂಬ ಪಕ್ಷದಲ್ಲಿ ತನಗಿಂತ ಬೇರೆಯಾಗಿ ತನ್ನನ್ನು ತಾನು ಧ್ಯಾನಿಸುವುದೆಂಬುದು ಕೂಡದುದರಿಂದ, ಪ್ರಕೃತಿಗೆ ಕರ್ತೃತ್ವವು ಸಂಭವಿಸುವುದಿಲ್ಲ.

ಸೂತ್ರ ೭—**ಯಥಾ ಚ ತಕ್ಷೋಽಭಯಥಾ**

**ಸೂತ್ರಾರ್ಥ**

[ತಕ್ಷಾ] = ಬಡಗಿಯು [ಯಥಾ] = ಹೇಗೆ [ಉಭಯಥಾ, ಚ] = ಕೆಲಸ ಮಾಡುವುದಕ್ಕೂ ಮಾಡದಿರುವುದಕ್ಕೂ ಸಮರ್ಥನಾಗಿದ್ದಾನೆಯೋ (ಹಾಗೆಯೇ ಆತ್ಮನೂ).

**ವಿವರಣೆ**

ಆತ್ಮನು ಕರ್ತೃವಾದರೆ ತನಗೆ ಇಷ್ಟಬಂದಾಗ ಕೆಲಸ ಮಾಡಬಹುದು, ಇಚ್ಛೆಯಿಲ್ಲದಾಗ ಮಾಡದಿರಬಹುದು. ಅದು ಹೇಗೆಂದರೆ, ಬಡಗಿಯು ತನ್ನ ಬಳಿ ಸಕಲ ಸಾಮಗ್ರಿಗಳಿದ್ದಾಗ್ಗೂ, ಇಚ್ಛೆಯಾದಲ್ಲಿ ಶಿಲ್ಪಕಾರ್ಯವನ್ನು ಮಾಡುತ್ತಾನೆ. ಇಚ್ಛೆಯಾಗದಿದ್ದಾಗ ಸುಮ್ಮನೇ ಇರುತ್ತಾನೆ. ಅದರಂತೆಯೇ ಇಲ್ಲಿಯೂ ಕಂಡುಕೊಳ್ಳುವುದು. ಬುದ್ಧಿಗೆ ಕರ್ತೃತ್ವವನ್ನು ಒಪ್ಪಿಕೊಂಡಲ್ಲಿ, ಅದು ಅಚೇತನವಾದ್ದರಿಂದ ಅದಕ್ಕೆ ಇಚ್ಛೆಯೆಂಬುದು ಉಂಟಾಗದು. ಆಗ ಯಾವ ಕೆಲಸವನ್ನಾಗಲಿ ಮಾಡುವುದಕ್ಕೂ ಬಿಡುವುದಕ್ಕೂ ಈ ವಿಧವಾದ ವ್ಯವಸ್ಥೆಯನ್ನು ಹೇಳಲಾಗದು.

## 6. ಪರಾಯತ್ತಾಧಿಕರಣ

### ಸೂತ್ರ—ಪರಾತ್ತು ತಚ್ಛ್ರುತೇಃ

### ಆಕ್ಷೇಪ ಸಂಗತಿ

ಹಿಂದಿನ ಅಧಿಕರಣದಲ್ಲಿ ಜೀವನಿಗೆ ಹೇಳಿದ ಕರ್ತೃತ್ವ ಸ್ವತಂತ್ರವಾದದ್ದೇ, ಅಥವಾ ಪರಮಾತ್ಮಾಧೀನವಾದದ್ದೇ?—ಎಂದು ಸಂಶಯದಿಂದ ಸಂಗತಿ.

### ಸೂತ್ರಾರ್ಥ

[ತಚ್ಛ್ರುತೇಃ] = (ಜೀವನಿಗೆ) ಕರ್ತೃತ್ವ ಪರಮಾತ್ಮಾಧೀನವೆಂದು ವೇದದಲ್ಲಿ ಹೇಳಿರುವುದರಿಂದ, [ಪರಾತ್,ತು] = ಪರಮಪುರುಷನಿಂದಲೇ (ಜೀವನಿಗೆ ಕರ್ತೃತ್ವ ಸಿದ್ಧಿಸುವುದು).

### ವಿವರಣೆ

ಈ ಅಧಿಕರಣದಲ್ಲಿ ಹಿಂದೆ ಹೇಳಿದ ಜೀವನ ಕರ್ತೃತ್ವ ಪರಮಾತ್ಮಾಧೀನವನ್ನುತ್ತಾರೆ. ಜೀವನು ಪುಣ್ಯಪಾಪಗಳನ್ನು ಮಾಡುವಾಗ ಸ್ವತಂತ್ರನಾಗಿ ಮಾಡುವುದಿಲ್ಲ. ಪರಮಾತ್ಮ ನಿಂದ ಮಾಡಿಸಲ್ಪಡುತ್ತಾನೆಯೆಂದಲ್ಲಿ, ಇವನು ಸ್ವಬುದ್ಧಿಯಿಂದ ಪುಣ್ಯಪಾಪಗಳನ್ನು ಮಾಡದುದರಿಂದ, ಸುಖ ದುಃಖಗಳೂ ಇವನಿಗೆಸಂಭವಿಸದಿರಬೇಕು. ಅಲ್ಲದೆ ಜೀವನನ್ನು ಉದ್ದೇಶಿಸಿಯೇ, "ಇದನ್ನು ಮಾಡು, ಇದನ್ನು ಬಿಡು",—ಎಂದು ಹೇಳುವ ಶಾಸ್ತ್ರಕ್ಕೂ ಪ್ರಯೋಜನವಿಲ್ಲದೆ ಹೋಗುವುದು. ಆದ್ದರಿಂದ ಜೀವನು ಸ್ವತಂತ್ರನಾಗಿಯೇ ಕರ್ತೃ ವಾಗುತ್ತಾನೆ—ಎಂದು ಪೂರ್ವಪಕ್ಷ.

"ಅನ್ತಃ ಪ್ರವಿಷ್ಟ ಶ್ಶಾಸ್ತಾ..." "ಯ ಆತ್ಮಾನಮನ್ತರೋ ಯಮಯತಿ"—ಅಂದರೆ, ಪರಮಾತ್ಮನೇ ಒಳಗೆ ಹೊಕ್ಕು ಜೀವನನ್ನು ಆಯಾ ಕಾರ್ಯಗಳಲ್ಲಿ ನಿಯಮಿ ಸುತ್ತಾನೆ—ಎಂದು ವೇದ ಹೇಳುವುದರಿಂದ ಜೀವ ಸ್ವತಂತ್ರ ಕರ್ತೃವಲ್ಲ. ಪರಮಾತ್ಮನಿಂದ ಪ್ರೇರಿತನಾಗಿ ಕಾರ್ಯ ಮಾಡುತ್ತಾನೆ.—ಎಂದು ಸಿದ್ಧಾನ್ತ.

### ಸೂತ್ರ ೨—ಕೃತಪ್ರಯತ್ನಾಪೇಕ್ಷಸ್ತು ವಿಹಿತ ಪ್ರತಿಷಿದ್ಧಾ ವೈಯರ್ಥ್ಯಾದಿಭ್ಯಃ

### ಸೂತ್ರಾರ್ಥ

[ವಿಹಿತ ಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ] = ವಿಧಿ ನಿಷೇಧ ಶಾಸ್ತ್ರಗಳಿಗೆ ವೈಯ ರ್ಥ್ಯ ಬಾರದಿರುವುದಕ್ಕಾಗಿ [ಕೃತ ಪ್ರಯತ್ನಾಪೇಕ್ಷಃ] = (ಪರಮ ಪುರುಷನು ಜೀವನಿಂದ) ಮಾಡಲ್ಪಟ್ಟ ಪ್ರಯತ್ನವನ್ನು ಅಪೇಕ್ಷಿಸುತ್ತಾನೆ.

### ವಿವರಣೆ

ಆದರೆ, ವಿಧಿನಿಷೇಧ ಶಾಸ್ತ್ರಗಳಿಗೆ ಪ್ರಯೋಜನವೇನು?—ಎಂದಲ್ಲಿ ಒಂದು ಕಾರ್ಯದಲ್ಲಿ ಮೊದಲು ಜೀವನು ಸ್ವತಂತ್ರನಾಗಿಯೇ ಪ್ರವರ್ತಿಸುತ್ತಾನೆ. ಇವನಿಗೆ ಅಷ್ಟು ಮಾತ್ರವೇ ಶಕ್ತಿ. ತರುವಾಯ ಈಶ್ವರನು ಅದನ್ನು ಅನುಮತಿಸಿ ಇವನಿಂದ

ನಡೆಸುತ್ತಾನೆ. ಪರಮಾತ್ಮನ ಅನುಮತಿಯಿಲ್ಲದೆ ಜೀವನಿಗೆ ಅದನ್ನು ನಡೆಸುವ ಶಕ್ತಿಯಿಲ್ಲ. ಹೀಗೆ ಜೀವನು ಮೊದಲು ಒಳ್ಳೆಯ ಮಾರ್ಗದಲ್ಲಿ ಪ್ರಯತ್ನಿಸುವುದಕ್ಕಾಗಿ ಶಾಸ್ತ್ರಗಳು ಏರ್ಪಟ್ಟವು. ಆದ್ದರಿಂದ ಅವು ವ್ಯರ್ಥವಾಗಲಾರವು. ಆ ಮೊದಲನೆಯ ಪ್ರವೃತ್ತಿಯ ಕಾರಣದಿಂದಲೇ, ಅದಕ್ಕನುಗುಣವಾಗಿ ಇವನಿಗೆ ಸುಖ ದುಃಖಗಳುಂಟಾಗುವುವು. ಆ ಪ್ರಥಮ ಪ್ರವೃತ್ತಿಯನ್ನೂ ಜೀವನಿಗೆ ಕರ್ಮಾನುಗುಣವಾಗಿ ಈಶ್ವರ ಕೊಡುವ ನಾದ್ದರಿಂದ, ಒಂದು ವಿಧವಾದ ಬಾಧೆಯೂ ಇಲ್ಲ.

ಶ್ರೀ ನಡಾದೂರ್ ಅಮ್ಮಾಳ್‌ರವರ ತತ್ತ್ವಸಾರದಲ್ಲಿಯ ಕೆಳಗಿನ ಶ್ಲೋಕ ಇಲ್ಲಿ ಅನುಸನ್ಧೇಯ

"ಆದಾವೀಶ್ವರದತ್ತಯೈವ ಪುರುಷಃ ಸ್ವಾತಂತ್ರ್ಯ ಶಕ್ತ್ಯಾಸ್ವಯಂ
ತತ್ತತ್ಕರ್ಮ ಚಿಕೀರ್ಷಣಪ್ರಯತನಾನ್ಯುತ್ಪಾದಯನ್ ವರ್ತತೇ ।
ತತ್ರೋಪೇಕ್ಷ್ಯತತೋಽನುಮತ್ಯ ವಿದಧತ್ತನ್ನಿಗ್ರಹಾನುಗ್ರಹೌ
ತತ್ತತ್ಕರ್ಮಫಲಂ ಪ್ರಯಚ್ಛತಿ ತತಸ್ಸರ್ವಸ್ಯ ಪುಂಸೋಹರಿಃ ॥"—ಎಂಬುದು.

## 7. ಅಂಶಾಧಿಕರಣ

ಸೂತ್ರ—**ಅಂಶೋ ನಾನಾ ವ್ಯಪದೇಶಾದನ್ಯಥಾ ಚಾಪಿ ದಾಶಕಿತವಾದಿತ್ವ-ಮಧೀಯತ ಏಕೇ**

### ಅಪವಾದ ಸಂಗತಿ

ಸ್ವಬುದ್ಧಿಯಿಂದ ಪ್ರವೃತ್ತಿ ನಿವೃತ್ತಿಗಳನ್ನು ಆರಂಭಿಸಬಲ್ಲ ಜೀವನ ಪ್ರಥಮ ಪ್ರವೃತ್ತಿಯನ್ನು ಅಪೇಕ್ಷಿಸಿ ಪರಮಾತ್ಮನು ಅನುಮತಿಸಿ ಅದನ್ನು ಮುಂದಕ್ಕೆ ಅವನಿಂದ ನಡೆಸುತ್ತಾನೆ ಎನ್ನಲಾಯಿತು. ಹಾಗಾದಲ್ಲಿ ರಾಜ—ಭೃತ್ಯಾದಿಗಳಂತೆ ಜೀವ—ಪರರಿಗೆ ಅತ್ಯಂತ ಭೇದವಿದ್ದಹಾಗಾಯಿತು. ಆದ್ದರಿಂದ ಜೀವ—ಪರರಿಗೆ ಅಭೇದವನ್ನು ಹೇಳುವ ಶ್ರುತಿಗಳು, "ನರಪತಿರೇವ ಸರ್ವಲೋಕಃ",—ಎಂಬಂತೆ ಔಪಚಾರಿಕಗಳು—ಎಂಬ ಶಂಕೆಯಿಂದ ಸಂಗತಿ.

### ಸೂತ್ರಾರ್ಥ

[ನಾನಾ] = ಭಿನ್ನವಾಗಿಯೂ, [ಅನ್ಯಥಾ, ಚ] = ಅಭಿನ್ನವಾಗಿಯೂ, [ವ್ಯಪದೇಶಾತ್] = ಹೇಳುವುದರಿಂದ, [ಅಂಶಃ] = (ಜೀವ ಪರಮಾತ್ಮನ) ಏಕದೇಶ. [ಏಕೆ] = ಕೆಲವರು (ಆಥರ್ವಣಿಕರು) [ದಾಶಕಿತವಾದಿತ್ವಂ] = (ಪರಮಾತ್ಮನಿಗೆ) ದಾಶ, ಕಿತವ ಮುಂತಾದ ಸ್ವರೂಪವಾಗಿರುವಿಕೆಯನ್ನು [ಅಧೀಯತೇ] = ಹೇಳುತ್ತಾರೆ.

### ವಿವರಣೆ

"ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ..."—ಎಂದು ಜೀವಾತ್ಮನಿಗಿಂತ ಪರಮಾತ್ಮನನ್ನು ಭಿನ್ನನನ್ನಾಗಿ ಅರಿಯಬೇಕೆಂದು ಇಬ್ಬರಿಗೂ ಭೇದವನ್ನು ಹೇಳುವುದರಿಂದ ಪರಮಾತ್ಮನಿಗಿಂತ ಜೀವ ಅತ್ಯಂತ ಭಿನ್ನನೆನ್ನುವರು—ಕೆಲವರು, "ತತ್ತ್ವಮಸಿ;"—(ಆ ಪರಬ್ರಹ್ಮವೇ ನೀನಾಗಿದ್ದೀಯೆ) ಎಂದು ಜೀವನಿಗೂ ಪರಮಾತ್ಮನಿಗೂ ಅಭೇದವನ್ನು

ಹೇಳುವುದರಿಂದ, ಇವರಿಬ್ಬರಿಗೂ ಭೇದವಿಲ್ಲ. ಬ್ರಹ್ಮವೇ ಮಾಯೆಯಿಂದ ಅಜ್ಞಾನವನ್ನು ಹೊಂದಿಜೀವನಾಗಿ ತೋರುವುದು ಎನ್ನುವರು ಮತ್ತೆ ಕೆಲವರು. ಆ ಬ್ರಹ್ಮವೇ ಪರಮಾರ್ಥವಾದ ಉಪಾಧಿಯಿಂದ ಕೂಡಿ ಜೀವನಾಗಿ ತನ್ನನ್ನು ಭಾವಿಸುವುದೆಂದು ಕೆಲವರೆನ್ನುವರು. ಈ ಮೂವರನ್ನೂ ಈ ಅಧಿಕರಣದಲ್ಲಿ ನಿರಸನ ಮಾಡುತ್ತಾರೆ.—ಜೀವ ಪರಮಾತ್ಮನಿಗಿಂತ ಅತ್ಯಂತ ಭಿನ್ನನೆಂದರೆ, ಅಭೇದವನ್ನು ಹೇಳುವ ಶ್ರುತಿಗೆ, ಅರಸನಿಂದ ಪರಿಪಾಲಿಸಲ್ಪಟ್ಟ ಜಗತ್ತನ್ನು 'ಅರಸನೇ ಜಗತ್ತು'—ಎನ್ನುವ ಹಾಗೆ ಗೌಣವಾಗಿ ಅರ್ಥವನ್ನು ಹೇಳಬೇಕು. ಉಳಿದ ಎರಡು ಪಕ್ಷಗಳಲ್ಲಿಯೂ, ಭೇದ ಶ್ರುತಿಯು ವ್ಯಾವಹಾರಿಕ ದಶೆಯಲ್ಲಿರುವ ಭೇದವನ್ನು ಹೇಳುತ್ತೆಯಾದ್ದರಿಂದ ಅದಕ್ಕೆ ಸಂಕೋಚ ಮಾಡಬೇಕು. ಸರ್ವಜ್ಞವಾದ ಬ್ರಹ್ಮಕ್ಕೆ ಅಜ್ಞಾನಾದಿ ದೋಷಗಳನ್ನು ಕಲ್ಪಿಸಬೇಕು. ಈ ಮೂರೂ ಪಕ್ಷಗಳಿಗಿಂತ ಜೀವನು ಪರಮಾತ್ಮನಿಗೆ ಶರೀರ. ಇದಕ್ಕೆ ಪ್ರಮಾಣ, "ಯಸ್ಯಾತ್ಮಾಶರೀರಂ"—ಎಂಬ ಶ್ರುತಿ. ಶರೀರವೆಂಬುದು ಶರೀರಿಯ ಏಕದೇಶ, ಆದ್ದರಿಂದ ಜೀವನನ್ನು ಶರೀರವಾಗಿ ಯುಳ್ಳ ಪರಮಾತ್ಮನ ಏಕದೇಶ—ಅವನಿಗೆ ಶರೀರವಾದ ಜೀವ—ಎಂಬ ಪಕ್ಷವೇ ಶ್ರೇಷ್ಠ. ಈ ಪಕ್ಷದಲ್ಲಿ ಶರೀರವಾಚಕ ಶಬ್ದ ಶರೀರಿಯನ್ನು ಹೇಳುವುದರಿಂದ, "ತತ್ತ್ವಮಸಿ";—"ಅಯಮಾತ್ಮಾ ಬ್ರಹ್ಮ"—ಇತ್ಯಾದಿ ವಾಕ್ಯಗಳಲ್ಲಿ ಜೀವವಾಚಕ ಶಬ್ದಕ್ಕೆ ಜೀವಶರೀರಿಯಾದ ಪರಮಾತ್ಮಾ ಅರ್ಥವಾದ್ದರಿಂದ ಆ ಶ್ರುತಿಗಳಿಗೂ ವಿರೋಧವಿಲ್ಲ, ಅಣುವೂ ಅಲ್ಪಜ್ಞನೂ ಆದ ಜೀವನಿಗೂ, ವಿಭುವೂ ಸರ್ವಜ್ಞನೂ ಆದ ಪರಮಾತ್ಮನಿಗೂ, ಸ್ವರೂಪ—ಸ್ವಭಾವಗಳು ಭಿನ್ನಗಳಾದ್ದರಿಂದ, ಭೇದ ಶ್ರುತಿಗೂ ವಿರೋಧವಿಲ್ಲ. ಹೀಗೆ ಅಂಗೀಕರಿಸುವುದರಿಂದ, ಸಕಲಾಂತರ್ಯಾಮಿಯಾದ ಪರಮಾತ್ಮನನ್ನು "ಬ್ರಹ್ಮದಾಶಾ ಬ್ರಹ್ಮದಾಸಾ ಬ್ರಹ್ಮೇಮೇಕಿತವಾಃ;"—ಎಂದು, ದಾಶನೆಂದೂ, ದಾಸನೆಂದೂ, ಕಿತವನೆಂದೂ ಆಥರ್ವಣಿಕರು ಹೇಳುವ ಶ್ರುತಿಯ ಅರ್ಥವೂ ಸರಿಹೋಗುತ್ತದೆ. ಆದ್ದರಿಂದ, ಜೀವ ಪರಬ್ರಹ್ಮದ ಅಂಶವೆಂದೇ ಸಿದ್ಧಾಂತ.

### ಸೂತ್ರ ೨—ಮಂತ್ರವರ್ಣಾತ್

**ಸೂತ್ರಾರ್ಥ**

"ಪಾದೋಽಸ್ಯ ವಿಶ್ವಾ ಭೂತಾನಿ"—ಎಂಬ ಮಂತ್ರದಿಂದಲೂ, ಜೀವನು ಪರಮಾತ್ಮನ ಅಂಶವೆಂಬುದು ಸಿದ್ಧ. ಈ ಪರಮಾತ್ಮನಿಗೆ ಸಮಸ್ತ ಭೂತಗಳೂ ಪಾದವೆಂದು ಈ ಶ್ರುತಿಗೆ ಅರ್ಥ. ಪಾದವೆಂಬುದು ಏಕದೇಶ. ಶರೀರದಲ್ಲಿ ಪಾದ ಏಕದೇಶವಾಗಿರುವಂತೆ, ಪರಮಾತ್ಮನಿಗೆ ಸಮಸ್ತ ಭೂತಗಳೂ ಏಕದೇಶವೆಂದು ತಾತ್ಪರ್ಯ.

**ವಿವರಣೆ**

ಈ ಅರ್ಥದಲ್ಲಿ ಪ್ರಮಾಣ. "ಪಾದೋಽಸ್ಯ ಸರ್ವಾಭೂತಾನಿ"—ಎಂಬ ವೇದ ವಾಕ್ಯ [ಸರ್ವಾಭೂತಾನಿ] = ಸಕಲ ಪ್ರಾಣಿಗಳೂ (ಅಸ್ಯ) = ಈ ಬ್ರಹ್ಮದ (ಪಾದಃ) = ಅಂಶ. ಅಂದರೆ, ಏಕದೇಶ—ಎಂದು ಇಲ್ಲಿ ಅರ್ಥ.

## ಸೂತ್ರ ೩—ಅಪಿಸ್ಮರ್ಯತೇ

**ಸೂತ್ರಾರ್ಥ**

[ಸ್ಮರ್ಯತೇ, ಅಪಿ] = ("ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ,"—ಎಂಬ) ಗೀತಾ ವಾಕ್ಯದಲ್ಲಿಯೂ, ಜೀವನು ಪರಮಾತ್ಮನ ಅಂಶವೆಂದು ಹೇಳಲಾಗಿದೆ. (ಅನಾದಿಯಾದ ಜೀವನು ನನ್ನ ಅಂಶ—ವೆಂದು ಆ ಶ್ರೀ ಕೃಷ್ಣನ ಶ್ರೀಸೂಕ್ತಿಗೆ ಅರ್ಥ.)

## ಸೂತ್ರ ೪—ಪ್ರಕಾಶಾದಿವತ್ತು ನೈವಂ ಪರಃ

**ಸೂತ್ರಾರ್ಥ**

[ಪ್ರಕಾಶಾದಿವತ್] = (ಮಣಿ ಮುಂತಾದುದರ) ಪ್ರಕಾಶಾದಿಗಳಂತೆ [ಪರಃ] = ಪರಮಾತ್ಮನು. [ಏವಂ, ನ] = ಜೀವದ ಸ್ವಭಾವವನ್ನು ಹೊಂದುವವನಲ್ಲ.

**ವಿವರಣೆ**

ಅಂಶವೆಂಬುದು ಏಕದೇಶ. ಶರೀರದ ಒಂದು ಅಂಶದಲ್ಲಿ ಒಂದು ದೋಷವಿದ್ದರೆ ಅದು ಶರೀರದ ದೋಷವಾಗುವುದು. ಹಾಗೆಯೇ ಪರಮಾತ್ಮನ ಏಕದೇಶವಾದ ಜೀವನ ದೋಷಗಳೂ ಪರಮಾತ್ಮನದೇ ಆಗಬೇಕು. ಆಗ್ಗೆ, ಪರಮಾತ್ಮನು ನಿರ್ದೋಷಿ ಯೆಂಬ ಶ್ರುತಿಗೆ ವಿರೋಧ ಬರುವುದೆಂದಲ್ಲಿ,—ಕಾಂತಿಯೊಡನೆ ಕೂಡಿರುವ ಮಣಿಗೆ ಕಾಂತಿ ಹೇಗೆ ಅಂಶವೋ ಹಾಗೆಯೇ ಪರಮಾತ್ಮನಿಗೆ ಜೀವ ಅಂಶವಾಗುತ್ತಾನೆ. ಕಾಂತಿಗೆ ಸಂಕೋಚ ವಿಕಾಸಗಳೇ ಮುಂತಾದ ದೋಷ ಬಂದಾಗ್ಯೂ, ಆ ದೋಷಗಳು ಮಣಿಗೆ ಸಂಭವಿಸುವುದಿಲ್ಲವಷ್ಟೆ! ಅದರಂತೆ ಶರೀರಿಯಾದ ಆತ್ಮನಿಗೆ ಶರೀರ ಅಂಶ. ಶರೀರದಲ್ಲಿ ಉಂಟಾದ ಜನನ ಮರಣ ಮುಂತಾದ ದೋಷಗಳು ಆತ್ಮನಿಗೆ ಸಂಭವಿಸವು. ಇದೇ ಮುಂತಾದ ದೃಷ್ಟಾಂತಗಳನ್ನು ಕಂಡುಕೊಳ್ಳುವುದು.

## ಸೂತ್ರ ೫—ಸ್ಮರನ್ತಿ ಚ

**ಸೂತ್ರಾರ್ಥ**

"ಏಕದೇಶ ಸ್ಥಿತಸ್ಯಾಗ್ನೇಃ ಜ್ಯೋತ್ಸ್ನಾ ವಿಸ್ತಾರಿಣೀ ಯಥಾ ।
ಪರಸ್ಯ ಬ್ರಹ್ಮಣಶ್ಶಕ್ತಿಸ್ತಥೇದಮಖಿಲಂ ಜಗತ್ ॥"—ಎಂದು ಅಗ್ನಿಗೆ ಕಾಂತಿಯಂತೆ ಪರಮಾತ್ಮನಿಗೆ ಜಗತ್ತು ಅಂಶವಾಗುವುದು—ಎಂದು ಈ ಅರ್ಥವನ್ನೇ ಶ್ರೀ ಪರಾಶರಾದಿಗಳೂ ಹೇಳುತ್ತಾರೆ.

## ಸೂತ್ರ ೬—ಅನುಜ್ಞಾಪರಿಹಾರೌ ದೇಹಸಂಬನ್ಧಾಜ್ಜ್ಯೋತಿರಾದಿವತ್

**ಸೂತ್ರಾರ್ಥ**

[ಜ್ಯೋತಿರಾದಿವತ್] = ಅಗ್ನಿ ಮುಂತಾದುವಕ್ಕೆ ಹೇಗೋ ಹಾಗೆ [ದೇಹಸಂಬಂಧಾತ್] = ಶರೀರ ಸಂಬಂಧದಿಂದ, [ಅನುಜ್ಞಾಪರಿಹಾರೌ] = (ವೇದಾಧ್ಯಯನಾದಿಗಳಲ್ಲಿ ಕೆಲವರಿಗೆ) ಅನುಮತಿಯೂ, ಕೆಲವರಿಗೆ ನಿಷೇಧವೂ ಕೂಡುವುದು.

ಆತ್ಮರುಗಳೆಲ್ಲರೂ ಪರಮಾತ್ಮನ ಅಂಶವಾದರೆ, ಒಬ್ಬರು ಅಧಿಕವೆಂದೂ, ಒಬ್ಬರು ಕಡಿಮೆಯೆಂದೂ ಇಲ್ಲದುದರಿಂದ. ಎಲ್ಲರಿಗೂ, ವೇದಾಧ್ಯಯನ ಯಜ್ಞಯಾಗಾದಿಗಳಲ್ಲಿ

ಅಧಿಕಾರವಿರಬೇಕಾಗಿರುವಾಗ, ಕೆಲವರಿಗೆ ಉಂಟೆಂದೂ ಕೆಲವರಿಗೆ ಇಲ್ಲವೆಂದೂ ಹೇಳುವುದೇಕೆ?—ಎಂದಲ್ಲಿ, ಅಗ್ನಿ ಒಂದೇ ಆದರೂ, ಅದು ಯಜ್ಞದಲ್ಲಿ ಸಂಬಂಧಿಸಿದ್ದರೆ, ಪರಿಶುದ್ಧವಾಗಿ ಸತ್ಕರ್ಮಗಳಿಗೆ ಯೋಗ್ಯವಾಗಿಯೂ, ಶ್ಮಶಾನದಲ್ಲಿ ಸಂಬಂಧಿಸಿದ್ದರೆ ಅಶುದ್ಧವಾಗಿ ಅಯೋಗ್ಯವಾಗಿಯೂ ಆಗುವಂತೆ, ಪರಿಶುದ್ಧವಾದ ಬ್ರಾಹ್ಮಣ ಶರೀರ ಹೊಂದಿದವನು ಅವಕ್ಕೆ ಯೋಗ್ಯನೆಂದೂ, ಪರಿಶುದ್ಧವಲ್ಲದ ಶೂದ್ರ ಶರೀರ ಹೊಂದಿದವನು ಅಯೋಗ್ಯನೆಂದೂ ಹೇಳುವುದು ಉಪಪನ್ನವೇ ಆಗುವುದು.

ಸೂತ್ರ ೭—**ಅಸಂತತೇಶ್ಚಾವ್ಯತಿಕರಃ**

**ಸೂತ್ರಾರ್ಥ**

[ಅಸಂತತೇಃ, ಚ] = ಜೀವ—ಪರಮಾತ್ಮರಿಗೆ ಪರಸ್ಪರ ಭೇದದಿಂದಲೂ, [ಅವ್ಯತಿಕರಃ] = (ಭೋಗದಲ್ಲಿ) ಸಂಪರ್ಕವಿಲ್ಲ. ಸಂತತಿಯೆಂಬುದು—ಬಿಡದೆ ಒಂದಾಗಿ ಸೇರಿರುವುದು—ಅಂದರೆ ಅಭೇದ. ಅಸಂತತಿಯೆಂಬುದು ಅದಕ್ಕೆ ವಿರುದ್ಧವಾದ ಭೇದ.

**ವಿವರಣೆ**

ಈ ಪಕ್ಷದಲ್ಲಿ, ಜೀವರುಗಳು ಅಣುವಾಗಿ ಪ್ರತಿ ಶರೀರದಲ್ಲಿಯೂ ಬೇರೆ ಬೇರೆಯವರಾಗಿ ಇರುವುದರಿಂದ, ಒಬ್ಬನಿಗೆ ಉಂಟಾದ ಸುಖದುಃಖಗಳು ಮತ್ತೊಬ್ಬ ಜೀವನಿಗೂ ಪರಮಾತ್ಮನಿಗೂ ಪ್ರಸಂಗಿಸುವುದಿಲ್ಲ. ಬ್ರಹ್ಮವೇ ಜೀವನೆಂಬ ಪಕ್ಷದಲ್ಲಿ ಜೀವನಿಗುಂಟಾದ ಸಕಲ ದೋಷಗಳೂ ಬ್ರಹ್ಮಕ್ಕೆ ಉಂಟಾಗುವುದು.

ಸೂತ್ರ ೮—**ಆಭಾಸಾ ಏವ ಚ**

**ಸೂತ್ರಾರ್ಥ**

[ಆಭಾಸಾಃ ಏವ ಚ] = (ಬ್ರಹ್ಮವೇ ಅಜ್ಞಾನದಿಂದ ಜೀವನಾಗಿರುವುದೆಂಬ ಪಕ್ಷದಲ್ಲಿ ಸರ್ವಜ್ಞನಾದ ಪರಮಾತ್ಮನಿಗೆ ಅಜ್ಞಾನವೂ ಸ್ವರೂಪಾವರಣವೂ ಕಲ್ಪಿಸಬೇಕಾಗುವುದರಿಂದ, ಅಭೇದ ಸಾಧಕವಾದ ಹೇತುಗಳೆಲ್ಲವೂ) ದೋಷಯುಕ್ತಗಳಾಗಿಯೇ ಇರಬೇಕಾಗುವುವು. ಬ್ರಹ್ಮ ನಿರ್ದುಷ್ಟವೆಂಬ ಶ್ರುತಿಯೂ ವಿರೋಧವಾಗುತ್ತೆ.

ಸೂತ್ರ ೯—**ಅದೃಷ್ಟಾನಿಯಮಾತ್**

**ಸೂತ್ರಾರ್ಥ**

ಅದೃಷ್ಟದಿಂದಲೂ ನಿಯಮಿಸಲಾಗದುದರಿಂದ [ಅಭೇದವಾದುವು ಅಸಾರ)

**ವಿವರಣೆ**

ಪಾರಮಾರ್ಥಿಕೋಪಾಧಿಯೊಡಗೂಡಿದ ಬ್ರಹ್ಮದ ಕೆಲ—ಕೆಲ ಅಂಶಗಳಿಗೆ ಜೀವನೆಂದು ಹೆಸರು. ಈ ಅಂಶಗಳಲ್ಲಿ ಉಂಟಾದ ಅನಾದಿಯಾದ ಅದೃಷ್ಟದಿಂದುಂಟಾದ ಉಪಾಧಿಯೂ ಅನಾದಿಯಾದ್ದರಿಂದ ಆ ಅಂಶಗಳಲ್ಲಿ ಉಂಟಾದ ದೋಷಗಳು ಬ್ರಹ್ಮದ ಇತರ ಭಾಗದಲ್ಲಿ ಸಂಭವಿಸವು. ಬ್ರಹ್ಮ ನಿರ್ದುಷ್ಟವೆಂಬ ಶ್ರುತಿಗೂ ವಿರೋಧವಿಲ್ಲ. ಸುಖ ದುಃಖಾನುಭವಗಳಲ್ಲಿಯೂ ಪರಸ್ಪರ ಸಂಪರ್ಕವಿಲ್ಲ, ಎಂಬ ಭಾಸ್ಕರ ಮತದಲ್ಲಿಯೂ ಅದೃಷ್ಟಾದಿಗಳಿಂದ ಬ್ರಹ್ಮದಿಂದ ಅಂಶವನ್ನು ಪ್ರತ್ಯೇಕಿಸಿ ತೆಗೆಯುವುದು ಆಗದುದರಿಂದ, ಅದೃಷ್ಟವೂ ಉಪಾಧಿಯೂ ಬ್ರಹ್ಮಾಶ್ರಯಗಳಾದ್ದರಿಂದ ದೋಷಗಳೂ ಬ್ರಹ್ಮಾ

ಶ್ರಯಗಳೇ ಆದಾವು. ಆದ್ದರಿಂದ ಮೇಲೆ ಹೇಳಿದ ದೋಷಗಳು ಹೋಗಲಾರವು.

ಸೂತ್ರ ೧೦—**ಅಭಿಸನ್ಧ್ಯಾದಿಷ್ವಪಿ ಚೈವಂ**

**ಸೂತ್ರಾರ್ಥ**

[ಅಭಿಸನ್ಧ್ಯಾದಿಷು ಅಪಿ] = (ಅದೃಷ್ಟಕ್ಕೆ ಕಾರಣವಾಗಿ ಒಪ್ಪಿಕೊಂಡ) ಸಂಕಲ್ಪ (ಅನುಷ್ಠಾನ) ಮುಂತಾದುವುಗಳಲ್ಲಿಯೂ, [ಏವಂ] = ಹೀಗೆಯೇ (ಇವುಗಳೂ ಬ್ರಹ್ಮವನ್ನೇ ಆಶ್ರಯಿಸುವುವು ಎಂದು ತಾತ್ಪರ್ಯ.)

ಸೂತ್ರ ೧೧—**ಪ್ರದೇಶಭೇದಾದಿತಿ ಚೇನ್ನಾನ್ತರ್ಭಾವಾತ್**

**ಸೂತ್ರಾರ್ಥ**

[ಪ್ರದೇಶ ಭೇದಾತ್] = ಉಪಾಧಿಯುಕ್ತ ಪ್ರದೇಶಕ್ಕಿಂತಲೂ, ಅದಿಲ್ಲದ ಬ್ರಹ್ಮ ಪ್ರದೇಶ ಭಿನ್ನವಾಗಿರುವುದರಿಂದ, (ಅದಕ್ಕೆ ಮೇಲೆ ಹೇಳಿದ ದೋಷಗಳು ಬಾರವು). [ಇತಿ ಚೇತ್] = ಎಂದರೆ, [ಅನ್ತರ್ಭಾವಾತ್] = (ಆ ಪ್ರದೇಶವೂ) ಉಪಾಧಿಯುಕ್ತ ಪ್ರದೇಶದಲ್ಲಿ ಅಂತರ್ಭವಿಸುವುದರಿಂದ, [ನ] = ಹಾಗೆ ಹೇಳಕೂಡದು. (ಬ್ರಹ್ಮ ವಿಭುವಾದ್ದರಿಂದ ಅದು ಚಲಿಸದು. ಉಪಾಧಿಯೇ ಚಲಿಸಬೇಕು. ಅದು ಉಪಾಧಿಯಿಲ್ಲದ ಬ್ರಹ್ಮ ಪ್ರದೇಶಗಳಲ್ಲಿಯೂ ಕೂಡ ಚಲಿಸುವುದರಿಂದ ಮೇಲೆ ಹೇಳಿದ ವಿಭಾಗ ಬರುವುದಿಲ್ಲವೆಂದು ತಾತ್ಪರ್ಯ.)

## ಪಾದ-4 ಅಧಿಕರಣ—೧ ಪ್ರಾಣೋತ್ಪತ್ತ್ಯಧಿಕರಣ

ಸೂತ್ರ—**ತಥಾಪ್ರಾಣಾಃ**

**ಪಾದ ಸಂಗತಿ**

"ಆತ್ಮಾಧಿಕರಣಾರ್ಥಸ್ಯೈವಾತಿ ದೇಶೋ ಭವೇದಿಹ ।
ಪ್ರಾಣಾಧಿಕರಣೇ ತಸ್ಮಾದಾತಿದೇಶಿಕ ಸಂಗತಿಃ ।।"—

ಜೀವ ಸ್ವರೂಪ ನಿರೂಪಣವಾದ ಮೇಲೆ ಜೀವನ ಉಪಕರಣಗಳ ಉತ್ಪತ್ತಿ ಪ್ರಕಾರ ಇಲ್ಲಿ ಶೋಧಿಸಲ್ಪಡುತ್ತೆ. ಈ ಅಧಿಕರಣಕ್ಕೆ ಹಿಂದಿನ ಪಾದದಲ್ಲಿಯ ಆತ್ಮಾಧಿಕರಣದೊಡನೆ ಪಾದ ಸಂಗತಿ.

ಆತ್ಮಾಧಿಕರಣದ ಅರ್ಥವೇ ಇಲ್ಲಿ ಅತಿದೇಶವಾಗಿರುವುದರಿಂದ ಅಧಿಕರಣ ಸಂಗತಿ ಆತಿದೇಶಿಕೀ ಸಂಗತಿಯೆಂದಾಗುತ್ತೆ.

**ಸೂತ್ರಾರ್ಥ**

[ಪ್ರಾಣಾಃ] = ಪ್ರಾಣಗಳು [ತಥಾ] = ಹಾಗೆಯೇ (ಜೀವನಂತೆಯೇ ನಿತ್ಯಗಳು)

**ವಿವರಣೆ**

ಈ ಅಧಿಕರಣದಲ್ಲಿ ಇಂದ್ರಿಯಗಳೂ ಉತ್ಪತ್ತಿ ವಿನಾಶಗಳನ್ನುಳ್ಳವುಗಳಲ್ಲವೆಂದು ಸ್ಥಾಪಿಸುತ್ತಾರೆ."ಋಷಯೋವಾವತೇಽಗ್ರೇ ಸದಾಸೀತ್—ಕೇತೇ ಋಷಯ ಇತಿ—ಪ್ರಾಣಾವಾವ ಋಷಯಃ ಇತಿ,"—ಜಗತ್ಸೃಷ್ಟಿಗೆ ಮುಂಚೆ ಋಷಿಗಳಿದ್ದರು. ಅವರುಗಳು

ಯಾರೆಂದರೆ ಪ್ರಾಣಗಳು—ಎಂದು. ಇಂದ್ರಿಯಗಳು ಪ್ರಳಯಕಾಲದಲ್ಲಿಯೂ ಇದ್ದು ದಾಗಿ ಹೇಳುವುದರಿಂದ ಅವೂ ಆತ್ಮನಂತೆಯೇ ನಿತ್ಯಗಳು—ಎಂದು ಪೂರ್ವಪಕ್ಷ.

ಸೂತ್ರ ೨—**ಗೌಣ್ಯಸಂಭವಾತ್ತತ್ಪ್ರಾಕ್ ಶ್ರುತೇಶ್ಚ**

**ಸೂತ್ರಾರ್ಥ**

[ತತ್ಪ್ರಾಕ್‌ಶ್ರುತೇಃ] = ಆ ಪರಮಾತ್ಮನಿಗೇ ಸೃಷ್ಟಿಗೆ ಮುಂಚಿನ ಸ್ಥಿತಿಯನ್ನು ಹೇಳುವುದರಿಂದ, (ಇಂದ್ರಿಯಗಳು ಅನಿತ್ಯಗಳು) [ಅಸಂಭವಾತ್] = (ಪ್ರಳಯದಲ್ಲಿ) ಅನೇಕ ವಸ್ತುವಿಲ್ಲದುದರಿಂದ, [ಗೌಣೀ] = (ಬಹುವಚನ) ಗೌಣ.

**ವಿವರಣೆ**

ಇದರಲ್ಲಿ ಸಿದ್ಧಾಂತವನ್ನು ಹೇಳುತ್ತಾರೆ;—"ಏಕೋಹವೈ ನಾರಾಯಣ ಆಸೀತ್" —ಎಂದು ಪ್ರಳಯ ಕಾಲದಲ್ಲಿ ಶ್ರೀಮನ್ನಾರಾಯಣನೊಬ್ಬನೇ ಇದ್ದನೆನ್ನುವುದರಿಂದ, ಇಂದ್ರಿಯಗಳು ಇಲ್ಲವೆಂದು ಸಿದ್ಧ. ಅಲ್ಲದೆ ಆತ್ಮನಿಗೆ ಉತ್ಪತ್ತಿವಿನಾಶಗಳಿಲ್ಲವೆಂದು ಹೇಳಿದಂತೆ, ಇಂದ್ರಿಯಗಳಿಗೆ ಹೇಳಿಲ್ಲ. ಮುಂಚೆ ಹೇಳಿದ ವಾಕ್ಯದಲ್ಲಿ ಪ್ರಾಣನೆಂದು ಪರಮಾತ್ಮನನ್ನೇ ಹೇಳಿತು. ಋಷಿಯೆಂದರೆ ಕಣ್ಣಿಗೆ ಗೋಚರಿಸದವುಗಳನ್ನು ಅರಿಯುವವ ನೆಂದರ್ಥ. ಅರಿಯುವುದೆಂಬುದು ಅಚೇತನವಾದ ಇಂದ್ರಿಯಗಳಿಗೆ ಕೂಡುವುದಿಲ್ಲವಾ ದ್ದರಿಂದ ಅವನ್ನು ಇಲ್ಲಿ ಹೇಳಿಲ್ಲ. "ಪ್ರಾಣಾಃ"—(ಪ್ರಾಣಗಳು)—ಎಂದು ಬಹು —ವಚನವಾಗಿ ಹೇಳಿರುವುದು—ಪ್ರಳಯದಲ್ಲಿ ಅನೇಕರು ಇಲ್ಲವಾದ್ದರಿಂದ, ಆ ಬಹು ವಚನಕ್ಕೆ ಬಹುತ್ವ ಅರ್ಥವಲ್ಲ. ಆದ್ದರಿಂದ ಇಂದ್ರಿಯಗಳು ಅನಿತ್ಯಗಳೆಂದು ಸಿದ್ಧಾಂತ.

ಸೂತ್ರ ೩—**ತತ್ಪೂರ್ವಕತ್ವಾದ್ವಾಚಃ**

**ಸೂತ್ರಾರ್ಥ**

[ವಾಚಃ] = ನಾಮಧೇಯಕ್ಕೆ [ತತ್ಪೂರ್ವಕತ್ವಾತ್] = ಆಕಾಶ ಮುಂತಾದ ಪದಾರ್ಥ ಗಳನ್ನು ಮುಂಚಿತವಾಗಿ ಉಳ್ಳದ್ದಾದ್ದರಿಂದ (ಪ್ರಾಣಪದಕ್ಕೆ ಪರಮಾತ್ಮನೇ ಅರ್ಥ.)

**ವಿವರಣೆ**

ಸೃಷ್ಟಿಕಾಲದಲ್ಲಿ ಮೊದಲು ಆಕಾಶಾದಿಗಳನ್ನು ಸೃಷ್ಟಿಸಿ ಅನಂತರ ಅವುಗಳಿಗೆ ನಾಮಕರಣ ಮಾಡಿದುದಾಗಿ ಹೇಳಿರುವುದರಿಂದ, ಆಕಾಶಾದಿಗಳು ಉಂಟಾದಾಗಲೇ ಅವಕ್ಕೆ ವಾಚಕಗಳಾದ ನಾಮಗಳುಂಟು. ಪ್ರಳಯದಲ್ಲಿ ಅವು ಇಲ್ಲದುದರಿಂದ ಅವುಗಳ ನಾಮಗಳೂ ಇಲ್ಲವಾದ್ದರಿಂದ, ಆಗ ಪ್ರಾಣನೆಂದು ಆಗ ಇದ್ದ ಪರಮಾತ್ಮನನ್ನೇ ಹೇಳಿತು. ಆಗ ಇಲ್ಲದಿದ್ದ ವಾಯುವಿಕಾರವಾದ ಪ್ರಾಣನನ್ನು ಹೇಳಿಲ್ಲ.

## 2. ಸಪ್ತಗತ್ಯಧಿಕರಣ

ಸೂತ್ರ —**ಸಪ್ತಗತೇರ್ವಿಶೇಷಿತತ್ವಾ ಚ್ಚ**

**ಸಂಗತಿ**

ಇಂದ್ರಿಯಗಳೂ ಪರಮಾತ್ಮನ ಕಾರ್ಯಗಳೆನ್ನಲಾಯಿತು. ಈಗ ಇಂದ್ರಿಯಗ ಳೆಷ್ಟು?—ಎಂದು ವಿಚಾರವೆಂದು ಪ್ರಾಸಂಗಿಕ ಸಂಗತಿ.

**ಸೂತ್ರಾರ್ಥ**

[ಗತೇಃ](ಏಳಕ್ಕೇ ಜೀವನೊಂದಿಗೆ) ಗಮನವನ್ನು ಹೇಳುವುದರಿಂದಲೂ, [ವಿಶೇಷಿತತ್ವಾತ್, ಚ]=(ಅವುಗಳ ಹೆಸರನ್ನು ಕುರಿತು) ಹೇಳುವುದರಿಂದಲೂ, [ಸಪ್ತ]= ಇಂದ್ರಿಯಗಳು ಏಳು.

**ವಿವರಣೆ**

ಇಂದ್ರಿಯಗಳು ಎಷ್ಟು?—ಎಂದಲ್ಲಿ, "ಸಪ್ತಪ್ರಾಣಾಃ ಪ್ರಭವನ್ತಿ"—ಎಂದು ಏಳು ಇಂದ್ರಿಯಗಳಿಗೇ ಜನನ ಮರಣಾದಿಗಳಲ್ಲಿ ಜೀವನೊಂದಿಗೆ ಸಂಚಾರವನ್ನು ಹೇಳುವುದರಿಂದಲೂ, "ಯದಾ ಪಂಚಾವತಿಷ್ಠನ್ತೇ ಜ್ಞಾನಾನಿ ಮನಸಾ ಸಹ ಬುದ್ಧಿಶ್ಚ..." ಎಂದು ಐದು ಜ್ಞಾನೇಂದ್ರಿಯಗಳು, ಮನಸ್ಸು, ಬುದ್ಧಿ.—ಎಂಬ ಈ ಏಳನ್ನು ಹೆಸರಿಟ್ಟು ಹೇಳಿ ಮತ್ತವುಗಳನ್ನು ಹೇಳದಿರುವುದರಿಂದಲೂ, ಇಂದ್ರಿಯಗಳು ಏಳು—ಎಂದು ಪೂರ್ವಪಕ್ಷ.

ಸೂತ್ರ ೨—**ಹಸ್ತಾದಯಸ್ತು ಸ್ಥಿತೇಽತೋನೈವಂ**

**ಸೂತ್ರಾರ್ಥ**

[ಹಸ್ತಾದಯಃ, ತು]=ಕೈ ಮುಂತಾದವೂ, [ಸ್ಥಿತೇ]=(ಶರೀರ) ಇರುವವರಿಗೂ (ಜೀವನಿಗೆ ಉಪಕರಣಗಳಾಗಿವೆ) [ಅತಃ]=ಆದ್ದರಿಂದ, [ಏವಂ]=ಇಂದ್ರಿಯಗಳು ಏಳು ಎನ್ನುವುದು. [ನ]=ಅಲ್ಲ.

**ವಿವರಣೆ**

"ದಶೇಮೇ ಪುರುಷೇ ಪ್ರಾಣಾಃ ಆತ್ಮೈಕಾದಶ,"—ಜೀವನಲ್ಲಿ ಹತ್ತು ಇಂದ್ರಿಯಗಳು, ಮನಸ್ಸು ಹನ್ನೊಂದನೆಯದು, ಎಂದೂ, "ಇಂದ್ರಿಯಾಣಿ ದಶೈಕಂಚ"—ಇಂದ್ರಿಯಗಳು ಹನ್ನೊಂದು, ಎಂದೂ ವೇದದಲ್ಲಿಯೂ ಶ್ರೀ ಗೀತೆಯಲ್ಲಿಯೂ ಹನ್ನೊಂದು ಇಂದ್ರಿಯಗಳನ್ನು ಹೇಳುವುದರಿಂದಲೂ, ತ್ವಕ್ ಚಕ್ಷುಸ್ ಶ್ರೋತ್ರ ಜಿಹ್ವಾ ಘ್ರಾಣಗಳೆಂಬ ಐದು ಜ್ಞಾನೇಂದ್ರಿಯಗಳಂತೆ, ವಾಕ್—ಪಾಣಿ—ಪಾದ—ಪಾಯು ಉಪಸ್ಥಗಳೆಂಬ ಐದು ಕರ್ಮೇಂದ್ರಿಯಗಳೂ ಜೀವನಿಗೆ ಉಪಕರಣಗಳಾದ್ದರಿಂದಲೂ, ವಾಕ್—ಪಾದಾದಿಗಳನ್ನೂ ಇಂದ್ರಿಯಗಳನ್ನಾಗಿ ಅಂಗೀಕರಿಸಿ, ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳೂ ಮನಸ್ಸು ಒಟ್ಟು ಹನ್ನೊಂದು ಇಂದ್ರಿಯಗಳು ಎಂಬುದು ಸಿದ್ಧಾನ್ತ.

ತ್ವಕ್–ಚಕ್ಷುರಾದಿಗಳು ಜ್ಞಾನೇಂದ್ರಿಯಗಳು ಐದೂ ಆತ್ಮನ ಜನನ ಮರಣಗಳಲ್ಲಿ ಅವುಗಳೊಡನೆ ಬರುವುದು ಹೋಗುವುದು ಆಗಿವೆ. ಕರ್ಮೇಂದ್ರಿಯಗಳು ಐದೂ ಶರೀರದೊಂದಿಗೆ ಉಂಟಾಗಿ, ಅದರೊಂದಿಗೆ ನಶಿಸಿ ಹೋದಾಗ್ಗೂ, ಶರೀರವಿರುವವರಿಗೂ ಜೀವನಿಗೆ ಉಪಕಾರಗಳಾದ್ದರಿಂದ, ಅವುಗಳನ್ನೂ ಇಂದ್ರಿಯಗಳೆಂದು ಹೇಳಲು ತಡೆಯಿಲ್ಲ.

**3. ಪ್ರಾಣಾಣುತ್ವಾಧಿಕರಣ**

ಸೂತ್ರ—**ಅಣವಶ್ಚ**

**ಸಂಗತಿ ಪ್ರಾಸಂಗಿಕ**

ಇಂದ್ರಿಯಗಳ ಸಂಖ್ಯೆಯನ್ನು ಶೋಧಿಸಿಯಾಯಿತು. ಆ ಪ್ರಸಂಗದಿಂದ ಅವುಗಳ ಸ್ವರೂಪ ಪರಿಮಾಣ ಚಿಂತಿಸಲ್ಪಡುತ್ತೆ.

**ಸೂತ್ರಾರ್ಥ**

(ಇಂದ್ರಿಯಗಳು) ಅಣುವಾಗಿಯೂ ಇವೆ.

**ವಿವರಣೆ**

ಇಂದ್ರಿಯಗಳು ವಿಭುವೋ, ಅಣುವೋ?—ಎಂದಲ್ಲಿ, "ಸರ್ವೇऽನನ್ತಾಃ,"—ಇಂದ್ರಿಯಗಳು, ಎಲ್ಲವೂ ಅವಧಿರಹಿತಗಳೆಂದು ಹೇಳುವುದರಿಂದ, ವಿಭುಗಳೆಂದು ಪೂರ್ವ ಪಕ್ಷ. "ಪ್ರಾಣಮನೂತ್ಕ್ರಾಮನ್ತಂ ಸರ್ವೇ ಪ್ರಾಣಾ ಅನೂತ್ಕ್ರಾಮನ್ತಿ",—ಎಂದು, ಪ್ರಾಣನು ಶರೀರವನ್ನು ಬಿಟ್ಟುಹೋಗುವಾಗ ಅದರೊಡನೆ ಸಕಲೇಂದ್ರಿಯಗಳೂ ಹೊರಟು ಬರುತ್ತವೆಯೆಂದು ಹೇಳಿರುವುದರಿಂದ ವಿಭುವಿಗೆ ಗಮನ ಸಂಭವಿಸದಾದ್ದರಿಂದ, ವಿಭುವಲ್ಲ. ಕಣ್ಣಿಗೆ ಕಾಣದುದರಿಂದಲೂ ಅವು ಅಣುಗಳು. ಅವಧಿರಹಿತವೆಂಬುದಕ್ಕೆ—ಅದನ್ನು ಉಪಾಸಿಸಿದಲ್ಲಿ ಉಪಾಸಕನಿಗೆ ಫಲ ಅನಂತವಾಗಿ ದೊರಕುವುದೆಂದರ್ಥ. ಆದ್ದರಿಂದ ಆ ಶ್ರುತಿಗೆ ವಿರೋಧವಿಲ್ಲ—ಎಂದು ಸಿದ್ಧಾನ್ತ.

ಸೂತ್ರ ೨—**ಶ್ರೇಷ್ಠಶ್ಚ**

**ಸೂತ್ರಾರ್ಥ**

ಶ್ರೇಷ್ಠಪ್ರಾಣನೆಂಬ ಪ್ರಾಣವಾಯುವೂ (ಉತ್ಪತ್ತಿಯುಳ್ಳದ್ದು.)

**ವಿವರಣೆ**

ಛಾಂದೋಗ್ಯದಲ್ಲಿ ಪ್ರಾಣಸಂವಾದವೆಂಬ ಪ್ರಕರಣ ವಿಶೇಷದಲ್ಲಿ, ಶರೀರಸಿತ್ಥಿಗೆ ಮುಖ್ಯ ಹೇತುವಾದ್ದರಿಂದ ಶ್ರೇಷ್ಠವೆಂಬುದಾಗಿ ಮುಖ್ಯಪ್ರಾಣ ನಿರ್ಣೀತವಾಗಿದೆ-

"ಆನೀದವಾತಗ್ಂ ಸ್ವಧಯಾತದೇಕಂ"—ಎಂದು ಮಹಾ ಪ್ರಳಯ ಸಮಯದಲ್ಲಿ ಕಾರ್ಯಭೂತವಾದ ಪ್ರಾಣನು ಇರುವುದರಿಂದ, "ಏತಸ್ಮಾಜ್ಜಾಯತೇ..."—ಎಂದು ಹೇಳಿರುವ ಜನ್ಮ ಶ್ರವಣ, ಜೀವನ ಜನ್ಮ ಶ್ರವಣದಂತೆ ಉಪಪನ್ನವಾಗುವುದರಿಂದ, ಅದು ಹುಟ್ಟುವುದಿಲ್ಲ—ಎಂಬುದು ಇಲ್ಲಿಯ ಆಶಂಕೆ.

ಸೃಷ್ಟಿಗೆ ಮುಂಚೆ ಏಕತ್ವವನ್ನು ಹೇಳಿರುವುದೇ ಮುಂತಾದುದು ವಿರೋಧ ವಾಗುವುದರಿಂದ. "ಏತಸ್ಮಾಜ್ಜಾಯತೇ ಪ್ರಾಣಃ,"—ಎಂದು ಪೃಥಿವ್ಯಾದಿಗಳಿಗೆ ತುಲ್ಯವಾದ ಉತ್ಪತ್ತಿ ಶ್ರುತವಾಗಿರುವುದರಿಂದಲೂ, ಉತ್ಪತ್ತಿಗೆ ನಿಷೇಧವಿಲ್ಲದುದ ರಿಂದಲೂ, ಶ್ರೇಷ್ಠಪ್ರಾಣ ಹುಟ್ಟಿಯೇ ಹುಟ್ಟುತ್ತೆಯೆಂದು ಹೇಳಿದೆ. "ಆನೀದವಾತಂ.." —ಎಂಬಲ್ಲಿ ಜೀವಸಂಬಂಧಿಯಾದ ಶ್ರೇಷ್ಠಪ್ರಾಣನೆಂಬುದು ಅಭಿಪ್ರಾಯವಲ್ಲ. ಪರ ಬ್ರಹ್ಮವೊಂದೇ ಇರುವುದೆಂದು ಅದರ ಅಭಿಪ್ರಾಯ.—ಎಂದು ಶಂಕಾ ಪರಿಹಾರ.

## 4. ವಾಯುಕ್ರಿಯಾಧಿಕರಣ

ಸೂತ್ರ—**ನ ವಾಯುಕ್ರಿಯೇ ಪೃಥಗುಪದೇಶಾತ್**

**ಸಂಗತಿ**

ಶ್ರೇಷ್ಠಪ್ರಾಣವೂ ಉತ್ಪಾದ್ಯವೆನ್ನುವುದು ಪೂರ್ವೋಕ್ತ ನ್ಯಾಯದಿಂದ ಸಿದ್ಧವಾಗಿ ದ್ದಾಗ್ಯೂ, ಅದರ ಸ್ವರೂಪ ವಿಶೇಷವು ಇಲ್ಲಿ ಪ್ರಸಂಗಾತ್ ಚಿಂತಿಸಲ್ಪಡುತ್ತೆ.

**ಸೂತ್ರಾರ್ಥ**

[ಪೃಥಗುಪದೇಶಾತ್] = (ವಾಯುವಿಗಿಂತ) ಬೇರೆಯಾಗಿ ಹೇಳುವುದರಿಂದ [ವಾಯುಕ್ರಿಯೇ,ನ] = (ಪ್ರಾಣ) ಕೇವಲ ವಾಯುವಾಗಿಯೂ, ಕೇವಲ ಕ್ರಿಯೆಯಾ ಯಾಗಿಯೂ ಆಗದು.

**ವಿವರಣೆ**

ಪ್ರಾಣನೆನ್ನುವುದು ವಾಯುವೆ? ಅಥವಾ ವಾಯುವಿನ ಕ್ರಿಯಾ ವಿಶೇಷವೆ? ಅಥವಾ ವಾಯು ವಿಶೇಷವೆ?—ಎಂದು ಸಂಶಯ.

''ಯಃಪ್ರಾಣಸ್ಸವಾಯುಃ''—ಎಂದು ಪ್ರಾಣವೆಂಬುದು ವಾಯುವೆಂದು ಹೇಳು ವುದರಿಂದ, ವಾಯುವೇ ಪ್ರಾಣವೆಂದು ಕೆಲವರೂ, ಮಿಕ್ಕ ವಾಯುಗಳಲ್ಲಿ ಪ್ರಾಣನೆಂಬ ವ್ಯವಹಾರ ಇಲ್ಲದ್ದರಿಂದಲೂ, ಉಸಿರು ತೆಗೆದುಕೊಳ್ಳುವುದು, ಬಿಡುವುದೂ ಆದ ವಾಯುವಿನ ಕ್ರಿಯೆಯೇ ಪ್ರಾಣನೆಂದು, ವ್ಯವಹರಿಸುವುದರಿಂದಲೂ, ವಾಯುವಿನ ಕ್ರಿಯೆಯೇ ಪ್ರಾಣನೆಂದು ಕೆಲವರು ಪೂರ್ವಪಕ್ಷ ಮಾಡಿದ್ದಾರೆ.

ಇದನ್ನು ನಿರಸನ ಮಾಡುತ್ತಾರೆ—''ಏತಸ್ಮಾಜ್ಜಾಯತೇ ಪ್ರಾಣೋಮನಸ್ಸರ್ವೇಽ ನ್ದ್ರಿಯಾಣಿಚ ।......ವಾಯುಃ'', —ಎಂದು ಪರಮಪುರುಷನಿಂದ ಪ್ರಾಣನೂ ವಾಯುವೂ ಉಂಟಾಗುವುವೆಂದು ವಾಯುವನ್ನೂ ಪ್ರಾಣವನ್ನೂ ಬೇರೆಬೇರೆಯಾಗಿ ಹೇಳಿರುವುದರಿಂದ, ಪ್ರಾಣನೆಂಬುದು ಕೇವಲ ವಾಯುವಲ್ಲ. ವಾಯುವಿನ ಕ್ರಿಯೆ ಯಾಗಬಹುದೋ? ಎಂದಲ್ಲಿ, ಹಿಂದೆ ತೇಜಸ್ಸು ಮುಂತಾದುದನ್ನು ಹೇಳಿ ಅನಂತರ ಅವುಗಳ ಕ್ರಿಯೆಯೂ ಉಂಟಾಗುವುದೆಂದು ಹೇಳದುದರಿಂದ, ತೇಜಸ್ಸನ್ನು ಹೇಳಿ ದಾಗಲೇ ಅದರ ಕ್ರಿಯೆಯೂ ಸಿದ್ಧವೆಂಬುದರ ಹಾಗೆ ಇಲ್ಲಿಯೂ ವಾಯುವನ್ನು ಹೇಳಿದ ಮಾತ್ರವೇ ಸಾಕಾಗಿರಲು ಅದರ ಕ್ರಿಯೆಯಾದ ಪ್ರಾಣನನ್ನು ಹೇಳಬೇಕಾದುದಿಲ್ಲ. ಹೀಗಿರುವಲ್ಲಿ ಇಲ್ಲಿ ಬೇರೆಯಾಗಿ ಹೇಳಿದ್ದು ಪ್ರಾಣನು ವಾಯುವಿನ ಕ್ರಿಯೆ ಅಲ್ಲವೆಂಬುದನ್ನು ಸ್ಥಾಪಿಸುವುದು. ಆದ್ದರಿಂದ ಆ ಎರಡು ಪಕ್ಷಗಳೂ ಅಲ್ಲ. ಉಚ್ಛ್ವಾಸ—ನಿಶ್ವಾಸ ರೂಪ ವ್ಯಾಪಾರವುಳ್ಳ ವಾಯು ವಿಶೇಷವೇ ಪ್ರಾಣನೆಂಬುದು ಸಿದ್ಧಾಂತ. ಅಂದರೆ, ಉಚ್ಛ್ವಾಸ-ನಿಶ್ವಾಸಾದಿಯಲ್ಲಿಯೂ ಪ್ರಾಣ ಚಲಿಸುತ್ತದೆ—ಎಂದು ಕ್ರಿಯೆಯುಳ್ಳ ದ್ರವ್ಯದಲ್ಲಿಯೇ ಪ್ರಾಣಶಬ್ದ ಪ್ರಸಿದ್ಧವಾಗಿರುವುದರಿಂದ ಅದು ಕ್ರಿಯಾ ಮಾತ್ರವಲ್ಲ. ''ಯಃಪ್ರಾಣಸ್ಸ ವಾಯುಃ''—ಎಂಬುದಾದರೋ—ವಾಯುವೇ ಅವಸ್ಥಾಂತರಾಪನ್ನವಾದ ಪ್ರಾಣ. ತೇಜಃಪ್ರಭೃತಿಗಳಂತೆ ತತ್ತ್ವಾಂತರವಲ್ಲವೆಂದು ಜ್ಞಾಪಿಸುವುದಕ್ಕಾಗಿ.

ಸೂತ್ರ ೨—**ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ**

**ಸೂತ್ರಾರ್ಥ**

[ತತ್ಸಹಶಿಷ್ಟ್ಯಾದಿಭ್ಯಃ] = ಆ ಚಕ್ಷುರಾದಿಗಳೊಡನೆ ಹೇಳುವುದರಿಂದ, [ಚಕ್ಷು ರಾದಿವತ್]ಚಕ್ಷುಸ್ ಮುಂತಾದುವುಗಳಂತೆ (ಪ್ರಾಣನೂ ಜೀವನಿಗೆ ಉಪಕರಣ)

**ವಿವರಣೆ**

ಆದರೆ ಪ್ರಾಣನು ವಾಯುವಿಗಿಂತ ಭಿನ್ನನಾಗಿ ಆಕಾಶಾದಿಗಳಂತೆ ಬೇರೆ ಭೂತವೋ? —ಎಂದಲ್ಲಿ ಆಗದು. ಪ್ರಾಣನೆಂಬುದು ಪಂಚಭೂತಗಳಲ್ಲಿ ಒಂದಾದ ವಾಯುವಿನಲ್ಲಿಯೇ ಸೇರಿದ್ದು. ಆ ವಾಯುವೇ ಉಚ್ಛ್ವಾಸ-ನಿಶ್ವಾಸ ರೂಪ ಕ್ರಿಯೆಯುಳ್ಳದ್ದಾಗಿ, ಜೀವನಿಗೆ ಚಕ್ಷುರಾದಿ ಇಂದ್ರಿಯಗಳಂತೆ ಉಪಕರಣವಾಗಿರುವುದು. ಪ್ರಾಣನಿಗೂ ಉಪಕರಣಗಳಾಗುವ ಮಿಕ್ಕ ಇಂದ್ರಿಯಗಳಿಗೂ ನಡೆದ ಸಂವಾದವನ್ನು ಹೇಳುವ ಪ್ರಕರಣದಲ್ಲಿ, ಪ್ರಾಣನನ್ನು ಇಂದ್ರಿಯಗಳೊಡನೆ ಸಮಾನವಾಗಿ ಹೇಳಿರುವುದರಿಂದ, ಇದೂ ಜೀವನಿಗೆ ಉಪಕರಣವೆಂಬುದು ಸಿದ್ಧ.

ಸೂತ್ರ ೩—**ಅಕರಣತ್ವಾಚ್ಚ ನ ದೋಷಸ್ತಥಾಹಿ ದರ್ಶಯತಿ**

**ಸೂತ್ರಾರ್ಥ**

[ಅಕರಣತ್ವಾತ್] = ಜೀವನಿಗೆ ಉಪಕಾರವೆಸಗುವ ವ್ಯಾಪಾರವುಳ್ಳದಾಗದ್ದರಿಂದ (ಉಂಟಾದ) [ದೋಷಃ] = (ಪ್ರಾಣ ಜೀವನಿಗೆ ಉಪಕರಣವಲ್ಲವೆಂಬ) ದೋಷವು [ನ] = ಬಾರದು. [ತಥಾಹಿ] = ಜೀವನಿಗೆ ಪ್ರಾಣ ಉಪಕಾರವೆಸಗುವುದೆಂಬುದನ್ನು [ದರ್ಶಯತಿ] = ವೇದ ತಿಳಿಸುತ್ತೆ.

**ವಿವರಣೆ**

ಚಕ್ಷುರಾದಿಗಳು ಜೀವನಿಗೆ ಜ್ಞಾನವನ್ನುಂಟುಮಾಡುವುವು. ವಾಗಾದಿಗಳು ಅವನಿಗೆ ಶಬ್ದವನ್ನು ಉಚ್ಚರಿಸುವುದು, ನಡೆಯುವುದು ಮುಂತಾದ ವ್ಯಾಪಾರಗಳನ್ನು ಮಾಡಿಸುವುದು. ಅದರಂತೆ ಪ್ರಾಣನು ಆತ್ಮನಿಗೆ ಒಂದು ಪ್ರಯೋಜನವನ್ನೂ ಮಾಡದೆ ಇದು ಉಪಕರಣವಾಗದು ಎಂದಲ್ಲಿ, ಜೀವನಿಗೆ ಉಪಕರಣಗಳಾದ ಶರೀರವೂ ಇಂದ್ರಿಯಗಳೂ ಪ್ರಾಣವಾಯುವಿನಿಂದಲೇ ಧರಿಸಲ್ಪಟ್ಟಿವೆ. ಪ್ರಾಣವಿಲ್ಲದಿದ್ದಲ್ಲಿ ಅವು ನಶಿಸಿ ಹೋಗುಗವುವು. ಆದ್ದರಿಂದ ಅವುಗಳಿಗಿಂತ ಪ್ರಾಣ ಆತ್ಮನಿಗೆ ವಿಶೇಷವಾದ ಉಪಕಾರವನ್ನು ಮಾಡುವುದರಿಂದ, ಇದು ಉಪಕರಣವಾಗಲು ಕೊರತೆಯಿಲ್ಲ. ''ಯಸ್ಮಿನ್ ಉತ್ಕ್ರಾನ್ತೇ ಇದಂ ಶರೀರಂಪಾಪಿಷ್ಠತರಮಿವ ದೃಶ್ಯತೇ ಸ ಏವ ಶ್ರೇಷ್ಠಃ'',—(ಎಂದರೆ, ಯಾವುದು ಬಿಟ್ಟುಹೋದರೆ. ಶರೀರ ವಿಕಾರ ಹೊಂದುವುದೋ)—ಎಂದು ಪ್ರಾಣನೇ ಶರೀರಕ್ಕೆ ಧಾರಕವೆಂದು ವೇದದಲ್ಲಿ ಹೇಳಿದೆ.

ಸೂತ್ರ ೪—**ಪಂಚವೃತ್ತಿರ್ಮನೋವದ್ವ್ಯಪದಿಶ್ಯತೇ**

**ಸೂತ್ರಾರ್ಥ**

[ಪಂಚವೃತ್ತಿಃ] = ಐದು ವಿಧ ವ್ಯಾಪಾರಗಳುಳ್ಳ ಪ್ರಾಣನೇ, [ಮನೋವತ್] = ಮನಸ್ಸಿನಂತೆ, [ವ್ಯಪದಿಶ್ಯತೇ] = ಐದು ವಿಧವಾಗಿ ಹೇಳಲ್ಪಡುವುದು.

**ವಿವರಣೆ**

ಅಪಾನ, ವ್ಯಾನ ಮುಂತಾದ ವಾಯುಗಳೂ ಈ ಪ್ರಾಣ ವಾಯುವಿನಲ್ಲೆಯೇ ಸೇರಿರತಕ್ಕವು. ಇದಕ್ಕೆ ಪ್ರಾಣ ಅಪಾನ, ವ್ಯಾನ, ಸಮಾನ, ಉದಾನ, ಅಂದರೆ, ಉಸಿರನ್ನು

ಬಿಡುವುದು, ಉಸಿರಾಡುವುದು, ಉಸಿರನ್ನು ತಡೆಹಿಡಿದಿಡುವುದೂ, ಶರೀರದೊಳಗೆಲ್ಲಾ ವ್ಯಾಪಿಸಿರುವುದು, ಮೇಲಕ್ಕೆ ಏರುವುದು. ಮುಂತಾದ ಐದು ವಿಧವಾದ ವ್ಯಾಪಾರ ಗಳುಂಟು. ಅವುಗಳೊಳಗೆ ಒಂದೊಂದು ವ್ಯಾಪಾರವನ್ನು ಹೊಂದುವಾಗಲೂ, ಒಂದೊಂದು ನಾಮವನ್ನು ಹೊಂದುವುದು. ಇದಕ್ಕೆ ದೃಷ್ಟಾನ್ತ—ಮನಸ್ಸು ಒಂದೇ ಆದರೂ, ಅದು ಒಂದೊಂದು ವಿಕಾರವನ್ನು ಹೊಂದುವಾಗ, ಕಾಮ, ಸಂಕಲ್ಪ,— ಮುಂತಾದ ನಾಮಗಳನ್ನು ಹೊಂದುವುದು. ಅದರಂತೆಯೇ ಇಲ್ಲಿಯೂ.

## 5. ಶ್ರೇಷ್ಠಾಣುತ್ವಾಧಿಕರಣ

## ಅಣುಶ್ಚ

### ಪ್ರಾಸಂಗಿಕ ಸಂಗತಿ

'ಶ್ರೇಷ್ಠಶ್ಚ"—ಎಂಬಲ್ಲಿ ಶ್ರೇಷ್ಠಪ್ರಾಣನೂ ಬ್ರಹ್ಮಕಾರ್ಯವೆಂಬುದು ತುಲ್ಯ ನ್ಯಾಯ ಸಿದ್ಧವೆಂದು ಪ್ರತಿಪಾದಿಸಿದರು. ಅದಕ್ಕೆ, "ನ ವಾಯುಕ್ರಿಯೇ ಪೃಥಗುಪ ದೇಶಾತ್"—ಎಂಬಲ್ಲಿ ಸ್ವರೂಪ ವಿಶೇಷ ವರ್ಣಿತವಾಯಿತು. ಈಗ 'ಅಣು'—ಎಂಬುದು ವರ್ಣಿಸಲ್ಪಡುತ್ತೆ.

### ಸೂತ್ರಾರ್ಥ

ಪ್ರಾಣನು ಅಣುವೂ ಆಗಿದೆ. ಈ ಪ್ರಾಣ ಅನಂತ, ಅಂದರೆ. ಅವಧಿಯಿಲ್ಲದ್ದು. ಎಂದು ಹೇಳುವುದರಿಂದ, ಇದು ವಿಭುವೆಂದು ಕೆಲವರು ಪೂರ್ವಪಕ್ಷ ಮಾಡಿದರು. "ಪ್ರಾಣೋನೂತ್ಕ್ರಾಮತಿ"—ಎಂದು ಜೀವನು ಶರೀರದಲ್ಲಿಂದ ಹೊರ ಹೊರಟು ಹೋಗುವಾಗ, ಪ್ರಾಣನೂ ಹೊರ ಹೊರಡುವುದು—ಎಂದು ಹೇಳಿರುವುದರಿಂದ, ವಿಭುವಾದಲ್ಲಿ ಹೊರ ಹೊರಡುವಿಕೆ ಕೂಡದಾದ್ದರಿಂದ. ಪ್ರಾಣ ಅಣು ಸ್ವರೂಪನೆಂಬುದು ಸಿದ್ಧಾನ್ತ.

## 6. ಜ್ಯೋತಿರಾದ್ಯಧಿಷ್ಠಾನಾಧಿಕರಣ

## ಸೂತ್ರ—ಜ್ಯೋತಿರಾದ್ಯಧಿಷ್ಠಾನಂತುತದಾ ಮನನಾತ್ ಪ್ರಾಣವತಾ ಶಬ್ದಾತ್

### ಸಂಗತಿ

ಶ್ರೇಷ್ಠಪ್ರಾಣ ಸಹಿತವಾದ ಪ್ರಾಣ (ಇಂದ್ರಿಯ) ಗಳ ಸಂಖ್ಯೆ ಮತ್ತು ಪರಿಮಾಣ ವನ್ನು ಹೇಳಿಯಾದ ನಂತರ, ಅವುಗಳಲ್ಲಿ ಜೀವನ ಮತ್ತು ಅಗ್ನ್ಯಾದಿ ದೇವತೆಗಳ ಅಧಿಷ್ಠಾನವು ಸ್ವಾಧೀನತೆಯಿಂದಲೇ ಅಥವಾ ಪರಮಾತ್ಮನ ಅಧೀನತೆಯಿಂದಲೇ—ಎಂದು ಪ್ರಸಂಗಾತ್ ಸಂಗತಿ.

### ಸೂತ್ರಾರ್ಥ

[ತದಾಮನನಾತ್] = ಆ ಪರಮಾತ್ಮನ ಸಂಕಲ್ಪದಿಂದ, [ಪ್ರಾಣವತ್] = ಪ್ರಾಣ ನಿಗೆ ಅಧಿಷ್ಠಾತೃವಾದ ಜೀವನೊಂದಿಗೆ, [ಜ್ಯೋತಿರಾದ್ಯಧಿಷ್ಠಾನಂ] = ಅಗ್ನ್ಯಾದಿಗಳಿಗೆ ಇಂದ್ರಿಯಾಧಿಷ್ಠಾನವು (ಉಂಟು) [ಶಬ್ದಾತ್] = ವೇದವಾಕ್ಯದಿಂದ (ಈ ಅರ್ಥ ನಿಶ್ಚಯಿಸಲ್ಪಡುವುದು).

**ವಿವರಣೆ**

"ಯೋಽಗ್ನೌ ತಿಷ್ಠನ್ ಅಗ್ನಿಮನ್ತರೋಯಮಯತಿ",—ಎಂದು ಪರಮಾತ್ಮನು ಅಗ್ನಿ ಮುಂತಾದುವುಗಳಲ್ಲಿದ್ದುಕೊಂಡು ,ಆಯಾ ಕಾರ್ಯಗಳಲ್ಲಿ ನಿಯಮಿಸುತ್ತಾನೆಂದು ಹೇಳುವುದರಿಂದ, ಜೀವನೂ ಅಗ್ನ್ಯಾದಿಗಳೂ ಪರಮಾತ್ಮನ ಸಂಕಲ್ಪದಿಂದಲೇ ಇಂದ್ರಿಯಗಳಿಗೆ ಅಧಿಷ್ಠಾತೃವಾಗುತ್ತಾರೆ—ಎಂದು ನಿಶ್ಚಯಿಸಲ್ಪಡುವುದು. ಜೀವನೂ ಅಗ್ನ್ಯಾದಿ ದೇವತೆಗಳೂ ಇಂದ್ರಿಯಗಳಿಗೆ ಅಧಿಷ್ಠಾನ ಮಾಡುವಾಗ ಪರಮಾತ್ಮನ ನಿಯಮನದಿಂದ ಮಾಡುವರೇ ಹೊರತು, ತಾವೇ ಸ್ವತಂತ್ರರಾಗಿ ಇಂದ್ರಿಯಗಳನ್ನು ಅಧಿಷ್ಠಿಸಲು ಶಕ್ತರಲ್ಲವೆಂದು ತಾತ್ಪರ್ಯ.

ಸೂತ್ರ ೨—**ತಸ್ಯ ಚ ನಿತ್ಯತ್ವಾತ್**

**ಸೂತ್ರಾರ್ಥ**

[ ತಸ್ಯ, ಚ] = ಆ ಪರಮಾತ್ಮನ ನಿಯಮನಕ್ಕೂ [ನಿತ್ಯತ್ವಾತ್] = ನಿತ್ಯತ್ವವುಂಟಾದ್ದರಿಂದ (ಪರಮಾತ್ಮ ಇವುಗಳನ್ನು ನಿಯಮಿಸುವುದು ಅವನಿಗೆ ಸ್ವಭಾವಸಿದ್ಧವಾದ್ದರಿಂದ, ಮಿಕ್ಕ ಕಾರ್ಯಗಳೂ ಅವನ ನಿಯಮನದಿಂದಲೇ ನಡೆಯುವುದೆಂಬುದು ಸಿದ್ಧವೆಂದು ತಾತ್ಪರ್ಯ.)

## 7. ಇಂದ್ರಿಯಾಧಿಕರಣ

ಸೂತ್ರ —**ತ ಇನ್ದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್**

**ಸೂತ್ರಾರ್ಥ**

[ಶ್ರೇಷ್ಠಾತ್] = ಶ್ರೇಷ್ಠವಾದ ವಾಯುವಿಗಿಂತ [ಅನ್ಯತ್ರ] = ಬೇರೆಯಾದ ಇಂದ್ರಿಗಳಲ್ಲಿಯೇ, [ತದ್ವ್ಯಪದೇಶಾತ್] ಇಂದ್ರಿಯ ವ್ಯವಹಾರ ಕಾಣುವುದರಿಂದ [ತೇ] = ಪ್ರಾಣವಾಯುವಿಗಿಂತ ಭಿನ್ನವಾದವುಗಳೇ [ಇಂದ್ರಿಯಾಣಿ] = ಇಂದ್ರಿಯಗಳು.

**ವಿವರಣೆ**

ಪ್ರಾಣನೆಂದು ಹೇಳಲ್ಪಟ್ಟವುಗಳೆಲ್ಲವೂ ಇಂದ್ರಿಯಗಳೋ ಅಥವಾ ಅವುಗಳಲ್ಲಿ ಕೆಲವು ಮಾತ್ರ ಇಂದ್ರಿಯಗಳೊ?—ಎಂದು ಸಂಶಯ. ಪ್ರಾಣನೆಂಬ ಶಬ್ದವೆಲ್ಲವೂ ಏಕರೂಪವಾದ್ದರಿಂದ, ಆಯಾ ಶಬ್ದದಿಂದ ಹೇಳಲ್ಪಟ್ಟ ಚಕ್ಷುರಾದಿಗಳೂ, ವಾಗಾದಿಗಳೂ ಮನಸ್ಸು ಮುಖ್ಯಪ್ರಾಣವೂ ಆದ ಇವೆಲ್ಲವೂ ಇಂದ್ರಿಯಗಳೆಂದು ಪೂರ್ವಪಕ್ಷ.

ಪ್ರಾಣವಾಯುವನ್ನು ಬಿಟ್ಟು ಮಿಕ್ಕ ಚಕ್ಷುರಾದಿಗಳಲ್ಲಿಯೇ ಇಂದ್ರಿಯವೆಂಬ ವ್ಯವಹಾರವುಂಟಾಗಿರುವುದರಿಂದಲೂ, ಇಂದ್ರಿಯಗಳು ಹನ್ನೊಂದು ಎಂದು ಲೆಕ್ಕಿಸಲ್ಪಟ್ಟಿರುವುದರಿಂದಲೂ, ಪ್ರಾಣವಾಯುವಿಗೆ ಇಂದ್ರಿಯವೆಂಬ ಹೆಸರಿಲ್ಲವೆಂಬುದು ಸಿದ್ಧಾನ್ತ.

ಸೂತ್ರ ೨—**ಭೇದಶ್ರುತೇರ್ವೈಲಕ್ಷಣ್ಯಾಚ್ಚ**

**ಸೂತ್ರಾರ್ಥ**

[ಭೇದಶ್ರುತೇಃ] = ("ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿಚ"—ಎಂದು ಇಂದ್ರಿಯಗಳನ್ನೂ ಪ್ರಾಣನನ್ನೂ) ಬೇರೆ ಬೇರೆಯಾಗಿ ಹೇಳು

ವುದರಿಂದಲೂ, [ವೈಲಕ್ಷಣ್ಯಾತ್, ಚ] = (ನಿದ್ರೆಯಲ್ಲಿ ಇಂದ್ರಿಯಗಳಿಲ್ಲದಿದ್ದಾಗ್ಲೂ, ಪ್ರಾಣನಿರುವುದರಿಂದ ಇಂದ್ರಿಯ ವ್ಯಾಪಾರಗಳಿಗಿಂತ ಪ್ರಾಣನ ವ್ಯಾಪಾರ) ವಿಲಕ್ಷಣ ವಾದ್ದರಿಂದಲೂ, (ಪ್ರಾಣ ಇಂದ್ರಿಯಗಳಿಗಿಂತ ಬೇರೆ).

## 8. ಸಂಜ್ಞಾಮೂರ್ತಿಕ್ಲೃಪ್ತ್ಯಧಿಕರಣ

### ಸೂತ್ರ—ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ಕುರ್ವತ ಉಪದೇಶಾತ್

### ಸಂಗತಿ

ಮೂರನೇ ಪಾದದಿಂದ ಹಿಡಿದು ಇಲ್ಲಿಯವರಿಗೆ ಒಂದು ಪೇಟಿಕೆ. ಅಲ್ಲಿ ಭೂತೇಂದ್ರಿಯಗಳ ಸಮಷ್ಟಿ ಸೃಷ್ಟಿನಿರೂಪಣ. ಇಲ್ಲಿ ವ್ಯಷ್ಟಿಸೃಷ್ಟಿನಿರೂಪಣ —ಎಂದು ಪೇಟಿಕಾ ಸಂಗತಿ.

ವ್ಯಷ್ಟಿಯು ಉಪಕರಣವಾದ್ದರಿಂದ ಆ ವ್ಯಷ್ಟಿಸೃಷ್ಟಿ ನಿರೂಪಣವೆಂದು ಪಾದ ಸಂಗತಿ. ಮೂರನೆಯ ಪಾದದಲ್ಲಿ ಹೇಳಿದ ಸಮಷ್ಟಿಸೃಷ್ಟಿ ನಿರೂಪಣದಿಂದ ಈ ಅಧಿಕರಣ ದಲ್ಲಿ ವ್ಯಷ್ಟಿಸೃಷ್ಟಿನಿರೂಪಣಕ್ಕೆ ಸಂಗತಿ. ಪ್ರಾಣಕಾರ್ಯತ್ವ ಪ್ರತಿಪಾದಕವಾದ ಈ ಪಾದದ ಮೊದಲನೆಯ ಪ್ರಾಣೋತ್ಪತ್ತ್ಯಧಿಕರಣದೊಡನೆ ವ್ಯಷ್ಟಿಸೃಷ್ಟಿನಿರೂಪಣ ಪರವಾದ ಈ ಕೊನೆಯ ಅಧಿಕರಣಕ್ಕೆ ಸಾಕ್ಷಾತ್ ಸಂಗತಿ– ನಡುವೆ ಇರುವ ಅಧಿಕರಣಗಳು ಪ್ರಸಂಗಾತ್ ಬಂದುವು..

### ಸೂತ್ರಾರ್ಥ

[ ತ್ರಿವೃತ್ಕುರ್ವತಃ] = ತ್ರಿವೃತ್ಕರಣವನ್ನು ಮಾಡುವವನಿಗೇ [ಉಪದೇಶಾತ್] = ನಾಮರೂಪಗಳನ್ನು ಮಾಡುವುದನ್ನು ಹೇಳುವುದರಿಂದ, [ಸಂಜ್ಞಾಮೂರ್ತಿಕ್ಲೃಪ್ತಿಃ] = ನಾಮರೂಪಗಳನ್ನು ಮಾಡುವಿಕೆಯು (ವ್ಯಷ್ಟಿಸೃಷ್ಟಿ) (ಪರಮಾತ್ಮನಿಂದಲೇ ಮಾಡಲ್ಪಟ್ಟದ್ದು).

### ವಿವರಣೆ

ಸಮಷ್ಟಿಸೃಷ್ಟಿಯೆಂದೂ ವ್ಯಷ್ಟಿಸೃಷ್ಟಿಯೆಂದೂ ಸೃಷ್ಟಿ ಎರಡು ವಿಧ. ಪ್ರಕೃತಿ ಯಿಂದ ಮಹತ್, ಅಹಂಕಾರ, ಪಂಚತನ್ಮಾತ್ರೆ, ಆಕಾಶಾದಿ ಮಹಾಭೂತಗಳು ಇವುಗಳ ಸೃಷ್ಟಿ ಸಮಷ್ಟಿಸೃಷ್ಟಿ. ಅಂಡದಲ್ಲಿರುವ ದೇವಮನುಷ್ಯಾದಿಗಳನ್ನು ಸೃಷ್ಟಿಸುವುದು ವ್ಯಷ್ಟಿಸೃಷ್ಟಿ. ಇದುವರಿಗೆ ಸಮಷ್ಟಿ ಸೃಷ್ಟಿಯನ್ನು ಪರಮಾತ್ಮನೇ ಮಾಡುತ್ತಾನೆಂದು ಹೇಳಿತು. ''ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ'',— ಎಂದು ''ನಾಮರೂಪಗಳನ್ನು (ವ್ಯಷ್ಟಿಸೃಷ್ಟಿಯನ್ನು) ಮಾಡುತ್ತೇನೆ. ಅದಕ್ಕಾಗಿ ಪಂಚ ಭೂತಗಳನ್ನು ಪಂಚೀಕರಣ ಮಾಡುತ್ತೇನೆ''—ಎಂದು ಹೇಳಿರುವುದರಿಂದ, ಪಂಚೀ ಕರಣವನ್ನು ಮಾಡಿದವನೂ, ಜಗತ್ಸೃಷ್ಟಿಯನ್ನು ಮಾಡಿದವನೂ ಒಬ್ಬನೇ ಎಂದು ತೋರುವುದು. ಇಲ್ಲಿ ತ್ರಿವೃತ್ಕರಣವನ್ನು ಹೇಳಿರುವುದು ಪಂಚೀಕರಣಕ್ಕೂ ಉಪಲಕ್ಷಣ- ಪಂಚೀಕರಣವನ್ನು ಮಾಡಿದವನು ಯಾರು?—ಎಂದಲ್ಲಿ, ಪಂಚಭೂತಗಳನ್ನು ಸೃಷ್ಟಿಸಿದ ಮೇಲೆ, ಅವುಗಳನ್ನು ಒಂದು ಕಾರ್ಯವನ್ನೂ ಮಾಡಲು ಯೋಗ್ಯತೆಯಿಲ್ಲ

ದುದನ್ನು ಕಂಡು ಅನಂತರ ಪಂಚೀಕರಣವನ್ನು ಮಾಡಿ, ಅದರಿಂದ ಅಂಡವನ್ನೂ ಅದರಲ್ಲಿ ಬ್ರಹ್ಮನನ್ನೂ ಪರಮಪುರುಷ ಸೃಷ್ಟಿಸಿದನು. ಆದ್ದರಿಂದ ಆ ಪರಮಪುರುಷನೇ ಜೀವನಾದ ಬ್ರಹ್ಮನಿಗೆ ಅಂತರ್ಯಾಮಿಯಾಗಿದ್ದುಕೊಂಡು ಜಗತ್ತನ್ನು ಸೃಷ್ಟಿಸಿದನು —ಎಂದು ಸಿದ್ಧಾಂತ.

ಸೂತ್ರ ೨—**ಮಾಂಸಾದಿ ಭೌಮಂ ಯಥಾಶಬ್ದಮಿತರಯೋಃಶ್ಚ**

**ಸೂತ್ರಾರ್ಥ**

[ಮಾಂಸಾದಿ] = ಮಾಂಸ ಮೊದಲಾದದ್ದು [ಭೌಮಂ] = ಭೂಮಿಯಿಂದ ವೃದ್ಧಿ ಹೊಂದಿಸಲ್ಪಟ್ಟಿತು—[ಇತರಯೋಃ, ಚ] = ಮಿಕ್ಕ ಎರಡಕ್ಕೂ [ಯಥಾಶಬ್ದಂ] = ("ಆಪಃ ಪೀತಾಃ")—ಇತ್ಯಾದಿಯಾಗಿ ಹೇಳಿದ ಶಬ್ದದ ಪ್ರಕಾರ (ಜಲದಿಂದಲೂ ತೇಜಸ್ಸಿನಿಂದಲೂ ವೃದ್ಧಿಪಡಿಸಲ್ಪಟ್ಟಿರುವುದು ಎಂದು ಅರಿಯುವುದು).

**ವಿವರಣೆ**

ಅನ್ನಮಶಿತಂತ್ರೇಧಾ ವಿಧೀಯತೇ"—ಎಂದು ಉಪಕ್ರಮಿಸಿ, ಭುಜಿಸಲ್ಪಟ್ಟ ಅನ್ನದಲ್ಲಿ ಸ್ಥೂಲ ಭಾಗ ಮಲವಾಗಿಯೂ, ಮಧ್ಯಭಾಗ ಮಾಂಸವಾಗಿಯೂ ಸೂಕ್ಷ್ಮಭಾಗ ಮನಸ್ಸಾಗಿಯೂ, ಜಲದಲ್ಲಿ ಸ್ಥೂಲಾಂಶ ಮೂತ್ರವಾಗಿಯೂ ಮಧ್ಯಮಾಂಶ ರಕ್ತವಾಗಿಯೂ ಸೂಕ್ಷ್ಮಾಂಶ ಪ್ರಾಣವಾಗಿಯೂ, ತೇಜಸ್ಸಿನಲ್ಲಿ ಸ್ಥೂಲಭಾಗ ಎಲುಬಾಗಿಯೂ, ಮಧ್ಯಮಭಾಗ ಮಜ್ಜೆಯಾಗಿಯೂ, ಸೂಕ್ಷ್ಮಭಾಗ ವಾಕ್ಕಾಗಿಯೂ ಪರಿಣಮಿಸುವುದೆಂದು, ಬ್ರಹ್ಮ ಸೃಷ್ಟಿಸಿದ ಈ ಲೋಕದಲ್ಲಿಯ ಪದಾರ್ಥಗಳಲ್ಲಿಯೇ ತ್ರಿವೃತ್ಕರಣವನ್ನು ಹೇಳುವುದರಿಂದ ಈ ತ್ರಿವೃತ್ಕರಣ ಬ್ರಹ್ಮನಿಗೂ ಕೂಡುವುದರಿಂದ ಈ ಜಗತ್ತನ್ನು ಬ್ರಹ್ಮನೇ ಸೃಷ್ಟಿಸಬಹುದು—ಎಂದಲ್ಲಿ,—

ಇಲ್ಲಿ ತ್ರಿವೃತ್ಕರಣವನ್ನು ಹೇಳಿಲ್ಲ. ತ್ರಿವೃತ್ಕರಣವನ್ನು ಮಾಡಿದ ಪದಾರ್ಥಗಳು ಭುಜಿಸಿದಲ್ಲಿ ಮೂರು ವಿಧವಾಗಿ ಪರಿಣಮಿಸುವುವೆಂದು ಹೇಳಿದೆ. ಇದೇ ತ್ರಿವೃತ್ಕರಣವಾದಲ್ಲಿ, ಆ ಅನ್ನ, ಜಲ, ತೇಜಸ್ಸು ಇವುಗಳನ್ನು ಮೂರಾಗಿ ವಿಭಜಿಸಿದಾಗ ಅವುಗಳಲ್ಲಿಯ ಸ್ಥೂಲಭಾಗವೆಲ್ಲವೂ ಪೃಥ್ವಿಯಾಗಿಯೂ, ಮಧ್ಯಮಭಾಗವೆಲ್ಲವೂ ಜಲವಾಗಿಯೂ, ಸೂಕ್ಷ್ಮಭಾಗವೆಲ್ಲವೂ ತೇಜೋಂಶವಾಗಿಯೂ ಆಗಬೇಕಾಗಿ ಬರುತ್ತಿತ್ತು. ಆ ವಾಕ್ಯದಲ್ಲಿ ಹಾಗೆ ಹೇಳದೆ ಮಲ ಮಾಂಸ ಮನಸ್ಸುಗಳನ್ನು ಅನ್ನವಾಗಿಯೂ ಹೀಗೆಯೇ ಮತ್ತೆರಡನ್ನೂ ಹೇಳಿರುವುದರಿಂದ ಇದು ತ್ರಿವೃತ್ಕರಣವಲ್ಲವೆಂಬುದು ಸಿದ್ಧ. ಆದ್ದರಿಂದ ಇದಕ್ಕೆ ಮುಂಚೆಯಾದುದೇ ತ್ರಿವೃತ್ಕರಣ. ಅದಕ್ಕೆ ಕರ್ತೃವಾದ ಪರಮಪುರುಷನೇ ಜಗತ್ತಿಗೂ ಕರ್ತೃವೆಂಬುದು ಸಿದ್ಧ.

ಸೂತ್ರ ೩—**ವೈಶೇಷ್ಯಾತ್ತು ತದ್ವಾದಸ್ತದ್ವಾದಃ**

**ಸೂತ್ರಾರ್ಥ**

[ವೈಶೇಷ್ಯಾತ್] = ಅಧಿಕಭಾಗವಿರುವುದರಿಂದ [ತದ್ವಾದಃ] = ಹಾಗೆ ಹೇಳಲ್ಪಡುತ್ತೆ.

**ವಿವರಣೆ**

ಸಮಸ್ತವಸ್ತುಗಳೂ ತ್ರಿವೃತ್ಕರಣವಾಗಿದ್ದಲ್ಲಿ ಸಮಸ್ತದಲ್ಲಿಯೂ ಪೃಥ್ವೀ—ಜಲ—ತೇಜಸ್ಸುಗಳು ಮೂರೂ ಇರುವುದರಿಂದ, ಒಂದನ್ನು ಪೃಥ್ವಿಯೆಂದೂ. ಒಂದನ್ನು ಜಲವೆಂದೂ ಹೇಳುವ ವಿಧ ಹೇಗೆಯೆಂದಲ್ಲಿ, ಪೃಥ್ವೀ ಜಲ ತೇಜಸ್ಸುಗಳನ್ನು ಒಂದೊಂದನ್ನೂ ನಾಲ್ಕು ನಾಲ್ಕು ಭಾಗಮಾಡಿ ಅವುಗಳಲ್ಲಿ ಎರಡೆರಡು ಭಾಗವನ್ನು ತೆಗೆದು ಒಂದೊಂದು ಭಾಗವನ್ನು ಮಿಕ್ಕ ಎರಡು ತತ್ತ್ವಗಳಲ್ಲಿಯೂ ಸೇರಿಸುವುದು ತ್ರಿವೃತ್ಕರಣ..

ಹೀಗೆ ಮಾಡಿದರೆ ಪೃಥ್ವಿಯಲ್ಲಿ ಪೃಥ್ವಿಯ ಭಾಗ ಎರಡೂ, ಜಲಭಾಗ ಒಂದೂ ತೇಜೋಭಾಗವೊಂದೂ ಇರುತ್ತೆ. ಹೀಗೆಯೇ ಮಿಕ್ಕವುಗಳಲ್ಲಿಯೂ. ಇನ್ನು ಪೃಥ್ವಿಯಲ್ಲಿ ಆ ಭಾಗ ಅಧಿಕವಾಗಿರುವುದರಿಂದ ಪೃಥ್ವಿಯೆಂದು ಹೇಳಲ್ಪಡುವುದು. ಹೀಗೆಯೇ ಮಿಕ್ಕವುಗಳಲ್ಲಿಯೂ ಕಂಡುಕೊಳ್ಳುವುದು. ಇಲ್ಲಿ "ತದ್ವಾದಃ"—ಎಂದು ಎರಡನೇ ಸಲ ಹೇಳಿದ್ದು ಅಧ್ಯಾಯ ಮುಗಿಯಿತೆಂದು ತಿಳಿಸುವುದಕ್ಕಾಗಿ.

1. ದ್ವಿತೀಯಾಧ್ಯಾಯದ ನಾಲ್ಕನೇ ಪಾದದಲ್ಲಿಯ (ಪ್ರಾಣಪಾದದಲ್ಲಿಯ) ಅಧಿಕರಣಾರ್ಥಗಳ ವಿಭಾಗ;

೧)ಇಂದ್ರಿಯಗಳ ಉತ್ಪತ್ತಿ. ೨) ಅವು ಹನ್ನೊಂದು ೩) ಅವು ಅಣು ಪರಿಮಾಣಗಳು. ೪) ಮುಖ್ಯ ಪ್ರಾಣನ ಸ್ವರೂಪ. ೫) ಆ ಮುಖ್ಯ ಪ್ರಾಣ ವಾಯುವೂ ಅಣು (ಸೂಕ್ಷ್ಮ) ೬) ಅಗ್ನ್ಯಾದಿ ದೇವತೆಗಳು ಮತ್ತು ಜೀವಾತ್ಮರು ಮುಖ್ಯಾಮುಖ್ಯ ಪ್ರಾಣಗಳಲ್ಲಿ ಅಧಿಷ್ಠಾನ ಮಾಡುವುದು ಪರಮಾತ್ಮನಿಗೆ ಅಧೀನ. ೭) ಮುಖ್ಯ ಪ್ರಾಣ ಇಂದ್ರಿಯ ವಲ್ಲ. ೮) ತೇಜೋಬನ್ನಾದಿ ಶರೀರಕನಾಗಿ ಅವುಗಳ ಕಾರ್ಯವಾದ ಪಂಚೀ ಕರಣಕ್ಕೆ ಹೇತುವಾದ (ಸಮಷ್ಟಿ ಸೃಷ್ಟಿಗೆ ಕಾರಣನಾದ) ಪರಮಪುರುಷನಿಂದಲೇ ತನ್ನ ನಾಭಿಯಲ್ಲಿ ಹುಟ್ಟಿದ ಚತುರ್ಮುಖ ಶರೀರಕನಾಗಿದ್ದುಕೊಂಡು ವ್ಯಷ್ಟಿಸೃಷ್ಟಿ (ನಾಮ ರೂಪ ವ್ಯಾಕರಣ) ನಡೆಸಲ್ಪಟ್ಟಿತು.

2. ದ್ವಿತೀಯಾಧ್ಯಾಯದ ಮೂರು ಮತ್ತು ನಾಲ್ಕನೇ ಪಾದಗಳಲ್ಲಿ ಪರ ಪಕ್ಷ ಪ್ರತಿಕ್ಷೇಪಕತ್ವ ಪ್ರಕಾರ ನಿರೂಪಣ; ಮೊದಲಿನ ಎರಡು ಪಾದಗಳಲ್ಲಿಯೇ ಪರಪಕ್ಷ ಪ್ರತಿಕ್ಷೇಪವಾಯಿತು.- ಮಿಕ್ಕ ಎರಡು ಪಾದಗಳಿಗೆ ಪ್ರತಿಕ್ಷೇಪ್ಯವಾದದ್ದು ಮತ್ತೆ ಏನು ಉಳಿದಿದೆ?—ಎಂದು ಪ್ರಶ್ನಿಸುವ ಬಾಲಕನಿಗೂ ಕೂಡ ಪ್ರತಿಕ್ಷೇಪ್ಯವಾದ ಪಕ್ಷಗಳಾವು ವೆಂಬುದನ್ನು ಕ್ರಮವಾಗಿ ಹೇಳುತ್ತಾರೆ;—

ವಿಯದಧಿಕರಣದಲ್ಲಿ— ಆಕಾಶ ನಿತ್ಯ-ವಾಯುವೀಯಾದಿ ಪರಮಾಣುಗಳೂ ನಿತ್ಯ—ಜೀವಾತ್ಮಜ್ಞಾತೃವಲ್ಲದ್ದರಿಂದ ಪಾಷಾಣದಂತೆ ಮೂಢ—ಶ್ರೋತ್ರೇಂದ್ರಿಯಾದಿಗಳಲ್ಲಿ ಆಕಾಶಸ್ವರೂಪತ್ವಾದಿಕ—ಮನಸ್ಸು ವಿಭು—ನಿತ್ಯತತ್ತ್ವಾಂತರ, ಮುಖ್ಯಾಮುಖ್ಯ ಪ್ರಾಣಗಳಲ್ಲಿ ಜೀವಾತ್ಮ ಸ್ವರೂಪತ್ವಾದಿಕ, ದೇವತಾ ಸಮೂಹದಲ್ಲಿ ಸ್ವನಿಯಾಮ್ಯ ನಿಯಮನದ ಬಗ್ಗೆ ಸ್ವತಂತ್ರಕರ್ತೃತ್ವ—ಜೀವಾತ್ಮರಿಗೂ ತಮ್ಮ ಇಂದ್ರಿಯಗಳ ಅಧಿಷ್ಠಾನದ

ಬಗ್ಗೆ ಸ್ವಾತಂತ್ರ್ಯ, ಪಿತಾಮಹನಾದ ಬ್ರಹ್ಮನಲ್ಲಿ ಸ್ವಾತಂತ್ರ್ಯದಿಂದ ನಾಮ ರೂಪವ್ಯಾಕರಣ ಕರ್ತೃತ್ವ—ಇವುಗಳನ್ನು ಹೇಳುವ ವಾದಿಗಳ ಭಂಗ—ಈ ಎರಡು ಪಾದಗಳಲ್ಲಿಯೂ ಮಾಡಲ್ಪಟ್ಟಿದೆ.

3. ಈ ಅವಿರೋಧಾಧ್ಯಾಯವೆಂಬುದು ಮೃಷಾವಾದಿ ಪಕ್ಷಕ್ಕೆ ನೇರ ವಿರುದ್ಧವೆಂದು ವ್ಯಕ್ತಪಡಿಸಿದ್ದಾರೆ;—ಅವರಿಗೆ ವ್ಯಾವಹಾರಿಕ (ಆಪಾತ) ಸತ್ಯವಾದ ತರ್ಕಗಳಿಂದ ಅವಿರೋಧವೆ?—ಅಥವಾ ಪಾರಮಾರ್ಥಿಕ ಸತ್ಯವಾದ ತರ್ಕಗಳಿಂದ ಅವಿರೋಧವೆ—ವ್ಯಾವಹಾರಿಕ ಸತ್ಯವಾದ ತರ್ಕಗಳಿಂದ ಅವಿರೋಧವೆಂದಲ್ಲಿ,—ವಸ್ತುತಃ ಅವು ಅಸತ್ಯವೇ ಆಗುವುದರಿಂದ ಪರಮಾರ್ಥತಃ ವ್ಯಾಹತಿಯೇ ಸ್ಥಾಪಿತವಾದಂತಾಗುತ್ತೆ. ಪಾರಮಾರ್ಥಿಕ ಸತ್ಯವಾದ ತರ್ಕಗಳಿಂದ ಅವಿರೋಧವೆಂದಲ್ಲಿ—ನಿರ್ವಿಶೇಷಚಿನ್ಮಾತ್ರವೇ ಸತ್ಯ—ಎಂಬ ಸ್ವಾಭಿಮಾನಕ್ಕೇ ನಿವೃತ್ತಿಯಾಗುತ್ತೆ. ಆದ್ದರಿಂದ ಈ ಅವಿರೋಧಾಧ್ಯಾಯವು ಬೌದ್ಧಬಂಧುಗಳಾದ ಮೃಷಾವಾದಿಗಳಿಗೆ ವಿರುದ್ಧ. ಹೀಗೆ ವ್ಯಾವಹಾರಿಕ ಅಥವಾ ಪಾರಮಾರ್ಥಿಕ ತರ್ಕಗಳು ಸಂಭವಿಸುವುದಿಲ್ಲವಾದ್ದರಿಂದ, ಸೂತ್ರಕಾರರಿಂದ "ತರ್ಕಾಪ್ರತಿಷ್ಠಾನಾದಪಿ'—ಎಂದು ನಿರಸ್ತವಾದ ತರ್ಕಗಳಿಂದ ನೀವು ಹೇಗೆ ಪರಪಕ್ಷ ಪ್ರತಿಕ್ಷೇಪ ಮಾಡುವಿರಿ?—ಎಂದಲ್ಲಿ, ತರ್ಕ—ಶ್ರುತಿ ವಿರುದ್ಧ ಮತ್ತು ಅವಿರುದ್ಧ—ಗಳೆಂದು ಎರಡು ವಿಧ. "ತರ್ಕಾಪ್ರತಿಷ್ಠಾನಾತ್"—ಎಂಬ ತರ್ಕಾಪ್ರತಿಷ್ಠಾವಚನ,

"ಆರ್ಷಂಧರ್ಮೋಪದೇಶಂ ಚ ವೇದಶಾಸ್ತ್ರಾವಿರೋಧಿನಾ।

ಯಸ್ತರ್ಕೇಣಾನುಸನ್ಧತ್ತೇ ಸ ಧರ್ಮಂ ವೇದ ನೇತರಃ ॥ "—ಎಂದು ಹೇಳಿರುವ ಪ್ರಕಾರದಿಂದ, ವೇದ ವಿರುದ್ಧವಾದ ತರ್ಕದ ವಿಷಯ. ವೇದವೆಂಬ ಶಾಸ್ತ್ರಕ್ಕೆ ಅವಿರುದ್ಧವಾದ ತರ್ಕದ ವಿಷಯವಲ್ಲ. ಆದ್ದರಿಂದ ಸೂತ್ರದ ಪರಿಷ್ಕಾರ "ವೇದವಿರುದ್ಧ-ತರ್ಕಾ ಪ್ರತಿಷ್ಠಾನಾದಪಿ" —ಎಂದಾಗುತ್ತೆ.]

## ತೃತೀಯಾಧ್ಯಾಯ-ಪ್ರಥಮಪಾದಃ

### ವೈರಾಗ್ಯಪಾದ 1. ತದಂತರಪ್ರತಿಪತ್ತ್ಯಧಿಕರಣ

**ಸೂತ್ರ—ತದನ್ತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನನಿರೂಪಣಾಭ್ಯಾಂ**

[ಇಲ್ಲಿ ಪಂಚಾಗ್ನಿವಿದ್ಯಾ]

**ಸಂಗತಿ**

ಪೂರ್ವದ್ವಿಕದಲ್ಲಿ (ಹಿಂದಿನ ಎರಡು ಅಧ್ಯಾಯಗಳಲ್ಲಿ) ಸಿದ್ಧ ವಿಷಯ (ಬ್ರಹ್ಮ ಸ್ವರೂಪ) ನಿರೂಪಣವಾಯಿತು. ಮುಂದಿನ ದ್ವಿಕ (೩ ಮತ್ತು ೪ನೇ ಅಧ್ಯಾಯ) ದಲ್ಲಿ ಸಾಧ್ಯ ವಿಷಯ (ಪ್ರಾಪ್ತ್ಯುಪಾಯ–ಫಲಗಳು) ನಿರೂಪಣ ಮಾಡಲ್ಪಡುತ್ತವೆಯೆಂಬುದು ದ್ವಿಕಸಂಗತಿ.

ನಾಲ್ಕನೆಯ ಅಧ್ಯಾಯದಲ್ಲಿ ನಿರೂಪಿಸಲ್ಪಡಲಿರುವ ಸಾಧ್ಯಾಂಶಕ್ಕೆ ಮುಂಚೆ—ಉತ್ಪತ್ತಿ ಕ್ರಮದಿಂದ, ಈ ಮೂರನೆಯ ಅಧ್ಯಾಯದಲ್ಲಿ ಸಾಧನ ಚಿಂತೆ ಮಾಡಲ್ಪಡುತ್ತೆಯೆಂಬುದು ಅಧ್ಯಾಯ ಸಂಗತಿ.

ಬ್ರಹ್ಮೋಪಾಸನದಲ್ಲಿ ಇಚ್ಛೆಯುಂಟಾಗುವುದಕ್ಕಾಗಿ ಉಪಾಸನಾ (ಸಾಧನ) ರಂಭಕ್ಕೆ ಅಂತರಂಗವಾದ ಉಪಾಯ—ಪ್ರಾಪ್ಯವಸ್ತುವಾದ ಬ್ರಹ್ಮಕ್ಕೆ ವ್ಯತಿರಿಕ್ತವಾದು ವುಗಳಲ್ಲಿ ವೈರಾಗ್ಯ ಮತ್ತು ಪ್ರಾಪ್ಯವಾದ ಬ್ರಹ್ಮದಲ್ಲಿಯೇ ತೃಷ್ಣೆ ಅಥವಾ ರಾಗ. "ಪರಮಾತ್ಮನಿಯೋರಕ್ತೋವಿರಕ್ತೋಪರಮಾತ್ಮನಿ"—ಎಂದು ಹೇಳಿದೆ. ಇವುಗಳಲ್ಲಿ ಪರಮಾತ್ಮ ವ್ಯತಿರಿಕ್ತ ವಿಷಯದಲ್ಲಿ ವಿರಕ್ತಿ ಹುಟ್ಟುವುದಕ್ಕಾಗಿ, ಜೀವನಿಗೆ ಲೋಕಾಂತರ ಗಳಲ್ಲಿ ಸಂಚಾರದಲ್ಲಿಯೂ, ಮತ್ತು ಜಾಗ್ರತ್—ಸ್ವಪ್ನ—ಸುಷುಪ್ತಿ—ಮೂರ್ಛೆ—ಯೆಂಬ ಅವಸ್ಥೆಗಳಲ್ಲಿಯೂ ಕೂಡ ಇರುವ ದೋಷಗಳು ಈ ಅಧ್ಯಾಯದ ಮೊದಲನೆ ಯದಾದ ಜೀವದೋಷವಾದ—ಎಂಬುದರಲ್ಲಿ ಪ್ರತಿಪಾದಿತವಾಗಿವೆ. ಅನಂತರ ಪ್ರಾಪ್ಯವಾದ ಪರಮಾತ್ಮನಲ್ಲಿ ರಕ್ತಿ ಅಥವಾ ತೃಷ್ಣೆ ಹುಟ್ಟುವುದಕ್ಕಾಗಿ ಪರಮಾತ್ಮನ ನಿರ್ದೋಷತ್ವ ಮತ್ತು ಸಮಸ್ತ ಕಲ್ಯಾಣ ಗುಣಾಕರತ್ವವೆಂಬ ಉಭಯಲಿಂಗಗಳೂ ಮುಂದಿನದಾದ ಉಭಯಲಿಂಗಪಾದದಲ್ಲಿ ಪ್ರತಿಪಾದಿತವಾಗಿವೆ.

ಮೂರನೆಯದಾದ ಗುಣೋಪಸಂಹಾರ ಪಾದದಲ್ಲಿ ಬ್ರಹ್ಮದಲ್ಲಿ ಗುಣೋಪ ಸಂಹಾರ ಮತ್ತು ವಿಕಲ್ಪಗಳ ನಿರ್ಣಯಕ್ಕಾಗಿ—ವಿದ್ಯೆ (ಉಪಾಸನ) ಗಳ ಭೇದಾ ಭೇದಗಳು ಚಿಂತಿಸಲ್ಪಡುತ್ತವೆ. ಎಂಬುದು ಪಾದಸಂಗತಿ.

ನಾಲ್ಕನೆಯದಾದ ಅಂಗ ಪಾದದಲ್ಲಿ ವಿದ್ಯೆ (ಉಪಾಸನದ) ಯ ಅಂಗ ಚಿಂತಿಸಲ್ಪಡುತ್ತೆ.

ಹಿಂದಿನ ಅಧಿಕರಣದಲ್ಲಿ (ಸಂಜ್ಞಾಮೂರ್ತಿಕ್ಲೃಪ್ತ್ಯಧಿಕರಣದಲ್ಲಿ) ಜೀವನ ಮೂರ್ತಿ (ಶರೀರ) ವಿಚಾರ ಬಂದಿತು. ಆ ಪ್ರಸಂಗದಿಂದ —ಮೂರ್ತ್ಯಂತರ ಪರಿಗ್ರಹದಲ್ಲಿ ಜೀವನಿಗಿರುವ ಭೂತ ಸೂಕ್ಷ್ಮಯೋಗ ಈ ಮೊದಲನೆಯ ಅಧಿಕರಣದಲ್ಲಿ ಚಿಂತಿಸಲ್ಪ ಡುತ್ತೆ—ಇದು ಅಧಿಕರಣ ಸಂಗತಿ. (ಪ್ರಸಂಗಾತ್ ಸಂಗತಿ)

## ಸೂತ್ರಾರ್ಥ

[ತದನ್ತರಪ್ರತಿಪತ್ತೌ] = (ಜೀವನು) ಶರೀರಾಂತರವನ್ನು ಹೊಂದುವಾಗ, [ಸಂಪರಿಷ್ವಕ್ತಃ] = (ಶರೀರಕ್ಕೆ ಕಾರಣಗಳಾದ ಪೃಥಿವ್ಯಾದಿ ಭೂತಗಳ ಸೂಕ್ಷ್ಮಗಳೊಡನೆ) ಚೆನ್ನಾಗಿ ಕೂಡಿಕೊಂಡವನಾಗಿಯೇ [ರಂಹತಿ] = ಹೋಗುತ್ತಾನೆ. [ಪ್ರಶ್ನನಿರೂಪ ಣಾಭ್ಯಾಂ] = ಪ್ರಶ್ನದಿಂದಲೂ, ಅದಕ್ಕೆ ಉತ್ತರ ಹೇಳಿರುವ ವಾಕ್ಯದಿಂದಲೂ, (ಈ ಅರ್ಥ ಅರಿಯಲ್ಪಡುತ್ತೆ)

## ವಿವರಣೆ

ಹಿಂದಿನ ೨ ಅಧ್ಯಾಯಗಳಲ್ಲಿ ಪರಮಾತ್ಮಸ್ವರೂಪವನ್ನು ಅಬಾಧಿತವಾಗಿ ನಿರೂಪಿಸಿ, ಈ ಮೂರನೇ ಅಧ್ಯಾಯದಲ್ಲಿ ಆ ಪರಮಾತ್ಮಪ್ರಾಪ್ತಿಗೆ ಹೇತುವಾದ ಭಕ್ತ್ಯುಪಾಯವನ್ನು ನಿರೂಪಿಸಲು ಆರಂಭಿಸುತ್ತಾರೆ. ಇದರಲ್ಲಿ ಮೊದಲು ಭಕ್ತಿಗೆ ವಿಷಯಾಂತರ ವೈರಾಗ್ಯ ಕಾರಣವಾದ್ದರಿಂದ, ಆ ವೈರಾಗ್ಯ ಹುಟ್ಟುವುದಕ್ಕಾಗಿ, ಈ ಪಾದದಲ್ಲಿ ಸಂಸಾರ ಸ್ವರೂಪವನ್ನು ನಿರೂಪಿಸುತ್ತಾರೆ-ಜೀವನು ಮರಣ ಹೊಂದಿದ ನಂತರ ಇಲ್ಲಿ ಮಾಡಿದ್ದ

ಪುಣ್ಯಪಾಪಕರ್ಮಗಳ ಫಲವನ್ನು ಅನುಭವಿಸುವುದಕ್ಕಾಗಿ, ಸ್ವರ್ಗ ನರಕಗಳಿಗೆ ಹೋಗಿ, ಅಲ್ಲಿ ಆ ಅನುಭವಕ್ಕೆ ತಕ್ಕ ಶರೀರವೆತ್ತುತ್ತಾನೆ. ಆ ಶರೀರಗಳಿಗೂ ಪೃಥಿವ್ಯಾದಿ ಭೂತಗಳ ಸೂಕ್ಷ್ಮಗಳೇ ಕಾರಣ. ಆ ಕಾರಣವಾಗಿರುವ ಭೂತಸೂಕ್ಷ್ಮಗಳು ಆ ಲೋಕ ಗಳಲ್ಲಿವೆಯೋ? ಅಥವಾ ಜೀವನು ಈ ಶರೀರದವನ್ನು ಬಿಟ್ಟುಹೋಗುವಾಗ, ತನಗೆ ಸ್ವರ್ಗ–ನರಕಗಳಲ್ಲಿ ಶರೀರವುಂಟಾಗುವುದಕ್ಕಾಗಿ, ಈ ಶೇರಿರವನ್ನು ಕಡೆದು ತೆಗೆದ ಭೂತಸೂಕ್ಷ್ಮಗಳೊಡನೆ ಕೂಡಿದವನಾಗಿಯೇ ಹೋಗುವನೋ?—ಎಂದು ಸಂಶಯ.

ಈ ಲೋಕದಲ್ಲಿಯಂತೆಯೇ, ಲೋಕಾಂತರಗಳಲ್ಲಿಯೂ ಆಯಾ ಶರೀರಗಳಿಗೆ ಕಾರಣವಾದ ಭೂತಸೂಕ್ಷ್ಮಗಳು ಉಂಟಾದ್ದರಿಂದ, ಅವುಗಳಿಂದಲೇ ಅಲ್ಲಿ ಶರೀರವುಂಟಾ ಗುವುದು. ಅದಕ್ಕಾಗಿ ಇಲ್ಲಿರುವ ಭೂತಸೂಕ್ಷ್ಮಗಳೊಡನೆ ಹೋಗಬೇಕಾಗಿಲ್ಲ—ಎಂದು ಪೂರ್ವಪಕ್ಷ.

ಛಾಂದೋಗ್ಯದಲ್ಲಿ ಪಂಚಾಗ್ನಿ ವಿದ್ಯೆಯಲ್ಲಿ ಶ್ವೇತಕೇತುವನ್ನು ಪ್ರವಾಹಣನೆಂಬ ರಾಜನು, "ವೇತ್ಥಯಥಾ ಪಂಚಮ್ಯಾಮಾಹುತಾ ವಾಪಃ ಪುರುಷ ವಚಸೋಭವನ್ತಿ."— ಪೃಥಿವ್ಯಾದಿಗಳೊಡನೆ ಕೂಡಿದ ಜಲವು, ಸ್ವರ್ಗಲೋಕ ಮೇಘ, ಭೂಮಿ, ಪುರುಷ —ಎಂಬ ಈ ನಾಲ್ಕು ಅಗ್ನಿಗಳಲ್ಲಿಯೂ ಹೋಮಮಾಡಲ್ಪಟ್ಟು, ಸ್ತ್ರೀಯೆಂಬ ಐದನೆಯ, ಅಗ್ನಿಯಲ್ಲಿ ಹೋಮ ಮಾಡಲ್ಪಡುವಾಗ ನಾಮ—ರೂಪಗಳನ್ನುಳ್ಳದ್ದಾಗಿ ಪುರುಷನಾಗುವ ವಿಧ ಗೊತ್ತೆ? ಎಂದು ಪ್ರಶ್ನಿಸಲು, ಶ್ವೇತಕೇತು ಅದನ್ನು ಅರಿಯದೆ, ತನ್ನ ತಂದೆಯಾದ ಉದ್ದಾಲಕರ ಬಳಿ ಹೋಗಿ ಕೇಳಲು, ಅವರೂ ಅರಿಯದೆ ಆ ಅರಸನ ಬಳಿ ಹೋಗಿ ಕೇಳಲು, ಆಗ ಆ ಋಷಿಗೆ ಆ ಅರಸನು, "ಇತಿ ಪಂಚಮ್ಯಾಮಾಹು ತಾ ವಾಪಃ ಪುರುಷವಚಸೋಭವನ್ತಿ"—ಈ ವಿಧವಾಗಿ ಸ್ತ್ರೀಯರ ಗರ್ಭದಲ್ಲಿ ಪ್ರವೇಶಿ ಸುವುದೆಂಬ ಐದನೇ ಆಹುತಿಯಾಗಿ ಪೃಥಿವ್ಯಾದಿಗಳೊಂದಿಗೆ ಕೂಡಿದ ನೀರು ಪುರುಷ ನೆಂದು ವ್ಯವಹರಿಸಲ್ಪಡುವುದು.—ಎಂದು ಉತ್ತರಿಸಿದನು. ಇಲ್ಲಿ 'ಜಲ'—ಎಂಬುದು, ಭೂತಸೂಕ್ಷ್ಮಗಳೊಡನೆ ಕೂಡಿದ ಜೀವನಿಗೆ ಹೆಸರು. ಈ ಪ್ರಶ್ನ-ಪ್ರತಿವಚನಗಳಲ್ಲಿ ಜಲ-ಎಂದು ಹೇಳಲ್ಪಟ್ಟ ಜೀವನು ಭೂತಸೂಕ್ಷ್ಮಗಳೊಂದಿಗೆ ಕೂಡಿದವನಾಗಿಯೇ, ಅಗ್ನಿಯಾಗಿ ನಿರೂಪಿಸಲ್ಪಟ್ಟ ಸ್ವರ್ಗದಲ್ಲಿ ಪ್ರವೇಶಿಸುತ್ತಾನೆಂದು ಹೇಳಿರುವು ದರಿಂದ, ಜೀವನು ಶರೀರವನ್ನು ಬಿಟ್ಟು ಹೋಗುವಾಗ ಭೂತಸೂಕ್ಷ್ಮಗಳೊಡನೆ ಕೂಡಿದವನಾಗಿಯೇ ಹೋಗುವನೆಂದು ಸಿದ್ಧಾನ್ತ.

## ಸೂತ್ರ 2—ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್

**ಸೂತ್ರಾರ್ಥ**

[ತ್ರ್ಯಾತ್ಮಕತ್ವಾತ್] = (ಜಲತ್ರಿವೃತ್ಕರಣ ಮಾಡಲ್ಪಟ್ಟು), ಪೃಥ್ವೀ, ಜಲ, ತೇಜಸ್ಸು—ಎಂಬ ತ್ರಿತಯ (ಮೂರು) ಸ್ವರೂಪವಾಗಿರುವುದರಿಂದ, (ಜಲಕ್ಕೆ ಪೃಥ್ವೀ, ಜಲ, ತೇಜಸ್ಸುಗಳು ಅರ್ಥ) [ಭೂಯಸ್ತ್ವಾತ್] = (ಜಲಭಾಗ) ಅಧಿಕವಾಗಿರುವು ದರಿಂದ, (ಜಲವೆಂದು ಹೇಳಲ್ಪಡುತ್ತೆ).

**ವಿವರಣೆ**

ಮೇಲಣ ಪ್ರಶ್ನೋತ್ತರ ವಾಕ್ಯಗಳಲ್ಲಿ, ''ಆಪಃ''—ಎಂದು ನೀರನ್ನೇ ಹೇಳಿದೆ. ಹೀಗಿರುವಲ್ಲಿ, ಪೃಥ್ವಿ, ಜಲ, ತೇಜಸ್ಸು, ಸೂಕ್ಷ್ಮಗಳೊಡನೆ ಹೋಗುವುದಾಗಿ ಹೇಳಿರುವುದು ಹೇಗೆ ಯುಕ್ತ?—ಎಂದಲ್ಲಿ, ತ್ರಿವೃತ್ಕರಣವನ್ನು ಮಾಡುವಾಗ, ಜಲದಲ್ಲಿ ಪೃಥ್ವಿಯ ಭಾಗವೂ, ತೇಜೋಭಾಗವೂ ಸೇರಿರುವುದರಿಂದ, ಅವುಗಳ ಸೂಕ್ಷ್ಮಾಂಶಗಳೊಡನೆ ಹೋಗುತ್ತಾನೆಂಬುದು ಸಿದ್ಧ. ಶರೀರದಲ್ಲಿ ರಕ್ತ ಮುಂತಾದುದು ಜಲಭಾಗ. ಈ ಭಾಗವೇ ಶರೀರದಲ್ಲಿ ಅಧಿಕವಾದ್ದರಿಂದ ಅದಕ್ಕೆ ಕಾರಣವಾದ ಭೂತಸೂಕ್ಷ್ಮಗಳಲ್ಲಿಯೂ ಜಲಭಾಗ ಅಧಿಕವೆಂದು ಆ ಮೂರನ್ನೂ ಜಲವೆಂದು ಹೇಳಿದೆ.

### ಸೂತ್ರ ೩—**ಪ್ರಾಣಗತೇಶ್ಚ**

**ಸೂತ್ರಾರ್ಥ**

ಇಂದ್ರಿಯಗಳ ಗಮನವನ್ನು ಹೇಳುವುದರಿಂದಲೂ, (ಜೀವನು ಭೂತಸೂಕ್ಷ್ಮಗಳೊಡನೆ ಹೋಗುತ್ತಾನೆ.)

**ವಿವರಣೆ**

''ಪ್ರಾಣಮನೂತ್ಕ್ರಾಮನ್ತಂ ಸರ್ವೇಪ್ರಾಣಾ ಅನೂತ್ಕ್ರಾಮನ್ತಿ'',—ಎಂದು ಜೀವನು ಶರೀರವನ್ನು ಬಿಟ್ಟು ಹೊರ ಹೊರಡುವಾಗ, ಅವನೊಡನೆ ಪ್ರಾಣನೂ ಅದರೊಡನೆ ಇಂದ್ರಿಯಗಳೂ ಹೊರಟು ಬರುತ್ತವೆ—ಎಂದು ಹೇಳಿದೆ, ಇಂದ್ರಿಯಗಳಿಗೆ ಆಶ್ರಯವಾದ ಸೂಕ್ಷ್ಮಶರೀರ ಹೋಗದೆ ಇಂದ್ರಿಯಗಳು ಹೋಗಲಾರವಾದ್ದರಿಂದ ಭೂತಸೂಕ್ಷ್ಮಗಳೂ ಜತೆಯಲ್ಲಿಯೇ ಹೋಗುವುವು—ಎಂದು ಒಪ್ಪಿಕೊಳ್ಳಬೇಕು.

### ಸೂತ್ರ ೪—**ಅಗ್ನ್ಯಾದಿಗತಿ ಶ್ರುತೇರಿತಿ ಚೇನ್ನ ಭಾಕ್ತತ್ವಾತ್**

**ಸೂತ್ರಾರ್ಥ**

[ಅಗ್ನ್ಯಾದಿಗತಿ ಶ್ರುತೇಃ] = ಅಗ್ನಿ ಮುಂತಾದುವಲ್ಲಿ ವಾಕ್ಕು ಮುಂತಾದ ಇಂದ್ರಿಯಗಳಿಗೆ ಗಮನವನ್ನು ಹೇಳುವುದರಿಂದ (ಇಂದ್ರಿಯಗಳು ಜೀವನೊಂದಿಗೆ ಹೋಗುವುದಿಲ್ಲ) [ಇತಿ ಚೇತ್] = ಎಂದಲ್ಲಿ, [ಭಾಕ್ತತ್ವಾತ್] = (ವಾಕ್ಕು ಮುಂತಾದ ಪದಗಳು) ಅಮುಖ್ಯಗಳಾದ್ದರಿಂದ, [ನ] = ಹಾಗಲ್ಲ.

**ವಿವರಣೆ**

''ಅಗ್ನಿಂವಾಗಪ್ಯೇತಿ''—ಎಂದು ಉಪಕ್ರಮಿಸಿ ಜೀವನು ಮರಣಹೊಂದಿದ ಮೇಲೆ, ವಾಗಿಂದ್ರಿಯ ಅಗ್ನಿಯಲ್ಲಿ ಲಯಿಸುವುದೆಂದು ಆರಂಭಿಸಿ, ಒಂದೊಂದು ಇಂದ್ರಿಯವೂ ಒಂದೊಂದು ದೇವತೆಯಲ್ಲಿ ಲಯಿಸುವುದೆಂದು ಹೇಳುವುದರಿಂದ ಜೀವನೊಂದಿಗೆ ಹೋಗುವುವೆಂಬುದು ಹೇಗೆ ಯುಕ್ತ? ಎಂದಲ್ಲಿ, ಅಲ್ಲಿ ವಾಗಿಂದ್ರಿಯವೆಂದರೆ ವಾಗಿಂದ್ರಿಯಕ್ಕೆ ಅಧಿಷ್ಠಾತೃವಾದ ದೇವತೆಗೆ ಹೆಸರಾಗಿ, ಆ ದೇವತೆ ಅಗ್ನಿಯಲ್ಲಿ ಲಯಿಸುವುದೆಂದು ಹೇಳಿತು. ಹೀಗೆಯೇ ಮುಂದೆಯೂ ಕಾಣಬೇಕು. ಆ ವಾಕ್ಯದಲ್ಲಿಯೇ ''ಓಷಧೀರ್ಲೋಮಾನಿ ವನಸ್ಪತೀಃ ಕೇಶಾಃ'',—ಎಂದು ಕೂದಲು ಮುಂತಾದುವು

ಪುರುಷನ ಮರಣಕಾಲದಲ್ಲಿ ಇವನನ್ನು ಬಿಟ್ಟು ಅಗಲಿ ಹೋಗಿ ಓಷಧಿ ಮುಂತಾದುವನ್ನು ಹೊಂದುವುದಾಗಿ ಹೇಳಿದೆ. ಅವು ಹಾಗೆ ಹೋಗುವಂತೆ ಕಾಣಲಿಲ್ಲ. ಇಲ್ಲಿ ಭಸ್ಮವಾಗಿಯೋ ಮಣ್ಣಾಗಿಯೋ ಆಗಿಬಿಡುವುವು. ಆದ್ದರಿಂದ ಅಲ್ಲಿ ಅವುಗಳ ಅಧಿಷ್ಠಾನ ದೇವತೆ ಹೋಗುವುದೆಂದೇ ಹೇಳಬೇಕು. ಅದರಂತೆಯೇ ಇಲ್ಲಿಯೂ ಕಂಡುಕೊಳ್ಳಬೇಕು. ಆದ್ದರಿಂದ ಇಂದ್ರಿಯಗಳು ಜೀವನೊಂದಿಗೆ ಹೋಗುವುದೆಂಬುದರಲ್ಲಿ ಬಾಧಕವಿಲ್ಲ.

ಸೂತ್ರ ೫—**ಪ್ರಥಮೇಽಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ**

**ಸೂತ್ರಾರ್ಥ**

[ಪ್ರಥಮೇ] = (ಐದು ಆಹುತಿಗಳಲ್ಲಿ) ಮೊದಲನೆಯದಾದ ಸ್ವರ್ಗವೆಂಬ ಅಗ್ನಿಯಲ್ಲಿ ಹಾಕಲ್ಪಟ್ಟ ಆಹುತಿಯಲ್ಲಿ (ಸ್ವರ್ಗಪ್ರವೇಶದಲ್ಲಿ) [ಅಶ್ರವಣಾತ್] = ಜಲಕ್ಕೆ ಶ್ರವಣವಿಲ್ಲದ್ದರಿಂದ. (ಜೀವನೊಂದಿಗೆ ಭೂತ ಸೂಕ್ಷ್ಮಗಳು ಹೋಗುವುದಿಲ್ಲ) [ಇತಿ ಚೇತ್] = ಎಂದಲ್ಲಿ, [ನ] = ಹಾಗಲ್ಲ. [ಉಪಪತ್ತೇಃ] = ಪ್ರಶ್ನೋತ್ತರಗಳು ಉಪಪನ್ನವಾಗುವುದರಿಂದ, [ತಾಃಏವ] = "ಆಪಃ"—ಎಂದು ಹೇಳಲ್ಪಟ್ಟ ಜಲವೇ (ಅಲ್ಲಿಯೂ ಹೇಳಲ್ಪಟ್ಟದೆಂದು ನಿಶ್ಚಯಿಸಲ್ಪಟ್ಟಿತು.)

**ವಿವರಣೆ**

"ತಸ್ಮಿನ್ನೇತಸ್ಮಿನ್ ದೇವಾಃ ಶ್ರದ್ಧಾಂ ಜುಹ್ವತಿ",—ಈ ದ್ಯುಲೋಕದಲ್ಲಿ ಪ್ರಾಣಗಳು ಶ್ರದ್ಧೆಯನ್ನು ಹೋಮ ಮಾಡುವುವು. ಅಂದರೆ ಅಲ್ಲಿ ಪ್ರವೇಶಗೊಳಿಸುವುವು—ಎಂದು ಹೇಳಿದೆ. ಶ್ರದ್ಧೆಯೆಂಬುದು ಜೀವ. ಇದರಿಂದ ಜೀವನಿಗೇ ಸ್ವರ್ಗಲೋಕ ಪ್ರವೇಶವನ್ನು ಹೇಳಿತು. ಭೂತಸೂಕ್ಷ್ಮಗಳಿಗೆ ಹೇಳಲಿಲ್ಲವಲ್ಲ—ಎಂದಲ್ಲಿ, "ಆಪಃ"—ಎಂದು ಹೇಳಲ್ಪಟ್ಟ ಜಲದ ಐದು ಆಹುತಿಗಳ ವಿಷಯವಾಗಿ ಕೇಳಿದ ಪ್ರಶ್ನೆಕ್ಕೆ ಉತ್ತರ, "ತಸ್ಮಿನ್ನೇತಸ್ಮಿನ್",—ಎಂದು ಮೇಲೆ ಹೇಳಿದ ವಾಕ್ಯ. ಈ ವಾಕ್ಯಕ್ಕೆ ಪ್ರಶ್ನವಾಕ್ಯಾನುಗುಣವಾಗಿ ಅರ್ಥವನ್ನು ಹೇಳಬೇಕಾದ್ದರಿಂದ, ಉತ್ತರವಾಕ್ಯದಲ್ಲಿರುವ ಶ್ರದ್ಧಾ ಪದಕ್ಕೆ "ಆಪಃ"—ಎಂಬ ಪದದಿಂದ ಹೇಳಲ್ಪಟ್ಟ ಭೂತಸೂಕ್ಷ್ಮಗಳೇ ಅರ್ಥ. ಆದ್ದರಿಂದ ಮೊದಲಿನಲ್ಲಿಯೂ ಭೂತಸೂಕ್ಷ್ಮಗಳು ಹೇಳಲ್ಪಟ್ಟವು.

ಸೂತ್ರ ೬—**ಅಶ್ರುತತ್ವಾದಿತಿ ಚೇನ್ನೇಷ್ಟಾದಿಕಾರಿಣಾಂ ಪ್ರತೀತೇಃ**

**ಸೂತ್ರಾರ್ಥ**

[ಅಶ್ರುತತ್ವಾತ್] = (ಜೀವನು) ಕೇಳಲ್ಪಡದುದರಿಂದ, (ದ್ಯುಲೋಕಕ್ಕೆ ಜೀವ ಹೋಗುವುದಿಲ್ಲ) [ಇತಿ ಚೇತ್] = ಎಂದಲ್ಲಿ [ಇಷ್ಟಾದಿ ಕಾರಿಣಾಂ] = (ಮೇಲಿನ ವಾಕ್ಯದಲ್ಲಿ) ಯಜ್ಞ ಮುಂತಾದುದನ್ನು ಮಾಡುವವರ [ಪ್ರತೀತೇಃ] = ಪ್ರತೀತಿಯಿಂದ, [ನ] = ಹಾಗೆ ಹೇಳಕೂಡದು.

**ವಿವರಣೆ**

ಮೇಲಿನ ಪ್ರಶ್ನೋತ್ತರ ವಾಕ್ಯಗಳಲ್ಲಿ, "ಆಪಃ"—ಎನ್ನಲ್ಪಟ್ಟ ಜಲವೇ ದ್ಯುಲೋಕ ಮುಂತಾದುವಲ್ಲಿ ಹೋಗುವುದೆನ್ನಲಾಯಿತು. ಜೀವನು ಹೋಗುವುದಾಗಿ ಹೇಳಲಿಲ್ಲ.

ಆದ್ದರಿಂದ, ಜೀವನು ಮರಣಾನನ್ತರ ದ್ಯುಲೋಕಾದಿಗಳಿಗೆ ಹೋಗುವುದಿಲ್ಲ—ಎಂದು ಪೂರ್ವಪಕ್ಷ.

ಮೇಲಿನ ವಾಕ್ಯಗಳಲ್ಲಿ ಜೀವನನ್ನು ಹೇಳದಿದ್ದಾಗ್ಯೂ, "ಅಥ ಯ ಇಮೇ ಗ್ರಾಮ ಇಷ್ಟಾಪೂರ್ತೇ ದತ್ತಂ",—ಇತ್ಯಾದಿಯಿಂದ, ಯಾಗಾದಿಗಳನ್ನು ಮಾಡುವವನೂ ದೇವಸ್ಥಾನ, ಕೊಳ, ತೋಪು ಮುಂತಾದುವನ್ನು ನಿರ್ಮಿಸುವವನೂ, ದಾನ ಮಾಡು ವವನೂ, ದ್ಯುಲೋಕವನ್ನು ಹೊಂದುವನೆಂದು ಹೇಳುವುದರಿಂದ ಆ ಅರ್ಥಕ್ಕೆ ಅನು ಗುಣವಾಗಿ ಮೇಲಿನ ವಾಕ್ಯದಲ್ಲಿ "ಆಪಃ",—ಎಂಬ ಪದಕ್ಕೆ ಭೂತಸೂಕ್ಷ್ಮಗಳೊಡನೆ ಕೂಡಿದ ಜೀವನೇ ಅರ್ಥವೆಂದು ಅಂಗೀಕರಿಸಿ, ಅವನಿಗೇ ಲೋಕಾಂತರಗಳಲ್ಲಿ ಗಮನವನ್ನು ಹೇಳಿತೆಂದು ಅಂಗೀಕರಿಸಬೇಕೆಂದು ಸಿದ್ಧಾನ್ತ.

ಸೂತ್ರ ೭—**ಭಾಕ್ತಂ ವಾ ಅನಾತ್ಮವಿತ್ತ್ವಾತ್ ತಥಾಹಿ ದರ್ಶಯತಿ**

**ಸೂತ್ರಾರ್ಥ**

[ಅನಾತ್ಮವಿತ್ತ್ವಾತ್] = ಪರಮಾತ್ಮ ಸ್ವರೂಪವನ್ನು ಅರಿಯದವನಾದ್ದರಿಂದ, (ಅವನನ್ನು ದೇವತೆಗಳು ಭುಜಿಸುತ್ತಾರೆನ್ನುವುದು) [ಭಾಕ್ತಂ] = ಗೌಣ. [ತಥಾಹಿ] = ಹಾಗೆಯೇ [ದರ್ಶಯತಿ] = ಶ್ರುತಿ ಹೇಳುತ್ತೆ.

**ವಿವರಣೆ**

"ದೇವಾನಾಮನ್ನಂ ತಂ ದೇವಾ ಭಕ್ಷಯನ್ತಿ".—ಎಂದು. "ಆಪಃ"—ಎಂದು ಹೇಳಲಟ್ಟ ವಸ್ತು ದೇವಲೋಕದಲ್ಲಿ ಹೋಗಿ ದೇವರುಗಳಿಗೆ ಅನ್ನವಾಗುವುದು. ಅದನ್ನು ದೇವರುಗಳು ಭುಜಿಸುವರು ಎಂದು ಹೇಳಿದೆ. ಜೀವನು ನಿತ್ಯನಾದ್ದರಿಂದ ಅವನನ್ನು ಭುಜಿಸಲಾಗದ್ದರಿಂದ, ಮೇಲೆ ಜೀವನನ್ನು ಹೇಳಿಲ್ಲ—ಎಂದು ಪೂರ್ವಪಕ್ಷ. "ದೇವಾ ನಾ ಮನ್ನಂ",—ಎಂಬ ಮೇಲಿನ ವಾಕ್ಯದಲ್ಲಿ ದೇವತೆಗಳು ಇವನನ್ನು ಭುಜಿಸು ತ್ತಾರೆಂದು ಹೇಳಲಿಲ್ಲ. ಈ ಜೀವನು ಪರಮಾತ್ಮನ ಯಾಥಾತ್ಮ್ಯವನ್ನು ಅರಿಯದವನಾದ್ದ ರಿಂದ ಇವನ ಮೂಲಕ ಅವರುಗಳು ತಮ್ಮ ಕಾರ್ಯಗಳನ್ನು ಮಾಡಿಸಿಕೊಳ್ಳುವರೆಂದೇ ಹೇಳಿದೆ. ಮತ್ತೊಂದೆಡೆಯಲ್ಲಿಯೂ, "ಯಥಾಪಶುರೇವಂ ಸ ದೇವಾನಾಂ",—ಎಂದು ಪಶುಗಳಂತೆ ದೇವರುಗಳಿಗೆ ಈ ಜೀವ ಸೇವೆ ಮಾಡುತ್ತಾನೆಂದೇ ಹೇಳಿದೆ. ಆದ್ದರಿಂದ ಜೀವನನ್ನು ಇಲ್ಲಿ ಹೇಳುವುದರಲ್ಲಿ ಯಾವ ಬಾಧಕವೂ ಇಲ್ಲವೆಂದು ಸಿದ್ಧಾನ್ತ. ಆತ್ಮ ಜ್ಞಾನವಿಲ್ಲದವನು ದೇವತೆಗಳಿಗೆ ಪಶುಗಳು ಹೇಗೋ ಹಾಗೆ, ಭೋಗೋಪಕರಣ.

## 2. ಕೃತಾತ್ಯಯಾಧಿಕರಣ

ಸೂತ್ರ—**ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಂ ಯಥೇತಮನೇವಂ ಚ**

**ಸಂಗತಿ**

ಸಂಸಾರವಿರುವವರಿಗೂ ಪ್ರಕೃತಿ ಸಂಬಂಧ ಅವರ್ಜನೀಯವೆನ್ನಲಾಯಿತು. ಅದಕ್ಕೆ ಕಾರಣವಾದ ಕರ್ಮ ಸಂಬಂಧವೂ ಅವರ್ಜನೀಯವೆಂದು ಇಲ್ಲಿ ಹೇಳಲ್ಪಡುತ್ತೆ. ಅಂದರೆ, ಕೇವಲ ಇಷ್ಟಾದಿಕಾರಿಗಳಿಗೆ ಧೂಮಾದಿಯಾದ ಪಿತೃಯಾನ ಮಾರ್ಗದಿಂದ

ಗಮನ, ಕರ್ಮಫಲದ ಅವಸಾನದಲ್ಲಿ ಪುನರಾವೃತ್ತಿಯೂ, ಶ್ರುತವಾಗಿದೆ, "ಯಾವತ್ಸಂಪಾತಮುಷಿತ್ವಾಥೈತಮೇವಾಧ್ವಾನಂ ಪುನರ್ನಿವರ್ತನ್ತೇ",—ಎಂಬುದಾಗಿ. ಅದರಲ್ಲಿ ಹಿಂದಕ್ಕೆ ಇಳಿದು ಬರುವ ಜೀವನು ಉಪಭುಕ್ತವಾಗಿ ಉಳಿದಿರುವ ಕರ್ಮ (ಅನುಶಯ) ದೊಡನೆ ಇಳಿದು ಬರುತ್ತಾನೆಯೋ ಅಥವಾ ಇಲ್ಲವೆ?—ಎಂಬ ಸಂಶಯದಿಂದ ಸಂಗತಿ.

## ಸೂತ್ರಾರ್ಥ

[ಕೃತಾತ್ಯಯೇ] = ಮೊದಲು ಮಾಡಿದ್ದ ಪುಣ್ಯಕರ್ಮ (ಸ್ವರ್ಗಾನುಭವದಿಂದ) ನಶಿಸಿದ ಮೇಲೆ, [ಅನುಶಯವಾನ್] = (ಜೀವನು) ಅನುಭವಿಸಿ ಮಿಕ್ಕ ಕರ್ಮ ವಿಶೇಷವನ್ನುಳ್ಳವನಾಗಿ (ಭೂಲೋಕಕ್ಕೆ ಹಿಂತಿರುಗಿ ಬರುತ್ತಾನೆ) [ದೃಷ್ಟಸ್ಮೃತಿಭ್ಯಾಂ] = ವೇದವಾಕ್ಯದಿಂದಲೂ, ಸ್ಮೃತಿವಾಕ್ಯದಿಂದಲೂ, (ಈ ಅರ್ಥ ನಿಶ್ಚಯಿಸಲ್ಪಡುತ್ತೆ) [ಯಥಾ ಇತಂ] = ಯಾವ ಮಾರ್ಗದಿಂದ ಸ್ವರ್ಗವನ್ನು ಹೊಂದಿದನೋ ಆ ಮಾರ್ಗದಿಂದಲೂ [ಅನೇವಂ, ಚ.] = ಬೇರೆ ಮಾರ್ಗದಿಂದಲೂ, (ಹಿಂತಿರುಗುತ್ತಾನೆ)

## ವಿವರಣೆ

ಪುಣ್ಯ ಮಾಡಿದವನು ದೇವಲೋಕಕ್ಕೆ ಹೋಗಿ ಪುಣ್ಯ ಫಲವಾದ ಸುಖವನ್ನು ಅನುಭವಿಸಿ, ಹಿಂತಿರುಗುವಾಗ ಪುಣ್ಯವೆಲ್ಲವನ್ನೂ ಸಂಪೂರ್ಣವಾಗಿ ಅನುಭವಿಸಿ ಹಿಂತಿರುಗಿ ಬರುವನೇ? ಅಥವಾ ,ಸ್ವಲ್ಪ ಪುಣ್ಯಶೇಷವುಳ್ಳನಾಗಿ ಹಿಂತಿರುಗುವನೋ?—ಎಂದು ಸಂಶಯ. "ಪ್ರಾಪ್ಯಾನ್ತಂ ಕರ್ಮಣಃ",—ಎಂದು ಪುಣ್ಯವನ್ನು ಕೊನೆಯವರಿಗೂ ಅನುಭವಿಸುತ್ತಾನೆಯೆಂದು ಹೇಳುವುದರಿಂದ, ಸ್ವಲ್ಪವೂ ಪುಣ್ಯಶೇಷವಿಲ್ಲದವನಾಗಿಯೇ ಹಿಂತಿರುಗುತ್ತಾನೆಯೆಂದು ಪೂರ್ವಪಕ್ಷ. "ರಮಣೀಯ ಚರಣಾಃ ಅಭ್ಯಾಶೋಹಯತ್ತೇ ರಮಣೀಯಾಂ ಯೋನಿ ಮಾಪದ್ಯೇರನ್",—ಎಂದು ಪುಣ್ಯವುಳ್ಳವನು ಶ್ರೇಷ್ಠ ಜನ್ಮವನ್ನು ಹೊಂದುತ್ತಾನೆಯೆಂದು ವೇದದಲ್ಲಿಯೂ, "ತತಃಪರಿವೃತ್ತಾ ಕರ್ಮಶೇಷೇಣ ಜಾತಿಂ",—ಎಂದು, ಅಲ್ಲಿಂದ ಹಿಂತಿರುಗುವಾಗ ಪುಣ್ಯಶೇಷದಿಂದ, ಜಾತಿ. ರೂಪ, ಮುಂತಾದುದರಲ್ಲಿ ಉನ್ನತ ಪದವಿಯನ್ನು ಹೊಂದುತ್ತಾನೆಯೆಂದು ಆಪಸ್ತಂಬರೂ ಹೇಳುವುದರಿಂದ, ಪುಣ್ಯಶೇಷವುಳ್ಳವನಾಗಿಯೇ ಹಿಂತಿರುಗುತ್ತಾನೆ. "ಪ್ರಾಪ್ಯಾನ್ತಂ ಕರ್ಮಣಃ" —ಎಂದು ಮೇಲೆ ಹೇಳಿದ್ದು, ಯಾವ ಪುಣ್ಯ ಸ್ವರ್ಗದಲ್ಲಿ ಫಲವನ್ನು ಕೊಡುವುದೋ ಅದನ್ನು ಪೂರ್ಣವಾಗಿ ಅನುಭವಿಸಿ (ಫಲದಾನ ಪ್ರವೃತ್ತವಾದ ಕರ್ಮವನ್ನು ಪೂರ್ತಿ ಅನುಭವಿಸಿ) ಎಂದರ್ಥವಾದ್ದರಿಂದ ವಿರೋಧವಿಲ್ಲ. ಭೂಲೋಕಕ್ಕೆ ಇಳಿಯುವಾಗ ಏರುವಾಗ ಯಾವ ಮಾರ್ಗದಿಂದ ಏರಿದನೋ ಆ ಮಾರ್ಗದಿಂದಲೇ ಕೆಲವೆಡೆಗಳಲ್ಲಿಯೂ, ಬೇರೆ ಮಾರ್ಗದಿಂದ ಕೆಲವೆಡೆಗಳಲ್ಲಿಯೂ ಇಳಿಯುತ್ತಾನೆ. ಅಂದರೆ, ಚಂದ್ರಲೋಕದಿಂದ ಆಕಾಶದಲ್ಲಿ ಇಳಿಯುವಾಗ ಹೋದ ಮಾರ್ಗದಿಂದಲೇ ಇಳಿಯುತ್ತಾನೆ. ವಾಯ್ವಾದಿಗಳಲ್ಲಿ ಇಳಿಯುವಾಗ, ಬೇರೆ ಮಾರ್ಗವಾಗಿ ಇಳಿಯುತ್ತಾನೆ.—ಎಂದು ಸಿದ್ಧಾನ್ತ.

ಸೂತ್ರ ೨—**ಚರಣಾದಿತಿ ಚೇನ್ನತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ**

**ಸೂತ್ರಾರ್ಥ**

[ಚರಣಾತ್] = ಆಚಾರವನ್ನು ಹೇಳುವುದರಿಂದ, (ಪುಣ್ಯವನ್ನು ಹೇಳಲಿಲ್ಲ) [ಇತಿ ಚೇತ್] = ಎಂದಲ್ಲಿ, [ನ] = ಹಾಗಲ್ಲ. [ತದುಪಲಕ್ಷಣಾರ್ಥಾ] = (ಚರಣಪದ) ಪುಣ್ಯಕ್ಕೂ ಉಪಲಕ್ಷಣವಾಗುವುದು. [ಇತಿ] = ಎಂದು [ಕಾರ್ಷ್ಣಾಜಿನಿಃ] = ಕಾರ್ಷ್ಣಾಜನಿ ಎಂಬುವರು ಹೇಳಿದರು.

**ವಿವರಣೆ**

ಮೇಲೆ ಹೇಳಿದ "ರಮಣೀಯು ಚರಣಾಃ",—ಎಂಬ ವಾಕ್ಯದಲ್ಲಿ ಚರಣವೆಂದು ಸಂಧ್ಯಾವಂದನಾದಿಯಾದ ಒಳ್ಳೆಯ ಆಚಾರಕ್ಕೆ ಹೆಸರಾಗಿ ಒಳ್ಳೆಯ ಆಚಾರವುಳ್ಳವನು ಉನ್ನತ ಜಾತಿಯಾಗುವನೆಂದೇ ಹೇಳಿತು. ಪುಣ್ಯವನ್ನು ಹೇಳಲಿಲ್ಲ—ಎಂದಲ್ಲಿ, ಪುಣ್ಯವನ್ನೂ ಹೇಳಬೇಕೆಂದು ಅಭಿಪ್ರಾಯದಿಂದಲೇ ಇಲ್ಲಿ ಒಳ್ಳೆಯ ಆಚಾರವನ್ನು ಹೇಳಿದ್ದು. ಆದ್ದರಿಂದ, ಪುಣ್ಯವಂತನೇ ಉನ್ನತ ಜಾತಿಯಾಗಿ ಹುಟ್ಟುವನೆಂದು ಕಾರ್ಷ್ಣಾಜಿನಿಯೆಂಬುವರು ಹೇಳಿದರು.

ಸೂತ್ರ ೩—**ಆನರ್ಥಕ್ಯ ಮಿತಿ ಚೇನ್ನ ತದಪೇಕ್ಷತ್ವಾತ್**

**ಸೂತ್ರಾರ್ಥ**

[ಆನರ್ಥಕ್ಯಂ] = ಪ್ರಯೋಜನವಿಲ್ಲದಿರುವಿಕೆ (ಪ್ರಸಂಗಿಸುವುದು) (ಇತಿ ಚೇತ್) = ಎಂದಲ್ಲಿ, [ತದಪೇಕ್ಷತ್ವಾತ್] = (ಪುಣ್ಯವೂ) ಆಚಾರಾಪೇಕ್ಷೆಯನ್ನುಳ್ಳದ್ದಾದ್ದರಿಂದ, [ನ] = ವ್ಯರ್ಥವಲ್ಲ.

**ವಿವರಣೆ**

ಸಂಧ್ಯಾವಂದನಾದಿ ಒಳ್ಳೆಯ ಆಚಾರದಿಂದ ಉನ್ನತ ಪದವಿ ಸಿಕ್ಕದೇ ಹೋದಲ್ಲಿ, ಆ ಆಚಾರ ವ್ಯರ್ಥವಾಗಿ ಬಿಡುವುದು—ಎಂದಲ್ಲಿ, ಸಂಧ್ಯಾವಂದನ ಮುಂತಾದ ಒಳ್ಳೆಯ ಆಚಾರವಿಲ್ಲದವನು ಯಾವ ಕರ್ಮಕ್ಕೂ ಯೋಗ್ಯತೆಯಿಲ್ಲದವನಾದ್ದರಿಂದ, ಅದು ವ್ಯರ್ಥವಾಗದು. ಆಚಾರವಂತನಿಗೇ ಪುಣ್ಯಕರ್ಮಗಳಲ್ಲಿ ಅಧಿಕಾರವೆಂದು— "ಸಂಧ್ಯಾಹೀನೋಽಶುಚಿರ್ನಿತ್ಯಂ ಅನರ್ಹಸ್ಸರ್ವಕರ್ಮಸು । ಆಚಾರ ಹೀನಂ ನ ಪುನನ್ತಿ ವೇದಾಃ... ಇತ್ಯಾದಿಯಾಗಿ ಹೇಳಿದೆ.

ಕರ್ಮಾನುಷ್ಠಾನದಿಂದಲೇ ಸ್ವರ್ಗಾದಿ ಸಿದ್ಧಿಸುತ್ತೆ. ಆಚಾರದಿಂದೇನು ಪ್ರಯೋಜನ?—ಎನ್ನಕೂಡದೆಂದು—

"ಪ್ರಾಪ್ತಾಚಾರಾತಿವೃತ್ತೌ ಪ್ರತಿಪದಮೃಷಯಸ್ಸಸ್ಮರುಃ ಪ್ರತ್ಯವಾಯಾನ್ ।
ಪ್ರಾಚೀನಾಂಹಃಪ್ರಣಾಶಂ ತದನುಸರಣತಃ ಪುಣ್ಯಕರ್ಮಾರ್ಹತಾಂ ಚ ।।

—ಇತ್ಯಾದಿಯಾಗಿ ಶ್ರೀಮದಾಚಾರ್ಯರು ಹೇಳಿದ್ದಾರೆ. (ಶ್ರೀ ಅಧಿಕರಣ ಸಾರಾವಳಿಯಲ್ಲಿ).

ಸೂತ್ರ ೪—**ಸುಕೃತ ದುಷ್ಕೃತೇ ಏವೇತಿತು ಬಾದರಿಃ**

**ಸೂತ್ರಾರ್ಥ**

ಪುಣ್ಯಪಾಪಗಳೇ 'ಚರಣ' ಶಬ್ದದಿಂದ ಹೇಳಲ್ಪಟ್ಟಿತೆಂದು ಬಾದರಿಯೆಂಬವರೆನ್ನುತ್ತಾರೆ. "ರಮಣೀಯ ಚರಣಾಃ"—"ಕಪೂಯ ಚರಣಾಃ"—ಎಂಬೆಡೆಗಳಲ್ಲಿ 'ಚರಣ'—ಪದವು ಕರ್ಮಕ್ಕೆ ಹೆಸರಾಗಿ, ಪುಣ್ಯಪಾಪಗಳನ್ನು ಹೇಳುವುದರಿಂದ, ಅವುಗಳೇ ಉನ್ನತಿ—ಅವನತಿಗಳಿಗೆ ಕಾರಣಗಳೆಂದು ಆ ವಾಕ್ಯಗಳಲ್ಲಿ ಹೇಳಿದೆಯೆಂದು ಬಾದರಿ ಹೇಳಿದರು. ಇದೇ ಸಿದ್ಧಾಂತವೂ.

## 3. ಅನಿಷ್ಟಾದಿಕಾರ್ಯಧಿಕರಣ

ಸೂತ್ರ—**ಅನಿಷ್ಟಾದಿಕಾರಿಣಾಮಪಿ ಚ ಶ್ರುತಂ**

**ಸಂಗತಿ**

ಪ್ರಕೃತಿ ಸಂಬಂಧ ಮತ್ತು ಅದಕ್ಕೆ ಹೇತುವಾದ ಕರ್ಮ ಸಂಬಂಧ ಅವರ್ಜನೀಯವೆಂದರು. ಈಗ, ಕರ್ಮ ಸಂಬಂಧದಲ್ಲಿಯೂ ಸಾಧು ಕರ್ಮ ಸಂಬಂಧವೆಂಬ ನಿಯಮವಿಲ್ಲವೆಂದು ಹೇಳಲ್ಪಡುತ್ತೆ.

**ಸೂತ್ರಾರ್ಥ**

[ಅನಿಷ್ಟಾದಿಕಾರಿಣಾಂ, ಅಪಿ] = ಯಾಗ ಮುಂತಾದ ಪುಣ್ಯ ಕರ್ಮಗಳನ್ನು ಮಾಡದವರಿಗೂ, [ಶ್ರುತಂ] = (ಚಂದ್ರಲೋಕಪ್ರಾಪ್ತಿ) ವೇದದಲ್ಲಿ ಹೇಳಲ್ಪಟ್ಟಿತು.

**ವಿವರಣೆ**

ಪಾಪಿಗಳು ಮೃತರಾದ ನಂತರ ಪುಣ್ಯವಂತರ ಹಾಗೆ ಚಂದ್ರಲೋಕಕ್ಕೆ ಹೋಗುವರೆ?—ಇಲ್ಲವೆ?—ಎಂದಲ್ಲಿ, "ಯೇವೈಕೇಚಾಸ್ಮಾಲ್ಲೋಕಾತ್ ಪ್ರಯನ್ತಿ ಚಂದ್ರಮಸಮೇವ ತೇ ಸರ್ವೇಗಚ್ಛನ್ತಿ"—ಎಂಬಂತೆ, ಇಲ್ಲಿಂದ ಮೃತರಾಗಿ ಹೋದವರೆಲ್ಲರೂ ಚಂದ್ರಲೋಕಕ್ಕೆ ಹೋಗುವರೆಂದು ಹೇಳುವುದರಿಂದ, ಅವರೂ ಹೋಗುತ್ತಾರೆಂದು ಪೂರ್ವಪಕ್ಷ.

ಸೂತ್ರ ೨—**ಸಂಯಮನೇತ್ವನುಭೂಯೇತರೇಷಾಂ ಆರೋಹಾವರೋಹೌ ತದ್ಗತಿ ದರ್ಶನಾತ್**

**ಸೂತ್ರಾರ್ಥ**

[ತದ್ಗತಿ ದರ್ಶನಾತ್] = ಪಾಪಿಗಳಿಗೆ ಯಮಲೋಕ ಗಮನವು ವೇದ ವಚನದಲ್ಲಿ ಕಾಣುವುದರಿಂದ [ಇತರೇಷಾಂ] = ಪಾಪಿಗಳಿಗೆ [ಆರೋಹಾವರೋಹೌ] = ಚಂದ್ರಲೋಕಕ್ಕೆ ಏರುವುದೂ, ಅಲ್ಲಿಂದ ಇಳಿಯುವುದೂ, [ಸಂಯಮನೇ] = ಯಮನ ಆಜ್ಞೆಯಲ್ಲಿ [ಅನುಭೂಯ] = (ನರಕಗಳನ್ನು) ಅನುಭವಿಸಿ, ಅನಂತರ ಉಂಟಾಗುವುದು.

**ವಿವರಣೆ**

ಆದರೆ, ಪಾಪಿಗಳಿಗೂ ಪುಣ್ಯವಂತರಿಗೂ ವಿಶೇಷವೇನು? ಪಾಪ ನಿಷ್ಫಲವಾಗುವುದಲ್ಲವೆ?—ಎಂದಲ್ಲಿ, "ವೈವಸ್ವತಂ ಸಂಯಮನಂ ಜನಾನಾಂ",—ಎಂದು ಪಾಪಿಗಳಿಗೆ

ಯಮಲೋಕ ಪ್ರಾಪ್ತಿಯನ್ನು ಹೇಳುವುದರಿಂದ, ಮೊದಲು ಯಮಲೋಕದಲ್ಲಿ ಪಾಪ ಫಲವನ್ನು ಅನುಭವಿಸಿ ಅನಂತರ ಚಂದ್ರಲೋಕಕ್ಕೆ ಹೋಗುವರು. ಇದೇ ಇವರುಗಳಿಗೆ ವಿಶೇಷ.

ಸೂತ್ರ ೩—**ಸ್ಮರನ್ತಿ ಚ**

**ಸೂತ್ರಾರ್ಥ**

''ಸರ್ವೇ ಚೈತೇವಶಂ ಯಾನ್ತಿ ಯಮಸ್ಯ...''—ಎಂದು (ಪಾಪಿಗಳೆಲ್ಲರೂ ಯಮನಿಗೆ ವಶವಾಗುವರು ಎಂದು)—ಧರ್ಮಶಾಸ್ತ್ರಗಳೂ ಹೇಳುವುವು.

ಸೂತ್ರ ೪—**ಅಪಿಸಪ್ತ**

**ಸೂತ್ರಾರ್ಥ**

[ಸಪ್ತ. ಅಪಿ] = ಪಾಪಿಗಳು ಹೊಂದತಕ್ಕ ನರಕಗಳು ಏಳು (ಎಂದೂ ಹೇಳಲ್ಪಡುವುದು).

**ವಿವರಣೆ**

ಪಾಪ ಮಾಡಿದವರು ರೌರವ ಮುಂತಾದ ಏಳು ನರಕಗಳನ್ನು ಹೊಂದುವುದಾಗಿ ಹೇಳಿರುವುದರಿಂದ ಅವರುಗಳಿಗೆ ಚಂದ್ರಲೋಕ ಪ್ರಾಪ್ತಿಯಿಲ್ಲ.

ಸೂತ್ರ ೫—**ತತ್ರಾಪಿತದ್ವ್ಯಾಪಾರಾದವಿರೋಧಃ**

**ಸೂತ್ರಾರ್ಥ**

[ತತ್ರ, ಅಪಿ] = ಆ ಏಳು ನರಕಗಳಲ್ಲಿಯೂ [ತದ್ವ್ಯಾಪಾರಾತ್] = ಯಮನ ಆಜ್ಞೆ ನಡೆಯುವುದರಿಂದ [ಅವಿರೋಧಃ] = ವಿರೋಧವಿಲ್ಲ.

**ವಿವರಣೆ**

ಪಾಪಿಗಳು ರೌರವಾದಿ ಏಳು ನರಕಗಳಿಗೆ ಹೋಗುವುದಾಗಿಯೂ, ಯಮನ ಮನೆಗೆ ಹೋಗುವುದಾಗಿಯೂ ಎರಡು ಬಗೆಯಾಗಿ ಹೇಳಿರುವ ವಾಕ್ಯಗಳು ಹೇಗೆ ಹೊಂದುವುವು?—ಎಂದಲ್ಲಿ, ರೌರವಾದಿಗಳೂ ಯಮನ ಆಜ್ಞೆಗೆ ಒಳಪಟ್ಟುದಾದಾದ್ದರಿಂದ ಅವನ್ನೇ ಯಮಾಲಯವೆಂದು ಹೇಳಿದೆ. ಆದ್ದರಿಂದ ಎರಡು ವಾಕ್ಯಗಳಿಗೂ ವಿರೋಧವಿಲ್ಲ.

ಸೂತ್ರ ೬—**ವಿದ್ಯಾಕರ್ಮಣೋರಿತಿತು ಪ್ರಕೃತತ್ವಾತ್**

**ಸೂತ್ರಾರ್ಥ**

[ವಿದ್ಯಾಕರ್ಮಣೋಃ] = (ಅರ್ಚಿರಾದಿಯೂ ಧೂಮಾದಿಯೂ, ವಿದ್ಯೆಗೂ ಕರ್ಮಕ್ಕೂ) ಫಲವಾಗಿ ಹೇಳಲ್ಪಟ್ಟಿದೆ. [ಇತಿ] = ಈ ವಿಧವಾಗಿಯೇ [ಪ್ರಕೃತತ್ವಾತ್] = ಈ ಪ್ರಕರಣ ಉಪಕ್ರಮವಾಗಿರುವುದರಿಂದ, (ಈ ಅರ್ಥವನ್ನೇ ಸ್ವೀಕರಿಸಬೇಕು)

**ವಿವರಣೆ**

ಮೇಲೆ ಹೇಳಿದ ಪೂರ್ವಪಕ್ಷಕ್ಕೆ ಸಮಾಧಾನ ಹೇಳುತ್ತಾರೆ;—ಮೃತರಾದವರೆಲ್ಲರೂ ಚಂದ್ರಲೋಕಕ್ಕೆ ಹೋಗುವರೆಂದು ಮೇಲೆ ಹೇಳಿದ ಪ್ರಕರಣದಲ್ಲಿ ಅರ್ಚಿರಾದಿ

ಮಾರ್ಗವೆಂದೂ, ಧೂಮಾದಿ ಮಾರ್ಗವೆಂದೂ ಎರಡು. ಇದರಲ್ಲಿ ಜ್ಞಾನವಂತರು ಅರ್ಚಿರಾದಿಯಿಂದಲೂ, ಪುಣ್ಯವಂತರು ಧೂಮಾದಿಯಿಂದಲೂ ಹೋಗುವರೆಂದು ಈ ಎರಡು ಬಗೆಯುವರಿಗೇ ಇವೆರಡನ್ನೂ ಫಲವಾಗಿ ಹೇಳಿದೆ. ಆದ್ದರಿಂದ ಪಾಪಿಗಳಿಗೆ ಧೂಮಾದಿಮಾರ್ಗದಿಂದ ಹೋಗಿ ಚಂದ್ರಲೋಕವನ್ನು ಹೊಂದುವುದೆಂಬುದಿಲ್ಲ. ಆ ವಾಕ್ಯದಲ್ಲಿ ಎಲ್ಲರೂ ಹೋಗುವರೆನ್ನುವುದಕ್ಕೆ ಪುಣ್ಯವಂತರೆಲ್ಲರೂ ಎಂದರ್ಥವೆಂದು ಸಿದ್ಧಾಂತ.

### ಸೂತ್ರ ೭— ನ ತೃತೀಯೇ ತಥೋಪಲಬ್ಧೇಃ

**ಸೂತ್ರಾರ್ಥ**

[ತೃತೀಯೇ] = ಪಾಪ ಜನ್ಮದಲ್ಲಿ (ಶರೀರೋತ್ಪತ್ತಿಗಾಗಿ) [ನ] = ಚಂದ್ರಲೋಕ ಮುಂತಾದ ಐದು ಸ್ಥಾನಗಳಲ್ಲಿ ಪ್ರವೇಶಿಸುವುದೆಂಬ ಪಂಚಾಹುತಿ ಬೇಕಿಲ್ಲ. (ತಥಾ) = ಹಾಗೆಯೇ [ಉಪಲಬ್ಧೇಃ] = ಕಾಣುವುದರಿಂದ (ಇವರು ದೇವಲೋಕಕ್ಕೆ ಹೋಗುವುದಿಲ್ಲ)

**ವಿವರಣೆ**

ಚಂದ್ರಲೋಕ, ಮೇಘ, ಭೂಮಿ, ಪುರುಷ—ಎಂಬ ನಾಲ್ಕು ಕಡೆಗಳಲ್ಲಿಯೂ ತಂಗಿ, ಅನಂತರ, ಸ್ತ್ರೀಯ ಗರ್ಭದಲ್ಲಿ ಪ್ರವೇಶಿಸಿದರೆ ಶರೀರವಾಗುವುದೆಂದು ಹೇಳಿದೆ. ಈ ನ್ಯಾಯದಿಂದ ಪಾಪಿಗಳಿಗೂ ಶರೀರವುಂಟಾಗುವುದಕ್ಕಾಗಿ ಚಂದ್ರಲೋಕದಲ್ಲಿ ಕೆಲವು ದಿನಗಳು ತಂಗಿ ಅನಂತರ ಮೇಲೆ ಹೇಳಿದ ಮೇಘಾದಿಗಳಲ್ಲಿ ತಂಗಿ ಬರಬೇಕಾದದ್ದು ಆವಶ್ಯಕವಾದ್ದರಿಂದ, ಪಾಪಿಗಳಿಗೂ ಚಂದ್ರಲೋಕ ಗಮನವನ್ನು ಒಪ್ಪಿಕೊಳ್ಳಬೇಕು—ಎಂದಲ್ಲಿ, ಬೇಡ, ಕೇವಲ ಪಾಪಿಗಳಿಗೆ ಶರೀರವುಂಟಾಗುವಾಗ ಅವರು ಚಂದ್ರಲೋಕಾದಿಗಳಲ್ಲಿ ತಂಗಿರಬೇಕೆಂಬುದಿಲ್ಲ. "ತೇನಾ ಸೌಲೋಕೋಽಸೌ ನ ಸಂಪೂರ್ಯತೇ"—ಎಂದು ಪಾಪಿಗಳು ದೇವಲೋಕಕ್ಕೆ ಹೋಗುವುದಿಲ್ಲವೆಂದೂ ಹೇಳಿದೆ. ಆದ್ದರಿಂದ, ಪಾಪಿಗಳಿಗೆ ಚಂದ್ರಲೋಕ ಗಮನವಿಲ್ಲ.

### ಸೂತ್ರ ೮—ಸ್ಮರ್ಯತೇಽಪಿ ಚ ಲೋಕೇ

**ಸೂತ್ರಾರ್ಥ**

[ಲೋಕೇ] = ಲೋಕದಲ್ಲಿ [ಸ್ಮರ್ಯತೇ, ಅಪಿ] = ಸ್ಮರಿಸಲ್ಪಟ್ಟೂ ಇದೆ.

**ವಿವರಣೆ**

ಮೇಲೆ ಹೇಳಿದ ಪಂಚಮಾಹುತಿಯಿಲ್ಲದೆಯೇ ದ್ರೌಪದಿ ಮುಂತಾದವರಿಗೆ ಶರೀರ ಅಗ್ನಿಯಲ್ಲಿಯಿಂದ ಉಂಟಾಯಿತೆಂಬುದು ಲೋಕದಲ್ಲಿ ಪ್ರಸಿದ್ಧವಾಗಿದೆ.

### ಸೂತ್ರ ೯—ದರ್ಶನಾಚ್ಚ

**ಸೂತ್ರಾರ್ಥ**

(ಪಂಚಮಾಹುತಿಯಿಲ್ಲದೆ ಶರೀರೋತ್ಪತ್ತಿ) ವೇದದಲ್ಲಿ ಹೇಳುವುದರಿಂದಲೂ, ಪಾಪಿಗಳಿಗೆ ಚಂದ್ರಲೋಕ ಗಮನವಿಲ್ಲ).

**ವಿವರಣೆ**

''ತೇಷಾಂ ಖಲ್ವೇಷಾಂ ಭೂತಾನಾಂ...''ಎಂಬ ಶ್ರುತಿಯಲ್ಲಿ ಹೇನು ಉದ್ಭಿಜ್ಜವೇ ಹುಂತಾದುವಕ್ಕೆ ಮೇಲೆ ಹೇಳಿದ ಪಂಚಮಾಹುತಿಯಿಲ್ಲದೆಯೇ ಶರೀರವುಂಟಾಗು ವುದೆಂದೂ ಹೇಳಿದೆ.

ಸೂತ್ರ ೧೧—**ತೃತೀಯ ಶಬ್ದಾವರೋಧಸ್ಸಂಶೋಕಜಸ್ಯ**

**ಸೂತ್ರಾರ್ಥ**

[ಸಂಶೋಕಜಸ್ಯ] = ಬೆವರಿನಿಂದುಂಟಾದ (ಹೇನು ಮುಂತಾದ) ಜಂತುವಿಗೆ [ತೃತೀಯ ಶಬ್ದಾವರೋಧಃ] = ಮೂರನೆಯದಾದ ಉದ್ಭಿಜ್ಜ ಶಬ್ದದಿಂದ ಸಂಗ್ರಹ ಮಾಡಲ್ಪಟ್ಟಿದೆ.

**ವಿವರಣೆ**

ಆ ವೇದವಾಕ್ಯದಲ್ಲಿ ಅಂಡಜವೆಂದೂ ಜೀವಜವೆಂದೂ ಉದ್ಭಿಜ್ಜವೆಂದೂ, ಮೂರು ವಿಧವಾದ ಜಂತುಗಳನ್ನೇ ಹೇಳಿದೆ. ಸ್ವೇದಜವೆಂದೊಂದನ್ನು ಹೇಳಲಿಲ್ಲವಲ್ಲಾ! ಎಂದಲ್ಲಿ, ಮೂರನೇ ಪದವಾದ ಉದ್ಭಿಜ್ಜ ಶಬ್ದಕ್ಕೇ ಸ್ವೇದಜವೂ ಅರ್ಥವೆಂದು ಕಂಡುಕೊಳ್ಳುವುದು,-ಆದ್ದರಿಂದ ಪಾಪಿಗಳಿಗೆ ಚಂದ್ರಲೋಕ ಗಮನವಿಲ್ಲವೆಂದು ಸಿದ್ಧಾಂತ-

## 4. ತತ್ಸ್ವಾಭಾವ್ಯಾಪತ್ತ್ಯಧಿಕರಣ

**ಸೂತ್ರ— ತತ್ಸ್ವಾಭಾವ್ಯಾಪತ್ತಿರುಪಪತ್ತೇಃ**

**ಸಂಗತಿ**

ಇಷ್ಟಾದಿಕಾರಿಗಳು ಭೂತಸೂಕ್ಷ್ಮ ಪರಿಷ್ವಕ್ತರಾಗಿ, ಸಾನುಶಯರಾಗಿ ಚಂದ್ರನಿಂದ ಇಳಿಯುತ್ತಾರೆಯೆನ್ನಲಾಯಿತು. ಇಳಿಯುವ ಪ್ರಕಾರವೂ, ''ಅಥೈತಮೇವಾಧ್ವಾನಂ ಪುನರ್ನಿವರ್ತನ್ತೇ ಯ ಥೇತಮಾಕಾಶಂ ಆಕಾಶಾದ್ವಾಯುಂ ವಾಯುರ್ಭೂತ್ವಾ ಧೂಮೋ ಭವತಿ ಧೂಮೋಭೂತ್ವಾಭ್ರಂ ಭವತ್ಯಭ್ರಂ ಭೂತ್ವಾಮೇಘೋ ಭವತಿ ಮೇಘೋ ಭೂತ್ವಾಪ್ರವರ್ಷತಿ''—ಎಂದು ವಚನವಿದೆ. ''ಯಥೇತಮನೇವಂ ಚ ...''—ಎಂದೂ ಹೇಳಿದೆ. ಇದರಲ್ಲಿ ಆಕಾಶಾದಿಗಳ ಪ್ರತಿಪತ್ತಿಯಲ್ಲಿ ದೇವಮನಷ್ಯಾದಿ ಭಾವದಂತೆ ಆಕಾಶಾದಿ ಭಾವವೇ ಅಥವಾ, ಅದರ ಸಾದೃಶ್ಯಾಪತ್ತಿ ಮಾತ್ರವೇ?—ಎಂದು ವಿಚಾರದಿಂದ ಸಂಗತಿ-

**ಸೂತ್ರಾರ್ಥ**

ಇದರಲ್ಲಿ ಚಂದ್ರಲೋಕದಿಂದ ಇಳಿಯುವಾಗಿನ ವಿಧವನ್ನು ಹೇಳುತ್ತಾರೆ:— ಚಂದ್ರಲೋಕದಿಂದ ಭೂಲೋಕಕ್ಕೆ ಜೀವನು ಹಿಂತಿರುಗುವಾಗ ಆಕಾಶವಾಗಿಯೂ ಅನಂತರ ವಾಯುವಾಗಿಯೂ, ಆಮೇಲೆ ಧೂಮವಾಗಿಯೂ ಮೇಘವಾಗಿಯೂ ಆಗುತ್ತಾನೆಂದು ಹೇಳಿದೆ. ಇಲ್ಲಿ ಆಕಾಶವಾಗುವುದೆಂದರೆ ಭೂತಾಕಾಶವನ್ನು ಶರೀರವಾಗಿ ಹೊಂದುವುದೇ? ಆಕಾಶದ ಹಾಗಿರುವುದೇ?—ಎಂದು ಸಂಶಯ. ಚಂದ್ರಲೋಕದಲ್ಲಿ ಅಮೃತಮಯವಾದ ಶರೀರವನ್ನೆತ್ತುವ ಹಾಗೆ ಆಕಾಶವೆಂಬ ಶರೀರವನ್ನೆತ್ತುವುದೇ ಆಕಾಶವಾಗುವುದೆಂಬುದರ ಅರ್ಥವೆಂದು ಪೂರ್ವಪಕ್ಷ.

ಶರೀರವನ್ನೆತ್ತುವುದು ಸುಖದುಃಖಾನುಭವಕ್ಕಾಗಿ. ಆಕಾಶಾದಿಗಳನ್ನು ಶರೀರವಾಗಿ ಹೊಂದಿ ಜೀವನು ಸುಖ ದುಃಖಗಳನ್ನು ಅನುಭವಿಸುವುದಿಲ್ಲವಾದ್ದರಿಂದ ಭೂತಾಕಾಶಾದಿಗಳನ್ನು ಶರೀರವಾಗಿ ಹೊಂದುವುದರಲ್ಲಿ ಪ್ರಯೋಜನವಿಲ್ಲವಾದ್ದರಿಂದ, ಆಕಾಶಾದಿಗಳನ್ನು ಶರೀರವಾಗಿ ತೆಗೆದುಕೊಳ್ಳುವುದಿಲ್ಲ. ಆಕಾಶಾದಿಗಳ ಸಂಸರ್ಗದಿಂದ ಅವುಗಳ ಹಾಗೆ ಇರುತ್ತಾನೆಂಬುದು ಸಿದ್ಧಾಂತ.

## 5. ನಾತಿಚಿರಾಧಿಕರಣ

### ಸೂತ್ರ—ನಾತಿಚಿರೇಣ ವಿಶೇಷಾತ್

**ಸಂಗತಿ**

ಆಕಾಶಾದಿ ಪ್ರಾಪ್ತಿಯಿಂದ ಹಿಡಿದು ವ್ರೀಹ್ಯಾದಿ ಪ್ರಾಪ್ತಿಯವರಿಗೆ ಅಲ್ಲಲ್ಲಿ ಚಿರಕಾಲ ಇರುತ್ತಾನೆಯೆ? ಅಥವಾ ಆ ಬಗ್ಗೆ ನಿಯಮವೇನೂ ಇಲ್ಲವೇ?—ಎಂದು ವಿಚಾರದಿಂದ ಸಂಗತಿ.

**ಸೂತ್ರಾರ್ಥ**

[ವಿಶೇಷಾತ್] = ಧಾನ್ಯದಲ್ಲಿ ಮಾತ್ರ ಬಹುಕಾಲ ಇರುತ್ತಾನೆಂದು ವಿಶೇಷಿಸಿರುವುದರಿಂದ, [ಅತಿ ಚಿರೇಣ] = (ಆಕಾಶಾದಿಗಳಲ್ಲಿ) ಬಹುಕಾಲ [ನ] = ಇರುವುದಿಲ್ಲ.

**ವಿವರಣೆ**

ಜೀವನು ಇಳಿಯುವಾಗ ಆಕಾಶ—ವಾಯು ಮುಂತಾದುವುಗಳಲ್ಲಿ ಬಹುಕಾಲ ವಿದ್ದು ಬರುವನೋ? ಅಥವಾ ಅಲ್ಲಿಂದ ಬೇಗ ಇಳಿಯುತ್ತಾನೆಯೋ? ಅಥವಾ ಸ್ವಲ್ಪ ಹೀಗೂ ಸ್ವಲ್ಪ ಹಾಗೂ ಇಳಿದು ಬರುವನೋ?—ಎಂದು ಸಂಶಯ. ಬೇಗ ಇಳಿಯುತ್ತಾನೆಯೆಂದೂ, ಅಲ್ಲಿ ಸ್ವಲ್ಪಕಾಲ, ಇಲ್ಲಿ ಸ್ವಲ್ಪಕಾಲ ತಂಗುತ್ತಾನೆಂದೂ ಹೇಳದಿರುವುದರಿಂದ, ಅದರಲ್ಲಿ ನಿಯಮವಿಲ್ಲ—ಎಂದು ಪೂರ್ವಪಕ್ಷ.

"ಅತೋವೈಖಲು ದುರ್ನಿಷ್ಪ್ರಪತರಂ",—ಎಂದು ಮುಂದೆ ವ್ರೀಹಿ(ಧಾನ್ಯದಲ್ಲಿ) ಯಿಂದ ಶೀಘ್ರದಲ್ಲಿ ಈ ಜೀವ ಹೊರಕ್ಕೆ ಬರುವುದಿಲ್ಲವೆಂದು ಹೇಳುವುದರಿಂದ, ಅದಕ್ಕೆ ಹಿಂದಿನ ಆಕಾಶಾದಿಗಳಲ್ಲಿ ಚಿರಕಾಲ ತಂಗುವುದಿಲ್ಲವೆಂದು ನಿಶ್ಚಯಿಸಲ್ಪಟ್ಟಿದೆಯೆಂದು ಸಿದ್ಧಾಂತ.

## 6. ಅನ್ಯಾಧಿಷ್ಠಿತಾಧಿಕರಣ

### ಸೂತ್ರ—ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್

**ಸಂಗತಿ**

ಇಳಿಯುವ ಜೀವರಿಗೆ ವ್ರೀಹ್ಯಾದಿ ಭಾವವೆಂಬುದು ವ್ರೀಹ್ಯಾದಿ ಶರೀರಕವೆಂದೇ, ಅಥವಾ, ವ್ರೀಹ್ಯಾದಿ ಸಂಶ್ಲೇಷ ಮಾತ್ರವೇ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಪೂರ್ವವತ್] = (ಆಕಾಶಾದಿಗಳಲ್ಲಿ ಹೇಗೋ ಹಾಗೆ) ಮುಂಚೆಯಂತೆಯೇ (ಎಂದು) [ಅಭಿಲಾಪಾತ್] = ಹೇಳುವುದರಿಂದ [ಅನ್ಯಾಧಿಷ್ಠಿತೇ] = ಬೇರೊಬ್ಬ ಜೀವನಿಂದ ಅಧಿಷ್ಠಿತವಾದ ವ್ರೀಹಿಯಲ್ಲಿ ಜೀವನು ಸಂಯೋಗವನ್ನು ಮಾತ್ರ ಹೊಂದುತ್ತಾನೆ.

**ವಿವರಣೆ**

ಜೀವ ದೇವಲೋಕದಲ್ಲಿಂದ ಆಕಾಶ, ವಾಯು, ಧೂಮ, ಅಭ್ರ,—ಇವುಗಳ ಮಾರ್ಗವಾಗಿ ಇಳಿದು, "ವ್ರೀಹಿಯವಾ ಓಷಧಿವನಸ್ಪತಯಃ ತೈಲಮಾಷಾ ಜಾಯನ್ತೇ" —ಎಂದು ವ್ರೀಹ್ಯಾದಿ ಧಾನ್ಯಗಳಲ್ಲಿ ಒಬ್ಬನಾಗಿ ಹುಟ್ಟುತ್ತಾನೆಯೆಂದು ಹೇಳಿದೆ. ಧಾನ್ಯಾದಿಗಳಾಗಿ ಹುಟ್ಟುವುದೆಂದರೆ, ತನ್ನ ಸುಖದುಃಖಾನುಭವ ಯೋಗ್ಯವಾಗಿ ಅದದನ್ನು ಶರೀರವಾಗಿ ಪರಿಗ್ರಹಿಸುವನೋ ಬೇರೊಬ್ಬನಿಂದ ಹಾಗೆ. ಪರಿಗ್ರಹಿಸಲ್ಪಟ್ಟ ಧಾನ್ಯದಲ್ಲಿ ಸೇರಿಕೊಂಡಿದ್ದಾನೆಯೋ? —ಎಂದು ಸಂಶಯ. ಹುಟ್ಟುತಾನೆಂದು ಹೇಳಿರುವುದರಿಂದ ಅದದನ್ನು ಶರೀರವಾಗಿ ಪರಿಗ್ರಹಿಸುತ್ತಾನೆಂದು ಪೂರ್ವಪಕ್ಷ. ಆಕಾಶಾದಿಗಳಲ್ಲಿ ಹೇಗೋ ಹಾಗೆ ಧಾನ್ಯದಲ್ಲಿ ಹುಟ್ಟುವುದಕ್ಕೂ ಪುಣ್ಯಪಾಪ ರೂಪ ಹೇತುವೊಂದನ್ನೂ ಹೇಳದುದರಿಂದ ಧಾನ್ಯವನ್ನು ಶರೀರವಾಗಿ ಪರಿಗ್ರಹಿಸುವುದಿಲ್ಲ. ಮತ್ತೊಬ್ಬ ಜೀವನು ಪರಿಗ್ರಹಿಸಿದ ಧಾನ್ಯದಲ್ಲಿ ಸೇರಿದ್ದು ಮಾತ್ರ ಹುಟ್ಟುತ್ತಾನೆಂದು ಸಿದ್ಧಾನ್ತ.

ಸೂತ್ರ ೨—**ಅಶುದ್ಧಮಿತಿ ಚೇನ್ನಶಬ್ದಾತ್**

**ಸೂತ್ರಾರ್ಥ**

[ಅಶುದ್ಧಂ] = (ಯಜ್ಞಾದಿಗಳು) ಶುದ್ಧವಲ್ಲ (ಹಿಂಸಾ ರೂಪ) [ಇತಿ ಚೇತ್] = ಎಂದಲ್ಲಿ, [ಶಬ್ದಾತ್] = (ಇದು ಹಿಂಸೆಯಲ್ಲವೆಂದು) ವೇದವಾಕ್ಯ ಹೇಳುವುದರಿಂದ [ನ] = (ಇದು) ಹಿಂಸೆಯಾಗದು.

**ವಿವರಣೆ**

ಧಾನ್ಯವಾಗಿ ಹುಟ್ಟಲು. ಹೇತುವನ್ನು ಹೇಳದಿದ್ದಾಗ್ಯೂ, ಇವನು ಮಾಡಿದ ಯಜ್ಞಯಾಗಾದಿಗಳಲ್ಲಿ ಮಾಡುವ ಪಶುಹಿಂಸೆ ಪಾಪವಾದ್ದರಿಂದ ಆ ಪಾಪವನ್ನು ಅನುಭವಿಸುವುದಕ್ಕಾಗಿ ಧಾನ್ಯವಾಗಿ ಹುಟ್ಟುತ್ತಾನೆಂದು ನಿಶ್ಚಯಿಸಬಹುದೆಂದರೂ, ಯಾಗಾದಿಗಳಲ್ಲಿ ಮಾಡಿದ ಪಶುಹಿಂಸೆ ಪಾಪವಲ್ಲ. ಆ ಪಶು ಸ್ವರ್ಗಕ್ಕೆ ಹೋಗಿ ಸುಖಿಸುವುದೆಂದು ಹೇಳುವುದರಿಂದ, ಅದು ಧಾನ್ಯವಾಗಿ ಹುಟ್ಟುವುದಕ್ಕೆ ಹೇತುವಾಗದು.

ಸೂತ್ರ ೩—**ರೇತಸ್ಸಿಗ್ಯೋಗೋಽಥ**

**ಸೂತ್ರಾರ್ಥ**

[ಅಥ] = ಅದಕ್ಕೆ ಮೇಲೆ [ರೇತಸ್ಸಿಗ್ಯೋಗಃ] = ರೇತಸ್ಸೇಚನ ಮಾಡುವ ಪುರುಷನಲ್ಲಿ ಸೇರುವುದು (ಜೀವನಿಗೆ ಹೇಳಿದೆ).

**ವಿವರಣೆ**

ಅದರ ನಂತರ, ಆ ಜೀವನು ಸೇರಿರುವ ಧಾನ್ಯವನ್ನು ಯಾವನು ಭುಜಿಸುತ್ತಾನೆಯೋ, ಮತ್ತು ಸ್ತ್ರೀಯಲ್ಲಿ ರೇತಸ್ಸೇಚನ ಮಾಡುವನೋ—ಆ ಪುರುಷನಿಂದ ಬಂದು ಆ ಜೀವ ಆ ಸ್ತ್ರೀಯಲ್ಲಿ ಸೇರುತ್ತಾನೆ. ಹೀಗೆ ಪುರುಷನಲ್ಲಿಯೂ ಅದಕ್ಕೆ ಪೂರ್ವ

ಆಕಾಶಾದಿಗಳಲ್ಲಿಯೂ ಸೇರಿರುವಿಕೆಯನ್ನೇ ಹೇಳಿರುವುದರಿಂದ ಮಧ್ಯದಲ್ಲಿಯು ಧಾನ್ಯದಲ್ಲಿಯೂ, ಸೇರಿದ್ದಾನೆಂದೇ ಒಪ್ಪಿಕೊಳ್ಳಬೇಕು.

ಸೂತ್ರ ೪—**ಯೋನೇಶ್ಶರೀರಂ**

**ಸೂತ್ರಾರ್ಥ**

[ಯೋನೇಃ] = ಯೋನಿಯನ್ನು ಹೊಂದಿದ ನಂತರ [ಶರೀರಂ]ಶರೀರ ವುಂಟಾಗುವುದು.

**ವಿವರಣೆ**

ಸ್ತ್ರೀಯ ಗರ್ಭದಲ್ಲಿ ಸೇರಿದ ಮೇಲೆಯೇ ಜೀವನಿಗೆ ಶರೀರವುಂಟಾಗುವುದು ಆ ಶರೀರದಲ್ಲಿಯೇ ಆ ಜೀವನಿಗೆ ಸುಖದುಃಖಾನುಭವವುಂಟಾಗುವುದು. ಅದಕ್ಕೆ ಮುಂಚೆ ಸುಖದುಃಖಾನುಭವವಿಲ್ಲವಾದ್ದರಿಂದ ಇದಕ್ಕೆ ಮುಂಚಿನ ಆಕಾಶವಾಯ್ವಾದಿಗಳು ಆ ಜೀವನಿಗೆ ಶರೀರವಾಗಲಾರವು—ಎಂದು ಸಿದ್ಧಾನ್ತ.

## ಪಾದ 2 ಉಭಯಲಿಂಗಪಾದ

**ಇಲ್ಲಿ ಒಂದು ಆಕ್ಷೇಪ**

[ ವೈರಾಗ್ಯಪಾದವಾದ ಮೇಲೆ ಈ ಉಭಯಲಿಂಗ ಪಾದವನ್ನೇಕೆ ಆರಂಭಿಸಬೇಕು? ಮೊದಲೆರಡು ಅಧ್ಯಾಯಗಳಿಂದ ಬ್ರಹ್ಮವು ತನಗೇ ಅಸಾಧಾರಣವಾದ ಧರ್ಮಗಳಿಂದ ಬಹುಪ್ರಕಾರವಾಗಿ ಪ್ರತಿಪಾದಿತವಾಯಿತು. ಇದು ಸಾಧನಾಧ್ಯಾಯ. ಈ ಅಧ್ಯಾಯದಲ್ಲಿ ಸಮನ್ವಯಾವಿರೋಧಾಧ್ಯಾಯಗಳಲ್ಲಿ ಪ್ರತಿಪಾದ್ಯವಾದ ಬ್ರಹ್ಮವನ್ನು ಮತ್ತೆ ಆಕರ್ಷಿಸಿ ಚಿಂತಿಸುವುದೇಕೆ?—ಎಂದಲ್ಲಿ—ಇದು ಸಾಧನಾಧ್ಯಾಯವೆಂಬುದು ಸತ್ಯ. ಆದರೂ ಬ್ರಹ್ಮದ ಚಿಂತೆ ವಿಶೇಷತಃ ಕರ್ತವ್ಯ. ಸಾಧನ ಎರಡು ವಿಧ—ಸಾಧ್ಯೋಪಾಯ, ಸಿದ್ಧೋಪಾಯವೆಂಬುದಾಗಿ. ಸಿದ್ಧೋಪಾಯ—ಈಶ್ವರ—ಸಾಧ್ಯೋಪಾಯ—ಸದ್ವಿದ್ಯಾದಿ ಭೇದಗಳುಳ್ಳ ಅವನಲ್ಲಿ ಭಕ್ತಿಯೆಂಬುದೇ. ರೂಪಭೇದದಿಂದ ವಿದ್ಯಾಭೇದ. ಆ ರೂಪವೆಂಬುದು ವಿದ್ಯೆಯಿಂದ ಪ್ರಾಧಾನ್ಯತಃ ವೇದ್ಯವಾದ ಬ್ರಹ್ಮವೇ ಅದರ ರೂಪಭೇದಕ್ಕೆ ನಿಮಿತ್ತ ಅದರ ಗುಣ ಭೇದ. ಹೀಗೆ ಈ ಸಾಧನಾಧ್ಯಾಯದಲ್ಲಿ ಪ್ರತಿಪಾದ್ಯವಾದ ಸಾಧನ ರೂಪ ಭಕ್ತಿಗೆ ವಿಷಯವಾದ್ದರಿಂದ ಮತ್ತು ತಾನೂ ಸಿದ್ಧೋಪಾಯವಾಗಿ ಸಾಧನವೂ ಆದ್ದರಿಂದ, ಈ ಸಾಧನಾಧ್ಯಾಯದಲ್ಲಿ ಆ ಬ್ರಹ್ಮದ ಚಿಂತೆ ವಿಶೇಷ ಸಂಗತವೇ ಆಗಿದೆ.—ಎಂದು ಮೇಲಿನ ಆಕ್ಷೇಪಕ್ಕೆ ಸಮಾಧಾನ. ಬ್ರಹ್ಮ ಚಿಂತನವು ಪರಬ್ರಹ್ಮವನ್ನು ವಿಶದೀಕರಿಸುವುದರ ಮೂಲಕ—ವಿದ್ಯೆಗೆ ಉಪಕಾರಕವಾಗಿದೆ. ಅದರಿಂದ ಉಭಯಲಿಂಗತ್ವಾದಿ ವಿಶೇಷಣದಿಂದ ಕೂಡಿದ ಬ್ರಹ್ಮ ಇಲ್ಲಿ ಚಿಂತಿಸಲ್ಪಡುತ್ತೆ. ಆದ್ದರಿಂದ ಸಿದ್ಧೋಪಾಯತ್ವ ಪ್ರತಿಪಾದನಕ್ಕಾಗಿ ಬ್ರಹ್ಮ ಚಿಂತನವನ್ನು ಇಲ್ಲಿ ಮಾಡುವುದು ಸಫಲ. ಇದರಿಂದ ಪರಬ್ರಹ್ಮದಲ್ಲಿ ಅತಿಶಯ ತೃಷ್ಣೆಯುಂಟಾಗುವುದೆಂದು ಭಾವ—ತೃಷ್ಣಾವಿಶೇಷವಿಲ್ಲದಿದ್ದಲ್ಲಿ ಉಪಾಯದಲ್ಲಿ ಅಧಿಕಾರವೇ ಉಂಟಾಗದು. ಸ್ವರ್ಗತೃಷ್ಣೆಯುಳ್ಳವನು ಯಾಗಾದಿಗಳಲ್ಲಿ ಅಧಿಕಾರ ಹೊಂದಿದ್ದಾನೆ. ಹಾಗೆಯೇ ಪರಬ್ರಹ್ಮ ಪ್ರಾಪ್ತಿಕಾಮನು ಬ್ರಹ್ಮೋಪಾಸನಗಳಲ್ಲಿ ಅಧಿಕಾರ ಹೊಂದಿರುತ್ತಾನೆ.

ಆದ್ದರಿಂದ ಈ ಉಭಯಲಿಂಗಪಾದವು ಉಪಾಸನಾನುಷ್ಠಾನದಲ್ಲಿ ವಿಶೇಷವಾಗಿ ಉಪಕರಿಸುತ್ತದೆಯಾದ್ದರಿಂದ ಶಾರೀರಕಶಾಸ್ತ್ರದ ಸಾರವೆಂದು ಈ ಪಾದವೆನಿಸಿದೆಯಾಗಿ ನೈರರ್ಥ್ಯಕ್ಯ ಪ್ರಸಂಗವಿಲ್ಲ. ಅಲ್ಲದೆ, ಅಖಿಲ ಹೇಯಪ್ರತ್ಯನೀಕ ಕಲ್ಯಾಣೈಕತಾನತೆಯನ್ನು ಪ್ರತಿಪಾದಿಸುವ ಈ ಉಭಯಲಿಂಗಪಾದವು ಮೃಷಾವಾದಿ ಪ್ರಭೃತಿಗಳಾದ ಪರವಾದಿ ಗಳನ್ನು ಪ್ರತಿಕ್ಷೇಪಿಸುವುದರಲ್ಲಿಯೂ ವಿಶೇಷ ಉಪಕಾರಕವಾಗಿದೆಯಾದ್ದರಿಂದಲೂ, ಸಫಲವೆನಿಸಿದೆ. ಬ್ರಹ್ಮ ನಿರ್ಗುಣವೆನ್ನುವವರಿಗೆ ಬ್ರಹ್ಮಕ್ಕೆ ಅನಂತ ಕಲ್ಯಾಣಗುಣಗಳನ್ನು ಪ್ರತಿಪಾದಿಸುವ ಈ ಬ್ರಹ್ಮವಿದ್ಯಾವಿಭಾಗ ವ್ಯರ್ಥ. ಕಲ್ಪಿತ ಗುಣಗಳಿಂದ ಬ್ರಹ್ಮವಿದ್ಯಾ ವಿಭಾಗ ಸಫಲವೆನ್ನುವಲ್ಲಿ, ಅನಾದಿನಿಧನಾವಿಚ್ಛಿನ್ನ ಸಂಪ್ರದಾಯಾಗತವಾದ ಶ್ರುತ್ಯರ್ಥವು ಕಲ್ಪಿತವೆಂದಾದರೆ, ಏನನ್ನು ತಾನೇ ಕಲ್ಪಿಸಕೂಡದು? ಗುಣಗಳನ್ನು ಕಲ್ಪಿತವೆನ್ನುವವನು ವೇದಾಂತಕ್ಕೇ ಬಹಿರ್ಭೂತ. ವೇದಾಂತದಲ್ಲಿಯೂ ಕೂಡ,"ಮನೋಬ್ರಹ್ಮೇತ್ಯುಪಾಸೀತ" —ಮುಂತಾದುವುಗಳಲ್ಲಿ, "ಗರುಡಮಾತ್ಮಾನಂ ಜಾನೀಯಾತ್"—ಇತ್ಯಾದಿಯಂತೆ ವೇದಾಂತದಲ್ಲಿ ದೃಷ್ಟಿವಿಧಿ ಕಾಣಿಸುವುದಿಲ್ಲವೆ? ಅದರಂತೆ ಇಲ್ಲಿಯೂ ಏಕಾಗಬಾರದು! —ಎಂದರೆ, ಏಕತ್ರಗತಿಯಿಲ್ಲದೆ ದೃಷ್ಟಿವಿಧಿಯನ್ನು ಕಲ್ಪಿಸುವಲ್ಲಿ ಸರ್ವತ್ರ ಹಾಗೆಯೇ ಎನ್ನಲು ಶಕ್ಯವಿಲ್ಲ. ಅನ್ಯತ್ರ ಅನ್ಯಗುಣಾರೋಪದಿಂದ ಅನುಸಂಧಾನವಾದಲ್ಲಿ ದೃಷ್ಟಿ ವಿಧಿಯೆನಿಸುತ್ತದೆ. ಬ್ರಹ್ಮಕ್ಕಾದರೋ—ಸತ್ಯತ್ವ ಜ್ಞಾನತ್ವಾದಿಗಳು ಸ್ವರೂಪಗುಣವಾದ್ದ ರಿಂದ ಅಬಾಧ್ಯ. ಬ್ರಹ್ಮಕ್ಕೆ ನಿರ್ದೋಷತ್ವವನ್ನು ನಿತ್ಯವೆಂದಲ್ಲಿ ಅವರು ದೋಷ ಶಾಂತಿಗಾಗಿ ಯತ್ನಿಸುವುದು ವ್ಯರ್ಥ. ಏಕೆಂದರೆ, ಬ್ರಹ್ಮವ್ಯತಿರಿಕ್ತವಾದ, ಸಂಸಾರಿಯಾದ ಜೀವನೆಂಬವನೇ ಇಲ್ಲವಷ್ಟೆ! ನಿರ್ದೋಷತ್ವ ಕಲ್ಪ್ಯವೆಂದಲ್ಲಿ ದುಷ್ಟತ್ವವೇ ಬ್ರಹ್ಮಕ್ಕೆ ಪ್ರಕೃತಿಯೆಂದಾಗುವುದು. ಹೀಗೆ ಮೃಷಾವಾದಿಗಳ ಪ್ರತಿಕ್ಷೇಪಕ್ಕಾಗಿಯೂ ಕೂಡ — ಈ ಉಭಯಲಿಂಗಪಾದವು ಸಾರ್ಥಕ. ಈ ಪಾದದಲ್ಲಿರುವುದೆಲ್ಲವೂ ಸಗುಣೋಪಾಸನ ವಚನ. ಈ ಉಭಯಲಿಂಗ ಪಾದದಲ್ಲಿ ಬ್ರಹ್ಮವೇ ಚಿಂತ್ಯವೆಂದಲ್ಲಿ, ಆಗ್ಗೆ ಜೀವನಿಗೆ ಸ್ವಪ್ನಾದ್ಯವಸ್ಥಾ ಕಥನ ಹೇಗೆ ಘಟಿಸುತ್ತದೆ?—ಎಂದಲ್ಲಿ, ಸ್ವಪ್ನಾದಿ ದೃಷ್ಟಿಯೂ ಕೂಡ ಭಗವತ್ಸಂಕಲ್ಪದಿಂದಲೇ ಸಿದ್ಧಿಸುವುದೆಂದು, ಅದರ ಪ್ರದರ್ಶನವೂ ಕೂಡ ಭಗವನ್ಮಾ ಹಾತ್ಮ್ಯ ಪ್ರದರ್ಶನಪರವಾದ್ದರಿಂದ ಇಲ್ಲಿ ಸಂಗತವಾಗಿದೆಯೆಂದು ಉತ್ತರ. ಇಲ್ಲಿ ಜೀವನನ್ನು ಅವನ ಸ್ವಂತ ಪ್ರಾಧಾನ್ಯತೆಯಿಂದ ಹೇಳಿಲ್ಲ. ಮತ್ತೇನೆಂದರೆ, ಭಗವಂತನಿಗೆ ಜಾಗ್ರತ್ಸ್ವಪ್ನ ಸುಷುಪ್ತ್ಯಾದಿ ಸರ್ವಾವಸ್ಥೆಗಳಲ್ಲಿಯೂ ಕರ್ತೃತ್ವ ವುಂಟೆಂಬುದನ್ನು ಪ್ರತಿಪಾದಿಸುವುದರಿಂದ ಪರಮಾತ್ಮನಿಗೇ ಈ ಪಾದದಲ್ಲಿ ಸರ್ವತ್ರ ಪ್ರಾಧಾನ್ಯ. ಸಂಸಾರಿಯಾದ ಜೀವನನ್ನು ಹೇಳುವುದರಿಂದ, ಸಂಸಾರ ಮೋಚಕನಾದ ಪರಮಾತ್ಮನ ಮಾಹಾತ್ಮ್ಯ ಸಿದ್ಧಿಸುತ್ತದೆ.]

## 1. ಸನ್ಧ್ಯಾಧಿಕರಣ

### ಸೂತ್ರ—ಸನ್ಧ್ಯೇಸೃಷ್ಟಿರಾಹ ಹಿ

**ಸಂಗತಿ**

ಹೀಗೆ ಕರ್ಮಾನುರೂಪವಾದ ಗಮನಾಗಮನ ಜನ್ಮಾದಿ ಯೋಗದಿಂದ, ಜಾಗ್ರದ್ದಶೆಯಲ್ಲಿರುವ ಜೀವನು ದುಃಖಿಯೆಂದು ಖ್ಯಾತಿತವಾಯಿತು. ಈಗ ಅವನ ಸ್ವಪ್ನಾವಸ್ಥೆ ಪರೀಕ್ಷಿಸಲ್ಪಡುತ್ತೆ.

**ಸೂತ್ರಾರ್ಥ**

[ಸಂಧ್ಯೇ] ಸ್ವಪ್ನದಲ್ಲಿ (ಕಾಣುವ ಪದಾರ್ಥಗಳ) [ಸೃಷ್ಟಿಃ] = ಸೃಷ್ಟಿಯು (ಜೀವನಿಂದ ಮಾಡಲ್ಪಟ್ಟದ್ದು) [ಆ ಹ ಹಿ] = (ಅವನನ್ನೇ ಕರ್ತೃವನ್ನಾಗಿ ವೇದ) ಹೇಳಿದೆಯಲ್ಲವೆ!

**ವಿವರಣೆ**

ಈ ಪಾದದಲ್ಲಿ ಪರಮಪುರುಷನಲ್ಲಿ ಭಕ್ತಿಯುಂಟಾಗುವುದಕ್ಕಾಗಿ ಅವನ ಕಲ್ಯಾಣ ಗುಣಗಳನ್ನೂ ಹೇಯ ಪ್ರತ್ಯನೀಕತ್ವವನ್ನೂ ಹೇಳಿದೆ. ''ನತತ್ರ ರಥಾ ರಥಯೋಗಾನ ಪನ್ಥಾನೋ ಭವನ್ತ್ಯಥರಥಾನ್ ರಥಯೋಗಾನ್ ಪಥಸ್ಸೃಜತೇ''—ಎಂದು ಉಪಕ್ರಮಿಸಿ, ''ಸ ಹಿ ಕರ್ತಾ,''—ಎಂಬುದರವರಿಗೆ, ಸ್ವಪ್ನದಲ್ಲಿ ಜೀವನು ರಥ ಮುಂತಾದ ಅನೇಕ ಪದಾರ್ಥಗಳನ್ನು ಕಾಣುತ್ತಾನೆ. ಅವು ಅದಕ್ಕೆ ಮುಂಚೆ ಇಲ್ಲ. ಆಗಲೇ ಸೃಷ್ಟಿಸಲ್ಪಡುವುವು. ಅವುಗಳ ಸೃಷ್ಟಿಗೆ ಭಗವಂತನೇ ಕರ್ತಾ ಎಂದು ಹೇಳಿದೆ. ಇಲ್ಲಿ ಆ ಪದಾರ್ಥಗಳನ್ನು ಸೃಷ್ಟಿಸುವವನು ಜೀವನೋ? ಪರಮಪುರುಷನೋ?—ಎಂದು ಸಂಶಯ. ಇದರ ಹಿಂದಿನ ವಾಕ್ಯದಲ್ಲಿ ಸ್ವಪ್ನವನ್ನು ನೋಡತಕ್ಕವನು ಜೀವನೆಂದು ಹೇಳಿ, ಇಲ್ಲಿ ಅವನು ಕರ್ತಾ ಎಂದು ಹೇಳಿರುವುದರಿಂದ ಜೀವನೇ ಕರ್ತೃವೆಂದು ತೋರುವುದು. ಅವನಿಗೂ ಸತ್ಯಸಂಕಲ್ಪತ್ವಾದಿಗಳು—ಅಂದರೆ, ತಾನು ನೆನೆಸಿದಂತೆ ಮಾಡಬಲ್ಲ ಸಾಮರ್ಥ್ಯ ಉಂಟೆಂದು ಹೇಳುವುದರಿಂದ ಜೀವನೇ ಸ್ವಪ್ನದಲ್ಲಿ ತಾನು ಕಾಣುವ ಪದಾರ್ಥಗಳನ್ನು ಸೃಷ್ಟಿಸುತ್ತಾನೆಂದು ಪೂರ್ವಪಕ್ಷ.

ಸೂತ್ರ ೨—**ನಿರ್ಮಾತಾರಂ ಚೈಕೇಪುತ್ರಾದಯಶ್ಚ**

**ಸೂತ್ರಾರ್ಥ**

[ಏಕೇ] = ಕೆಲವರು [ನಿರ್ಮಾತಾರಂ] = (ಜೀವನನ್ನು) ಸೃಷ್ಟಿಕರ್ತೃವನ್ನಾಗಿ (ಹೇಳುತ್ತಾರೆ) [ಪುತ್ರಾದಯಃ ಚ] = ಪುತ್ರಾದಿಗಳೂ (ಸ್ವಪ್ನದಲ್ಲಿ ಸೃಷ್ಟಿಸಲ್ಪಟ್ಟ ವಸ್ತುಗಳು)

**ವಿವರಣೆ**

'ಯ ಏಷ ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ''—ಎಂದು ತನಗೆ ಇಚ್ಛಾವಿಷಯಗಳಾದ ಪುತ್ರ—ಪಶು—ಧನಾದಿಗಳನ್ನು ಜೀವನಾದ ಪುರುಷನು ಸೃಷ್ಟಿಸುತ್ತಾನೆಯೆಂದು ಹೇಳುವುದರಿಂದ ಜೀವನೇ ಸೃಷ್ಟಿಸುತ್ತಾನೆ ಎಂದಲ್ಲಿ

ಸೂತ್ರ ೩—**ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್**

**ಸೂತ್ರಾರ್ಥ**

[ಕಾರ್ತ್ಸ್ನ್ಯೇನ] = ಸಂಪೂರ್ಣವಾಗಿ [ಅನಭಿವ್ಯಕ್ತಸ್ವರೂಪತ್ವಾತ್] = (ಜೀವನ ಸತ್ಯಸಂಕಲ್ಪತ್ವ ಸಂಸಾರದಶೆಯಲ್ಲಿ) ಪ್ರಕಟ ಸ್ವರೂಪವುಳ್ಳದಾಗದುದರಿಂದ, [ಮಾಯಾಮಾತ್ರಂ] = ಆಶ್ಚರ್ಯಕರವಾದ ಸ್ವಪ್ನ ಪದಾರ್ಥಗಳೆಲ್ಲವೂ (ಪರಮಪುರುಷನಿಂದಲೇ ಸೃಷ್ಟಿಸಲ್ಪಡುತ್ತವೆ.)

**ವಿವರಣೆ**

ಈ ಸೂತ್ರದಲ್ಲಿ ಮೇಲಿನ ಪೂರ್ವಪಕ್ಷವನ್ನು ನಿರಸನ ಮಾಡುತ್ತಾರೆ:—ಜೀವನಿಗೆ ಸತ್ಯಸಂಕಲ್ಪತ್ವವಿದ್ದಾಗ್ಯೂ ಅದು ಸಂಸಾರದಶೆಯಲ್ಲಿ ಕಾರ್ಯಕರವಾಗದೆ ಮರೆಸಿಕೊಂಡಿರುವುದರಿಂದ ಆ ಪದಾರ್ಥಗಳನ್ನು ಸೃಷ್ಟಿಸಲು ಜೀವ ಸಮರ್ಥನಾಗಲಾರನು. ಪರಮಪುರುಷನೇ ಸೃಷ್ಟಿಸುತ್ತಾನೆ. ಈ ಪ್ರಕರಣದಲ್ಲಿ ಉಪಕ್ರಮದಲ್ಲಿ,"ಯ ಏಷ ಸುಪ್ತೇಷು ಜಾಗರ್ತಿ"—(ನಿದ್ರಿಸುತ್ತಿರುವಾಗ ಯಾವನು ಎಚ್ಚರದಿಂದದ್ದಾನೆಯೋ) ಎಂದೂ, ಕೊನೆಯಲ್ಲಿ, "ತಸ್ಮಿನ್ ಲೋಕಾಶ್ರಿತಾಸ್ಸರ್ವೇ"—(ಅವನಲ್ಲಿ ಸಮಸ್ತ ಲೋಕಗಳೂ ಆಶ್ರಯಿಸಿವೆ) ಎಂದೂ ಪರಮಪುರುಷನನ್ನೇ ಹೇಳಿರುವುದರಿಂದ, ನಡುವೆ ಇರುವ, "ಸ ಹಿ ಕರ್ತಾ", —ಎಂಬ ವಾಕ್ಯವೂ ಆ ಪರಮಪುರುಷನನ್ನೇ ಕರ್ತೃವನ್ನಾಗಿ ಹೇಳಿದೆಯೆಂದು ಸಿದ್ಧಾಂತ. ಸ್ವಪ್ನ ಪದಾರ್ಥಗಳು ಮತ್ತೊಬ್ಬನಿಗೆ ಕಾಣದೆಯೂ, ಕಾಲಾಂತರಗಳಲ್ಲಿಲ್ಲದೆಯೂ ವಿಚಿತ್ರವಾಗಿರುವುದರಿಂದ ಅವುಗಳನ್ನು ಮಾಯೆಯೆಂದು ಹೇಳಿದೆ.

ಸೂತ್ರ ೪—**ಪರಾಭಿಧ್ಯಾನಾತ್ತು ತಿರೋಹಿತಂ ತತೋಹ್ಯಸ್ಯ ಬನ್ಧ ವಿಪರ್ಯಯೌ**

**ಸೂತ್ರಾರ್ಥ**

[ಪರಾಭಿದ್ಯಾನಾತ್] = ಪರಮಪುರುಷನ ಸಂಕಲ್ಪದಿಂದ [ತಿರೋಹಿತಂ] = ಮರೆಸಲ್ಪಟ್ಟಿದೆ. [ತತಃ] = ಆ ಪರಮಪುರುಷನಿಂದ, [ಅಸ್ಯ] = ಈ ಜೀವನಿಗೆ [ಬನ್ಧವಿಪರ್ಯಯೌ] = ಸಂಸಾರ—ಮೋಕ್ಷಗಳು (ಉಂಟಾಗುವುವು)

**ವಿವರಣೆ**

ಜೀವನಿಗೆ ಸತ್ಯಸಂಕಲ್ಪತ್ವವು ಸ್ವಾಭಾವಿಕವಾದಲ್ಲಿ ಅದು ಸಂಸಾರದಶೆಯಲ್ಲಿ ಮರೆಸಿರುವುದೇಕೆ?—ಎಂದಲ್ಲಿ, ಇವನ ಕರ್ಮಾನುಗುಣವಾಗಿ ಪರಮಪುರುಷನ ಸಂಕಲ್ಪದಿಂದ ಮರೆಯಾಗಿರುವುದು. ಇವನ ಸಂಸಾರವೂ ಮೋಕ್ಷವೂ ಪರಮಪುರುಷನ ಸಂಕಲ್ಪದಿಂದಲೇ ಉಂಟಾಗುವುವು.

ಸೂತ್ರ ೫—**ದೇಹಯೋಗಾದ್ವಾ ಸೋಽಪಿ**

**ಸೂತ್ರಾರ್ಥ**

[ಸಃ, ಅಪಿ] = ಆ ಸತ್ಯಸಂಕಲ್ಪದ ಮರೆಯೂ [ದೇಹಯೋಗಾತ್] = ಶರೀರ ಸಂಬಂಧದಿಂದ (ಉಂಟಾಗುವುದು.)

**ವಿವರಣೆ**

ಈಗ ಈ ಶರೀರವೆಂಬ ಅಚಿತ್ತಿನ ಸಂಬಂಧದಿಂದಲೂ ಪ್ರಳಯದಲ್ಲಿ ಸೂಕ್ಷ್ಮವಾದ ಅಚಿತ್ತಿನ ಸಂಬಂಧದಿಂದಲೂ, ಜೀವನಿಗೆ ಸತ್ಯಸಂಕಲ್ಪತ್ವವು ಕಾರ್ಯಕರವಲ್ಲದೆ ಹೋಗಿಬಿಡುವುದು.

ಸೂತ್ರ ೬—**ಸೂಚಕಶ್ಚ ಹಿ ಶ್ರುತೇರಾಚಕ್ಷತೇ ಚ ತದ್ವಿದಃ**

**ಸೂತ್ರಾರ್ಥ**

[ಶ್ರುತೇಃ] = ವೇದವಾಕ್ಯದಿಂದ, [ಸೂಚಕಃ ,ಚ] = (ಸ್ವಪ್ನವು ಶುಭಾಶುಭಗಳಿಗೆ) ಸೂಚಕವಾಗಿರುವುದು (ಎಂದು ನಿಶ್ಚಯಿಸಲ್ಪಟ್ಟಿರುವುದು) [ತದ್ವಿದಃ] = ಸ್ವಪ್ನ ಶಾಸ್ತ್ರವನ್ನರಿತವರು [ಆ ಚಕ್ಷತೇ, ಚ] = (ಸ್ವಪ್ನವು ಶುಭಾಶುಭ ಸೂಚಕವೆಂದು) ಹೇಳುವರು.

**ವಿವರಣೆ**

ಸ್ವಪ್ನದಲ್ಲಿ ಸ್ತ್ರೀಯರನ್ನು ನೋಡಿದರೆ ಸಂಪತ್ತು ಉಂಟಾಗುವುದೆಂದೂ, ಕರಿಯ ಮನುಷ್ಯನನ್ನು ನೋಡಿದರೆ, ಅನಿಷ್ಟವುಂಟಾಗುವುದೆಂದೂ ಹೇಳಿದೆ. ಜೀವನು ಸ್ವಪ್ನ ಪದಾರ್ಥಗಳನ್ನು ಸೃಷ್ಟಿಸಿದಲ್ಲಿ ತನ್ನ ಒಳ್ಳೆಯದಕ್ಕಾಗಿ ಒಳ್ಳೆಯ ವಸ್ತುಗಳನ್ನೇ ಸೃಷ್ಟಿಸಿ ಅದನ್ನೇ ನೋಡುವನು. ಆಗ್ಗೆ ಕೆಟ್ಟ ಸ್ವಪ್ನ ಒಬ್ಬನಿಗೂ ಬರಕೂಡದು. ಆದ್ದರಿಂದ ಆ ಪಾದರ್ಥಗಳನ್ನು ಸೃಷ್ಟಿಸುವವನು ಪರಮಪುರುಷ—ಜೀವನಲ್ಲ.

## 3. ತದಭಾವಾಧಿಕರಣ

ಸೂತ್ರ—**ತದಭಾವೋನಾಡೀಷು ತಚ್ಛ್ರುತೇರಾತ್ಮನಿ ಚ**

**ಪ್ರತ್ಯುದಾಹೃತಿ ಸಂಗತಿ**

ಹಿಂದೆ ಸ್ವಪ್ನ ನಿರೂಪಿತವಾಯಿತು. ಈಗ ಸುಷುಪ್ತಿಸ್ಥಾನ ನಿರೂಪಣೆಯಾಗುತ್ತೆ.

**ಸೂತ್ರಾರ್ಥ**

[ತಚ್ಛ್ರುತೇಃ] = ಆ ಮೂರನ್ನೂ (ಸ್ಥಾನವಾಗಿ) ಹೇಳುವುದರಿಂದ,[ತದ ಭಾವಃ] = ಸ್ವಪ್ನವಿಲ್ಲದಿರುವಿಕೆ (ನಿದ್ರಿಸುವುದು) [ನಾಡೀಷು] = ನಾಡಿಗಳಲ್ಲಿಯೂ [ಆತ್ಮನಿ, ಚ] = ಆತ್ಮನಲ್ಲಿಯೂ (ಉಂಟಾಗುವುದು)

**ವಿವರಣೆ**

"ಆಸು ತದಾ ನಾಡೀಷು ಸುಪ್ತೋ ಭವತಿ",—(ಆಗ ಈ ನಾಡಿಗಳಲ್ಲಿ ನಿದ್ರಿಸುತ್ತಾನೆ) ಎಂದೂ, "ಪುರೀತತಿ ಶೇತೇ",—(ಪುರೀತತ್ ಎಂಬ ಸ್ಥಾನದಲ್ಲಿ ಮಲಗುತ್ತಾನೆ)—ಎಂದೂ, "ಸತಾ ಸೋಮ್ಯ ತದಾ ಸಂಪನ್ನೋ ಭವತಿ", (ಆಗ ಪರಮಾತ್ಮನೊಂದಿಗೆ ಸೇರುತ್ತಾನೆ) ಎಂದೂ, ಹೀಗೆ ಜೀವನು ಸ್ವಪ್ನವಿಲ್ಲದೆ ನಿದ್ರಿಸುತ್ತಾನೆ—ಎಂದು ಮೂರು ಸ್ಥಾನ ಹೇಳಲ್ಪಟ್ಟಿದೆ. ಪುರೀತತ್ = ಕರುಳು-ಅಂದರೆ-ಹೃದಯದ ಕೆಳಗೆ ಜಠರದ ಕೊನೆಯಿಂದ ಗುದದ್ವಾರದವರೆಗೆ ಇರುವ ಅನ್ನನಾಳದ ಭಾಗ. ಇಲ್ಲಿ ಮೂರು ಕಡೆಗಳಲ್ಲಿಯೂ ಒಂದೇ ಕಾಲದಲ್ಲಿ ನಿದ್ರಿಸುತ್ತಾನೆಯೋ,? ಅಥವಾ, ಒಂದೊಂದು ಕಾಲದಲ್ಲಿ ಒಂದೊಂದರಲ್ಲಿ ನಿದ್ರಿಸುವನೋ?—ಎಂದು ಸಂಶಯ. ಒಬ್ಬನು ಒಂದು ಕಾಲದಲ್ಲಿ ಮೂರು ಕಡೆಗಳಲ್ಲಿ ಇರುವುದು ಕೂಡದುದರಿಂದ ಒಂದೊಂದು ಕಾಲದಲ್ಲಿ ಒಂದೊಂದು ಕಡೆಯಲ್ಲಿರುತ್ತಾನೆಂದು ಪೂರ್ವಪಕ್ಷ.

ಒಬ್ಬನು ಉಪ್ಪರಿಗೆ ಮೇಲೆ ಮಂಚವನ್ನೂ, ಅದರ ಮೇಲೆ ಮೆತ್ತೆಯನ್ನೂ ಹಾಸಿಕೊಂಡು ಅದರ ಮೇಲೆ ಮಲಗಿರುವಲ್ಲಿ, ಅವನು ಉಪ್ಪರಿಗೆಯಲ್ಲಿ ಮಲಗಿದ್ದಾನೆ, ಮಂಚದಲ್ಲಿ ಮಲಗಿದ್ದಾನೆ, ಮೆತ್ತೆಯಲ್ಲಿ ಮಲಗಿದ್ದಾನೆ,—ಎಂದು ಒಬ್ಬನಿಗೇ ಒಂದೇ ಕಾಲದಲ್ಲಿ ಮೂರರಲ್ಲಿಯೂ ಮಲಗಿರುವುದು ಕೂಡುವುದರಿಂದ, ಅದರಂತೆಯೇ ಇಲ್ಲಿಯೂ ಮೂರರಲ್ಲಿಯೂ, ಮಲಗುತ್ತಾನೆ—ಎಂದು ಸಿದ್ಧಾಂತ.

ಸೂತ್ರ ೨—ಅತಃ ಪ್ರಬೋಧೋಽಸ್ಮಾತ್

**ಸೂತ್ರಾರ್ಥ**

[ಅಸ್ಮಾತ್] = ಈ ಪರಮಪುರುಷನಲ್ಲಿಂದ [ಪ್ರಬೋಧಃ] = ಎಚ್ಚರ (ಹೇಳಲ್ಪಡುತ್ತೆ) [ಅತಃ] = ಆದ್ದರಿಂದ (ಜೀವನು ಪರಮಾತ್ಮನಲ್ಲಿ ಮಲಗುತ್ತಾನೆ)

**ವಿವರಣೆ**

'ಸತ ಆಗಮ್ಯ ನ ವಿದುಃ ಸತ ಆಗಚ್ಛಾಮಹ ಇತಿ",—(ಜೀವನು ಎಚ್ಚರಗೊಳ್ಳುವಾಗ, ಪರಮಪುರುಷನಲ್ಲಿಂದ ಬರುತ್ತಾನೆ ಆದರೂ ನಾನು ಅಲ್ಲಿಂದ ಬಂದೆ—ಎಂದು ಅರಿಯುವುದಿಲ್ಲ)—ಎಂದು ಹೇಳಿರುವುದರಿಂದ, ನಿದ್ರಿಸುವಾಗ, ಅವನಲ್ಲಿ ಸೇರದೇ ಹೋದರೆ ಎಚ್ಚರಗೊಳ್ಳುವಾಗ ಅವನಲ್ಲಿಂದ ಬರುವುದು ಕೂಡದುದರಿಂದ, ಸುಷುಪ್ತಿ ಕಾಲದಲ್ಲಿ ನಿಯಮೇನ ಪರಮಪುರುಷನಲ್ಲಿಗೆ ಹೋಗಿ ಸೇರುತ್ತಾನೆಯೆಂದು ನಿಶ್ಚಯಿಸಲ್ಪಡುತ್ತೆ.

## 3. ಕರ್ಮಾನುಸ್ಮೃತಿ ಶಬ್ದವಿಧ್ಯಧಿಕರಣ

ಸೂತ್ರ—ಸ ಏವತು ಕರ್ಮಾನುಸ್ಮೃತಿ ಶಬ್ದವಿಧಿಭ್ಯಃ

**ಸಂಗತಿ ಪ್ರತ್ಯುದಾಹೃತಿ**

ನಿದ್ರೆಯಲ್ಲಿದ್ದವನೇ ಎಚ್ಚರಗೊಳ್ಳುತ್ತಾನೆಯೋ ಅಥವಾ ಅವನೇ ಬೇರೆಯೆ?—ಎಂದು ಸಂಗತಿ.

**ಸೂತ್ರಾರ್ಥ**

[ಕರ್ಮಾನುಸ್ಮೃತಿ ಶಬ್ದವಿಧಿಭ್ಯಃ] = ಕರ್ಮಾನುಭವದಿಂದಲೂ, ಅವನೇ ತಾನೆಂಬ ಸ್ಮರಣದಿಂದಲೂ, ಮುಂಚಿನ ಶರೀರದೊಡನೆಯೇ ಇದ್ದಾನೆಯೆಂಬ ವಾಕ್ಯದಿಂದಲೂ, ಮೋಕ್ಷೋಪಾಯ ವಿಧಾನದಿಂದಲೂ, [ಸಃ ಏವ] = ಅವನೇ (ಎಚ್ಚೆತ್ತು ಏಳುತ್ತಾನೆಯೆಂದು ನಿಶ್ಚಯಿಸಲ್ಪಡುತ್ತೆ).

**ವಿವರಣೆ**

ಸುಷುಪ್ತಿಗೆ ಅನಂತರ ಎಚ್ಚರ ಹೊಂದುವಾಗ ಪರಮಾತ್ಮನಿಂದ ಬರುವವನು ಮೊದಲು ಅವನಲ್ಲಿ ಹೋಗಿ ಸೇರಿದ್ದವನೇಯೋ, ಅಥವಾ ಬೇರೆಯಾದವನೋ?—ಎಂದು ಸಂಶಯ.

ಮೊದಲಿದ್ದವನು ಕರಣ ಕಳೇಬರಗಳನ್ನು ಬಿಟ್ಟು ಪರಮಾತ್ಮನಲ್ಲಿ ಲೀನನಾಗಿ, ಮುಕ್ತನಂತೆಯಾಗಿಬಿಟ್ಟಿದ್ದರಿಂದ, ಅವನು ಮತ್ತೆ ಬರುವುದಿಲ್ಲ. ಆದ್ದರಿಂದ ಅಲ್ಲಿಂದ ಅನಂತರ ಬರುವವನು, ಬೇರೆಯೇ—ಎಂದು ಪೂರ್ವಪಕ್ಷ.

ಸುಷುಪ್ತಿಯಲ್ಲಿ ಬ್ರಹ್ಮದಲ್ಲಿ ಲಯಿಸುವ ಜೀವನಿಗೆ ತತ್ತ್ವಜ್ಞಾನವಿಲ್ಲದುದರಿಂದ ಅವನು ಸುಷುಪ್ತಿಗೆ ಮುಂಚೆ ಮಾಡಿದ ಪುಣ್ಯಪಾಪಗಳನ್ನು ಅವನೇ ಅನುಭವಿಸಬೇಕಾದುದರಿಂದ, ಅದಕ್ಕಾಗಿ ಅವನೇ ಬರಬೇಕು. ಅಲ್ಲದೆ, ನಾನೇ ಮುಂಚೆ ಈ ಕಾರ್ಯವನ್ನು ಮಾಡಿದೆ, ಅನಂತರ ನಿದ್ರಿಸಿದೆ, ಈಗ ಎಚ್ಚರಗೊಂಡಿದ್ದೇನೆ—ಎನ್ನುತ್ತಾನೆ. ಇದರಿಂದಲೂ, ಅವನೂ ಇವನೂ ಒಬ್ಬನೇಯಾಗಿರಬೇಕು. ಅಲ್ಲದೆ, "ತ ಇಹ ವ್ಯಾಘ್ರೋ ವಾಸಿಂಹೋವಾ"—ಇತ್ಯಾದಿ ವಾಕ್ಯದಲ್ಲಿ, ಎಚ್ಚರಗೊಂಡ ಅನಂತರ ಮೊದಲು ಯಾರಾಗಿದ್ದನೋ, ಅವನೇ ಆಗಿರುವನು ಎಂದು ಹೇಳಿದೆ. ನಿದ್ರಿಸಿದ ಮಾತ್ರದಿಂದ ಮುಕ್ತನಾಗಿ ಹೋದಲ್ಲಿ ಮೋಕ್ಷಪ್ರಾಪ್ತಿಗಾಗಿ ಉಪಾಯಗಳನ್ನು ವಿಧಿಸುವ ಶಾಸ್ತ್ರಗಳು ನಿಷ್ಪ್ರಯೋಜನಗಳಾಗಿಬಿಡುವುವು. ಈ ಹೇತುಗಳಿಂದ ಮೊದಲು ಹೋಗಿ ಸೇರಿದವನೇ ಮತ್ತೆ ಬರುತ್ತಾನೆ—ಎಂದು ಸಿದ್ಧಾಂತ. ಸುಷುಪ್ತಿ ಕಾಲದಲ್ಲಿ ಕರಣ ಕಳೇಬರಗಳನ್ನು ಬಿಡುವುದೆಂಬುದೂ ಇಲ್ಲ. ಎಚ್ಚರವಾಗಿರುವಾಗ ಕೆಲಸ ಮಾಡಿ ಆಯಾಸವುಂಟಾದರೆ ಅದನ್ನು ತೀರಿಸಿಕೊಳ್ಳುವುದಕ್ಕಾಗಿ ಸ್ವಲ್ಪ ಕಾಲ ವ್ಯಾಪಾರ ಶೂನ್ಯನಾಗಿರುತ್ತಾನೆ ಆದ್ದರಿಂದ ಮುಕ್ತನಂತೆ ಆಗಲಾರ.

## 4. ಮುಗ್ಧಾಧಿಕರಣ

### ಸೂತ್ರ—ಮುಗ್ಧೇಽರ್ಧ ಸಂಪತ್ತಿಃ ಪರಿಶೇಷಾತ್

### ಉಪೋದ್ಘಾತ ಸಂಗತಿ

ಜಾಗ್ರತ್ಸ್ವಪ್ನ ಸುಷುಪ್ತಿ ರೂಪಾವಸ್ಥಾ ವಿಶೇಷಗಳನ್ನು ಪರಿಶೋಧಿಸಿದ ನಂತರ ಮೂರ್ಛಾರೂಪ ಸುಷುಪ್ತಿ ತುಲ್ಯಾವಸ್ಥೆ ವಿಚಾರಿಸಲ್ಪಡುತ್ತೆಯೆಂದು ಸಂಗತಿ.

### ಸೂತ್ರಾರ್ಥ

[ಮುಗ್ಧೇ] = ಮೂರ್ಛೆಯನ್ನು ಹೊಂದಿದಾಗ [ಪರಿಶೇಷಾತ್] = ಉಸಿರಾಡುವುದೇ ಮುಂತಾದುದು ಕಾಣುವುದರಿಂದ, [ಅರ್ಧಸಂಪತ್ತಿಃ] = (ಮರಣದಲ್ಲಿ) ಅರ್ಧ ಅವಸ್ಥೆಯಾಗಿರುವುದು

### ವಿವರಣೆ

ಮೂರ್ಛಾವಸ್ಥೆ ಮರಣಕ್ಕೆ ಸೇರಿದ್ದೇ? ಅಥವಾ ಬೇರೆಯಾದದ್ದೇ?—ಎಂದು ಸಂಶಯ. ಇಂದ್ರಿಯ ವ್ಯಾಪಾರಗಳೂ ಪ್ರಾಣವ್ಯಾಪಾರಗಳೂ ಕಾಣದುದರಿಂದ ಮರಣಾವಸ್ಥೆಯೇ ಎಂದು ಪೂರ್ವಪಕ್ಷ. ಮರಣದಲ್ಲಿ ಕಾಣುವ ವಿಕಾರ ಮೂರ್ಛೆಯಲ್ಲಿ ಶರೀರದಲ್ಲಿ ಕಾಣದುದರಿಂದಲೂ, ಸ್ವಲ್ಪವಾಗಿ ಉಸಿರು ಬರುತ್ತಿರುವುದರಿಂದಲೂ, ಮೂರ್ಛೆ ಹೋದ ಮೇಲೆ ಏಳುವುದರಿಂದಲೂ—ಇದು ಮರಣಾವಸ್ಥೆಯಲ್ಲ. ಉಸಿರು ಅಡಗಿ ಸೂಕ್ಷ್ಮವಾಗಿರುವುದರಿಂದ ಜಾಗ್ರದವಸ್ಥೆಯೂ ಅಲ್ಲ. ಅದಕ್ಕಿಂತಲೂ ಬೇರೆಯಾದ—ಅಂದರೆ ಮರಣದ ಅರ್ಧಾವಸ್ಥೆ ಮೂರ್ಛೆ. ಸರ್ವಪ್ರಾಣದೇಹಗಳ ಸಂಬಂಧ ಉಪರತವಾಗುವುದು ಮರಣ. ಸೂಕ್ಷ್ಮ ಪ್ರಾಣಗಳ ಸಂಬಂಧದೊಡನೆ ಇರುವುದು ಮೂರ್ಛಾ.

## 5. ಉಭಯಲಿಂಗಾಧಿಕರಣ

### ಸೂತ್ರ—ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರಹಿ

**ಸಂಗತಿ**

ಹಿಂದಿನ ಅಧಿಕರಣದಲ್ಲಿ ಸಂಸಾರಿಯಾಗಿ ಮರಣಾವಸ್ಥಾಧೀನನಾದ ಜೀವನನ್ನು ವೈರಾಗ್ಯಾತಿಶಯ ಸಿದ್ಧಿಗಾಗಿ ಹೇಳಿ, ಪ್ರಾಪ್ಯದಲ್ಲಿ ತೃಷ್ಣಾವಿಶೇಷ ಸಿದ್ಧಿಗಾಗಿ ಭಗವಂತನ ಉಭಯಲಿಂಗತ್ವವು ಇಲ್ಲಿ ಹೇಳಲ್ಪಡುತ್ತೆ.

**ಸೂತ್ರಾರ್ಥ**

[ಸ್ಥಾನತಃ] = (ಮನುಷ್ಯಾದಿ ಶರೀರದಲ್ಲಿ) ಸ್ಥಿತಿಯಿಂದ (ಇರುವುದರಿಂದ) (ಉಂಟಾದ ದೋಷ) [ಪರಸ್ಯ] = ಪರಮಪುರುಷನಿಗೆ [ನ] = ಸಂಭವಿಸದು. [ಸರ್ವತ್ರ] = ವೇದ ಶಾಸ್ತ್ರಗಳಲ್ಲೆಲ್ಲಿಯೂ [ಉಭಯಲಿಂಗಂ] ನಿರ್ದೋಷತ್ವ, ಸಕಲ ಕಲ್ಯಾಣ ಗುಣಗಳೆಂಬ ಎರಡು ಸ್ವರೂಪವೂ (ಪರಮಾತ್ಮನಿಗೆ ಹೇಳಲ್ಪಟ್ಟಿದೆಯಷ್ಟೆ)

**ವಿವರಣೆ**

ಜೀವನು ಶರೀರದಲ್ಲಿರುವುದರಿಂದ ದೋಷವಂತನಾಗುವಂತೆ ಸರ್ವದಲ್ಲಿಯೂ ಅಂತರ್ಯಾಮಿಯಾಗಿರುವ ಪರಮಪುರುಷ ದೋಷವಂತನಾಗುವನೋ?—ಇಲ್ಲವೊ? ಎಂದು ಸಂಶಯ. ಸರ್ವಾಂತರ್ಯಾಮಿಯಾದವನು ಮಲಾದಿಗಳಲ್ಲಿಯೂ ಸ್ವೇಚ್ಛೆಯಿಂದಲೂ ಕೂಡ ಅಂತರ್ಯಾಮಿಯಾಗಿರುವಿಕೆ ಹೇಯವಾದ್ದರಿಂದ, ಅವನಿಗೆ ಅದರಿಂದ ದೋಷವುಂಟು—ಎಂದು ಪೂರ್ವಪಕ್ಷ.

ವಸ್ತುಗಳು ಅವನ ಕರ್ಮಾನುಗುಣವಾಗಿಯೇ ಒಬ್ಬನಿಗೆ ಒಂದು ಹೇಯವಾಗಿಯೂ ಮತ್ತೊಬ್ಬನಿಗೆ ಉಪಾದೇಯವಾಗಿಯೂ ಇರುವುದು. ಪರಮಪುರುಷನಿಗೆ ಅಂತಹ ಪುಣ್ಯಪಾಪರೂಪ ಕರ್ಮಗಳಿಲ್ಲವಾದ್ದರಿಂದ ಮಲಾದಿ ಸಂಬಂಧ ಹೇಯವಾಗದು. "ಅಪಹತಪಾಪ್ಮಾ"—ಇತ್ಯಾದಿ ವಾಕ್ಯಗಳಲ್ಲಿ ಪರಮಪುರುಷನಿಗೆ ದೋಷವೇ ಸಂಭವಿಸದೆಂದು, "ಯಸ್ಸರ್ವಜ್ಞಸ್ಸರ್ವವಿತ್",—ಇತ್ಯಾದಿ ವಾಕ್ಯಗಳಲ್ಲಿ ಅನೇಕ ಕಲ್ಯಾಣ ಗುಣಗಳುಂಟೆಂದು ಹೇಳುವುದರಿಂದ, ಪರಮಾತ್ಮನು ನಿರ್ದೋಷಿಯೆಂದು ಸಿದ್ಧಾಂತ.

### ಸೂತ್ರ ೨—ಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್

**ಸೂತ್ರಾರ್ಥ**

[ಭೇದಾತ್] = ಸ್ಥಿತಿ ಭೇದದಿಂದ (ದೇವಾದಿ ದೇಹಯೋಗರೂಪವಾದ ಅವಸ್ಥಾ ಭೇದದಿಂದ) (ಪರಮಾತ್ಮನಿಗೂ ದೋಷವುಂಟು) [ಇತಿ ಚೇತ್] = ಎಂದಲ್ಲಿ, [ಪ್ರತ್ಯೇಕಂ] = ಒಂದೊಂದು ವಾಕ್ಯದಲ್ಲಿಯೂ, [ಅತದ್ವಚನಾತ್] = ದೋಷ ಶೂನ್ಯನೆಂದು ಹೇಳುವುದರಿಂದ, [ನ] = ದೋಷವಂತನಲ್ಲ.

**ವಿವರಣೆ**

ಜೀವನಿಗೂ ದೋಷ ಸಂಬಂಧ ಸ್ವಭಾವಸಿದ್ಧವಲ್ಲ. ಆದರೂ ದೇವಾದಿ ಶರೀರ ಸಂಬಂಧದಿಂದ ದೋಷಿಯಾಗುತ್ತಾನೆ. ಅದರ ಹಾಗೆಯೇ ಸ್ವಭಾವತಃ ದೋಷ

ಶೂನ್ಯನಾದ ಈಶ್ವರನಿಗೂ ಸಕಲಾಂತರ್ಯಾಮಿಯಾಗಿರುವ ಕಾರಣದಿಂದ, ದೋಷ ಸಂಬಂಧ ಉಂಟಾಗಬಹುದು—ಎಂದಲ್ಲಿ, ಅಂತರ್ಯಾಮಿ ಬ್ರಾಹ್ಮಣದಲ್ಲಿ ಒಂದೊಂದು ವಾಕ್ಯದಲ್ಲಿಯೂ, ಪೃಥಿವ್ಯಾದಿಗಳಿಗೆ ಅಂತರ್ಯಾಮಿಯಾಗಿದ್ದಾನೆ, ಅವನಿಗೆ ದೋಷ ಸಂಬಂಧವಿಲ್ಲ—ಎಂದಿರುವುದರಿಂದ, ಅಂತರ್ಯಾಮಿಯಾಗಿರುವುದು ಇವನಿಗೆ ದೋಷಕ್ಕೆ ಹೇತುವಾಗದು.

ಸೂತ್ರ ೩—**ಅಪಿ ಚೈವ ಮೇಕೇ**

**ಸೂತ್ರಾರ್ಥ**

"ದ್ವಾಸುಪರ್ಣಾಸಯುಜಾಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ।

ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋ ಅಭಿಚಾಕಶೀತಿ" ॥ ಎಂಬ ಸ್ಪಷ್ಟಾರ್ಥವಾದ ಶ್ರುತಿಯಲ್ಲಿ ಜೀವನೂ ಈಶ್ವರನೂ ಒಂದು ದೇಹದಲ್ಲಿದ್ದಾರೆ. ಅದರಲ್ಲಿ ಜೀವ ಕರ್ಮ ಫಲವನ್ನು ಅನುಭವಿಸುತ್ತಾನೆ. ಈಶ್ವರನು ಅನುಭವಿಸುವುದಿಲ್ಲ—ಎಂದು ಹೇಳುವುದರಿಂದ, ಕರ್ಮಫಲಾನುಭವರೂಪವಾದ ಮೇಲೆ ಹೇಳಿದ ದೋಷ ಈಶ್ವರನಿಗಿಲ್ಲ.—ಎಂದು ಒಂದು ಶಾಖೆಯವರು ಹೇಳುತ್ತಾರೆ. [ಸುಪರ್ಣಾ—ಎಂಬಲ್ಲಿಯ 'ಪರ್ಣ'—ಶಬ್ದಕ್ಕೆ ಅಪ್ರಾಕೃತವಿಗ್ರಹ ಅಥವಾ ಜ್ಞಾನವೆಂದರ್ಥ.]

ಸೂತ್ರ ೪—**ಅರೂಪವದೇವ ಹಿ ತತ್ಪ್ರಧಾನತ್ವಾತ್**

**ಸೂತ್ರಾರ್ಥ**

[ಪ್ರಧಾನತ್ವಾತ್] = ನಿರ್ವಾಹಕನಾದ್ದರಿಂದ [ತತ್] = ಆ ಬ್ರಹ್ಮ [ಅರೂಪ ವತ್, ಏವ ಹಿ] = ರೂಪಶೂನ್ಯನಿಗೇ ಸಮಾನವಷ್ಟೆ!

**ವಿವರಣೆ**

ಜೀವನು ಶರೀರ ಸಂಬಂಧದಿಂದ ನಾಮರೂಪಗಳನ್ನು ಹೊಂದಿ ಸುಖದುಃಖ ಗಳನ್ನು ಅನುಭವಿಸುತ್ತಾನೆ. ಅದರ ಹಾಗೆ ಈಶ್ವರನೂ ಶರೀರವುಳ್ಳವನಾದ್ದರಿಂದ ಅವನಿಗೂ ನಾಮರೂಪಗಳೂ, ಅದರಿಂದ ಸುಖ ದುಃಖಗಳೂ ಉಂಟು—ಎಂದಲ್ಲಿ,—ಜೀವನ ಶರೀರದಲ್ಲಿ ತನ್ನ ಕರ್ಮಾನುಗುಣವಾಗಿ ಸುಖ ದುಃಖಗಳನ್ನು ಅನುಭವಿಸುವುದಕ್ಕಾಗಿ ಇದ್ದಾನೆ, ಈಶ್ವರನು ಜೀವನಿಗೆ ಆ ಕರ್ಮಾನುಗುಣವಾಗಿ ಫಲವನ್ನು ಕೊಡುವುದಕ್ಕಾಗಿ ಇರುವುದರಿಂದ, ಕರ್ಮಾನುಭವವನ್ನು ಮಾಡಿಸುವ ಇವನಿಗೆ ಕರ್ಮಾನುಭವಕ್ಕೆ ಕಾರಣ ವಾದ ನಾಮರೂಪಗಳೂ, ತತ್ಪ್ರಯುಕ್ತವಾದ ದೋಷವೂ ಇಲ್ಲ.

ಸೂತ್ರ ೫—**ಪ್ರಕಾಶವಚ್ಚಾವೈಯರ್ಥ್ಯಾತ್**

**ಸೂತ್ರಾರ್ಥ**

[ಅವೈಯರ್ಥ್ಯಾತ್] = (ಗುಣ ಬೋಧಕ ವಾಕ್ಯಗಳಿಗೆ) ವೈಯರ್ಥ್ಯ ಬರದಿರು ವುದಕ್ಕಾಗಿ. [ಪ್ರಕಾಶವತ್, ಚ] = ಪ್ರಕಾಶ ಸ್ವರೂಪದಂತೆಯೇ (ಗುಣವಂತನೆಂದೂ ಅಂಗೀಕರಿಸಬೇಕು).

**ವಿವರಣೆ**

"ಸತ್ಯಂ ಜ್ಞಾನಮನನ್ತಂ ಬ್ರಹ್ಮ",—ಎಂಬ ವಾಕ್ಯದಲ್ಲಿ, ಬ್ರಹ್ಮಕ್ಕೆ ಸ್ವಯಂ ಪ್ರಕಾಶವಾದ ಜ್ಞಾನವೇ ಸ್ವರೂಪವೆಂದು ಹೇಳಿರುವಲ್ಲಿ, ಅವನಿಗೆ ಗುಣಗಳನ್ನು ಹೇಗೆ ಅಂಗೀಕರಿಸುವುದು?—ಎಂದಲ್ಲಿ ಆ ವಾಕ್ಯಾನುಗುಣವಾಗಿ ಜ್ಞಾನಸ್ವರೂಪವೆಂದು ಅಂಗೀಕರಿಸಿದಂತೆ, "ಯಸ್ಸರ್ವಜ್ಞಸ್ಸರ್ವವಿತ್"—ಇತ್ಯಾದಿಯಾದ ಅವನಿಗೆ ಜ್ಞಾನಾದಿ ಗುಣಗಳನ್ನೂ ಹೇಳುವ ವಾಕ್ಯಾನುಗುಣವಾಗಿ, ಕಲ್ಯಾಣ ಗುಣಗಳನ್ನೂ ಕೂಡ ಅಂಗೀಕರಿಸಬೇಕು.

ಸೂತ್ರ ೬—**ಆಹ ಚ ತನ್ಮಾತ್ರಂ**

**ಸೂತ್ರಾರ್ಥ**

[ತನ್ಮಾತ್ರಂ] = ಜ್ಞಾನ ಸ್ವರೂಪ ಮಾತ್ರವನ್ನೇ [ಆಹ, ಚ] = ("ಸತ್ಯಂ ಜ್ಞಾನಂ..." ಎಂಬ ಶ್ರುತಿ) ಹೇಳಿದೆ.

**ವಿವರಣೆ**

"ಸತ್ಯಂ ಜ್ಞಾನಂ..."—ಇತ್ಯಾದಿ ಶ್ರುತಿಯು ಪರಬ್ರಹ್ಮ ಜ್ಞಾನಸ್ವರೂಪನೆಂದು ಹೇಳಿತೇ ಹೊರತು ಅವನಿಗೆ ಗುಣವಿಲ್ಲವೆಂದು ಹೇಳಿಲ್ಲವಾದ್ದರಿಂದ, ಅವನಿಗೆ ಕಲ್ಯಾಣ ಗುಣಗಳುಂಟು ಎನ್ನುವುದರಲ್ಲಿ ಆ ಶ್ರುತಿ ಬಾಧಕವಾಗುವುದಿಲ್ಲ.

ಸೂತ್ರ ೭—**ದರ್ಶಯತಿ ಚಾಥೋ ಅಪಿ ಸ್ಮರ್ಯತೇ**

**ಸೂತ್ರಾರ್ಥ**

[ಅಥೋ] = ಸಕಲ ವೇದವೂ [ದರ್ಶಯತಿ, ಚ] = (ಪರಮ ಪುರುಷನು ಹೇಯ ಪ್ರತ್ಯನೀಕ, ಕಲ್ಯಾಣ ಗುಣಾಕರ ಎಂದು) ವೇದ ಹೇಳುವುದು. [ಸ್ಮರ್ಯತೇ ಅಪಿ] = ಸ್ಮೃತಿಯಲ್ಲಿಯೂ ಹೇಳಲ್ಪಟ್ಟಿದೆ.

**ವಿವರಣೆ**

"ನಿಷ್ಕಳಂ ನಿಷ್ಕ್ರಿಯಂ",—ಇತ್ಯಾದಿ ವಾಕ್ಯ ಪರಮಪುರುಷನನ್ನು ದೋಷ ರಹಿತನೆಂದೂ, "ತಮೀಶ್ವರಾಣಾಂ ಪರಮಂ ಮಹೇಶ್ವರಂ",—ಇತ್ಯಾದಿ ವಾಕ್ಯವು ಕಲ್ಯಾಣ ಗುಣಾಕರನೆಂದೂ, ಹಾಗೆಯೇ ಶ್ರೀ ಗೀತೆ ಮುಂತಾದುದರಲ್ಲಿಯೂ "ಯೋಮಾಮ ಜಮನಾದಿಂ"—"ಮಯಾಧ್ಯಕ್ಷೇಣ ಪ್ರಕೃತಿಸ್ಸೂಯತೇ ಸಚರಾಚರಂ। ಹೇತ ನಾನೇನ..." "ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ॥"—"ಸರ್ವಜ್ಞ ಸ್ಸರ್ವದೃಕ್ಸರ್ವಶಕ್ತಿಜ್ಞಾನ ಬಲರ್ಧಿಮಾನ್। ಅನ್ಯೂನಶ್ಚಾಪ್ಯವೃದ್ಧಿಶ್ಚ ಸ್ವಾಧೀನ್ಸೋ ನಾದಿಮಾನ್ವಶೀ। ಕ್ಲಮತಂದ್ರೀ ಭಯಕ್ರೋಧ ಕಾಮಾದಿಭಿರಸಂಯುತಃ। ನಿರ ವದ್ಯಃ ಪರಪ್ರಾಪ್ತೇರ್ನಿರಧಿಷ್ಠೋಕ್ಷರಕ್ರಮಃ ॥"—ಇತ್ಯಾದಿಯಾಗಿ ಹೇಳುವು ದರಿಂದ, ಇವನು ಸಕಲ ಹೇಯಪ್ರತ್ಯನೀಕನಾಗಿಯೂ ಸಕಲ ಕಲ್ಯಾಣಗುಣಾಕರ ನಾಗಿಯೂ ಇದ್ದಾನೆಯೆಂದು ಅಂಗೀಕರಿಸಬೇಕು.

ಸೂತ್ರ ೮—**ಅತ ಏವ ಚೋಪಮಾ ಸೂರ್ಯಕಾದಿವತ್**

**ಸೂತ್ರಾರ್ಥ**

[ ಅತಃ ಏವ] = ಆದ್ದರಿಂದಲೇ, [ಸೂರ್ಯಕಾದಿವತ್] = ಸೂರ್ಯನೇ ಮುಂತಾದವರಂತೆ (ಎಂದು) [ ಉಪಮಾ] = ಉಪಮಾನ ಹೇಳಲ್ಪಡುತ್ತೆ.

**ವಿವರಣೆ**

ಪರಮಪುರುಷನು ಪೃಥಿವ್ಯಾದಿಗಳಲ್ಲಿದ್ದರೂ ಅದರಿಂದ ಯಾವ ವಿಧವಾದ ದೋಷವೂ ಅವನಿಗೆ ಸಂಭವಿಸದೆಂಬುದಕ್ಕೆ ಸೂರ್ಯನು ನೀರಿನಲ್ಲಿ ಪ್ರತಿಬಿಂಬಿಸಿದರೂ ಆ ನೀರಿನಲ್ಲಿಯ ದೋಷ ಹೇಗೆ ಸೂರ್ಯನಿಗೆ ಸಂಭವಿಸದೋ ಅದರಂತೆಯೂ, ಎಲ್ಲೆಲ್ಲಿಯೂ ವ್ಯಾಪಿಸಿರುವ ಆಕಾಶವು ಘಟದಲ್ಲಿದ್ದಾಗ್ಯೂ, ಅದರ ದೋಷ ಆಕಾಶಕ್ಕೆ ಹೇಗೆ ಸಂಭವಿಸುವುದಿಲ್ಲವೋ ಅದರಂತೆಯೂ, ಪರಮಪುರುಷ ಪೃಥಿವ್ಯಾದಿಗಳಲ್ಲಿದ್ದಾಗ್ಯೂ, ಅದರಲ್ಲಿಯ ದೋಷಗಳು ಅವನಿಗೆ ಸಂಭವಿಸದು ಎಂದು ಉಪಮಾನವಾಗಿ ಹೇಳಿರುವುದೂ ಸಂಗತವಾಗುವುದು.

ಸೂತ್ರ ೯—**ಅಂಬುವದ ಗ್ರಹಣಾತ್ತು ನ ತಥಾತ್ವಂ**

**ಸೂತ್ರಾರ್ಥ**

[ಅಂಬುವತ್] = ನೀರಿನಲ್ಲಿ (ಸೂರ್ಯನನ್ನು ಗ್ರಹಿಸುವುದು) ಹೇಗೋ ಹಾಗೆ [ಅಗ್ರಹಣಾತ್] = ಪೃಥಿವ್ಯಾದಿಗಳು ಪರಮಾತ್ಮನನ್ನು ಗ್ರಹಿಸದಿರುವುದರಿಂದ, [ತಥಾತ್ವಂ] = ಹೀಗೆ ನಿರ್ದೋಷನಾಗಿರುವುದು, [ನ] = ಕೂಡದು.

**ವಿವರಣೆ**

ಮೇಲೆ ಹೇಳಿದ ದೃಷ್ಟಾಂತ ಇಲ್ಲಿಗೆ ಹೊಂದದು; ಏಕೆಂದರೆ;—ನೀರಿನಲ್ಲಿಲ್ಲದ ಸೂರ್ಯನನ್ನು ನೀರಿನಲ್ಲಿರುವ ಹಾಗೆ ಭ್ರಮಿಸುತ್ತಾರೆ. ನೀರಿನಲ್ಲಿ ಸೂರ್ಯನಿಲ್ಲದ್ದರಿಂದ ನೀರಿನಲ್ಲಿರುವ ದೋಷ ಸೂರ್ಯನಿಗೆ ತಗಲುವುದಿಲ್ಲ. ಇಲ್ಲಿ ಅದರ ಹಾಗೆ ಇಲ್ಲದೆ ವಾಸ್ತವವಾಗಿಯೇ ಪೃಥಿವ್ಯಾದಿಗಳಲ್ಲಿ ಪರಮಾತ್ಮಾ ಇರುವುದರಿಂದ ಅವುಗಳಲ್ಲಿಯ ದೋಷ ಇವನಿಗೆ ಸಂಭವಿಸಬಹುದಾದ್ದರಿಂದ ಮೇಲೆ ಹೇಳಿದ್ದು ದೃಷ್ಟಾನ್ತವಾಗಲಾರದು—ಎಂದು ಪೂರ್ವಪಕ್ಷ.

ಸೂತ್ರ ೧೦—**ವೃದ್ಧಿಹ್ರಾಸ ಭಾಕ್ತ್ವಮನ್ತರ್ಭಾವಾದುಭಯ ಸಾಮಂಜಸ್ಯಾದೇವಂ ದರ್ಶನಾಚ್ಚ**

**ಸೂತ್ರಾರ್ಥ**

[ ಅನ್ತರ್ಭಾವಾತ್] = (ಪೃಥಿವ್ಯಾದಿಗಳಲ್ಲಿ) ಇರುವುದರಿಂದ, (ಉಂಟಾದ) [ವೃದ್ಧಿಹ್ರಾಸಭಾಕ್ತ್ವಂ] = ಹೆಚ್ಚುವುದು, ಕಡಿಮೆಯಾಗುವುದು — ಇವುಗಳನ್ನು ಹೊಂದೋಣವು (ಸಂಭವಿಸದು) (ಏಕೆಂದರೆ) [ಉಭಯ ಸಾಮಂಜಸ್ಯಾತ್] = ಎರಡು ದೃಷ್ಟಾನ್ತಗಳಿಗೂ ಹೊಂದಿಕೆಯುಂಟಾಗುವುದಕ್ಕಾಗಿಯೂ, [ಏವಂ] = ಹೀಗೆ [ದರ್ಶನಾತ್, ಚ] = (ಬೇರೆ ದೃಷ್ಟಾಂತಗಳಲ್ಲಿ) ಕಾಣುವುದರಿಂದಲೂ, (ಪೃಥಿವ್ಯಾದಿ ದೋಷ ಇವನಿಗೆ ಇಲ್ಲವೆಂದು ನಿಶ್ಚಯಿಸಲ್ಪಡುತ್ತೆ)

**ವಿವರಣೆ**

ಮೇಲೆ ಹೇಳಿದ ಪೂರ್ವಪಕ್ಷವನ್ನು ನಿರಾಕರಿಸುತ್ತಾರೆ;—ಮೇಲೆ ಜಲದಲ್ಲಿಲ್ಲದ ಸೂರ್ಯನನ್ನೂ ಘಟಾದಿಗಳಲ್ಲಿರುವ ಆಕಾಶವನ್ನೂ ದೃಷ್ಟಾನ್ತವಾಗಿ ಹೇಳಿತು. ಅವುಗಳಲ್ಲೊಂದಾದ ಆಕಾಶವು ಘಟಾದಿಗಳಲ್ಲಿದ್ದರೂ ಅದರ ಹಾಗೆ ಹೆಚ್ಚು-ಕಡಿಮೆಗಳಾಗುವುದೇ ಮುಂತಾದ ದೋಷಗಳನ್ನು ಹೊಂದುವುದಿಲ್ಲ. ಈ ದೃಷ್ಟಾಂತವೂ ಪ್ರಕೃತದಲ್ಲಿ ಸಂಗತವಾಗುವುದಕ್ಕಾಗಿ ಪೃಥಿವ್ಯಾದಿಗಳಲ್ಲಿರುವ ಈಶ್ವರನಿಗೂ ಅವುಗಳ ದೋಷ ತಗಲುವುದಿಲ್ಲವೆಂದೇ ಅಂಗೀಕರಿಸಬೇಕು. ಎರಡನೆಯ ದೃಷ್ಟಾನ್ತವಾದ ಸೂರ್ಯ ಜಲದಲ್ಲಿಲ್ಲದಿದ್ದಾಗ್ಯೂ, ಜಲದಲ್ಲಿಯ ದೋಷ ಅವನಲ್ಲಿ ಸಂಭವಿಸದಿರುವುದು ಮಾತ್ರ ದಿಂದಲೇ ದೃಷ್ಟಾಂತವಾಗಿ ಹೇಳಲ್ಪಟ್ಟನು. ಮುಖ ಚಂದ್ರನ ಹಾಗೆ—ಎಂಬ ದೃಷ್ಟಾನ್ತವನ್ನು ಹೇಳಿದರೆ. ದೃಷ್ಟಾಂತವಾದ ಚಂದ್ರನಲ್ಲಿರುವ ಎಲ್ಲಾ ಗುಣಗಳೂ ಮುಖದಲ್ಲಿರಬೇಕೆಂಬ ನಿಯಮವಿಲ್ಲ. ಅದರಂತೆಯೇ, ಸೂರ್ಯನಲ್ಲಿರುವ ಜಲ ಸಂಬಂಧ ಪರಮಾತ್ಮನಲ್ಲಿಲ್ಲದಿದ್ದಾಗ್ಯೂ, ಅವನಿಗೆ ಜಲದಲ್ಲಿ ಪ್ರತಿಫಲಿಸಿದರೆ ಅದರಲ್ಲಿರುವ ದೋಷ ಅವನಿಗೆ ಬಾರದ ಹಾಗೆ ಪೃಥಿವ್ಯಾದಿಗಳಲ್ಲಿರುವುದರಿಂದ ಉಂಟಾದ ಈಶ್ವರನಿಗೆ ಅವುಗಳ ದೋಷ ಸಂಭವಿಸುವುದಿಲ್ಲವೆಂದು ಸಿದ್ಧಾನ್ತ.

### ಸೂತ್ರ ೧೧—**ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ**

**ಸೂತ್ರಾರ್ಥ**

[ಪ್ರಕೃತೈತಾವತ್ತ್ವಂ] = ಮೇಲೆ ಹೇಳಿದ ಇಷ್ಟನ್ನೂ ಮಾತ್ರವೇಯಲ್ಲವೇ [ಪ್ರತಿಷೇಧತಿ] = ನಿಷೇಧಿಸುವುದು. [ತತಃ] = ಅದಕ್ಕಿಂತ [ಭೂಯಃ] = ಮತ್ತೆಯೂ ಅಧಿಕವಾಗಿ, [ ಬ್ರವೀತಿ, ಚ] = ಹೇಳುವುದು.

**ವಿವರಣೆ**

"ಅಥಾತ ಆ ದೇಶೋ ನೇತಿ ನೇತಿ",—ಇತ್ಯಾದಿ ವಾಕ್ಯದಲ್ಲಿ ಮೇಲೆ ಹೇಳಿದ ಚಿದಚಿತ್ತುಗಳೆಲ್ಲವೂ ಪರಮಾತ್ಮ ಸ್ವರೂಪಗಳಲ್ಲವೆಂದು ನಿಷೇಧಿಸುವುದರಿಂದ, ನಿರ್ವಿಶೇಷ ಚಿನ್ಮಾತ್ರವೇ ಬ್ರಹ್ಮ ಸ್ವರೂಪವೆಂದು ಅಂಗೀಕರಿಸಬೇಕು. ಆದ್ದರಿಂದ ಉಭಯಲಿಂಗವಾಗದು.—ಎಂಬ ಪೂರ್ವಪಕ್ಷವನ್ನು ನಿರಸನ ಮಾಡುತ್ತಾರೆ;—ಚಿದಚಿತ್ತುಗಳು ಪರಮಾತ್ಮನಿಗೆ ಶರೀರಗಳಾಗಿರುವ ವಿಧ ಪ್ರತ್ಯಕ್ಷಾದಿ ಬೇರೆ ಪ್ರಮಾಣಗಳಿಗೆ ವಿಷಯವಾಗಲಾರದು. ಹಾಗಿರುವಲ್ಲಿ, ಮೇಲೆಲ್ಲಾ ಅವು ಪರಮಾತ್ಮನಿಗೆ ಶರೀರಗಳೆಂದು ಒಬ್ಬರಿಗೂ ಅರಿಯದುದನ್ನು ಅರಿಯುವ ಹಾಗೆ ಹೇಳಿ, ಅನಂತರ, ಅವು ಶರೀರಗಳಾಗಲಾರವು—ಎಂದು ಹೇಳುವುದು ಅಸಂಗತವಾಗುವುದು. ಲೋಕದಲ್ಲಿ ಹಿತಪರನಾಗಿರುವವನು ಒಬ್ಬರಿಗೆ ಮುಂಚೆಯಿರುವ ಭ್ರಾಂತಿಯನ್ನು ನೀಗಿಸುವುದಕ್ಕಾಗಿಯೇ ಕೆಲವನ್ನು ಉಪದೇಶಿಸುತ್ತಾನೆ. ಅಷ್ಟೇ ಅಲ್ಲದೆ, ಇಲ್ಲದ ಭ್ರಾಂತಿಯನ್ನು ಕಲ್ಪಿಸಿ ಅದನ್ನು ನೀಗಿಸುವುದಕ್ಕಾಗಿ ಉಪದೇಶಿಸುವುದು ಕಾಣಲಿಲ್ಲ. ಅದರಂತೆಯೇ, ವೇದವು ಹಿತಪರ

ವಾದ್ದರಿಂದ, ಇರುವ ಭ್ರಾಂತಿಯನ್ನು ನೀಗಿಸಬೇಕೇ ಹೊರತು, ಇಲ್ಲದುದನ್ನು ಕಲ್ಪಿಸಿ ಹೇಳಿ ಅದನ್ನು ನೀಗಿಸುವುದಕ್ಕಾಗಿ ಯತ್ನಿಸದು. ಆದ್ದರಿಂದ, ಇಲ್ಲಿ ಚಿದಚಿತ್ತುಗಳನ್ನು ಪರಮಾತ್ಮನಿಗೆ ಶರೀರಗಳೆಂದು, ಇಲ್ಲದ ಭ್ರಾಂತಿಯನ್ನು ಉಂಟು ಮಾಡಿ, ಅನಂತರ ಅದನ್ನು ನಿಷೇಧಿಸುವುದೆನ್ನುವುದು ಸಂಭವಿಸದು. ಆದರೆ ಇಲ್ಲಿ ಯಾವುದನ್ನು ನಿಷೇಧಿಸಿದೆಯೆಂದಲ್ಲಿ, ಮೊದಲು ಪರಮಾತ್ಮನ ಐಶ್ವರ್ಯವನ್ನು ಹೇಳಿ, ಅನಂತರ ಅವನ ಐಶ್ವರ್ಯ ಇಷ್ಟು ಮಾತ್ರವೇ ಅಲ್ಲ ಇನ್ನೂ ಅನಂತವಾಗಿದೆ ಎಂದು ಹೇಳುವುದಕ್ಕಾಗಿ 'ನೇತಿ ನೇತಿ'',—ಎಂದು ಪರಮಾತ್ಮನ ಐಶ್ವರ್ಯಕ್ಕೆ ಅವಧಿಯನ್ನು ನಿಷೇಧಿಸಿದೆ. ಅವನ ಐಶ್ವರ್ಯವನ್ನೇ ನಿಷೇಧಿಸಿದಲ್ಲಿ, ಮೇಲಣ ವಾಕ್ಯದಲ್ಲಿ, ''ಸತ್ಯಸ್ಯ ಸತ್ಯಂ''—ಇತ್ಯಾದಿಯಿಂದ, ಪರಮಾತ್ಮನಿಗಿಂತ ಯಾವ ವಿಧದಲ್ಲಿಯೂ ಮೇಲಾದ ವಸ್ತು ಒಂದೂ ಇಲ್ಲವೆಂದೂ, ಅಚಿತ್ತಿನಂತೆಯೇ ಜೀವನೂ ಪರಮಾತ್ಮನಿಗೇ ಶೇಷಭೂತನೆಂದೂ, ಇವೆಲ್ಲವನ್ನೂ ನಿರ್ವಹಿಸುವ ಐಶ್ವರ್ಯವನ್ನುಳ್ಳವನು ಪರಮಾತ್ಮಾ—ಎಂದೂ ಹೇಳುವುದು ಹೊಂದದು. ಆದ್ದರಿಂದ, ಈ ವಾಕ್ಯ ''ಇಷ್ಟು''—ಎಂಬುದನ್ನು ನಿಷೇಧಿಸುವುದೆಂದೇ ಒಪ್ಪಬೇಕು.

### ಸೂತ್ರ ೧೨—ತದವ್ಯಕ್ತ ಮಾಹ ಹಿ

**ವಿವರಣೆ**

ಜಗತ್ತು ಸತ್ಯವೆನ್ನುವುದಕ್ಕೆ ಪ್ರಮಾಣವಿಲ್ಲ. ಸ್ವಪ್ನದಲ್ಲಿ ಕಾಣಿಸುವಂತೆ ಇವೆಲ್ಲವೂ ಬ್ರಹ್ಮದಿಂದ ಕಾಣಲ್ಪಡುವುದು. ಬ್ರಹ್ಮವೊಂದೇ ಸತ್ಯ. ಅದೇ ಸಕಲ ಜ್ಞಾನದಿಂದಲೂ ತೋರುವುದು. ಆದ್ದರಿಂದ ಮೇಲೆ ಭ್ರಮವಿಷಯಗಳಾದ ಅಸತ್ಯ ಪದಾರ್ಥಗಳನ್ನು ಹೇಳಿ ಅನಂತರ, ''ನೇತಿ ನೇತಿ''—ಎಂದು ಅವನ್ನು ಸತ್ಯಗಳಲ್ಲವೆಂದು ನಿಷೇಧಿಸುವುದು—ಎಂದಲ್ಲಿ, ''ನ ಸಂದೃಶೇತಿಷ್ಠತಿ ರೂಪಮಸ್ಯ''—ಎಂದು ಪರಮಾತ್ಮನ ಸ್ವರೂಪ ಇಂದ್ರಿಯಾದಿಗಳಿಗೆ ವಿಷಯವಲ್ಲವೆಂದು ಹೇಳುವುದರಿಂದ ಸಕಲ ಜ್ಞಾನದಲ್ಲಿಯೂ ಪರಬ್ರಹ್ಮ ತೋರುವುದು—ಎಂಬುದು ಅಸಂಗತ. ಆದ್ದರಿಂದ, ಆ ಬ್ರಹ್ಮ ಪ್ರಮಾಣಾಂತರದಿಂದ ವ್ಯಕ್ತವಾಗತಕ್ಕದ್ದಲ್ಲವೆಂದು ತಾತ್ಪರ್ಯ.

### ಸೂತ್ರ ೧೩—ಅಪಿ ಸಂರಾಧನೇ ಪ್ರತ್ಯಕ್ಷಾನು ಮಾನಾಭ್ಯಾಂ

**ಸೂತ್ರಾರ್ಥ**

[ಅಪಿ] = ಇನ್ನೂ [ಸಂರಾಧನೇ] = ಭಕ್ತಿಯಲ್ಲಿ (ಹೊಂದಲ್ಪಡುವನೆಂದು) [ಪ್ರತ್ಯಕ್ಷಾನುಮಾನಾಭ್ಯಾಂ] = ವೇದದಿಂದಲೂ ಗೀತೆಯಿಂದಲೂ (ಹೇಳಲ್ಪಟ್ಟಿದೆ).

**ವಿವರಣೆ**

''ನಾಯಮಾತ್ಮಾ ಪ್ರವಚನೇನ ಲಭ್ಯಃ...''—ಎಂದು ಆರಂಭಿಸಿ, ''ಯಮೇವೈಷ ವೃಣುತೇ ತೇನ ಲಭ್ಯಃ''—ಎಂದು ವೇದದಲ್ಲಿಯೂ, ''ನಾಹಂ ವೇದೈರ್ನ ತಪಸಾನದಾನೇನ ನ ಚೇಜ್ಯಯಾ । ಶಕ್ಯಮೇವಂ ವಿಧೋ ದ್ರಷ್ಟುಂ...'' ''ಭಕ್ತ್ಯಾತ್ವನನ್ಯಯಾ ಶಕ್ಯಃ ಅಹಮೇವಂ ವಿಧೋಽರ್ಜುನ । ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ''—ಇತ್ಯಾದಿ ಶ್ರೀ ಗೀತಾ ವಾಕ್ಯದಲ್ಲಿಯೂ, ವೇದಾಧ್ಯಯನ, ಯಾಗ,

ಮುಂತಾದುವು ಪರಮಾತ್ಮ ಪ್ರಾಪ್ತಿಗೆ ಸಾಧನಗಳಲ್ಲವೆಂದೂ, ಭಕ್ತಿಯಿಂದಲೇ ಪರಮಾತ್ಮ ಹೊಂದಲ್ಪಡತಕ್ಕವನೆಂದೂ, ಹೇಳುವುದರಿಂದ, ಸಕಲ ಜ್ಞಾನಕ್ಕೂ ಪರಮಾತ್ಮಾ ವಿಷಯ ವಾಗುತ್ತಾನೆಂಬುದು ಅಸಂಗತ. 'ಸಂರಾಧನ'—ಎಂದರೆ ಸಮ್ಯಕ್ಪ್ರೀಣನ; ಅಂದರೆ ಭಕ್ತಿರೂಪಾಪನ್ನವಾದ ನಿದಿಧ್ಯಾಸನವಲ್ಲಿಯೇ ಪರಮಾತ್ಮ ಸಾಕ್ಷಾತ್ಕಾರವೇ ಹೊರತು ಮತ್ತೆ ಯಾವುದರಲ್ಲಿಯೂ ಅಲ್ಲವೆಂದು ತಾತ್ಪರ್ಯ.

**ಸೂತ್ರ ೧೪—ಪ್ರಕಾಶಾದಿವ ಚಾವೈಶೇಷ್ಯಂ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್**

**ಸೂತ್ರಾರ್ಥ**

[ಕರ್ಮಣಿ] = ಭಕ್ತಿರೂಪ ಕ್ರಿಯೆಯಲ್ಲಿ, [ಅಭ್ಯಾಸಾತ್] = ಆ ವೃತ್ತಿಯಿಂದ [ಪ್ರಕಾಶಃ] = ಜ್ಞಾನ (ಯಾರಿಗೆ ಉಂಟಾಯಿತೋ ಅವರಿಗೆ) [ಪ್ರಕಾಶಾದಿವತ್, ಚ] = ಜ್ಞಾನಾದಿಯಂತೆ, [ಅವೈಶೇಷ್ಯಂ] = (ಜಗದೈಶ್ವರ್ಯಕ್ಕೂ) ವಿಶೇಷವಿಲ್ಲ. (ಜ್ಞಾನ ದಂತೆ ಜಗತ್ತೂ ಪ್ರಾಮಾಣಿಕರಾದ ಮಹರ್ಷಿಗಳಿಗೆ ತೋರುವುದರಿಂದ ಅದೂ ಸತ್ಯ ವೆಂದರ್ಥ.

**ವಿವರಣೆ**

ವಾಮ ದೇವಾದಿಗಳು ಭಕ್ತಿಯಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸುವಾಗ ಪರ ಮಾತ್ಮನಲ್ಲಿ ಜ್ಞಾನಾನಂದಾದಿ ಗುಣಗಳೂ, ಉಭಯ ವಿಭೂತ್ಯೈಶ್ವರ್ಯವೂ ತೋರಲು ಅವರುಗಳಿಗೆ ತೋರಿದವುಗಳಲ್ಲಿ ಪರಮಾತ್ಮ ಒಬ್ಬನೇ ಸತ್ಯವೆಂದೂ ಮಿಕ್ಕ ಗುಣ ಐಶ್ವರ್ಯಾದಿಗಳು ಅಸತ್ಯವೆಂದೂ ಸ್ವೀಕರಿಸಕೂಡದು. ಆದ್ದರಿಂದ ಪರಮಾತ್ಮಾ ಅಖಿಲಹೇಯ ಪ್ರತ್ಯನೀಕನಾಗಿಯೂ, ಸಮಸ್ತ ಕಲ್ಯಾಣ ಗುಣಕಾರಕನಾಗಿಯೂ ಇದ್ದಾನೆ.

**ಸೂತ್ರ ೧೫—ಅತೋಽನನ್ತೇನ ತಥಾ ಹಿ ಲಿಂಗಂ**

**ಸೂತ್ರಾರ್ಥ**

[ಅತಃ] = ಆದ್ದರಿಂದ [ಅನಂತೇನ] = ಅಸಂಖ್ಯಾತ ಕಲ್ಯಾಣ ಗುಣಗಳೊಡನೆ, (ಪರಮಾತ್ಮ ಕೂಡಿದ್ದಾನೆ) [ತಥಾ ಹಿ] ಹಾಗೆ ಇರುವುದರಿಂದ [ಲಿಂಗಂ] = (ಪರ ಮಾತ್ಮನಿಗೆ) ಹೇಯ ಪ್ರತ್ಯನೀಕ ಕಲ್ಯಾಣಗುಣಾತ್ಮಕತ್ವಗಳೆಂಬ ಉಭಯಲಿಂಗ (ಸಿದ್ಧಿಸುವುದು).

## 6. ಅಹಿಕುಂಡಲಾಧಿಕರಣಂ

**ಸೂತ್ರ—ಉಭಯವ್ಯಪದೇಶಾತ್ತ್ವಹಿ ಕುಂಡಲವತ್**

**ಸಂಗತಿ ಉಪೋದ್ಘಾತ**

ಪೂರ್ವಾಧಿಕರಣದಲ್ಲಿ ಬ್ರಹ್ಮ ನಿರ್ದೋಷವೆಂದು ಪ್ರತಿಜ್ಞಾತವಾಯಿತು. ಆ ನಿರ್ದೋಷತ್ವದ ಪ್ರತಿಷ್ಠಾಪನಕ್ಕಾಗಿ—ಅಚೇತನ ವಸ್ತುವು ಬ್ರಹ್ಮರೂಪವಾಗಿರುವುದು ಹೇಗೆ?—ಅಹಿಕುಂಡಲ ನ್ಯಾಯದಿಂದಲೇ? ಅಥವಾ ಪ್ರಭಾ—ಪ್ರಭಾವತ್ ನ್ಯಾಯ ದಿಂದಲೇ? ಅಥವಾ ವಿಶೇಷಣ—ವಿಶೇಷ್ಯಭಾವದಿಂದಲೇ?—ಎಂದು ಇಲ್ಲಿ ಚಿಂತಿ ಸಲ್ಪಡುತ್ತೆ.

**ಸೂತ್ರಾರ್ಥ**

[ಉಭಯವ್ಯಪದೇಶಾತ್] = (ಪರಮಾತ್ಮನನ್ನು ಅಚಿತ್ತಿಗಿಂತ ಭಿನ್ನನೆಂದೂ ಅಭಿನ್ನನೆಂದೂ) ಎರಡು ವಿಧವಾಗಿ ಹೇಳುವುದರಿಂದ, [ಅಹಿಕುಂಡಲವತ್] = ಸರ್ಪದ ಕುಂಡಲಾಕಾರದಂತೆ (ಜಗತ್ತೂ ಪರಮಾತ್ಮನ ಅವಸ್ಥಾ ವಿಶೇಷವೇ)

**ವಿವರಣೆ**

ಸ್ಥೂಲ ಸೂಕ್ಷ್ಮಗಳಾದ ಅಚಿದ್ವಸ್ತುಗಳು ಪರಮಾತ್ಮ ಸ್ವರೂಪಗಳೆಂದು ಮೇಲೆ ಹೇಳಿದೆ. ಇದಕ್ಕೆ ತಾತ್ಪರ್ಯವೇನು? ಮೃತ್ತು ಘಟವಾಗುವಂತೆ ಬ್ರಹ್ಮವೇ ಜಗದ್ರೂಪವಾಗಿ ಪರಿಣಮಿಸುವುದೆ? ಅಥವಾ, ಅವನೇ ಇವನು ಎನ್ನುವಂತೆ ಬ್ರಹ್ಮವೂ ಜಗತ್ತೂ ಒಂದೇ ಜಾತಿಯಾದ ವಸ್ತುವೇ? ಅಥವಾ ಜಗತ್ತು ಬ್ರಹ್ಮಕ್ಕೆ ಶರೀರವೇ?— ಎಂದು ಸಂಶಯ.

"ಸರ್ವಂ ಖಲ್ವಿದಂ ಬ್ರಹ್ಮ",—(ಇದೆಲ್ಲಾ ಪರಬ್ರಹ್ಮ)—ಎಂದು ಜಗತ್ತನ್ನೂ ಪರಬ್ರಹ್ಮವನ್ನೂ ಏಕವಾಗಿ ಹೇಳುವುದರಿಂದಲೂ, "ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ..."—ಎಂದು ಜಗತ್ತನ್ನೂ ಬ್ರಹ್ಮವನ್ನೂ ಪರಸ್ಪರ ಭಿನ್ನವಾಗಿ ಹೇಳುವುದರಿಂದಲೂ, ಇವೆರಡು ಪ್ರಯೋಗಗಳೂ ಸರಿಯಾಗುವ ರೀತಿ ಜಗತ್ ಮತ್ತು ಬ್ರಹ್ಮವನ್ನೂ ಒಂದು ವಸ್ತುವನ್ನಾಗಿಯೇ ಹೇಳಬೇಕು. ಆದರೆ 'ಜಗತ್' ಎಂದೂ, 'ಬ್ರಹ್ಮ'— ಎಂದೂ ವ್ಯವಹಾರ ಬರುವುದಕ್ಕೆ ಹೇತುವೇನು? ಎಂದಲ್ಲಿ, ಸರ್ಪ ಗುಂಡಾಗಿ ಸುತ್ತಿಕೊಂಡಿರುವಾಗ ಕುಂಡಲಾವಸ್ಥೆಯನ್ನೂ, ಸ್ವಭಾವವಾಗಿರುವಾಗ, ದೀರ್ಘಾವಸ್ಥೆಯನ್ನೂ,—ಹೀಗೆ ಎರಡು ಅವಸ್ಥೆಯನ್ನೂ ಹೊಂದುವಂತೆ ಬ್ರಹ್ಮಕ್ಕೆ ಎರಡು ಅವಸ್ಥೆಗಳುಂಟು. ಅದರಲ್ಲಿ ಸ್ವಭಾವಾವಸ್ಥೆಯಲ್ಲಿ ಬ್ರಹ್ಮವೆಂದೂ, ಮತ್ತೊಂದು ಅವಸ್ಥೆಯಲ್ಲಿ ಜಗತ್ತೆಂದೂ ವ್ಯವಹರಿಸಲ್ಪಡುವುದೆಂದು ಪೂರ್ವಪಕ್ಷ.

ಸೂತ್ರ ೨—**ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್**

**ಸೂತ್ರಾರ್ಥ**

[ತೇಜಸ್ತ್ವಾತ್] = ತೇಜಸ್ತ್ವ ಜಾತಿಯೋಗದಿಂದ [ಪ್ರಕಾಶಾಶ್ರಯವತ್] = ಪ್ರಕಾಶ ಮತ್ತು ಅದಕ್ಕೆ ಆಶ್ರಯವಾದ ದೀಪದಂತೆಯೂ (ಎರಡೂ ಒಂದೇ ಜಾತಿಯ ವಸ್ತು, ಒಂದಲ್ಲ—ಎಂದು ಭಾವ)

**ವಿವರಣೆ**

ಬ್ರಹ್ಮವೇ ಜಗತ್ತಾಗಿ ಪರಿಣಮಿಸಿದರೆ ಜಗತ್ತಿಗುಂಟಾದ ಉತ್ಪತ್ತಿವಿನಾಶಾದಿ ದೋಷಗಳು ಬ್ರಹ್ಮಕ್ಕೆ ಸಂಭವಿಸುವುದರಿಂದ ಹಾಗೆ ಹೇಳಕೂಡದು. ಪ್ರಕಾಶವೂ ಪ್ರಕಾಶವುಳ್ಳ ದೀಪವೂ ಬೇರೆ ಬೇರೆಯಾದಾಗ್ಯೂ ಎರಡೂ ಒಂದೇ ವಿಧವಾದ ದ್ರವ್ಯವಾದ್ದರಿಂದ, ಎರಡನ್ನೂ ತೇಜಸ್ಸು ಎಂದು ಅಭಿನ್ನವಾಗಿ ಹೇಳುವಂತೆ ಜಗತ್—ಬ್ರಹ್ಮಗಳು ಒಂದು ವಿಧವಾದ ದ್ರವ್ಯವಾದ್ದರಿಂದ ಎರಡನ್ನೂ ಅಭಿನ್ನವಾಗಿ ಹೇಳುವುದೆಂದು ಎರಡನೇ ಪೂರ್ವಪಕ್ಷ.

### ಸೂತ್ರ ೩—ಪೂರ್ವವದ್ವಾ

**ಸೂತ್ರಾರ್ಥ**

ಮೊದಲು ಹೇಳಿದಂತೆಯೇ (ಶರೀರಾತ್ಮಭಾವದಿಂದ ಐಕ್ಯವ್ಯವಹಾರವನ್ನು ಸಮರ್ಥಿಸಬೇಕು.)

**ವಿವರಣೆ**

ಈ ಎರಡು ಪಕ್ಷಗಳನ್ನೂ ನಿರಸನ ಮಾಡುತ್ತಾರೆ;—ಹಿಂದೆ ಅಂಶಾಧಿಕರಣದಲ್ಲಿ ಬ್ರಹ್ಮದೊಡನೆ ಜೀವನನ್ನು ಭಿನ್ನವಾಗಿಯೂ ಅಭಿನ್ನವಾಗಿಯೂ ಹೇಳುವುದರಿಂದಲೂ, ಜೀವನ ದೋಷಗಳು ಬ್ರಹ್ಮದಲ್ಲಿ ಬರದಿರುವುದಕ್ಕಾಗಿಯೂ, ಜೀವನನ್ನು ಬ್ರಹ್ಮಕ್ಕೆ ಶರೀರವೆಂದು ಅಂಗೀಕರಿಸಿ ಆ ಎರಡು ವಿಧವಾದ ವ್ಯವಹಾರವನ್ನೂ ಸಮರ್ಥಿಸಿದಂತೆ ಇಲ್ಲಿಯೂ ಅಚಿತ್ತಾದ ಜಗತ್ತು ಬ್ರಹ್ಮಕ್ಕೆ ಶರೀರವಾದ್ದರಿಂದ, ಶರೀರಾತ್ಮ ಭಾವದಿಂದ ಅಭಿನ್ನವಾಗಿಯೂ, ವಿಶ್ಯೃಷ್ಟವಾದ ಅಂಶದಿಂದ ಭಿನ್ನವಾಗಿಯೂ ಹೇಳುವುದೆಂದು ಸಿದ್ಧಾಂತ.

### ಸೂತ್ರ ೪—ಪ್ರತಿಷೇಧಾ ಚ್ಚ

**ಸೂತ್ರಾರ್ಥ**

(ಜಗತ್ತಿನಲ್ಲಿಯ ಉತ್ಪತ್ತಿ ವಿನಾಶಾದಿ ದೋಷಗಳನ್ನು "ಅಜರೋಽಮರಃ"—ಎಂದು ಬ್ರಹ್ಮದಲ್ಲಿಲ್ಲವೆಂದು) ನಿಷೇಧಿಸುವುದರಿಂದ, ಜಗತ್ತೂ ಬ್ರಹ್ಮವೂ ಏಕ ದ್ರವ್ಯವೆಂದು ಅಂಗೀಕರಿಸಕೂಡದು.

## 7. ಪರಾಧಿಕರಣ

### ಸೂತ್ರ—ಪರಮತಃ ಸೇತೂನ್ಮಾನ ಸಂಬನ್ಧಭೇದ ವ್ಯಪದೇಶೇಭ್ಯಃ

**ಸಂಗತಿ**

ಬ್ರಹ್ಮ ನಿರ್ದೋಷವೂ ಕಲ್ಯಾಣಗುಣಾಕರವೂ ಆದ್ದರಿಂದ ಉಭಯಲಿಂಗವೆಂಬುದು ಸಿದ್ಧವಾಯಿತು. ಈಗ ಜಗನ್ನಿಮಿತ್ತೋಪಾದಾನವಾದ ಈ ಪರಮ ಕಾರಣವಾದ ಪರಬ್ರಹ್ಮಕ್ಕಿಂತ ಉತ್ಕೃಷ್ಟವಾದ ಒಂದು ತತ್ತ್ವವಿದೆಯೆಂದು ಕೆಲವು ಹೇತ್ವಾಭಾಸಗಳಿಂದ ಶಂಕಿಸುವ ವ್ಯೋಮಾತೀತವಾದಿಗಳ ವಾದವನ್ನು ನಿರಾಕರಿಸುತ್ತಾರೆ.

**ಸೂತ್ರಾರ್ಥ**

[ಸೇತೂನ್ಮಾನ ಸಂಬಂಧ ಭೇದ ವ್ಯಪದೇಶೇಭ್ಯಃ] = (ಜಗತ್ಕಾರಣನಾದ ಸರ್ವೇಶ್ವರನನ್ನು) ಸೇತುವಾಗಿ ಹೇಳುವುದರಿಂದಲೂ, ಅಳತೆಯಿಟ್ಟು ಹೇಳುವುದರಿಂದಲೂ, ಫಲವನ್ನು ದೊರಕಿಸುವ ಉಪಾಯವೆಂದು ಹೇಳುವುದರಿಂದಲೂ, ಭಿನ್ನವೆಂದೂ ಹೇಳುವುದರಿಂದಲೂ, [ಅತಃ] = ಜಗತ್ಕಾರಣವಾಗಿ ಹೇಳಲ್ಪಟ್ಟ ಈ ಪರಮಪುರುಷನಿಗಿಂತ [ಪರಂ] = ಉತ್ಕೃಷ್ಟವಾದ ವಸ್ತು (ಒಂದುಂಟು)

**ವಿವರಣೆ**

ಅಡಿಯಿಂದ ಹಿಡಿದು ಇದುವರಿಗೂ ಹೇಳಿದ ಜಗತ್ಕಾರಣನಾದ ಪರಮಪುರುಷನೇ ಪರತತ್ತ್ವವೆ? ಅಥವಾ, ಇವನಿಗಿಂತ ಬೇರೊಂದು ಪರತತ್ತ್ವವಿರುವುದೇ?—ಎಂದು ಸಂಶಯು.

ಮೇಲೆ ಹೇಳಿದ ಈ ಪರಮಪುರುಷನನ್ನು "ಯ ಆತ್ಮಾಸ ಸೇತುಃ",—ಎಂದು ಸೇತುವನ್ನಾಗಿ ಹೇಳಿ, "ಏತಂ ಸೇತುಂ ತೀರ್ತ್ವಾ,"—ಎಂದು ಅದನ್ನು ದಾಟ ಬೇಕೆನ್ನುವುದರಿಂದ, ಇವನಿಗಿಂತ ಮೇಲೆ ಹೊಂದಲ್ಪಡತಕ್ಕ ವಸ್ತು ಒಂದುಂಟೆಂದು ತೋರುತ್ತೆ. ಅಲ್ಲದೆ, "ಚತುಷ್ಪಾದ್ಬ್ರಹ್ಮಷೋಡಶ ಕಲಂ",—ಎಂದು, ಈ ಬ್ರಹ್ಮ ನಾಲ್ಕು ಪಾದಗಳನ್ನೂ ಹದಿನಾರು ಕಲೆಗಳನ್ನೂ ಉಳ್ಳದೆಂದು ಅಳತೆಯಿಟ್ಟು ಹೇಳು ವುದರಿಂದ ಅಳತೆಯಿಲ್ಲದ್ದು ಬೇರೊಂದುಂಟೆಂದು ತೋರುತ್ತೆ. ಅಲ್ಲದೆ, "ಅಮೃತ ಸ್ಯೈಷ ಸೇತುಃ",—ಎಂದು ಮೋಕ್ಷವನ್ನು ಹೊಂದುವುದಕ್ಕೆ ಈ ಪರಮಾತ್ಮಾ ಸೇತು ವಾಗಿ ಮೋಕ್ಷವನ್ನು ಹೊಂದಿಸುವನೆನ್ನುವುದರಿಂದ, ಹೊಂದಿಸುವವನಿಗಿಂತ, ಹೊಂದ ತಕ್ಕ ವಸ್ತು ಬೇರೊಂದು ಉಂಟೆಂದು ತೋರುವುದು. ಅಲ್ಲದೆ, "ತತೋಯದುತ್ತರ ತರಂ"—ಎಂದು ಇವನಿಗಿಂತ ಮೇಲಾದದ್ದು ಒಂದುಂಟೆಂದೂ ಹೇಳಿದೆ. ಈ ಹೇತುಗಳಿಂದ ಇವನಿಗಿಂತ ಬೇರೊಂದು ಪರತತ್ತ್ವವುಂಟೆಂದು ಪೂರ್ವಪಕ್ಷ.

ಸೂತ್ರ ೨—**ಸಾಮಾನ್ಯಾತ್ತು**

**ಸೂತ್ರಾರ್ಥ**

ಸಾದೃಶ್ಯದಿಂದ (ಇವನನ್ನು ಸೇತುವಾಗಿ ಹೇಳಿದೆ.)

**ವಿವರಣೆ**

ಈ ಪರಮಪುರುಷನನ್ನು ಸೇತುವನ್ನಾಗಿ ಹೇಳಿರುವುದು—ಸೇತು ಹೇಗೆ ಎರಡು ಪಕ್ಕಗಳಲ್ಲಿಯ ನೀರನ್ನು ಒಂದರೊಡನೊಂದು ಸೇರದಂತೆ ಮಾಡುವುದೋ ಹಾಗೆಯೇ ಇವನೂ ಜಗತ್ತಿನಲ್ಲಿ ತಾನೇರ್ಪಡಿಸಿದ ಮರ್ಯಾದೆಗಳನ್ನು ಒಂದಕ್ಕೊಂದು ಕಲೆಯದ ಹಾಗೆ ರಕ್ಷಿಸುವನೆಂಬ ಅಭಿಪ್ರಾಯದಿಂದ. ಈ ಅರ್ಥ, "ಏಷಾಂ ಲೋಕಾನಾಂ ಅಸಂಭೇದಾಯ",—ಎಂದು ಮೇಲಿನ ವಾಕ್ಯದಲ್ಲಿ ಸ್ಪಷ್ಟವಾಗಿದೆ. ಈ ಸೇತುವನ್ನು **ದಾಟಿ**—ಎನ್ನುವುದು ವೇದಾಂತ ಶಾಸ್ತ್ರವನ್ನು ದಾಟಿದನೆಂದರೆ, ಅದನ್ನು ಪೂರ್ಣವಾಗಿ ಹೊಂದಿದನೆನ್ನುವ ಹಾಗೆ ಇವನನ್ನು ಹೊಂದಿದನೆಂದೇ ಅರ್ಥವಾಗುವುದರಿಂದ, ಇದು ಮತ್ತೊಂದು ಪರತತ್ತ್ವವುಳ್ಳದೆನ್ನುವುದರಲ್ಲಿ ಹೇತುವಾಗಲಾರದಾದ್ದರಿಂದ, ಈ ಪರಮ ಪುರುಷನೇ ಪರತತ್ತ್ವವೆಂದು ಸಿದ್ಧಾನ್ತ.

ಸೂತ್ರ ೩—**ಬುದ್ಧ್ಯರ್ಥಃ ಪಾದವತ್**

**ಸೂತ್ರಾರ್ಥ**

[ಪಾದವತ್] = "ವಾಕ್ಪಾದಶ್ಚಕ್ಷುಃ ಪಾದಃ",—ಎಂಬಂತೆ [ಬುದ್ಧ್ಯರ್ಥಃ] = ಉಪಾಸನಾರ್ಥವಾಗಿ ಹೇಳಲ್ಪಟ್ಟಿದೆ.

**ವಿವರಣೆ**

ಈ ಪರಬ್ರಹ್ಮವು ನಾಲ್ಕು ಪಾದಗಳನ್ನುಳ್ಳದ್ದೆಂದು ಅಳತೆಯಿಟ್ಟು ಹೇಳಿರುವುದು—ಈ ವಿಧವಾಗಿ ಉಪಾಸನ ಮಾಬೇಕೆಂಬುದಕ್ಕಾಗಿ, ಇದರಿಂದ ಇವನು ಅಪರಿಚ್ಛಿನ್ನನಲ್ಲವೆಂದು ತೋರುವುದಿಲ್ಲ.

ಸೂತ್ರ ೪—**ಸ್ಥಾನವಿಶೇಷಾತ್ ಪ್ರಕಾಶಾದಿವತ್**

**ಸೂತ್ರಾರ್ಥ**

[ಪ್ರಕಾಶಾದಿವತ್] = ಬಿಸಿಲು ಮುಂತಾದುದರ ಹಾಗೆ, [ಸ್ಥಾನ ವಿಶೇಷಾತ್] = ಸ್ಥಾನ ವಿಶೇಷದ ಸಂಬಂಧದಿಂದ (ಅಪರಿಚ್ಛಿನ್ನವನ್ನು ಪರಿಚ್ಛಿನ್ನವಾಗಿ ಅನುಸಂಧಿಸಬಹುದು)

**ವಿವರಣೆ**

ಬ್ರಹ್ಮಸ್ವರೂಪ ಅಪರಿಚ್ಛಿನ್ನವಾದರೆ ಅದನ್ನು ಪರಿಚ್ಛೇದಿಸಿ ಅನುಭವಿಸುವುದು ಕೂಡದಲ್ಲವೆ?—ಎಂದಲ್ಲಿ, ಆಕಾಶ ಅಪರಿಚ್ಛಿನ್ನವಾದಾಗ್ಯೂ, ಕಲಾಶಾದಿಗಳಲ್ಲಿ ಪರಿಚ್ಛಿನ್ನವಾಗಿ ಕಾಣುವಂತೆಯೂ, ಸೂರ್ಯಕಿರಣ ಎಲ್ಲೆಲ್ಲಿಯೂ ಹರಡಿ, ವ್ಯಾಪಕವಾಗಿದ್ದಾಗ್ಯೂ. ಗವಾಕ್ಷಗಳಲ್ಲಿ ಸೂಕ್ಷ್ಮವಾಗಿ ಕಾಣುವಂತೆಯೂ ಬ್ರಹ್ಮಸ್ವರೂಪವನ್ನೂ ಪರಿಚ್ಛೇದಿಸಿ ಉಪಾಸನ ಮಾಡಬಹುದು.

ಸೂತ್ರ ೫—**ಉಪಪತ್ತೇಶ್ಚ**

**ಸೂತ್ರಾರ್ಥ**

(ಸೇತುವಿನಂತೆ ಪ್ರಾಪಕನಾದ್ದರಿಂದ ಇವನನ್ನು ಸೇತುವನ್ನಾಗಿ ಹೇಳಿದ್ದೂ) ಉಪಪನ್ನವಾಗುವುದರಿಂದಲೂ, (ಇವನೇ ಪರತತ್ತ್ವ)

**ವಿವರಣೆ**

ಚೇತನರನ್ನು, ಸಂಸಾರವನ್ನು ಬಿಟ್ಟು ನೀಗಿಸಿ ತನ್ನನ್ನು ತಾನೇ ಹೊಂದಿಸುವುದರಿಂದ, ಇವನನ್ನು ಸೇತುವೆನ್ನಲಾಯಿತು. ಅಷ್ಟು ಮಾತ್ರದಿಂದ ಪರತತ್ತ್ವ ಬೇರೊಂದುಂಟೆಂದು ನಿರ್ಣಯಿಸಲಾಗದು.

**ಸೂತ್ರಾರ್ಥ**

ಸೂತ್ರ ೬—**ತಥಾನ್ಯಪ್ರತಿಷೇಧಾತ್**

[ತಥಾ] = ಹಾಗೆಯೇ, [ಅನ್ಯಪ್ರತಿಷೇಧಾತ್] = ಬೇರೊಂದು ಪರತತ್ತ್ವವನ್ನು ನಿಷೇಧಿಸಿರುವುದರಿಂದ, (ಇವನೇ ಪರತತ್ತ್ವ).

**ವಿವರಣೆ**

"ನ ತಸ್ಯೇಶೇ ಕಶ್ಚನ",—ಇತ್ಯಾದಿ ವಾಕ್ಯಗಳಲ್ಲಿ ಈ ಪರಮಾತ್ಮನಿಗಿಂತ ಮೇಲ್ಪಟ್ಟವನಿಲ್ಲವೆಂದು ಹೇಳುವುದರಿಂದ, ಇವನೇ ಪರತತ್ತ್ವ.

**ಸೂತ್ರಾರ್ಥ**

ಸೂತ್ರ ೭—**ಅನೇನ ಸರ್ವಗತತ್ವಮಾಯಾಮ ಶಬ್ದಾದಿಭ್ಯಃ**

[ ಅನೇನ] = ಈ ಪರಮಾತ್ಮನಿಂದ, [ಸರ್ವಗತತ್ವಂ] = ಎಲ್ಲೆಲ್ಲಿಯೂ ವ್ಯಾಪಿಸಿರುವುದು [ಆಯಾಮ ಶಬ್ದಾದಿಭ್ಯಃ] = ವ್ಯಾಪ್ತಿಬೋಧಕ ಶಬ್ದ ಮುಂತಾದುವುಗಳಿಂದ (ಹೇಳಲ್ಪಟ್ಟಿದೆ.)

**ವಿವರಣೆ**

"ತೇನೇದಂ ಪೂರ್ಣಂ ಪುರುಷೇಣ ಸರ್ವಂ",—ಈ ಪರಮಪುರುಷನಿಂದ ಸರ್ವವೂ ನೆರೆದಿದೆಯೆಂದೂ."ಅನ್ತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಃ ಸ್ಥಿತಃ" —ಶ್ರೀಮನ್ನಾರಾಯಣ ಒಳಗೂ ಹೊರಗೂ ವ್ಯಾಪಿಸಿದ್ದಾನೆಂದೂ, "ಆತ್ಮೈವೇದಗ್ಂ ಸರ್ವಂ",—ಈ ಸಕಲ ವಸ್ತುವೂ ಈ ಪರಮಾತ್ಮಸ್ವರೂಪವೆಂದೂ ಇವನೇ ಸರ್ವ ವ್ಯಾಪಕನೆನ್ನುವುದರಿಂದಲೂ, ಇವನಿಗಿಂತ ಬೇರೆ ಪರತತ್ತ್ವವಿಲ್ಲ. ಜಗತ್ಕಾರಣ ಭೂತನಾದ ಈ ಪರಮಪುರುಷನೇ ಪರತತ್ತ್ವ.

## ೮. ಫಲಾಧಿಕರಣ

ಸೂತ್ರ—**ಫಲಮತ ಉಪಪತ್ತೇಃ**

**ಸಂಗತಿ**

ಪರತ್ತ್ವ—ಔದಾರ್ಯ—ಇವೆರಡೂ ಯಾವನಲ್ಲಿವೆಯೋ ಅವನೇ ಸೇವ್ಯನೆಂಬುದು ಲೋಕಪ್ರಸಿದ್ಧ. ಪರತತ್ತ್ವವಿದ್ದರೂ ಕೃಪಣನಾಗಿದ್ದಲ್ಲಿ ಅವನು ಸೇವ್ಯನಲ್ಲ. ಔದಾರ್ಯವಿದ್ದೂ ನಿರ್ಧನನಾದರೆ ಸೇವ್ಯನಲ್ಲ. ಆದ್ದರಿಂದ ಮುಂದಿನ ಪಾದದಲ್ಲಿ ಪ್ರತಿಪಾದ್ಯವಾದ ಉಪಾಸ್ಯತ್ವ ಸಿದ್ಧಿಗಾಗಿ ಭಗವಂತನಿಗೆ ಪರತತ್ತ್ವವನ್ನು ಪೂರ್ವಾಧಿಕರಣದಲ್ಲಿ ಹೇಳಿಯಾಯಿತು. ಇಲ್ಲಿಯಾದರೋ—ಫಲಪ್ರದತ್ವವನ್ನು ಹೇಳುವುದರಿಂದ, ಔದಾರ್ಯ ಹೇಳಲ್ಪಡುತ್ತೆ—ಎಂದು ಪೂರ್ವಾಧಿಕರಣದೊಡನೆ ಸಂಗತಿ.

**ಸೂತ್ರಾರ್ಥ**

[ ಉಪಪತ್ತೇಃ] = ಯುಕ್ತಿ ಯುಕ್ತವಾದುದರಿಂದ [ಅತಃ] = ಈ ಪರಮಪುರುಷನಿಂದಲೇ [ಫಲಂ] = ಪುರುಷಾರ್ಥ (ಲಭಿಸುವುದು)

**ವಿವರಣೆ**

ಶಾಸ್ತ್ರಗಳಲ್ಲಿ ಸ್ವರ್ಗಾದಿ ಫಲಗಳಿಗಾಗಿ ಯಾಗಾದಿಗಳೂ, ಮೋಕ್ಷಕ್ಕಾಗಿ ಭಕ್ತಿಯೂ ವಿಧಿಸಲ್ಪಟ್ಟಿವೆ. ಆ ಯಾಗಾದಿ ಕರ್ಮ ತಾನೇ ಸ್ವರ್ಗಾದಿಗಳನ್ನು ಕೊಡುವುದೇ? ಅಥವಾ, ಆ ಕರ್ಮದಿಂದ ಆರಾಧಿಸಲ್ಪಟ್ಟ ಪರಮಪುರುಷನೇ ಕೊಡುವನೋ?—ಎಂದು ಸಂಶಯ. ವೇದದಲ್ಲಿ ಸ್ವರ್ಗಾದಿಗಳನ್ನು ಉದ್ದೇಶಿಸಿ ಕರ್ಮವನ್ನು ಸಾಧನವನ್ನಾಗಿ ಹೇಳಿರುವುದರಿಂದಲೂ, ಲೋಕದಲ್ಲಿ ಪೈರು, ವ್ಯಾಪಾರ ಮುಂತಾದುವು ಒಬ್ಬನ ಅಪೇಕ್ಷೆಯಿಲ್ಲದೆ ತಾನೇ ಫಲ ಕೊಡುವುದು ಕಾಣುವುದರಿಂದಲೂ, ಯಾಗಾದಿ ಕರ್ಮವೇ ಫಲವನ್ನು ಕೊಡುವುದೆಂದು ನಿಶ್ಚಯಿಸಲ್ಪಡುವುದು. ಫಲವನ್ನು ಕೊಡು

ವುದು ಫಲವುಂಟಾಗುವಾಗ ಅದಕ್ಕೆ ಮುಂಚಿನ ಕ್ಷಣದಲ್ಲಿರಬೇಕು. ಯಾಗಾದಿಗಳು ಹಾಗೆ ಇಲ್ಲದೆ ಬಹು ಕಾಲಕ್ಕೆ ಮುಂಚೆಯೇ ನಶಿಸಿ ಹೋದಾಗ್ಯೂ, ಯಾಗಾದಿಗಳಿಂದ ಉಂಟಾದ ಪುಣ್ಯವಿರುವುದರಿಂದ ಅನಂತರ ಫಲವುಂಟಾಗಲು ಅಡ್ಡಿಯಿಲ್ಲ ಎಂದು ಪೂರ್ವಪಕ್ಷ.

'ಯಾಗ'—ಎಂಬ ಪದಕ್ಕೆ ದೇವತಾ ಪೂಜೆ ಅರ್ಥ. ಇದರಿಂದ ಆ ಕರ್ಮದಲ್ಲಿ ಆರಾಧಿಸಲ್ಪಟ್ಟ ಪರಮಪುರುಷನೇ ಫಲಪ್ರದನೆಂಬುದು ಯುಕ್ತ. ಮೇಲೆಯೂ 'ವಾಯವ್ಯಗ್ಂ ಶ್ವೇತ ಮಾಲಭೇತ ಭೂತಿಕಾಮಃ",—ಎಂದು ಉಪಕ್ರಮಿಸಿ ಮೇಲಣ ವಾಕ್ಯಗಳಲ್ಲಿ. "ಸ ಏವೈನಂ ಭೂತಿಂ ಗಮಯತಿ",—ಎಂದು ವಾಯು ದೇವತಾಕವಾದ ಯಾಗವನ್ನು ಮಾಡಿದರೆ, ಅವನಿಗೆ ವಾಯುದೇವತೆ ಐಶ್ವರ್ಯವನ್ನು ಕೊಡುವುದೆಂದು ಹೇಳಿದೆ. "ತದೇವಾಗ್ನಿಸ್ತದ್ವಾಯುಃ"—ಎಂದು ಆ ವಾಯುವನ್ನೂ ಪರಮಾತ್ಮ ಸ್ವರೂಪವನ್ನಾಗಿ ಹೇಳಿದೆ. ಈ ಹೇತುಗಳಿಂದ ಪರಮಪುರುಷನೇ ಫಲ ಪ್ರದನೆಂಬುದು ಸಿದ್ಧಾಂತ.

## ಸೂತ್ರ ೨—ಶ್ರುತತ್ವಾಚ್ಚ

### ಸೂತ್ರಾರ್ಥ

ವೇದದಲ್ಲಿ ಪರಮಪುರುಷನೇ ಫಲಪ್ರದನೆಂದು ಹೇಳಿರುವುದರಿಂದಲೂ, (ಅವನೇ ಫಲಪ್ರದ)

### ವಿವರಣೆ

"ಅನ್ನಾದೋ ವಸುದಾನಃ"—ಎಂದು ಅನ್ನ ಸಂಪತ್ತು ಮುಂತಾದುವನ್ನು ಅವನೇ ಕೊಡುವನೆಂದೂ, "ಏಷಹ್ಯೇವಾನನ್ದಯಾತಿ",—ಎಂದು ಅವನೇ ಜೀವರಿಗೆ ಮೋಕ್ಷಾನಂದವನ್ನು ಕೊಡುತ್ತಾನೆಂದೂ ಹೇಳುವುದರಿಂದಲೂ ಅವನೇ ಫಲಪ್ರದ.

## ಸೂತ್ರ ೩—ಧರ್ಮಂ ಜೈಮಿನಿ ರತ ಏವ

### ಸೂತ್ರಾರ್ಥ

[ಅತಃ ಏವ] = ಉಪಪತ್ತಿಯಿಂದಲೇ, [ಜೈಮಿನಿಃ] = ಜೈಮಿನಿ ಮಹರ್ಷಿ [ಧರ್ಮಂ] = ಕರ್ಮವನ್ನೇ (ಫಲಪ್ರದವನ್ನಾಗಿ ಒಪ್ಪಿಕೊಂಡರು)

### ವಿವರಣೆ

ಲೋಕದಲ್ಲಿ ವ್ಯವಸಾಯ, ವಾರ್ತಕ್ಯ, ಮುಂತಾದ ವ್ಯಾಪಾರಗಳು ಒಬ್ಬನ ಅಪೇಕ್ಷೆಯಿಲ್ಲದೆಯೇ, ಅದನ್ನು ಮಾಡುವವನಿಗೆ ಫಲವನ್ನು ದೊರಕಿಸುವುದರಿಂದಲೂ, ಯಾಗಾದಿಗಳನ್ನು ವೇದದಲ್ಲಿ ಹಲವು ಸಾಧನಗಳಾಗಿ ವಿಧಿಸಿರುವುದರಿಂದಲೂ, ಕರ್ಮವೇ ಫಲಪ್ರದವೆಂದರು, ಜೈಮಿನಿಯೆಂಬುವರು.

## ಸೂತ್ರ ೪—ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್

### ಸೂತ್ರಾರ್ಥ

[ಹೇತುವ್ಯಪದೇಶಾತ್] = ಹೇತುವನ್ನು ಹೇಳುವುದರಿಂದ [ಭಾದರಾಯಣಃ] = ಬಾದರಾಯಣರೆಂಬುವರು [ಪೂರ್ವಂ ತು] = ಮೊದಲಿನ ಪಕ್ಷವನ್ನೇ (ಅಂಗೀಕರಿಸಿದ್ದಾರೆ)

**ವಿವರಣೆ**

ವಾಯುವನ್ನು ಉದ್ದೇಶಿಸಿ ಮಾಡಿದ ಯಾಗದ ಫಲವನ್ನು ವಾಯುವೇ ಕೊಡುತ್ತಾನೆಂದೂ, ಆ ವಾಯುವೂ ಪರಮಪುರುಷ ಸ್ವರೂಪನೆಂದೂ ಮೇಲೆ ಹೇಳಿದ ಹೇತುಗಳಿಂದ ಪರಮಪುರುಷನೇ ಫಲಪ್ರದನೆಂದು ಬಾದರಾಯಣ ಮಹರ್ಷಿ ಸ್ವೀಕರಿಸಿದ್ದಾರೆ.

## ಪಾದ 3

### 1. ಸರ್ವವೇದಾನ್ತಪ್ರತ್ಯಯಾಧಿಕರಣ

### ಸೂತ್ರ—ಸರ್ವವೇದಾನ್ತಪ್ರತ್ಯಯಂ ಚೋದನಾದ್ಯವಿಶೇಷಾತ್

**ಸಂಗತಿ**

[ಹಿಂದಿನ ಹತ್ತು ಪಾದಗಳಿಂದ ಮೋಕ್ಷೋಪಾಯಕ್ಕೆ ಉಪಯುಕ್ತವಾದ ತತ್ತ್ವಜ್ಞಾನ ಪ್ರತಿಷ್ಠಿತವಾಯಿತು. ಮುಂದಿನ ಆರು ಪಾದಗಳಿಂದ ಪರಬ್ರಹ್ಮಪ್ರಾಪ್ತಿ ರೂಪವಾದ ಫಲದಿಂದ ಕೂಡಿದ ಮತ್ತು ಅದಕ್ಕೆ ಹೇತುಭೂತವಾದ ಉಪಾಸನವನ್ನು ವಿಶದವಾಗಿ ಪ್ರಕಾಶಪಡಿಸುತ್ತಾರೆ.

ಮುಕ್ತನಾಗತಕ್ಕ ಪುರುಷನಿಗೆ ತತ್ತ್ವಜ್ಞಾನಾನುವಿದ್ಧವಾದ ಹಿತತಮವಾದ ಉಪಾಸನವನ್ನು ಹೇಳಲು, ತತ್ತ್ವ ವಿಷಯದಲ್ಲಿ ತರ್ಕಜ್ವರ ಜನಿತವಾದ ಮಹಾಸನ್ನಿಪಾತ ಪ್ರಲಾಪಗಳಾದ ಪರವಾದಗಳನ್ನು ಧೂನನಮಾಡಿ ಈಗ ತತ್ತ್ವಬೋಧ ನಿಷ್ಪನ್ನವಾಗಲು:

"ದಗ್ಧಾಖಿಲಾಧಿಕಾರತ್ವಾತ್ ಬ್ರಹ್ಮಜ್ಞಾನಾಗ್ನಿನಾ ಮುನಿಃ ।

ವರ್ತಮಾನ ಶ್ರುತೇರ್ಮೂರ್ಧ್ನಿ ನೈವಸ್ಯಾದ್ವೇದಕಿಂಕರಃ" ॥—ಎಂದು ವೇದ ಕಿಂಕರತ್ವವನ್ನು ಅಪಲಪಿಸುವ ಮೃಷಾವಾದಿಗಳಿಗಾಗಿ,

"ಸಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ"—ಎಂದು ಶ್ರುತಿ ಸಿದ್ಧವಾಗಿ ಯಾವಜ್ಜೀವ ಅನುವರ್ತ್ಯವಾದ ಭಗವದ್ಭಜನವನ್ನು ಮುಕ್ತಿ ಸಿದ್ಧಿಗಾಗಿ ಹೇಳುತ್ತಾರೆ. ಮೃಷಾವಾದಿಗಳೆನ್ನುವುದು ಹೀಗೆ;—"ಯಾವನು ಅಹಂಕಾರಾದಿ ಯುಕ್ತನೋ ಅವನೇ ವೇದ ಕಿಂಕರ. ಏಕೆಂದರೆ, ಕರ್ತೃತ್ವ—ಭೋಕ್ತೃತ್ವಗಳು ಅನಾತ್ಮ ಧರ್ಮಗಳು. ಕಾಮ್ಯ ಕರ್ತೃತ್ವ ಸಂಸಾರ ಹೇತು. ಅದ್ದರಿಂದ ಅದು ಜ್ಞಾನಿಗೆ ನಿರಸ್ತವೇ ಆದುದು. ಬ್ರಹ್ಮೋಪಾಸನ ಕರ್ತೃತ್ವವೂ, ಸಾಂಸಾರಿಕ ಧರ್ಮದಲ್ಲಿ ಅಂತರ್ಭೂತವಾದ್ದರಿಂದ ನಿರಸ್ತವೇ. ಬ್ರಹ್ಮವಾದರೋ—ಜ್ಞೇಯವಲ್ಲ. ಉಪಾಸ್ಯವಲ್ಲ, ಪ್ರಾಪ್ಯವೂ ಅಲ್ಲ. ವೇದಗಳು ಇದನ್ನು ತಿಳಿಸುವುದೂ ಇಲ್ಲ. ಬ್ರಹ್ಮ ನಿತ್ಯ, ಸ್ವಯಂ ಪ್ರಕಾಶ. ಸ್ವಯಂ ಪ್ರಕಾಶವೆಂಬುದನ್ನು ನಿರ್ವಚನ ಮಾಡದಿದ್ದಲ್ಲಿ ಬ್ರಹ್ಮ ಸಿದ್ಧಿಸುವುದು ಹೇಗೆ—ಎಂದರೆ, ಬ್ರಹ್ಮ ಸಿದ್ಧಿಯೂ ಬೇಡ ಆದ್ದರಿಂದಲೇ ಅಧ್ಯಾತ್ಮವೇತ್ತರು "ಅವಚ-ನೇನೈವ ಪ್ರೋವಾಚ"—ಎನ್ನುತ್ತಾರೆ—ಇತ್ಯಾದಿ ಅಸಂಬದ್ಧವಾಡಷುವ ಮಿಥ್ಯಾ

ವಾದಿಗಳು ತಮ್ಮ ಸಿದ್ಧಾಂತಸಾರಭೂತವಾದ ಸದ್ವಿದ್ಯೆಯನ್ನೂ ಪರಿತ್ಯಜಿಸುವವರು- ವಿವಿಧ ಗುಣ ಪರಿಷ್ಕಾರಯುಕ್ತವಾದ ದಹರವಿದ್ಯಾದಿಗಳನ್ನು ಪರಿತ್ಯಜಿಸುವುದನ್ನು ಕೇಳಬೇಕೆ? ಆದ್ದರಿಂದ ಈಗ ಅವರ ಪ್ರತಿಕ್ಷೇಪಕ್ಕಾಗಿ ಆರಂಭಿಸಿದ್ದಾರೆ ಶ್ರೀ ಸೂತ್ರಕಾರರು.]

**ಸೂತ್ರಾರ್ಥ**

[ಚೋದನಾದ್ಯವಿಶೇಷಾತ್] = ವಿಧಿಸುವುದೇ ಮುಂತಾದುದರಲ್ಲಿ ಭೇದವಿಲ್ಲದ್ದರಿಂದ, [ಸರ್ವವೇದಾನ್ತ ಪ್ರತ್ಯಯಂ] = ಸಕಲ ವೇದಾಂತಗಳಲ್ಲಿಯೂ ತೋರಿಸಲ್ಪಟ್ಟ ದಹರಾದಿ ವಿದ್ಯೆ ಒಂದೇ.

**ವಿವರಣೆ**

ಇನ್ನು ಪರಮಾತ್ಮ ಪ್ರಾಪ್ತಿಗೆ ಉಪಾಯವಾದ ಭಕ್ತಿಯನ್ನು ವಿಚಾರ ಮಾಡುತ್ತಾರೆ. ಅದರಲ್ಲಿ ಯಾವ ಯಾವ ವಿದ್ಯೆಯಲ್ಲಿ ಎಂತೆಂತಹ ಗುಣಗಳುಳ್ಳವನೆಂಬುದಾಗಿ ಉಪಾಸಿಸಬೇಕೋ ಅದನ್ನು ವಿಶದವಾಗಿ ಅರಿಯಗೊಳಿಸುವುದಕ್ಕಾಗಿ, ಆಯಾ ಪ್ರಕರಣಗಳಲ್ಲಿ ಹೇಳಿದ ವಿದ್ಯೆಗಳಲ್ಲಿ ಕೆಲವಕ್ಕೆ ಪರಸ್ಪರ ಭೇದವುಂಟೆಂದೂ, ಕೆಲವಕ್ಕೆ ಇಲ್ಲವೆಂದೂ ನಿರ್ಣಯಿಸುತ್ತಾರೆ,—ದಹರ ವಿದ್ಯೆಯೆಂಬುದು ಛಾನ್ದೋಗ್ಯದಲ್ಲಿಯೂ ತೈತ್ತಿರೀಯದಲ್ಲಿಯೂ, ಹೇಳಲ್ಪಟ್ಟಿದೆ. ಇವೆರಡರಲ್ಲಿಯೂ ಹೇಳಲ್ಪಟ್ಟ ದಹರ ವಿದ್ಯೆ ಬೇರೆ ಬೇರೆಯೇ? ಅಥವಾ ಒಂದೇಯೋ?—ಎಂದು ಸಂಶಯ.

ಬೇರೆ ಬೇರೆ ಪ್ರಕರಣದಲ್ಲಿ ಹೇಳಿರುವುದರಿಂದ, ಬೇರೆ ಬೇರೆಯೆಂದು ಪೂರ್ವಪಕ್ಷ. ಎರಡು ಕಡೆಗಳಲ್ಲಿಯೂ, ಹೇಳಲ್ಪಟ್ಟಿದ್ದರೂ, ದಹರ ವಿದ್ಯೆ ಎಂಬ ಹೆಸರು ಒಂದೇ ಆಗಿರುವುದರಿಂದಲೂ, ಇವೆರಡಕ್ಕೂ ಪರಮಾತ್ಮ ಪ್ರಾಪ್ತಿಯೆಂಬ ಫಲ ಒಂದೇ ಆದ್ದರಿಂದಲೂ, "ತದನ್ವೇಷ್ಟವ್ಯಂ",—ಎಂದೂ, "ತದುಪಾಸಿತವ್ಯಂ",—ಎಂದೂ ಎರಡು ಕಡೆಗಳಲ್ಲಿಯೂ ಒಂದೇ ವಿಧಿ ಪ್ರತ್ಯಯದಿಂದ ಹೇಳುವುದರಿಂದಲೂ, ಎರಡೂ ಒಂದೇ. ಹೀಗೆಯೇ ವೈಶ್ವಾನರಾದಿ ವಿದ್ಯೆಗಳಲ್ಲಿಯೂ ಕಂಡುಕೊಳ್ಳತಕ್ಕದ್ದು. ಎಂದು ಸಿದ್ಧಾನ್ತ.

### ಸೂತ್ರ ೨—**ಭೇದಾನ್ನೇತಿ ಚೇ ದೇಕಸ್ಯಾಮಪಿ**

**ಸೂತ್ರಾರ್ಥ**

[ಭೇದಾತ್] = ಒಂದೂ ಭೇದವಿಲ್ಲದೆ ಎರಡು ಕಡೆಗಳಲ್ಲಿಯೂ ಹೇಳುವುದರಿಂದಲೂ, ಬೇರೆ ಪ್ರಕರಣವಾಗಿರುವುದರಿಂದಲೂ, ವಿಧೇಯ ಭೇದ ತೋರುವುದರಿಂದ, [ನ] = ಎರಡೂ ಒಂದೇ ವಿದ್ಯೆಯಲ್ಲ—[ಇತಿ ಚೇತ್] = ಎಂದಲ್ಲಿ [ಏಕಸ್ಯಾಂ, ಅಪಿ] = ಒಂದೇ ವಿದ್ಯೆಯನ್ನು ಎರಡು ಸಲ ಹೇಳುವುದುಂಟು.

**ವಿವರಣೆ**

ಎರಡು ಕಡೆಗಳಲ್ಲಿಯೂ ಹೇಳಿದ ವಿದ್ಯೆ ಒಂದೇ ಆಗಿದ್ದಲ್ಲಿ, ಒಂದೆಡೆಯಲ್ಲಿ ಹೇಳಿದ್ದೇ ಸಾಕಾಗುತ್ತಿದ್ದಿತು. ಒಂದೆಡೆಗಿಂತಲೂ ಮತ್ತೊಂದೆಡೆಯಲ್ಲಿ ಆ ವಿದ್ಯೆಗೆ ಯಾವುದಾದರೂ ವಿಶೇಷವನ್ನು ಹೇಳಿದ್ದಲ್ಲಿ ಒಂದೇ ವಿದ್ಯೆಯನ್ನು ಎರಡೆಡೆಗಳಲ್ಲಿಯೂ ಹೇಳುವುದಕ್ಕೆ ಉಪಯೋಗವುಂಟು. ಹೀಗಿಲ್ಲದೆ ಎರಡು ಕಡೆಗಳಲ್ಲಿಯೂ ಏಕರೂಪವಾಗಿ

ಹೇಳಿರುವುದರಿಂದಲೂ, ಬೇರೆ ಬೇರೆ ಪ್ರಕರಣಗಳಲ್ಲಿ ಹೇಳುವುದರಿಂದಲೂ, ಎರಡಕ್ಕೂ ಭೇದ ತೋರುವುದರಿಂದ ಎರಡಕ್ಕೂ ವಿದ್ಯೈಕ್ಯವಿಲ್ಲ—ಎಂದು ಪೂರ್ವಪಕ್ಷ.

ಒಂದು ವಿದ್ಯೆಯನ್ನೇ ಒಬ್ಬನಿಗಾಗಿ ಒಂದು ಪ್ರಕರಣದಲ್ಲಿಯೂ, ಮತ್ತೊಬ್ಬನಿಗಾಗಿ ಪ್ರಕರಣಾಂತರದಲ್ಲಿಯೂ ಹೇಳಬಹುದಾದ್ದರಿಂದ, ಇದು ಬೇರೆಯೆಂಬುದಕ್ಕೆ ಹೇತುವಾಗದು.

### ಸೂತ್ರ ೩—ಸ್ವಾಧ್ಯಾಯಸ್ಯ ತಥಾತ್ವೇಹಿ ಸಮಾಚಾರೇऽಧಿಕಾರಾಚ್ಚ ಸವವಚ್ಚ ತನ್ನಿಯಮಃ

### ಸೂತ್ರಾರ್ಥ

[ಸ್ವಾಧ್ಯಾಯಸ್ಯ] = ವೇದಾಧ್ಯಯನಕ್ಕೆ [ತಥಾತ್ವೇ ಹಿ] = ಸಂಸ್ಕಾರ ವಿಶೇಷ ವುಂಟಾಗುವುದಕ್ಕಾಗಿಯಲ್ಲವೇ, (ಶಿರೋವ್ರತವನ್ನು ಹೇಳಿತು) [ಸಮಾಚಾರೇ] = ಸಮಾಚಾರವೆಂಬ ಗ್ರಂಥದಲ್ಲಿ [ಅಧಿಕಾರಾತ್, ಚ] = ಹೇಳುವುದರಿಂದಲೂ, (ಈ ವ್ರತ ವಿದ್ಯಾಂಗವಲ್ಲ) [ಸವವತ್] = (ಸಪ್ತ ಸೂರ್ಯಾದಿ) ಹೋಮದಂತೆ, [ತನ್ನಿಯಮಃ ಚ] = ಆ ವ್ರತ ನಿಯಮವೂ.

### ವಿವರಣೆ

ಮುಂಡಕೋಪನಿಷತ್ತಿನಲ್ಲಿ ಆಥರ್ವಣಿಕರಿಗೆ ಅಕ್ಷರ ವಿದ್ಯೆಯನ್ನು ಹೇಳಿ, ಕಡೆಯಲ್ಲಿ ಆ ವಿದ್ಯೆಗೆ ಅಂಗವಾಗಿ ಶಿರೋವ್ರತವೆಂಬ ವ್ರತವನ್ನು ಅನುಷ್ಠಿಸುವಂತೆ ಹೇಳಿದೆ. ವಾಜಸನೇಯದಲ್ಲಿ, ಗಾರ್ಗಿಪ್ರಶ್ನದಲ್ಲಿಯೂ ಅಕ್ಷರ ವಿದ್ಯೆ ಹೇಳಲ್ಪಟ್ಟಿದೆ. ಮುಂಚೆ ಹೇಳಿದ ಶಿರೋವ್ರತ, ಆಥರ್ವಣಿಕರನ್ನು ಬಿಟ್ಟು ವಾಜಸನೇಯಿ ಮುಂತಾದ ಮಿಕ್ಕವರಿಗೆ ಅನುಷ್ಠಿಸತಕ್ಕದ್ದಲ್ಲ ಆದ್ದರಿಂದ ಗಾರ್ಗಿಪ್ರಶ್ನದಲ್ಲಿ ಹೇಳಿದ ಅಕ್ಷರ ವಿದ್ಯೆಗೆ ಶಿರೋವ್ರತ ಅಂಗವಾಗದು. ಆದ್ದರಿಂದ ಮುಂಡಕೋಪನಿಷತ್ತಿನಲ್ಲಿ ಹೇಳಿದ ಅಕ್ಷರ ವಿದ್ಯೆಯೂ, ಗಾರ್ಗಿಪ್ರಶ್ನದಲ್ಲಿ ಹೇಳಿದ ಅಕ್ಷರ ವಿದ್ಯೆಯೂ ಒಂದಾಗಲಾರದು.—ಎಂದು ಪೂರ್ವಪಕ್ಷ

ಮುಂಡಕೋಪನಿಷತ್ತಿನಲ್ಲಿ ಆಥರ್ವಣಿಕರುಗಳಿಗೆ ಹೇಳಿದ ಶಿರೋವ್ರತ ಅಕ್ಷರ ವಿದ್ಯೆಗೆ ಅಂಗವೆಂದು ಹೇಳಿಲ್ಲ. ಸಪ್ತ ಸೂರ್ಯ ಹೋಮಗಳೂ ಶತೋದನ ಕರ್ಮವೂ ತಾವು ಮಾಡಿದ ವೇದಾಧ್ಯಯನಕ್ಕೆ ಒಂದು ವಿಧವಾದ ಸಂಸ್ಕಾರವುಂಟಾಗುವುದಕ್ಕಾಗಿ ಆಥರ್ವಣಿಕರುಗಳಿಗೇ ವಿಧಿಸಿದೆ. ಅದರಂತೆಯೇ ಈ ಶಿರೋವ್ರತವೂ (ವೇದಾಧ್ಯಯನನಕ್ಕೇ) ಅಂಗವಾಗಿ ವಿಧಿಸಲ್ಪಟ್ಟಿದೆ. ಹೀಗೆಯೇ ಸಮಾಚಾರವೆಂಬ ಗ್ರಂಥದಲ್ಲಿಯೂ ಹೇಳಿದೆ. ಆದ್ದರಿಂದ, ಎರಡು ಕಡೆಗಳಲ್ಲಿಯೂ ಹೇಳಿದ ಅಕ್ಷರವಿದ್ಯೆಗಳಿಗೂ ಶಿರೋವ್ರತ ಅಂಗವಲ್ಲ. ಆದ್ದರಿಂದ, ಎರಡು ಕಡೆಗಳಲ್ಲಿಯೂ ಹೇಳಿದ ಅಕ್ಷರ ವಿದ್ಯೆಯೂ ಒಂದೇ ಎಂದು ಸಿದ್ಧಾಂತ.

## ಸೂತ್ರ ೪—ದರ್ಶಯತಿ ಚ

### ಸೂತ್ರಾರ್ಥ

ವೇದವೂ ಎರಡು ಕಡೆಗಳಲ್ಲಿ ಹೇಳಿದ್ದಕ್ಕೂ ಅಭೇದವನ್ನು ತೋರಿಸುತ್ತದೆ.

### ವಿವರಣೆ

ತೈತ್ತೀರಿಯದಲ್ಲಿ ದಹರಾಕಾಶದಲ್ಲಿ ಇರುವುದನ್ನು ಉಪಾಸಿಸಬೇಕೆಂದು ಸಾಮಾನ್ಯವಾಗಿ ಹೇಳಿತು. ಛಾನ್ದೋಗ್ಯದಲ್ಲಿ ದಹರಾಕಾಶದಲ್ಲಿರುವ ಅಪಹತಪಾಪ್ಮತ್ವಾದಿ ಗುಣಾಷ್ಟಕಗಳನ್ನು ಉಪಾಸಿಸಬೇಕೆಂದು ವಿಶೇಷಿಸಿ ಹೇಳಿದೆ. ಇವೆರಡೂ ಒಂದಾದರೆ ತಾನೇ ಒಂದೆಡೆಯಲ್ಲಿ ಸಾಮಾನ್ಯವಾಗಿಯೂ ಮತ್ತೊಂದೆಡೆಯಲ್ಲಿ ವಿಶೇಷವಾಗಿಯೂ ಹೇಳಬಹುದು. ಬೇರೆ ರೀತಿ ಕೂಡದುದರಿಂದ, ಎರಡೂ ಒಂದು ಎಂದೇ ವೇದದಿಂದ ಈ ಗುಣೋಪ ಸಂಹಾರದಿಂದ ನಿಶ್ಚಯಿಸಲ್ಪಡುವುದು.

## ಸೂತ್ರ ೫—ಉಪಸಂಹಾರೋಽರ್ಥಾಭೇದಾದ್ವಿಧಿಶೇಷವತ್ಸಮಾನೇ ಚ

### ಸೂತ್ರಾರ್ಥ

[ಸಮಾನೇ ಚ] = (ಸತಿ)) = ತುಲ್ಯವಾದು(ಒಂದಾದು)ದಾಗಿರಲಾಗಿ, [ಅರ್ಥಾಭೇದಾತ್] = ವಿಷಯಕ್ಕೆ ಭೇದವಿಲ್ಲದುದರಿಂದ, [ವಿಧಿಶೇಷವತ್] = ವಿಧಿಸಲ್ಪಟ್ಟ ವಿದ್ಯೆಗೆ ಶೇಷವಾದ ಗುಣಗಳಂತೆ [ಉಪಸಂಹಾರಃ] = (ಮಿಕ್ಕ ಗುಣಗಳಿಗೂ) ಉಪಸಂಹಾರ ಮಾಡಲ್ಪಡತಕ್ಕದ್ದು.

### ವಿವರಣೆ

ಹೀಗೆ ನಾನಾ ಕಡೆಗಳಲ್ಲಿ ಹೇಳಲ್ಪಟ್ಟ ದಹರ ವಿದ್ಯೆಗೂ, ಅದೇ ರೀತಿಯಾಗಿ ವೈಶ್ವಾನರ ವಿದ್ಯೆ, ಅಕ್ಷರ ವಿದ್ಯೆ, ಶಾಂಡಿಲ್ಯ ವಿದ್ಯೆಗಳಿಗೂ ಐಕ್ಯ ಸಿದ್ಧಿಸುವುದರಿಂದ, ಆ ವಿದ್ಯೆಯನ್ನು ಅನುಷ್ಠಿಸಬೇಕೆಂದು ವಿಧಿಸುವ ಒಂದು ಪ್ರಕರಣದಲ್ಲಿಯ ವಾಕ್ಯದಲ್ಲಿ ಆ ವಿದ್ಯೆಗೆ ಶೇಷವಾಗಿ ಹೇಳಲ್ಪಟ್ಟ ಗುಣಗಳು ಹೇಗೆ ಆ ವಿದ್ಯೆಯಲ್ಲಿ ಅನುಸಂಧಾನ ಮಾಡಲ್ಪಡುವುವೋ ಹಾಗೆಯೇ ಪ್ರಕರಣಾಂತರದಲ್ಲಿ ಆ ವಿದ್ಯೆಯನ್ನು ವಿಧಿಸುವ ವಾಕ್ಯದಲ್ಲಿ ಮುಂಚೆ ಹೇಳಲ್ಪಡದ ಬೇರೆ ಗುಣಗಳನ್ನು ಅನುಸಂಧಿಸಬೇಕೆಂದು ವಿಧಿಸಿದ್ದಲ್ಲಿ, ಆ ಗುಣಗಳನ್ನೂ ಕೂಡ, ಆ ವಿದ್ಯೆಯನ್ನು ಅಭ್ಯಸಿಸುವವನು ಅನುಸಂಧಿಸಬೇಕು.

## 2. ಅನ್ಯಥಾತ್ವಾಧಿಕರಣ

## ಸೂತ್ರ—ಅನ್ಯಥಾತ್ವಂ ಶಬ್ದಾದಿತಿಚೇನ್ನಾವಿಶೇಷಾತ್

### ಸಂಗತಿ

ಸಾಮಾನ್ಯವಾಗಿ ಉಪಾಸನ ಶಾಸ್ತ್ರಗಳಲ್ಲಿ ಸರ್ವಶಾಖಾಪ್ರತ್ಯಯನ್ಯಾಯ ಅವತೀರ್ಣವೆಂಬುದನ್ನು ಹೇಳಿಯಾಯಿತು. ಅದರಲ್ಲಿ ಭೇದ—ಅಭೇದಗಳಿಗೆ ಹೇತುಗಳ ಸದ್ಭಾವ—ಅಸದ್ಭಾವಗಳು ವಿದ್ಯಾ ವಿಶೇಷಗಳಲ್ಲಿ ನಿರೂಪಿಲ್ಪಡುತ್ತವೆಯೆಂಬುದು ಸಂಗತಿ. ವೈಶ್ವಾನರ ವಿದ್ಯೆ ಮುಂತಾದುವಕ್ಕೆ ಚೋದನಾದ್ಯವಿಶೇಷದಿಂದ ವಿದ್ಯೈಕ್ಯ

ವನ್ನು ಹೇಳಿಯಾಯಿತು. ಇಲ್ಲಿಯೂ ಹಾಗೆಯೇ ಆಗಲಿ—ಎಂಬ ಶಂಕೆಯಿಂದ ಅವಾಂತರ ಸಂಗತಿ.

**ಸೂತ್ರಾರ್ಥ**

[ಶಬ್ದಾತ್] = ವಾಕ್ಯದಿಂದ [ಅನ್ಯಥಾತ್ವಂ] = ಭೇದ (ತೋರುವುದು) [ಇತಿ ಚೇತ್] = ಎಂದಲ್ಲಿ, [ಅವಿಶೇಷಾತ್] = ವಿಶೇಷವಿಲ್ಲದುದರಿಂದ [ನ] = [ಭೇದ] = ಇಲ್ಲ.

**ವಿವರಣೆ**

ಹೀಗೆ ಸಾಮಾನ್ಯವಾಗಿ ವಿದ್ಯೆಗಳಿಗೆ ಅಭೇದವನ್ನು ಹೇಳಿ ಈ ಅಧಿಕರಣದಿಂದ ಛಾನ್ದೋಗ್ಯದಲ್ಲಿಯೂ ವಾಜಸನೇಯ ಶಾಖೆಯಲ್ಲಿಯೂ ಹೇಳಲಟ್ಟ ಉದ್ಗೀಥ ವಿದ್ಯೆಗಳಿಗೆ ಭೇದವನ್ನು ಸ್ಥಾಪಿಸುತ್ತಾರೆ. ಛಾನ್ದೋಗ್ಯದಲ್ಲಿ ಉದ್ಗೀಥದಲ್ಲಿ ಪ್ರಾಣ ದೃಷ್ಟಿಯನ್ನು ಮಾಡಬೇಕೆಂದೂ, ಅದಕ್ಕೆ ಫಲ ಶತ್ರುನಾಶವೆಂದೂ ಹೇಳಿದೆ. ವಾಜಸನೇಯಿಗಳೂ ಉದ್ಗೀಥದಲ್ಲಿ ಪ್ರಾಣದೃಷ್ಟಿಯನ್ನು ಮಾಡಬೇಕೆಂದೂ ಅದಕ್ಕೆ ಫಲ ಶತ್ರು ನಾಶವೆಂದೂ ಹೇಳಿದರು. ಇವೆರಡು ಕಡೆಗಳಲ್ಲಿಯೂ ಒಂದೇ ವಿದ್ಯೆ ಹೇಳಲ್ಪಟ್ಟಿದೆಯೆ? ಬೇರೆ ಬೇರೆ ವಿದ್ಯೆಯೇ?—ಎಂದು ಸಂಶಯ.

ಛಾನ್ದೋಗ್ಯದಲ್ಲಿ ಉದ್ಗೀಥದಲ್ಲಿಯೂ, ಮತ್ತೊಂದೆಡೆಯಲ್ಲಿ ಉದ್ಗೀಥವನ್ನು ಗಾನಮಾಡುವ ಉದ್ಗಾತೃವಿನಲ್ಲಿಯೂ, ಪ್ರಾಣ ದೃಷ್ಟಿಯನ್ನು ಮಾಡುವಂತೆ ಹೇಳಿ ರುವುದರಿಂದ, ಎರಡು ಕಡೆಗಳಲ್ಲಿಯೂ ಬೇರೆ ಬೇರೆ ವಿದ್ಯೆ ವಿಧಿಸಲ್ಪಟ್ಟಿದೆಯೆಂದು ಶಂಕಿಸಕೂಡದು. ಆರಂಭದಲ್ಲಿ ಎರಡು ಕಡೆಗಳಲ್ಲಿಯೂ ಉದ್ಗೀಥವೆಂದು ಆರಂಭಿಸಿ ರುವುದರಿಂದಲೂ, ಪ್ರಾಣದೃಷ್ಟಿಯೂ ಫಲವೂ, ಒಂದಾಗಿರುವುದರಿಂದಲೂ, ಎರಡೂ ಒಂದೇ ಎಂದೂ, ಉದ್ಗೀಥವನ್ನೇ ಉದ್ಗಾತಾ ಎಂದೂ ಲಕ್ಷಣೆಯಿಂದ ಹೇಳಿತೆಂದೂ ಗ್ರಹಿಸಬೇಕು—ಎಂದು ಪೂರ್ವಪಕ್ಷ.

ಸೂತ್ರ ೨—**ನವಾ ಪ್ರಕರಣಭೇದಾತ್ಪರೋವರೀಯಸ್ತ್ವಾದಿವತ್**

**ಸೂತ್ರಾರ್ಥ**

[ಪ್ರಕರಣ ಭೇದಾತ್] = (ಎರಡೆಡೆಯಲ್ಲಿಯೂ) ಪ್ರಕರಣ ಬೇರೆಯಾದ್ದರಿಂದ [ನ] = (ಒಂದೆಂಬುದು) ಕೂಡುವುದಿಲ್ಲ. [ಪರೋವರೀಯಸ್ತ್ವಾದಿವತ್] = ಮಿಕ್ಕ ಚೇತನರಿಗಿಂತ ಶ್ರೇಷ್ಠನಾದ ಬ್ರಹ್ಮನಿಗೂ ಶ್ರೇಷ್ಠನಾಗಿರುವುದೆಂಬ ಗುಣ ಮುಂತಾದುದು ವಿದ್ಯೆಗಳಿಗೆ ಹೇಗೆ ಭೇದಜನಕವಾಯಿತೋ ಹಾಗೆಯೇ ಇಲ್ಲಿಯೂ ಗ್ರಹಿಸಬೇಕು.

**ವಿವರಣೆ**

ಮೇಲಿನ ಪೂರ್ವಪಕ್ಷವನ್ನು ನಿರಸನಮಾಡುತ್ತಾರೆ;—ಮೊದಲು ಉದ್ಗೀಥ ವನ್ನೇ ಇವೆರಡೆಡೆಗಳಲ್ಲಿಯೂ ಉಪಾಸನವಾಗಿ ಹೇಳಿದ್ದಲ್ಲಿ ಹಾಗೆ ಹೇಳಬಹುದು. ಅದೇ ಇಲ್ಲ. ಏಕೆಂದರೆ, ಛಾನ್ದೋಗ್ಯದಲ್ಲಿ ಉದ್ಗೀಥಾವಯವಾದ ಪ್ರಣವವನ್ನೂ, ಮತ್ತೊಂದೆಡೆಯಲ್ಲಿ ಉದ್ಗೀಥವನ್ನೂ ಉಪಾಸನವಾಗಿ ಹೇಳುವುದರಿಂದ ಆರಂಭ

ದಲ್ಲಿಯೇ ಭೇದಿಸಿಬಿಟ್ಟಿತು.—ಇದಕ್ಕೆ ಉದಾಹರಣೆ—ಒಂದು ಪ್ರಾಣ ವಿದ್ಯೆಯಲ್ಲಿಯೇ ಒಂದು ಕಡೆಯಲ್ಲಿ ಹಿರಣ್ಮಯ ವಿಗ್ರಹ ವಿಶಿಷ್ಟ ಪುರುಷ ದೃಷ್ಟಿಯನ್ನೂ ಮತ್ತೊಂದೆಡೆಯಲ್ಲಿ ಪರೋವರೀಯಸ್ತ್ವಗುಣವಿಶಿಷ್ಟ ಪುರುಷ ದೃಷ್ಟಿಯನ್ನೂ ವಿಧಿಸಿದೆಡೆಗಳಲ್ಲಿ ಅವೆರಡು ಕಡೆಗಳೂ ಹೇಗೆ ಬೇರೆ ಬೇರೆ ವಿಷಯವೆಂದು ಅಂಗೀಕರಿಸಲ್ಪಡುವುದೋ, ಹಾಗೆಯೇ ಇಲ್ಲಿಯೂ, ಆರಂಭದಲ್ಲಿ ಒಂದೆಡೆಯಲ್ಲಿ ಪ್ರಣವವನ್ನೂ ಮತ್ತೊಂಡೆಯಲ್ಲಿ ಉದ್ಗೀಥವನ್ನೂ ಹೇಳುವುದರಿಂದ, ಅನಂತರದಲ್ಲಿಯೂ, ಒಂದು ಕಡೆಯಲ್ಲಿ ಉದ್ಗೀಥದಲ್ಲಿಯೂ ಮತ್ತೊಂದು ಕಡೆ ಉದ್ಗಾತಾವಿನಲ್ಲಿಯೂ ಪ್ರಾಣದೃಷ್ಟಿ ವಿಧಿಸಿದೆಯೆಂದು ಬೇರೆ ಬೇರೆ ವಿಷಯವಾಗಿ ಹೇಳುವುದು ಯುಕ್ತವಾಗಿ ಪ್ರಕರಣ ಭೇದಿಸಿದುದರಿಂದ ಎರಡು ವಿದ್ಯೆಗಳೂ ಬೇರೆ ಬೇರೆಯೆಂದು ಹೇಳಬೇಕೆಂದು ಸಿದ್ಧಾಂತ.

[ಪರೋವರೀಯಸ್ತ್ವಂ] = "ಪರೋರಜಾ"—ಎಂಬಂತೆ, ಪರೋವರೀಯಾನ್.—ವರೀಯಸಾಂ ವರಃ = ವರೀಯಾನ್, ತಸ್ಯ ಭಾವಃ—ವರೀಯಸ್ತ್ವಂ—ಹೀಗೆ ಕರ್ಮಕರ್ತೃವೈಷಮ್ಯ ಹೇಳಲ್ಪಟ್ಟಿದೆ. ಪ್ರಾಣ ವಿದ್ಯೆಯಲ್ಲಿ ಉಪಾಸ್ಯ ಒಂದು—ದೃಷ್ಟಿ ವಿಶೇಷಣವೂ ಒಂದೇ ವಿಧ—ಹಾಗಿದ್ದರೂ, ದೃಷ್ಟಿ ವಿಶೇಷಣ ಭೂತ ಪರಮಾತ್ಮನಲ್ಲಿ ಹಿರಣ್ಮಯತ್ವ—ಪರೋವರೀಯಸ್ತ್ವಾದಿ ಧರ್ಮಭೇದ ಮಾತ್ರದಿಂದ ವಿದ್ಯಾಭೇದ ಮಾಡಲಟ್ಟಿತು. ಇಲ್ಲಿ ಉಪಾಸ್ಯಭೇದವೇ ಇರುವಲ್ಲಿ ಹೇಳತಕ್ಕದ್ದೇನು?—ಎಂದು ಭಾವ.

### ಸೂತ್ರ ೩—**ಸಂಜ್ಞಾತ ಶ್ಚೇತ್ ತದುಕ್ತಂ ಅಸ್ತಿತು ತದಪಿ**

### ಸೂತ್ರಾರ್ಥ

[ಸಂಜ್ಞಾತಃ] = ಹೆಸರಿನ ಅಭೇದದಿಂದ, (ಎರಡಕ್ಕೂ ಹೆಸರು ಒಂದೇ ಆಗಿರುವುದರಿಂದ) [ತತ್] = ಆ ವಿದ್ಯೆ ಒಂದು (ಎಂದು) [ಉಕ್ತಂ ಚೇತ್] = ಹೇಳಲ್ಪಟ್ಟಿದ್ದೇ ಆದರೆ, [ತತ್, ಅಪಿ] = ಆ ನಾಮೈಕ್ಯವೂ [ಅಸ್ತಿತು] = ಬೇರೆ ಬೇರೆ ವಿದ್ಯೆಗಳಿಗೂ ಉಂಟು.

### ವಿವರಣೆ

ಛಾನ್ದೋಗ್ಯದಲ್ಲಿಯೂ ವಾಜಸನೇಯದಲ್ಲಿಯೂ ಈ ವಿದ್ಯೆಯನ್ನು ಉದ್ಗೀಥವೆಂದು ಹೆಸರನ್ನಿಟ್ಟು ಹೇಳುವುದರಿಂದ ಎರಡೂ ಒಂದೇ ಆಗಬೇಕು—ಎಂದು ಪೂರ್ವಪಕ್ಷ.

ಅಗ್ನಿಹೋತ್ರವೆಂಬ ಕರ್ಮ ನಿತ್ಯಾಗ್ನಿ ಹೋತ್ರವೆಂದೂ ಅಯನಾಗ್ನಿ ಹೋತ್ರವೆಂದೂ ಎರಡು ವಿಧ. ನಿತ್ಯಾಗ್ನಿ ಹೋತ್ರವೆಂಬುದು ನಿತ್ಯ ಮಾಡತಕ್ಕದ್ದು. ಅಯನಾಗ್ನಿ ಹೋತ್ರವು ಕುಂಡಪಾಯಿಗಳು ಅಯನವೆಲ್ಲಾ ಮಾಡತಕ್ಕದ್ದು. ಇವೆರಡಕಕ್ಕೂ ಹೆಸರು ಒಂದೇ ಆದಾಗ್ಗೂ, ಕರ್ಮ ಬೇರೆ ಬೇರೆಯಾಗಿಯೇ ಇದೆ. ಛಾನ್ದೋಗ್ಯದಲ್ಲಿ ಪ್ರಥಮ ಪ್ರಪಾಠಕದಲ್ಲಿ ಅನೇಕ ವಿಧವಾಗಿ ಹೇಳಲ್ಪಟ್ಟ ಉದ್ಗೀಥ ವಿದ್ಯೆಗಳ ಹೆಸರು ಒಂದೇ ಆದರೂ, ಪರೋವರೀಯಸ್ತ್ವ ಮುಂತಾದ ಗುಣ ವಿಶಿಷ್ಟವಾದ ಪರಮಪುರುಷ ದೃಷ್ಟಿಯುಕ್ತವಾದ ಉದ್ಗೀಥ ವಿದ್ಯೆಯೂ, ಹಿರಣ್ಮಯಶ್ಮಶ್ರುವಿಶಿಷ್ಟ ಪುರುಷದೃಷ್ಟಿಯುಕ್ತವಾದ ಉದ್ಗೀಥ ವಿದ್ಯೆಯೂ ಭಿನ್ನ ಭಿನ್ನಗಳಾಗಿವೆ. ಅದರಂತೆ ಇಲ್ಲಿಯೂ, ಪ್ರಣವದಲ್ಲಿ ಪ್ರಾಣ ದೃಷ್ಟಿಯುಕ್ತವಾದ, ಛಾನ್ದೋಗ್ಯದಲ್ಲಿ ಹೇಳಿದ ಉದ್ಗೀಥ ವಿದ್ಯೆಯೂ

ವಾಜಸನೇಯದಲ್ಲಿ ಹೇಳಿದ ಉದ್ಗಾತೃವಿನಲ್ಲಿ ಪ್ರಾಣದೃಷ್ಟಿಯುಕ್ತವಾದ ಉದ್ಗೀಥ ವಿದ್ಯೆಯೂ ಬೇರೆ ಬೇರೆಯೆಂದು ಸಿದ್ಧಾಂತ.

## ಸೂತ್ರ ೪—ವ್ಯಾಪ್ತೇಶ್ಚ ಸಮಂಜಸಂ

**ಸೂತ್ರಾರ್ಥ**

[ವ್ಯಾಪ್ತೇಃ,ಚ] = ವ್ಯಾಪ್ತಿಯಿಂದಲೂ, [ಸಮಂಜಸಂ] = ( ಮೇಲೆ ಹೇಳಿದ ಅರ್ಥ ಯುಕ್ತಿಯುಕ್ತವಾಗಿದೆ.

**ವಿವರಣೆ**

ಛಾನ್ದೋಗ್ಯದಲ್ಲಿ ಪ್ರಥಮ ಪ್ರಪಾಠಕದಲ್ಲಿ ಆರಂಭದಲ್ಲಿಯೂ ಮೇಲೆ ಎಲ್ಲೆಡೆ ಗಳಲ್ಲಿಯೂ, ಉದ್ಗೀಥವೆಂದು ಉದ್ಗೀಥಾಯವವಾದ ಪ್ರಣವವನ್ನೇ ಹೇಳುವು ದರಿಂದ, ನಡುವೆ, ಪ್ರಾಣ ದೃಷ್ಟಿಗೆ ವಿಷಯವಾಗಿ ಹೇಳಲ್ಪಟ್ಟ ಉದ್ಗೀಥವೂ ಉದ್ಗೀಥಾ ವಯವಾದ ಪ್ರಣವವೇ ಆಗಬೇಕು. ಆದ್ದರಿಂದ ಎರಡು ಕಡೆಗಳಲ್ಲಿಯೂ ಹೇಳಲ್ಪಟ್ಟ ವಿದ್ಯೆಗಳೂ ಪರಸ್ಪರ ಭಿನ್ನಗಳೆಂದು ಸಿದ್ಧಾಂತ.

## 3. ಸರ್ವಾಭೇದಾಧಿಕರಣ

## ಸೂತ್ರ—ಸರ್ವಾಭೇದಾದನ್ಯತ್ರೇಮೇ

**ಸಂಗತಿ**

ಹಿಂದಿನ ಅಧಿಕರಣದಲ್ಲಿ ರೂಪ ಭೇದದಿಂದ ವಿದ್ಯಾಭೇದ ಹೇಳಲ್ಪಟ್ಟಿತು. ಅದಕ್ಕೆ ಹಿಂದೆ ವೈಶ್ವಾನರಾಧಿಕರಣದಲ್ಲಿ ರೂಪೈಕ್ಯದಿಂದ ವಿದ್ಯೈಕ್ಯವೆನ್ನಲಾಯಿತು. ಈಗ ಹಿಂದಿನ ಅಧಿಕರಣದಲ್ಲಿಯೂ ರೂಪ ಭೇದದಿಂದ ವಿದ್ಯಾ ಭೇದವನ್ನು ಆಶಂಕಿಸಿ ಅದನ್ನು ಪ್ರತಿಕ್ಷೇಪ ಮಾಡಿ, ವೈಶ್ವಾನರಾಧಿಕರಣದಲ್ಲಿಯಂತೆ ರೂಪೈಕ್ಯದಿಂದ ವಿದ್ಯೈಕ್ಯವೇ ಮತ್ತೆ ಪ್ರತಿಷ್ಠಾಪಿತವಾಗುತ್ತೆ—ಎಂಬುದಾಗಿ ಸಂಗತಿ.

**ಸೂತ್ರಾರ್ಥ**

[ಸರ್ವಾಭೇದಾತ್] = ಜ್ಯೈಷ್ಠ್ಯ ಶ್ರೈಷ್ಠ್ಯಾದಿ ಸಕಲಾಂಶಗಳಲ್ಲಿಯೂ ಭೇದ ವಿಲ್ಲದುದರಿಂದ, [ಅನ್ಯತ್ರ] = ಬೇರೆಯಾದ (ಕೌಷೀತಕಿಯಲ್ಲಿ ಹೇಳಲ್ಪಟ್ಟ) ಪ್ರಾಣ ವಿದ್ಯೆಯಲ್ಲಿಯೂ [ಇಮೇ] = ಈ ವಸಿಷ್ಠತ್ವಾದಿ ಗುಣಗಳು (ಅನುಸಂಧೇಯಗಳು)

**ವಿವರಣೆ**

"ಪ್ರಾಣೋ ಹವೈ ಜ್ಯೇಷ್ಠಶ್ಚ ಶ್ರೇಷ್ಠಶ್ಚ",—ಇತ್ಯಾದಿಯಾಗಿ ಛಾನ್ದೋಗ್ಯ ದಲ್ಲಿಯೂ, ವಾಜಸನೇಯದಲ್ಲಿಯೂ, ಕೌಷೀತಕಿಯಲ್ಲಿಯೂ, ಪ್ರಾಣ ವಿದ್ಯೆ ಹೇಳಲಟ್ಟಿತು. ಅದರಲ್ಲಿ ಛಾನ್ದೋಗ್ಯ, ವಾಜಸನೇಯ ಶಾಖೆಗಳಲ್ಲಿ ಜ್ಯೈಷ್ಠ್ಯ ಶ್ರೈಷ್ಠ್ಯ ಗುಣಯುಕ್ತ ವಾಗಿಯೂ, ವಾಗಾದೀಂದ್ರಿಯಗಳಿಗಿರುವ ವಸಿಷ್ಠತ್ವಾದಿ ಗುಣಗಳಿಗೆ ಹೇತು ವಾಗಿಯೂ, ಪ್ರಾಣನನ್ನು ಉಪಾಸಿಸಬೇಕೆಂದು ಹೇಳಿದೆ. ಕೌಷೀತಕಿಯಲ್ಲಿ ಮೊದಲಿನ ಎರಡು ಗುಣಗಳುಳ್ಳದಾಗಿಯೇ ಪ್ರಾಣನನ್ನು ಉಪಾಸಿಸಬೇಕೆಂದು ಹೇಳಿದೆ. ಮೂರ ನೆಯ ಗುಣವನ್ನು ಹೇಳಲ್ಲಿಲ್ಲ. ಆದ್ದರಿಂದ ಆ ಎರಡು ಶಾಖಿಕರು ಹೇಳುವ ಪ್ರಾಣ

ವಿದ್ಯೆಗೂ, ಕೌಷೀತಕಿಯಲ್ಲಿ ಹೇಳಿದ ಪ್ರಾಣವಿದ್ಯೆಗೂ ಭೇದವುಂಟೆ? ಇಲ್ಲವೆ?—ಎಂದು ಸಂಶಯ. ಮುಂಚೆ ಎರಡರಲ್ಲಿ ವಸಿಷ್ಠತ್ವಾದಿ ಗುಣ ಹೇತುವಾಗಿ ಪ್ರಾಣನನ್ನು ಉಪಾಸಿಸಲು ಹೇಳುವುದರಿಂದಲೂ, ಕೌಷೀತಕಿಯಲ್ಲಿ ಈ ವಿಶೇಷಣವನ್ನು ಉಪಾಸ್ಯವಾದ ಪ್ರಾಣನಲ್ಲಿ ಅನುಸಂಧಾನ ಮಾಡಬೇಕೆಂದು ಹೇಳದುದರಿಂದಲೂ, ಉಪಾಸ್ಯವಾದ ಪ್ರಾಣನಲ್ಲಿ ಅನುಸಂಧೇಯವಾದ ಗುಣಗಳನ್ನು ನ್ಯೂನಾಧಿಕಗಳಾಗಿ ಹೇಳಿರುವುದರಿಂದ ಎರಡೂ ಭಿನ್ನ ಭಿನ್ನಗಳೆಂದು ಪೂರ್ವಪಕ್ಷ.

ಜ್ಯೈಷ್ಠ್ಯವೆಂಬುದು—ಮಿಕ್ಕ ಇಂದ್ರಿಯಗಳ ಸ್ಥಿತಿಗೆ ಹೇತುವಾಗಿರುವುದು—ಪ್ರಾಣ ನಿಲ್ಲದಿದ್ದಲ್ಲಿ, ಮಿಕ್ಕ ಇಂದ್ರಿಯಗಳು ಧರಿಸಲಾರವಾದ್ದರಿಂದ; ಶ್ರೈಷ್ಠ್ಯವೆಂಬುದು—ಅವುಗಳ ಕಾರ್ಯಗಳಿಗೆ ಹೇತುವಾಗಿರುವುದು—ಪ್ರಾಣನಿಲ್ಲದಲ್ಲಿ, ಅವು ಏನನ್ನು ಮಾಡಲೂ ಯೋಗ್ಯತೆಯಿಲ್ಲದವುಗಳಾದ್ದರಿಂದ. ವಾಕ್ಕಿಗೆ ವಸಿಷ್ಠತ್ವವೆಂಬುದು—ವ್ಯವಹಾರಾದಿ ರೂಪವಾದ ಸ್ವಕಾರ್ಯಗಳನ್ನು ಮಾಡಲು ಬೇಕಾದ ಸಾಮರ್ಥ್ಯ ಅದಕ್ಕೆ ಹೇತುವಾಗಿರುವುದೆಂದರೆ ಕಾರಣವಾಗಿರುವುದು. ಹೀಗೆ ಕೌಷೀತಕಿಯಲ್ಲಿ ಜ್ಯೈಷ್ಠ್ಯ—ಶ್ರೈಷ್ಠ್ಯಗಳನ್ನು ಹೇಳಿದಾಗಲೇ, ವಸಿಷ್ಠತ್ವಾದಿ ಹೇತುತ್ವವನ್ನೂ ಹೇಳಿದಂತೆಯೇ. ಹೇಗೆಂದರೆ,—ಆಯಾ ಇಂದ್ರಿಯಗಳಲ್ಲಿಯ ಕಾರ್ಯಜನನ ಯೋಗ್ಯತೆಗೆ ಕಾರಣವಾಗಿದ್ದಲ್ಲದೆ. ಅವುಗಳ ಕಾರ್ಯಗಳಿಗೆ ಕಾರಣವಾಗಲಾರದಾದ್ದರಿಂದ, ಅವೆರಡನ್ನೂ ಹೇಳಿದಾಗಲೇ ಇದೂ ಸಿದ್ಧವಾದ್ದರಿಂದ, ಕೌಷೀತಕಿಯಲ್ಲಿಯೂ, ಪ್ರಾಣನನ್ನು ವಸಿಷ್ಠತ್ವಾದಿ ಹೇತುವಾಗಿ ಉಪಾಸಿಸಲು ಹೇಳಿದೆಯೆಂದು ತಾತ್ಪರ್ಯವನ್ನು ಕಲ್ಪಿಸಬೇಕು. ಹೀಗೆ ಛಾನ್ದೋಗ್ಯದಲ್ಲಿ ಹೇಳಿದ ವಿದ್ಯೆಗೂ ಇದಕ್ಕೂ ಉಪಾಸ್ಯ ವಿಷಯದಲ್ಲಿಯೂ, ಗುಣ ವಿಷಯದಲ್ಲಿಯೂ, ಭೇದವಿಲ್ಲವಾದ್ದರಿಂದ ಎರಡೂ ಒಂದೇ ಎಂಬುದು ಸಿದ್ಧಾನ್ತ.

## 4. ಆನನ್ದಾದ್ಯಧಿಕರಣ

### ಸೂತ್ರ—**ಆನನ್ದಾದಯಃ ಪ್ರಧಾನಸ್ಯ**

[ಅಭೇದಾತ್ ಎಂಬುದು ಹಿಂದಿನಿಂದ ಅನುವರ್ತಿಸುತ್ತೆ]

**ಸಂಗತಿ**

ಹಿಂದಿನ ಮೂರು ಅಧಿಕರಣಗಳಿಂದ ವಿದ್ಯೆಗಳ ಭೇದಾಭೇದ ಚಿಂತೆ ಮಾಡಲ್ಪಟ್ಟಿತು. ಅದರಲ್ಲಿ ವೈಶ್ವಾನರ ವಿದ್ಯೆಯಲ್ಲಿ, "ವಾಯುಃ ಪ್ರಾಣಃ",—ಎಂದು ವಾಯುವು ಪರಮಪುರುಷನಾದ ಪ್ರಾಣವೆಂಬುದಾಗಿ ಧ್ಯಾನಿಸಲ್ಪಡಬೇಕೆಂದು ಪರಿಕಲ್ಪಿತವಾಯಿತು. ಉದ್ಗೀಥ ವಿದ್ಯೆಯಲ್ಲಿ ಮತ್ತೆ, ಉದ್ಗೀಥಾದಿಗಳಲ್ಲಿ ಪ್ರಾಣ ದೃಷ್ಟಿರೂಪತ್ವದಿಂದ ಪ್ರಾಣನ ಪ್ರಸಂಗ ಮಾಡಲ್ಪಟ್ಟಿತು. ಇದಕ್ಕೆ ಹಿಂದಿನ ಅಧಿಕರಣದಲ್ಲಿ ಸಾಕ್ಷಾತ್ ಪ್ರಾಣನೇ ನಿರೂಪಿತವಾಯಿತು. ಇದರಿಂದಲೂ ಕೂಡ, ಹಿಂದಿನ ಅಧಿಕರಣಗಳು ಮೂರಕ್ಕೂ ಪರಸ್ಪರ ಸಾಂಗತ್ಯವಿದೆ. ಜ್ಯೈಷ್ಠ್ಯ ಶ್ರೈಷ್ಠ್ಯಾದಿ ಗುಣೋಪಪಾದನೆಯಲ್ಲಿ ಅಂತರ್ಭೂತವಾದ್ದರಿಂದ ವಸಿಷ್ಠತ್ವಾದಿಗಳೂ ಅನುಸಂಧೇಯವೆನ್ನಲಾಯಿತು. ಆ ಪ್ರಸಂಗದಿಂದ, ಬ್ರಹ್ಮ ಸರ್ವ ವಿದ್ಯೆಗಳಲ್ಲಿಯೂ ವೇದ್ಯವಾದ್ದರಿಂದ, ಅದರ ಸ್ವರೂಪ

ನಿರೂಪಕ ಧರ್ಮಗಳಾದ ಆನಂದಾದಿಗಳು ಆ ಸ್ವರೂಪ ನಿರೂಪಣದಲ್ಲಿ ಅಂತರ್ಭೂತವಾದ್ದರಿಂದ, ಎಲ್ಲಾ ಪರ ವಿದ್ಯೆಗಳಲ್ಲಿಯೂ ಅನುಸಂಧೇಯವೆಂದು ಹೇಳಲ್ಪಡುತ್ತೆ—ಎಂಬುದು ಸಂಗತಿ.

**ಸೂತ್ರಾರ್ಥ**

[ಪ್ರಧಾನಸ್ಯ] = ಮುಖ್ಯವಾದ (ಗುಣಿಯಾದ) ಪರಮಪುರುಷನಿಗೆ [ಅಭೇದಾತ್] = ಭೇದವಿಲ್ಲದುದರಿಂದ, [ಆನಂದಾದಯಃ] = ಆನಂದ ಮುಂತಾದ ಗುಣಗಳು (ಸರ್ವ ವಿದ್ಯೆಗಳಲ್ಲಿಯೂ ಅನುಸಂಧಿಸಲು ತಕ್ಕವುಗಳು)

**ವಿವರಣೆ**

ಆನಂದತ್ವ, ಜ್ಞಾನತ್ವ, ಅನಂತತ್ವ, ಅಮಲತ್ವ, ಶ್ರಿಯಃಪತಿತ್ವ—ಗಳೆಂಬ ಈ ಗುಣಗಳು ಸಮಸ್ತ ವಿದ್ಯೆಗಳಲ್ಲಿಯೂ ಉಪಾಸ್ಯನಾದ ಪರಮಪುರುಷನಲ್ಲಿ ಅನುಸಂಧಿಸತಕ್ಕದ್ದೇ? ಅಲ್ಲವೆ?—ಎಂದು ಸಂಶಯ. ಆಯಾ ವಿದ್ಯಾ ಪ್ರಕರಣಗಳಲ್ಲಿ ಈ ಗುಣಗಳನ್ನು ಹೇಳಿಲ್ಲವಾದ್ದರಿಂದಲೂ, ಆ ಪ್ರಕರಣಗಳಲ್ಲಿ ಹೇಳದ ಮಿಕ್ಕ ಎಲ್ಲಾ ಗುಣಗಳನ್ನೂ ಅನುಸಂಧಾನ ಮಾಡಬೇಕಾದಲ್ಲಿ ಈ ಗುಣಗಳು ಅನಂತಗಳಾದ್ದರಿಂದ ಅನುಸಂಧಿಸಲು ಸಾಧ್ಯವಾಗದುದರಿಂದಲೂ, ಮತ್ತು ಆ ಗುಣಗಳೊಂದಿಗೆ ತುಲ್ಯವಾದ ಆನಂದತ್ವಾದಿ ಗುಣಗಳನ್ನು ಎಲ್ಲಾ ವಿದ್ಯೆಗಳಲ್ಲಿಯೂ ಅನುಸಂಧಿಸಬೇಕಾಗಿಲ್ಲ—ಎಂದು ಪೂರ್ವಪಕ್ಷ.

ಮೇಲೆ ಹೇಳಿದ ಈ ನಾಲ್ಕು ಗುಣಗಳೂ ಬ್ರಹ್ಮ ಸ್ವರೂಪ ನಿರೂಪಕಗಳು. ಇವು ತೋರದೆ ಹೋದಲ್ಲಿ ಬ್ರಹ್ಮ ಸ್ವರೂಪ ತೋರದು. ಸಮಸ್ತ ವಿದ್ಯೆಗಳಲ್ಲಿಯೂ ಉಪಾಸ್ಯವಾದ ಪರಮಾತ್ಮ ಸ್ವರೂಪ ಒಂದೇ ಆದ್ದರಿಂದ, ಉಪಾಸ್ಯಸ್ವರೂಪ ಆಯಾ ವಿದ್ಯೆಗಳಲ್ಲಿ ಹೊಳೆಯುವುದಕ್ಕಾಗಿ ಆಯಾ ಪ್ರಕರಣಗಳಲ್ಲಿ ಅನುಕ್ತಗಳಾಗಿದ್ದಾಗ್ಯೂ, ಮೇಲ್ಕಂಡ ಗುಣಗಳು ಅವಶ್ಯ ಅನುಸಂಧೇಯಗಳು. ಆ ಪ್ರಕರಣದಲ್ಲಿ ಹೇಳದ ಮಿಕ್ಕ ಗುಣಗಳು ಬ್ರಹ್ಮ ಸ್ವರೂಪ ನಿರೂಪಕಗಳಲ್ಲವಾದ್ದರಿಂದ, ಅವುಗಳನ್ನು ಅನುಸಂಧಿಸದಿದ್ದಾಗ್ಯೂ, ಬ್ರಹ್ಮಸ್ವರೂಪ ಹೊಳೆಯಲು ತಡೆಯಿಲ್ಲವೆಂದು ಸಿದ್ಧಾಂತ.

## ಸೂತ್ರ ೨—ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌಹಿ ಭೇದೇ

**ಸೂತ್ರಾರ್ಥ**

[ಪ್ರಿಯಶಿರಸ್ತ್ವಾದ್ಯಪ್ರಾಪ್ತಿಃ] = ಪ್ರಿಯಶಿರಸ್ತ್ವ ಮುಂತಾದ ಗುಣಗಳಿಗೆ (ಸಕಲ ವಿದ್ಯೆಗಳಲ್ಲಿಯೂ ಅನುಸಂಧಿಸಲು) ಪ್ರಾಪ್ತಿಯಿಲ್ಲ. [ಭೇದೇ] = (ಶಿರಸ್ಸೆಂದೂ ಪಕ್ಷವೆಂದೂ) ಭೇದ ಬ್ರಹ್ಮಸ್ವರೂಪದಲ್ಲಿ ಅಂಗೀಕರಿಸಲು [ಉಪಚಯಾಪಚಯೌ] = ವೃದ್ಧಿಹ್ರಾಸಗಳು ಸಂಭವಿಸುವುವು.

**ವಿವರಣೆ**

ಮೇಲೆ ಹೇಳಿದ ನಾಲ್ಕು ಗುಣಗಳೂ ಸಕಲ ವಿದ್ಯೆಗಳಲ್ಲಿಯೂ ಅನುಸಂಧಾನ ಮಾಡತಕ್ಕವುಗಳಾದಾಗ್ಯೂ, ಶಿರಸ್ಸಾಗಿಯೂ, ಪಕ್ಷಗಳಾಗಿಯೂ, "ತಸ್ಯ ಪ್ರಿಯಮೇವ

ಶಿರಃ"—"ಮೋದೋ ದಕ್ಷಿಣಃ ಪಕ್ಷಃ, ಪ್ರಮೋದ ಉತ್ತರಃ ಪಕ್ಷಃ"—ಇತ್ಯಾದಿಗಳಿಂದ ನಿರೂಪಿಸಲ್ಪಟ್ಟ 'ಪ್ರಿಯತ್ವ, ಮೋದತ್ವ, ಪ್ರಮೋದತ್ವ' ಗುಣಗಳು ಬ್ರಹ್ಮಸ್ವರೂಪ ನಿರೂಪಕ ಧರ್ಮಗಳಲ್ಲವಾದ್ದರಿಂದ, ಸಕಲ ವಿದ್ಯೆಗಳಲ್ಲಿಯೂ ಅನುಸಂಧಿಸಕೂಡದು. ಹಾಗೆ ನಿರೂಪಿಸಿದ ಪ್ರಕಾರ ಶಿರಸ್ಸೆಂದೂ ಪಕ್ಷಗಳೆಂದೂ—ಇತ್ಯಾದಿ ಭೇದಗಳನ್ನು ಬ್ರಹ್ಮ ಸ್ವರೂಪಕ್ಕೆ ಅಂಗೀಕರಿಸಿದಲ್ಲಿ ಪರಿಚ್ಛಿನ್ನವಾದ ಶಿರಸ್ಸು ಮುಂತಾದ ಅವಯವ ಗಳಿಗೆ ಹೇಗೋ ಹಾಗೆ ಅಖಂಡವಾದ ಬ್ರಹ್ಮ ಸ್ವರೂಪಕ್ಕೂ ಸಂಕೋಚ ವಿಕಾಸಾದಿ ವಿಕಾರಗಳು ಪ್ರಸಂಗಿಸುವುವು. ಆಗ್ಗೆ, ಅವಿಕಾರ ಶ್ರುತಿಗೆ ವಿರೋಧವಾಗುವುದರಿಂದ ಪ್ರಿಯತ್ವಾದಿಗಳು ಬ್ರಹ್ಮಸ್ವರೂಪ ಧರ್ಮಗಳಲ್ಲ. ಅವುಗಳನ್ನು ಸಕಲ ವಿದ್ಯೆಗಳಲ್ಲಿಯೂ ಅನುಸಂಧಿಸಲೂ ಕೂಡದು.

### ಸೂತ್ರ ೩—**ಇತರೇತ್ವರ್ಥಸಾಮಾನ್ಯಾತ್**

**ಸೂತ್ರಾರ್ಥ**

[ಅರ್ಥಸಾಮಾನ್ಯಾತ್] = ಪರಮಾತ್ಮ ಸ್ವರೂಪಕ್ಕೆ ಸಮನಾದ್ದರಿಂದ [ಇತರೇ, ತು] = ಮಿಕ್ಕ ಆನಂದಾದಿ ಗುಣಗಳು (ಸಕಲ ವಿದ್ಯೆಗಳಲ್ಲಿಯೂ ಅನುಸಂಧಿಸಲ್ಪಡುವುವು).

**ವಿವರಣೆ**

ಆನಂದಾದಿ ಗುಣಗಳಿಗೂ ಪ್ರಿಯಮೋದಾದಿಗಳಿಗೂ ವಿಶೇಷವೇನೆಂದಲ್ಲಿ, ಆನಂದಾದಿಗಳು ಬ್ರಹ್ಮಸ್ವರೂಪ ನಿರೂಪಕಗಳಾದ್ದರಿಂದ ಬ್ರಹ್ಮಸ್ವರೂಪಕ್ಕೆ ಸದೃಶ ಗಳಾಗಿರುವುವು. ಪ್ರಿಯಮೋದಾದಿಗಳು ಸ್ವರೂಪ ನಿರೂಪಕಗಳಲ್ಲವಾದ್ದರಿಂದ, ಸ್ವರೂಪ ತುಲ್ಯಗಳಲ್ಲ. ಆದ್ದರಿಂದ ಆನಂದಾದಿಗಳಂತೆ ಪ್ರಿಯಮೋದಾದಿಗಳು ಸಕಲ ವಿದ್ಯೆಗಳಲ್ಲಿಯೂ ಅನುವರ್ತಿಸತಕ್ಕವುಗಳಲ್ಲ.

### ಸೂತ್ರ ೪—**ಆಧ್ಯಾನಾಯ ಪ್ರಯೋಜನಾಭಾವಾತ್**

**ಸೂತ್ರಾರ್ಥ**

[ಪ್ರಯೋಜನಾಭಾವಾತ್] = ಬೇರೆ ಪ್ರಯೋಜನವಿಲ್ಲವಾದ್ದರಿಂದ [ಆಧ್ಯಾನಾಯ] = ಧ್ಯಾನಿಸುವುದಕ್ಕಾಗಿ, (ಪ್ರಿಯಮೋದಾದಿಗಳು ಹೇಳಲ್ಪಟ್ಟಿವೆ).

**ವಿವರಣೆ**

ಪ್ರಿಯಮೋದಾದಿಗಳು ಬ್ರಹ್ಮ ಸ್ವರೂಪ ನಿರೂಪಕಗಳಲ್ಲದಿದ್ದಲ್ಲಿ, ಅವುಗಳನ್ನು ಬ್ರಹ್ಮಸ್ವರೂಪಕ್ಕೆ ಶಿರಸ್ಸಾಗಿಯೂ ಪಕ್ಷಗಳಾಗಿಯೂ ನಿರೂಪಿಸಿ ಹೇಳಿರುವುದೇಕೆ?—ಎಂದಲ್ಲಿ, ಅಖಂಡವಾದ ಒಂದು ರೂಪವು ಬುದ್ಧಿಯಲ್ಲಿ ಮೊದಲು ತೋರುವುದು ಕಷ್ಟವಾದ್ದರಿಂದ, ಆನಂದ ಗುಣದ ಅವಾಂತರ ಭೇದವಾದ ಪ್ರಿಯಮೋದಾದಿಗಳನ್ನು ಬ್ರಹ್ಮಸ್ವರೂಪಕ್ಕೆ ಶಿರಸ್ಸು ಮುಂತಾದ ಅವಯವಗಳಾಗಿ ವಿಭಾಗಿಸಿ ಧ್ಯಾನಿಸಿ, ಆ ಪರಮಾತ್ಮನ ಸ್ವರೂಪವನ್ನು ತನ್ನ ಬುದ್ಧಿಯಲ್ಲಿ ಕ್ರಮಕ್ರಮವಾಗಿ ಏರಿಸಿಕೊಂಡು ಧ್ಯಾನಿಸುವುದಕ್ಕಾಗಿ ಪ್ರಿಯಮೋದಾದಿಗಳನ್ನು ಹೇಳಿದೆ. ಇದನ್ನು ಬಿಟ್ಟು ಬೇರೊಂದು ಪ್ರಯೋಜನವಿಲ್ಲ.

ಸೂತ್ರ ೫—**ಆತ್ಮಶಬ್ದಾಚ್ಚ**

**ಸೂತ್ರಾರ್ಥ**

[ಆತ್ಮ ಶಬ್ದಾತ್, ಚ]=ಆತ್ಮಾ ಎಂಬ ಶಬ್ದದಿಂದ ಬ್ರಹ್ಮ ಸ್ವರೂಪವನ್ನು ಹೇಳುವುದರಿಂದಲೂ, [ಪ್ರಿಯಮೋದಾದಿಗಳು ಆತ್ಮಧರ್ಮಗಳಲ್ಲ]

**ವಿವರಣೆ**

''ಅನ್ಯೋಽನ್ತರಾತ್ಮಾನನ್ದಮಯಃ''—ಎಂದು ಅನಂದಮಯನಾದ ಪರಮಾತ್ಮನನ್ನು ಆತ್ಮವಾಗಿ ಹೇಳುವುದರಿಂದ, ಶರೀರ ಧರ್ಮವಾದ ಶಿರಸ್ಸು ಪಕ್ಷ ಮುಂತಾದ ಧರ್ಮಗಳು ಆತ್ಮಾವಿಗೆ ಸಂಭವಿಸದು

ಸೂತ್ರ ೬—**ಆತ್ಮಗೃಹೀತಿರಿತರವದುತ್ತರಾತ್**

**ಸೂತ್ರಾರ್ಥ**

[ಉತ್ತರಾತ್] =''ಸೋಽಕಾಮಯತ''—ಎಂಬ ಮೇಲಿನ ವಾಕ್ಯದಿಂದ [ಇತರವತ್]=ಮಿಕ್ಕ ಕಡೆಗಳಲ್ಲಿ ಪರಮಾತ್ಮನನ್ನು ಆತ್ಮ ಪದದಿಂದ ಹೇಳುವಂತೆ [ಆತ್ಮಗೃಹೀತಿಃ]=(ಇಲ್ಲಿಯೂ) ಆತ್ಮ ಶಬ್ದದಿಂದ ಪರಮಾತ್ಮನನ್ನು ಗ್ರಹಣ ಮಾಡುವುದು. (ಪರಮಾತ್ಮ ಹೇಳಲ್ಪಡುತ್ತಾನೆ)

**ವಿವರಣೆ**

ಆತ್ಮ—ಎಂದರೆ ಪರಮಾತ್ಮನನ್ನೇ ಹೇಳಲು ನಿಯಾಮಕವೇನು?—ಎಂದಲ್ಲಿ, "ಆತ್ಮಾವಾ ಇದಮೇಕ ಏವಾಗ್ರ ಆಸೀತ್",—ಇತ್ಯಾದಿ ಕಡೆಗಳಲ್ಲಿ 'ಆತ್ಮಾ'—ಎಂದು ಪರಮಾತ್ಮನನ್ನೇ ಹೇಳುವುದರಿಂದಲೂ, ಈ ಪ್ರಕರಣದಲ್ಲಿ ಮುಂದಿನ ವಾಕ್ಯದಲ್ಲಿಯೂ, ''ಸೋಽಕಾಮಯತ'',—(ಅವನು ಸಂಕಲ್ಪಿಸಿದನು,) ಎಂದು ಮೇಲೆ ಹೇಳಿದ ಆನಂದಮಯನಿಗೆ ಚೇತನ ಧರ್ಮವಾದ ಸಂಕಲ್ಪವನ್ನು ಹೇಳುವುದರಿಂದಲೂ, ''ಆತ್ಮಾನನ್ದಮಯಃ'',—ಎಂಬ ಇಲ್ಲಿಯೂ, 'ಆತ್ಮಾ'—ಎಂದು ಪರಮಾತ್ಮನನ್ನೇ ಹೇಳಬೇಕು

ಸೂತ್ರ ೭—**ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್**

**ಸೂತ್ರಾರ್ಥ**

[ಅನ್ವಯಾತ್]=ಅಚೇತನದಲ್ಲಿಯೂ ಆತ್ಮಶಬ್ದಾನ್ವಯ ಕಾಣುವುದರಿಂದ, (ಇಲ್ಲಿ ಆತ್ಮ ಶಬ್ದಕ್ಕೆ ಪರಮಾತ್ಮಾ ಎಂದು ನಿಶ್ಚಯಿಸುವುದು ಹೇಗೆ?) [ಇತಿ ಚೇತ್]= ಎಂದಲ್ಲಿ, [ಅವಧಾರಣಾತ್]=(ಆ ಪ್ರಕರಣಗಳಲ್ಲಿ ಹೇಳಲ್ಪಟ್ಟ ಆತ್ಮ ಶಬ್ದಕ್ಕೂ ಪರಮಾತ್ಮನೇ ಅರ್ಥವೆಂದು) ನಿರ್ಣಯಿಸಿರುವುದರಿಂದ, [ಸ್ಯಾತ್ ಏವ]=, ಇದೂ ಪರಮಾತ್ಮಪರವೆಂದು ನಿರ್ಣಯು ಆಗಿಯೇ ಆಗುವುದು

**ವಿವರಣೆ**

ಆನಂದಮಯ ವಾಕ್ಯಕ್ಕೆ ಹಿಂದೆ ''ಆತ್ಮಾ ಪ್ರಾಣಮಯಃ''—ಎಂದು ಅಚೇತನವಾದ ಪ್ರಾಣಮಯಾದಿಗಳನ್ನೂ 'ಆತ್ಮಾ'—ಎಂದು ಹೇಳುವುದರಿಂದ, ಮುಂದಿನ

ವಾಕ್ಯವನ್ನು ತೆಗೆದುಕೊಂಡು ಇಲ್ಲಿಯ ಆತ್ಮ ಶಬ್ದ ಪರಮಾತ್ಮ ಪರವೆಂದು ನಿಶ್ಚಯಿಸುವ ವಿಧ ಹೇಗೆ?—ಎಂದಲ್ಲಿ, "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ",— ಎಂದು ಆರಂಭದಲ್ಲಿ ಸಕಲ ಜಗತ್ಕಾರಣ ಭೂತನಾದ ಪರಮಪುರುಷನನ್ನು ಆತ್ಮ ಶಬ್ದದಿಂದ ಹೇಳಿ, ಅವನನ್ನೇ ಪ್ರಾಣಮಯ ಮನೋಮಯಾದಿಗಳಲ್ಲಿ ಆತ್ಮಾ ಎಂದು ಚಿದಚಿದಾತ್ಮಕ ಸಕಲ ಜಗತ್ತಿಗೂ ಅಂತರ್ಯಾಮಿಯೆಂದು ಆತ್ಮ ಶಬ್ದದಿಂದ ಹೇಳು ವುದರಿಂದ, ಹಿಂದಿನ ವಾಕ್ಯಗಳಲ್ಲಿಯೂ ಆತ್ಮ ಶಬ್ದಕ್ಕೆ ಪರಮಾತ್ಮನೇ ಅರ್ಥವಾದ್ದ ರಿಂದ, ಇಲ್ಲಿರುವ ಆತ್ಮ ಪದಕ್ಕೂ ಪರಮಾತ್ಮನೇ ಅರ್ಥವೆಂದು ನಿಶ್ಚಯಿಸಬಹುದು. ಆದ್ದರಿಂದ, ಶಿರಃ ಪಕ್ಷಾದಿಗಳಾಗಿ ನಿರೂಪಿಸಲ್ಪಟ್ಟ ಪ್ರಿಯಮೋದಾದಿಗಳು ಪರಮಾತ್ಮ ಧರ್ಮಗಳಾಗದುದರಿಂದ ಇವುಗಳನ್ನು ಸಕಲ ವಿದ್ಯೆಗಳಲ್ಲಿಯೂ ಅನುಸಂಧಾನ ಮಾಡಕೂಡದು.

## 5. ಕಾರ್ಯಾಖ್ಯಾನಾಧಿಕರಣ

## ಸೂತ್ರ—ಕಾರ್ಯಾಖ್ಯಾನಾದಪೂರ್ವಂ

### ಸಂಗತಿ

ಏಕಾಂತರಿತ ಪೂರ್ವಾಧಿಕರಣದೊಡನೆ ಇದಕ್ಕೆ ಸಂಗತಿ. ಪೂರ್ವ ಪ್ರಸ್ತುತ ಪ್ರಾಣವಿದ್ಯಾಶೇಷಭೂತವಾಗಿ ಈ ಅಧಿಕರಣ ಬಂದಿದೆ.

### ಸೂತ್ರಾರ್ಥ

[ಕಾರ್ಯಾಖ್ಯಾನಾತ್] = (ವೇದಕ್ಕೆ) ಅಪೂರ್ವಾರ್ಥವನ್ನು ಹೇಳುವುದೇ ಸ್ವಭಾವ ವಾದ್ದರಿಂದ, [ಅಪೂರ್ವಂ] = (ಇದಕ್ಕೆ ಮುಂಚೆ) ಅಸಿದ್ಧವಾದ ಪ್ರಾಣ ವಾಸಸ್ತ್ವಾನು ಸಂಧಾನ (ವಿಧಿಸಲ್ಪಟ್ಟಿದೆ).

### ವಿವರಣೆ

ಛಾನ್ದೋಗ್ಯದಲ್ಲಿ,"ಕಿಂ ಮೇ ವಾಸೋ ಭವಿಷ್ಯತೀತ್ಯಾಪ ಇತಿ ಹೋಚುಃ",— ಎಂದು, ನೀರು ಪ್ರಾಣನಿಗೆ ವಸ್ತ್ರವೆಂದು ಹೇಳಿದೆ. "ತಸ್ಮಾದೇವಂವಿದ ಶಿಷ್ಯನ್ನಾಚಾ ಮೇದಶಿತ್ವಾಚಾಮೇತ್"—ಎಂದು ಉಪಾಸ್ಯವಾಗಿ ಹೇಳಿದ ಆ ಪ್ರಾಣನಿಗೆ ವಸ್ತ್ರ ಸಿದ್ಧಿಸುವುದಕ್ಕಾಗಿ ಭೋಜನಕ್ಕೆ ಮುಂಚೆಯೂ ಅನಂತರವೂ ಆಚಮನ ಮಾಡಬೇಕೆಂದು ಹೇಳಿದೆ. ಇಲ್ಲಿ ಪ್ರಾಣವಿದ್ಯೆಗೆ ಅಂಗವಾಗಿ ಬೇರೆಯೊಂದು ಆಚಮನ ವಿಧಿಸಲ್ಪಟ್ಟಿ ದೆಯೆ? ಅಥವಾ, ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟ ಆಚಮನದ ಜಲವನ್ನು ಪ್ರಾಣನಿಗೆ ವಸ್ತ್ರವಾಗಿ ಧ್ಯಾನ ಮಾಡಹೇಳಿದೆಯೇ?—ಎಂದು ಸಂಶಯ. "ಆಚಾಮೇತ್"— ಎಂದು ಆಚಮನವನ್ನೇ ವಿಧಿಸುವುದರಿಂದ ಪ್ರಾಣವಿದ್ಯೆಗೆ ಅಂಗವಾಗಿ ಬೇರೊಂದು ಆಚಮನ ಮಾಡಬೇಕೆಂದು ಹೇಳಿದೆ—ಎಂದು ಪೂರ್ವಪಕ್ಷ.

ಈ ವಾಕ್ಯಗಳಲ್ಲಿ ಆಚಮನವೂ ಆಚಮನ ಮಾಡಿದ ಜಲವನ್ನು ಜ್ಯೇಷ್ಠ ಪ್ರಾಣನಿಗೆ ವಸ್ತ್ರವಾಗಿ ಅನುಸಂಧಿಸುವುದೂ, ಹೀಗೆ ಎರಡೂ ತೋರುತ್ತವೆ. ಇವೆರಡರಲ್ಲಿ ಆಚಮನವನ್ನು ಶ್ರುತಿ ಸ್ಮೃತಿಗಳಲ್ಲಿ ಹೇಳಿದೆ. ಅದರ ನೀರನ್ನು ವಸ್ತ್ರವನ್ನಾಗಿ—ಅನು

ಸಂಧಿಸುವುದು ಬೇರೆಲ್ಲಿಯೂ ಹೇಳಲ್ಪಟ್ಟಿಲ್ಲ. ವೇದವಾಕ್ಯ ಮುಂಚೆಯೊಂದು ಕಡೆ ವಿಧಿಸಿದುದನ್ನು ಮತ್ತೊಂಡೆದೆಯಲ್ಲಿ ಮತ್ತೆ ವಿಧಿಸದು. ಶ್ರುತಿಸ್ಮೃತಿಗಳಲ್ಲಿ ವಿಧಿಸಲ್ಪಟ್ಟಿರುವುದರಿಂದ, ಆಚಮನವನ್ನು ಮತ್ತೆ ಇಲ್ಲಿ ವಿಧಿಸಲಾರದು. ಆದ್ದರಿಂದ ಆಚಮನ ಮಾಡಿದ ನೀರನ್ನು ಉಪಾಸನ ಮಾಡಲ್ಪಟ್ಟ ಜ್ಯೇಷ್ಠ ಪ್ರಾಣನಿಗೆ ವಸ್ತ್ರವನ್ನಾಗಿ ಅನುಸಂಧಾನ ಮಾಡಬೇಕೆಂದೇ ಇಲ್ಲಿ ವಿಧಿಸಿದೆ—ಯೆಂದು ಸಿದ್ಧಾನ್ತ.

## 6. ಸಮಾನಾಧಿಕರಣಂ

### ಸೂತ್ರ—ಸಮಾನ ಏವಂ ಚಾ ಭೇದಾತ್

**ಸಂಗತಿ**

ಪೂರ್ವಾಧಿಕರಣ ಪ್ರಾಣವಿದ್ಯೆಗೆ ಶೇಷಭೂತವಾಗಿ ಪ್ರಸಕ್ತವಾಯಿತು. ಅದರ ಹಿಂದಿನ ಅಧಿಕರಣದಲ್ಲಿ ಸ್ವರೂಪ ಪ್ರತೀತಿಯಲ್ಲಿ ಅಂತರ್ಭೂತವಾದ ಗುಣಗಳ ಉಪಸಂಹಾರ್ಯತ್ವ ಹೇಳಲ್ಪಟ್ಟಿತು. ಹೀಗೆಯೇ ಸತ್ಯಸಂಕಲ್ಪತ್ವದಲ್ಲಿ ಅಂತರ್ಭೂತವಾದ ವಶಿತ್ವಾದಿ ಗುಣಗಳ ಉಪಸಂಹಾರ್ಯತ್ವ ಇಲ್ಲಿ ಹೇಳಲ್ಪಡುತ್ತೆ—ಎಂಬುದು ಸಂಗತಿ.

**ಸೂತ್ರಾರ್ಥ**

[ಸಮಾನೇ] = (ಮನೋಮಯತ್ವಾದಿ ಗುಣಗಳು ಎರಡು ಕಡೆಗಳಲ್ಲಿಯೂ) ತುಲ್ಯವಾಗಿರುವುದರಿಂದ, (ಎರಡು ಕಡೆಗಳಲ್ಲಿಯೂ ಹೇಳಿದ ಶಾಂಡಿಲ್ಯ ವಿದ್ಯೆಯೊಂದೇ) [ಏವಂ,ಚ ] = ಹೀಗಿರುವಲ್ಲಿ, [ಅಭೇದಾತ್] = ಸತ್ಯಸಂಕಲ್ಪತ್ವಾದಿಗಳಿಗೂ ಭೇದವಿಲ್ಲದ್ದರಿಂದ (ವಿದ್ಯೈಕ್ಯ ಸಿದ್ಧಿಸುತ್ತೆ.)

**ವಿವರಣೆ**

ವಾಜಸನೇಯದಲ್ಲಿಯೂ, ಬೃಹದಾರಣ್ಯಕದಲ್ಲಿಯೂ ಶಾಂಡಿಲ್ಯ ವಿದ್ಯೆ ಹೇಳಲ್ಪಟ್ಟಿದೆ. ವಾಜಸನೇಯದಲ್ಲಿ, "ಸ ಆತ್ಮಾನ ಮುಪಾಸೀತ ಮನೋಮಯಂ ಪ್ರಾಣ ಶರೀರಂ ಭಾರೂಪಂ ಸತ್ಯಕಾಮಮಾಕಾಶಾತ್ಮಾನಂ"—ಎಂದು ಮನೋಮಯುತ್ವಾದಿ ಗುಣಗಳೊಡನೆ ಕೂಡಿದವನನ್ನಾಗಿ ಸತ್ಯಕಾಮನಾದ ಪರಮಾತ್ಮನನ್ನು ಉಪಾಸಿಸಬೇಕೆಂದು ಹೇಳಿದೆ. ಬೃಹದಾರಣ್ಯಕದಲ್ಲಿ "ಮನೋಮಯೋಽಯಂ ಪುರುಷಃ",—ಎಂದು ಆರಂಭಿಸಿ, "ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿ ಸ್ಸರ್ವಮಿದಂ ಪ್ರಶಾಸ್ತಿ",—ಎಂದು ಮನೋಮಯುತ್ವಾದಿ ಗುಣಯುಕ್ತನಾಗಿ ವಶಿತ್ವಾದಿ ಗುಣಗಳನ್ನುಳ್ಳವನನ್ನಾಗಿ ಪರಮಾತ್ಮನನ್ನು ಉಪಾಸಿಸುವಂತೆ ಹೇಳಿದೆ. ಇವೆರಡು ಕಡೆಗಳಲ್ಲಿಯೂ ಹೇಳಲ್ಪಟ್ಟ ಶಾಂಡಿಲ್ಯ ವಿದ್ಯೆ ಒಂದೋ? ಅಥವಾ ಬೇರೆ ಬೇರೆಯೋ?—ಎಂದು ಸಂಶಯ.

ಛಾನ್ದೋಗ್ಯದಲ್ಲಿ ವಶಿತ್ವಾದಿ ಗುಣಗಳನ್ನು ಹೇಳದೆ ಸತ್ಯಕಾಮತ್ವಾದಿ ಗುಣಗಳನ್ನೂ, ಬೃಹದಾರಣ್ಯಕದಲ್ಲಿ ಸರ್ವಜ್ಞತ್ವಾದಿಗಳನ್ನು ಹೇಳದೆ ವಶಿತ್ವಾದಿಗಳನ್ನು ಉಪಾಸ್ಯವನ್ನಾಗಿ ಹೇಳುವುದರಿಂದ, ಎರಡು ಕಡೆಗಳಲ್ಲಿಯೂ, ಉಪಾಸನಕ್ಕೆ ವಿಷಯ ಒಂದಲ್ಲ. ಆದ್ದರಿಂದ ಎರಡೂ ಭಿನ್ನಗಳೆಂದು ಪೂರ್ವಪಕ್ಷ.

ಮನೋಮಯತ್ವಾದಿ ಗುಣಗಳು ಎರಡು ಕಡೆಗಳಲ್ಲಿಯೂ ಹೇಳಲ್ಪಟ್ಟಿವೆ. ಒಂದೆಡೆಯಲ್ಲಿ ಸತ್ಯಕಾಮತ್ವವೂ ಮತ್ತೊಂದೆಡೆಯಲ್ಲಿ ವಶಿತ್ವವೂ ಹೇಳಲ್ಪಟ್ಟಿದ್ದಾಗ್ಯೂ, ವಶಿತ್ವವೆಂಬುದು ಸತ್ಯಕಾಮತ್ವದೊಳಗೆ ಸೇರಿದ್ದುದರಿಂದ ಅವೆರಡು ಗುಣಗಳಿಗೂ ಭೇದವಿಲ್ಲ. ಸತ್ಯಕಾಮತ್ವವೆಂಬುದು—ತಾನು ನೆನೆದುದರಲ್ಲಿ ಸ್ವಲ್ಪವೂ ಸೋರದೆ ತಲೆಗೆ ಕಟ್ಟುವುದು, ವಶಿತ್ವವೆಂಬುದು ಸಕಲ ಚಿದಚಿತ್ತುಗಳನ್ನೂ ತನಗೆ ವಶಮಾಡಿಕೊಳ್ಳುವುದು. ಈ ವಶಿತ್ವವೂ ಸತ್ಯಕಾಮತ್ವದಲ್ಲಿ ಅಡಗಿದುದಾದ್ದರಿಂದ ಬೃಹದಾರಣ್ಯದಲ್ಲಿ ವಶಿತ್ವವನ್ನು ಹೇಳಿದಾಗಲೇ ಸತ್ಯ ಸಂಕಲ್ಪತ್ವವನ್ನೂ ಹೇಳಿದಂತಾಯಿತು. ಆದ್ದರಿಂದ ಎರಡು ಕಡೆಗಳಲ್ಲಿಯೂ ವಿಷಯ ಒಂದೇ ಆಗಿ ವಿದ್ಯೆಯೂ ಒಂದೇ ಆಗಿದೆಯೆಂದು ಸಿದ್ಧಾಂತ.

## 7. ಸಂಬನ್ಧಾಧಿಕರಣ

### ಸೂತ್ರ—ಸಂಬನ್ಧಾದೇವಮನ್ಯತ್ರಾಪಿ

[೧. ಆದಿತ್ಯಸ್ಥಾಹಂನಾಮಕ ಬ್ರಹ್ಮವಿದ್ಯಾ  ೨. ಅಕ್ಷಿಸ್ಥಾಹನಾಮಕಬ್ರಹ್ಮವಿದ್ಯಾಚ]

**ಸಂಗತಿ**

ಮನೋಮಯತ್ವಾದಿ ಗುಣಕನಿಗೇ ಉಪಾಸ್ಯತ್ವದಿಂದ ಹೇಗೆ ವಿದ್ಯೈಕ್ಯವೋ ಹಾಗೆಯೇ ಅಕ್ಷ್ಯಾದಿತ್ಯ ಸಂಬಂಧಿಯಾಗಿ ವ್ಯಾಹೃತಿ ಶರೀರಕನಿಗೆ ಉಪಾಸ್ಯತ್ವವಿರುವುದರಿಂದ ವಿದ್ಯೈಕ್ಯವೆಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಏವಂ] = ಹೀಗೆಯೇ [ಅನ್ಯತ್ರ, ಅಪಿ] = ಬೇರೆಡೆಯಲ್ಲಿಯೂ, [ಸಂಬನ್ಧಾತ್] = ಸ್ಥಾನ ಸಂಬಂಧದಿಂದ (ವಿದ್ಯಾಭೇದವಿಲ್ಲ)

**ವಿವರಣೆ**

ಬೃಹದಾರಣ್ಯದಲ್ಲಿ, "ಯ ಏಷ ಏತಸ್ಮಿನ್ಮಣ್ಡಲೇ ಪುರುಷೋ ಯಶ್ಚಾಯಂ ದಕ್ಷಿಣೇऽಕ್ಷಿನ್"—ಎಂದು ಆರಂಭಿಸಿ ಬಲದ ಕಣ್ಣಿನಲ್ಲಿಯೂ ಸೂರ್ಯಮಂಡಲದಲ್ಲಿಯೂ, ಪರಮಪುರುಷನನ್ನು ಗಾಯತ್ರೀ ಶರೀರಕನನ್ನಾಗಿ ಉಪಾಸಿಸಬೇಕೆಂದು ಹೇಳಿ, ಅನಂತರ ಹೀಗೆ ಎರಡೆಡೆಗಳಲ್ಲಿಯೂ ಉಪಾಸಿಸಬೇಕೆಂದು ಹೇಳಿದ ಪರಮಪುರುಷನಿಗೆ "ಅಹಂ"—ಎಂದೂ "ಅಹಃ"—ಎಂದೂ ಎರಡು ಹೆಸರುಗಳನ್ನು ಹೇಳಿದೆ. ಈ ಎರಡು ಹೆಸರುಗಳೂ ಸೂರ್ಯಮಂಡಲದಲ್ಲಿ ಉಪಾಸ್ಯನಾದ ಪರಮಾತ್ಮನಿಗೂ ಬಲದ ಕಣ್ಣಿನಲ್ಲಿ ಉಪಾಸ್ಯನಾದ ಪರಮಾತ್ಮನಿಗೂ—ಹೀಗೆ ಇಬ್ಬರಿಗೂ ಇರುವುದೇ? ಅಥವಾ ಒಬ್ಬನಿಗೆ ಒಂದು ನಾಮವೂ, ಮತ್ತೊಬ್ಬನಿಗೆ ಮತ್ತೊಂದು ನಾಮವೂ—ಎಂದು ವ್ಯವಸ್ಥೆಯುಂಟೆ?—ಎಂದು ಸಂಶಯ.

ಹಿಂದಿನ ಅಧಿಕರಣದಲ್ಲಿ ಮನೋಮಯತ್ವಾದಿ ಗುಣವಿಶಿಷ್ಟ ಪರಮಾತ್ಮನೊಬ್ಬನನ್ನೇ ಎರಡೆಡೆಗಳಲ್ಲಿಯೂ ಉಪಾಸ್ಯನನ್ನಾಗಿ ಹೇಳಿರುವುದರಿಂದ, ಎರಡೆಡೆಗಳಲ್ಲಿ ಹೇಳಿದ ವಿದ್ಯೆಗಳಿಗೆ ಅಭೇದವನ್ನು ಹೇಳಿದಂತೆ, ಇಲ್ಲಿಯೂ ಸೂರ್ಯಮಂಡಲದಲ್ಲಿಯೂ

ಕಣ್ಣಿನಲ್ಲಿಯೂ ಪರಮಾತ್ಮನೊಬ್ಬನನ್ನೇ ಉಪಾಸಿಸಲು ಹೇಳಿರುವುದರಿಂದ, ಎರಡೆಡೆಗಳಲ್ಲಿಯೂ ಹೇಳಿದ ವಿದ್ಯೆಗಳೂ ಒಂದೇ—ಎರಡು ನಾಮಗಳನ್ನೂ ಎರಡೆಡೆಗಳಲ್ಲಿಯೂ ಅನುಸಂಧಿಸಬಹುದು—ಎಂದು ಪೂರ್ವಪಕ್ಷ.

ಸೂತ್ರ ೨—**ನ ವಾ ವಿಶೇಷಾತ್**

**ಸೂತ್ರಾರ್ಥ**

[ವಿಶೇಷಾತ್] = ಉಪಾಸ್ಯವೆಂದು ಹೇಳಿದ ಪರಮಪುರುಷನಿಗೆ ಎರಡು ಕಡೆಗಳಲ್ಲಿಯೂ ವಿಶೇಷವುಂಟಾದ್ದರಿಂದ [ನ, ವಾ] = ಎರಡು ವಿದ್ಯೆಗಳು ಒಂದಾಗಲಾರವು.

**ವಿವರಣೆ**

ಮೇಲಿನ ಪೂರ್ವಪಕ್ಷವನ್ನು ನಿರಸನ ಮಾಡುತ್ತಾರೆ;—ಹಿಂದಿನ ಅಧಿಕರಣದಲ್ಲಿ ಉಪಾಸ್ಯನಾದ ಪರಮಾತ್ಮನೂ ಅವನಲ್ಲಿ ವಿಶೇಷಣಗಳಾದ ಗುಣಾದಿಗಳೂ ಎರಡೆಡೆಗಳಲ್ಲಿಯೂ ಏಕರೂಪವಾದ್ದರಿಂದ ಅಭೇದವನ್ನು ಹೇಳಿದೆ. ಇಲ್ಲಿ ಉಪಾಸ್ಯನಾದ ಪರಮಾತ್ಮನಿಗೆ ಒಂದು ಕಡೆ ಸೂರ್ಯಮಂಡಲ ವರ್ತಿತ್ವವೂ ಮತ್ತೊಂದು ಕಡೆ ನೇತ್ರ ವರ್ತಿತ್ವವೂ ವಿಶೇಷಣಗಳಾಗಿ ಹೇಳಲ್ಪಟ್ಟಿರುವುದರಿಂದ ಆ ವಿಶೇಷಣ ಭೇದದಿಂದ ವಿದ್ಯೆಗಳೂ ಭಿನ್ನಗಳು. ಆದ್ದರಿಂದ ಎರಡು ನಾಮಗಳೂ ಒಂದೊಂದೆಡೆಯಲ್ಲಿ ವ್ಯವಸ್ಥಿತಗಳು. ಸೂರ್ಯಮಂಡಲವರ್ತಿಯಾದ ಪರಮಾತ್ಮನಿಗೆ, 'ಅಹಂ—ಎಂದೂ ನೇತ್ರ ವರ್ತಿಯಾದ ಪರಮಾತ್ಮನಿಗೆ 'ಅಹಃ'—ಎಂದೂ ಹೆಸರು—ಎಂದು ಸಿದ್ಧಾಂತ.

ಸೂತ್ರ ೩—**ದರ್ಶಯತಿ ಚ**

**ಸೂತ್ರಾರ್ಥ**

ಎರಡು ವಿದ್ಯೆಗಳಿಗೂ ಶ್ರುತಿಯು ಭೇದವನ್ನು ತೋರಿಸುತ್ತದೆ.

**ವಿವರಣೆ**

"ತಸ್ಯೈತಸ್ಯ ತದೇವ ರೂಪಂ ಯದಮುಷ್ಯ ರೂಪಂ."—ಎಂದು ಸೂರ್ಯಮಂಡಲ ವರ್ತಿಯಾದ ಪರಮಾತ್ಮನ ರೂಪವೇ ನೇತ್ರವರ್ತಿಯಾದ ಪರಮಾತ್ಮನಿಗೂ ರೂಪವೆಂದು ಒಂದು ಕಡೆ ಉಪಾಸ್ಯವಾಗಿ ಹೇಳಿದ ಪರಮಾತ್ಮನ ರೂಪವನ್ನೇ ಮತ್ತೊಂದು ಕಡೆ ಉಪಾಸ್ಯವಾಗಿ ಹೇಳಿರುವುದರಿಂದ, ಎರಡೂ ಬೇರೆ ಬೇರೆಯೆಂಬುದು ಸಿದ್ಧ. ಒಂದಾಗಿದ್ದಲ್ಲಿ, ಆ ರೂಪ ಸಿದ್ಧವಾದ್ದರಿಂದ, ಆರೋಪಿಸಿ ಹೇಳಕೂಡದು. ಆದ್ದರಿಂದ ನಾಮವೂ ಎರಡು ಕಡೆಗಳಿಗೂ ಬೇರೆ ಬೇರೆಯಾಗಿದೆ.

## 8. ಸಂಭೃತ್ಯಧಿಕರಣ

ಸೂತ್ರ—**ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ**

**ಸಂಗತಿ**

ಪೂರ್ವಾಧಿಕರಣದಲ್ಲಿ ನಾಮಗಳಿಗೆ ಸೂರ್ಯಮಂಡಲ ಮತ್ತು ಬಲದ ಕಣ್ಣುಗಳು ಎಂಬ ಸ್ಥಾನಭೇದದಿಂದ ವ್ಯವಸ್ಥೆ ಮಾಡಲಾಯಿತು. ಹಾಗೆಯೇ ಅನಾರಭ್ಯಾಧೀತ ಸಂಭೃತ್ಯಾದಿ ಗುಣಗಳಿಗೂ ಸ್ಥಾನ ಭೇದದಿಂದ ವ್ಯವಸ್ಥೆ—ಯೆಂದು ಸಂಗತಿ.

**ಸೂತ್ರಾರ್ಥ**

[ಅತಃ] = ಸ್ಥಾನ ವಿಶೇಷ ಸಂಬಂಧ ವ್ಯವಸ್ಥಿತವಾದ್ದರಿಂದ [ಸಂಭೃತಿದ್ಯುವ್ಯಾಪ್ತಿ ಅಪಿ] = ಜ್ಯೈಷ್ಠ್ಯವೀರ್ಯಾದಿ ಗುಣ ಸಂಭೃತಿಯೂ, ಆಕಾಶ ವ್ಯಾಪ್ತಿಯೂ (ಎಲ್ಲಾ ವಿದ್ಯೆಗಳಲ್ಲಿಯೂ, ಅನುಸಂಧೇಯುಗಳಲ್ಲ.)

**ವಿವರಣೆ**

"ಬ್ರಹ್ಮಜ್ಯೇಷ್ಠಾ ವೀರ್ಯಾಸಂಭೃತಾನಿ ಬ್ರಹ್ಮಾಗ್ರೇ ಜ್ಯೇಷ್ಠಂ ದಿವಮಾತತಾನ" —ಇತ್ಯಾದಿಯಿಂದ, ಪರಮಪುರುಷನಲ್ಲಿ ಉತ್ಕೃಷ್ಟಗಳಾದ ಕಲ್ಯಾಣಗುಣಗಳು ಸಂಪೂರ್ಣ ಗಳು. ಆ ಪರಮಾತ್ಮ ಮುಂಚೆ ಸ್ವರ್ಗಾದಿ ಲೋಕಗಳನ್ನು ಆಕ್ರಮಿಸಿದನೆಂದು ಹೇಳಿದೆ. ಇಲ್ಲಿ ಹೇಳಿದ ಕಲ್ಯಾಣ ಗುಣಗಳೂ ಆಕಾಶ ವ್ಯಾಪ್ತಿಯೂ ಉಪಾಸ್ಯನಾದ ಪರಮ ಪುರುಷನಲ್ಲಿ ಸಕಲ ವಿದ್ಯೆಗಳಲ್ಲಿಯೂ ಅನುಸಂಧಿಸತಕ್ಕವೆ? ಇಲ್ಲವೆ?—ಎಂದು ಸಂಶಯ. ಒಂದು ವಿದ್ಯೆಯನ್ನು ಆರಂಭಿಸಿ ಆ ಪ್ರಕರಣದಲ್ಲಿ ಹೇಳದೆ ಒಟ್ಟಿನಲ್ಲಿ ಹೇಳಿದೆ ಯಾದ್ದರಿಂದ, ಸಕಲ ವಿದ್ಯೆಗಳಲ್ಲಿಯೂ ಅನುಸಂಧೇಯುಗಳೆಂದು ಪೂರ್ವಪಕ್ಷ.

ವಿಪುಲವಾದ ಆಕಾಶದಲ್ಲಿ ವ್ಯಾಪ್ತಿಯುಳ್ಳ ಪರಮಪುರುಷನನ್ನು ಅಲ್ಪಸ್ಥಾನವಾದ ಹೃದಯದಲ್ಲಿ ಅನುಸಂಧಾನ ಮಾಡಕೂಡದಾದ್ದರಿಂದ, ಈ ವಿಧವಾದ ರೂಪ ವೈಶ್ವಾನ ರಾದಿ ವಿದ್ಯೆಗಳಲ್ಲಿಯೇ ಅನುಸಂಧೇಯ. ಆ ಆಕಾಶವ್ಯಾಪ್ತಿಯೊಂದಿಗೆ ಹೇಳಲ್ಪಟ್ಟ ವಾದ್ದರಿಂದ ಆ ಮಿಕ್ಕ ಗುಣಗಳೂ ಆ ವಿದ್ಯೆಗಳಲ್ಲಿಯೇ ಅನುಸಂಧಾನ ಮಾಡಲ್ಪಡಬೇಕು. ಎಲ್ಲಾ ವಿದ್ಯೆಗಳಲ್ಲಿಯೂ ಅವನ್ನು ಅನುಸಂಧಾನ ಮಾಡಕೂಡದು—ಎಂದು ಸಿದ್ಧಾಂತ.

## ೯. ಪುರುಷವಿದ್ಯಾಧಿಕರಣ

### ಸೂತ್ರ— ಪುರುಷವಿದ್ಯಾಯಾಮಪಿ ಚೇತರೇಷಾಮನಾಮ್ನಾನಾತ್

[ಪುರುಷವಿದ್ಯಾ]

**ಸಂಗತಿ**

ದ್ಯುವ್ಯಾಪ್ತಿ ಸನ್ನಿಧಿಯಲ್ಲಿ ಶ್ರುತವಾದ ಸಂಭೃತ್ಯಾದಿಗೆ ತತ್ಸಮಾನ ಸ್ಥಾನಾ ನು ಪ್ರವೇಶದಿಂದ ಒಂದೇ ವಿದ್ಯೆಯಲ್ಲಿ ಅನ್ವಯ ಹೇಳಲ್ಪಟ್ಟಿತು. ಹೀಗೆ ಬ್ರಹ್ಮವಿದ್ಯಾ ಸನ್ನಿಧಿ ಸಮಾಮ್ನಾತವಾದ ಪುರುಷವಿದ್ಯೆ ಅದಕ್ಕೆ ಶೇಷಭೂತ—ವೆಂದು ಸಂಗತಿ.

**ಸೂತ್ರಾರ್ಥ ವಿವರಣೆ ಸಹ**

ತೈತ್ತಿರೀಯದಲ್ಲಿ, "ತಸ್ಯೈವಂ ವಿದುಷೋಯಜ್ಞಸ್ಯಾತ್ಮಾ..."—ಎಂದು ಆರಂಭವಾಗಿ ಪುರುಷವಿದ್ಯೆ ಹೇಳಲ್ಪಟ್ಟಿತು. ಛಾನ್ದೋಗ್ಯದಲ್ಲಿಯೂ, "ಪುರುಷೋ ವಾವ ಯಜ್ಞಃ —ಎಂದು ಆರಂಭವಾಗಿ ಪುರುಷವಿದ್ಯೆ ಹೇಳಲ್ಪಟ್ಟಿತು. ಇವೆರಡಕ್ಕೂ ಭೇದವುಂಟೆ? ಇಲ್ಲವೆ? ಎಂದು ಸಂಶಯ.

ಪುರುಷವಿದ್ಯೆಯೆಂಬ ಹೆಸರು ಎರಡಕ್ಕೂ ಹೊಂದಿದ್ದರೂ ತೈತ್ತಿರೀಯದಲ್ಲಿ ಹೇಳಿದ ಪುರುಷವಿದ್ಯೆಗೆ ಫಲವನ್ನು ಹೇಳದುದರಿಂದ ಇದಕ್ಕೆ ಫಲವೇನನ್ನು ಕಲ್ಪಿಸ ಬೇಕು?—ಎಂದರೆ, ಛಾನ್ದೋಗ್ಯದಲ್ಲಿ ಹೇಳಿದ ಪುರುಷವಿದ್ಯೆಯ ಫಲವನ್ನೇ ಇದಕ್ಕೂ ಫಲವನ್ನಾಗಿ ಕಲ್ಪಿಸಬೇಕಾದ್ದರಿಂದ, ಎರಡಕ್ಕೂ ಫಲ ಒಂದೇ ಆಗಬಹುದು. ಎರಡಕ್ಕೂ ಭೇದವಿಲ್ಲ—ಎಂದು ಪೂರ್ವಪಕ್ಷ. ಹೆಸರು ಎರಡಕ್ಕೂ ಒಂದೇ ಆದರೂ, ಮಿಕ್ಕ ವಿಷಯಗಳಲ್ಲಿ ಅನೇಕ ಭೇದವುಂಟು. ಅವು ಯಾವುವೆಂದರೆ;—ತೈತ್ತಿರೀಯದಲ್ಲಿ ಪುರುಷನಾದ ಯಜ್ಞಕ್ಕೆ ಆತ್ಮಾವನ್ನು ಯಜಮಾನನನ್ನಾಗಿಯೂ, ಶ್ರದ್ಧೆಯನ್ನು ಅವನಿಗೆ ಪತ್ನಿಯನ್ನಾಗಿಯೂ, ಶರೀರವನ್ನು ಸಮಿತ್ತನ್ನಾಗಿಯೂ, ಉದಯಕಾಲ, ಮಧ್ಯಾಹ್ನ, ಸಾಯಂಕಾಲಗಳೆಂಬ ಮೂರು ಕಾಲಗಳನ್ನೂ ಮೂರು ಸವನಗಳನ್ನಾಗಿಯೂ, ಹೇಳಿದೆ. ಇವನ್ನು ಛಾನ್ದೋಗ್ಯದಲ್ಲಿ ಹೇಳಿಲ್ಲ. ಛಾನ್ದೋಗ್ಯದಲ್ಲಿ ಅಶನೇಚ್ಛಾ ಮುಂತಾದುವನ್ನು ದೀಕ್ಷಾದಿಗಳನ್ನಾಗಿಯೂ, ಪುರುಷಾಯುಸ್ಸನ್ನು ಮೂರು ಭಾಗವಾಗಿ ವಿಂಗಡಿಸಿ ಅವನ್ನು ಮೂರು ಸವನಗಳನ್ನಾಗಿಯೂ ಹೇಳಿದೆ. ಇವನ್ನು ತೈತ್ತಿರೀಯದಲ್ಲಿ ಹೇಳಿಲ್ಲ. ಆದ್ದರಿಂದ ಇವೆರಡಕ್ಕೂ ಅಂಗಗಳು ಭಿನ್ನವಾಗಿವೆ. ಛಾನ್ದೋಗ್ಯದಲ್ಲಿಯ ಪುರುಷವಿದ್ಯೆಗೆ ಆಯುಃ ಪ್ರಾಪ್ತಿ ಫಲ. ತೈತ್ತಿರೀಯದಲ್ಲಿ ಹೇಳಿದ ಪುರುಷವಿದ್ಯೆಗೆ ಫಲಾಕಾಂಕ್ಷೆಯುಂಟಾದರೆ, ಈ ಪ್ರಕರಣಕ್ಕೆ ಮುಂಚಿನ ನ್ಯಾಸವಿದ್ಯಾ ಪ್ರಕರಣದಲ್ಲಿ ಆ ನ್ಯಾಸವಿದ್ಯೆಗೆ ಫಲವಾಗಿ ಹೇಳಿದ ಬ್ರಹ್ಮಪ್ರಾಪ್ತಿಯನ್ನೇ ಫಲವನ್ನಾಗಿ ಕಲ್ಪಿಸಬೇಕಾದ್ದರಿಂದ ಫಲವೂ ಭಿನ್ನ ವಾದ್ದರಿಂದ, ಎರಡು ಪುರುಷವಿದ್ಯೆಗಳಿಗೂ ಭೇದವುಂಟೆಂದು ಸಿದ್ಧಾನ್ತ.

## 10. ವೇಧಾದ್ಯಧಿಕರಣ

### ಸೂತ್ರ—**ವೇಧಾದರ್ಥಭೇದಾತ್**

**ಸಂಗತಿ**

ಬ್ರಹ್ಮವಿದ್ಯಾ ಸನ್ನಿಧಿಯಲ್ಲಿ ಶ್ರುತವಾದ ಪುರುಷವಿದ್ಯೆ ಆ ಬ್ರಹ್ಮವಿದ್ಯೆಗೆ ಅಂಗವೆನ್ನಲಾಯಿತು. ಹೀಗೆಯೇ ಸನ್ನಿಧಿಯಲ್ಲಿ ಸಮಾಮ್ನಾತವಾದ "ಶಂನೋಮಿತ್ರ" —ಆದಿ ಮಂತ್ರಗಳೂ ಬ್ರಹ್ಮವಿದ್ಯೆಗೆ ಅಂಗವಾಗಲಿ—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ವೇಧಾದ್ಯರ್ಥಭೇದಾತ್] = ಪರ ಪೀಡಾ ಪ್ರಾರ್ಥನೆ, ಋತವದನ ಮುಂತಾದ ಅರ್ಥಗಳಿಗೆ ಹೇಗೋ ಹಾಗೆ ಅಧ್ಯಯನರೂಪವಾದ ಅರ್ಥಕ್ಕೆ ಭೇದವುಂಟಾದ್ದರಿಂದ (ಈ ಮಂತ್ರ ವಿದ್ಯಾಂಗವಲ್ಲ.)

**ವಿವರಣೆ**

"ಶಂ ನೋ ಮಿತ್ರಶ್ಶಂ ವರುಣಃ"—ಎಂದೂ, "ಸಹನಾವವತು"—ಎಂದೂ ಈ ಮಂತ್ರಗಳನ್ನು ತೈತ್ತಿರೀಯರು ಅಧ್ಯಯನ ಮಾಡುತ್ತಾರೆ. ಈ ಮಂತ್ರಗಳಿಗೆ ಅರ್ಥ:—ಸೂರ್ಯ ವರುಣ ಮುಂತಾದ ದೇವತೆಗಳು ನಮ್ಮನ್ನು ರಕ್ಷಿಸಲೆಂದೂ, ಶಿಷ್ಯಾ ಚಾರ್ಯರಾದ ನಮ್ಮಗಳನ್ನು ರಕ್ಷಿಸಲಿ, ನಾನು ಅಧ್ಯಯನ ಮಾಡುವುದು ವೀರ್ಯವತ್ತರ ವಾಗಲಿ,—ಇತ್ಯಾದಿ. ಈ ಮಂತ್ರಗಳು ಉಪಾಸನಕ್ಕೆ ಅಂಗಗಳೆ? ಅಲ್ಲವೆ?—ಎಂದು ಸಂಶಯ.

ವಿದ್ಯಾ ಪ್ರಕರಣದಲ್ಲಿ ಹತ್ತಿರದಲ್ಲಿ ಈ ಮಂತ್ರಗಳು ಓದಲ್ಪಟ್ಟಿರುವುದರಿಂದ, ಇವು ವಿದ್ಯಾಂಗಗಳು—ಎಂದು ಪೂರ್ವಪಕ್ಷ.

"ಶುಕ್ರಂ ಪ್ರವಿಧ್ಯ, ಹೃದಯಂ ಪ್ರವಿಧ್ಯ"—ಎಂಬ ಮಂತ್ರ ಪ್ರಕರಣಾಂತರದಲ್ಲಿದ್ದಾಗ್ಯೂ, ತೇಜಿಷ್ಠವಾದ ಶತ್ರುವಿನ ಹೃದಯವನ್ನು ಸೀಳು(ಇರಿ)—ಎಂಬ ಅರ್ಥವನ್ನು ಹೇಳುವ ಈ ಮಂತ್ರ ಪ್ರಕರಣಾಂತರದಲ್ಲಿ ಹೇಳಿದ ಅಭಿಚಾರ ಹೋಮಾದಿಗಳಿಗೆ ಶೇಷವಾಗಿ ಆ ಕ್ರಿಯೆಗಳಲ್ಲಿ ಅನುಸಂಧಿಸತಕ್ಕದಾಗಿರುವಂತೆ, ನಾವು ಅಧ್ಯಯನ ಮಾಡಿದ ವೇದ ನಮ್ಮನ್ನು ರಕ್ಷಿಸಲಿ—ಎಂಬ ಅರ್ಥವನ್ನು ಹೇಳುವ, "ಸಹನಾವವತು",—ಇತ್ಯಾದಿ ಮಂತ್ರಗಳೂ ಅಧ್ಯಯನಕ್ಕೇ ಹೊರತು ವಿದ್ಯೆಗೆ ಅಂಗವಾಗಲಾರವು—ಎಂದು ಸಿದ್ಧಾನ್ತ.

## 11. ಹಾನ್ಯಧಿಕರಣ

ಸೂತ್ರ—**ಹಾನೌತೂಪಾಯನ ಶಬ್ದಶೇಷತ್ವಾತ್ಕುಶಾಚ್ಛನ್ದಃಸ್ತುತ್ಯುಪಗಾನವತ್ತದುಕ್ತಂ**

### ಸಂಗತಿ

ವಿದ್ಯಾಸನ್ನಿಧಿಯಲ್ಲಿ ಶ್ರುತಗಳಾದ. "ಶುಕ್ರಂ ಪ್ರವಿಧ್ಯ"—ಮುಂತಾದುವು ವಿದ್ಯೆಗೆ ಅಂಗವಲ್ಲವೆಂದಾಯಿತು. ಹಾಗೆಯೇ ಸನ್ನಿಧಿಯಲ್ಲಿ ಶ್ರುತವಾದ ಹಾನೋಪಾಯನ ಚಿಂತೆ ಅನಂತರ ಮಾಡಲ್ಪಡುತ್ತೆ—ಎಂದು ಸಂಗತಿ.

### ಸೂತ್ರಾರ್ಥ

[ ಹಾನೌ] = ವಿನಾಶ ಮಾತ್ರ ಹೇಳಲ್ಪಟ್ಟಾಗ್ಯೂ, [ಉಪಾಯನ ಶಬ್ದಶೇಷತ್ವಾತ್] = ಪುಣ್ಯಪಾಪಗಳು ಮಿತ್ರ ಶತ್ರುಗಳನ್ನು ಹೊಂದುವುವೆಂಬ ವಾಕ್ಯ ಪುಣ್ಯ ಪಾಪಗಳು. ನಶಿಸುವುವೆಂಬ ವಾಕ್ಯಕ್ಕೆ ಶೇಷವಾದ್ದರಿಂದ, (ಪುಣ್ಯಪಾಪಗಳ ವಿನಾಶ ಸಂಕ್ರಮಣಗಳನ್ನು ಸಕಲ ವಿದ್ಯೆಗಳಲ್ಲಿಯೂ ಅನುಸಂಧಾನ ಮಾಡಬೇಕು) [ಕುಶಾಚ್ಛನ್ದ-ಸ್ತುತ್ಯುಪಗಾನವತ್] = ಕುಶ—ಎಂಬ ಪಾತ್ರವನ್ನು ಹೇಳುವ ವಾಕ್ಯಕ್ಕೂ, ದೇವಾ ಸುರರುಗಳ ಛನ್ದಸ್ಸನ್ನು ಹೇಳುವ ವಾಕ್ಯಕ್ಕೂ. ಸೂರ್ಯನ ಸ್ತುತಿಯನ್ನು ಹೇಳುವ ವಾಕ್ಯಕ್ಕೂ, ಗಾನವನ್ನು ಮಾಡುವಂತೆ ಹೇಳುವ ವಾಕ್ಯಕ್ಕೂ ಪ್ರಕರಣಾಂತರದಲ್ಲಿಯ ವಾಕ್ಯಗಳು ಶೇಷವಾಗುವಂತೆ ಇಲ್ಲಿಯೂ ಪ್ರಕರಣಾಂತರದಲ್ಲಿಯ ವಿನಾಶ ಬೋಧಕ ವಾಕ್ಯಕ್ಕೆ ಪ್ರಕರಣಾಂತರದಲ್ಲಿಯ ಪುಣ್ಯಪಾಪ ಸಂಕ್ರಮಣ ಬೋಧಕ ವಾಕ್ಯವೂ ಶೇಷವಾಗುವುದು. [ತತ್] = ಆ ಅರ್ಥ [ಉಕ್ತಂ] = ಪೂರ್ವಮೀಮಾಂಸೆಯಲ್ಲಿ ಹೇಳಲ್ಪಟ್ಟಿತು. [ಹಾನಿ = ವಿನಾಶ ಉಪಾಯನ = ಅನ್ಯತ್ರ ಅದರ ಪ್ರವೇಶ]

### ವಿವರಣೆ

"ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ",—(ಉಪಾಸಕನು ದೇಹಾವಸಾನ ಕಾಲದಲ್ಲಿ ಪುಣ್ಯಪಾಪಗಳನ್ನು ಒದರಿಬಿಟ್ಟು ಪರಮಾತ್ಮ ಸಾಮ್ಯವನ್ನು ಹೊಂದುವನೆಂದೂ) "ಅಶ್ವ ಇವರೋಮಾಣಿ ವಿಧೂಯ ಪಾಪಂ"—(ಆ ಕಾಲದಲ್ಲಿ ಕುದುರೆ

ಕೂದಲುಗಳನ್ನು ಒದರುವಂತೆ ಪಾಪಗಳನ್ನು ಒದರಿ ಪರಮಾತ್ಮನನ್ನು ಸೇರುವನು) ಎಂದೂ ಕೆಲವು ಕಡೆಗಳಲ್ಲಿಯೂ, "ತಸ್ಯ ಪುತ್ರಾದಾಯಮುಪಯನ್ತಿ ಸುಹೃದಸ್ಸಾಧು ಕೃತ್ಯಾಂ"—(ಉಪಾಸಕನ ದೇಹಾವಸಾನ ಕಾಲದಲ್ಲಿ ಅವನ ಧನವನ್ನು ಅವನ ಪುತ್ರರು ಪಡೆಯುವರು. ಅವನ ಪುಣ್ಯವನ್ನು ಅವನ ಮಿತ್ರರೂ, ಪಾಪವನ್ನು ಶತ್ರುಗಳೂ ಹೊಂದುವರು ಎಂದೂ, ಬೇರೊಂದೆಡೆಯಲ್ಲಿಯೂ, "ತತ್ಸುಕೃತ ದುಷ್ಕೃತೇ ಧೂನುತೇ ತಸ್ಯ ಪ್ರಿಯಾ ಜ್ಞಾತಯಸ್ಸುಕೃತಮುಪಯನ್ತಿ ಅಪ್ರಿಯಾ ದುಷ್ಕೃತಂ",—(ಆ ಕಾಲದಲ್ಲಿ ಉಪಾಸಕನು ಪುಣ್ಯಪಾಪಗಳನ್ನು ಒದರುತ್ತಾನೆ. ಆ ಪುಣ್ಯವನ್ನು ಇಷ್ಟರೂ, ಪಾಪ ಗಳನ್ನು ಶತ್ರುಗಳೂ ಹೊಂದುತ್ತಾರೆ) ಯೆಂದೂ, ಬೇರೊಂದೆಡೆಯಲ್ಲಿಯೂ ಹೇಳಿದೆ.

ಒಂದು ಕಡೆ ಪುಣ್ಯಪಾಪಗಳ ನಾಶವೂ ಮತ್ತೊಂದು ಕಡೆ ಆ ಕ್ರಮಗಳಿಗೆ ಶತ್ರು ಮಿತ್ರರಲ್ಲಿ ಪ್ರಾಪ್ತಿಯೂ, ಬೇರೊಂದೆಡೆಯಲ್ಲಿ ಇವೆರಡೂ ಹೇಳಲ್ಪಟ್ಟಿವೆ. ಈ ಮೂರು ವಿಧಗಳಲ್ಲಿಯೂ ಒಂದೊಂದು ವಿದ್ಯೆಯಲ್ಲಿ ಒಂದೊಂದನ್ನು ಒಟೊಂಟಿಯಾಗಿ ಅನುಸಂಧಿಸಬೇಕೆ? ಅಥವಾ, ಸಕಲ ವಿದ್ಯೆಗಳಲ್ಲಿಯೂ ಇವೆರಡನ್ನೂ ಅನುಸಂಧಿಸ ಬೇಕೆ?—ಎಂದು ಸಂಶಯ.

ಒಂದೊಂದು ಕಡೆಯಲ್ಲಿ ಒಂದೊಂದನ್ನು ಒಂಟೊಂಟಿಯಾಗಿಯೇ ಹೇಳಿರುವು ದರಿಂದ, ಯಾವುದಾದರೂ ಒಂದನ್ನು ಅನುಸಂಧಾನ ಮಾಡಿದರೇ ಸಾಕು—ಎಂದು ಪೂರ್ವಪಕ್ಷ. ಪುಣ್ಯಪಾಪಗಳು ಬೇರೊಬ್ಬರನ್ನು ಆಶ್ರಯಿಸುವಾಗ ಒಬ್ಬನನ್ನು ಬಿಟ್ಟೇ ಬರಬೇಕೆಂಬುದು ಸಿದ್ಧ. ಆದ್ದರಿಂದ ಬೇರೊಬ್ಬರನ್ನು ಪುಣ್ಯಪಾಪಗಳು ಆಶ್ರಯಿಸಿದ್ದನ್ನು ಅನುಸಂಧಾನ ಮಾಡುವಾಗ ಆ ಕರ್ಮಗಳು ಒಬ್ಬನನ್ನು ಬಿಟ್ಟು ಬಂದುದನ್ನು ಅನುಸಂಧಾನ ಮಾಡಬೇಕೆಂಬುದೂ ಸಿದ್ಧ. ಆದ್ದರಿಂದ ಒಬ್ಬನನ್ನು ಬಿಡುವುದೆಂದು ಹೇಳುವ ವಾಕ್ಯವೂ, ಒಬ್ಬನನ್ನು ಆಶ್ರಯಿಸವುದೆಂದು ಹೇಳುವ ವಾಕ್ಯವೂ —ಎರಡೂ ಸೇರಿ ಒಂದೇ ಅರ್ಥವನ್ನೇ ವಿಧಿಸುವುದರಿಂದ, ಸಮಸ್ತ ವಿದ್ಯೆಗಳಲ್ಲಿಯೂ ಎರಡನ್ನೂ ಅನುಸಂಧಾನ ಮಾಡಬೇಕು. ಈ ಎರಡು ವಾಕ್ಯಗಳೂ ಬೇರೆ ಬೇರೆ ಪ್ರಕರಣದಲ್ಲಿರುವುದರಿಂದ ಇವೆರಡೂ ಸೇರಿ ಒಂದರ್ಥವನ್ನು ಹೇಳುವುದೋ?— ಎಂದಲ್ಲಿ, ಹೇಳುವುದೆಂಬುದಕ್ಕೆ ದೃಷ್ಟಾಂತ—"ವಾನಸ್ಪತ್ಯಾಃ ಕುಶಾಃ"—ಯಜ್ಞದಲ್ಲಿ ಕುಶ—ಎಂಬ ಹೆಸರುಳ್ಳ ಪಾತ್ರ ಹೂವಿಲ್ಲದೆ ಕಾಯಿ ಬಿಡುವ ಮರದಿಂದ ಮಾಡಬೇಕು— ಎಂದು ಒಂದು ಕಡೆ ಹೇಳಿದೆ. ಇಂತಹ ಮರಗಳು ಅನೇಕವಾಗಿರುವುದರಿಂದ, ಯಾವ ಮರದಿಂದ ಮಾಡಬೇಕು?—ಎಂದಲ್ಲಿ, "ಔದುಂಬರ್ಯಃ ಕುಶಾಃ",—(ಆ 'ಕುಶ' ಎಂಬ ಪಾತ್ರವನ್ನು ಅತ್ತಿಮರದಿಂದ ನಿರ್ಮಿಸಬೇಕು)—ಎಂದು ಬೇರೊಂದು ಕಡೆಯಲ್ಲಿ ಹೇಳಿ ರುವ ವಾಕ್ಯ ಈ ವಾಕ್ಯದೊಡನೆ ಸೇರಿ ಹೂವಿಲ್ಲದೆ ಕಾಯಿ ಬಿಡುವ ಅತ್ತಿಮರದಿಂದ ಆ ಪಾತ್ರವನ್ನು ಮಾಡಬೇಕಕೆಂದು ಒಂದರ್ಥವನ್ನು ಹೇಳುವುದು.

"ದೇವಾಸುರಾಣಾಂ ಛನ್ದಾಂಸಿ",—(ದೇವಾಸುರರ ಛನ್ದಸ್ಸುಗಳನ್ನು ಹೇಳಬೇಕು) ಎಂದು ಒಂದು ಕಡೆ ಹೇಳಿದೆ. ಅದರಲ್ಲಿ ದೇವತೆಗಳ ಛಂದಸ್ಸನ್ನು ಮುಂಚೆ ಹೇಳಬೇಕೆ? ಅಥವಾ ಅಸುರರ ಛಂದಸ್ಸನ್ನು ಮುಂಚೆ ಹೇಳಬೇಕೆ?—ಎಂದು ಶಂಕಿಸಿದಲ್ಲಿ,"ದೇವ

ಚ್ಛನ್ದಾಂಸಿ ಪೂರ್ವಂ,"—(ದೇವತೆಗಳ ಛನ್ದಸ್ಸನ್ನು ಮೊದಲು ಹೇಳಬೇಕು)—ಎಂದು ಪ್ರಕರಣಾಂತರದಲ್ಲಿ ಹೇಳಿರುವ ವಾಕ್ಯ ಈ ಪ್ರಕರಣದಲ್ಲಿರುವ ಈ ವಾಕ್ಯದೊಡನೆ ಸೇರಿ ಎರಡೂ ಒಂದೇ ಅರ್ಥವನ್ನು ಹೇಳುವುದು.

"ಹಿರಣ್ಯೇನ ಷೋಡಶಿನಃ ಸ್ತೋತ್ರ ಮುಪಾಕರೋತಿ".—(ಷೋಡಶಿ—ಎಂಬ ಸಾಮವನ್ನು ಗಾನ ಮಾಡಬೇಕು)—ಎಂದು ಒಂದು ಕಡೆ ಹೇಳಿದೆ. ಇದನ್ನು ಯಾವಾಗ ಗಾನ ಮಾಡಬೇಕು? ಎಂದಲ್ಲಿ, "ಸಮಯಾವಿಷಿತೇ ಸೂರ್ಯೇ ಷೋಡಶಿನಃಸ್ತೋತ್ರ ಮುಪಾಕರೋತಿ",— ಸೂರ್ಯನು ಉದಿಸಿದ ನಂತರ ಈ ಷೋಡಶಿ ಎಂಬ ಸಾಮವನ್ನು ಗಾನ ಮಾಡಬೇಕು—ಎಂದು ಬೇರೊಂದು ಕಡೆ ಹೇಳಿರುವ ವಾಕ್ಯ ಇದರೊಡನೆ ಸೇರಿ ಎರಡೂ ಒಂದೇ ಅರ್ಥವನ್ನು ಪ್ರತಿಪಾದಿಸುವುದು. "ಋತ್ವಿಜ ಉಪಗಾಯನ್ತಿ",—(ಋತ್ವಿಕ್ಕುಗಳು ಗಾನ ಮಾಡುತ್ತಾರೆ) ಎಂದು ಒಂದು ಪ್ರಕರಣದಲ್ಲಿ ಹೇಳಿದೆ. "ನಾಧ್ವರ್ಯುರುಪ ಗಾಯೇತ್"—(ಅಧ್ವರ್ಯು ಗಾನ ಮಾಡಕೂಡದು)—ಎಂದು ಪ್ರಕರಣಾಂತರದಲ್ಲಿರುವ ವಾಕ್ಯ ಇದರೊಡನೆ ಸೇರಿ ಎರಡೂ ಅಧ್ವರ್ಯುವಲ್ಲದ ಋತ್ವಿಕ್ಕುಗಳು ಗಾನ ಮಾಡಬೇಕು—ಎಂಬ ಒಂದೇ ಅರ್ಥವನ್ನು ಹೇಳುತ್ತವೆ. ಅದರ ಹಾಗೆಯೇ ಈ ಎರಡು ವಾಕ್ಯಗಳೂ ಬೇರೆ ಬೇರೆ ಪ್ರಕರಣದಲ್ಲಿದ್ದಾಗ್ಯೂ, ಎರಡೂ ಸೇರಿ ಒಂದರ್ಥವನ್ನು ಹೇಳುವುದು ಸರಿ. ಈ ವಿಧವಾಗಿಯೇ ಮೀಮಾಂಸಕರುಗಳೂ ಸಮರ್ಥಿಸಿದ್ದಾರೆ—ಎಂದು ಸಿದ್ಧಾನ್ತ.

## 12. ಸಾಂಪರಾಯಾಧಿಕರಣ

### ಸೂತ್ರ—ಸಾಂಪರಾಯೇ ತರ್ತವ್ಯಾಭಾವಾತ್ತಥಾಹ್ಯನ್ಯೇ

**ಸಂಗತಿ**

ಸುಕೃತ ದುಷ್ಕೃತಗಳ ಹಾನ—ಉಪಾಯನಗಳು ಎಲ್ಲಾ ವಿದ್ಯೆಗಳಲ್ಲಿಯೂ ಚಿಂತನೀಯಗಳೆನ್ನಲಾಯಿತು. ಅದನ್ನು ಚಿಂತಿಸುವುದು ಯಾವಾಗ? ದೇಹವಿಯೋಗ ಕಾಲ ಮತ್ತು ದೇಹದಿಂದ ಉತ್ಕ್ರಾಂತನಾದ ಮೇಲೆ ದಾರಿಯಲ್ಲಿಯೇ ಅಥವಾ ದೇಹ ವಿಯೋಗ ಕಾಲದಲ್ಲಿ ಮಾತ್ರವೆ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ತರ್ತವ್ಯಾಭಾವಾತ್] = (ದೇಹ ವಿಯೋಗವಾದ ಮೇಲೆ) ದಾಟಬೇಕಾದ (ಅನುಭವಿಸತಕ್ಕ) ಕರ್ಮ ಇಲ್ಲವಾದ್ದರಿಂದ, [ಸಾಂಪರಾಯೇ] = ದೇಹ ವಿಯೋಗ ಕಾಲದ ದಲ್ಲಿಯೇ (ಪುಣ್ಯಪಾಪಗಳನ್ನು ಧ್ಯಾನಿಸಬೇಕು) [ತಥಾ, ಹಿ] = ಶರೀರ ನಾಶ ಕಾಲ ದಲ್ಲಿಯೇ ಕರ್ಮ ನಶಿಸುವುದೆಂದು [ಅನ್ಯೇ] = ಬೇರೆ ಶಾಖಿಗಳೂ, (ಅಧೀಯತೇ) = ಹೇಳುತ್ತಾರೆ.

**ವಿವರಣೆ**

ಪುಣ್ಯಪಾಪ ವಿನಾಶಗಳನ್ನು ಚಿಂತಿಸುವಾಗ ಆ ಪುಣ್ಯಪಾಪಗಳು ಶರೀರ ವಿಯೋಗ ಕಾಲದಲ್ಲಿಯೇ ಸಂಪೂರ್ಣವಾಗಿ ನಶಿಸುವುದಾದರೆ ಆ ಕಾಲದಲ್ಲಿಯೇ, ನಶಿಸುವುದೆಂದೇ ಚಿಂತಿಸಬೇಕು. ಶರೀರ ಹೋಗುವಾಗ ಕೆಲವು ಕರ್ಮಗಳೂ ಅರ್ಚಿರಾದಿ

ಮಾರ್ಗದಲ್ಲಿ ಹೋಗುವಾಗ ಪ್ರಕೃತಿಮಂಡಲವನ್ನು ದಾಟಿ ಹೋಗುವವರಿಗೂ ದಾರಿಯಲ್ಲಿ ಸ್ವಲ್ಪ ಸ್ವಲ್ಪವಾಗಿಯೂ ಕೆಲವು ಕರ್ಮಗಳು ಕಳೆಯುವುದಾದಲ್ಲಿ ಆ ಎರಡು ಕಾಲಗಳಲ್ಲಿಯೂ ಚಿಂತಿಸಬೇಕಾದ್ದರಿಂದ ಆ ಕರ್ಮ ನಾಶವುಂಟಾಗುವ ಕಾಲವನ್ನು ಇಲ್ಲಿ ಮುಂಚಿತವಾಗಿಯೇ ನಿರ್ಣಯಿಸಬೇಕು.—ಪುಣ್ಯ ಪಾಪಗಳು ಶರೀರ ವಿಯೋಗ ಕಾಲದಲ್ಲಿಯೇ ಸಂಪೂರ್ಣವಾಗಿ ನಶಿಸುವುವೆ? ಅಥವಾ ಆಗ ಸ್ವಲ್ಪವೂ, ಅರ್ಚಿರಾದಿ ಮಾರ್ಗದಲ್ಲಿ ಸ್ವಲ್ಪವೂ ನಶಿಸುವುವೆ?—ಎಂದು ಸಂಶಯ. ವೇದದಲ್ಲಿ ಶರೀರಾವಸಾನ ಕಾಲದಲ್ಲಿ ನಶಿಸುವುದೆಂದು ಒಂದು ಕಡೆಯಲ್ಲಿಯೂ, ಅರ್ಚಿರಾದಿ ಮಾರ್ಗದಲ್ಲಿ ನಶಿಸುವುದೆಂದು ಮತ್ತೊಂದು ಕಡೆಯಲ್ಲಿಯೂ ಹೇಳಿರುತ್ತೆ. ಅಲ್ಲದೆ, ಅರ್ಚಿರಾದ ಮಾರ್ಗದಿಂದ ಹೋಗುವಾಗ ಸೂಕ್ಷ್ಮ ಶರೀರದೊಡನೆ ಪುರುಷ ಹೋಗುತ್ತಾನೆ. ಶರೀರವಿಲ್ಲದವನು ಗಮನ ಮುಂತಾದ ಯಾವ ವ್ಯಾಪಾರವನ್ನೂ ಮಾಡಲು ಯೋಗ್ಯತೆ ಯಿಲ್ಲದವನಾದ್ದರಿಂದ ಗಮನ ಸಾಧನವಾಗಿ ಶರೀರವನ್ನು ಒಪ್ಪಿಕೊಳ್ಳಬೇಕು. ಶರೀರಸ್ಥಿತಿಗೆ ಕಾರಣ ಪುಣ್ಯಪಾಪರೂಪ ಕರ್ಮಗಳು. ಅವು ಶರೀರ ವಿಯೋಗ ಕಾಲದಲ್ಲಿಯೇ ನಶಿಸಿ ಹೋದಲ್ಲಿ ಸೂಕ್ಷ್ಮ ಶರೀರವೂ, ಆಗಲೇ ನಶಿಸುವುದೆಂದು ಒಪ್ಪಿಕೊಳ್ಳಬೇಕು. ಆ ಶರೀರವಿಲ್ಲದಿದ್ದಲ್ಲಿ ಅರ್ಚಿರಾದಿ ಮಾರ್ಗವಾಗಿ ಗಮನ ಸಿದ್ಧಿಸದು. ಅದಕ್ಕಾಗಿ ಆ ಸೂಕ್ಷ್ಮ ಶರೀರಕ್ಕೆ ಕಾರಣವಾದ ಕೆಲವು ಕರ್ಮಗಳು ಶರೀರ ವಿಯೋಗವಾದ ಮೇಲೆಯೂ ಇರುವುದೆಂದೂ, ಅವು ಪ್ರಕೃತಿ ಮಂಡಲವನ್ನು ದಾಟಿದ ಮೇಲೆ ನಶಿಸುವುವೆಂದೂ ಒಪ್ಪಿಕೊಳ್ಳಬೇಕೆಂದು ಪೂರ್ವಪಕ್ಷ.

ಶರೀರ ವಿಯೋಗ ಕಾಲದಲ್ಲಿಯೇ ಸಕಲ ಕರ್ಮಗಳೂ ನಶಿಸುವುವೆಂದು,"ಅಶ್ವ ಇವರೋಮಾಣಿ"—ಎಂಬ ಶ್ರುತಿಯಲ್ಲಿ ಹೇಳುವುದರಿಂದ, ಅದಕ್ಕೆ ಅನುಗುಣವಾಗಿಯೇ ಮಿಕ್ಕ ವಾಕ್ಯಗಳನ್ನೂ ಅನ್ವಯಿಸಿಕೊಂಡು, ಶರೀರ ವಿಯೋಗ ಕಾಲದಲ್ಲಿಯೇ ಸಕಲ ಕರ್ಮಗಳೂ ನಶಿಸುವುವೆಂದು ಅಂಗೀಕರಿಸಬೇಕು. ಅರ್ಚಿರಾದಿ ಗತಿಗೆ ಸಾಧನವಾದ ಸೂಕ್ಷ್ಮ ಶರೀರಕ್ಕೆ ಕಾರಣವಾದ ಕರ್ಮಗಳು ನಶಿಸಿಹೋಗಿದ್ದಾಗ್ಯೂ, ಇವನ ಉಪಾಸನ ಬಲದಿಂದ ಸೂಕ್ಷ್ಮ ಶರೀರ ನಿಂತಿರುವುದೆಂದು ಅಂಗೀಕರಿಸಬೇಕು. ಈ ಅರ್ಥವನ್ನೇ ಮತ್ತೊಂದು ಶಾಖೆಯೂ ಹೇಳುವುದು. ಆದ್ದರಿಂದ ಶರೀರಾವಸಾನ ಕಾಲದಲ್ಲಿಯೇ ಸಕಲ ಕರ್ಮಗಳ ನಾಶವನ್ನೂ ಚಿಂತಿಸಬೇಕೆಂಬುದು ಸಿದ್ಧಾಂತ.

### ಸೂತ್ರ ೨—**ಛನ್ದತ ಉಭಯಾವಿರೋಧಾತ್**

**ಸೂತ್ರಾರ್ಥ**

[ಉಭಯಾವಿರೋಧಾತ್] = ಎರಡು ಶ್ರುತಿಗಳಿಗೂ ವಿರೋಧ ಬರದ ಹಾಗೆ [ಛನ್ದತಃ] = ಯಥೇಷ್ಟವಾಗಿ (ಮತ್ತೊಂದು ಶ್ರುತಿಯನ್ನೂ ಅನ್ವಯಿಸಿಕೊಳ್ಳಬೇಕು)

**ವಿವರಣೆ**

ಆದರೆ, ಅರ್ಚಿರಾದಿ ಮಾರ್ಗದಲ್ಲಿ ಕರ್ಮ ನಶಿಸುವುದೆಂದು ಹೇಳುವ ಶ್ರುತಿಗೆ ವಿರೋಧ ಬರುವುದಿಲ್ಲವೊ?—ಎಂದಲ್ಲಿ, "ಅಶ್ವ ಇವ ರೋಮಾಣಿ ವಿಧೂಯ ಪಾಪಂ"–

ಇತ್ಯಾದಿಯಿಂದ ಕುದುರೆ ಕೂದಲುಗಳನ್ನು ಒದರುವಂತೆಯೂ, ರಾಹುವಿನ ಬಾಯಿಂದ ಚಂದ್ರ ಹೊರಗೆ ಬರುವಂತೆಯೂ ಈ ಶರೀರದೊಂದಿಗೆ ಕರ್ಮಗಳನ್ನೂ ಒದರಿ ಬಿಟ್ಟು ಹೋಗುತ್ತಾನೆ—ಎಂಬ ಶ್ರುತಿಗೂ. "ತಸ್ಯತಾವದೇವ ಚಿರಂ..."—ಇತ್ಯಾದಿಗೂ ಈ ಶರೀರವನ್ನು ಬಿಡುವ ಪರ್ಯಂತವೇ ವಿಳಂಬ, ಈ ಶರೀರವನ್ನು ಬಿಡುವಾಗ ಸಕಲ ಕರ್ಮಗಳನ್ನೂ ಬಿಟ್ಟುಬಿಟ್ಟು ಪರಮಾತ್ಮನನ್ನು ಸೇರುವನು—ಎಂದು ಹೇಳುವ ಶ್ರುತಿಗೂ ವಿರೋಧ ಬರದಹಾಗೆ. "ಏತಂ ದೇವಯಾನಂ ಪನ್ಥಾನಂ ಆಪದ್ಯೇತ ಸ ಆಗಚ್ಛತಿ ವಿರಜಾಂ ನದೀಂ ತತ್ಸುಕೃತ ದುಷ್ಕೃತೇ ವಿಧೂನತೇ"—(ಆ ಪುರುಷ ದೇವ ಯಾನ ಮಾರ್ಗವನ್ನು ಹೊಂದುವನು, ವಿರಜಾನದಿಗೆ ಬರುವನು, ಪುಣ್ಯ ಪಾಪಗಳನ್ನು ಒದರುವನು). ದೇವಯಾನಮಾರ್ಗವನ್ನು ಹೊಂದುತ್ತಾನೆ, ವಿರಜಾನದಿಗೆ ಬರುತ್ತಾನೆ —ಎಂಬ ಶ್ರುತಿಯನ್ನು ಪುಣ್ಯಪಾಪಗಳನ್ನು ಒದರುತ್ತಾನೆ ದೇವಯಾನವನ್ನು ಹೊಂದು ತ್ತಾನೆ. ವಿರಜಾ ನದಿಗೆ ಬರುತ್ತಾನೆ—ಎಂದು ಪದಗಳನ್ನು ಮಾರ್ಪಡಿಸಿ ಅನ್ವಯಿಸಿ ಕೊಳ್ಳಬೇಕು. ಹೀಗೆ ಅನ್ವಯಿಸಿಕೊಂಡಲ್ಲಿ ಆ ಶ್ರುತಿಗೂ ವಿರೋಧ ಬಾರದು.

### ಸೂತ್ರ ೩—**ಗತೇರರ್ಥವತ್ತ್ವಮುಭಯಥಾ ಅನ್ಯಥಾಹಿ ವಿರೋಧಃ**

### ಸೂತ್ರಾರ್ಥ

[ಉಭಯಥಾ] = ಶರೀರ ವಿಯೋಗ ಕಾಲದಲ್ಲಿಯೂ ಅರ್ಚಿರಾದಿ ಮಾರ್ಗ ದಲ್ಲಿಯೂ ಹೀಗೆ ಎರಡು ಕಡೆಗಳಲ್ಲಿಯೂ (ಕರ್ಮ ನಶಿಸುವುದೆಂದು ಒಪ್ಪಿಕೊಂಡರೇಯೇ) [ಗತೇಃ] = ಅರ್ಚಿರಾದಿಗತಿಯನ್ನು ಹೇಳುವ ಶ್ರುತಿಗೆ [ಅರ್ಥವತ್ತ್ವಂ] = ಅರ್ಥ ವುಳ್ಳೋಣವು—(ಪ್ರಯೋಜನ ಸಿದ್ಧಿಸುವುದು) [ಅನ್ಯಥಾ, ಹಿ] = ಬೇರೆ ವಿಧವಾದಲ್ಲಿ [ವಿರೋಧಃ] = ಆ ಶ್ರುತಿಗೆ ವಿರೋಧ ಬರುವುದು.

### ವಿವರಣೆ

ಮೇಲೆ ಹೇಳಿದ ಸಿದ್ಧಾಂತದಲ್ಲಿ ಅನುಪಪತ್ತಿಯನ್ನು ಶಂಕಿಸುತ್ತಾರೆ;—"ದೇವ ಯಾನ ಮಾಪದ್ಯತೇ",—(ಅರ್ಚಿರಾದಿ ಮಾರ್ಗದಲ್ಲಿ ಹೋಗುವನು)—ಎಂದು ಶ್ರುತಿ ಹೇಳುತ್ತೆ. ಶರೀರವನ್ನುಳ್ಳವನೇ ಒಂದು ಕಡೆಗೆ ಹೋಗಬಲ್ಲ. ಶರೀರಕ್ಕೆ ಕಾರಣ ಪುಣ್ಯ ಪಾಪಗಳು. ಪುಣ್ಯಪಾಪಗಳು ಶರೀರಾವಸಾನ ಕಾಲದಲ್ಲಿ ನಶಿಸಿದಲ್ಲಿ ಅದರಲ್ಲಿ ಉಂಟಾದ ಸೂಕ್ಷ್ಮ ಶರೀರವೂ ನಶಿಸುವುದು. ಆಗ್ಗೆ ಹೋಗಲು ಅಸಮರ್ಥನಾಗುವನು. ಹೀಗಾದಲ್ಲಿ ಅರ್ಚಿರಾದಿ ಮಾರ್ಗವಾಗಿ ಹೋಗುವವನೊಬ್ಬನೂ ಇಲ್ಲದೆ ಹೋಗುವುದರಿಂದ ಈ ಅರ್ಥವನ್ನು ಹೇಳುವ ಶ್ರುತಿ ನಿರರ್ಥಕವಾಗಿಬಿಡುವುದು ಎಂದು ಪೂರ್ವಪಕ್ಷ.

### ಸೂತ್ರ ೪—**ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇರ್ಲೋಕವತ್**

### ಸೂತ್ರಾರ್ಥ

[ಲೋಕವತ್] = ಲೋಕದಲ್ಲಿ ಹೇಗೋ ಹಾಗೆ (ತಲ್ಲಕ್ಷಣಾರ್ಥೋಪಲಬ್ಧೇಃ] = ಆ ಲಕ್ಷಣವನ್ನುಳ್ಳ (ಅಕರ್ಮವಶ್ಯವಾದ) ಶರೀರ (ಮುಕ್ತನಿಗೆ) ಕಾಣುವುದರಿಂದ [ಉಪಪನ್ನಃ] = ಪುಣ್ಯಪಾಪ ನಾಶಾನಂತರದರಲ್ಲಿಯೂ ಅರ್ಚಿರಾದಿ ಗಮನ ಕೂಡುವುದು

## ವಿವರಣೆ

ಮೇಲಿನ ಶಂಕೆಯನ್ನು ಪರಿಹರಿಸುತ್ತಾರೆ;—ಸಕಲ ಕರ್ಮಗಳೂ ನಶಿಸಿ ಮುಕ್ತನಾದ ಮೇಲೆ "ಸ ಸ್ವರಾಟ್ ಭವತಿ ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ"—ಆ ಮುಕ್ತ ಪುರುಷನು ಅಕರ್ಮವಶ್ಯನಾಗುತ್ತಾನೆ. ಅವನಿಗೆ ಸರ್ವ ಲೋಕಗಳಲ್ಲಿಯೂ ಯಥೇಚ್ಛವಾದ ಸಂಚಾರವುಂಟಾಗುವುದೆಂದು ಕರ್ಮಶೂನ್ಯನಿಗೂ ಕೂಡ ಸಂಕಲ್ಪ ಮಾತ್ರದಿಂದ ಶರೀರ, ಆ ಶರೀರದೊಂದಿಗೆ ಲೋಕಾಂತರಗಳಲ್ಲಿ ಗಮನವನ್ನೂ ಹೇಳಿದೆ. ಅದರಂತೆಯೇ ಶರೀರಾವಸಾನ ಕಾಲದಲ್ಲಿ ಸಕಲ ಕರ್ಮಗಳ ನಾಶವುಂಟಾದರೂ, ಪರಮಾತ್ಮೋಪಾಸನ ಬಲದಿಂದ ಅರ್ಚಿರಾದಿ ಮಾರ್ಗವಾಗಿ ಹೋಗಬಹುದಾದ್ದರಿಂದ, ಆ ಶ್ರುತಿಗೆ ವಿರೋಧವಿಲ್ಲ. ಇದಕ್ಕೆ ದೃಷ್ಟಾಂತವನ್ನು ತೋರಿಸುತ್ತಾರೆ:—ಲೋಕದಲ್ಲಿ ಚಕ್ರವರ್ತಿಯಾದ ರಾಜನನ್ನು ಆಶ್ರಯಿಸಿದವರು ಮಿಕ್ಕ ಮನುಷ್ಯರಿಗೆ ಪಡೆಯಲಾಗದ ಉನ್ನತ ಭೋಗಗಳನ್ನು ಅನುಭವಿಸುವಂತೆ, ಸರ್ವಜ್ಞನೂ ಸರ್ವಶಕ್ತನೂ ಆದ ಪರಮಾತ್ಮನನ್ನೂ ಉಪಾಸಿಸುವ ಪುರುಷ ಇಷ್ಟವಾದುದೆಲ್ಲವನ್ನೂ ಅನುಭವಿಸಬಹುದಾದ್ದರಿಂದ, ಸೂಕ್ಷ್ಮ ಶರೀರವೂ ಇರಬಹುದು ಎಂದು ಸಿದ್ಧಾಂತ.

ಸೂತ್ರ ೫—**ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಂ**

## ಸೂತ್ರಾರ್ಥ

[ಆಧಿಕಾರಿಕಾಣಾಂ] = (ಲೋಕ ಮರ್ಯಾದೆಯ ಸ್ಥಾಪನೆಯಲ್ಲಿ) ಅಧಿಕಾರವನ್ನು ಹೊಂದಿರುವ ವಸಿಷ್ಠಾದಿಗಳಿಗೆ [ಯಾವದಧಿಕಾರಂ] = (ಅವರವರ) ಅಧಿಕಾರ ಮುಗಿಯುವವರಿಗೂ, [ಅವಸ್ಥಿತಿಃ] = ಇರುವಿಕೆ (ಉಂಟು. ನಾಶವಿಲ್ಲ).

## ವಿವರಣೆ

ಪರಮಾತ್ಮನ ಸ್ವರೂಪವನ್ನು ಅರಿತ ಜ್ಞಾನಿಗಳಿಗೆ ಈ ಶರೀರ ಕಳೆದ ಒಡನೆ ಪುಣ್ಯ ಪಾಪಗಳು ಕಳೆದು ಹೋಗುವುವು. ಮರು ಜನ್ಮವಿಲ್ಲ, ಸೂಕ್ಷ್ಮ ಶರೀರ ಮಾತ್ರ ವಿರಜಾ ಪ್ರಾಪ್ತಿಯವರಿಗೆ ಇರುತ್ತೆ. ಎಂದು ಮೇಲೆ ಹೇಳಿದರು. ಮಹಾ ಜ್ಞಾನಿಗಳೆಂದು ಪ್ರಸಿದ್ಧರಾದ ವಸಿಷ್ಠರೇ ಮುಂತಾದವರು ಮರು ಜನ್ಮಗಳನ್ನು ಹೊಂದಿದ ಹಾಗೂ ಪುತ್ರ ಮರಣಾದಿಗಳಿಂದುಂಟಾದ ದುಃಖಾದಿಗಳನ್ನು ಅನುಭವಿಸಿದ ಹಾಗೂ ಶಾಸ್ತ್ರಗಳಲ್ಲಿ ಕಾಣುವುದಲ್ಲವೆ?—ಎಂದಲ್ಲಿ, ಅರ್ಚಿರಾದಿ ಮಾರ್ಗದಲ್ಲಿ ಹೋಗುವುದಕ್ಕೆ ಅವ್ಯವಹಿತ ಹಿಂದಿನ ಜನ್ಮದಲ್ಲಿಯ ಶರೀರ ನಶಿಸಿದ ಕೂಡಲೇ ಅವರಿಗೆ ಪುಣ್ಯ ಪಾಪಗಳು ಮುಂತಾದ ಸಂಸಾರ ನಶಿಸುವುದೆಂದೆವು. ವಸಿಷ್ಠಾದಿಗಳು ಒಂದೊಂದು ಅಧಿಕಾರವನ್ನೂ ಪಡೆದಿದ್ದಾರೆ. ಅವರುಗಳಿಗೆ ಪ್ರಾಪ್ತ ಕರ್ಮ ಇನ್ನೂ ನಶಿಸಿಲ್ಲ. ಆ ಅಧಿಕಾರದ ಕೊನೆಯಲ್ಲಿಯೇ ಅವು ನಶಿಸಿವುವು. ಅದನ್ನು ತತ್ತ್ವಜ್ಞಾನ ನಾಶ ಮಾಡದು. ಮಿಕ್ಕ ಸಂಚಿತಾದಿ ಕರ್ಮಗಳನ್ನು ಮಾತ್ರವೇ ತತ್ತ್ವಜ್ಞಾನ ನಾಶಮಾಡಬಲ್ಲದು. ಆದ್ದರಿಂದ ಅವರುಗಳಿಗೆ ಸಂಸಾರ ಕಂಡುಬರುವುದೆಂದು ಹೇಳುತ್ತಾರೆ.

## 13. ಅನಿಯಮಾಧಿಕರಣ

ಸೂತ್ರ—**ಅನಿಯಮಸ್ಸರ್ವೇಷಾಮವಿರೋಧಶ್ಶಬ್ದಾನುಮಾನಾಭ್ಯಾಂ**

ಅರ್ಚಿರಾದಿ ಗತಿ ಪ್ರಸ್ತುತವಾದ್ದರಿಂದ, ಅವರ ನಿಯಮ—ಅನಿಯಮಗಳು ಚಿಂತಿಸಲ್ಪಡುತ್ತವೆಯೆಂದು ಅವಾಂತರ ಸಂಗತಿ.

### ಸೂತ್ರಾರ್ಥ

[ಸರ್ವೇಷಾಂ] = ಎಲ್ಲಾ ಉಪಾಸನಗಳಿಗೂ (ಅರ್ಚಿರಾದಿ ಗತಿಯುಂಟು) [ಅನಿಯಮಃ] = (ಕೆಲವರಿಗೆ ಉಂಟು, ಕೆಲವರಿಗೆ ಇಲ್ಲವೆಂಬ) ನಿಯಮವಿಲ್ಲ. [ಶಬ್ದಾನುಮಾನಾಭ್ಯಾಂ] = (ಹೀಗೆ ಹೇಳಿದರೇಯೇ) ಶ್ರುತಿ ಸ್ಮೃತಿಗಳೊಂದಿಗೆ[ಅವಿರೋಧಃ] = ವಿರೋಧವಿಲ್ಲ.

### ವಿವರಣೆ

ಪಂಚಾಗ್ನಿವಿದ್ಯೆ, ಉಪಕೋಸಲವಿದ್ಯೆ, ದಹರವಿದ್ಯೆ ಮುಂತಾದ ಕೆಲವು ವಿದ್ಯೆಗಳಲ್ಲಿ ಅರ್ಚಿರಾದಿ ಗತಿಯನ್ನು ಹೇಳಿರುತ್ತೆ. ಮಿಕ್ಕ ಶಾಂಡಿಲ್ಯವಿದ್ಯೆ ಮುಂತಾದುವುಗಳಲ್ಲಿ ಹೇಳಿಲ್ಲ. ಇದರಿಂದ ತೋರುವುದೇನು?—ಎಂದಲ್ಲಿ,—ಯಾವ ವಿದ್ಯೆಯಲ್ಲಿ ಅರ್ಚಿರಾದಿ ಗತಿ ಹೇಳಲ್ಪಟ್ಟಿದೆಯೋ, ಆ ವಿದ್ಯೋಪಾಸಕನೇ ಅರ್ಚಿರಾದಿ ಮಾರ್ಗದಲ್ಲಿ ಹೋಗುವನು. ಮಿಕ್ಕ ವಿದ್ಯೆಯನ್ನು ಉಪಾಸಿಸುವವನು ಹೋಗುವುದಿಲ್ಲ. ಹಾಗೆ ಒಂದೆಡೆಯಲ್ಲಿ ಹೇಳಿದ ಮಾರ್ಗ ಮಿಕ್ಕ ಎಲ್ಲಾ ಕಡೆಗಳಿಗೂ ಉಂಟು. ಎಂದು ಒಪ್ಪಿಕೊಂಡಲ್ಲಿ, ಎಲ್ಲೋ ಒಂದು ಕಡೆಯಲ್ಲಿ ಹೇಳಿದುದೇ ಸಾಕಾಗಿರುವಲ್ಲಿ ಎರಡು ಮೂರು ಕಡೆಗಳಲ್ಲಿ ಹೇಳಿರುವುದು ವ್ಯರ್ಥವಾಗುವುದು—ಎಂಬುದಕ್ಕೆ ಸಮಾಧಾನ;—ವಾಜಸನೇಯದಲ್ಲಿಯೂ, ಛಾನ್ದೋಗ್ಯದಲ್ಲಿಯೂ, 'ತದ್ಯ ಇತ್ಥಂ ವಿದುಃ ಯೇ ಚೇಮೇಽರಣ್ಯೇ ಶ್ರದ್ಧಾಸತ್ಯಮುಪಾಸತೇ ತೇಽರ್ಚಿಷ ಮೇವಾಭಿ ಸಂಭವನ್ತಿ'—ಆ ಪಂಚಾಗ್ನಿವಿದ್ಯೆಯನ್ನು ಈ ರೀತಿಯಾಗಿ ಯಾರು ಅರಿಯುವರೋ—ಅವರೂ, ಯಾರು ಶ್ರದ್ಧೆ ಎಂದೂ ಸತ್ಯವೆಂದೂ ಹೇಳಲ್ಪಡುವ ಪರಮಾತ್ಮನನ್ನು ಉಪಾಸಿಸುವರೋ–ಅವರೂ ಅರ್ಚಿರಾದಿ ಮಾರ್ಗವಾಗಿ ಹೋಗುವರು ಎಂದು ಹೇಳಿರುವುದರಿಂದ ಪರಮಾತ್ಮೋಪಾಸನ ಮಾಡುವವರೆಲ್ಲರಿಗೂ ಅರ್ಚಿರಾದಿ ಗತಿಯುಂಟು. ಒಂದು ಕಡೆಯಲ್ಲಿ ಹೇಳಿದುದೇ ಸಾಕಾಗಿರುವಲ್ಲಿ, ಪಂಚಾಗ್ನಿವಿದ್ಯೆ, ಉಪಕೋಸಲವಿದ್ಯೆ ಮುಂತಾದ ಕೆಲವೆಡೆಗಳಲ್ಲಿ ಆ ಮಾರ್ಗವನ್ನು ಹೇಳಿದ್ದು, ಆ ವಿದ್ಯೆಗಳಲ್ಲಿ ನಿಯಮೇನ ಆ ಮಾರ್ಗವನ್ನು ಧ್ಯಾನಿಸಬೇಕೆಂದೂ ಮಿಕ್ಕ ವಿದ್ಯೆಗಳಲ್ಲಿ ಧ್ಯಾನಿಸಬೇಕೆಂಬ ನಿಯಮವಿಲ್ಲವೆಂದೂ ತಿಳಿಸುವುದಕ್ಕಾಗಿ.

## 14. ಅಕ್ಷರಧ್ಯಧಿಕರಣ

ಸೂತ್ರ—**ಅಕ್ಷರಧಿಯಾಂತ್ವವರೋಧಸ್ಸಾಮಾನ್ಯತದ್ಭಾವಾಭ್ಯಾಮೌಪಸದವತ್ತದುಕ್ತಂ**

### ಸಂಗತಿ

ಅರ್ಚಿರಾದಿ ಗತಿ ಸರ್ವವಿದ್ಯೆಗಳಿಗೂ ಸಾಧಾರಣವೆನ್ನಲಾಯಿತು. ಹಾಗೆಯೇ ಅಸ್ಥೂಲತ್ವಾದಿಗಳೂ ಸರ್ವವಿದ್ಯಾ ಸಾಧಾರಣಗಳೆಂಬುದು ನಿರೂಪಿಸಲ್ಪಡುತ್ತವೆ — ಎಂದು ಸಂಗತಿ.

**ಸೂತ್ರಾರ್ಥ**

[ಸಾಮಾನ್ಯತದ್ಭಾವಾಭ್ಯಾಂ] = (ಉಪಾಸ್ಯವಾದ ಬ್ರಹ್ಮ) ಎಲ್ಲಾ ಅಕ್ಷರವಿದ್ಯೆಗಳಲ್ಲಿಯೂ, ಒಂದಾಗಿರುವುದರಿಂದಲೂ, (ಅಸ್ಥೂಲತ್ವ ಮುಂತಾದುವು) ಆ ಬ್ರಹ್ಮಕ್ಕೆ ಅಸಾಧಾರಣವಾದುದರಿಂದಲೂ, [ಅಕ್ಷರಧಿಯಾಂ] = ಅಕ್ಷರ (ಬ್ರಹ್ಮ) ಸಂಬಂಧಿಯಾದ ಅಸ್ಥೂಲತ್ವಾದಿ ವಿಷಯಕವಾದ ಬುದ್ಧಿಗಳಿಗೆ, [ಅವರೋಧಃ] = ಉಪಸಂಹಾರ (ಉಂಟು). [ಔಪಸದವತ್] = ಉಪಸದನ ಸಂಬಂಧಿಯಾದ ಸಾಮದಂತೆ, [ತದುಕ್ತಂ] = ಗುಣವು ಪ್ರಧಾನವನ್ನು ಅನುವರ್ತಿಸುವುದೆಂಬುದು ಪೂರ್ವಮೀಮಾಂಸೆಯಲ್ಲಿಯೂ ಹೇಳಲ್ಪಟ್ಟಿದೆ.

**ವಿವರಣೆ**

ಅಥರ್ವಣ ಶ್ರುತಿಯಲ್ಲಿ, "ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಂ" (ಬ್ರಹ್ಮ ಪ್ರತ್ಯಕ್ಷಕ್ಕೆ ವಿಷಯವಲ್ಲ, ಮಿಕ್ಕ ಪ್ರಮಾಣಗಳಿಗೂ ವಿಷಯವಲ್ಲ. ಗೋತ್ರವೂ ಇಲ್ಲ, ವರ್ಣವೂ ಇಲ್ಲ,) ಎಂದು ಉಪಕ್ರಮಿಸಿ, ಅನೇಕವಾದ ಪ್ರಾಕೃತ ಗುಣಗಳನ್ನು ನಿಷೇಧಿಸಿದೆ. ವಾಜಸನೇಯದಲ್ಲಿ, "ಅಸ್ಥೂಲ ಮನಣ್ವಹ್ರಸ್ವಮ ದೀರ್ಘಂ..." ।—(ಆ ಬ್ರಹ್ಮ ಪ್ರಕೃತಿ ಸಂಬಂಧಾಧೀನವಾದ, ದಪ್ಪ, ಸಣ್ಣ, ಹ್ರಸ್ವ, ಧೀರ್ಘ ಮುಂತಾದ ಗುಣಗಳಿಲ್ಲದ್ದು—ಎಂದು ಅನೇಕ ಗುಣಗಳನ್ನು ನಿಷೇಧಿಸಿದೆ). ಈ ಎರಡು ಅಕ್ಷರವಿದ್ಯೆಗಳಲ್ಲಿಯೂ ಅಲ್ಲಲ್ಲಿ ಹೇಳಲ್ಪಟ್ಟ ಗುಣ ನಿಷೇಧವನ್ನು ಅಲ್ಲಲ್ಲಿ ಅನುಸಂಧಾನ ಮಾಡಬೇಕೆ? ಅಥವಾ ಎಲ್ಲಾ ಕಡೆಗಳಲ್ಲಿಯೂ ಹೇಳಿದ ಗುಣ ನಿಷೇಧವನ್ನು ಎಲ್ಲಾ ಕಡೆಗಳಲ್ಲಿಯೂ ಅನುಸಂಧಾನ ಮಾಡಬೇಕೆ?—ಎಂದು ವಿಚಾರಿಸಿದಲ್ಲಿ,—ಒಂದು ಕಡೆಯಲ್ಲಿ ಹೇಳಿದ ಗುಣವನ್ನು ಮತ್ತೊಂದು ಕಡೆ ಅನುಸಂಧಿಸಿ ಪ್ರಯೋಜನವಿಲ್ಲ. ಹಾಗೆ ಅನುಸಂಧಿಸಿದಲ್ಲಿ ಎಲ್ಲಾ ಗುಣಗಳನ್ನೂ ಎಲ್ಲಾ ಕಡೆಗಳಲ್ಲಿಯೂ ಅನುಸಂಧಿಸಬೇಕಾಗುವುದರಿಂದ, ವಿದ್ಯಾಭೇದವೆಂಬುದೇ ಹೋಗಿಬಿಡುವುದು—ಎಂದು ಪೂರ್ವಪಕ್ಷ.

ಅಕ್ಷರವಿದ್ಯಾ ಸಂಬಂಧವಾಗಿ ಎಲ್ಲೆಲ್ಲಿ ಯಾವ ಯಾವ ಗುಣ ನಿಷೇಧಿಸಲ್ಪಟ್ಟಿದೆಯೋ—ಅದೆಲ್ಲವನ್ನೂ ಎಲ್ಲಾ ಕಡೆಗಳಲ್ಲಿಯೂ ಅನುಸಂಧಾನ ಮಾಡಬೇಕು. ಆಯಾ ಶ್ರುತಿಯಲ್ಲಿ ಹೇಳಿದ ಅಸ್ಥೂಲತ್ವ ಮುಂತಾದುವು 'ಅಕ್ಷರ'—ವೆಂದು ಹೇಳಲ್ಪಡುವ ಬ್ರಹ್ಮದ ಗುಣಗಳು—ಅಕ್ಷರವೆಂಬುದು ಈ ಗುಣಗಳುಳ್ಳದ್ದು. ಪರಮಾತ್ಮನನ್ನು ಅನುಸಂಧಾನ ಮಾಡುವಾಗ ಅವನ ಅಸಾಧಾರಣ ಧರ್ಮಗಳಿಂದ ಅವನನ್ನು ಅನುಸಂಧಾನ ಮಾಡಬೇಕು. ಮೊದಲು "ಆನಂದಾದಯಃ ಪ್ರಧಾನಸ್ಯ,"—ಎಂಬ ಸೂತ್ರದಲ್ಲಿ ಆನಂದ ಮುಂತಾದುವು ಪರಮಾತ್ಮನ ಗುಣಗಳೆಂದು ಹೇಳಲ್ಪಟ್ಟವು. ಆ ಕೇವಲ ಆನಂದಾದಿಗಳು ಜೀವನಿಗೂ ಉಂಟು. ಆದ್ದರಿಂದ ಅವು ಮಾತ್ರ ಅವನಿಗೆ ಅಸಾಧಾರಣ ಧರ್ಮವಾಗವು. ಚೇತನನಿಗೆ ಯಾವದೊಂದು ಪ್ರಾಕೃತ ಸಂಬಂಧವೂ, ಅದಕ್ಕೆ ಅಧೀನವಾದ ಸ್ಥೂಲತ್ವಾದಿ ಗುಣಗಳೂ ಉಂಟೋ—ಅವುಗಳೊಡನೆ ಕಲೆಯದ ಆನಂದಾದಿಗಳೇ ಅವನಿಗೆ ಅಸಾಧಾರಣ ಧರ್ಮಗಳಾಗಿರುವುವು. ಆದ್ದರಿಂದ ಅವು ಎಲ್ಲಾ ಅಕ್ಷರ ವಿದ್ಯೆಗಳಲ್ಲಿಯೂ ಅನುಸಂಧೇಯ. ಇದಕ್ಕೆ ದೃಷ್ಟಾಂತ—ಜಾಮದಗ್ನ್ಯಯಾಗದಲ್ಲಿ ಉಪಸದಕ್ಕೆ ಮಂತ್ರ ಸಾಮವಾಗಿ ಅದನ್ನು

ಆ ಸಾಮಸ್ವರದೊಂದಿಗೆ ಹೇಳಬೇಕಾಗಿದ್ದಾಗ್ಯೂ, ಯಜುರ್ವೇದಿ ಅದನ್ನು ಮಾಡುವಾಗ, ಆ ಉಪಸತ್ತೆಂಬ ಗುಣದೊಂದಿಗೆ ಸಂಬಂಧಿಸಿದ ಆ ಮಂತ್ರವೆಂಬ ಗುಣವನ್ನೇ ವಿನಿಯೋಗಪಡಿಸಬೇಕು. ಅದರಂತೆ ಇಲ್ಲಿಯೂ ಕಾಣುವುದು. ಈ ನ್ಯಾಯ ಪೂರ್ವ-ಮೀಮಾಂಸಾ ಶಾಸ್ತ್ರದಲ್ಲಿಯೂ ಅಂಗೀಕರಿಸಲ್ಪಟ್ಟಿದೆ.

### ಸೂತ್ರ ೨—ಇಯದಾಮನನಾತ್

### ಸೂತ್ರಾರ್ಥ

[ಆಮನನಾತ್] = ಚೆನ್ನಾಗಿ ಧ್ಯಾನಿಸಲು ನಿಮಿತ್ತವಾಗಿ, [ಇಯತ್] = ಇಷ್ಟು ಗುಣವೇ (ಉಪಸಂಹಾರ ಮಾಡಲ್ಪಡಬೇಕು)

### ವಿವರಣೆ

ಪರಮಾತ್ಮ ಗುಣಗಳೆಲ್ಲವನ್ನೂ ಪರಮಾತ್ಮನನ್ನು ಅನುಸಂಧಾನ ಮಾಡುವ ಎಲ್ಲಾ ಕಡೆಗಳಲ್ಲಿಯೂ, ಅನುಸಂಧಿಸಬೇಕಾದಲ್ಲಿ, "ಸರ್ವಗನ್ಧಸ್ಸರ್ವರಸಃ",—(ಸಮಸ್ತ ಸುಗಂಧಗಳುಳ್ಳವನು, ಸಕಲವಾದ ರಸಗಳುಳ್ಳವನು)—ಎಂದು ಉಪಕ್ರಮಿಸಿ ಹೇಳಲ್ಪಟ್ಟ ಮತ್ತೆಯೂ ಉಳ್ಳ ಎಲ್ಲಾ ಗುಣಗಳನ್ನೂ ಅನುಸಂಧಿಸಬೇಕಲ್ಲವೆ?—ಎಂದಲ್ಲಿ, 'ಮೇಲೆ ಹೇಳಿದ ಅಸ್ಥೂಲತ್ವ ಅನಣುತ್ವ ಮುಂತಾದುವುಗಳೊಂದಿಗೆ ಕೂಡಿದ ಆನಂದಾದಿ ಗುಣಗಳನ್ನು ಬಿಟ್ಟು ಪರಮಾತ್ಮ ಸ್ವರೂಪವನ್ನು ಧ್ಯಾನಿಸಲು ಆಗದುದರಿಂದ, ಇವು ಗಳನ್ನು ಮಾತ್ರ ಅನುಸಂಧಿಸಬೇಕು. ಸತ್ಯಕಾಮತ್ವಾದಿ ಮಿಕ್ಕ ಗುಗಣಳು ಪರಮಾತ್ಮ ಸ್ವರೂಪಕ್ಕೆ ನಿರೂಪಕಗಳು ಅಲ್ಲವಾದ್ದರಿಂದ ಅವೆಲ್ಲವನ್ನೂ ಅನುಸಂಧಿಸಬೇಕಿಲ್ಲ. ಅವನ್ನು ಯಾವ ವಿದ್ಯೆಯಲ್ಲಿ ಹೇಳಿದೆಯೋ—ಅಲ್ಲಿ ಮಾತ್ರವೇ ಅನುಸಂಧಾನ ಮಾಡಬೇಕು.

## 15. ಅಂತರತ್ವಾಧಿಕರಣ

### ಸೂತ್ರ—ಅನ್ತರಾಭೂತಗ್ರಾಮವತ್ಸ್ವಾತ್ಮನೋಽನ್ಯಥಾ ಭೇದಾನುಪಪತ್ತಿ ರಿತಿ ಚೇನ್ನೋಪದೇಶವತ್

### ಸಂಗತಿ

ಹೇಯ ಪ್ರತ್ಯನೀಕತ್ವ ಬ್ರಹ್ಮಕ್ಕೆ ಅಸಾಧಾರಣವಾದರೆ. ಅಶನಾಯಾದ್ಯತೀತತ್ವ ವಿಶಿಷ್ಟವಾಗಿ ಬ್ರಹ್ಮವಿರುವುದು. ಪ್ರಾಣಿತೃತ್ವಾದಿ ವಿಶಿಷ್ಟವಾದುದೋ—ಜೀವನೇ ಆಗಿರಲಿ—ಎಂಬ ಶಂಕೆಯಿಂದ ಸಂಗತಿ. (ಅಶನಾಯ = ಹಸಿವು)

### ಸೂತ್ರಾರ್ಥ

[ಅನ್ತರಾ] = ಅಂತರಾತ್ಮ ವಿಷಯಕವಾದ (ಉಷಸ್ತಿಯ) ಪ್ರಶ್ನೆ [ಭೂತಗ್ರಾಮವತ್ಸ್ವಾತ್ಮನಃ] = ಪಂಚಭೂತಾತ್ಮಕವಾದ ಶರೀರಾದಿ ಸಂಬಂಧವುಳ್ಳ ಜೀವಾತ್ಮನ ಸಂಬಂಧಿಯು. [ಅನ್ಯಥಾ] = ಇಲ್ಲದಿದ್ದಲ್ಲಿ, [ಭೇದಾನುಪಪತ್ತಿಃ] = ಎರಡು ಸಲ ಹೇಳು ವುದಕ್ಕೆ ಪ್ರಯೋಜನ ಸಂಭವಿಸದಾದ್ದರಿಂದ, [ಇತಿ ಚೇತ್] = ಎಂದಲ್ಲಿ [ನ] = ಹಾಗೆ ಜೀವಾತ್ಮ ವಿಷಯಕ ಪ್ರಶ್ನವಲ್ಲ [ಉಪದೇಶವತ್] = (ಸದ್ವಿದ್ಯೆಯಲ್ಲಿ) ಉಪದೇಶದಂತೆ (ಇಲ್ಲಿಯೂ ಪುನರುಕ್ತಿ ಪರಿಹಾರ ಮಾಡಬೇಕು)

**ವಿವರಣೆ**

ಬೃಹದಾರಣ್ಯದಲ್ಲಿ ಉಷಸ್ತಿಯೆಂಬುವರು, "ಯ ಆತ್ಮಾಸರ್ವಾನ್ತರಃ ತನ್ಮೇ ವ್ಯಾಚಕ್ಷ್ವ"—(ಎಲ್ಲಕ್ಕೂ ಒಳಗಿರುವ ಆತ್ಮನನ್ನು ನನಗೆ ಉಪದೇಶಿಸಿ)—ಎಂದು ಕೇಳಿದ್ದಕ್ಕೆ, ಯಾಜ್ಞವಲ್ಕ್ಯರು, "ಯಃ ಪ್ರಾಣೇನ ಪ್ರಾಣಿತಿ ಸ ತ ಆತ್ಮಾ ಸರ್ವಾನ್ತರಃ ಯ ಅಪಾನೇನಾಪಾನಿತಿ ಸತ ಆತ್ಮಾ ಸರ್ವಾನ್ತರಃ"—ಎಂದೂ ಉಪಕ್ರಮಿಸಿ, 'ಉಚ್ಛ್ವಾಸ ನಿಶ್ವಾಸಾದಿಗಳಿಗೆ ಹೇತುವಾದವನೇ ನಿನ್ನ ಸರ್ವಾನ್ತರಾತ್ಮ'—ಎಂದು ಹೇಳಿದರು. ಮೊದಲು ಉಷಸ್ತಿ ಕೇಳಿದಂತೆಯೇ ಕಹೋಳರೂ ಪ್ರಶ್ನಿಸಲು, "ಯೋಽಶನಾಯಾ ಪಿಪಾಸೇ ಶೋಕಮೋಹೌ ಜರಾ ಮೃತ್ಯು ಮತ್ಯೇತಿ ಏವಂ ಹ್ಯೈತಮಾತ್ಮಾನಂ ವಿದಿತ್ವಾ"—ಎಂದು ಉಪಕ್ರಮಿಸಿ, ಹಸಿವು, ದಾಹ, ದುಃಖ, ಅಜ್ಞಾನ, ಮುಪ್ಪು, ಮರಣ ಮುಂತಾದ ವಿಕಾರಗಳಿಲ್ಲದವನು ಸರ್ವಾನ್ತರಾತ್ಮಾ, ಅವನನ್ನರಿಯಬೇಕು—ಎಂದು ಹೇಳಿದೆ. ಈ ಎರಡು ಕಡೆಗಳಲ್ಲಿಯೂ ಹೇಳಲ್ಪಟ್ಟ ವಿದ್ಯೆ ಒಂದೋ, ಬೇರೆ ಬೇರೆಯೋ—ಎಂದು ವಿಚಾರಿಸಿದಲ್ಲಿ, ಮೊದಲು ಉಚ್ಛ್ವಾಸ—ನಿಶ್ವಾಸಗಳಿಗೆ ಹೇತುವಾದವನು ಅಂತರಾತ್ಮ ನೆನ್ನುವುದರಿಂದ, ಆ ವ್ಯಾಪಾರ ಪರಮಾತ್ಮನಿಗ ಇಲ್ಲವಾದ್ದರಿಂದ, ಅದನ್ನುಳ್ಳ ಜೀವನೇ ಅಲ್ಲಿ ಹೇಳಲ್ಪಟ್ಟ ಅವನಿಗೂ ಅಂತರಾತ್ಮನಾಗಿ ಪರಮಾತ್ಮನಿರಲು ಜೀವನು ಸರ್ವಾಂತರಾತ್ಮನಾಗುವುದು ಹೇಗೆ?—ಎಂದಲ್ಲಿ, ಇಲ್ಲಿ ಸರ್ವಾಂತರಾತ್ಮಾ ಎಂಬುದಕ್ಕೆ ಶರೀರೇಂದ್ರಿಯ ಮನಃ ಪ್ರಾಣಗಳಿಗಿಂತ ಒಳಗೆ ಇರತಕ್ಕವನೆಂದೇ ಅರ್ಥವಾದ್ದರಿಂದ ಈ ವಿಶೇಷಣ ಜೀವನಿಗೂ ಕೂಡುವುದು. ಅನಂತರ, ಹಸಿವು, ದಾಹ ಮುಂತಾದ ದೋಷಗಳಿಲ್ಲದವನೇ ಆತ್ಮಾ ಎಂದು ಮೊದಲು ಹೇಳಿದ ರೀತಿಗಿಂತ ಬೇರೆ ವಿಧವಾಗಿ ಹೇಳುವುದರಿಂದ, ಇಲ್ಲಿ ಮೊದಲು ಹೇಳಿದವನಿಗಿಂತ ಬೇರೆಯಾದ ಪರಮಾತ್ಮನನ್ನು ಹೇಳುವುದು. ಎರಡು ಕಡೆಗಳಲ್ಲಿಯೂ ಒಬ್ಬನೇ ಹೇಳಲ್ಪಟ್ಟಲ್ಲಿ ಇಬ್ಬರಿಗೂ ಒಂದೇ ವಿಧವಾದ ಉತ್ತರವೇ ಹೇಳಲ್ಪಡುತ್ತಿತ್ತು—ಎಂದು ಪೂರ್ವಪಕ್ಷ.

ಎರಡು ಕಡೆಗಳಲ್ಲಿಯೂ ಉತ್ತರ ಪರಮಾತ್ಮ ವಿಷಯಕವೇ ಆಗಿರುವುದು. ಅದು ಹೇಗೆಂದರೆ;—ಮೊದಲು ಉಚ್ಛ್ವಾಸಾದಿಗಳಿಗೆ ಕಾರಣನಾದವನೇ ಆತ್ಮಾ ಎಂದು ಹೇಳಿದ ಮೇಲೆ, ''ಯಃ ಪ್ರಾಣೇನ ಪ್ರಾಣಿತಿ"—ಎಂದು ಉಚ್ಛ್ವಾಸ ನಿಶ್ವಾಸಗಳಿಗೆ ಕಾರಣಭೂತ ಪರಮಾತ್ಮಾ—ಎಂದು ಹೇಳಿದ್ದಾಗ್ಯೂ, ''ಯ ಆತ್ಮನಿ ತಿಷ್ಠನ್",—ಇತ್ಯಾದಿಯಿಂದ ಆತ್ಮವೆಂಬುದು ಪರಮಾತ್ಮನಿಗೇ ಅಸಾಧಾರಣ ವಾಚಕವಾಗಿದ್ದಾಗ್ಯೂ, ಇವೆರಡೂ ಜೀವನಿಗೂ ಉಂಟಾದ್ದರಿಂದ, ಯಾಜ್ಞವಲ್ಕ್ಯರು ನಮಗೆ ಹೀಗೆ ಪರಮಾತ್ಮನು ಉಪದೇಶಿಸಿದರೆಂದರಿಯದೆ, ಉಷಸ್ತಿಯೆಂಬುವರು ಮತ್ತೆಯೂ ಪರಮಾತ್ಮ ಸ್ವರೂಪವನ್ನು ಪ್ರಶ್ನಿಸಲು, ''ನ ದೃಷ್ಟೇಃ ದ್ರಷ್ಟಾರಂ ಪಶ್ಯೇಃ",—ಎಂದು ಉಪಕ್ರಮಿಸಿ, ತಾನು ಹಿಂದೆ ಉಪದೇಶಿಸಿದುದೆಲ್ಲವೂ ಪರಮಾತ್ಮ ವಿಷಯವೆಂದು ಇನ್ನೂ ಅನೇಕ ಅಸಾಧಾರಣ ಧರ್ಮಗಳನ್ನು ಹೇಳಿ ಮುಗಿಸಿದರು. ಎರಡನೆಯದು ಪರಮಾತ್ಮ ವಿಷಯವೆಂಬುದಕ್ಕೆ ಸಂಶಯವೇ ಇಲ್ಲ. ಹೀಗೆ ಎರಡು ಕಡೆಗಳಲ್ಲಿಯೂ, ಪ್ರತಿವಚನವು ಪರಮಾತ್ಮ ವಿಷಯಕವಾಗಿರುವುದರಿಂದಲೂ, " ಯ ಆತ್ಮಾ ಸರ್ವಾನ್ತರಃ"—ಎಂದು ಆರಂಭವೂ, ''ಅತೋಽನ್ಯದಾರ್ತಂ",—ಎಂದು ಕೊನೆಯೂ ಏಕರೂಪವಾಗಿ ಎರಡು

ಕಡೆಗಳಲ್ಲಿಯೂ ಕಾಣುವುದರಿಂದಲೂ, ಇದು ಪರಮಾತ್ಮ ವಿಷಯವೇ. ಒಂದು ಕಡೆ ಹೇಳಿರುವಂತೆಯೇ ಮತ್ತೊಂದೆಡೆಯಲ್ಲಿ ಹೇಳದಿರುವುದು—ಸದ್ವಿದ್ಯೆಯಲ್ಲಿ ಹಲವು ಸಲ ಕೇಳಿದುದಕ್ಕೆ ಒಂದೊಂದು ಸಲವೂ ಒಂದೊಂದು ವಿಧವಾಗಿ ಉತ್ತರ ಹೇಳಿದಂತೆ ಇಲ್ಲಿಯೂ ಮೊದಲು ಪರಮಾತ್ಮನಿಗೆ ಕೆಲವು ಗುಣಗಳನ್ನು ಹೇಳಿ ಮಿಕ್ಕ ಗುಣಗಳನ್ನೂ ಹೇಳುವುದಕ್ಕಾಗಿ ಮತ್ತೊಂದು ಕಡೆ ಮತ್ತೊಂದು ವಿಧವಾಗಿ ಹೇಳಿರುವುದರಿಂದ, ಇದು ಬೇರೆ ವಿದ್ಯೆಯೆನ್ನುವುದಕ್ಕೆ ಕಾರಣವಾಗಲಾರದು. ಆದ್ದರಿಂದ ಎರಡೂ ಒಂದೇ ವಿದ್ಯೆಯೆಂದು ಸಿದ್ಧಾಂತ.

## ಸೂತ್ರ ೨—ವ್ಯತಿಹಾರೋ ವಿಶಿಂಷನ್ತಿಹೀತರವತ್

### ಸೂತ್ರಾರ್ಥ

[ಇತರವತ್] = ಇತರವಾದ ಸದ್ವಿದ್ಯೆಯಲ್ಲಿಯಂತೆ, (ಎರಡು ಕಡೆಗಳಲ್ಲಿಯೂ ಒಂದೇ ಉಪಾಸ್ಯವಾಗಿ ಹೇಳಲ್ಪಡುವುದು. ಆದ್ದರಿಂದ) [ವ್ಯತಿಹಾರಃ] = ಇಲ್ಲಿ ಹೇಳಿದ ಗುಣಗಳನ್ನು ಅಲ್ಲಿಯೂ, ಅಲ್ಲಿ ಹೇಳಿದ ಗುಣಗಳನ್ನು ಇಲ್ಲಿಯೂ ಇಟ್ಟು ಕೊಳ್ಳತಕ್ಕದ್ದು. [ವಿಶಿಂಷನ್ತಿ, ಹಿ] = ಪ್ರತಿವಚನ ವಾಕ್ಯಗಳು ಇದನ್ನು ವಿವರಿಸುವು ವಲ್ಲವೆ?

### ವಿವರಣೆ

ಎರಡು ಕಡೆಗಳಲ್ಲಿಯೂ ಪರಮಾತ್ಮನೇ ಉಪಾಸ್ಯನೆಂದು ಹೇಳಿದ್ದಾಗ್ಯೂ, ಒಂದೆಡೆ ಯಲ್ಲಿ ಉಚ್ಛ್ವಾಸಾದಿ ಕಾರಣತ್ವ, ಮತ್ತೊಂದೆಡೆಯಲ್ಲಿ ಹಸಿವು ದಾಹ ಮುಂತಾದುದು ಇಲ್ಲದಿರುವುದು,—ಎಂದು ಬೇರೆ ಬೇರೆ ಗುಣಗಳನ್ನು ಉಪಾಸ್ಯವಾಗಿ ಹೇಳುವುದರಿಂದ ಬೇರೆ ಬೇರೆ ವಿದ್ಯೆಗಳೇ ಆಗಬೇಕು—ಎಂದಲ್ಲಿ,—ಉಷಸ್ತಿ "ಯತ್ಸಾಕ್ಷಾದಪರೋಕ್ಷಾತ್ ಬ್ರಹ್ಮ"—ಎಂದು ಪ್ರಶ್ನಿಸಿದರು. ಆ ಮೇಲೆ, ಕಹೋಳರು "ಯ ದೇವ ಸಾಕ್ಷಾದ ಪರೋಕ್ಷಾತ್ ಬ್ರಹ್ಮ"—ಎಂದು ಪ್ರಶ್ನಿಸಿದಾಗ, "ಯತ್ ಸಾಕ್ಷಾತ್"—ಎನ್ನದೆ. "ಯ ದೇವ ಸಾಕ್ಷಾತ್",—ಎನ್ನುವುದರಿಂದ, ಉಷಸ್ತಿ ಯಾವ ಬ್ರಹ್ಮವನ್ನು ಕೇಳಿದರೋ ಸರ್ವಾಂತರಾತ್ಮವಾದ ಆ ಬ್ರಹ್ಮವನ್ನೇ ನನಗೆ ತಿಳಿಸಬೇಕು. ಎಂದು ಅರ್ಥವಾಗಿ, ಎರಡು ವಿದ್ಯೆಯೂ ಒಂದು ಎಂಬುದನ್ನು ಸ್ಪಷ್ಟವಾಗಿ ತಿಳಿಸುವುದು. ಅಲ್ಲದೆ, ಮೊದಲು ಇದನ್ನು ಮಾಡು—ಎಂದು ವಿಧಿಸಲಿಲ್ಲ. ಅನಂತರದ ಉತ್ತರದಲ್ಲಿಯೇ, "ಬಾಲ್ಯೇನ ತಿಷ್ಠಾಸೇತ್"—(ಹೀಗೆ ಬ್ರಹ್ಮವನ್ನು ಅರಿತವನು ಬಾಲನ ಹಾಗೆ ಇರಬೇಕು.)—ಎಂದು ಹೇಳಿದೆ. ಹೀಗೆ ಒಂದು ಕಡೆಯಲ್ಲಿ ಹೇಳುವುದು ಎರಡೂ ಒಂದೇ ಎಂಬುದಕ್ಕೆ ಕಾರಣ. ಹೀಗೆ ಎರಡೂ ಒಂದಾದ ಮೇಲೆ ಅಲ್ಲಿ ಹೇಳಿದ ಗುಣಗಳನ್ನು ಇಲ್ಲಿಯೂ, ಇಲ್ಲಿ ಹೇಳಿದ ಗುಣಗಳನ್ನು ಅಲ್ಲಿಯೂ ಚಿಂತಿಸತಕ್ಕದ್ದೆಂದು ನಿಶ್ಚಯಿಸಲ್ಪಡುವುದು.

ಈ ವಿದ್ಯೆಯಲ್ಲಿ ಉಪಾಸಿಸಬೇಕಾದ ಗುಣ ಸರ್ವಾನ್ತರಾತ್ಮತ್ವ. ಹಿಂದೆ ಹೇಳಿದ ಈ ಎರಡು ಗುಣಗಳೂ ಉಪಾಸ್ಯಗಳಲ್ಲ. ಆದರೂ, ಪರಮಾತ್ಮನು ಸರ್ವ ಪ್ರಕಾರ ದಿಂದಲೂ, ಜೀವನಿಗಿಂತಲೂ, ವಿಲಕ್ಷಣನೆಂದು ಅರಿಯುವುದಕ್ಕಾಗಿ ಈ ಗುಣಗಳನ್ನು ಚಿಂತಿಸಬೇಕೆಂದು ಹೇಳಿದೆ. ಸದ್ವಿದ್ಯೆಯಲ್ಲಿ ಅಡಿಗಡಿಗೂ ಪ್ರಶ್ನವನ್ನೂ ಅದಕ್ಕೆ ಉತ್ತರ

ವನ್ನೂ ಹೇಳಿದ್ದಾಗ್ಗೂ, ಮೊದಲು ಹೇಳಿದ ಗುಣಗಳನ್ನು ಬಿಡುವುದಿಲ್ಲ. ಅದರ ಹಾಗೆ ಇಲ್ಲಿಯೂ ಕಂಡುಕೊಳ್ಳುವುದು—ಎಂದು ಸಿದ್ಧಾಂತ.

ಸೂತ್ರ ೩—**ಸೈವ ಹಿ ಸತ್ಯಾದಯಃ**

**ಸೂತ್ರಾರ್ಥ**

[ಸತ್ಯಾದಯಃ] = (ಮೊದಲು ಹೇಳಿದ) ಸತ್ಯ ಮುಂತಾದ ಗುಣಗಳು (ಎಲ್ಲಾ ಕಡೆಗಳಲ್ಲಿಯೂ ಹೇಳಲ್ಪಡುವುದರಿಂದ) [ಸಾ, ಏವ] = ಆ ಪರದೇವತೆಯೇ (ಅನಂತರದಲ್ಲಿಯ ಪರ್ಯಾಯಗಳಲ್ಲಿಯೂ ಅನುವರ್ತಿಸುವುದು.) (ಎಂದು ನಿಶ್ಚಯಿಸಲ್ಪಡುತ್ತೆ)

**ವಿವರಣೆ**

'ಸ ದೇವ ಸೋಮ್ಯೇದಮಗ್ರ ಆಸೀತ್'',—ಎಂಬ ಸದ್ವಿದ್ಯೆಯಲ್ಲಿಯೂ ಬೇರೆ ಬೇರೆ ಪ್ರಶ್ನವೂ ಬೇರೆ ಬೇರೆ ಉತ್ತರವೂ ಇರುವುದರಿಂದ, ಅಲ್ಲಿ ತಾನೇ ಒಂದೇ ವಿದ್ಯೆಯೆಂದು ಹೇಗೆ ಒಪ್ಪಿಕೊಳ್ಳುವುದು? ಎಂದಲ್ಲಿ,—''ಐತದಾತ್ಮ್ಯ ಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ'',—ಎಂದು ಮೊದಲನೇ ಪ್ರತಿವಚನದಲ್ಲಿ ಹೇಳಿದ ಸತ್ಯಾದಿ ಗುಣಗಳನ್ನೇ ಎಲ್ಲಾ ಪ್ರತಿವಚನಗಳಲ್ಲಿಯೂ ಹೇಳಿರುವುದರಿಂದ, ''ಸೇಯಂ ದೇವತೈಕ್ಷತ'',—ಎಂದು ಆರಂಭಿಸಿದ ಪರದೇವತೆಯೇ ''ಯಥಾ ಸೋಮ್ಯಮಧು ಮಧುಕೃತೋ ನಿಸ್ತಿಷ್ಠತಿ''—ಇತ್ಯಾದಿಯಾಗಿ ಹೇಳಲ್ಪಟ್ಟ ಮೇಲಣ ಪ್ರತಿವಚನಗಳಲ್ಲಿಯೂ ಪ್ರತಿಪಾದಿಸಲ್ಪಟ್ಟಿದೆಯೆಂದು ನಿಶ್ಚಯಿಸಲ್ಪಡುವುದು.—ಎಂದು ಸಮಾಧಾನ.

## 16. ಕಾಮಾದ್ಯಧಿಕರಣ

ಸೂತ್ರ—**ಕಾಮಾದೀತರತ್ರ ತತ್ರ ಚಾಯತನಾದಿಭ್ಯಃ**

**ಸಂಗತಿ**

ಪ್ರಾಣಿತೃತ್ವ—ಅಶನಾಯಾದ್ಯತೀತತ್ವ ಮುಂತಾದುವುಗಳಿಗೆ ಧರ್ಮಿಭೇದವಿಲ್ಲದ್ದರಿಂದ ಒಂದೇ ವಿದ್ಯೆಯೆಂದು ಸಮರ್ಥಿತವಾಯಿತು. ಇಲ್ಲಿಯಾದರೋ—ಗುಣಾಷ್ಟಕ—ಮತ್ತು ವಶಿತ್ವಾದಿ ಗುಣಕ್ಕೂ ಧರ್ಮಿ ಬೇರೆ ಬೇರೆಯೆಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಆಯತನಾದಿಭ್ಯಃ] = ಸ್ಥಾನ ಮುಂತಾದ ಗುಣಗಳು ಸಮಾನವಾಗಿ ಕಾಣುವುದರಿಂದ, [ಕಾಮಾದಿ] = ಸತ್ಯ ಕಾಮತ್ವ ಮುಂತಾದ ಗುಣಗಳು [ಇತರತ್ರ] = ವಾಜಸನೇಯದಲ್ಲಿಯೂ [ತತ್ರ ಚ] = ಛಾಂದೋಗ್ಯದಲ್ಲಿಯೂ (ಅನುಸಂಧಿಸಲ್ಪಡಬೇಕು)

**ವಿವರಣೆ**

ಛಾಂದೋಗ್ಯದಲ್ಲಿ, ''ಅಥಯದಿದಮಸ್ಮಿನ್ ಬ್ರಹ್ಮಪುರೇ'',—ಎಂದು ಉಪಕ್ರಮಿಸಿ ''ಏಷ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿ ಘತ್ಸೋಽಪಿಪಾಸಸ್ಸತ್ಯ ಕಾಮಸ್ಸತ್ಯ ಸಂಕಲ್ಪಃ'',—ಇತ್ಯಾದಿ ದಹರ ವಿದ್ಯೆ ಹೇಳಲ್ಪಟ್ಟಿತು. ವಾಜಸನೇಯದಲ್ಲಿಯೂ, ''ಯ ಏಷೋಽನ್ತರ್ಹೃದಯ ಆಕಾಶ ಸ್ತಸ್ಮಿನ್ ಶೇತೇ ಸರ್ವಸ್ಯವಶೀ''

...ಇತ್ಯಾದಿ ದಹರ ವಿದ್ಯೆ ಹೇಳಲ್ಪಟ್ಟಿತು. ಇವೆರಡೂ ಒಂದೋ ಬೇರೆಯೋ?—ಎಂದಲ್ಲಿ, ಛಾನ್ದೋಗ್ಯದಲ್ಲಿ "ದಹರೋಽಸ್ಮಿನ್ನನ್ತರ ಆಕಾಶಸ್ತಸ್ಮಿನ್ ಯದನ್ತಃ ತದನ್ವೇಷ್ಟವ್ಯಂ",—ಅಂದರೆ ಹೃದಯ ಕಮಲದಲ್ಲಿರುವ ಆಕಾಶವನ್ನು ಉಪಾಸಿಸಬೇಕೆಂದೂ. ವಾಜಸನೇಯದಲ್ಲಿ ಹೃದಯಾಕಾಶದಲ್ಲಿ ಮಲಗಿರುವವನನ್ನು ಉಪಾಸಿಸಬೇಕೆಂದೂ ಉಪಾಸ್ಯ ವಸ್ತುವನ್ನು ಬೇರೆ ಬೇರೆಯಾಗಿ ಹೇಳಲ್ಪಡುವುದರಿಂದ, ಎರಡು ವಿದ್ಯೆಯೂ, ಬೇರೆ ಬೇರೆಯೆಂದು ಪೂರ್ವಪಕ್ಷ.

ಎರಡು ಕಡೆಗಳಲ್ಲಿಯೂ ಉಪಾಸ್ಯ ವಸ್ತುವಿಗೆ ಹೃದಯ ಸ್ಥಾನವಾಗಿಯೂ ಅದಕ್ಕೆ ಲೋಕಮರ್ಯಾದಾಸ್ಥಾಪಕತ್ವಂ ಲೋಕಧಾರಣ ಮುಂತಾದುವನ್ನು ಗುಣಗಳನ್ನಾಗಿಯೂ, ಹೀಗೆ ಅನೇಕ ಗುಣಗಳು ಏಕರೂಪವಾಗಿ ಹೇಳಲ್ಪಟ್ಟಿರುವುದರಿಂದ, ಎರಡೂ ಒಂದು ವಿದ್ಯೆಯೇ ಆಗಬೇಕು. ಎರಡು ಕಡೆಗಳಲ್ಲಿಯೂ ಬ್ರಹ್ಮ ಪ್ರಾಪ್ತಿಯೇ ಫಲವಾಗಿ ಹೇಳಲ್ಪಟ್ಟಿದೆ. ಛಾನ್ದೋಗ್ಯದಲ್ಲಿ ಆಕಾಶವನ್ನು ಉಪಾಸಿಸಲು ಹೇಳಿದ್ದಾಗ್ಯೂ, ಅಲ್ಲಿ ಆಕಾಶವೆನ್ನಲ್ಪಟ್ಟವನು ಪರಮಾತ್ಮನೆಂದು ದಹರಾಧಿಕರಣದಲ್ಲಿ ಹೇಳಿದರು. ವಾಜಸನೇಯದಲ್ಲಿ ಆಕಾಶದಲ್ಲಿ ಮಲಗಿರುವವನನ್ನಾಗಿ ಹೇಳಲ್ಪಟ್ಟವನು ಪರಮಾತ್ಮಾ. ಅವನಿಗೆ ಆಧಾರವಾದ ಆಕಾಶ ಹೃದಯ ಕಮಲ ಮಧ್ಯವರ್ತಿಯಾದ ಭೂತಾಕಾಶವೆಂದು ಕಂಡುಕೊಳ್ಳುವುದು. ಹೀಗೆ ಉಪಾಸ್ಯ ವಸ್ತುವೂ ಫಲವೂ ಒಂದೇ ಆದ್ದರಿಂದ ಒಂದೇ ವಿದ್ಯೆಯೆಂದು ನಿಶ್ಚಯಿಸಿದ ಮೇಲೆ, ಛಾನ್ದೋಗ್ಯದಲ್ಲಿ ಹೇಳಿದ ಸತ್ಯಕಾಮತ್ವಾದಿ ಗುಣಗಳನ್ನು ಎರಡು ಕಡೆಗಳಲ್ಲಿಯೂ ಚಿಂತಿಸಬೇಕೆಂದು ಸಿದ್ಧಾನ್ತ.

### ಸೂತ್ರ ೨—**ಆದರಾದಲೋಪಃ**

**ಸೂತ್ರಾರ್ಥ**

[ಆದರಾತ್] = ಆದರದೊಡನೆ ಹೇಳುವುದರಿಂದ (ಅಲೋಪಃ] = (ಗುಣಗಳಿಗೆ) ನಿಷೇಧವಿಲ್ಲ.

**ವಿವರಣೆ**

ವಾಜಸನೇಯದಲ್ಲಿ ಬ್ರಹ್ಮಕ್ಕೆ ಹೇಳಲ್ಪಟ್ಟ ಗುಣಗಳು ವಾಸ್ತವವೆಂಬುದು ಸರಿಯಲ್ಲ. ಅಲ್ಲಿ ಹಿಂದಿನ ವಾಕ್ಯಗಳಲ್ಲಿ "ನೇಹನಾನಾಸ್ತಿ ಕಿಂಚನ"—ಮೃತ್ಯೋಸ್ಸಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ"—ಅಂದರೆ ಬ್ರಹ್ಮಕ್ಕಿಂತ ಬೇರೆ ವಸ್ತುವಿಲ್ಲ. ಹಾಗೆ ಉಂಟೆಂದು ಅರಿತವನು ಮೋಕ್ಷವನ್ನು ಹೊಂದನು. ಸಂಸಾರಿಯಾಗಿಯೇ ಇರುವನು—ಎಂದಿರುವುದರಿಂದಲೂ, ಮೇಲೆ "ನೇತಿನೇತಿ"—ಎಂದು ಬ್ರಹ್ಮವ್ಯತಿರಿಕ್ತ ವಸ್ತುವೊಂದೂ ಇಲ್ಲ ಎನ್ನುವುದರಿಂದಲೂ, ಸತ್ಯ ಕಾಮತ್ವಾದಿ ಗುಣಗಳನ್ನು ಉಪಾಸಿಸುವವನಿಗೆ ಮೋಕ್ಷ ಹೇಗೆ ಬರುವುದು? ಅದನ್ನು ಹೇಗೆ ತಾನೇ ಉಪಾಸಿಸಬಹುದು? ಆದ್ದರಿಂದ ಆ ಗುಣಗಳು ವಾಸ್ತವಗಳಲ್ಲ. ಕಲ್ಪಿತಗಳು ಎಂದಲ್ಲಿ,—ಸತ್ಯಕಾಮತ್ವಾದಿ ಗುಣಗಳು ಯಾವ ಪ್ರಮಾಣಕ್ಕೂ ವಿಷಯವಲ್ಲವಾದ್ದರಿಂದ ಜೀವನು ಈ ಶ್ರುತಿ ಹೇಳುವುದಕ್ಕೆ ಮುಂಚೆ ಆ ಗುಣಗಳನ್ನು ಅರಿಯನು. ಮೊದಲೇ ಸಂಸಾರಿಯಾಗಿರುವ ಇವನನ್ನು ಮತ್ತೆಯೂ ಆ ಗುಣಗಳನ್ನು ಕಲ್ಪಿಸಿ ಸಂಸಾರದಲ್ಲಿ, ಆಪ್ತತಮವಾದ ವೇದ

ಮುಳುಗಿಸದು. ಆ ಗುಣಗಳನ್ನು ಹಲವು ವಿಧವಾಗಿ ಹಲವೆಡೆಗಳಲ್ಲಿಯೂ ಬಹು ಆದರದೊಡನೆ ವೇದ ಹೇಳುವುದರಿಂದ ಮೇಲೆಯೂ ಕೆಳಗೂ ಇರುವ "ಗುಣವಿಲ್ಲ"— ಎಂಬ ವಾಕ್ಯಗಳಿಗೆ ಹೀಗೆ ಶ್ರುತಿ ಪ್ರಸಿದ್ಧವಾದ ಗುಣಗಳನ್ನು ಹೊರತು ಮಿಕ್ಕ ಗುಣ ಗಳಿಲ್ಲವೆಂದೂ, ಬೇರೊಂದು ವಸ್ತುವಿಲ್ಲ—ವೆಂಬುದಕ್ಕೆ ಬ್ರಹ್ಮಾತ್ಮಕವಲ್ಲದ ಬೇರೊಂದು ವಸ್ತುವಿಲ್ಲವೆಂದೂ ಅರ್ಥವನ್ನು ಹೇಳಬೇಕು. ಆದ್ದರಿಂದ ಬ್ರಹ್ಮಕ್ಕೆ ಸತ್ಯಕಾಮತ್ವಾದಿ ಗುಣಗಳು ಸ್ವಾಭಾವಿಕಗಳೇ, ಅವನ್ನು ಉಪಾಸಿಸುವವನಿಗೆ ಮೋಕ್ಷವುಂಟು. ಆದ್ದರಿಂದ ಆ ಗುಣಗಳನ್ನು ವಿದ್ಯೆಯಲ್ಲಿ ಅವಶ್ಯವಾಗಿ ಅನುಸಂಧಾನ ಮಾಡಬೇಕು—ಎಂದು ಸಿದ್ಧಾಂತ.

ಸೂತ್ರ ೩—**ಉಪಸ್ಥಿತೇಽತಸ್ತದ್ವಚನಾತ್**

**ಸೂತ್ರಾರ್ಥ**

[ಉಪಸ್ಥಿತೇ] = ಪರಮಾತ್ಮನನ್ನು ಸೇರಿದ ಮೇಲೆ [ಅತಃ] = ಈ ಪರಮಾಪ್ತ ಪ್ರಾಪ್ತಿಯಿಂದ [ತದ್ವಚನಾತ್] = ಪಿತೃ ಲೋಕಾದಿ ಪ್ರಾಪ್ತಿಯನ್ನು ಹೇಳುವುದರಿಂದ, ಅವು ಸಾಂಸಾರಿಕ ಫಲವಲ್ಲ.

**ವಿವರಣೆ**

"ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ" ಸ ಯಥಾ ಪಿತೃ ಲೋಕಕಾಮೋ ಭವತಿ",—ಇತ್ಯಾದಿಯಿಂದ ಈ ಸತ್ಯಕಾಮಾದಿ ಗುಣಗಳುಳ್ಳ ಪರಮಾತ್ಮನನ್ನು ಉಪಾಸಿಸಿದವನಿಗೆ ಸರ್ವ ಲೋಕಗಳಲ್ಲಿಯೂ ಸಂಚಾರವೂ; ಇಚ್ಛೆ ಯುಂಟಾದಲ್ಲಿ ತನಗಿಷ್ಟವಾದ ಬಂಧುಗಳೊಡನೆ ಕೂಡಿರುವಿಕೆಯೂ ಹಲವಾಗಿ ಹೇಳಲ್ಪ ಟ್ಟಿದೆ. ಇವೆಲ್ಲವೂ ಸಂಸಾರಿಗಳು ಅನುಭವಿಸತಕ್ಕ ಫಲಗಳಾದ್ದರಿಂದ, ಸಗುಣ ಬ್ರಹ್ಮವನ್ನು ಉಪಾಸಿಸುವವನಿಗೆ ಮೋಕ್ಷವಿಲ್ಲವೆಂದು ಸಿದ್ಧಿಸುವುದೆಂಬ ಶಂಕೆಗೆ ಸಮಾಧಾನ:— "ಪರಂ ಜ್ಯೋತಿರುಪಸಂಪದ್ಯಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ, ಸತತ್ರ ಪರ್ಯೇತಿ ಜಕ್ಷತ್ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ...... 'ಇತ್ಯಾದಿಯಿಂದ ಈ ಉಪಾಸನದಿಂದ ಪರಮಾತ್ಮನನ್ನು ಪಡೆದವನಿಗೆ ಆ ಪರಮಾತ್ಮ ಪ್ರಾಪ್ತಿಯೆಂಬ ಫಲದಿಂದ ಸ್ವಸ್ವರೂಪಾವಿರ್ಭಾವವನ್ನು ಪಡೆದು ಸ್ತ್ರೀಯರು, ವಾಹನಗಳು ಮುಂತಾದ ತನಗೆ ಇಷ್ಟವಾದುವುಗಳೊಂದಿಗೆ, ವಿಹರಿಸುತ್ತಾನೆಂದೂ ಇಷ್ಟವಾದ ಸ್ಥಳಗಳಿಗೆ ಹೋಗುತ್ತಾನೆಂದೂ, ಇಷ್ಟವಾದ ಬಂಧುಗಳನ್ನು ನೋಡುತ್ತಾನೆಂದೂ ಹೇಳುವುದರಿಂದ, ಇವೆಲ್ಲವೂ ಸಂಸಾರಿ ಅನುಭವಿಸಬೇಕಾದ ಫಲವಲ್ಲ. ಮುಕ್ತನು ಅನುಭವಿಸಬೇಕಾದುವುಗಳೇ ಆಗಿವೆ. ಆದ್ದರಿಂದ ಆ ಗುಣಗಳುಳ್ಳ ಪರಮಾತ್ಮನನ್ನು ಉಪಾಸಿಸಬೇಕು—ಎನ್ನುತ್ತಾರೆ.

## 17. ತನ್ನಿರ್ಧಾರಣಾಧಿಕರಣ

ಸೂತ್ರ—**ತನ್ನಿರ್ಧಾರಣಾನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬನ್ಧಃ ಫಲಂ**

**ಸಂಗತಿ**

ಸತ್ಯಕಾಮತ್ವಾದಿಗಳು ಉಪಸಂಹಾರ್ಯವೆನ್ನಲಾಯಿತು. ಈ ಪ್ರಸಂಗದಲ್ಲಿ ಉದ್ಗೀ ಥಾದ್ಯುಪಾಸನಗಳೂ ನಿಯಮೇನ ಉಪಸಂಹಾರ್ಯಗಳೆಂದು ಪ್ರಸಂಗಾತ್ ಸಂಗತಿ.

**ಸೂತ್ರಾರ್ಥ**

[ತದ್ದೃಷ್ಟೇಃ] = ಆ ನಿಯಮ ಕಾಣದುದರಿಂದ [ತನ್ನಿರ್ಧಾರಣಾನಿಯಮಃ] = ಉದ್ಗೀಥೋಪಾಸನವನ್ನು ಎಲ್ಲಾ ಕಡೆಗಳಲ್ಲಿಯೂ ಮಾಡಬೇಕು ಎಂಬ ನಿಯಮವಿಲ್ಲ [ಅಪ್ರತಿಬನ್ಧಃ] = (ಕರ್ಮಫಲ) ವಿಳಂಬವಿಲ್ಲದೆ ಉಂಟಾಗುವುದೆಂಬ [ಫಲಂ] = ಫಲವು [ಪೃಥಕ್] = (ಉದ್ಗೀಥೋಪಾಸನಕ್ಕೆ) ಪ್ರತ್ಯೇಕವಾಗಿಯೇ ಕಾಣುವುದು. [ನಿರ್ಧಾರಣ = ಧ್ಯಾನ]

**ವಿವರಣೆ**

'ಓಮಿತ್ಯೇತದಕ್ಷರಮುದ್ಗೀಥಮುಪಾಸೀತ"—ಎಂದು ಕರ್ಮಾಂಗವಾದ ಉದ್ಗೀಥೋಪಾಸನವನ್ನು ಹೇಳಿದೆ. ಈ ಉದ್ಗೀಥೋಪಾಸನವನ್ನು ಎಲ್ಲಾ ಕಡೆಗಳಲ್ಲಿಯೂ ಮಾಡಬೇಕೆ? ಅಥವಾ ಕೆಲವೆಡೆಗಳಲ್ಲಿ ಮಾಡಿ ಕೆಲವೆಡೆಗಳಲ್ಲಿ ಇದನ್ನು ಬಿಡಬಹುದೆ?—ಎಂದಲ್ಲಿ,

"ಪರ್ಣಮಯೀ ಜುಹೂರ್ಭವತಿ"—ಎಂದು ಒಂದು ಕಡೆ ಹೇಳಿದ್ದಾಗ್ಯೂ ಅದನ್ನು ಎಲ್ಲಾ ಕಡೆಗಳಲ್ಲಿಯೂ ಇಟ್ಟುಕೊಳ್ಳುವಂತೆ, ಈ ಉದ್ಗೀಥೋಪಾಸನವನ್ನೂ ಎಲ್ಲಾ ಕಡೆಗಳಲ್ಲಿಯೂ ಮಾಡಬೇಕೆಂದು ಪೂರ್ವಪಕ್ಷ.

"ತೇನೋಭೌ ಕುರುತಃ ಯಶ್ಚೈತದೇವಂ ವೇದ ಯಶ್ಚನ ವೇದ",—ಈ ಉದ್ಗೀಥೋಪಾಸನವನ್ನು ಅರಿತವನೋ ಅರಿಯದವನೋ, ಅವರಿಬ್ಬರೂ ಈ ಕರ್ಮವನ್ನು ಮಾಡತಕ್ಕವರು—ಎಂದು ಈ ಉಪಾಸನವನ್ನು ಅರಿಯದವನನ್ನೂ ಕೂಡ ಈ ಕರ್ಮವನ್ನು ಮಾಡುವಂತೆ ಹೇಳಿರುವುದರಿಂದ, ಎಲ್ಲಾ ಕಡೆಗಳಲ್ಲಿಯೂ ಈ ಉಪಾಸನವನ್ನು ಮಾಡಬೇಕೆಂಬ ನಿರ್ಬನ್ಧವಿಲ್ಲ. ಇದಕ್ಕೆ ಬೇರೆ ಫಲವನ್ನು ಹೇಳದಿದ್ದಲ್ಲಿ ಈ ಉಪಾಸನ ಕರ್ಮಕ್ಕೆ ನಿಯಮೇನ ಅಂಗವಾಗಬಹುದಾಗಿತ್ತು. "ತ ದೇವ ವೀರ್ಯವತ್ತರಂ ಭವತಿ"—ಎಂದರೆ, ಉದ್ಗೀಥೋಪಾಸನವನ್ನು ಕರ್ಮಕ್ಕೆ ಸಹಕಾರಿಯಾಗಿ ಮಾಡಿದರೆ, ಅದರಿಂದ ಆ ಕರ್ಮದಿಂದ ಉಂಟಾಗಬೇಕಾದ ಫಲ ಬೇರೆ ಕೆಲವು ಪಾಪ ವಿಶೇಷಗಳಿಂದ ತಡೆಯಲ್ಪಟ್ಟಿರುವಲ್ಲಿ, ಈ ಉಪಾಸನವು ಆ ತಡೆಯನ್ನು ನೀಗಿಸಿ ಆ ಕರ್ಮದ ಫಲವನ್ನು ಶೀಘ್ರದಲ್ಲಿ ಉಂಟು ಮಾಡುವುದೆಂದು ಪ್ರತಿಬನ್ಧಕ ನಿವೃತ್ತಿಯನ್ನು ಈ ಉಪಾಸನಕ್ಕೆ ಫಲವನ್ನಾಗಿ ಹೇಳಿರುವುದರಿಂದ, ಇದು ನಿಯಮೇನ ಕರ್ಮಾಂಗವಾಗಿ ಎಲ್ಲಾ ಕಡೆಗಳಲ್ಲಿಯೂ ಧ್ಯಾನಿಸಬೇಕೆಂಬ ನಿರ್ಬಂಧವುಳ್ಳದ್ದಲ್ಲವೆಂದು ಸಿದ್ಧಾನ್ತ.

## 18. ಪ್ರದಾನಾಧಿಕರಣ

### ಸೂತ್ರ—ಪ್ರದಾನವದೇವ ತದುಕ್ತಂ

**ಸಂಗತಿ**

ಪೂರ್ವಾಧಿಕರಣವು ಪ್ರಸಂಗಾತ್ ನಿರೂಪಿತವಾಯಿತು. ಅನಂತರ, ಅದರ ಹಿಂದಿನ ದಹರ ವಿದ್ಯಾ ವಿಷಯ ನಿರೂಪಣ ಮಾಡಲ್ಪಡುತ್ತೆ—ಯೆಂದು ಸಂಗತಿ.

**ಸೂತ್ರಾರ್ಥ**

[ಪ್ರದಾನವತ್, ಏವ] = ಹವಿರ್ದಾನದಂತೆಯೇ (ಪ್ರತ್ಯೇಕ ಪ್ರತ್ಯೇಕವಾಗಿ ಮಾಡ ಬೇಕು) [ತತ್] = ಹಾಗೆ ಬೇರೆ ಬೇರೆಯಾಗಿ ಮಾಡಬೇಕೆಂಬುದು [ಉಕ್ತಂ] = (ಸಂಕರ್ಷಾ ಧ್ಯಾಯದಲ್ಲಿ) ಹೇಳಲ್ಪಟ್ಟಿದೆ.

**ವಿವರಣೆ**

ದಹರ ವಿದ್ಯೆಯಲ್ಲಿ, "ತದ್ಯ ಇಹ ಆತ್ಮಾನ ಮನುವಿದ್ಯ ವ್ರಜನ್ತ್ಯೇತಾಂಶ್ಚ ಸತ್ಯಾನ್ ಕಾಮಾನ್".—ಎಂದು ತೊಡಗಿ, ದಹರಾಕಾಶ ಸ್ವರೂಪಿಯಾದ ಪರಮಾತ್ಮ ನನ್ನು ಉಪಾಸನ ಮಾಡ ಹೇಳಿ. ಅನಂತರ, ಅವನ ಅಪಹತ ಪಾಪ್ಮಾತ್ವಾದಿ ಗುಣಗಳನ್ನು ಪ್ರತ್ಯೇಕವಾಗಿ ಧ್ಯಾನಿಸಬೇಕೆಂದು ಹೇಳಿದೆ. ಇಲ್ಲಿ ಗುಣಗಳನ್ನು ಧ್ಯಾನಿಸುವಾಗ ಒಂದೊಂದು ಗುಣವನ್ನೂ ಧ್ಯಾನಿಸುವಾಗಲೂ, ಪರಮಾತ್ಮನನ್ನು ಆಶ್ರಯವಾಗಿ ಬೇರೆ ಬೇರೆಯಾಗಿಯೇ ಧ್ಯಾನಿಸಬೇಕೆ? ಅಥವಾ, ಎಲ್ಲಾ ಗುಣಗಳಿಗೂ ಆಶ್ರಯವಾಗಿ ಒಂದೇ ಸಲ ಧ್ಯಾನಿಸಬೇಕೆ?—ಎಂದಲ್ಲಿ, —ಗುಣಗಳು ಬೇರೆಯಾದಾಗ್ಯೂ, ಅವಕ್ಕೆ ಆಶ್ರಯ ನಾದ ಪರಮಾತ್ಮನು ಒಬ್ಬನೇ ಆದ್ದರಿಂದ, ಗುಣ ಚಿಂತನೆ ಮಾಡುವಾಗಲೆಲ್ಲಾ ಪ್ರತ್ಯೇಕ ಪ್ರತ್ಯೇಕವಾಗಿ ಧ್ಯಾನಿಸಬೇಕಾಗಿಲ್ಲ—ಎಲ್ಲಾ ಗುಣಗಳಿಗೂ ಆಶ್ರಯವಾಗಿ ಒಂದು ಸಲ ಧ್ಯಾನಿಸಿದರೇ ಸಾಕು—ಎಂದು ಪೂರ್ವಪಕ್ಷ.

ಮೊದಲು ಸ್ವರೂಪವನ್ನು ಉಪಾಸಿಸಲು ಹೇಳಿ ಅನಂತರ ಗುಣಗಳನ್ನು ಉಪಾ ಸಿಸಲು ಹೇಳಿರುವುದರಿಂದ, ಕೇವಲ ಸ್ವರೂಪಕ್ಕಿಂತ ಆಯಾ ಗುಣಗಳುಳ್ಳ ಆಕಾರ ಬೇರೆ ಬೇರೆಯಾದ್ದರಿಂದ, ಆಯಾ ಗುಣಗಳಿಗೆ ಬೇರೆ ಬೇರೆ ಆಶ್ರಯವಾಗಿಯೇ ಪರಮಾತ್ಮ ನನ್ನು ಚಿಂತಿಸಬೇಕು. ಇದಕ್ಕೆ ದೃಷ್ಟಾನ್ತ—ಕರ್ಮ ಕಾಂಡದಲ್ಲಿ, ಇಂದ್ರ ಒಬ್ಬನೇ ಆದಾಗ್ಯೂ, "ಇಂದ್ರಾಯ ರಾಜ್ಞೇ—ಇಂದ್ರಾಯಾಧಿರಾಜಾಯ —ಇಂದ್ರಾಯ, ಸ್ವರಾಜ್ಞೇ",—ಎಂದು ನಾನಾ ವಿಶೇಷಣಗಳನ್ನು ಮುಂದಿಟ್ಟು ಹೇಳುವುದರಿಂದ, ಒಬ್ಬನಿಗೇ ಹೇಗೆ ನಾನಾ ಆಹುತಿ ಕೊಡಲ್ಪಡುವುದೋ ಅದರಂತೆಯೇ ಇಲ್ಲಿಯೂ ಕಾಣತಕ್ಕದ್ದು. ಹೀಗೆ ಬೇರೆ ಬೇರೆಯಾಗಿ ಧ್ಯಾನಿಸಬೇಕೆಂಬುದನ್ನು ಸಂಕರ್ಷಾಧ್ಯಾಯದಲ್ಲಿ,"ನಾನಾ ವಾದೇವತಾ ಪೃಥಕ್ತ್ವಾತ್"—ಎಂದು ಜೈಮಿನಿಯೂ ಹೇಳಿದ್ದಾರೆ. ಆದ್ದರಿಂದ ಗುಣಗಳನ್ನು ಪೃಥಕ್ಕಾಗಿ ಚಿಂತನೆ ಮಾಡುವಾಗ ಆಯಾ ಗುಣ ವಿಶಿಷ್ಟನನ್ನಾಗಿ ದಹರಾ ಕಾಶನಾದ ಪರಮಾತ್ಮನ ಚಿಂತನೆಯನ್ನೂ ಆವೃತ್ತಿಮಾಡಬೇಕೆಂದು ಸಿದ್ಧಾನ್ತ.

## 19. ಲಿಂಗಭೂಯಸ್ತ್ವಾಧಿಕರಣ

### ಸೂತ್ರ—ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ

**ಸಂಗತಿ**

ಸಕಲ ವಿದ್ಯೆಗಳಲ್ಲಿಯೂ ನಾರಾಯಣನೇ ಉಪಾಸ್ಯನೋ ಅಥವಾ ಅವನು ದಹರವಿದ್ಯಾ ಮಾತ್ರದಲ್ಲಿಯೋ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಲಿಂಗಭೂಯಸ್ತ್ವಾತ್] = (ಈ ವಾಕ್ಯಗಳು ಸರ್ವ ಪರವಿದ್ಯೆಗಳಲ್ಲಿಯೂ ಉಪಾಸ್ಯ ನಿರ್ಧಾರಣಪರಗಳೆಂಬುದಕ್ಕೆ) ಅನೇಕ ಚಿಹ್ನೆಗಳಿರುವುದರಿಂದ, (ಇವು ಸರ್ವವಿದ್ಯೋಪಾಸ್ಯವಾದುದನ್ನು ನಿರ್ಣಯಿಸುವುದರಲ್ಲಿ ತೊಡಗಿರುವುವು) [ತತ್] = ಆ ಲಿಂಗವು [ಬಲೀಯಃ] = ಪ್ರಕರಣಕ್ಕಿಂತ ಬಲವಾದದ್ದು. [ತತ್, ಅಪಿ] = ಅದೂ (ಪೂರ್ವಮೀಮಾಂಸೆಯಲ್ಲಿ ಹೇಳಲ್ಪಟ್ಟಿದೆ) [ಇಲ್ಲಿಯ 'ಲಿಂಗ'–ಪದಕ್ಕೆ ಚಿಹ್ನ–ವೆಂದರ್ಥ. ಚಿಹ್ನಭೂತವಾಕ್ಯ ಬಹುವಾಗಿದೆಯೆಂದರ್ಥ]

**ವಿವರಣೆ**

ತೈತ್ತಿರೀಯದಲ್ಲಿ "ತತ್ರಾಪಿ ದಹ್ರಂ ಗಗನಂ ವಿಶೋಕಃ,"—ಎಂದು ದಹರ ವಿದ್ಯೆಯನ್ನು ಹೇಳಿ ತರುವಾಯ, "ಸಹಸ್ರಶೀರ್ಷಂ ದೇವಂ..."—ಎಂದು ತೊಡಗಿ "ಸೋಽಕ್ಷರಃ ಪರಮಸ್ಸ್ವರಾಟ್",—ಎಂಬಲ್ಲಿಯವರಿಗೂ ವಾಕ್ಯಗಳಿವೆ. ಈ ವಾಕ್ಯಗಳಿಂದ ನಾರಾಯಣನೇ ಉಪಾಸ್ಯ ದೇವತೆಯೆಂದು ನಿರ್ಣಯಿಸಲ್ಪಡುವುದು. ಹೀಗೆ ನಾರಾಯಣನನ್ನೇ ಹಿಂದೆ ಹೇಳಿದ ದಹರ ವಿದ್ಯೆಯಲ್ಲಿ ಮಾತ್ರ ಉಪಾಸ್ಯನೆಂದು ನಿರ್ಣಯಿಸಿತೆ? ಅಥವಾ, ಸಕಲ ವಿದ್ಯೆಗಳಲ್ಲಿಯೂ ಅವನೇ ಉಪಾಸ್ಯನೆಂದು ನಿರ್ಣಯಿಸುತ್ತದೆಯೋ? ಎಂದು ಸಂಶಯ.

ದಹರ ವಿದ್ಯೆಯನ್ನು ಹೇಳಿ ಒಡನೆ ಇದನ್ನು ಹೇಳಿರುವುದರಿಂದ ದಹರ ವಿದ್ಯೆಯಲ್ಲಿ ಮಾತ್ರವೇ ನಾರಾಯಣನನ್ನು ಉಪಾಸ್ಯನೆಂದು ಇಲ್ಲಿ ಹೇಳುತ್ತೆ—ಎಂದು ಪೂರ್ವಪಕ್ಷ.

"ಸ ಬ್ರಹ್ಮಾ ಸ ಶಿವಸ್ಸೇಂದ್ರಸ್ಸೋಽಕ್ಷರಃ ಪರಮಸ್ಸ್ವರಾಟ್"—ಎಂದು ತೊಡಗಿ, ಯಾವ ಯಾವ ವಿದ್ಯೆಯಲ್ಲಿ ಯಾವ ಯಾವ ನಾಮದಿಂದ ಉಪಾಸ್ಯವಸ್ತುವನ್ನು ಹೇಳಿದೆಯೋ, ಆಯಾ ನಾಮವನ್ನು ಇಲ್ಲಿ ಅನುವಾದ ಮಾಡಿ, ಹೀಗೆಲ್ಲಾ ಹೇಳಲ್ಪಟ್ಟವನು ನಾರಾಯಣನೇ—ಎಂದು ಹೇಳಿರುವುದರಿಂದ, ಸಕಲ ವಿದ್ಯೆಗಳಲ್ಲಿಯೂ, ನಾರಾಯಣನೇ ಆನಂದಾದಿ ಗುಣಗಳುಳ್ಳವನಾಗಿಯೂ, ಅಸ್ಥೂಲತ್ವಾದಿಗಳನ್ನುಳ್ಳವನಾಗಿಯೂ ಉಪಾಸ್ಯನೆನ್ನುವುದನ್ನೇ ನಿರ್ಣಯಿಸಿ ಹೇಳಿದೆಯೆಂದು ಅಂಗೀಕರಿಸಬೇಕು. 'ಶಾಶ್ವತಂ ಶಿವಮಚ್ಯುತಂ',—ಎಂದು ದ್ವಿತೀಯಾ ವಿಭಕ್ತಿಯಿಂದ ಹೇಳಿರುವುದರಿಂದ, ಅದರ ಅರ್ಥವಾದ "ಅವನನ್ನು"—ಎನ್ನುವುದು ಬೇರೆಡೆಯಲ್ಲಿ ಅನ್ವಯಿಸಲಾಗದುದರಿಂದ, ಮೇಲೆ ಹೇಳಿದ ದಹರವಿದ್ಯೆಯಲ್ಲಿಯೇ ಅವನನ್ನು ದಹರಾಕಾಶವಾಗಿ ಉಪಾಸಿಸಬೇಕೆಂದು ಅನ್ವಯಿಸಬೇಕಾದ್ದರಿಂದ, ಇದು ದಹರ ವಿದ್ಯೋಪಾಸ್ಯ ಪರವೇ ಆಗಬೇಕೆಂದಲ್ಲಿ,— ಮುಂದೆ,"ತತ್ತ್ವಂ ನಾರಾಯಣಃ ಪರಃ"—ಎಂದು ತೊಡಗಿ ಪ್ರಥಮಾ ವಿಭಕ್ತಿಯಾಗಿ ಹೇಳುವುದರಿಂದ ಅದಕ್ಕೆ ಅನುಗುಣವಾಗಿ ದ್ವಿತೀಯಾ ವಿಭಕ್ತಿಗೆಲ್ಲಾ ಪ್ರಥಮಾ ವಿಭಕ್ತಿಯ ಅರ್ಥವನ್ನೇ ಹೇಳಬೇಕು. ಅಲ್ಲದೆ, "ತಸ್ಮಿನ್ ಯದನ್ತಸ್ತದುಪಾಸಿತವ್ಯಂ",—(ಅದರೊಳಗೆ ಏನಿದೆಯೋ ಅದನ್ನು ಉಪಾಸಿಸಬೇಕು)—ಎಂದು ಹೇಳಿರುವುದರಿಂದ, ಅಲ್ಲಿ ದ್ವಿತೀಯಾ ವಿಭಕ್ತಿ ಅನ್ವಯಿಸಲಾರದುದರಿಂದ, ಪ್ರಥಮಾ ವಿಭಕ್ತಿಯ ಅರ್ಥವನ್ನೇ ಎಲ್ಲರೂ ಹೇಳಬೇಕು. "ಶ್ರುತಿಲಿಂಗ ವಾಕ್ಯ ಪ್ರಕರಣ ಸ್ಥಾನ ಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಂ ಅರ್ಥ ವಿಪ್ರಕರ್ಷಾತ್",—ಎಂದು ತೊಡಗಿ ಪೂರ್ವ

ಮೀಮಾಂಸೆಯಲ್ಲಿ ವಾಕ್ಯಕ್ಕಿಂತ ಲಿಂಗ ಪ್ರಬಲವೆಂದು ಹೇಳಿರುವುದರಿಂದ, ಇಲ್ಲಿ ವಾಕ್ಯದಿಂದ ಈ ವಾಕ್ಯ ದಹರ ವಿದ್ಯಾಶೇಷವೆಂದು ತೋರಿದಾಗ್ಲೂ, ಮೇಲೆ ಹೇಳಿದ ಲಿಂಗಗಳಿಂದ ಸರ್ವವಿದ್ಯಾಶೇಷವೆಂದೇ ನಿರ್ಣಯಿಸಬೇಕೆಂದು ಸಿದ್ಧಾಂತ.

## 20. ಪೂರ್ವವಿಕಲ್ಪಾಧಿಕರಣ

### ಸೂತ್ರ—ಪೂರ್ವವಿಕಲ್ಪಃಪ್ರಕರಣಾತ್ಸ್ಯಾತ್ಕ್ರಿಯಾ ಮಾನಸವತ್

### ಸಂಗತಿ

ಪ್ರಕರಣಕ್ಕಿಂತ ಬಲವತ್ತರವಾದ ವಾಕ್ಯದಿಂದ ನಾರಾಯಣಾನುವಾಕವು ಸರ್ವ ವಿದ್ಯಾಸಾಧಾರಣವೆನ್ನಲಾಯಿತು. ಇಲ್ಲಿಯಾದರೋ—ಪ್ರಕರಣಕ್ಕೆ ಬಾಧೆಯಿಲ್ಲವಾದ್ದರಿಂದ, ಮನಶ್ಚಿತಾದಿಗಳು ಕ್ರಿಯಾಮಯಕ್ರತುಗಳಲ್ಲಿ ಅನುಪ್ರವೇಶವುಳ್ಳವು—ಎಂಬ ಶಂಕೆಯಿಂದ ಸಂಗತಿ.

### ಸೂತ್ರಾರ್ಥ

[ಪ್ರಕರಣಾತ್] = (ಅಗ್ನಿ) ಪ್ರಕರಣದಿಂದ [ಪೂರ್ವವಿಕಲ್ಪಃ] = ಮೊದಲು ಹೇಳಿದ ಇಷ್ಟಕ ಚಿತಾಗ್ನಿಯೊಂದಿಗೆ ವಿಕಲ್ಪಿಸಲ್ಪಟ್ಟದಾಗಿ [ಕ್ರಿಯಾ] = (ಮನಶ್ಚಿತಾದಿಯಾದ ಅಗ್ನಿಯೂ) ಕ್ರಿಯಾಂಗವಾಗಿ [ಸ್ಯಾತ್] = ಆಗಬೇಕು. (ಇದಕ್ಕೆ ದೃಷ್ಟಾಂತ] = [ಮಾನಸವತ್) ಮನಸ್ಸಿನಿಂದ ಕಲ್ಪಿಸಲ್ಪಟ್ಟ ಪಾತ್ರಾದಿಗಳು (ದ್ವಾದಶಾಹವೆಂಬ ಯಾಗದಲ್ಲಿ ಅಂಗ) ವಾಗುವಂತೆ.

### ವಿವರಣೆ

ವಾಜಸನೇಯದಲ್ಲಿ ಅಗ್ನಿರಹಸ್ಯದಲ್ಲಿ "ಮನಶ್ಚಿತೋ ವಾಕ್ಚಿತಃ, ಪ್ರಾಣ ಚಿತಃ, ಚಕ್ಷುಶ್ಚಿತಃ ಶ್ರೋತ್ರ ಚಿತಃ ಅಗ್ನಿಚಿತಃ",—ಎಂದು ಮನಸ್ಸು. ವಾಕ್ಕು, ಪ್ರಾಣ, ಚಕ್ಷುಸ್, ಶ್ರೋತ್ರ ಮುಂತಾದುವುಗಳ ವ್ಯಾಪಾರಗಳನ್ನು ಅಗ್ನಿಯಾಗಿ ಧ್ಯಾನಿಸುವುದರಿಂದ, ಭಗವದ್ಭಕ್ತ್ಯುತ್ಪತ್ತಿಗೆ ಪ್ರತಿಬಂಧಕಗಳಾದ ಪಾಪಗಳು ನಶಿಸಿ ಮೋಕ್ಷಹೇತುವಾದ ಭಕ್ತಿ ನಿರ್ವಿಘ್ನವಾಗಿ ಉಂಟಾಗುವುದರಿಂದ ಹೀಗೆ ಧ್ಯಾನಿಸಲ್ಪಟ್ಟ ಆಯಾ ವ್ಯಾಪಾರಗಳೆಂಬ (ಮನಶ್ಚಿತಾದಿಯಾದ) ಅಗ್ನಿಗಳು ವಿದ್ಯಾಂಗಗಳೆಂದು ಸೂತ್ರಕಾರರ ತಾತ್ಪರ್ಯ.—ಈ ವಿಷಯದಲ್ಲಿ ಪೂರ್ವಪಕ್ಷಿ ಹೇಳುವುದೇನೆಂದರೆ;—ಇಲ್ಲಿ ಈ ವ್ಯಾಪಾರಗಳನ್ನು ಅಗ್ನಿಗಳೆಂದು ಹೇಳಿದೆ. ಈ ಅಗ್ನಿಗಳನ್ನು ಯಾವುದೋ ಒಂದು ಯಾಗಾದಿಗಳಲ್ಲಿ ಉಪಯೋಗಿಸಬೇಕು. ಈ ವಾಕ್ಯದಲ್ಲಿ ಯಾಗಾದಿಗಳು ಯಾವುವೂ ಹೇಳಲ್ಪಟ್ಟಿಲ್ಲ. ಇದರ ಹಿಂದಿನ ವಾಕ್ಯದಲ್ಲಿ ಇಷ್ಟಕ ಚಿತಾಗ್ನಿ ಹೇಳಲ್ಪಟ್ಟಿದೆ. ಆ ಅಗ್ನಿ ಒಂದು ಯಾಗಕ್ಕೆ ಅಂಗವಾಗಿರುವುದರಿಂದ, ಈ ಅಗ್ನಿಯೂ, ಆ ಯಾಗಕ್ಕೇ ಅಂಗವೆಂದು ಒಪ್ಪಬೇಕು. ಒಂದು ಯಾಗದಲ್ಲಿ ಎರಡು ಅಗ್ನಿಗಳು ಹೊಂದುವುವೋ?—ಎಂದಲ್ಲಿ ಇದಾಗಲಿ, ಅದಾಗಲಿ, ಎಂದು ವಿಕಲ್ಪದಿಂದ ಹೇಳಬೇಕು. ಇದು ಕ್ರಿಯಾಪ್ರಕರಣವಾದ್ದರಿಂದ ಈ ಅಗ್ನಿ ಕ್ರಿಯಾಂಗವಾಗಬೇಕೇ ಹೊರತು, ವಿದ್ಯಾಂಗವಾಗದು. ಯಾಗಕ್ಕೆ ಪುರೋಡಾಶಾದಿಗಳಂತಿರುವ ವಸ್ತುಗಳೇ ಅಂಗವಾಗಬೇಕಲ್ಲದೆ, ಮಾನಸಿಕವಾದ ಧ್ಯಾನ ಅಂಗವಾಗುವುದೋ?—ಎಂದಲ್ಲಿ, ದ್ವಾದಶಾಹವೆಂಬ ಕ್ರಿಯೆಗೆ. ಪೃಥ್ವೀ ಸಮುದ್ರ ಮುಂತಾದು

ವನ್ನು ಪಾತ್ರ, ಸೋಮರಸ ಮುಂತಾದ ಯಜ್ಞಾಂಗ ವಸ್ತುಗಳೆಂದು ಹೇಳಿದೆ. ಅದರಂತೆ ಇಲ್ಲಿಯೂ ಧ್ಯಾನವೇ ಕ್ರಿಯಾಂಗವಾಗಬಹುದೆಂದು ಪೂರ್ವಪಕ್ಷ.

### ಸೂತ್ರ ೨—**ಅತಿ ದೇಶಾ ಚ್ಚ**

**ಸೂತ್ರಾರ್ಥ**

(ಅಗ್ನಿಗಳ ಮಹಿಮೆಯನ್ನು ಮನಶ್ಚಿತಾದಿಯಾದ ಅಗ್ನಿಗಳಲ್ಲಿ) ಅತಿದೇಶ ಮಾಡಿರುವುದರಿಂದಲೂ, (ಇವು ಕ್ರಿಯಾಂಗಗಳಾಗಬಹುದು)

**ವಿವರಣೆ**

'ತೇಷಾ ಮೇಕ್ಕೈಕ ಏವ ತಾವಾನ್ ಯಾವಾನಸೌ ಪೂರ್ವಃ",—(ಮುಂಚೆ ಹೇಳಿದ ಇಷ್ಟಕ ಚಿತಾಗ್ನಿಗುಂಟಾದ ಸಾಮರ್ಥ್ಯ ಈ ಮನಶ್ಚಿತಾದಿಗಳಿಗೂ ಉಂಟು). —ಅಂದರೆ, ಅದರಿಂದ ಯಾವ ಯಾಗ ನೆರವೇರುವುದೋ ಅದು ಇವುಗಳಿಂದಲೂ ನೆರವೇರುವುವು—ಎಂದು ಹೇಳಿರುವುದರಿಂದಲೂ, ಈ ಮನಶ್ಚಿತಾದಿಯಾದ ಅಗ್ನಿಗಳು ಇಷ್ಟಕ ಚಿತಾಗ್ನಿಯಂತೆ ಯಾಗಕ್ಕೇ ಅಂಗವಾಗುವುದು—ವಿದ್ಯಾಂಗವಾಗದು—ಎಂದು ಪೂರ್ವಪಕ್ಷ.

### ಸೂತ್ರ ೩—**ವಿದ್ಯೈವತು ನಿರ್ಧಾರಣಾದ್ದರ್ಶನಾ ಚ್ಚ**

**ಸೂತ್ರಾರ್ಥ**

[ನಿರ್ಧಾರಣಾತ್] = ನಿರ್ಧಾರಣಮಾಡುವುದರಿಂದಲೂ, [ದರ್ಶನಾತ್, ಚ] = (ಈ ಪ್ರಕರಣದಲ್ಲಿ ವಿದ್ಯಾರೂಪವಾದ ಯಜ್ಞ) ಕಾಣುವುದರಿಂದಲೂ, [ವಿದ್ಯಾ ಏವ, ತು] = (ಇವು) ವಿದ್ಯಾಂಗಗಳೇ, ಕ್ರಿಯಾಂಗಗಳಲ್ಲ.

**ವಿವರಣೆ**

ಇನ್ನು ಸಿದ್ಧಾಂತವನ್ನು ಹೇಳುತ್ತಾರೆ;—"ತೇಹೈತೇ ವಿದ್ಯಾಚಿತ ಏವ"—ಆ ಮನಶ್ಚಿತಾದಿಯಾದ ಅಗ್ನಿಗಳು ವಿದ್ಯಾಸ್ವರೂಪಗಳೇ ಎಂದು ಒತ್ತಿ ಹೇಳುವುದರಿಂದ, ಇವು ವಿದ್ಯಾಂಗಗಳೇ ಆಗಬೇಕು. ಕರ್ಮಾಂಗಗಳಾಗವು. ಮನಶ್ಚಿತ್, ವಾಕ್ಚಿತ್, ಚಕ್ಷುಶ್ಚಿತ್ ಎಂದಾಗಲೇ ಮನಸ್ಸು ವಾಕ್ಕು ಮುಂತಾದ ವ್ಯಾಪಾರಗಳನ್ನು ಅಗ್ನಿಯಾಗಿ ಧ್ಯಾನಿಸಬೇಕೆಂದು ಏರ್ಪಡುವುದರಿಂದ, ಇವು ಜ್ಞಾನ ಸ್ವರೂಪಗಳೆಂಬುದು ಸಿದ್ಧವಾಗಿರುವಲ್ಲಿ, ಮತ್ತೆಯೂ "ಇವು ಜ್ಞಾನ ಸ್ವರೂಪಗಳೇ",—ಎನ್ನುವುದು—ಇವು ಜ್ಞಾನ ಸ್ವರೂಪಗಳಾಗಿದ್ದುಕೊಂಡು, ಜ್ಞಾನಕ್ಕೇ, ಅಂದರೆ, ವಿದ್ಯೆಗೇ ಅಂಗಗಳು. ಮತ್ತೊಂದಕ್ಕೆ ಅಂಗಗಳಾಗವು, ಎನ್ನುವುದಕ್ಕಾಗಿಯೇ ಹೀಗೆ ನಿರ್ಧಾರಣ ಮಾಡಿರುವುದು. ಈ ವಾಕ್ಯದಲ್ಲಿ ಯಾಗವನ್ನು ಹೇಳದುದರಿಂದ, ಮೇಲಿನ ವಾಕ್ಯದೊಂದಿಗೆ ಅನ್ವಯಿಸಿ ಕ್ರಿಯಾಂಗವೇ ಆಗಬೇಕೆಂದು ಪೂರ್ವಪಕ್ಷಿ ಹೇಳಿದುದಕ್ಕೆ ಸಮಾಧಾನ:—ಈ ವಾಕ್ಯದಲ್ಲಿಯೇ, "ತೇ ಮನಸ್ಯೈವಾಧೀಯನ್ತ ಮನಸ್ಯೈವಾ ಚೀಯನ್ತ ಮನಸ್ಯೈಮುಗ್ರಹಾ ಅಗೃಹ್ಯನ್ತ ಮನಸಾಸ್ತುವನ್ತ ಮನಸಾಶಂಸನ್ ಯತ್ಕಿಂಚ ಯಜ್ಞೇ ಕರ್ಮಕ್ರಿಯತೇ ಯತ್ಕಿಂಚ ಯಜ್ಞಿಯಂ ಕರ್ಮ ಮನಸ್ಯೈವ ತೇಷು ಮನೋಮಯೇಷು ಮನಶ್ಚಿತ್ಸು ಮನೋಮಯಮಕ್ರಿಯತ"—ಎಂದು ಇಷ್ಟಕ ಚಿತಾಗ್ನಿಯಲ್ಲಿ ಯಾವ ಯಾವ ಸೋಮ

ಪಾನ ಪಾತ್ರಾದಿಗಳೂ ಉದ್ಗಾತೃಸ್ತೋತ್ರಾದಿ ಕ್ರಿಯೆಗಳೂ ಉಳ್ಳವೋ, ಅವೆಲ್ಲವನ್ನೂ ಈ ಮನಶ್ಚಿತಾದ್ಯಗ್ನಿಗಳಲ್ಲಿ ಮಾನಸಿಕವಾಗಿ ಮಾಡಬೇಕೆಂದು ಜ್ಞಾನರೂಪವಾದ (ವಿದ್ಯಾರೂಪವಾದ) ಯಜ್ಞವನ್ನು ವಿಧಿಸಿರುವುದರಿಂದ ಇದನ್ನು ಮೇಲಿನ ವಾಕ್ಯದೊಂದಿಗೆ ಅನ್ವಯಿಸಬೇಕಾಗಿಲ್ಲ. ಆದರಿಂದ ಕ್ರಿಯಾಂಗವಾಗಿ ಸ್ವೀಕರಿಸಬೇಕಾಗಿಯೂ ಇಲ್ಲ.

## ಸೂತ್ರ ೪೯—ಶ್ರುತ್ಯಾದಿ ಬಲೀಯಸ್ತ್ವಾಚ್ಚ ನ ಬಾಧಃ

### ಸೂತ್ರಾರ್ಥ

[ಶ್ರುತ್ಯಾದಿ ಬಲೀಯಸ್ತ್ವಾತ್, ಚ] = ಶ್ರುತಿ ಮುಂತಾದವು (ಪ್ರಕರಣಕ್ಕಿಂತ) ಪ್ರಬಲವಾದ್ದರಿಂದ [ಬಾಧಃ, ನ] = (ಪ್ರಕರಣದಿಂದ) ಶ್ರುತ್ಯಾದಿಗಳಿಗೆ ಬಾಧೆಯಿಲ್ಲ.

### ವಿವರಣೆ

ಈ ವಾಕ್ಯದಲ್ಲಿ ವಿದ್ಯಾಮಯವಾದ ಯಾಗವನ್ನು ವಿಧಿಸಿಲ್ಲ. ಯಾಗವನ್ನು ವಿಧಿಸದಿದ್ದರೂ ಫಲವನ್ನು ಹೇಳಿದ್ದಲ್ಲಿ ಆ ಫಲಕ್ಕೆ ಅನುಗುಣವಾಗಿ ಯಾಗವನ್ನು ಕಲ್ಪಿಸಿಕೊಳ್ಳಬಹುದು. ಹಾಗೆ ಫಲವನ್ನೂ ಹೇಳಿಲ್ಲ. ಆದ್ದರಿಂದ ಈ ವಾಕ್ಯ ಮೇಲಿನ ವಾಕ್ಯದೊಂದಿಗೆ ಅನ್ವಯಿಸಿ ಕ್ರಿಯಾರೂಪ ಯಾಗಕ್ಕೇ ಮನಶ್ಚಿತಾದಿಗಳು ಅಂಗವಾಗುವುವು—ಎಂಬ ಶಂಕೆಗೆ ಸಮಾಧಾನ:—ಇದು ಕ್ರಿಯಾ ಪ್ರಕರಣವಾದ್ದರಿಂದ, ಈ ಮನಶ್ಚಿತಾದಿಗಳು ಕ್ರಿಯಾಮಯವಾದ ಯಾಗಕ್ಕೆ ಅಂಗಗಳೆನ್ನಬೇಕೆನ್ನುವಿರಿ. ಶ್ರುತಿ, ಲಿಂಗ, ವಾಕ್ಯವೆಂಬುವು ಇಲ್ಲದಿದ್ದಲ್ಲಿ ಆಗ್ಗೆ ಪ್ರಕರಣ ಅರ್ಥಕ್ಕೆ ನಿಶ್ಚಾಯಕವಾಗುತ್ತಿದ್ದಿತು. ಅಲ್ಲಿ ಅವು ಮೂರೂ ಇರುವುದರಿಂದ, ಪ್ರಕರಣ ದುರ್ಬಲವಾಗಿ ಅವಕ್ಕೆ ವಿರುದ್ಧವಾದ ಅರ್ಥವನ್ನು ನಿಶ್ಚಯಿಸಲು ಕಾರಣವಾಗದು. ಶ್ರುತಿಯೆಂಬುದು—"ವಿದ್ಯಾಚಿತಏವ"—(ಈ ಮನಶ್ಚಿತಾದಿಗಳು ವಿದ್ಯಾಸ್ವರೂಪಗಳೇ)—ಎಂದು ನಿರ್ಧಾರಣ ಮಾಡುವುದು. ಲಿಂಗವೆಂಬುದು—"ಸ್ವಪತೇಜಾಗ್ರತೇ ಚ"—ಎಂದು ತೊಡಗಿ, ಈ ವಿದ್ಯಾಮಯವಾದ ಯಾಗವನ್ನುಳ್ಳವನಿಗೆ ಸರ್ವಭೂತಗಳೂ, ನಿದ್ರಿಸುತ್ತಿರುವಾಗಲೂ, ಎಚ್ಚರದಿಂದಿರುವಾಗಲೂ, ಸರ್ವಕಾಲಗಳಲ್ಲಿಯೂ ಮನಶ್ಚಿತಾದಿಯಾದ ಅಗ್ನಿಗಳನ್ನು ಉಂಟುಮಾಡುವುವೆಂಬುದು. ಕ್ರಿಯಾಮಯವಾದ ಯಾಗ ಒಂದು ಕಾಲದಲ್ಲಿ ಒಬ್ಬನಿಂದ ಮಾಡಲ್ಪಡತಕ್ಕದ್ದು. ಇದು ಹಾಗಿಲ್ಲದೆ, ಸರ್ವಕಾಲಗಳಲ್ಲಿಯೂ ಸರ್ವಭೂತಗಳಿಂದಲೂ ಮಾಡಲ್ಪಡತಕ್ಕದ್ದಾದ್ದರಿಂದ, ಇದು ಕ್ರಿಯಾಮಯ ಯಜ್ಞದ ಅಂಗವಲ್ಲವೆಂದು ನಿಶ್ಚಯವಾಗುತ್ತೆ. ವಾಕ್ಯವೆಂಬುದು—ಸಮಭಿವ್ಯಾಹಾರ. ಅಂದರೆ ಮತ್ತೊಂದರೊಂದಿಗೆ ಸೇರಿದಹಾಗೆ ಹೇಳಿರುವುದು. ಇಲ್ಲಿ ವಿದ್ಯಾಮಯವಾದ ಯಾಗವುಳ್ಳವನೊಂದಿಗೆ ಈ ಅಗ್ನಿಗಳನ್ನು ಹೇಳಿರುವುದರಿಂದ ವಾಕ್ಯವೂ ಈ ಅಗ್ನಿಗಳು ವಿದ್ಯಾಮಯ ಯಾಗಕ್ಕೇ ಅಂಗಗಳೆಂದು ನಿಶ್ಚಯಿಸಲು ಕಾರಣವಾಗುತ್ತೆ.

## ಸೂತ್ರ ೫೦—ಅನುಬನ್ಧಾದಿಭ್ಯಃ ಪ್ರಜ್ಞಾನ್ತರ ಪೃಥಕ್ತ್ವವದ್ದೃಷ್ಟಶ್ಚ ತದುಕ್ತಂ

### ಸೂತ್ರಾರ್ಥ

[ಅನುಬಂಧಾದಿಭ್ಯಃ] = ಯಜ್ಞ ಸಂಬಂಧಿಯಾದ ಪಾತ್ರಾದಿಗಳಿಂದ, [ಪ್ರಜ್ಞಾನ್ತರಪೃಥಕ್ತ್ವವತ್] = ವಿದ್ಯಾಂತರಗಳು ಬೇರ್ಪಟ್ಟಿರುವಂತೆ (ಇದೂ ಕ್ರಿಯಾಮಯ

ಯಜ್ಞಕ್ಕಿಂತ ಬೇರ್ಪಟ್ಟಿರುವುದು) [ದೃಷ್ಟಃ ಚ ]=ಅನುವಾದ ವಾಕ್ಯದಲ್ಲಿ ವಿಧಿ ಕಲ್ಪಿಸಲ್ಪಟ್ಟಿದೆ. [ತದುಕ್ತಂ]= ಅದು ಪೂರ್ವಮೀಮಾಂಸೆಯಲ್ಲಿಯೂ ಹೇಳಲ್ಪಟ್ಟಿದೆ.

**ವಿವರಣೆ**

ಇಷ್ಟಕ ಚಿತಾಗ್ನಿಯ ಯಾಗಕ್ಕೆ ಯಾವುದೊಂದು ಪಾತ್ರವೋ, ಯಾವದೊಂದು ಸ್ತೋತ್ರ ಮುಂತಾದುದೋ, ಅವು ಯಾವುದನ್ನೂ ಈ ಮನಶ್ಚಿತಾಗ್ನಿಯ ಯಾಗಕ್ಕೆ ಹೇಳಿಲ್ಲ. ಬೇರೆ ವಿಧವಾದ ಪಾತ್ರ, ಸ್ತೋತ್ರ ಮುಂತಾದುವೇ ಹೇಳಲ್ಪಟ್ಟಿವೆ. ಆದ್ದರಿಂದ ಈ ಮನಶ್ಚಿತಾಗ್ನಿ ಇಷ್ಟಕ ಚಿತಾಗ್ನಿಯಂತೆ ಕ್ರಿಯಾ ರೂಪವಾದ ಕ್ರತುವಿಗೆ ಅಂಗವಲ್ಲ ವಿದ್ಯಾಮಯ ಕ್ರತುವಿಗೇ ಅಂಗವಾಗುವುದು. ಶ್ರುತಿ ಲಿಂಗಾದಿಗಳಿಂದಲೂ ಪಾತ್ರ ಸ್ತೋತ್ರಾದಿ ಅನುಬಂಧಾದಿಗಳಿಂದಲೂ, ದಹರ ವಿದ್ಯೆ, ಶಾಂಡಿಲ್ಯ ವಿದ್ಯೆ ಮುಂತಾದುವು ಕ್ರಿಯಾಮಯ ಕ್ರತುವಿಗಿಂತಲೂ ಬೇರ್ಪಟ್ಟಿರುವ ಹಾಗೆ, ಇಲ್ಲಿಯೂ ಕಾಣತಕ್ಕದ್ದು. ವಿಧಿ ವಾಕ್ಯವಲ್ಲದೆ ಅನುವಾದ ವಾಕ್ಯದಲ್ಲಿಯೂ ವಿಧಿಯನ್ನು ಕಲ್ಪಿಸುವುದುಂಟು. ಪೂರ್ವಮೀಮಾಂಸೆಯಲ್ಲಿ ಹೀಗೆ ಕೆಳಗೂ ಮೇಲೆಯೂ ಇರುವ ಬ್ರಾಹ್ಮಣಗಳು ವಿದ್ಯಾ ವಿಷಯವಾಗಿರುವಲ್ಲಿ ನಡುವೆ ಇರುವ ಈ ವಾಕ್ಯ ಮಾತ್ರ ಕ್ರಿಯಾ ವಿಷಯ ವೆಂಬುದು ಅನುಚಿತವಾದ್ದರಿಂದ, ಈ ವಾಕ್ಯವೂ ವಿದ್ಯಾಮಯ ಕ್ರತುವನ್ನೇ ಹೇಳಿದೆ ಯೆನ್ನಬೇಕು. ಆದರೆ ಇದು ವಿದ್ಯಾ ಪ್ರಕರಣವಾದ ಬೃಹದಾರಣ್ಯದಲ್ಲಿ ಹೇಳಬೇಕಾ ಗಿರುವಾಗ, ಹಾಗೆ ಹೇಳದೆ ಕ್ರಿಯಾ ಪ್ರಕರಣವಾದ ಇಲ್ಲಿ ಹೇಳಿರುವುದೇಕೆ?—ಎಂದಲ್ಲಿ, ಮಾನಸಿಕಾದಿ ಕೆಲವು ವ್ಯಾಪಾರಗಳನ್ನು ಅಗ್ನಿಗಳಾಗಿಯೂ, ಕೆಲವನ್ನು ಅವುಗಳ ಅಂಗಗಳಾಗಿಯೂ ಧ್ಯಾನಿಸಬೇಕೆಂದು ಹೇಳುವುದರಿಂದ, ಪಾತ್ರ, ಸ್ತೋತ್ರ ಮುಂತಾದ ಅಗ್ನ್ಯವಯವಗಳನ್ನು ಈ ಪ್ರಕರಣದಲ್ಲಿ ಅಧಿಕವಾಗಿ ಹೇಳಿರುವುದರಿಂದ ಇದನ್ನೂ ಇಲ್ಲಿ ಹೇಳಿದರೆ ಕೇಳುವವರಿಗೆ ಶೀಘ್ರವಾಗಿ ತಿಳಿಯುವುದೆನ್ನುವುದಕ್ಕಾಗಿ, ಇಲ್ಲಿ ಹೇಳಿದೆ. ಆದ್ದರಿಂದ ಇದು ವಿದ್ಯಾಂಗವೇ ಎಂದು ಸಿದ್ಧಾಂತ.

## 21. ಶರೀರೇಭಾವಾಧಿಕರಣ

### ಸೂತ್ರ—ಏಕ ಆತ್ಮನಶ್ಶರೀರೇ ಭಾವಾತ್

**ಸಂಗತಿ**

ಪೂರ್ವಾಧಿಕರಣ ಪ್ರಾಸಂಗಿಕ. ಆದ್ದರಿಂದ ಅದರ ಹಿಂದಿನ ಅಧಿಕರಣದೊಡನೆ ಈ ಅಧಿಕರಣಕ್ಕೆ ಸಂಗತಿ. ಅಲ್ಲಿ ಎಲ್ಲಾ ವಿದ್ಯೆಗಳಲ್ಲಿಯೂ ಭಗವಂತನೇ ಉಪಾಸ್ಯ ನೆನ್ನಲಾಯಿತು. ಹಾಗೆಯೇ ಪ್ರತ್ಯಗಾತ್ಮನೂ ಅನುಸಂಧೇಯ—ಎಂದು ಸಂಗತಿ.

**ಸೂತ್ರಾರ್ಥ**

[ಶರೀರೇ]= ಶರೀರದಲ್ಲಿರುವ (ಇರುವ ಆತ್ಮನಿಗೆ) [ಭಾವಾತ್]=(ಕರ್ತೃತ್ವಾದಿ ಧರ್ಮಗಳೇ) ಉಂಟಾಗುವುದರಿಂದ, [ಆತ್ಮನಃ]=(ಕರ್ತೃತ್ವಾದಿ ಧರ್ಮಗಳುಳ್ಳ) ಆತ್ಮನ (ಉಪಾಸನವೇ ಮಾಡಲ್ಪಡತಕ್ಕದ್ದು)—ಎಂದು [ಏಕೇ]=ಕೆಲವರು (ಹೇಳಿದ್ದಾರೆ.)

## ವಿವರಣೆ

ಹಿಂದೆ, ಲಿಂಗಭೂಯಸ್ತ್ವಾಧಿಕರಣದಲ್ಲಿ, ಸರ್ವಪರ ವಿದ್ಯೆಗಳಲ್ಲಿಯೂ ಪರಮಾತ್ಮನೇ ಉಪಾಸ್ಯನೆಂದರು. ಇಲ್ಲಿ ಭಗವಂತನಿಗೆ ಶೇಷನಾಗಿ ಸಂಸಾರ ಸಂಬಂಧವಿಲ್ಲದ ಆತ್ಮಸ್ವರೂಪವೂ ಸರ್ವ ವಿದ್ಯೆಗಳಲ್ಲಿಯೂ ಉಪಾಸ್ಯವೆನ್ನುತ್ತಾರೆ.—ಜೀವಾತ್ಮನಿಗೆ ಅಂತರಾತ್ಮನಾಗಿ ಪರಮಾತ್ಮನನ್ನು ಉಪಾಸಿಸಬೇಕೆಂದು, "ಆತ್ಮೇತಿ ತೂಪಗಚ್ಛನ್ತಿ..."—ಎಂಬ ಸೂತ್ರದಲ್ಲಿ ಮುಂದೆ ಹೇಳಲಿದ್ದಾರೆ. ಅಲ್ಲಿ ಪರಮಾತ್ಮನಿಗೆ ಶರೀರವಾದ ಜೀವನನ್ನು ಕರ್ತೃತ್ವ ಭೋಕ್ತೃತ್ವ ಮುಂತಾದ ಸಂಸಾರ ದಶೆಯಲ್ಲಿಯುಳ್ಳ ಗುಣಗಳನ್ನುಳ್ಳವನಾಗಿ ಚಿಂತಿಸಬೇಕೆ? ಅಥವಾ ಸಂಸಾರ ಸಂಬಂಧ ನೀಗಿದ ಮೇಲಿನ ಅಪಹತಪಾಪ್ಮತ್ವಾದಿ ಗುಣಗಳನ್ನುಳ್ಳವನಾಗಿ ಚಿಂತಿಸಬೇಕೆ?—ಎಂದಲ್ಲಿ, ಸಂಸಾರದಲ್ಲಿರುವಾಗ ಮಾಡಬೇಕಾದ ಉಪಾಸನದಲ್ಲಿ ಸಂಸಾರ ದಶೆಯಲ್ಲಿಯುಳ್ಳ ಕರ್ತೃತ್ವಾದಿ ಗುಣಗಳನ್ನುಳ್ಳವನನ್ನಾಗಿಯೇ ಜೀವನನ್ನು ಉಪಾಸಿಸಬೇಕು. ಯಾಗಾದಿಗಳನು ಮಾಡುವಾಗ ಆತ್ಮನನ್ನು ಕರ್ತೃವನ್ನಾಗಿ ನೆನೆದೇ ಮಾಡುವರೇ ಹೊರತು ಅದರ ಅನಂತರ ಸ್ವರ್ಗಕ್ಕೆ ಹೋಗಿ ಯಾವದೊಂದು ಗುಣವನ್ನು ಹೊಂದುವುದೋ ಆ ಗುಣವನ್ನುಳ್ಳದಾಗಿ ಅರಿತು ಮಾಡುವುದಿಲ್ಲ. ಅದರಂತೆಯೇ ಇಲ್ಲಿಯೂ ಕಂಡುಕೊಳ್ಳುವುದೆಂದು ಪೂರ್ವಪಕ್ಷ..

### ಸೂತ್ರ ೨—ವ್ಯತಿರೇಕಸ್ತದ್ಭಾವ ಭಾವಿತ್ವಾತ್ ನತೂಪಲಬ್ಧಿವತ್

## ಸೂತ್ರಾರ್ಥ

[ನತು] = ಹಾಗೆ ಹೇಳಿದ್ದು ಉಚಿತವಲ್ಲ. [ತದ್ಭಾವ ಭಾವಿತ್ವಾತ್] = ಆ ಅಪಹತಪಾಪ್ಮತ್ವಾದಿ ಸ್ವರೂಪವೇ ಪ್ರಾಪ್ಯವಾದ್ದರಿಂದ, [ಉಪಲಬ್ಧಿವತ್] = ಪರಮಾತ್ಮೋಪಾಸನದಂತೆ [ವ್ಯತಿರೇಕಃ] = (ಸಂಸಾರಾವಸ್ಥೆಗಿಂತ) ವಿಲಕ್ಷಣವಾದ ಅವಸ್ಥೆಯೊಂದಿಗೆ ಕೂಡಿದ ಜೀವಾತ್ಮನ ಸ್ವರೂಪವೇ (ಉಪಾಸ್ಯ).

'ವಚನಾನಿತ್ವಪೂರ್ವತ್ವಾತ್"—ಎಂದು ಅರ್ಥ ಅಪೂರ್ವವಾದಲ್ಲಿ ವಿಧಿಯಿಲ್ಲದಿದ್ದಾಗ್ಯೂ, ಕಲ್ಪಿಸಿಕೊಳ್ಳಬಹುದೆಂದು ಹೇಳಿದೆ. "ತೇಷಾಮೇವೈಕ ಏವತಾವಾನ್ ಯಾವಾನಸೌ ಪೂರ್ವಃ"— ಇತ್ಯಾದಿಯಿಂದ ಮುಂಚೆ ಹೇಳಿದ ಇಷ್ಟಕ ಚಿತಾಗ್ನಿಗೆ ಯಾವದೊಂದು ಫಲವೋ, ಈ ಮನಶ್ಚಿತಾಗ್ನಿಗೂ ಅದೇ ಫಲವೆಂದು ಹೇಳಿದೆ. ಹೀಗೆ ವಿಧಿಯೂ ಫಲವೂ ಈ ವಾಕ್ಯದಲ್ಲಿ ಉಂಟಾಗುವುದರಿಂದ ಇದು ಹಿಂದಿನ ವಾಕ್ಯದಲ್ಲಿ ಹೇಳಿದ್ದಕ್ಕಿಂತಲೂ ಬೇರೆಯಾಗಿರಬೇಕು—ಎನ್ನುತ್ತಾರೆ.

### ಸೂತ್ರ ೬—ನ ಸಾಮಾನ್ಯಾದಪ್ಯುಪಲಬ್ಧೇಃ ಮೃತ್ಯುವನ್ನ ಹಿ ಲೋಕಾಪತ್ತಿಃ

## ಸೂತ್ರಾರ್ಥ

[ಸಾಮಾನ್ಯಾತ್, ಅಪಿ] = ಎರಡು ಕಡೆಗಳಲ್ಲಿಯುಳ್ಳ ಯಾವುದೋ ಒಂದು ಧರ್ಮವನ್ನು ಹಿಡಿದೂ, [ಉಪಲಬ್ಧೇಃ] = (ಇದು ಅದರ ಹಾಗೆ ಎಂಬ) ಅತಿದೇಶ

ಕಾಣುವುದರಿಂದ, [ನ] = ಇಷ್ಟಕ ಚಿತಾಗ್ನಿಯಂತೆ ಕ್ರಿಯಾಮಯ ಕ್ರತು ಶೇಷವೆಂಬ ನಿಯಮವಿಲ್ಲ. (ಇದಕ್ಕೆ ಉದಾಹರಣೆ) [ಮೃತ್ಯುವತ್] = ಸೂರ್ಯಮಂಡಲವರ್ತಿ ಪುರುಷನಿಗೆ ಮೃತ್ಯುವಿನ ಅತಿದೇಶದಂತೆ [ಲೋಕಾಪತ್ತಿಃ] = ಮನುಷ್ಯಲೋಕ ಪ್ರಾಪ್ತಿ [ನ] = ಇಲ್ಲ.

**ವಿವರಣೆ**

''ಯಾವಾನ ಸೌ ಪೂರ್ವಃ'',—ಇತ್ಯಾದಿಯಿಂದ, ಮನಶ್ಚಿತಾಗ್ನಿ ಇಷ್ಟಕ ಚಿತಾಗ್ನಿಗಳಂತಿರುವುದು ಎನ್ನುವುದರಿಂದ ಇದೂ ಅದರಂತೆ ಕ್ರಿಯಾಂಗವೇ ಆಗಬೇಕೆಂದಲ್ಲಿ, ಇದು ಅದರ ಹಾಗೆ ಎಂದರೆ ಅದಕ್ಕಿರುವ ಗುಣಗಳೆಲ್ಲಾ ಇಲ್ಲಿ ಬೇಕೆಂಬ ನಿರ್ಬಂಧವಿಲ್ಲ. ಯಾವುದೋ ಒಂದು ವಿಧದಿಂದ ಸಾದೃಶ್ಯ ಉಂಟಾದಾಗ್ಲೂ, ಹಾಗೆ ಹೇಳಬಹುದು. ಮನಶ್ಚಿತಾಗ್ನಿಗೂ ಇಷ್ಟಕ ಚಿತಾಗ್ನಿಗೂ ಫಲ ಒಂದಾದ್ದರಿಂದ ಇದು ಅದರಂತೆಯೆಂದು ಹೇಳಿತೇ ಹೊರತು ಅದರಂತೆ ಕ್ರಿಯಾಂಗವೆನ್ನುವುದರಲ್ಲಿ ತಾತ್ಪರ್ಯವಿಲ್ಲ. ಇದಕ್ಕೆ ಉದಾಹರಣೆಯೇನೆಂದಲ್ಲಿ,—''ಸ ಏಷಏವ ಮೃತ್ಯುಃ ಯ ಏಷ ಏತಸ್ಮಿನ್ ಮಂಡಲೇ ಪುರುಷಃ'',—ಸೂರ್ಯಮಂಡಲ ಮಧ್ಯವರ್ತಿಯಾದ ಪುರುಷ ಮೃತ್ಯುವೆಂದು ಹೇಳಿದೆ. ಆ ಪುರುಷ ಮೃತ್ಯುವಿನಂತೆ ಸಂಹರಿಸುತ್ತಾನೆಂದೇ ಅಲ್ಲಿ ತಾತ್ಪರ್ಯ. ಅಷ್ಟಲ್ಲದೆ ಮೃತ್ಯುವಿನಂತೆ ಆ ಪುರುಷ ಮೃತ್ಯು ಲೋಕದಲ್ಲಿ ವಾಸಮಾಡುತ್ತಾನೆಂದು ತಾತ್ಪರ್ಯವಲ್ಲ. ಅದರಂತೆ ಇಲ್ಲಿಯೂ ಕಂಡುಕೊಳ್ಳುವುದು.

ಸೂತ್ರ ೭—**ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬನ್ಧಃ**

**ಸೂತ್ರಾರ್ಥ**

[ಪರೇಣ, ಚ] = ಮೇಲಿರುವ ಬ್ರಾಹ್ಮಣದಿಂದಲೂ [ಶಬ್ದಸ್ಯ] = ಮನಶ್ಚಿತ್ ಎಂಬ ಶಬ್ದಕ್ಕೆ, [ತಾದ್ವಿಧ್ಯಂ] = ವಿದ್ಯಾಮಯಕ್ರತುವಿಗೆ ಅಂಗವೆನ್ನುವುದು (ನಿಶ್ಚಿತವಾಗಿದೆ.) [ಭೂಯಸ್ತ್ವಾತ್] = (ಅಗ್ನ್ಯವಯವಗಳು ಈ ಪ್ರಕರಣದಲ್ಲಿ) ಅಧಿಕವಾಗಿರುವುದರಿಂದ, [ಅನುಬಂಧಃ] = (ಈ ಅಗ್ನಿಯೂ ಇಲ್ಲಿ) ಹೇಳಲ್ಪಟ್ಟಿದೆ.

**ವಿವರಣೆ**

''ಅಯಂವಾವ ಲೋಕಃ ಏಷೋಽಗ್ನಿಚಿತಃ'',—ಎಂದು ಮೇಲಣ ವಾಕ್ಯದಲ್ಲಿ ಮನಶ್ಚಿತಾಗ್ನಿಯಲ್ಲಿ ಲೋಕ ದೃಷ್ಟಿಯನ್ನು ಮಾಡಹೇಳಿ ಹೀಗೆ ಮಾಡುವವನು ಸದ್ಗತಿಯನ್ನು ಹೊಂದುತ್ತಾನೆ. ಆ ಗತಿ ಕೇವಲ ಕರ್ಮ ಮಾಡಿದವನಿಗೆ, ಸಂಭವಿಸದು —ಎಂದು ಕರ್ಮವನ್ನು ನಿಂದಿಸಿ, ವಿದ್ಯೆಯನ್ನು ಸ್ತುತಿಸಿದೆ. ಹಿಂದೆಯೂ ''ಯದೇತನ್ಮಂಡಲಂ ತಪತಿ'',—ಎಂದು ತೊಡಗಿ ವಿದ್ಯೆಯನ್ನು ಸ್ತುತಿಸಿದೆ.

**ವಿವರಣೆ**

ಸಂಸಾರಿಯಾದ ಆತ್ಮನನ್ನು ಉಪಾಸಿಸುವುದು ಸರಿಯಲ್ಲ. ''ಯಥಾಕ್ರತುರಸ್ಮಿನ್ ಲೋಕೇ ಪುರುಷೋ ಭವತಿ, ತಥೇತಃ ಪ್ರೇತ್ಯ ಭವತಿ'',—(ಉಪಾಸಕನು ಯಾವ ವಿಧವಾದ ಜೀವಾತ್ಮಸ್ವರೂಪವನ್ನು ಭಗವಂತನ ಶರೀರವೆಂದು ಉಪಾಸಿಸು

ತ್ತಾನೆಯೋ, ಅನಂತರ ಸಂಸಾರವನ್ನು ದಾಟಿ ಹೋಗಿ ಆ ವಿಧವಾದ ಆತ್ಮ ಸ್ವರೂಪವನ್ನೇ ಹೊಂದುವನು)—ಎಂಬುದರಿಂದ, ಅಲ್ಲಿ ಹೋಗಿ ಹೊಂದಬೇಕಾಗದ್ದು ಅಪಹತಪಾಪ್ಮ ತ್ವಾದಿ ಸ್ವರೂಪವಾದ್ದರಿಂದ ಅದನ್ನೇ ಇಲ್ಲಿಯೂ ಉಪಾಸಿಸಬೇಕು. ಮೋಕ್ಷದಶೆಯಲ್ಲಿ ಪ್ರಾಪ್ಯವಾದ ಪರಮಾತ್ಮ ಸ್ವರೂಪವನ್ನೇ ಇಲ್ಲಿಯೂ ಉಪಾಸಿಸುವಂತೆ, ಜೀವಾತ್ಮ ನನ್ನೂ ಹಾಗೆಯೇ ಉಪಾಸಿಸಬೇಕೆಂದು ಸಿದ್ಧಾಂತ.

## 22. ಅಂಗಾವಬದ್ಧಾಧಿಕರಣ

### ಸೂತ್ರ—ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಂ

**ಸಂಗತಿ**

ಎಲ್ಲೆಲ್ಲಿ ಬ್ರಹ್ಮ ಉಪಾಸ್ಯವೋ ಅಲ್ಲೆಲ್ಲ ಶುದ್ಧ ಜೀವ ಉಪಾಸ್ಯವೆನ್ನಲಾಯಿತು. ಹೀಗೆಯೇ ಯಾವ ಯಾವ ಶಾಖೆಗಳಲ್ಲಿ ಉದ್ಗೀಥದ ಅನುಪ್ರವೇಶವಿದೆಯೋ, ಅಲ್ಲೆಲ್ಲಾ ಉದ್ಗೀಥಾದ್ಯುಪಾಸನದ ಅನುಪ್ರವೇಶವಿದೆಯೇ?—ಇಲ್ಲವೆ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಅಂಗಾವಬದ್ಧಾಃ, ತು] = ಉದ್ಗೀಥಾವಯವನ್ನು ಅವಲಂಬಿಸಿರುವ ಉಪಾಸನ ಗಳು [ನ] = ಆಯಾ ಶಾಖೆಗಳಲ್ಲಿ ವ್ಯವಸ್ಥಿತಗಳಲ್ಲ. [ಪ್ರತಿವೇದಂ] = ಎಲ್ಲಾ ವೇದ ಗಳಲ್ಲಿಯೂ [ಶಾಖಾಸು] = ಎಲ್ಲಾ ಶಾಖೆಗಳಲ್ಲಿಯೂ (ಅನುಗತಗಳಾಗಿವೆ)

**ವಿವರಣೆ**

ಹಿಂದೆ ಪರಮಾತ್ಮೋಪಾಸನವನ್ನು ಹೇಳಿದ ಕಡೆಗಳಲ್ಲೆಲ್ಲಾ ಜೀವಾತ್ಮೋಪಾಸನ ಬರುವುದೆಂದರು. ಇದರಲ್ಲಿ, ಉದ್ಗೀಥ ಸಾಮವನ್ನು ಹೇಳಿದ ಕಡೆಗಳಲ್ಲೆಲ್ಲಾ ಉದ್ಗೀಥೋ ಪಾಸನ ಬರುವುದೆ? ಇಲ್ಲವೆ?—ಎಂದು ವಿಚಾರ ಮಾಡುತ್ತಾರೆ,—"ಓಮಿತ್ಯೇ ತದಕ್ಷರ ಮುದ್ಗೀಥಮುಪಾಸೀತ",—ಎಂದು ಕೆಲವೆಡೆಗಳಲ್ಲಿ ಉದ್ಗೀಥೋಪಾಸನವನ್ನು ಹೇಳಿದೆ. ಉದ್ಗೀಥಸಾಮ ಮಾತ್ರ ಎಲ್ಲಾ ಶಾಖೆಗಳಲ್ಲಿಯೂ ಹೇಳಲ್ಪಟ್ಟಿದೆ. ಒಂದು ಶಾಖೆಯಲ್ಲಿ ಹೇಳಿದ ಉದ್ಗೀಥೋಪಾಸನವನ್ನು ಎಲ್ಲಾ ಶಾಖೆಯುವರೂ ಮಾಡಬೇಕೆ? ಅಥವಾ ಎಲ್ಲಿ ಹೇಳಿದೆಯೋ ಆ ಶಾಖೆಯುವರು ಮಾತ್ರ ಮಾಡಬೇಕೆ?—ಎಂದಲ್ಲಿ, ಒಂದೊಂದು ಶಾಖೆಯಲ್ಲಿಯೂ ಬೇರೆ ಬೇರೆ ಸ್ವರವಾದ್ದರಿಂದ, ಒಂದು ಶಾಖೆಯಲ್ಲಿ ಹೇಳಿದ ಉದ್ಗೀಥ ಸಾಮ ಮತ್ತೊಂದು ಶಾಖೆಯಲ್ಲಿ ಇಲ್ಲವಾದ್ದರಿಂದ, ಯಾವ ಉದ್ಗೀಥ ಸಾಮಕ್ಕೆ ಉಪಾಸನವನ್ನು ಹೇಳಿದೆಯೋ, ಅವರು ಅದನ್ನು ಮಾಡಬೇಕು. ಇತರರು ಮಾಡಬೇಕಾಗಿಲ್ಲ.—ಎಂಬುದು ಪೂರ್ವಪಕ್ಷ.

ಸ್ವರ ಬೇರೆ ಬೇರೆಯಾದರೂ ಸ್ವರವನ್ನು ತೋರಿಸದೆ ಉದ್ಗೀಥವನ್ನು ಉಪಾಸಿಸ ಬೇಕೆಂದು ಸಾಮಾನ್ಯವಾಗಿ ಹೇಳವುದರಿಂದ. ಎಲ್ಲಾ ಶಾಖೆಗಳವರೂ ಆ ಉಪಾಸನವನ್ನು ಮಾಡಬೇಕೆಂಬುದು ಸಿದ್ಧಾಂತ.

### ಸೂತ್ರ ೨—ಮಂತ್ರಾದಿವದ್ವಾಽವಿರೋಧಃ

**ಸೂತ್ರಾರ್ಥ**

[ಮಂತ್ರಾದಿವತ್, ವಾ] = ಮಂತ್ರ ಮೊದಲಾದುದರಂತೆಯೂ [ಅವಿರೋಧಃ] = ವಿರೋಧವಿಲ್ಲ.

**ವಿವರಣೆ**

ಒಂದು ಯಜ್ಞ ಅನೇಕ ಶಾಖೆಗಳಲ್ಲಿ ಹೇಳಲ್ಪಟ್ಟಿದ್ದಾಗ್ಯೂ, ಅದಕ್ಕೆ ಬೇಕಾದ ಮಂತ್ರ, ಪಾತ್ರ ಮುಂತಾದ ಸಾಮಗ್ರಿಗಳು ಒಂದು ಕಡೆಯಲ್ಲಿ ಹೇಳಿ ಇತರ ಕಡೆಗಳಲ್ಲಿ ಹೇಳದಿರಬಹುದು. ಆದಾಗ್ಯೂ, ಹೇಳದಿರುವ ಕಡೆಗಳಲ್ಲಿಯೂ ಕೂಡ ಮತ್ತೊಂದು ಕಡೆಯಲ್ಲಿ ಹೇಳಿದ ಮಂತ್ರಾದಿಗಳಿಂದ ಆ ಯಜ್ಞವನ್ನು ನಡೆಸುತ್ತಾರೆ. ಅದರಂತೆಯೇ ಇಲ್ಲಿಯೂ ಕಂಡುಕೊಳ್ಳುವುದು.

## 23. ಭೂಮಜ್ಯಾಯಸ್ತ್ವಾಧಿಕರಣ

### ಸೂತ್ರ—ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಹಿ ದರ್ಶಯತಿ

**ಸಂಗತಿ**

ಪೂರ್ವಾಧಿಕರಣದಲ್ಲಿ ಉದ್ಗೀಥಾದಿ ಪ್ರಸ್ತುತವಾಯಿತು. ಅದರಲ್ಲಿ ಸಾಮಕ್ಕೆ ಅವಯುಭೂತವಾದ ಉದ್ಗೀಥಾದಿಗೆ ಸಮಸ್ತ ಮತ್ತು ವ್ಯಸ್ತಕ್ಕೆ ಉಪಾಸನವು ಶ್ರುತಿಸಿದ್ಧ. ಹೀಗೆ ವೈಶ್ವಾನರ ವಿದ್ಯೆಯಲ್ಲಿ ಸಮಸ್ತೋಪಾಸನ ಮಾಡತಕ್ಕದ್ದೇ ಅಥವಾ ವ್ಯಸ್ತವೆ? ಅಥವಾ ಸಮಸ್ತ ವ್ಯಸ್ತಗಳೆರಡರ ಉಪಾಸನವನ್ನೂ ಮಾಡಬೇಕೆ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಕ್ರತುವತ್] = (ದರ್ಶಪೂರ್ಣಮಾಸಾದಿ) ಯಾಗದಂತೆ [ಭೂಮ್ನಃ] = ವಿಪುಲವಾದ ಸಮಸ್ತೋಪಾಸನಕ್ಕೆ [ಜ್ಯಾಯಸ್ತ್ವಂ] = ಪ್ರಾಮಾಣಿಕತ್ವವುಂಟು [ತಥಾ, ಹಿ] = ಹಾಗೆಯೇ [ದರ್ಶಯತಿ] = ಶ್ರುತಿ ಹೇಳುತ್ತೆ.

**ವಿವರಣೆ**

ವೈಶ್ವಾನರ ವಿದ್ಯೆಯಲ್ಲಿ, "ತಸ್ಯ ದ್ಯೌರ್ಮೂರ್ಧಾ ಆದಿತ್ಯಶ್ಚಕ್ಷುಃ",—ಎಂದು ತೊಡಗಿ ಆಕಾಶ, ಆದಿತ್ಯ, ವಾಯು, ಪೃಥಿವೀ ಮುಂತಾದುವನ್ನು ಶಿರಸ್ಸು, ನೇತ್ರ ಮುಂತಾದ-ಅಂಗಗಳಾಗಿಯುಳ್ಳ ಪರಮಾತ್ಮನಾದ ವೈಶ್ವಾನರನನ್ನು ಉಪಾಸಿಸಬೇಕೆಂದು ಹೇಳಿದೆ "ದಿವ ಮೇವ ಭಗವೋ ರಾಜನ್"—ಎಂದು ತೊಡಗಿ, ಒಂದೊಂದು ಅಂಗದ ಉಪಾಸನವೂ ಅದಕ್ಕೆ ಫಲವೂ ಹೇಳಲ್ಪಟ್ಟಿವೆ. ಇಲ್ಲಿ ಒಂದೊಂದು ಅವಯುವವನ್ನೂ ಒಂಟೊಂಟಿಯಾಗಿಯೇ ಉಪಾಸಿಸಬಹುದೆ? ಎಲ್ಲಾ ಅವಯುವಗಳೊಡಗೂಡಿದ ಪರಮಾತ್ಮನನ್ನೇ ಸಮಸ್ತವಾಗಿ ಉಪಾಸಿಸಬೇಕೆ?—ಎಂದಲ್ಲಿ, ಒಂದೊಂದು ಅವಯುವವನ್ನೂ ಉಪಾಸಿಸಬೇಕೆಂದು ಒಂಟೊಂಟಿಯಾಗಿಯೇ ಹೇಳಿರುವುದರಿಂದಲೂ, ಅವೊಂದೊಂದಕ್ಕೂ ಬೇರೆ ಬೇರೆ ಫಲವನ್ನು ಹೇಳಿರುವುದರಿಂದಲೂ, ಬೇರೆ ಬೇರೆ ಅವಯುವಗಳನ್ನೂ ಉಪಾಸಿಸಬೇಕೆಂದು ಪೂರ್ವಪಕ್ಷ.

"ವೈಶ್ವಾನರಮಾತ್ಮಾನಂ ಸಂಪ್ರತ್ಯಧ್ಯೇಷಿ ತಮೇವ ನೋಬ್ರೂಹಿ",—ಎಂದು ತೊಡಗಿ, ವೈಶ್ವಾನರಾತ್ಮ ಸ್ವರೂಪವನ್ನು ಅರಿಯಬೇಕೆಂದು ಬಂದು ಅದರ ಸ್ವರೂಪ ವನ್ನು ಕೇಳಿ ಸ್ವರ್ಗ ಲೋಕಾದಿಗಳು ಆ ಆತ್ಮನಿಗೆ ಅವಯವಗಳೆಂದು ಗುರು ಉಪ ದೇಶಿಸಲು, ಅರಿತು, ಆ ವಿದ್ಯೆಗೆ ಫಲ ಸಕಲ ಲೋಕಗಳಲ್ಲಿಯೂ ಪರಮಾತ್ಮಾನುಭವ ವೆಂದು ಹೇಳಿ ತಲೆಗೆ ಕಟ್ಟಿದ್ದರಿಂದ, ಎಲ್ಲಾ ಅವಯವಗಳೊಂದಿಗೆ ಕೂಡಿದ ವೈಶ್ವಾನರನೇ ಇಲ್ಲಿ ಉಪಾಸ್ಯನಾಗಿ ಹೇಳಲ್ಪಟ್ಟ. ಒಂದೊಂದು ಅವಯವವುಳ್ಳ ಉಪಾಸನವನ್ನು ಬೇರೆ ಬೇರೆಯಾಗಿ ಹೇಳಿದ್ದು ವೈಶ್ವಾನರ ದೇವತಾಕವಾದ ದ್ವಾದಶ ಕಪಾಲವೆಂಬ ಯಾಗವನ್ನು ವಿಧಿಸಿ, ಆಮೇಲೆ, ಅದರ ಪ್ರಶಂಸಾರ್ಥವಾಗಿ ಅದರೊಳಗೆ ಅಡಗಿದ ಅಷ್ಟಾಕಪಾಲ ನವಕಪಾಲ ಮುಂತಾದುದನ್ನು ಪ್ರತ್ಯೇಕಶಃ ಹೇಳಿದ ಹಾಗೆ ಇಲ್ಲಿಯೂ ಕಂಡುಕೊಳ್ಳುವುದು. ಒಂಟೊಂಟಿಯಾಗಿ ಉಪಾಸಿಸಿದವನಿಗೆ, "ಮೂರ್ಧಾತೇ ವ್ಯಪತಿಷ್ಯತ್",—ಎಂದು ಬೇರೆ ಬೇರೆಯಾಗಿ ಅವಯವಗಳನ್ನು ಉಪಾಸಿಸಿದಲ್ಲಿ ತಲೆಸಿಡಿದು ಹೋಗುವುದು, ಕಣ್ಣು ಕುರುಡಾಗುವುದು,—ಎಂದು ಅನಿಷ್ಟ ಫಲವನ್ನು ಹೇಳುವುದರಿಂದ ವ್ಯಸ್ತವಾಗಿ ಅವಯವಗಳನ್ನು ಉಪಾಸಿಸಕೂಡದೆಂದೂ ಸಮಸ್ತವಾದ ವೈಶ್ವಾನರನನ್ನೇ ಉಪಾಸಿಸಬೇಕೆಂದೂ ಈ ಶ್ರುತಿಗೆ ತಾತ್ಪರ್ಯವೆಂದು ಸಿದ್ಧಾಂತ.

## 24. ಶಬ್ದಾದಿಭೇದಾಧಿಕರಣ

### ಸೂತ್ರ—**ನಾನಾ ಶಬ್ದಾದಿ ಭೇದಾತ್**

**ಸಂಗತಿ**

ಹಿಂದೆ ವಿದ್ಯಾವಿಶೇಷ ವಿಷಯ ಚಿಂತೆ ಮಾಡಲ್ಪಟ್ಟಿತು. ಈಗ ಸರ್ವವಿದ್ಯಾ ವಿಷಯ ಚಿಂತೆ ಮಾಡಲ್ಪಡುತ್ತೆ.

**ಸೂತ್ರಾರ್ಥ**

[ಶಬ್ದಾದಿಭೇದಾತ್] = ಶಬ್ದ ಮುಂತಾದುದು ಬೇರೆ ಬೇರೆಯಾದ್ದರಿಂದ. [ನಾನಾ] = ವಿದ್ಯೆಗಳೂ ಬೇರೆ ಬೇರೆ.

**ವಿವರಣೆ**

ಸದ್ವಿದ್ಯಾ, ದಹರವಿದ್ಯಾ, ಶಾಂಡಿಲ್ಯವಿದ್ಯಾ, ಆನಂದವಿದ್ಯಾ, ಉಪಕೋಸಲ ವಿದ್ಯಾ, ವೈಶ್ವಾನರವಿದ್ಯಾ ಎಂಬಂತೆ ಹೇಳಲ್ಪಟ್ಟ ವಿದ್ಯೆಗಳೆಲ್ಲವೂ ಒಂದೇಯೋ? ಅಥವಾ ಬೇರೆ ಬೇರೆಯೊ?—ಎಂದಲ್ಲಿ, ಇವೆಲ್ಲವುಗಳಲ್ಲಿಯೂ ಪರಮಾತ್ಮನೇ ಉಪಾಸ್ಯನಾದ್ದ ರಿಂದಲೂ, ಪರಮಾತ್ಮಪ್ರಾಪ್ತಿಯೇ ಎಲ್ಲಕ್ಕೂ ಫಲವಾದ್ದರಿಂದಲೂ, ಇವುಗಳಿಗೆ ಭೇದವಿಲ್ಲವೆಂದು ಪೂರ್ವಪಕ್ಷ.

"ಜುಹೋತಿ" 'ಯಜತಿ' "ದದಾತಿ"—ಎಂಬ ಶಬ್ದ ಭೇದದಿಂದ ಯಾಗಗಳು ಭೇದಿಸುವಂತೆ ಇಲ್ಲಿಯೂ "ವೇದ, ಉಪಾಸ್ತೇ'—ಇತ್ಯಾದಿ ಶಬ್ದಗಳು ಬೇರೆ ಬೇರೆ ಇರುವುದರಿಂದಲೂ, ಒಂದೊಂದಕ್ಕೂ, ಜಗತ್ಕಾರಣತ್ವ. ಅಪಹತಪಾಪ್ಮತ್ವ—ಎಂಬ ಬೇರೆ ಬೇರೆ ಗುಣಗಳನ್ನೇ ಉಪಾಸ್ಯವಾಗಿ ಹೇಳುವುದರಿಂದಲೂ, ಸದ್ವಿದ್ಯಾ, ದಹರ ವಿದ್ಯಾ,—ಇತ್ಯಾದಿ ನಾಮ ಭೇದಗಳುಂಟಾಗಿರುವುದರಿಂದಲೂ, ಈ ವಿದ್ಯೆಗಳು ಒಂದಲ್ಲ

ಬೇರೆ ಬೇರೆ ವಿದ್ಯೆಗಳೆಂದು ಸಿದ್ಧಾಂತ. ''ಶಬ್ದಾದಿ''—ಎಂದು ಸೂತ್ರದಲ್ಲಿರುವ ''ಆದಿ''—ಪದದಲ್ಲಿ ಅಭ್ಯಾಸ, ಸಂಖ್ಯಾ, ಗುಣ, ಪ್ರಕ್ರಿಯಾ, ನಾಮಧೇಯ, ಸಂಯೋಗಗಳೆಂದೆಲ್ಲವೂ ಸೇರಿವೆ.

[''ನಾನಾ ಶಬ್ದಾದಿ ಭೇದಾತ್''—ಎಂದು ವಿದ್ಯಾ ಭೇದವನ್ನು ಹೇಳುವ ಸೂತ್ರಕಾರರು. ಶಬ್ದಭೇದವೆಂಬುದನ್ನೇ ಮೊದಲು ಹೇಳಿದ್ದಾರೆ. ಶಬ್ದಭೇದವೆಂಬುದು ಚೋದನಾಭೇದ. ಚೋದನಾಭೇದವೆಂದರೆ—ಯಜತಿ, ದದಾತಿ, ಜುಹೋತಿ—ಎಂದು ಅಪರ್ಯಾಯ ಶಬ್ದದಿಂದ ಭಾವಾರ್ಥವಿಧಿ. ಇಲ್ಲಿ ಶ್ರೀಭಾಷ್ಯಕಾರರಿಂದಲೇ ವೇದನ—ಉಪಾಸನ—ಧ್ಯಾನಾದಿ ಶಬ್ದಗಳಿಗೆ ಪರ್ಯಾಯತ್ವ ಉಪಪಾದಿತವಾಗಿದೆ. ಹೀಗೆ ಶಬ್ದ ಸಾಮ್ಯವೇ ಇರುವಾಗ, ''ಶಬ್ದಾದಿ ಭೇದಾತ್''—ಎಂದೇಕೆ ಸೂತ್ರಕಾರರು ಹೇಳಿದ್ದಾರೆ?—ಎಂದಲ್ಲಿ,

''ಶಬ್ದಾನ್ತರೇ ಕರ್ಮಭೇದಃ''—ಎಂಬಲ್ಲಿ ಹೇಳಿದಂತಹ ಮುಖ್ಯ ಶಬ್ದಭೇದ ಇಲ್ಲಿ ಇಲ್ಲದಿದ್ದಾಗ್ಯೂ, ರೂಪಭೇದ ಪ್ರಯುಕ್ತ ಶಬ್ದಭೇದ ಇಲ್ಲಿ ಉಪಚರಿತವಾಗಿದೆ. ಏಕೆಂದರೆ,—ರೂಪಭೇದವನ್ನು ದೃಢಪಡಿಸುವುದಕ್ಕಾಗಿ. ರೂಪಭೇದವೇ ಇಲ್ಲಿ ಸಾಕ್ಷಾತ್ತಾಗಿ ಭೇದಕ. ಆ ರೂಪಭೇದವು ಧಾತ್ವರ್ಥ ವಿಶೇಷಕವಾಗಿರುವುದರಿಂದ ಧಾತ್ವರ್ಥವನ್ನೂ ಭೇದಿಸುತ್ತದೆ. ಹೀಗೆ ಭಿನ್ನಾರ್ಥವಾಚಕವಾದ್ದರಿಂದ ಶಬ್ದಭೇದವೂ ಸಿದ್ಧಿಸುತ್ತೆಯಾದ್ದರಿಂದ ಇಲ್ಲಿಯ ಶಬ್ದಭೇದೋಕ್ತಿ ಔಪಚಾರಿಕ. ಈ ಔಪಚಾರಿಕೋಕ್ತಿಗೆ ಪ್ರಯೋಜನ— ವೃಷಾವಾದಿಗಳು ಅವಿಧೇಯವಾದ ಜ್ಞಾನವೇ ಮೋಕ್ಷಸಾಧನ ವೆನ್ನುವರಷ್ಟೆ! ಅದನ್ನು ನಿರಸನ ಮಾಡಿ ಜ್ಞಾನ ವಿಧೇಯವೆಂದು ಸಿದ್ಧಿಗೊಳಿಸುವು ದಕ್ಕಾಗಿ ವಿದ್ಯಾವಿಷಯ ಚೋದನಾ ಭೇದವಿದೆಯೆಂದು ಇಲ್ಲಿ ಹೇಳಲ್ಪಟ್ಟಿದೆ. ಆಯಾ ಪ್ರಕರಣಗಳಲ್ಲಿರುವ ವೇದನ—ಧ್ಯಾನ—ಉಪಾಸನಾದಿ ಶಬ್ದಗಳು ಪರ್ಯಾಯವಾಗಿರಲಿ, ಅಥವಾ ಛಾಗಪಶುನ್ಯಾಯದಿಂದ ವಿಶೇಷದಲ್ಲಿ ಪರ್ಯವಸಾಯಿಯಾಗಿರಲಿ, ಅಥವಾ ಶ್ರೀ ಭಾಷ್ಯೋಕ್ತ ಕ್ರಮದಿಂದ ಭಿನ್ನ ಪ್ರಕರಣಗಳಲ್ಲಿ ವೇದ್ಯ ಭೇದ ನಿಬಂಧನದಿಂದ ವೇದನ ಭೇದ ಪ್ರತಿಪಾದಕವಾಗಿರುವುದರಿಂದ ಅಪರ್ಯಾಯವಾದರೂ ಆಗಿರಲಿ,—ಸರ್ವಥಾ ಜ್ಞಾನವು ವಿಧೇಯವೆಂಬುದೇ ಇಲ್ಲಿಯ ಅಭಿಸಂಧಿ. ವಿಧೇಯವಾದ ಜ್ಞಾನದಿಂದಲೇ ಅಪವರ್ಗಸಿದ್ಧಿಯೆಂಬ ಅರ್ಥವನ್ನು ಪ್ರತಿಪಾದಿಸಲು ಚೋದನಾ ಭೇದವನ್ನು ಹೇಳಿದೆ.

ಶ್ರೀ ಭಾಷ್ಯಕಾರರ ಅಭಿಪ್ರಾಯದ ಪ್ರಕಾರ ಮುಖ್ಯವೇ ಆದ ಶಬ್ದಭೇದದ ಉಪಪಾದನೆ ಹೇಗೆಂದರೆ;—''ನಾನಾ ಶಬ್ದಾದಿ ಭೇದಾತ್'',—ಎಂದು ಸೂತ್ರಕಾರರು ಶಬ್ದ ಭೇದವನ್ನೇ ಮೊದಲು ಹೇಳಿದ್ದಾರೆ. ಆ ಶಬ್ದ ಭೇದವೆಂಬುದು ಅಪರ್ಯಾಯವಾದ ಶಬ್ದಗಳನ್ನು ಹೇಳುವುದು. ಅದು ಬ್ರಹ್ಮವಿದ್ಯೆಗೆ ಸಾಕ್ಷಾತ್ತಾಗಿಯೇ ಇದೆ:—ಹೇಗೆಂದರೆ —ಮೋಕ್ಷೋಪಾಯವೆಂದು ವಿಹಿತವಾದ ಭಕ್ತಿ—ಪ್ರಪತ್ತಿಗಳಿಗೆ ವಿಧಿಭೇದ ದೃಷ್ಟ ವಾಗಿದೆ. ''ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವಮಾಂ''—ಎಂಬುದಾಗಿ ಭಕ್ತಿ ವಿಧಿ ಕಾಣಿಸುತ್ತದೆ. ''ಮಾಮೇಕಂ ಶರಣಂ ವ್ರಜ''—ಎಂಬುದಾಗಿ ಪ್ರಪತ್ತಿವಿಧಿ

ಕಾಣಿಸುತ್ತದೆ. ಪ್ರಪತ್ತಿಯೇ ಶರಣಾಗತಿ. ''ಅನನ್ಯ ಸಾಧ್ಯೇ''...—ಎಂಬ ಶ್ಲೋಕ ಪ್ರಪತ್ತಿ ಲಕ್ಷಣ ವಾಕ್ಯ. ಅದರಲ್ಲಿ ''ಪ್ರಪತ್ತಿಶ್ಶರಣಾಗತಿಃ''—ಎಂದು ಪರ್ಯಾಯವಾಗಿ ಉಪದೇಶಿಸಿದೆ. ಇದರಿಂದ ಸಾಕ್ಷಾತ್ತಾಗಿಯೇ ಭಕ್ತಿ—ಪ್ರಪತ್ತಿಗಳಿಗೆ ವಿಧಿ ಭೇದ ಕಂಡುಬರುತ್ತಯಾದ್ದರಿಂದ ಇಲ್ಲಿ ಶಬ್ದಭೇದ ಮುಖ್ಯವೇ ಎಂದು ಶ್ರೀ ಭಾಷ್ಯಕಾರರ ಅಭಿಪ್ರಾಯ. ಯಜತಿ—ದದಾತಿ—ಜುಹೋತಿ—ಇತ್ಯಾದಿ ಶಬ್ದಭೇದದಂತೆ ಇಲ್ಲಿಯೂ ಶಬ್ದಭೇದ ಸಾಕ್ಷಾತ್ತಾಗಿಯೇ ಶಬ್ದಭೇದದ ಲಕ್ಷ್ಣಣದಿಂದ ಕೂಡಿದೆ.

ಹೀಗೆ ಚೋದನಾ ಭೇದವನ್ನು ಹೇಳಿ—ಇದರಂತೆಯೇ ಆಖ್ಯಾಭೇದ, ರೂಪಭೇದ, ಸಂಯೋಗಭೇದವೂ ಇದೆಯೆನ್ನುತ್ತಾರೆ. ಭಕ್ತಿಯಲ್ಲಿ—ಸದ್ವಿದ್ಯಾ, ದಹರವಿದ್ಯಾ,—ಇತ್ಯಾದಿ ಆಖ್ಯೆಯಷ್ಟೆ ! ಆಖ್ಯೆ = ನಾಮಧೇಯ. ಪ್ರಪತ್ತಿಯಲ್ಲಿಯಾದರೋ—ನಿಕ್ಷೇಪ, ನ್ಯಾಸ, ಶರಣಾಗತಿ—ಇತ್ಯಾದಿ. ಭಕ್ತಿರೂಪವಾದ ದಹರ ವಿದ್ಯೆ ಮುಂತಾದುದರಲ್ಲಿ ಅಪಹತ ಪಾಪ್ಮತ್ವಾದಿಕವೇ ರೂಪ, ಪ್ರಪತ್ತಿಯಲ್ಲಿಯಾದರೋ—ಭಗವಂತನ ಉಪಾಯಾಂತರ ಸ್ಥಾನಾಪತ್ತಿಯೇ ರೂಪ. ಇದೇ ನಿರಪೇಕ್ಷೋಪಾಯವೆಂದು ಅಧ್ಯಾತ್ಮ ವೇತ್ತರು ಹೇಳುತ್ತಾರೆ. ಭಕ್ತಿಯೋಗನಿಷ್ಠರಿಗಾದರೋ ಸದ್ವಿದ್ಯಾ ದಹರವಿದ್ಯಾದಿ ಸಾಪೇಕ್ಷ ನಾಗಿ ಪರಮಪುರುಷ ಫಲವನ್ನು ಕೊಡುತ್ತಾನೆ. ಪ್ರಪತ್ತಿಯಲ್ಲಿಯಾದರೋ,—ಉಪಾಯಾಂತರ ಸ್ಥಾನದಲ್ಲಿ ತಾನೇ ಇದ್ದು ಅವನು ಮುಕ್ತಿರೂಪ ಫಲವನ್ನು ಕೊಡುತ್ತಾನೆ. ಸದ್ವಿದ್ಯಾಗಳಿಗೆ ಆಖ್ಯಾಭೇದ, ರೂಪಭೇದ, ಸಂಯೋಗಭೇದದಿಂದ ಭೇದ ಉಪಪನ್ನ ವಾಗುತ್ತೆ. ಹಾಗೆಯೇ ಪ್ರಪತ್ತಿಗೂ ಭೇದವೆಂದರ್ಥ. ಸಕಲ ಬ್ರಹ್ಮವಿದ್ಯೆಗಳಿಗೂ ಮೋಕ್ಷವೇ ಪ್ರಧಾನ ಫಲವಾದಾಗ್ಯೂ, ಅನುಸಂಧಾನ ವೇಳೆಯಲ್ಲಿ ಅಯಾ ರೂಪ ವಿಶಿಷ್ಟನಾದ ಭಗವಂತನ ಅನುಭವರೂಪ ಫಲವೈಷಮ್ಯವಿದೆಯೆಂದು ಭಾವ. ಅಧಿಕಾರ ಭೇದದಿಂದಲೂ ರೂಪಭೇದವಿದೆಯೆನ್ನುತ್ತಾರೆ;—ಭಕ್ತಿಯೋಗ ನಿಷ್ಠನಿಗೆ ಪ್ರಾರಬ್ಧ ಕರ್ಮಾವಸಾನದಲ್ಲಿ ಮೋಕ್ಷವಷ್ಟೆ! ಪ್ರಪತ್ತಿನಿಷ್ಠನಿಗಾದರೋ—ಪ್ರಾರಬ್ಧ ಕರ್ಮವನ್ನೂ ಪ್ರಪತ್ತಿಯೇ ನಾಶಗೊಳಿಸಬಲ್ಲದು. ಆದ್ದರಿಂದ ಇದು ಶೀಘ್ರ ಫಲಪ್ರದ. ಹೀಗೆ ಫಲಾಧಿಕ್ಯದಿಂದ, ಭಕ್ತಿಗಿಂತ ಪ್ರಪತ್ತಿಯೇ ಮೇಲಾದದ್ದು. ಇನ್ನೂ, ಸೂತ್ರದ 'ಆದಿ'—ಶಬ್ದದಿಂದ, ''ಭಕ್ತ್ಯಾದೌಶಕ್ತ್ಯಭಾವಃ...''—ಎಂಬ ಆಚಾರ್ಯ ಗ್ರಂಥೋಕ್ತ ವಾದ ಹದಿನೈದು ವಿಧವಾದ ಅಧಿಕಾರ ವಿಶೇಷಗಳೂ ಉಕ್ತವಾಗುತ್ತವೆ. ಶಕ್ತಿ, ಜ್ಞಾನ–ಜನ್ಮ–ವಿಳಂಬ ಕ್ಷಮತ್ವ–ಎಂಬ ಇವಿಷ್ಟೂ ಭಕ್ತಿಯೋಗಕ್ಕೆ ಅಧಿಕಾರ. ಇವುಗಳಲ್ಲಿ ಒಂದೊಂದು ಇಲ್ಲದಿರೋಣ. ಎರಡೆರಡು ಇಲ್ಲದಿರೋಣ. ಮೂರು ಮೂರು ಇಲ್ಲ ದಿರೋಣ, ಎಲ್ಲವೂ ಇಲ್ಲದಿರೋಣ—ಹೀಗೆ ಪ್ರಪದನಾಧಿಕಾರ ಹದಿನೈದು ಸಿದ್ಧಿಸುತ್ತೆ.

ಬ್ರಹ್ಮವಿದ್ಯೆಗಳಿಗೆ ಬ್ರಹ್ಮಪ್ರಾಪ್ತಿಯೇ ಫಲವಲ್ಲವೆ? ಅದು ಒಂದೇ ಆಗ ಬೇಕಲ್ಲವೆ?—ಎಂದಲ್ಲಿ, ಫಲ ಭೇದಕ್ಕೆ ದೃಷ್ಟಾಂತ—ಮಧುವಿದ್ಯೆಯಲ್ಲಿ ವಸುಪದ ಪ್ರಾಪ್ತಿಪೂರ್ವಕ ಪರಮಾತ್ಮ ಪ್ರಾಪ್ತಿ ಫಲ. ದಹರವಿದ್ಯಾದಿಯಲ್ಲಿ ಪರಮಾತ್ಮ ಪ್ರಾಪ್ತಿಯೇ ಫಲ. ಆದ್ದರಿಂದ ಸಂಯೋಗಭೇದದಿಂದಲೂ, ನ್ಯಾಸೋಪಾಸನಗಳಿಗೆ ಭೇದ ಸಿದ್ಧ.]

## 25. ವಿಕಲ್ಪಾಧಿಕರಣ

### ಸೂತ್ರ—ವಿಕಲ್ಪೋऽವಿಶಿಷ್ಟಫಲತ್ವಾತ್
[ನ್ಯಾಸ ವಿದ್ಯಾ]

**ಸಂಗತಿ**

ಬ್ರಹ್ಮಪ್ರಾಪ್ತಿಯನ್ನೇ ಫಲವಾಗಿಯುಳ್ಳ ಸದ್ವಿದ್ಯಾ—ದಹರ ವಿದ್ಯಾದಿಗಳು ನಾನಾ ವಿಧಿಗಳೆನ್ನಲಾಯಿತು. ಈಗ ಇವುಗಳನ್ನು ಸಮುಚ್ಚಯವಾಗಿಯೂ ಅನುಷ್ಠಿಸಬಹುದೆ? ಅಥವಾ ಯಾವುದಾದರೂ ಒಂದು ಮಾತ್ರವೆಂದು ವಿಕಲ್ಪವೆ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಅವಿಶಿಷ್ಟ ಫಲತ್ವಾತ್] = ಸಮಾನ ಫಲವನ್ನು ಉಳ್ಳದ್ದಾದ್ದರಿಂದ, [ವಿಕಲ್ಪಃ] = ಒಂದೊಂದೇ ಸಾಕು.

**ವಿವರಣೆ**

ಒಬ್ಬ ಪುರುಷನಿಗೆ ಮೋಕ್ಷಾರ್ಥವಾಗಿ ಸದ್ವಿದ್ಯೆ, ದಹರ ವಿದ್ಯೆ—ಎಂದಿತ್ಯಾದಿಯಾಗಿ ಹೇಳಲ್ಪಟ್ಟ ವಿದ್ಯೆಗಳಲ್ಲಿ ಒಂದೊಂದನ್ನೇ ಉಪಾಸಿಸಿದಲ್ಲಿ ಸಾಕೆ? ಅಥವಾ ಹೆಚ್ಚಾಗಿಯೂ ಉಪಾಸಿಸಬೇಕೆ?—ಎಂದಲ್ಲಿ, ಅಗ್ನಿಹೋತ್ರ, ದರ್ಶಪೂರ್ಣಮಾಸ ಮುಂತಾದ ಕ್ರಿಯೆಗಳಲ್ಲಿ ಒಂದೊಂದೇ ಸ್ವರ್ಗವನ್ನು ಕೊಡತಕ್ಕದ್ದಾದಾಗ್ಯೂ, ಸ್ವರ್ಗದಲ್ಲಿ ಅಧಿಕ ಸುಖವನ್ನು ಕೋರುವ ಪುರುಷನು ಎರಡು—ಮೂರು ಯಜ್ಞಗಳನ್ನು ಮಾಡಬಹುದೆಂದು ಹೇಳಿರುವಂತೆ, ಮೋಕ್ಷದಲ್ಲಿ ಅಧಿಕ ಸುಖವನ್ನು ಬಯಸುವವನು ಒಂದಕ್ಕಿಂತ ಹೆಚ್ಚು ವಿದ್ಯೆಗಳನ್ನೂ ಉಪಾಸಿಸಬೇಕು—ಎಂದು ಪೂರ್ವಪಕ್ಷ.

ಅಗ್ನಿಹೋತ್ರಾದಿಗಳಿಂದ ಉಂಟಾಗುವ ಸ್ವರ್ಗಸುಖ ಅಲ್ಪವಾದ್ದರಿಂದ ಅದನ್ನು ಅಧಿಕವಾಗಿ ಬೇಕೆನ್ನುವವನು ಎರಡು—ಮೂರು ಕ್ರಿಯೆಗಳನ್ನು ಮಾಡಬೇಕು. ಸದ್ವಿದ್ಯಾದಿಗಳಲ್ಲಿ ಉಂಟಾಗುವ ಮೋಕ್ಷಸುಖ ಹಾಗೆ ಅಲ್ಪವಾಗಿಲ್ಲದೆ ಒಂದೊದು ವಿದ್ಯೆಯಿಂದ ಉಂಟಾಗುವ ಅಪರಿಚ್ಛಿನ್ನ ಬ್ರಹ್ಮಾನುಭವವೆಂಬ ಮೋಕ್ಷ ಫಲ ಅದಕ್ಕೆ ಮೇಲೆ ಏನೂ ಇಲ್ಲ ಎನ್ನುವಂತೆ ಅನಂತವಾದ್ದರಿಂದ ಮೇಲ್ಮೇಲೆ ಅಪೇಕ್ಷಿಸುವುದಕ್ಕೆ ಆಸ್ಪದವಿಲ್ಲವಾಗಿ, ಎರಡನೆಯ ವಿದ್ಯೆಯನ್ನು ಉಪಾಸಿಸಕೂಡದು. ಒಂದೊಂದೇ ಸಾಕು—ಎಂದು ಸಿದ್ಧಾಂತ.

### ಸೂತ್ರ ೨—ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ ನವಾ ಪೂರ್ವಹೇತ್ವಭಾವಾತ್

**ಸೂತ್ರಾರ್ಥ**

[ಕಾಮ್ಯಾಃ, ತು] = ಕಾಮ್ಯವಾದ ಪುತ್ರ, ಪಶು, ಧನ, ಸ್ವರ್ಗಾದಿಗಳನ್ನು ಫಲವಾಗಿಯುಳ್ಳ ವಿದ್ಯೆಗಳು [ಪೂರ್ವಹೇತ್ವ ಭಾವಾತ್] = ಮೊದಲು ಹೇಳಿದ ಕಾರಣವಿಲ್ಲದ್ದರಿಂದ, [ಯಥಾ ಕಾಮಂ] = ಇಷ್ಟದಂತೆ [ಸಮುಚ್ಚೀಯೇರನ್] = ಸೇರಿಸಿಯೂ ಉಪಾಸಿಸಬಹುದು. [ನ, ವಾ] = ಬಿಡಲೂಬಹುದು.

**ವಿವರಣೆ**

ಬ್ರಹ್ಮಪ್ರಾಪ್ತಿಯಿಲ್ಲದ ಇತರ ಕಾಮ್ಯ ಪುರುಷಾರ್ಥಗಳನ್ನು ಕೊಡತಕ್ಕ ಪ್ರಾಣ ವಿದ್ಯೆ ನಾಮ ವಿದ್ಯೆ ಮುಂತಾದುವುಗಳಲ್ಲಿ ಅಧಿಕ ಫಲ ಕೋರುವವನು ಎರಡು—ಮೂರ ನ್ನು ಸೇರಿಸಿಯೂ ಉಪಾಸಿಸಬಹುದು. ಅಧಿಕ ಫಲದಲ್ಲಿ ಅಪೇಕ್ಷೆಯಿಲ್ಲದೆ ಲಭಿಸಿದಷ್ಟರಲ್ಲಿ ತೃಪ್ತಿಗೊಂಡವನಿಗೆ ಒಂದು ವಿದ್ಯೆಯೇ ಸಾಕು. ಈ ವಿದ್ಯೆಗಳಿಗೆ ಮೊದಲಿನಂತೆ ಅಪರಿಚ್ಛಿನ್ನ ಫಲ ದೊರಕುವುದಿಲ್ಲವಾದ್ದರಿಂದ ಹೀಗೆ ಸ್ವೀಕರಿಸುವುದು ಯುಕ್ತವೆಂದು ಸಿದ್ಧಾಂತ.

[ಪರಬ್ರಹ್ಮ ಪ್ರಾಪ್ತ್ಯರ್ಥವಾದ ಬ್ರಹ್ಮ ವಿದ್ಯೆಗಳನ್ನೂ ಒಬ್ಬನೇ ಸಮುಚ್ಚಯ ದಿಂದ ಏಕೆ ಅನುಷ್ಠಿಸಬಾರದು? ಒಬ್ಬೊಬ್ಬ ಅಧಿಕಾರಿಗೆ ಒಂದೊಂದೇ ವಿದ್ಯೆಯೇ ಉಪಾಸ್ಯವೆಂದು ನಿಯಮವೆಲ್ಲಿದೆ?—ಎಂದಲ್ಲಿ, "ಸ ಖಲ್ವೇವಂ ವರ್ತಯನ್ ಯಾವ ದಾಯುಷಂ..."—ಎಂದು ಬ್ರಹ್ಮವಿದ್ಯೆ ಆ ಶರೀರ ಬಿಡುವವರೆಗೂ ಅನುಷ್ಠೇಯವೆಂದಿದೆ. ಇದು ಎಲ್ಲಾ ಬ್ರಹ್ಮ ವಿದ್ಯೆಗಳಿಗೂ ಸಮಾನ. ಅದರಿಂದ, ಒಂದೇ ಬ್ರಹ್ಮವಿದ್ಯೆಯಿಂದ ಸಕಲ ಕಾಲವೂ ವ್ಯಾಪ್ತವಾದ್ದರಿಂದ ಬ್ರಹ್ಮ ವಿದ್ಯಾಂತರಾನುಷ್ಠಾನಕ್ಕೆ ಕಾಲಾಭಾವ ದಿಂದ, ಸಮುಚ್ಚಯ ಕೂಡುವುದಿಲ್ಲ. ಅಲ್ಲದೆ, ಅನೇಕ ಬ್ರಹ್ಮ ವಿದ್ಯೆಗಳನ್ನು ಒಬ್ಬ ಅಧಿಕಾರಿ ಅನುಷ್ಠಿಸಬಹುದೆಂದು ಅಂಗೀಕರಿಸುವಲ್ಲಿ, ಅಯಾ ವಿದ್ಯಾನಿಯತವಾದ ವಿಲಕ್ಷಣ ಸ್ಥಾನ—ಗುಣ—ರೂಪಾದಿ ವಿಶಿಷ್ಟ ಬ್ರಹ್ಮಧ್ಯಾನದಿಂದ ಜನಿತವಾದ ವಾಸನಾ ಸ್ಥೈರ್ಯ ಅಂತಹ ವಿದ್ಯಾಂತರ ವಾಸನೆಯಿಂದ ಪರಸ್ಪರ ಬಾಧಿತವಾಗುವುದು. 'ತಸ್ಮಾ ತ್ಸರ್ವೇಷು ಕಾಲೇಷು ಮಾಮನುಸ್ಮರಯುದ್ಧ ಚ",—ಎಂಬ ವಿಧಿ ಸರ್ವ ವಿದ್ಯೆಗಳಿಗೂ ತುಲ್ಯವಾದ್ದರಿಂದ, ಸದಾ ಅದರ ಚಿಂತನೆಯಿಂದ ವಾಸನಾಸ್ಥೈರ್ಯ ಆವಶ್ಯಕ. ಕರ್ಮಾ ನುಷ್ಠಾನದಲ್ಲಿಯಾದರೋ ಕ್ರಿಯಾರೂಪವಾದ್ದರಿಂದ ಹೀಗೆ ವಿರೋಧವಿಲ್ಲ. ಮೋಕ್ಷ ಶಾಸ್ತ್ರದಲ್ಲಿ ಸಂಪೂರ್ಣ ಬ್ರಹ್ಮಲಬ್ಧಿಗಾಗಿ, ಅಂದರೆ ನಿಖಿಲ ವಿಭೂತಿ ಗುಣ ವಿಗ್ರಹ ವಿಶಿಷ್ಟ ಬ್ರಹ್ಮಲಾಭರೂಪ ಮೋಕ್ಷಕ್ಕಾಗಿ, ತೈಲಧಾರಾವದವಿಚ್ಛಿನ್ನಸ್ಮೃತಿ ಸಂತಾನರೂಪ ಸಮಾಧಿಯಲ್ಲಿ ಪುರುಷಾಯುಷವೆಲ್ಲವೂ ಏಕವಿದ್ಯಾವ್ಯಾಪ್ತವಾದ್ದರಿಂದ ವಿದ್ಯಾಂತರಾನು ಷ್ಠಾನಕ್ಕೆ ಕಾಲವೇ ಸಂಭವಿಸದು. ಆದ್ದರಿಂದ, ವಿದ್ಯೆಗಳಿಗೆಲ್ಲವೂ ಫಲತೌಲ್ಯವಿದೆ–ಅಲ್ಲದೆ, ಮರಣಪರ್ಯಂತವೂ ವಿಧೇಯವಾದುವುಗಳಿಗೆ ಒಟ್ಟಿನ ಅನುಷ್ಠಾನಕ್ಕೆ ವಿರೋಧ ವಿರುವುದರಿಂದ, ಪ್ರತ್ಯೇಕಾನುಷ್ಠಾನದ ಲಾಭಕ್ಕಾಗಿ ಪ್ರತ್ಯೇಕವಾಗಿಯೇ ಸಾ ಧನತ್ವವೆಂದು, ವಿಕಲ್ಪವೇ ಸ್ವೀಕಾರ್ಯ. ಸಮುಚ್ಚಯ ಕೂಡದೆಂದು ಭಾವ.]

## 26. ಯಥಾಶ್ರಯ ಭಾವಾಧಿಕರಣ

### ಸೂತ್ರ—ಅಂಗೇಷು ಯಥಾಶ್ರಯ ಭಾವಃ

**ಸಂಗತಿ**

ಪೂರ್ವಸೂತ್ರದಲ್ಲಿರುವ 'ಯಥಾಕಾಮಂ'—ಎಂಬ ಪದದಿಂದ ಸಂಗತಿ ಅಭಿ ಪ್ರೇತವಾಗಿದೆ. ಯಥಾ ಕಾಮಂ (ಇಷ್ಟದಂತೆ) ವಿಕಲ್ಪ ಅಥವಾ ಸಮುಚ್ಚಯವಾಗ ಬಹುದೆನ್ನಲಾಯಿತು. ಹಾಗೆಯೇ ಉದ್ಗೀಥಾದಿ ವಿದ್ಯೆ ಯಥಾಕಾಮಂ ಉಪಾದೇ ಯವೇ ಇಲ್ಲವೇ?—ಎಂಬ ಸಂಶಯದಿಂದ ಸಂಗತಿ.

**ಸೂತ್ರಾರ್ಥ**

[ಅಂಗೇಷು]=ಕ್ರತುವಿಗೆ ಅಂಗವಾದ ಉದ್ಗೀಥಾದಿ ಸಾಮಗಳಲ್ಲಿ, ಆಶ್ರಿತಗಳಾದ ಉಪಾಸನಗಳಿಗೆ [ಯಥಾಶ್ರಯ ಭಾವಃ]=ಉಪಾಸನಕ್ಕೆ ಆಶ್ರಯವಾದ ಉದ್ಗೀಥದಂತೆ ಕ್ರತ್ವಂಗತ್ವವುಂಟು.

**ವಿವರಣೆ**

ಈ ಅಧಿಕರಣದಲ್ಲಿ ಕಾಮ್ಯೋಪಾಸನೆಗೆ ಹೇಗೋ ಹಾಗೆ ಉದ್ಗೀಥಾದ್ಯುಪಾಸನಕ್ಕೂ, ವಿದ್ಯೆ ವೀರ್ಯವತ್ತರವಾಗಬೇಕೆಂದಲ್ಲಿ, ಅನುಷ್ಠಾನವುಂಟು, ಇಲ್ಲದಿದ್ದಲ್ಲಿ ಇಲ್ಲವೆನ್ನುತ್ತಾರೆ.—"ಉದ್ಗೀಥಮುಪಾಸೀತ",— ಎಂದು ಹೇಳಿದ ಉದ್ಗೀಥೋಪಾಸನ, ಕ್ರತುವಿಗೆ ಅಂಗವಾಗಿ ಉದ್ಗೀಥ ಸಾಮಗಳು ಹೇಳಲ್ಪಟ್ಟ ಎಲ್ಲಾ ಸ್ಥಳಗಳಲ್ಲಿಯೂ ಅನುಷ್ಠೇಯವೆ? ಅಥವಾ ಇಷ್ಟವಾದಲ್ಲಿ ಅನುಷ್ಠಿಸಿ, ಇಲ್ಲದಿದ್ದಲ್ಲಿ ಬಿಡಬಹುದೆ?— ಎಂದಲ್ಲಿ, ಉದ್ಗೀಥ ಸಾಮ ಕ್ರತುವಿಗೆ ಅಂಗವಾಗಿರುವಂತೆ ಅದರ ಉಪಾಸನವೂ ಕ್ರತುವಿಗೆ ಅಂಗವಾದುದರಿಂದ, ಅಂಗವಾದ ಉದ್ಗೀಥೋಪಾಸನವನ್ನು ನಿಯಮೇನ ಎಲ್ಲಾ ಕಡೆಗಳಲ್ಲಿಯೂ ಅನುಷ್ಠಿಸಬೇಕು—ಎಂದು ಪೂರ್ವಪಕ್ಷ..

ಸೂತ್ರ ೨—**ಶಿಷ್ಟೇಶ್ಚ**

[ಶಿಷ್ಟಿ=ಶಾಸನಂ—ವಿಧಾನವೆಂದರ್ಥ]

**ಸೂತ್ರಾರ್ಥ**

''ಉದ್ಗೀಥಮುಪಾಸೀತ'', — (ಉದ್ಗೀಥೋಪಾಸನವನ್ನು ಮಾಡಬೇಕು)— ಎಂದು ವಿಧಿ (ಪ್ರತ್ಯಯಾಂತ ಶಬ್ದ) ಇರುವುದರಿಂದಲೂ, (ಅದನ್ನು ಯಮೇನ ಮಾಡಬೇಕು)

ಸೂತ್ರ ೩—**ಸಮಾಹಾರಾತ್**

**ಸೂತ್ರಾರ್ಥ**

''ಹೋತೃಷದನಾತ್ ಹೈವಾಪಿದುರುದ್ಗೀಥಮನುಸಮಾಹರತಿ''—ಎಂದು ಹೋತೃವಾದವನು ಉದ್ಗೀಥೋಪಾಸನವನ್ನು ಮಾಡದಿದ್ದರೂ ಯಜಮಾನ ಅದನ್ನು ಮಾಡಬೇಕು ಎಂದು, ಒಬ್ಬನು ಮಾಡದುದನ್ನು ಮತ್ತೊಬ್ಬನು ಮಾಡಬೇಕೆಂದು ತಲೆ ಮೇಲೆ ಹೊರಿಸಿ ಹೇಳುವುದರಿಂದ, ಇದನ್ನು ನಿಯಮೇನ ಮಾಡಬೇಕೆಂಬುದು ಸಿದ್ಧ. (ಸಮಾಹಾರ=ಅನುವೃತ್ತಿ ಅಂದರೆ ಸಮಾಧಾನ.) (ದುರುದ್ಗೀಥ= ವೇದನವಿಹೀನವಾದ ಉದ್ಗೀಥ)

ಸೂತ್ರ ೪—**ಗುಣಸಾಧಾರಣ್ಯ ಶ್ರುತೇಶ್ಚ**

**ಸೂತ್ರಾರ್ಥ**

(ಪ್ರಣವದ) ಗುಣವಾದ ಉಪಾಸನಕ್ಕೆ ಎಲ್ಲಾ ಯಜ್ಞಗಳಲ್ಲಿಯೂ ಸಂಬಂಧ ಹೇಳುವುದರಿಂದ ಅದನ್ನು ನಿಯಮೇನ ಮಾಡಬೇಕು.

**ವಿವರಣೆ**

''ತೇನೇಯಂತ್ರಯೀ ವಿದ್ಯಾವರ್ತತೇ ಓಮಿತ್ಯಾಶ್ರಾವಯತ್ಯೋಮಿತಿ ಶಂಸತ್ಯೋಮಿತ್ಯುದ್ಗಾಯತಿ''—ಆ ಪ್ರಣವದಿಂದ ಮೂರು ವೇದಗಳಲ್ಲಿಯೂ ಹೇಳಲ್ಪಟ್ಟ ಕರ್ಮಗಳು ನಡೆಯುತ್ತವೆ—ಎಂಬಲ್ಲಿ, 'ಆ ಪ್ರಣವ',—ಎಂದು ಉಪಾಸನದೊಂದಿಗೆ ಕೂಡಿದ ಪ್ರಣವವನ್ನು ಹೇಳಿ ಅದರಿಂದ ಸಕಲ ಕರ್ಮಗಳೂ ನಡೆಯುವುದೆನ್ನುವುದರಿಂದ, ಉದ್ಗೀಥವನ್ನು ಹೇಳಿದ ಕಡೆಗಳಲ್ಲೆಲ್ಲಾ ಉದ್ಗೀಥೋಪಾಸನವುಂಟೆಂದು ಪೂರ್ವಪಕ್ಷ,.

ಸೂತ್ರ ೫—**ನವಾ ತತ್ಸಹಭಾವಾಶ್ರುತೇಃ**

**ಸೂತ್ರಾರ್ಥ**

[ತತ್ಸಹಭಾವಾ ಶ್ರುತೇಃ] = (ಈ ಉಪಾಸನವನ್ನು) ಕ್ರತುವಿಗೆ ಅಂಗವಾಗಿ ಹೇಳದುದರಿಂದ, [ನ ವಾ] = ಉದ್ಗೀಥೋಪಾಸನವನ್ನು ನಿಯಮೇನ ಮಾಡಬೇಕೆಂಬುದಿಲ್ಲ.

**ವಿವರಣೆ**

ಇನ್ನು ಆ ಪೂರ್ವ ಪಕ್ಷವನ್ನು ನಿರಸನ ಮಾಡಿ ಸಿದ್ಧಾಂತವನ್ನು ಹೇಳುತ್ತಾರೆ;— ''ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ'',—ಎಂದು ಉದ್ಗೀಥೋಪಾಸನವನ್ನು ಮಾಡಿದಲ್ಲಿ ಆ ವಿದ್ಯೆ ನಿರ್ವಿಘ್ನವಾಗಿ ನೆರವೇರಿ ಫಲವನ್ನೂ ಶೀಘ್ರದಲ್ಲಿ ಕೊಡುವುದು—ಎಂದು ವಿದ್ಯಾಪೂರ್ತಿಯಲ್ಲಿಯೂ, ಶೀಘ್ರಫಲಪ್ರದತ್ವದಲ್ಲಿಯೂ ಈ ಉಪಾಸನವನ್ನು ಅಂಗವಾಗಿ ಹೇಳಿತಲ್ಲದೆ, ಕ್ರತುವಿಗೆ ಅಂಗವಾಗಿ ಹೇಳದುದರಿಂದ ಇದನ್ನು ನಿಯಮೇನ ಮಾಡಬೇಕೆಂಬ ನಿರ್ಬಂಧವಿಲ್ಲ. ಆರಂಭಿಸಿದ ಕ್ರತು ನಿರ್ವಿಘ್ನವಾಗಿ ಮುಗಿಯಬೇಕೆಂದಾಗಲಿ, ಶೀಘ್ರದಲ್ಲಿ ಫಲವುಂಟಾಗಬೇಕೆಂದಾಗಲಿ ಇಚ್ಛೆಯುಳ್ಳವನೇ ಅದನ್ನು ಮಾಡಬೇಕು. ಎಂದು ಸಿದ್ಧಾನ್ತ.

ಸೂತ್ರ ೬—**ದರ್ಶನಾಚ್ಚ**

**ಸೂತ್ರಾರ್ಥ**

(ಉದ್ಗೀಥೋಪಾಸನವನ್ನು ಅರಿಯದಿರುವುದು) ಕಾಣುವುದರಿಂದಲೂ,(ಅದು ಕ್ರತ್ವಂಗವಲ್ಲ.)

**ವಿವರಣೆ**

''ಏವಂ ವಿದ್ಧವೈ ಬ್ರಹ್ಮಾಯಜ್ಞಂ ಯಜಮಾನಂ ಸರ್ವಾಂಶ್ಚರ್ತ್ವಿಜೋಽಭಿರಕ್ಷತಿ'',—ಎಂದು ಉದ್ಗೀಥೋಪಾಸನವನ್ನು ಅರಿತ ಬ್ರಹ್ಮಾ ಎಂಬ ಋತ್ವಿಕ್ಕು ಯಜಮಾನನನ್ನೂ ಯಜ್ಞವನ್ನೂ ಮಿಕ್ಕ ಋತ್ವಿಕ್ಕುಗಳನ್ನೂ ರಕ್ಷಿಸುತ್ತಾನೆ—ಎನ್ನುವುದರಿಂದ, ಉದ್ಗಾತೃವಿಗೆ ಉದ್ಗೀಥೋಪಾಸನವಿಲ್ಲವೆಂದು ಏರ್ಪಡುವುದು. ಉದ್ಗೀಥೋಪಾಸನ ಕ್ರತುವಿಗೆ ಅಂಗವಾದಲ್ಲಿ, ಉದ್ಗಾತೃವಿಗೆ ಅದು ಅವಶ್ಯವಾಗಿ ಬೇಕು. ಅದಿಲ್ಲದುದರಿಂದ ಆ ಉಪಾಸನ ಕ್ರತ್ವಂಗವಲ್ಲವೆಂದು ಏರ್ಪಡುವುದು. ಆದ್ದರಿಂದ, ಆ ಉಪಾಸನ ನಿಯಮೇನ ಮಾಡಬೇಕೆಂಬುದಿಲ್ಲವೆಂದು ಸಿದ್ಧಾನ್ತ.

## ಪಾದ 4

## 1. ಪುರುಷಾರ್ಥಾಧಿಕರಣ

### ಸೂತ್ರ—ಪುರುಷಾರ್ಥೋಽತಶ್ಶಬ್ದಾದಿತಿ ಬಾದರಾಯಣಃ

[ ಈಶಾವಾಸ್ಯ ವಿದ್ಯಾ ]

**ಸಂಗತಿ**

ಹಿಂದಿನದಾದ ಗುಣೋಪಸಂಹಾರ ಪಾದದಲ್ಲಿ ಮೋಕ್ಷಕ್ಕೆ ಸಾಧನವಾದ ಬ್ರಹ್ಮ ವಿದ್ಯೆಯನ್ನು ನಿರೂಪಿಸಲಾಯಿತು. ಅನಂತರ ಬ್ರಹ್ಮವಿದ್ಯೆಗೆ ಅಂಗವಾದ ಕರ್ಮ ಈ ಅಂಗಪಾದದಲ್ಲಿ ನಿರೂಪಿಸಲ್ಪಡುತ್ತೆ—ಎಂದು ಪಾದ ಸಂಗತಿ.

ಇದರ ಮೇಲೆ ಒಂದು ಆಶಂಕೆ ತೋರುತ್ತೆ;— ಪೂರ್ವಕಾಂಡದಲ್ಲಿ ಕರ್ಮಗಳು ಸ್ವರ್ಗಸ್ವಾರಾಜ್ಯಾದಿ ಸಾಂಸಾರಿಕ ಫಲ ಸಾಧನಗಳೆಂಬುದಾಗಿ ನಿರೂಪಿತವಾಗಿವೆ. ಇಂತಹ ಕರ್ಮಗಳು ಬ್ರಹ್ಮವಿದ್ಯೆಗೆ ಅಂಗವಾಗುವುದು ಹೇಗೆ? ಈ ವಿದ್ಯಾಂಗ ಪಾದದಲ್ಲಿ ಅವುಗಳನ್ನು ಪ್ರತಿಪಾದಿಸುವುದರಿಂದ ವೇದಾಂತದಲ್ಲಿ ಅದಕ್ಕೆ ಸಮನ್ವಯ ತಾನೇ ಹೇಗೆ? ಕರ್ಮ ಜಿಜ್ಞಾಸೆಯಾದ ಮೇಲೆಯೇ ಬ್ರಹ್ಮ ಜಿಜ್ಞಾಸೆ ಹೇಳಲ್ಪಟ್ಟಿದೆ, "ಅಥಾತೋ ಬ್ರಹ್ಮ ಜಿಜ್ಞಾಸಾ",—ಎಂದು. ಈ ಪಾದದಲ್ಲಿ ಕರ್ಮಗಳು ವಿದ್ಯಾಂಗವೆನ್ನುವುದು ಪುನರುಕ್ತಿ. ಅಲ್ಲದೆ ಕರ್ಮಗಳು ವಿರೋಧಿ ಫಲಕ್ಕೆ ಸಾಧನಗಳಾದ್ದರಿಂದ ವಿರುದ್ಧಗಳೂ ಆಗಿವೆ. "ನ ಕರ್ಮಣಾ ನ ಪ್ರಜಯಾ... —" ಪ್ಲವಾಹ್ಯೇತೇ ಅದೃಢಾ ಯಜ್ಞರೂಪಾಃ" —ಇತ್ಯಾದಿಯಾಗಿ ಕರ್ಮಗಳಿಗೆ ತ್ಯಾಜ್ಯತ್ವವನ್ನೇ ಹೇಳಿದೆ..—ಎಂಬುದು ಇಲ್ಲಿಯ ಆಶಂಕೆ. ಇದಕ್ಕೆ ಸಮಾಧಾನ;—ಫಲಾಂತರದಲ್ಲಿ ವಿನಿಯುಕ್ತಗಳಾದ ಕರ್ಮಗಳೇ ವಿನಿಯೋಗ ಭೇದದಿಂದ ವಿದ್ಯೆಗೂ ಅಂಗವಾಗಿ ವಿನಿಯೋಗಿಸಲ್ಪಡುತ್ತವೆ. ಆದ್ದರಿಂದ ಅವು ಅಂಗ ಗಳೆಂಬುದು ಸಿದ್ಧ. ಹಾಗೆಯೇ ಸ್ವರ್ಗಾದಿಗಳಲ್ಲಿ ವಿನಿಯುಕ್ತವಲ್ಲದವುಗಳಾದ ಪರಮಪುರುಷ, ಚರಣಯುಗಳ ಧ್ಯಾನ—ಅರ್ಚನ—ಪ್ರಣಾಮ ಮುಂತಾದ ಬಹು ಕರ್ಮಗಳೂ ಕೂಡ ಶ್ರುತಿ—ಸ್ಮೃತಿ—ಇತಿಹಾಸ—ಪುರಾಣ-ಸತ್ಶೋತ್ರ್ವೇತ್ರರವಾದ ಆಗಮ—ಸದಾಚಾರ— —ಪ್ರಮಾಣಕಗಳಾದವು ಇವೆ. ಅವು ವಿದ್ಯೆಗೆ ಅಂಗವಾಗುವ ಪ್ರಕಾರ ಇಲ್ಲಿ ಪರಿಶೋಧಿ ಸಲ್ಪಡುತ್ತವೆಯಾದ್ದರಿಂದ ಈ ಪಾದಾರಂಭ ಸಾರ್ಥಕ. ಯಜ್ಞಾದಿ ಕರ್ಮವೇ ಫಲಸಂಗ—ಕರ್ತೃತ್ವ—ತ್ಯಾಗಾದಿ ಗುಣ ಸಮನ್ವಿತವಾಗಿ, ಭಗವದ್ಗೀತಾದಿ ಪ್ರಮಾಣ ಗಳಲ್ಲಿ ಹೇಳಿರುವ ವಿನಿಯೋಗ ಪೃಥಕ್ತ್ವ ನ್ಯಾಯದಿಂದ ಕಾಮ್ಯ ಕರ್ಮಕ್ಕಿಂತ ಭಿನ್ನ ವಾಗಿ ವಿದ್ಯಾ ನಿಷ್ಪತ್ತಿಗೆ ಹೇತುವಾಗುತ್ತೆಯಾದ್ದರಿಂದ ನಿವೃತ್ತಿ ಧರ್ಮವೆನಿಸಿ ನಾಮಾಂತರ ದಿಂದ ಸುಕೃತವೇ ಆಗುತ್ತೆ. ಹಾಗೆಯೇ ವಿದ್ಯಾ ನಿಷ್ಪತ್ತಿಗೆ ಹೇತುವಾಗಿರುವುದರಿಂದ ಇತಿಹಾಸ—ಪುರಾಣಾದಿ ಪ್ರಸಿದ್ಧವಾದ ನಮಸ್ಕಾರಾದಿಗಳೂ ನಿವೃತ್ತಿ ಧರ್ಮಗಳು. ಇವೆರಡರ ಪ್ರಕಾರ ವಿಶೇಷೋಪಪಾದನದಿಂದ, ವಿದ್ಯಾಂಗ ಪಾದವು ನ್ಯಾಯ ಕಲಾಪ ಪ್ರತೀತವಾಗಿದೆಯಾಗಿ ಇದು ಸುಸಂಗತ. ಆದ್ದರಿಂದ ಪೂರ್ವ ಪಾದದಲ್ಲಿ ವಿದ್ಯಾ ಚಿಂತೆ, ಈ ಪಾದದಲ್ಲಿ ವಿದ್ಯಾಂಗ ಚಿಂತೆಯೆಂದು ವಿಭಾಗ ಪ್ರದರ್ಶಿತವಾಗಿದೆ.—ಇದು ಪಾದ ಸಂಗತಿ.

ಇದರೊಳಗೆ, ಪ್ರಥಮಾಧಿಕರಣದಲ್ಲಿ—ಕರ್ಮಗಳಿಗೆ ಅಂಗತ್ವ ಸಿದ್ಧಿಸುವುದಕ್ಕಾಗಿ, ವಿದ್ಯೆಗೆ ಅಂಗಿತ್ವ ಸಾಧಿತವಾಗುತ್ತೆ. ಆದ್ದರಿಂದ ಈ ಅಧಿಕರಣಕ್ಕೆ ಪ್ರಾಧಮ್ಯ ಸಿದ್ಧಿಸುತ್ತೆ. ಅಲ್ಲದೆ, ಗುಣೋಪಸಂಹಾರ ಪಾದದ ಕೊನೆಯ ಅಧಿಕರಣದಲ್ಲಿ ಉದ್ಗೀಥ ವಿದ್ಯೆ ಪೃಥಕ್ ಫಲವುಳ್ಳೋಣದರಿಂದ ಪುರುಷಾರ್ಥಕ್ಕೆ ಸಾಧಕವೆನ್ನಲಾಯಿತು. ಈಗ ಬ್ರಹ್ಮವಿದ್ಯೆ ಫಲವತ್ತಾದ್ದರಿಂದ ಪುರುಷಾರ್ಥ ಸಾಧಕವೆಂಬುದು ಸಾಧಿತವಾಗುತ್ತೆ ಯೆಂದೂ ಅಧಿಕರಣ ಸಂಗತಿ.

**ಸೂತ್ರಾರ್ಥ**

[ಅತಃ] = ಈ ಉಪಾಸನದಿಂದ [ಪುರುಷಾರ್ಥಃ] = ಫಲ (ಉಂಟಾಗುವುದು) [ಇತಿ] = ಎಂದು [ಬಾದರಾಯಣಃ] = ಭಗವದ್ವ್ಯಾಸರು [ಶಬ್ದಾತ್] = ವೇದವಾಕ್ಯ ದಿಂದ (ನಿರ್ಣಯಿಸಿ ಹೇಳಿದ್ದಾರೆ)

**ವಿವರಣೆ**

ಹಿಂದಿನ ಪಾದದಲ್ಲಿ ವಿದ್ಯಾಸ್ವರೂಪ ನಿರೂಪಣೆಯಾಯಿತು. ಇದರಲ್ಲಿ ಅದರ ಅಂಗಸ್ವರೂಪ ನಿರೂಪಣೆಯಾಗುತ್ತೆ. ಅದಕ್ಕಾಗಿ ಈ ಪ್ರಥಮಾಧಿಕರಣದಲ್ಲಿ ವಿದ್ಯೆ (ಉಪಾಸನ)ಯನ್ನು ಅಂಗಿಯಾಗಿ ನಿರೂಪಿಸುತ್ತಾರೆ.

ಫಲವನ್ನು ಕೊಡತಕ್ಕದ್ದು ವಿದ್ಯೆಯೋ? ಕರ್ಮವೇ—ಎಂದಲ್ಲಿ, "ಬ್ರಹ್ಮ ವಿದಾ ಪ್ನೋತಿ ಫರಂ",—ಇತ್ಯಾದಿ ವೇದ ವಾಕ್ಯಗಳು ಬ್ರಹ್ಮ ಸ್ವರೂಪವನ್ನು ಉಪಾಸಿಸಿದವನು ಮೋಕ್ಷವನ್ನು ಹೊಂದುವನೆಂದು ಉಪಾಸನದಿಂದಲೇ ಫಲವುಂಟಾಗುವುದಾಗಿ ಹೇಳು ವುದರಿಂದ, ವಿದ್ಯೆಯೇ ಫಲಪ್ರದವೆಂದು ಭಗವದ್ವ್ಯಾಸರ ಸಿದ್ಧಾಂತ. (ವಿದ್ಯೆಯೆಂಬುದು ಉಪಾಸನ—ಬ್ರಹ್ಮ ಜ್ಞಾನವೆಂದಷ್ಟೇ ಅಲ್ಲ.)

## ಸೂತ್ರ ೨—ಶೇಷತ್ವಾತ್ ಪುರುಷಾರ್ಥವಾದೋ ಯಥಾಽನ್ಯೇಷ್ವಿತಿ ಜೈಮಿನಿಃ

**ಸೂತ್ರಾರ್ಥ**

[ಶೇಷತ್ವಾತ್] = (ಕರ್ಮ) ಶೇಷವಾದ್ದರಿಂದ, (ವಿದ್ಯೆ ಫಲಪ್ರದವಲ್ಲ). [ಅನ್ಯೇಷು ಯಥಾ] = ಮಿಕ್ಕ ದ್ರವ್ಯಾದಿಗಳ ಹಾಗೆ. [ಪುರುಷಾರ್ಥವಾದಃ] = ವಿದ್ಯೆ ಫಲ ಪ್ರದವೆಂಬುದು ಅರ್ಥವಾದ (ಸ್ತುತಿ) ಮಾತ್ರ [ಇತಿ] = ಎಂದು [ಜೈಮಿನಿಃ] = ಜೈಮಿನಿಯೆಂಬುವರು (ಹೇಳಿದರು)

**ವಿವರಣೆ**

ಇನ್ನು ಪೂರ್ವಪಕ್ಷಿಯಾದ ಜೈಮಿನಿ ಹೇಳುತ್ತಾರೆ;— ಕರ್ಮ ಮಾಡುವವನು, ತಾನು ಕಾಣಲ್ಪಡುವ ಈ ಶರೀರಕ್ಕಿಂತ ಬೇರ್ಪಟ್ಟವನು—ಎಂದು ತನ್ನ ಸ್ವರೂಪವನ್ನು ಅರಿತೇ ಮಾಡಬೇಕು. ಇಲ್ಲಿ ಹೇಳಲ್ಪಟ್ಟ ಆತ್ಮ ಸ್ವರೂಪ ಕರ್ತೃವಾದ ಜೀವನ ಸ್ವರೂಪವೇ. ಆದ್ದರಿಂದ ಈ ಆತ್ಮವಿದ್ಯೆ ಕರ್ತೃವಿಗೆ ಕರ್ಮದಲ್ಲಿ ಅಧಿಕಾರವನ್ನು ಉಂಟುಮಾಡಿ ಆ ಮಾರ್ಗದಿಂದ, ಕರ್ಮಕ್ಕೆ ಅಂಗವಾಗಿರುವುದಲ್ಲದೆ, ತಾನು ನೇರವಾಗಿ ಫಲ

ಪ್ರದವಾಗುವುದಿಲ್ಲ. ವಿದ್ಯೆ ಫಲಪ್ರದವೆನ್ನುವುದು, "ಯಸ್ಯ ಪರ್ಣಮಯೀ ಜುಹೂ ರ್ಭವತಿ ನ ಸ ಪಾಪಂ ಶ್ಲೋಕಂ ಶೃಣೋತಿ",—ಯಾವನಿಗೆ ಹೋಮ ಸಾಧನವಾದ 'ಜುಹೂಃ'–ಎಂಬುದು ಎಲೆಯದೋ, ಅವನಿಗೆ ಪಾಪದ ಅಪವಾದವುಂಟಾಗದು–ಎಂದು ಆ ಅಂಗವಾಗಿರುವ ಜುಹುವನ್ನು ಸ್ತುತಿಸಿರುವ ಹಾಗೆ, ಇಲ್ಲಿಯೂ ಕರ್ಮಾಂಗವಾದ ವಿದ್ಯೆ ಯನ್ನು ಸ್ತುತಿಸುವುದಕ್ಕಾಗಿ ಹೀಗೆ ಹೇಳಿದೆಯೆಂದು ಜೈಮಿನಿ ಎನ್ನುತ್ತಾರೆ. ಹಿಂದೆ ಹಲವೆಡೆಗಳಲ್ಲಿಯೂ, ವೇದಾನ್ತಗಳಲ್ಲಿ ಹೇಳಲ್ಪಟ್ಟ ಪುರುಷ ಜೀವನಲ್ಲ, ಸರ್ವೇಶ್ವರ —ಎಂದು ನಿರ್ಣಯಿಸಲ್ಪಟ್ಟಿದ್ದಾಗ್ಯೂ, ವಿದ್ಯೆ ಕರ್ಮಾಂಗವೆಂದು ಹೇಳುವ ಕೆಲವು ವೇದಾಂತ ವಾಕ್ಯಗಳನ್ನು ಪರಾಮರ್ಶಿಸಿದಲ್ಲಿ, "ತತ್ತ್ವಮಸಿ",—ಎಂಬ ವಾಕ್ಯಕ್ಕೆ ಜೀವೇ ಶ್ವರರುಗಳಿಗೆ ಅಭೇದವನ್ನು ಅಂಗೀಕರಿಸಿ, ಇಲ್ಲಿ ಹೇಳಲ್ಪಟ್ಟ ಈಶ್ವರನೂ ಜೀವಸ್ವರೂ ಪಿಯೇ ಎಂದು ಗ್ರಹಿಸಬೇಕೆಂದು ಪೂರ್ವಪಕ್ಷಿಯ ಅಭಿಪ್ರಾಯ.

### ಸೂತ್ರ ೩—ಆಚಾರದರ್ಶನಾತ್

**ಸೂತ್ರಾರ್ಥ**

(ಬ್ರಹ್ಮವಿದ್ಯೆಗಳಿಗೆ) ಕರ್ಮಾನುಷ್ಠಾನ ಕಾಣುವುದರಿಂದ, (ವಿದ್ಯೆ ಕರ್ಮಾಂಗ)

**ವಿವರಣೆ**

"ಯಕ್ಷ್ಯಮಾಣೋಹವೈ ಭಗವಂತೋಽ ಹಮಸ್ಮಿ",—ಎಂದು ಬ್ರಹ್ಮವಿತ್ತಾದ ಕೇಕಯ ಪತಿ ತನ್ನನ್ನು ಯಾಗವನ್ನು ಮಾಡುವವನನ್ನಾಗಿ ಹೇಳುವುದರಿಂದಲೂ, "ಕರ್ಮ ಣೈವಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ" ಎಂದು ಬ್ರಹ್ಮವಿತ್ತುಗಳಾದ ಜನಕಾದಿಗಳು ಕರ್ಮದಿಂದಲೇ ಮೋಕ್ಷ ಪಡೆದುದಾಗಿ ಹೇಳಿರುವುದರಿಂದಲೂ, ಕರ್ಮವೇ ಫಲಪ್ರದ, ವಿದ್ಯೆ, ಅದಕ್ಕೆ ಅಂಗ.

### ಸೂತ್ರ ೪—ತಚ್ಛ್ರುತೇಃ

**ಸೂತ್ರಾರ್ಥ**

"ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ",—(ವಿದ್ಯೆಯನ್ನು ಅಂಗವಾಗಿಯುಳ್ಳ ಕರ್ಮವೇ ಫಲಪ್ರದ) ವಾಗುವುದುದೆಂದು ಹೇಳುವುದರಿಂದ ವಿದ್ಯೆ ಕರ್ಮಾಂಗ.

### ಸೂತ್ರ ೫—ಸಮನ್ವಾರಂಭಣಾತ್

**ಸೂತ್ರಾರ್ಥ**

"ತಂ ವಿದ್ಯಾ ಕರ್ಮಣೀ ಸಮನ್ವಾರಭೇತೇ"—(ಪರಲೋಕಕ್ಕೆ ಹೋಗುವವ ನನ್ನು ವಿದ್ಯೆ ಮತ್ತು ಕರ್ಮಗಳು ಫಲವನ್ನು ಕೊಡುವುದಕ್ಕಾಗಿ, ಹಿಂಬಾಲಿಸುವುವು) —ಎನ್ನುವುದರಿಂದ ಕೇವಲ ವಿದ್ಯೆ ಮಾತ್ರ ಫಲಪ್ರದವಲ್ಲ—ಎರಡೂ ಸೇರಿಯೇ ಫಲಪ್ರದವಾಗುವುವು.

### ಸೂತ್ರ ೬—ತದ್ವತೋ ವಿಧಾನಾತ್

**ಸೂತ್ರಾರ್ಥ**

[ತದ್ವತಃ] = ವೇದಾಂತ ವಿದ್ಯೆಯುಳ್ಳವನಿಗೆ [ವಿಧಾನಾತ್] = "ಆಚಾರ್ಯ ಕುಲಾದ್ವೇದಮಧೀತ್ಯ"—ಎಂದು ತೊಡಗಿ, "ಕುಟುಂಬೇ ಶುಚೌದೇಶೇ,"—ಇತ್ಯಾದಿ

ಯಾಗಿ, ಛಾಂದೋಗ್ಯದಲ್ಲಿ ವೇದಾಧ್ಯಯನವಾದ ಮೇಲೆ ಒಂದು ಶುಚಿಯಾದ ಸ್ಥಳ ದಲ್ಲಿದ್ದು, ಗೃಹಸ್ಥ ಧರ್ಮವನ್ನು ಅನುಷ್ಠಿಸಬೇಕೆಂದು ಕರ್ಮವನ್ನು ವಿಧಿಸುವುದರಿಂದ, (ವಿದ್ಯೆ ಕರ್ಮಕ್ಕೆ ಅಂಗವಾಗುವುದು).

ಸೂತ್ರ ೭—**ನಿಯಮಾಚ್ಚ**

**ಸೂತ್ರಾರ್ಥ**

''ಕುರ್ವನ್ನೇವೇಹಕರ್ಮಾಣಿ ಜಿಜೀವಿಷೇತ್ ಶತಗ್ಂಸಮಾಃ'',—(ಈ ದೇಹ ದಲ್ಲಿ ಇದ್ದು ಕರ್ಮಗಳನ್ನು ಅನುಷ್ಠಿಸಿಕೊಂಡೇ ನೂರು ವರ್ಷ ಜೀವಿಸಲು ಇಚ್ಛಿಸಬೇಕು) ಎಂದು ಆಯುಸ್ಸಿರುವವರಿಗೂ ಕರ್ಮವನ್ನು ಮಾಡಬೇಕೆನ್ನುವುದರಿಂದ. (ಕರ್ಮವೇ ಫಲಪ್ರದ,—ಎಂದು ಪೂರ್ವಪಕ್ಷ.)

ಸೂತ್ರ ೮—**ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್**

**ಸೂತ್ರಾರ್ಥ**

[ಅಧಿಕೋಪದೇಶಾತ್] = ಜೀವನಿಗಿಂತ ಅಧಿಕವಾದವನನ್ನು (ವೇದಾಂತದಲ್ಲಿ) ಉಪದೇಶಿಸುವುದರಿಂದ [ತದ್ದರ್ಶನಾತ್] = ಆ ಪರಮಪುರುಷೋಪದೇಶವೇ (ಸ್ಪಷ್ಟವಾಗಿ) ಕಾಣುವುದರಿಂದ, [ಬಾದರಾಯಣಸ್ಯ] = ಭಗವದ್ವ್ಯಾಸರಿಗೆ [ಏವಂ] = ವಿದ್ಯೆಯೇ ಫಲಪ್ರದವೆಂಬುದೇ ಮತ.

**ವಿವರಣೆ**

ಈ ಪೂರ್ವಪಕ್ಷವನ್ನು ಪ್ರತಿಕ್ಷೇಪಿಸುತ್ತಾರೆ:— ವೇದಾಂತದಲ್ಲಿ ಯಾಗಾದಿ ಕರ್ತೃ ವಾದ ಜೀವನನ್ನು ಹೇಳಿಲ್ಲ. ''ಯಸ್ಸರ್ವಜ್ಞಸ್ಸರ್ವವಿತ್'',— ''ಅಪಹತಪಾಪ್ಮಾ'',— ''ತದೈಕ್ಷತ'',—ಇತ್ಯಾದಿಗಳಿಂದ ಸರ್ವಜ್ಞನಾಗಿ ತನ್ನ ಇಚ್ಛಾ ಮಾತ್ರದಿಂದಲೇ ಜಗ ತ್ಸೃಷ್ಟಿ ಮಾಡುವವನನ್ನು ಹೇಳಿ, ಅವನ ಉಪಾಸನವನ್ನು ವಿಧಿಸಿ, ಆ ಉಪಾಸನ ಫಲಪ್ರದವೆಂದು ಹೇಳುವ ಈ ವಿಧವಾದ ಪುರುಷನು ಜೀವನಲ್ಲ. ಆದ್ದರಿಂದ ಪರಮ ಪುರುಷನ ಉಪಾಸನವೇ ಸಾಕ್ಷಾತ್ ಫಲಪ್ರದವೆಂಬ ವ್ಯಾಸರೂಪಿಯಾದ ಭಗವಂತನ ಸಿದ್ಧಾಂತವೇ ಸರಿಯಾದದ್ದು.

ಸೂತ್ರ ೯—**ತುಲ್ಯಂ ತು ದರ್ಶನಂ**

**ಸೂತ್ರಾರ್ಥ**

[ದರ್ಶನಂ] = ಆಚಾರ ದರ್ಶನವು [ತುಲ್ಯಂ] = (ವಿದ್ಯೆಯೇ ಪ್ರಧಾನವೆನ್ನು ವುದರಲ್ಲಿಯೂ) ಸಮಾನ.

**ವಿವರಣೆ**

ಬ್ರಹ್ಮವಿತ್ತುಗಳೂ ಕರ್ಮಾನುಷ್ಠಾನ ಮಾಡುವುದು ವಿದ್ಯೆ ಕರ್ಮಾಂಗವೆಂಬು ದಕ್ಕೆ ಪ್ರಮಾಣವೆಂದಿರಿ. ''ಋಷಯಸ್ತು ಕಾವಷೇಯಾಃ ಕಿಮರ್ಥಾವಯಮಧ್ಯೇ ಷ್ಯಾಮಹೇ ಕಿಮರ್ಥಾವಯಂ ಯಕ್ಷ್ಯಾಮಹೇ''—ಎಂದು ಬ್ರಹ್ಮವಿತ್ತುಗಳಾದ ಕೆಲವು

ಋಷಿಗಳು ಕರ್ಮದಿಂದ ಪ್ರಯೋಜನವಿಲ್ಲವೆಂದು ಬಿಟ್ಟುಬಿಟ್ಟುದಾಗಿಯೂ ಹೇಳಿರುವುದರಿಂದ, ನೀವು ಹೇಳಿದ್ದು ವಿದ್ಯೆ ಕರ್ಮಾಂಗವೆಂಬುದಕ್ಕೆ ಪ್ರಮಾಣವಾಗದು. ಆದರೆ ಕರ್ಮವನ್ನು ಕೆಲವರು ಮಾಡುವುದಕ್ಕೂ ಕೆಲವರು ಬಿಡುವುದಕ್ಕೂ ತಾತ್ಪರ್ಯವೇನು? —ಎಂದಲ್ಲಿ, ಫಲಾಭಿಸಂಧಿಯಿಲ್ಲದ ಕರ್ಮ ವಿದ್ಯಾಂಗವಾದ್ದರಿಂದ ಅದನ್ನು ಮಾಡಬೇಕು. ಫಲಾಭಿಸಂಧಿಸಹಿತವಾದ ಕರ್ಮ ಬಂಧಕವಾದ್ದರಿಂದ ಅದನ್ನು ಬಿಟ್ಟು ಬಿಡಬೇಕೆಂದು ತಾತ್ಪರ್ಯ.

ಸೂತ್ರ ೧೦—**ಅಸಾರ್ವತ್ರಿಕೀ**

**ಸೂತ್ರಾರ್ಥ**

"ಯದೇವ ವಿದ್ಯಯಾ ಕರೋತಿ..."—ಇತ್ಯಾದಿಯಿಂದ ವಿದ್ಯೆ ಕರ್ಮಾಂಗವೆಂದು ಎಲ್ಲಾ ವಿದ್ಯೆಗಳನ್ನೂ ಹೇಳಿಲ್ಲ. ಉದ್ಗೀಥ ವಿದ್ಯೆಯನ್ನು ಮಾತ್ರ ಕರ್ಮಾಂಗವನ್ನಾಗಿ ಹೇಳಿದೆ ಆದ್ದರಿಂದ, ವಿದ್ಯೆಗಳೆಲ್ಲವೂ ಕರ್ಮಾಂಗವೆಂಬುದು ಅಪ್ರಾಮಾಣಿಕ.

ಸೂತ್ರ ೧೧—**ವಿಭಾಗಶ್ಶತವತ್**

**ಸೂತ್ರಾರ್ಥ**

[ಶತವತ್] = ನೂರಿನಂತೆ (ವಿಷಯ ಭೇದದಿಂದ) [ವಿಭಾಗಃ] = ವಿಭಾಗವನ್ನು (ಹೇಳಬೇಕು)

**ವಿವರಣೆ**

"ತಂ ವಿದ್ಯಾ ಕರ್ಮಣೀ ಸಮನ್ವಾರಭೇತೇ",—ಎಂಬುದಕ್ಕೆ ಪರಲೋಕಕ್ಕೆ ಹೋಗುವವನನ್ನು ಕುರಿತು ವಿದ್ಯೆ ತನ್ನ ಫಲವನ್ನು ಕೊಡುವುದಕ್ಕಾಗಿಯೂ ಕರ್ಮ ತನ್ನ ಫಲವನ್ನು ಕೊಡುವುದಕ್ಕಾಗಿಯೂ ಅನುಸರಿಸುವುವು ಎಂದು ಅರ್ಥ ಇದರಿಂದ ವಿದ್ಯೆ ಕರ್ಮಕ್ಕೆ ಅಂಗವೆಂದು ಏರ್ಪಡುವುದಿಲ್ಲ "ಭೂಮಿಯನ್ನೂ ರತ್ನವನ್ನೂ ಮಾರಿದವನಿಗೆ ಇನ್ನೂರು ರೂಪಾಯಿಗಳನ್ನು ಕೊಡು",—ಎಂದಲ್ಲಿ, ಭೂಮಿಗಾಗಿ ನೂರು, ರತ್ನಕ್ಕಾಗಿ ನೂರು ರೂಪಾಯಿಗಳನ್ನು ಕೊಡುವುದಾಗಿ ಏರ್ಪಡುವಂತೆ, ಇಲ್ಲಿಯೂ, ವಿದ್ಯೆ, ಕರ್ಮಗಳೆರಡೂ ಭಿನ್ನ ಫಲವುಳ್ಳವಾದ್ದರಿಂದ, ವಿದ್ಯೆ ತನ್ನ ಫಲ ಕೊಡುವುದಕ್ಕಾಗಿ ಅನುಸರಿಸುತ್ತದೆ. ಕರ್ಮ ತನ್ನ ಫಲ ಕೊಡುವುದಕ್ಕಾಗಿ ಅನುವರ್ತಿಸುತ್ತದೆ—ಎಂದು ವಿಭಾಗವನ್ನು ಕಂಡುಕೊಳ್ಳಬೇಕು.

ಸೂತ್ರ ೧೨—**ಅಧ್ಯಯನ ಮಾತ್ರವತಃ**

**ಸೂತ್ರಾರ್ಥ**

(ವೇದವನ್ನು) ಅಧ್ಯಯನವನ್ನು ಮಾತ್ರ ಮಾಡಿದವನಿಗೇ ಕರ್ಮವನ್ನು ವಿಧಿಸಿರುವುದು.

**ವಿವರಣೆ**

"ಆಚಾರ್ಯಕುಲಾದ್ವೇದಮಧೀತ್ಯ..."—ಇತ್ಯಾದಿಯಲ್ಲಿ ವೇದಾಧ್ಯಯನ—ಅಂದರೆ, ಅಕ್ಷರರಾಶಿ ಗ್ರಹಣ ಮಾತ್ರ ಮಾಡಿದವನಿಗೇ ಕರ್ಮವನ್ನು ಮಾಡಲು ಹೇಳಿದೆ. ಅರ್ಥವಿಚಾರ ಮಾಡಿದವನನ್ನು ಹೇಳಿದಾಗ್ಗೂ, ಅಲ್ಲಿ ವಿದ್ಯೆಯೆಂಬುದು ಉಪಾಸನವಾದ್ದರಿಂದ ಅದನ್ನು ಮಾಡುವವನನ್ನು ಅಲ್ಲಿ ಹೇಳಿಯೇ ಇಲ್ಲ

ಸೂತ್ರ ೧೩—**ನಾವಿಶೇಷಾತ್**

**ಸೂತ್ರಾರ್ಥ**

[ಅವಿಶೇಷಾತ್] = ವಿಶೇಷ ಹೇತುವಿಲ್ಲದುದರಿಂದ, [ನ] = ಆ ನಿಯಮ ವಿಲ್ಲ.

**ವಿವರಣೆ**

'ಕುರ್ವನ್ನೇವೇಹ ಕರ್ಮಾಣಿ...''—ಎಂಬ ಶ್ರುತಿ ಆಯುಸ್ಸೆಲ್ಲವನ್ನೂ ಕೇವಲ ಕರ್ಮದಲ್ಲಿಯೇ ಕಳೆಯಬೇಕೆಂಬುದಕ್ಕೆ ಒಂದು ಯುಕ್ತಿಯೂ ಇಲ್ಲ. ಈ ವಾಕ್ಯ ಈಶ ವಿದ್ಯೆಗೆ ಅಂಗವಾಗಿ ಬದುಕಿರುವವರಿಗೂ ಕರ್ಮಾನುಷ್ಠಾನವನ್ನು ಮಾಡಲು ಹೇಳಿದೆ. ಅದರಿಂದ ವಿದ್ಯೆ ಕರ್ಮಕ್ಕೆ ಅಂಗವೆಂದು ಏರ್ಪಡದು.

ಸೂತ್ರ ೧೪—**ಸ್ತುತಯೇ ಅನುಮತಿರ್ವಾ**

**ಸೂತ್ರಾರ್ಥ**

[ಸ್ತುತಯೇ] = ಸ್ತೋತ್ರ ಮಾಡುವುದಕ್ಕಾಗಿ [ಅನುಮತಿಃ, ವಾ] = (ಕರ್ಮಕ್ಕೆ) ಅನುಮತಿಯೇ ಮಾಡಲ್ಪಟ್ಟಿತು.

**ವಿವರಣೆ**

ಇದರಲ್ಲಿ ಆ ಶ್ರುತಿಯು ವಾಸ್ತವವಾದ ಅರ್ಥವನ್ನು ಪ್ರಕಟವಡಿಸುತ್ತಾರೆ;— ಅಲ್ಲಿ ಈಶ ವಿದ್ಯೆಯನ್ನು ಹೇಳಿ, ಆ ಉಪಾಸಕನು ಕರ್ಮಾನುಷ್ಠಾನವನ್ನು ಮಾಡಿದಾಗ್ಯೂ, ಈ ವಿದ್ಯಾ ಮಾಹಾತ್ಮ್ಯದಿಂದ ಆ ಕರ್ಮಗಳಿಂದುಂಟಾದ ಫಲ ಇವನನ್ನು ಹೊಂದಿ ಇವನಿಗೆ ಸಂಸಾರವನ್ನು ಬೆಳೆಸುವುದಿಲ್ಲವೆಂದೇ ಹೇಳಿದೆ.

ಸೂತ್ರ ೧೫—**ಕಾಮಕಾರೇಣ ಚೈಕೇ**

**ಸೂತ್ರಾರ್ಥ**

[ಏಕೇ] = ಕೆಲವರು [ಕಾಮಕಾರೇಣ ಚ] = ಯಥೇಷ್ಟವಾಗಿಯೇ (ಕರ್ಮ ತ್ಯಾಗವನ್ನು ಹೇಳಿದ್ದಾರೆ.)

**ವಿವರಣೆ**

''ಕಿಂ ಪ್ರಜಯಾ ಕರಿಷ್ಯಾಮೋ ಯೇಷಾಂ ನೋಽಯಮಾತ್ಮಾ''—ಎಂದು ತೊಡಗಿ, ಒಂದು ಶಾಖೆಯಲ್ಲಿ ಬ್ರಹ್ಮವಿತ್ತುಗಳು ಕರ್ಮವನ್ನು ಬಿಟ್ಟು ಬಿಟ್ಟುದಾಗಿ ಹೇಳಿದೆ. ಇದರಿಂದ ವಿದ್ಯೆಯೇ ಮುಖ್ಯವೆಂದು ಏರ್ಪಡುತ್ತೆ.

ಸೂತ್ರ ೧೬—**ಉಪಮರ್ದಂ ಚ**

**ಸೂತ್ರಾರ್ಥ**

'ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇಪರಾವರೇ''—ಎಂದು ಬ್ರಹ್ಮ ವಿದ್ಯೆಯಿಂದ ಇವನ ಸಕಲ ಕರ್ಮಗಳೂ ನಶಿಸುವುವೆಂದು ಹೇಳಿದೆ. ವಿದ್ಯೆ ಕರ್ಮಾಂಗ ವಾದರೆ ಇದು ಕೂಡದು.

### ಸೂತ್ರ ೧೭—**ಊರ್ಧ್ವರೇತಸ್ಸು ಚ ಶಬ್ದೇ ಹಿ**

**ಸೂತ್ರಾರ್ಥ**

[ಊರ್ಧ್ವರೇತಸ್ಸು, ಚ] = (ಜನಕಾದಿಗಳಾದ) ಊರ್ಧ್ವರೇತಸ್ಸುಗಳಲ್ಲಿಯೂ ಬ್ರಹ್ಮೋಪಾಸನ ಕಾಣುವುದರಿಂದ, ಅವರುಗಳಿಗೆ ಅಗ್ನಿಹೋತ್ರಾದಿ ಕರ್ಮಗಳಿಲ್ಲವಾಗಿ, ವಿದ್ಯೆ ಕರ್ಮಾಂಗವೆನ್ನಕೂಡದು. ವಿದ್ಯೆಯೇ ಪ್ರಧಾನವಾಗಿ ಫಲಪ್ರದವಾಗುವುದೆಂದು ಅಂಗೀಕರಿಸಬೇಕು. ಬ್ರಾಹ್ಮಣಾದಿಗಳು ಒಂದು ಆಶ್ರಮದಲ್ಲಿರಬೇಕು. ಊರ್ಧ್ವ ರೇತಸ್ಸೆಂದು ಪ್ರತ್ಯೇಕಾಶ್ರಮವೊಂದು ಇಲ್ಲವೆಂದಲ್ಲಿ, "ತ್ರಯೋ ಧರ್ಮಸ್ಕಂಧಾಃ"—"ಏತಮೇವ ಪ್ರವ್ರಾಜಿನೋ ಲೋಕಮಿಚ್ಛಂತಃ ಪ್ರವ್ರಜನ್ತಿಃ"—ಎಂದೂ, "ಯೇ ಚೇಮೇಽರಣ್ಯೇ ಶ್ರದ್ಧಾತಪ ಇತ್ಯುಪಾಸತೇ",—ಎಂದೂ ಇತ್ಯಾದಿಯಾದ [ಶಬ್ದೇ ಹಿ] = ವೇದ ಶಬ್ದದಲ್ಲಿಯೇ ತಾನೆ (ಸನ್ಯಾಸಾಶ್ರಮವುಂಟೆಂದು ಏರ್ಪಡುವುದು). ಆದ್ದರಿಂದ ವಿದ್ಯೆಯೆಂಬುದು ಕರ್ಮಾಂಗವಲ್ಲ. ತಾನೇ ಪ್ರಧಾನವಾಗಿದ್ದುಕೊಂಡು ಫಲಪ್ರದ ವಾಗಿರುವುದೆಂದು ಸಿದ್ಧಾಂತ.

### ಸೂತ್ರ ೧೮—**ಪರಾಮರ್ಶಂ ಜೈಮಿನಿ ರಚೋದನಾಚ್ಚಾಪವದತಿ ಹಿ**

**ಸೂತ್ರಾರ್ಥ**

[ಅಚೋದನಾತ್] = ವಿಧಿಸದಿರುವುದರಿಂದ [ಜೈಮಿನಿಃ] = ಜೈಮಿನಿಯೆಂಬವರು [ಪರಾಮರ್ಶಂ] = (ಸನ್ಯಾಸಾಶ್ರಮಕ್ಕೆ) ಅನುವಾದವನ್ನೇ ಕಲ್ಪಿಸುತ್ತಾರೆ. [ಅಪಿ,ಚ] = ಮೇಲೆಯೂ, [ಅಪವದತಿ ಹಿ] = ವೇದ ಆ ಆಶ್ರಮವನ್ನು ನಿಂದಿಸುವುದಲ್ಲವೆ?

**ವಿವರಣೆ**

ಇದರಲ್ಲಿ ಆ ಆಶ್ರಮವಿಲ್ಲವೆಂದು ಪೂರ್ವಪಕ್ಷಿ ಮತವನ್ನು ಹೇಳುತ್ತಾರೆ;—ಊರ್ಧ್ವರೇತಸ್ಸೆಂಬ ಆಶ್ರಮವೊಂದುಂಟೆಂಬುದಕ್ಕೆ, "ತ್ರಯೋಧರ್ಮಸ್ಕಂಧಾಃ",—ಧರ್ಮಕ್ಕೆ ಆಧಾರಭೂತವಾದ ಆಶ್ರಮಗಳು ಮೂರೆಂಬುದನ್ನು ಪ್ರಮಾಣವಾಗಿ ಎತ್ತಿದ್ದಾರೆ. ಈ ವಾಕ್ಯ ಈ ಮೂವರೂ ಮೋಕ್ಷವನ್ನು ಹೊಂದರು. ಬ್ರಹ್ಮೋಪಾಸಕನೇ ಮೋಕ್ಷ ಹೊಂದುವವನು—ಎಂದು ಬ್ರಹ್ಮೋಪಾಸನವನ್ನು ಸ್ತುತಿಸುವುದಕ್ಕಾಗಿ ಸನ್ಯಾಸಾಶ್ರಮವನ್ನು ಧರಿಸಿದರಲ್ಲದೆ ಅದನ್ನು ಅನುಷ್ಠಿಸಲು ವಿಧಿಸಿಲ್ಲ. ವಿಧಿಯಿಲ್ಲದೆ ಅನುವಾದ ಮಾತ್ರ ಮಾಡಲ್ಪಟ್ಟ ಅರ್ಥ ಪ್ರಮಾಣವಾಗಲಾರದು. ಅಲ್ಲದೆ, "ವೀರಹಾವಾ ಏಷಃ ದೇವಾನಾಂ ಯೋಽಗ್ನಿಮುದ್ವಾಸಯತೇ"—ಎಂದು ಅಗ್ನಿಹೋತ್ರಾದಿಗಳನ್ನು ಮಾಡದವನನ್ನು ದೇವತೆಗಳಿಗೆ ವೀರಹತ್ಯೆ ಮಾಡಿದವನನ್ನಾಗಿ ನಿಂದಿಸುವುದರಿಂದ ಸನ್ಯಾಸವೆಂದು ಒಂದಾಶ್ರಮವಿಲ್ಲವೆನ್ನುತ್ತಾರೆ.

### ಸೂತ್ರ ೧೯—**ಅನುಷ್ಠೇಯಂ ಬಾದರಾಯಣಃ ಸಾಮ್ಯಶ್ರುತೇಃ**

**ಸೂತ್ರಾರ್ಥ**

[ಸಾಮ್ಯಶ್ರುತೇಃ] = (ನಾಲ್ಕು ಆಶ್ರಮಗಳನ್ನೂ) ಸಮಾನವಾಗಿ ಹೇಳುವುದರಿಂದ [ಅನುಷ್ಠೇಯಂ] = (ಸನ್ಯಾಸಾಶ್ರಮವನ್ನು) ಅನುಷ್ಠಿಸತಕ್ಕದ್ದನ್ನಾಗಿ [ಬಾದರಾಯಣಃ] = ಬಾದರಾಯಣರು (ಹೇಳಿದರು)

### ವಿವರಣೆ

ಆ ಮತವನ್ನು ನಿರಸನ ಮಾಡುತ್ತಾರೆ;—'ತ್ರಯೋ ಧರ್ಮಸ್ಕನ್ಧಾಃ',—ಎಂದು ಗೃಹಸ್ಥಾಶ್ರಮದಂತೆಯೇ ಸನ್ಯಾಸಾಶ್ರಮವನ್ನೂ ಸಮಾನವಾಗಿ ಎತ್ತಿರುವುದರಿಂದ ಅದರಂತೆ ಆಶ್ರಮವನ್ನೂ ಅನುಷ್ಠಿಸಬೇಕೆಂಬುದು ಪ್ರಾಮಾಣಿಕ. ಅನುವಾದವನ್ನು ಮಾಡುವಾಗ, ಅದಕ್ಕೆ ಬೇರೊಂದು ಕಡೆಯಲ್ಲಿ ವಿಧಿಯಿರಬೇಕಾದುದರಿಂದ, ಈ ವಾಕ್ಯದಲ್ಲಿ ಸನ್ಯಾಸ ವಿಧಿಯಿಲ್ಲದಿದ್ದಾಗ್ಯೂ, ಅಲ್ಲಿ ಅನುವದಿಸುವುದಕ್ಕಾಗಿ ಅದನ್ನು ಹೇಳಿರುವುದಾಗಿ ಮತ್ತೊಂದೆಡೆಯಲ್ಲಿ ವಿಧಿಯನ್ನು ಕಲ್ಪಿಸಬೇಕೆಂದು ಭಗವಾನ್ ಬಾದರಾಯಣರೆಂದರು.

ಸೂತ್ರ ೨೦—**ವಿಧಿರ್ವಾ ಧಾರಣವತ್**

### ಸೂತ್ರಾರ್ಥ

[ಧಾರಣವತ್] = (ಸಮಿತ್ತಿನ) ಧಾರಣದಂತೆ [ವಿಧಿಃ, ವಾ] = ಸನ್ಯಾಸಾಶ್ರಮಕ್ಕೂ ವಿಧಿಯೇ ಉಂಟು.

### ವಿವರಣೆ

''ತ್ರಯೋ ಧರ್ಮಸ್ಕನ್ಧಾಃ'',—ಎಂಬ ವಾಕ್ಯದಲ್ಲಿಯೇ ನಾಲ್ಕು ಆಶ್ರಮಗಳಿಗೂ ವಿಧಿಯನ್ನು ಕಲ್ಪಿಸಬೇಕು. ''ಅಧಸ್ತಾತ್ಸಮಿಧಂ ಧಾರಯನ್ ಅನುದ್ರವೇತ್'',—ಎಂದು ಪ್ರೇತಾಗ್ನಿ ಹೋತ್ರದಲ್ಲಿ ಸ್ರುಕ್—ಎಂಬ ಪಾತ್ರಕ್ಕೆ ಕೆಳಗೆ ಸಮಿತ್ತನ್ನಿಟ್ಟು ಉಪಸರ್ಪಣ ಮಾಡಬೇಕು. ದೇವತೆಗಳನ್ನು ಕುರಿತು ಮಾಡುವ ನಿತ್ಯಾಗ್ನಿ ಹೋತ್ರದಲ್ಲಿಯಲ್ಲವೆ, ಸಮಿತ್ತನ್ನು ಸ್ರುಕ್ಕಿನ ಮೇಲೆ ಇಟ್ಟು ಉಪಸರ್ಪಣ ಮಾಡಬೇಕು ಎಂದು ಹೇಳಿದೆ. ಇಲ್ಲಿ ದೈವಿಕ ಕಾರ್ಯದಲ್ಲಿ ಸಮಿತ್ತನ್ನು ಮೇಲೆ ಇಡಬೇಕೆನ್ನುವುದಕ್ಕೆ ವಿಧಿ ಪ್ರತ್ಯಯವಿಲ್ಲ. ''ಉಪರಿಹಿ ದೇವೇಭ್ಯೋಧಾರಯತಿ'' ಎಂದು ಮಾತ್ರವಿದೆ. ಆದಾಗ್ಯೂ ಈ ಅರ್ಥ ಬೇರೊಂದು ಕಡೆಯಲ್ಲಿ ಹೇಳದುದರಿಂದ ಅದನ್ನು ಈ ವಾಕ್ಯ ವಿಧಿಸುವುದೆಂದೇ ಜೈಮಿನಿ ಅಂಗೀಕರಿಸಿದ್ದಾರೆ. ಅದರಂತೆಯೇ ಇಲ್ಲಿಯೂ ವಿಧಿ ಪ್ರತ್ಯಯ ಇಲ್ಲದಿದ್ದಾಗ್ಯೂ ವಿಧಿಯನ್ನು ಕಲ್ಪಿಸಬೇಕು. ಯಾವದಾಯುಷ, ಕರ್ಮವನ್ನು ವಿಧಿಸಿದ ಶ್ರುತಿಗಳು ಅವಿರಕ್ತ ವಿಷಯ. ಆಶ್ರಮಾಂತರ ವಿಷಯವೆಂದು ಅಂಗೀಕರಿಸುವುದರಿಂದ ಅವು ಇದಕ್ಕೆ ಉಪಪಾದಕವಾಗದು ಎಂದು ಸಿದ್ಧಾನ್ತ. ಇದರಿಂದ ವಿದ್ಯೆಯಿಂದಲೇ ಪುರುಷಾರ್ಥವೆಂಬುದು ಸಿದ್ಧ.

## 2. ಸ್ತುತಿಮಾತ್ರಾಧಿಕರಣ

ಸೂತ್ರ—**ಸ್ತುತಿಮಾತ್ರಮುಪಾದಾನಾದಿತಿ ಚೇನ್ನಾ ಪೂರ್ವತ್ವಾತ್**

### ಸಂಗತಿ

ಮುಂದಿನ ಅಧಿಕರಣಗಳೆರಡೂ ಪ್ರಾಸಂಗಿಕ. ಬ್ರಹ್ಮಸಂಸ್ಥಸ್ತುತಿಗಾಗಿ ಅನೂದಿತತ್ವವನ್ನು ಪೂರ್ವಪಕ್ಷ ಮಾಡಿಕೊಂಡು ಆಶ್ರಮದ್ವಯಕ್ಕೆ ವಿಧಾನವನ್ನು ಹೇಳಿದರು. ಹೀಗೆ ಸ್ತುತಿ ಪ್ರಸಂಗದಿಂದ, ರಸತಮತ್ವ ಪ್ರತಿಪಾದಕ ವಾಕ್ಯಗಳು ಸ್ತುತಿಪರವೇ, ಅಲ್ಲವೇ ಎಂಬ ಶಂಕೆಯಿಂದ ಪ್ರಾಸಂಗಿಕ ಸಂಗತಿ.

**ಸೂತ್ರಾರ್ಥ**

[ಉಪಾದಾನಾತ್] = (ಉದ್ಗೀಥಕ್ಕೆ ರಸತಮತ್ವವನ್ನು ಹೇಳುವುದರಿಂದ). [ಸ್ತುತಿ ಮಾತ್ರ] = ಸ್ತೋತ್ರವೇ (ವಿಧಿಯಲ್ಲ) [ಇತಿ ಚೇತ್] = ಎಂದಲ್ಲಿ, [ಅಪೂರ್ವತ್ವಾತ್] = (ಈ ಅರ್ಥ) ಅಪೂರ್ವವಾದ್ದರಿಂದ, (ಎಲ್ಲಿಯೂ ಹೇಳದುದರಿಂದ) [ನ] = ಸ್ತುತಿ ಮಾತ್ರವಲ್ಲ

**ವಿವರಣೆ**

ಹಿಂದಿನ ಅಧಿಕರಣದಲ್ಲಿ ಸರ್ವಾಶ್ರಮಗಳಲ್ಲಿಯೂ ಬ್ರಹ್ಮೋಪಾಸಕನೇ ಶ್ರೇಷ್ಠ ನೆಂದು ಸ್ತುತಿಸಲಾಯಿತು. ಈ ಅಧಿಕರಣದಲ್ಲಿ, ಅದರ ಹಾಗೆಯೇ ಛಾನ್ದೋಗ್ಯದಲ್ಲಿರುವ ಉದ್ಗೀಥಾವಯವ ವಿಷಯವಾದ ವಾಕ್ಯ ಸ್ತುತಿಯೋ? ಅಥವಾ ವಿಧಿಯೋ?—ಎಂದು ವಿಚಾರ ಮಾಡುತ್ತಾರೆ ''ಓಮಿತ್ಯೇತದಕ್ಷರ ಮುದ್ಗೀಥಮುಪಾಸೀತ''—ಓಮಿತ್ಯು ದ್ಗಾಯತಿ— ತಸ್ಯೋಪವ್ಯಾಖ್ಯಾನಂ। ಏಷಾಂ ಭೂತಾನಾಂ ಪೃಥಿವೀರಸಃ ಪೃಥಿವ್ಯಾ ಆಪೋರಸಃ ಅಪಾಮೋಷ ಧಯೋರಸಃ—ಓಷಧೀನಾಂ ಪುರುಷೋರಸಃ—ಪುರುಷಸ್ಯ ವಾಗ್ರಸಃ—ವಾಚ ಉದ್ಗೀಥೋ ರಸಃ—ಸ ಏಷರಸಾನಾಂ ರಸತಮಃ ಪರಾರ್ಧ್ಯಃ ಅಷ್ಟಮೋಯದುದ್ಗೀಥಃ''—ಉದ್ಗೀಥಾವಯವವಾದ ಓಂಕಾರವನ್ನುಉಪಾಸಿಸುವವನು ಓಂಕಾರವನ್ನು ಉದ್ಗಾನ ಮಾಡುತ್ತಾನೆ ಆ ಅಕ್ಷರದ ಪ್ರಭಾವ ಹೇಳಲ್ಪಡುತ್ತೆ. ಸರ್ವಭೂತಗಳಲ್ಲಿಯೂ ಸಾರವಾದುದು ಭೂಮಿ, ಅದರಲ್ಲಿಯೂ ಸಾರವಾದುದು ಜಲ. ಅದರಲ್ಲಿಯೂ ಸಾರ ಓಷಧಿ, ಅದರಲ್ಲಿಯೂ ಸಾರ ಪುರುಷ, ಅವನಲ್ಲಿಯೂ ಸಾರ ವಾದುದು ವಾಕ್. ಅದರಲ್ಲಿಯೂ ಸಾರವಾದುದು ಋಕ್ಕು. ಅದರಲ್ಲಿಯೂ ಸಾರ ಸಾಮ. ಅದರಲ್ಲಿಯೂ ಸಾರ ಉದ್ಗೀಥ, ಇದೇ ಎಲ್ಲಕ್ಕಿಂತ ಸಾರತಮ [ಪರಾರ್ಧ್ಯಃ.] ಪರಮಪುರುಷನ ವಾಸಕ್ಕೆ ಯೋಗ್ಯವಾದುದು ಎಂದು ಛಾನ್ದೋಗ್ಯದಲ್ಲಿ ಹೇಳಲ್ಪಟ್ಟಿದೆ.

ಇಲ್ಲಿ ಉದ್ಗೀಥವನ್ನು ಸಾರತಮವೆಂದು ಸ್ತುತಿಸುತ್ತದೆಯೆ? ಅಥವಾ ರಸತಮ ವೆಂದು ಧ್ಯಾನಿಸಬೇಕಾಗಿ ವಿಧಿಸುತ್ತದೆಯೆ?—ಎಂದಲ್ಲಿ,

''ಇಯಮೇವ ಜುಹೂರಾದಿತ್ಯಃ ಕೂರ್ಮಃ ಸ್ವರ್ಗಲೋಕ ಆಹವನೀಯಃ''— ಯಜ್ಞದಲ್ಲಿ ಹೋಮ ಸಾಧನವಾದ ''ಜುಹೂ''—ಎಂಬ ಪಾತ್ರ, ಪೃಥ್ವೀ, ಕೂರ್ಮ ವೆಂಬ ಆಸನ, ಸೂರ್ಯ, ಆಹವನೀಯವೆಂಬ ಅಗ್ನಿ, ಸ್ವರ್ಗಲೋಕ—ಎಂದು ಜುಹೂ ಮುಂತಾದುವನ್ನು ಸ್ತುತಿಸಿದಂತೆ ಇಲ್ಲಿಯೂ ಉದ್ಗೀಥವನ್ನು ರಸತಮವೆಂದು ಸ್ತುತಿಸುವುದು, ವಿಧಿ ಪ್ರತ್ಯಯವಿಲ್ಲದ್ದರಿಂದ ಇದು ವಿಧಿಯಲ್ಲ ಎಂದು ಪೂರ್ವಪಕ್ಷ.

ಮೊದಲು 'ಜುಹೂ'—ಮುಂತಾದುವನ್ನು ಯಾಗಾಂಗವಾಗಿ ವಿಧಿಸಿ, ಬಳಿಕ, 'ಇಯಮೇವ ಜುಹೂಃ'— ಎನ್ನುವುದರಿಂದ ಆ ವಾಕ್ಯ ಸ್ತುತಿಯಾಗಬಹುದು. ಹಾಗೆ ಇಲ್ಲಿ ಇದಕ್ಕೆ ಮುಂಚೆ ಉದ್ಗೀಥಕ್ಕೆ ರಸತಮತ್ವವನ್ನು ಹೇಳಿಲ್ಲವಾದ್ದರಿಂದ, ಇದು ರಸತಮತ್ವ ವಿಧಿಯೇ ಆಗಬೇಕು. ವಿಧಿಯಾದಲ್ಲಿ ಒಂದು ಉಪಾಸನ ಸಿದ್ಧಿಸುತ್ತೆ. ಸ್ತುತಿ ಯಾದಲ್ಲಿ ಅದು ನಿರರ್ಥಕವಾಗುವುದು. ವಿಧಿವಾಕ್ಯವನ್ನು ಎತ್ತಿ ಸ್ತುತಿ ವಾಕ್ಯವಿದ್ದಲ್ಲಿ ಅದು ರುಚಿಜನಕವಾಗಿ ಸಫಲವಾಗುವುದು ವಿಧಿಯಿಲ್ಲದ ಕೇವಲ ಸ್ತುತಿ ನಿಷ್ಫಲ ವಾದ್ದರಿಂದ, ಇದು ವಿಧಿಯೆಂದು ಸಿದ್ಧಾಂತ

ಸೂತ್ರ ೨—**ಭಾವಶಬ್ದಾಚ್ಚ**

**ಸೂತ್ರಾರ್ಥ**

ವಿಧಿ ಪ್ರತ್ಯಯದೊಂದಿಗೆ ಕೂಡಿದ 'ಉಪಾಸೀತ'—ಎಂಬ ಕ್ರಿಯಾಪದವಿರುವುದರಿಂದಲೂ (ಇದು ವಿಧಿಯೇ)

**ವಿವರಣೆ**

ಹಿಂದೆ ವಿಧಿ ಪ್ರತ್ಯಯವಿಲ್ಲವೆಂದು ಪೂರ್ವಪಕ್ಷಿ ಹೇಳಿದ್ದನ್ನು ಅಂಗೀಕರಿಸಿ ಸಮಾಧಾನ ಹೇಳಿದರು. ಇಲ್ಲಿ ''ಉದ್ಗೀಥಮುಪಾಸೀತ'',—ಎಂದು ವಾಕ್ಯದ ಆದಿಯಲ್ಲಿ ವಿಧಿ ಪ್ರತ್ಯಯಾಂತವಾದ ಕ್ರಿಯಾಪದವಿರುವುದರಿಂದ. ಇದು ವಿಧಿಯೆನ್ನಲು ಅಡ್ಡಿಯಿಲ್ಲವೆನ್ನುತ್ತಾರೆ.

## 3. ಪಾರಿಪ್ಲವಾಧಿಕರಣ

## ಪಾರಿಪ್ಲವಾರ್ಥಾ ಇತಿ ಚೇನ್ನ ವಿಶೇಷಿತತ್ವಾತ್

**ಸಂಗತಿ**

ಈ ಅಧಿಕರಣವೂ ಪ್ರಾಸಂಗಿಕ. ರಸತಮಾದಿ ವಾಕ್ಯಗಳನ್ನು ಸ್ತುತ್ಯರ್ಥವನ್ನಾಗಿ ಪೂರ್ವಪಕ್ಷಮಾಡಿ, ಅವು ಉಪಾಸನಪರವೆಂದು ಸ್ಥಾಪಿತವಾಯಿತು. ಹೀಗೆಯೇ ಪ್ರತರ್ದನಾದಿ ಆಖ್ಯಾನಗಳೂ ಸ್ತುತ್ಯರ್ಥಗಳೇ ಅಥವಾ ಪಾರಿಪ್ಲವಾರ್ಥಗಳೇ—ಎಂಬ ಶಂಕೆಯಿಂದ ಸಂಗತಿ.

[ಪಾರಿಪ್ಲವ= ಆಖ್ಯಾನ—''ಆಖ್ಯಾನಾನಿ ಶಂಸನ್ತಿ'',—ಎಂದು ಆಖ್ಯಾನ ಪಾರಿಪ್ಲವದಲ್ಲಿ ವಿನಿಯುಕ್ತ]

**ಸೂತ್ರಾರ್ಥ**

[ಪಾರಿಪ್ಲವಾರ್ಥಾಃ]= (ಉಪಾಖ್ಯಾನಗಳು) ಸ್ತುತ್ಯರ್ಥಗಳು. [ಇತಿ ಚೇತ್]= ಎಂದಲ್ಲಿ, [ವಿಶೇಷಿತತ್ವಾತ್]= ಆ ಉಪಾಖ್ಯಾನಗಳನ್ನು ವಿಶೇಷಿಸಿ ಹೇಳುವುದರಿಂದ, [ನ]= ಎಲ್ಲಾ ಉಪಾಖ್ಯಾನಗಳೂ ಸ್ತುತ್ಯರ್ಥವಲ್ಲ.

**ವಿವರಣೆ**

''ಪ್ರತರ್ದನೋ ಹವೈದೈವೋದಾಸಿರಿಂದ್ರಸ್ಯ ಪ್ರಿಯಂ ಧಾಮ ಉಪಜಗಾಮ''

''ಜಾನಶ್ರುತಿರ್ಹ ಪೌತ್ರಾಯಣಃ ಶ್ರದ್ಧಾದೇಯೋ ಬಹುದಾಯೀ ಬಹು ಪಾಕ್ಯ ಆಸ'',

''ಶ್ವೇತಕೇತುರ್ಹಾರುಣೇಯ ಆಸ'',—ಇತ್ಯಾದಿಯಾಗಿ ಉಪನಿಷತ್ತುಗಳಲ್ಲಿ ಅನೇಕರ ಕಥೆಗಳನ್ನು ಹೇಳಿದೆ. ಅವುಗಳನ್ನು ಯಾಗದಲ್ಲಿ ಯಜಮಾನನ್ನು ಕುರಿತು ಋತ್ವಿಕ್ಕುಗಳು ಹೇಳಬೇಕಾದ ಕಥೆಗಳನ್ನಾಗಿ ಅಂಗೀಕರಿಸಬೇಕೆ? ಅಥವಾ ಮುಂದೆ ಹೇಳಲಿರುವ ಆಯಾ ಬ್ರಹ್ಮೋಪಾಸನದಲ್ಲಿ ಕೇಳುವವರಿಗೆ ರುಚಿಯುಂಟಾಗುವುದಕ್ಕಾಗಿ ಆಯಾ ವಿದ್ಯೆಗಳನ್ನು ಸ್ತುತಿಸುವುದೆಂದು ಅಂಗೀಕರಿಸಬೇಕೆ?—ಎಂದಲ್ಲಿ, ಅಶ್ವಮೇಧದಲ್ಲಿ ಪುತ್ರಾದಿಗಳೊಂದಿಗೆ ಕೂಡಿರುವ ಯಜಮಾನನನ್ನು ನೋಡಿ ಋತ್ವಿಕ್ಕುಗಳು

ಮನ್ವಾದಿ ಕಥೆಗಳನ್ನು ಹೇಳಬೇಕೆಂದು ಹೇಳಿರುವುದರಿಂದ, ಇವುಗಳೂ ಕಥೆಗಳಾದ್ದರಿಂದ ಹಾಗೆ ಕಥೆಯನ್ನು ಹೇಳುವುದರಲ್ಲಿಯೇ ಉಪಯೋಗಿಸಬೇಕೆಂದು ಪೂರ್ವಪಕ್ಷ—

ಅಶ್ವಮೇಧದಲ್ಲಿ "ಪ್ರಥಮೇऽಹನಿ ಮನುರ್ವೈವಸ್ವತ ಇತಿ ಕಥಾಂ ಬ್ರೂಯಾತ್" —ಎಂದು ಮೊದಲ ದಿನ ತೊಡಗಿ ಕೊನೆಯವರೆಗೂ ಇಂತಿಂತಹ ದಿನಗಳಲ್ಲಿ ಈ ಕಥೆಗಳನ್ನು ಹೇಳಬೇಕೆಂದು ಆ ಕಥೆಗಳನ್ನು ವಿಂಗಡಿಸಿ ನಿರ್ದಿಷ್ಟವಾಗಿ ಹೇಳಿರುವುದರಿಂದ ಇವುಗಳು ಅದರಲ್ಲಿ ಸೇರದುದರಿಂದ, ಇವುಗಳು ವಿದ್ಯಾ ಪ್ರರೋಚನಾರ್ಥಗಳಾಗಿ ವಿದ್ಯಾವಿಧಿ ಶೇಷಭೂತಗಳೆಂದು ಸಿದ್ಧಾನ್ತ.

### ಸೂತ್ರ ೨—ತಥಾಚೈಕವಾಕ್ಯೋಪಬನ್ಧಾತ್

**ಸೂತ್ರಾರ್ಥ**

[ತಥಾ ಚ] = ಹಾಗೆಯೇ [ಏಕವಾಕ್ಯೋಪ ಬನ್ಧಾತ್] = (ವಿಧಿ ವಾಕ್ಯದೊಂದಿಗೆ) ಏಕವಾಕ್ಯವಾಗಿ ಅನ್ವಯಿಸುವುದರಿಂದ, (ಇವು ವಿದ್ಯಾವಿಧ್ಯರ್ಥಗಳು)

**ವಿವರಣೆ**

(ಉಪಬನ್ಧ = ಅನ್ವಯ). ಹೀಗೆ ಹೇಳುವಲ್ಲಿ, 'ಆತ್ಮಾವಾ ಅರೇದ್ರಷ್ಟವ್ಯಃ'—ಇತ್ಯಾದಿ ವಿದ್ಯಾವಿಧಿ ವಾಕ್ಯದೊಂದಿಗೆ ಅನ್ವಯಿಸಿ ಏಕವಾಕ್ಯವಾಗಿರುವುದು. ಹೀಗೆ ಹೇಳುವಲ್ಲಿ ಈ ವಾಕ್ಯಕ್ಕೆ ವಿದ್ಯೆಯಲ್ಲಿ ರುಚಿಯುಂಟುಮಾಡುವುದೆಂಬ ಪ್ರಯೋಜನವೂ ಸಿದ್ಧಿಸುವುದು. ಕೇಳುವವನೂ ಆ ವಿದ್ಯೆಯನ್ನು ಸುಖವಾಗಿ ಅರಿಯುತ್ತಾನೆ. ಆದ್ದರಿಂದ ಇದೇ ಯುಕ್ತ. ಕರ್ಮಕಾಂಡದಲ್ಲಿ, "ಸೋऽರೋದೀತ್"—ಎಂಬ ವಾಕ್ಯ ಕರ್ಮವಿಧಿಗೆ ಶೇಷವಾಗಿರುವಂತೆ, ಇದು ವಿದ್ಯಾವಿಧಿಗೆ ಸ್ತಾವಕವಾಗಿ ಹೊಗಳಿಕೆಯಾಗಿದ್ದುಕೊಂಡು, ಅದಕ್ಕೆ ಶೇಷಭೂತವಾಗಿದೆ.

## 4. ಅಗ್ನೀನ್ಧನಾದ್ಯಧಿಕರಣ

### ಸೂತ್ರ—ಅತಏವ ಚಾಗ್ನೀನ್ಧನಾದ್ಯನಪೇಕ್ಷಾ

**ಸಂಗತಿ**

ಹಿಂದಿನ ಎರಡು ಅಧಿಕರಣಗಳೂ ಪ್ರಾಸಂಗಿಕವಾದುವು. ಆದ್ದರಿಂದ ಈ ಅಧಿಕರಣಕ್ಕೆ ಪ್ರಥಮಾಧಿಕರಣದೊಡನೆ ಸಂಗತಿಯನ್ನು ಹೇಳಬೇಕು. ವಿದ್ಯಾವಂತರಾದ ಊರ್ಧ್ವರೇತಸ್ಸುಗಳಿಗೂ ಆಶ್ರಮವುಂಟೆನ್ನಲಾಯಿತು. "ಊರ್ಧ್ವರೇತಸ್ಸು ಚ ಶಬ್ದೇಹಿ"—ಇತ್ಯಾದಿ ಸೂತ್ರಗಳಿಂದ; ಈಗ ಊರ್ಧ್ವರೇತಸ್ಸುಗಳಿಗೆ ಯಜ್ಞಾದಿಗಳಿಲ್ಲದ್ದರಿಂದ, ಯಜ್ಞಾಂಗಕವಾದ ಉಪಾಸನ ಅವರಿಗಿಲ್ಲವೆಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಅತ ಏವ] = ಬ್ರಹ್ಮ ವಿದ್ಯೆಯೇ ಸಾಕ್ಷಾತ್ತಾಗಿ ಮೋಕ್ಷಪ್ರದವಾದುದರಿಂದ, [ಅಗ್ನೀಂಧನಾದ್ಯನಪೇಕ್ಷಾ] = ಅಗ್ನಿ, ಸಮಿತ್,—ಗಳಿಂದುಂಟಾದ ಕರ್ಮಾಪೇಕ್ಷೆಯಿಲ್ಲ. ವಿದ್ಯೆ ಮೋಕ್ಷವನ್ನು ಕೊಡುವಾಗ ಕರ್ಮವನ್ನು ಸಹಕಾರಿಯಾಗಿ ಅಪೇಕ್ಷಿಸುವುದಿಲ್ಲ—ಇದು ಶಂಕರ ಭಾಷ್ಯಾನುಸಾರ

ಶ್ರೀ ರಾಮಾನುಜ ಭಾಷ್ಯದ ಪ್ರಕಾರ;— [ಅತಃ, ಏವ] =ಊರ್ಧ್ವರೇತಸ್ಸು ಗಳಿಗೆ ವಿದ್ಯಾಧಿಕಾರವುಂಟಾದ್ದರಿಂದ, [ಅಗ್ನೀಂಧನಾದ್ಯನಪೇಕ್ಷಾ] = ಅಗ್ನ್ಯಾಧಾನ, ಅಗ್ನಿಹೋತ್ರ ಮುಂತಾದ ಕರ್ಮಾಪೇಕ್ಷೆ ಅವರಿಗೆ ಇಲ್ಲ.

**ವಿವರಣೆ**

"ಯದಿಚ್ಛನ್ತೋ ಬ್ರಹ್ಮಚರ್ಯಂ ಚರನ್ತಿ",—ಇತ್ಯಾದಿಗಳಿಂದ ಊರ್ಧ್ವ ರೇತಸ್ಸುಗಳಾದ ಸನ್ಯಾಸಿಗಳಿಗೂ ಬ್ರಹ್ಮೋಪಾಸನವನ್ನು ಮಾಡಲು ಅಧಿಕಾರವುಂಟೆಂದು, ಏರ್ಪಡುವುದರಿಂದ, ಅವರುಗಳು ಮಾಡುವ ಉಪಾಸನ ಅಗ್ನಿಹೋತ್ರಾದಿ ಕರ್ಮ ಗಳನ್ನು ಅಪೇಕ್ಷಿಸುವುದಿಲ್ಲ ಆಯಾ ಆಶ್ರಮಾನುಗುಣವಾದ ಕರ್ಮಗಳೇ ವಿದ್ಯಾಂಗ ವಾದ್ದರಿಂದ, ಸನ್ಯಾಸಿಗಳಿಗೆ ಅಗ್ನ್ಯಧಿಕಾರವಿಲ್ಲದೆ ಇದ್ದಾಗ್ಯೂ, ಅವರ ಧರ್ಮವಾದ ತಪಸ್ಸು, ಬ್ರಹ್ಮಚರ್ಯ ಮುಂತಾದುವುಗಳಿಂದಲೇ ಅವರ ಉಪಾಸನ ನೆರವೇರುವು ದೆಂದು ಭಾವ.

## 5. ಸರ್ವಾಪೇಕ್ಷಾಧಿಕರಣ

### ಸೂತ್ರ—ಸರ್ವಾಪೇಕ್ಷಾ ಚ ಯಜ್ಞಾದಿ ಶ್ರುತೇರಶ್ವವತ್

**ಸಂಗತಿ**

ಯಜ್ಞಾದಿಗಳು ಬೇಕಿಲ್ಲದೆಯೇ ವಿದ್ಯೆ ಮೋಕ್ಷವನ್ನು ಸಾಧಿಸುವುದಾದರೆ, ಆಗ್ಗೆ ಗೃಹಸ್ಥರಿಗೂ ಯಜ್ಞಾದ್ಯಪೇಕ್ಷೆಯಿಲ್ಲದೆಯೇ ವಿದ್ಯೆ ಮೋಕ್ಷವನ್ನು ಸಾಧಿಸಲು ಯಜ್ಞಾದಿ ಶ್ರುತಿಯೂ ಕೂಡ, "ವಿವಿದಿಷನ್ತಿ"—ಎಂದಿರುವುದರಿಂದ ಕರ್ಮವೇದನೇಚ್ಛೆಗೆ ಸಾಧನವೇ ಹೊರತು ವೇದನೆಗೆ ಸಾಧನವಲ್ಲ—ಎಂದು ಶಂಕಿಸಿ ಸಂಗತಿ.

**ಸೂತ್ರಾರ್ಥ**

[ಯಜ್ಞಾದಿ ಶ್ರುತೇಃ] ="ಯಜ್ಞೇನ ದಾನೇನ..."—ಇತ್ಯಾದಿ ವೇದ ವಾಕ್ಯ ದಿಂದ, [ಅಶ್ವವತ್] = ಕುದುರೆಯಂತೆ, [ಸರ್ವಾಪೇಕ್ಷಾ] =(ವಿದ್ಯೆ) ಸಕಲ ಕರ್ಮಗಳ ಅಪೇಕ್ಷೆಯುಳ್ಳದ್ದು.

**ವಿವರಣೆ**

ಗೃಹಸ್ಥನು ಬ್ರಹ್ಮೋಪಾಸನ ಮಾಡುವಾಗ, ಯಜ್ಞಾದಿ ಕರ್ಮ ಬೇಕೆ? ಬೇಡವೆ? ಎಂದು ವಿಚಾರ ಮಾಡುವಲ್ಲಿ, ಸನ್ಯಾಸಿಗೆ ಕರ್ಮಾನುಷ್ಠಾನವಿಲ್ಲದೆಯೇ ಉಪಾಸನ ನೆರವೇರುವುದರಿಂದ, ಗೃಹಸ್ಥನಿಗೂ ಅದರ ಅಪೇಕ್ಷೆಯಿಲ್ಲ. ಒಂದು ಸ್ವರ್ಗವನ್ನು ಕುರಿತು ಇಬ್ಬರು ಒಂದು ಯಾಗವನ್ನು ಮಾಡಿದ್ದೇ ಆದರೆ, ಅವರಲ್ಲಿ ಒಬ್ಬನ ಯಾಗಕ್ಕೆ ಈ ಅಂಗಗಳುಂಟು, ಮತ್ತೊಬ್ಬನಿಗೆ ಇಲ್ಲವೆಂದು ಭೇದ ಕಾಣಿಸುವುದಿಲ್ಲ. ಅದರಂತೆ ಸನ್ಯಾಸಿಯು ಮತ್ತು ಗೃಹಸ್ಥನ ಉಪಾಸನಕ್ಕೆ ಅಂಗದಲ್ಲಿ ಭೇದವಿಲ್ಲವೆಂದು ಪೂರ್ವಪಕ್ಷ. "ಯಜ್ಞೇನ ದಾನೇನ ತಪಸಾನಾಶಕೇನ",—ಇತ್ಯಾದಿ ಶ್ರುತಿ ಗೃಹಸ್ಥನಿಗೆ ಯಜ್ಞಾದಿ ಗಳನ್ನು ಅಂಗವಾಗಿ ಮಾಡಿಕೊಂಡೇ ಬ್ರಹ್ಮೋಪಾಸನವನ್ನು ಮಾಡಲು ಹೇಳಿರುವು ದರಿಂದ, ಗೃಹಸ್ಥನು ಕರ್ಮಗಳನ್ನು ಅನುಷ್ಠಿಸಿಕೊಂಡೇ ಉಪಾಸನೆ ಮಾಡಬೇಕು. ಬೇಟೆಗಾಗಿ ಕುದುರೆಯನ್ನು ಏರುವಾಗ, ಕಡಿವಾಳ ಮುಂತಾದುವುಗಳನ್ನು ಅದಕ್ಕೆ

ಹಾಕಿಯೇ ಇರಬೇಕಾದಂತೆ, ಇಲ್ಲಿಯೂ ಕಂಡುಕೊಳ್ಳಬೇಕು. ಆಶ್ರಮ ಭೇದದಿಂದ ಅಂಗ ಭೇದಶಾಸ್ತ್ರ ಸಿದ್ಧವಾದ್ದರಿಂದ, ದೋಷವಲ್ಲವೆಂದು ಸಿದ್ಧಾಂತ.

## 6. ಶಮದಮಾದ್ಯಧಿಕರಣ

**ಸೂತ್ರ—ಶಮದಮಾದ್ಯುಪೇತಸ್ಸ್ಯಾತ್ ತಥಾಪಿ ತು ತದ್ವಿಧೇಸ್ತದಂಗತಯಾ ತೇಷಾಮಪ್ಯವಶ್ಯಾನುಷ್ಠೇಯತ್ವಾತ್**

**ಸಂಗತಿ**

ವಿದ್ಯಾನಿಷ್ಠನಾದ ಗೃಹಸ್ಥನಿಗೆ ಶಮದಮಾದಿಗಳು ಆವಶ್ಯಕವೇ? ಇಲ್ಲವೆ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ತಥಾ, ಅಪಿ] = ಆದಾಗ್ಯೂ, [ತದಂಗತಯಾ] = ವಿದ್ಯೆಗೆ ಅಂಗವಾಗಿ [ತದ್ವಿಧೇಃ] = ಶಮಾದಿಗಳನ್ನು ವಿಧಿಸುವುದರಿಂದ, [ತೇಷಾಂ, ಅಪಿ ] = ಅವುಗಳನ್ನೂ [ಅವಶ್ಯಾನುಷ್ಠೇಯತ್ವಾತ್] = ಅವಶ್ಯ ಅನುಷ್ಠಿಸಬೇಕಾದ್ದರಿಂದ, [ಶಮದಮಾದ್ಯುಪೇತಃ, ಸ್ಯಾತ್] = ಶಮದಮಾದಿಗಳೊಂದಿಗೆ ಕೂಡಿದವನಾಗಿಯೇ ಇರಬೇಕು.

**ವಿವರಣೆ**

ಗೃಹಸ್ಥ ಬ್ರಹ್ಮೋಪಾಸನೆಯನ್ನು ಮಾಡುವಾಗ, ಶಮದಮಾದಿ ಗುಣಗಳು ಬೇಕೋ ಬೇಡವೋ—ಎಂದಲ್ಲಿ, ಯಜ್ಞಾದಿಗಳನ್ನು ಮಾಡುವಾಗ, ಮನಸ್ಸನ್ನೂ ಚಕ್ಷುರಾದಿ ಬಾಹ್ಯೇಂದ್ರಿಯಗಳನ್ನೂ ಪ್ರವರ್ತಿಸುವಂತೆ ಮಾಡಬೇಕು. ಶಮದಮಗಳೆಂಬುದು—ಆ ಇಂದ್ರಿಯಗಳು ಎಲ್ಲಿಯೂ ಪ್ರವರ್ತಿಸದ ಹಾಗೆ ತಡೆಯುವುದು. ಇವೆರಡೂ ಒಬ್ಬನಿಗೆ ಕೂಡದುದರಿಂದ,, ಇವು ಗೃಹಸ್ಥನಿಗೆ ಬೇಕಿಲ್ಲವೆಂದು ಪೂರ್ವಪಕ್ಷ.

''ಶಾನ್ತೋದಾನ್ತಃ...''ಎಂದು ತೊಡಗಿ,''ಆತ್ಮಾನಂ ಪಶ್ಯೇತ್'',—ಎಂದು ಶಮದಮಾದಿಗಳೊಂದಿಗೆ ಕೂಡಿದವನಾಗಿಯೇ ಬ್ರಹ್ಮೋಪಾಸನಮಾಡತಕ್ಕದ್ದೆಂದು ವಿಧಿಸುವುದರಿಂದಲೂ, ಏಕಾಗ್ರವಾಗಿ ಧ್ಯಾನಿಸುವುದಕ್ಕೆ ಮನಸನ್ನೂ ಮಿಕ್ಕ ಇಂದ್ರಿಯಗಳನ್ನೂ—ಎಲ್ಲಿಯೂ ಹೋಗಗೊಡದೆ ತಡೆಯಬೇಕಾದ್ದರಿಂದಲೂ, ಶಮದಮಾದಿಗಳು ಗೃಹಸ್ಥನಿಗೂ ಆವಶ್ಯಕ. ಇಂದ್ರಿಯಗಳಿಗೆ ಒಂದೇ ಕಾಲದಲ್ಲಿ ಪ್ರವೃತ್ತಿಯೂ, ನಿವೃತ್ತಿಯೂ, ಕೂಡದಲ್ಲವೆ?—ಎಂದಲ್ಲಿ,—ಶಾಸ್ತ್ರವಿಹಿತ ಕರ್ಮಗಳಲ್ಲಿ ಪ್ರವೃತ್ತಿಯೂ ನಿಷಿದ್ಧ ಕರ್ಮಗಳಲ್ಲಿ ನಿವೃತ್ತಿಯೂ ಹೇಳಲ್ಪಟ್ಟಿರುವುದರಿಂದ—ಎರಡೂ ಕೂಡುವುವು. ಸತ್ಕರ್ಮದಲ್ಲಿ ಪ್ರವೃತ್ತಿಯೂ ಪಾಪವನ್ನು ನೀಗಿಸಿ ಮನಸ್ಸನ್ನು ನೆಲೆಗೆ ತಂದುಕೊಳ್ಳುವುದಕ್ಕೆ ಕಾರಣವಾಗುವುದು. ಆದ್ದರಿಂದ ವಿರೋಧವಿಲ್ಲ—ಎಂದು ಸಿದ್ಧಾಂತ.

## 7. ಸರ್ವಾನ್ನಾನುಮತ್ಯಧಿಕರಣ

**ಸೂತ್ರ—ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್**

[ ಉಷಸ್ತಿ ಕಹೋಳವಿದ್ಯಾ]

**ಸಂಗತಿ**

ಬ್ರಹ್ಮವಿತ್ತುಗಳಿಗೆ ಶಮದಮಾದಿಗಳು ಅನುಷ್ಠೇಯವೆನ್ನಲಾಯಿತು. ಅದರಲ್ಲಿ ಭೋಜನನಿಯಮರೂಪವಾದ ಶಮ ವಿಶೇಷವುಂಟೆ?—ಇಲ್ಲವೆ?—ಎಂಬ ಶಂಕೆ ಯಿಂದ ಸಂಗತಿ.

**ಸೂತ್ರಾರ್ಥ**

[ತದ್ದರ್ಶನಾತ್] = ಅದನ್ನೇ ಶ್ರುತಿಗಳಲ್ಲಿ ಕಾಣುವುದರಿಂದ [ಸರ್ವಾನ್ನಾನುಮತಿಃ, ಚ] = ಎಲ್ಲಾ ಅನ್ನವನ್ನೂ ಭುಜಿಸಲು ಅನುಮತಿಯು [ಪ್ರಾಣಾತ್ಯಯೇ] = ಪ್ರಾಣನಾಶ ಕಾಲದಲ್ಲಿ (ಹೇಳಲ್ಪಟ್ಟಿತು)

**ವಿವರಣೆ**

ವಾಜಸನೇಯದಲ್ಲಿಯೂ, ಛಾನ್ದೋಗ್ಯದಲ್ಲಿಯೂ ಪ್ರಾಣವಿದ್ಯೆಯಲ್ಲಿ, 'ನಹವಾ ಏವಂ ವಿದಿ ಕಿಂಚನಾನನ್ನಂ ಭವತಿ,'—ಅಂದರೆ, ಈ ಪ್ರಾಣೋಪಾಸಕನಿಗೆ ಅಭಕ್ಷ್ಯವಾದುದು ಯಾವುದೂ ಇಲ್ಲವೆಂದು ಸರ್ವಾನ್ನವನ್ನೂ ಭಕ್ಷಿಸುವಂತೆ ಅನುಮತಿ ಕೊಡುತ್ತದೆ. ಇದು ಆ ಉಪಾಸಕನು ಎಲ್ಲಾ ಕಾಲದಲ್ಲಿಯೂ ಹೀಗೆ ಮಾಡಬಹುದೆಂತಲೆ? ಅಥವಾ ಯಾವುದೋ ಒಂದು ಆಪತ್ಕಾಲದಲ್ಲಿ ಮಾಡಿದರೆ ದೋಷವಿಲ್ಲವೆಂತಲೆ?—ಎಂದಲ್ಲಿ, ಅದರಲ್ಲಿ ಕಾಲ ವಿಶೇಷವನ್ನು ಹೇಳಿಲ್ಲವಾದ್ದರಿಂದ ಯಾವಾಗಲೂ ಮಾಡಬಹುದೆಂದು ಪೂರ್ವಪಕ್ಷ.

'ಉಷಸ್ತಃ ಕಿಲ ಚಾಕ್ರಾಯಣಃ',—ಎಂದು ತೊಡಗಿ, ಉಷಸ್ತಿಯೆಂಬ ಋಷಿ ದುರ್ಭಿಕ್ಷದಲ್ಲಿ ಒಂದು ದೇಶದಲ್ಲಿ ಹೋಗುತ್ತಿರುವಾಗ ಹಸಿವಿನಿಂದ ಬಳಲಿ ಪ್ರಾಣ ಹೋಗುವಷ್ಟಾಗಲು, ಅಲ್ಲಿ ಮಾವಟಿಗನೊಬ್ಬನು ತಿಂದು ಮಿಕ್ಕಿದ್ದ ಉಚ್ಛಿಷ್ಟ ಹುರುಳಿಯನ್ನು ತಾನು ತಿಂದು, ಬಳಿಕ ಅವನು ಕೊಡಲು ಬಂದ ನೀರನ್ನು ತೆಗೆದುಕೊಳ್ಳದೆ, "ಇದು ನೀನು ಕುಡಿದು ಮಿಕ್ಕ ನೀರು, ನಾನಿದನ್ನು ಕುಡಿಯಕೂಡದು, ಈ ಹುರುಳಿಯನ್ನು ತಿನ್ನದಿದ್ದಲ್ಲಿ ಪ್ರಾಣ ಹೋಗಿಬಿಡುತ್ತಿತ್ತು. ಆದ್ದರಿಂದ ಅದನ್ನು ತಿಂದೆ. ಇನ್ನು ಪ್ರಾಣ ಭಯವಿಲ್ಲ"—ಎಂದು ಹೇಳಿ ಬೇರೆಡೆಯಲ್ಲಿ ಹೋಗಿ ನೀರು ಕುಡಿದರೆಂದಿದೆ. ಅಧಿಕ ಶಕ್ತಿಯುಳ್ಳ ಬ್ರಹ್ಮೋಪಾಸಕರಾದ ಅವರಿಗೇ ಉಚ್ಛಿಷ್ಟ ಭೋಜನ ದೋಷವಾದಲ್ಲಿ, ಅಲ್ಪ ಶಕ್ತಿಯುಳ್ಳ ಪ್ರಾಣೋಪಾಸಕನಿಗೆ ಹೇಳುವುದೇನಿದೆ? ಆದ್ದರಿಂದ, ಅನ್ನವಿಲ್ಲದೆ ಪ್ರಾಣ ಹೋಗುವ ಕಾಲದಲ್ಲಿ ಯಾವ ಅನ್ನವನ್ನಾದರೂ ತಿನ್ನಬಹುದೆಂದೇ ಹೇಳಿದೆ. ಉಳಿದ ಕಾಲಗಳಲ್ಲಿ ತಿನ್ನಕೂಡದೆಂದು ಸಿದ್ಧಾನ್ತ.

ಸೂತ್ರ ೨—**ಅಬಾಧಾಚ್ಚ**

**ಸೂತ್ರಾರ್ಥ**

'ಆಹಾರ ಶುದ್ಧೌ ಸತ್ತ್ವ ಶುದ್ಧಿಃ ಸತ್ತ್ವ ಶುದ್ಧೌ ಧ್ರುವಾಸ್ಮೃತಿಃ',—(ಪರಿಶುದ್ಧವಾದ ಆಹಾರವನ್ನು ಸೇವಿಸಿದರೆ ಜ್ಞಾನ ನಿರ್ಮಲವಾಗಿರುವುದು. ಅದರಿಂದ ಉಪಾಸನ ಸಿದ್ಧಿಸುವುದು)—ಎಂದು ಪರಿಶುದ್ಧವಾದ ಆಹಾರವನ್ನೇ ಸೇವಿಸಲು ಹೇಳುವ ಪ್ರಮಾಣಗಳಿಗೂ ಈಗ ವಿರೋಧವಿಲ್ಲದ್ದರಿಂದ ಇದೇ ಸಿದ್ಧಾನ್ತ..

ಸೂತ್ರ ೩—**ಅಪಿಸ್ಮರ್ಯತೇ**

**ಸೂತ್ರಾರ್ಥ**

[ಸ್ಮರ್ಯತೇ ಅಪಿ] "ಪ್ರಾಣ ಸಂಶಯಮಾಪನ್ನೋ ಯೋಽನ್ನಮತ್ತಿಯತಸ್ತತಃ ।
ಲಿಪ್ಯತೇನ ಸ ಪಾಪೇನ ಪದ್ಮಪತ್ರ ಮಿವಾಂಭಸಾ" ॥

ಅಂದರೆ, ಪ್ರಾಣಸಂಕಟವೊದಗಿದಾಗ ಯಾವ ಅನ್ನವನ್ನು ತಿಂದಾಗ್ಯೂ ಅವನಿಗೆ ಪಾಪ ಸಂಭವಿಸದು.—ಎಂದು ಸ್ಮೃತಿಯೂ ಪ್ರಾಣಾಪತ್ತಿನಲ್ಲಿಯೇ ಸರ್ವಾನ್ನ ಭಕ್ಷಣವನ್ನು ಹೇಳುತ್ತೆ.

ಸೂತ್ರ ೪—**ಶಬ್ದಶ್ಚಾತೋಽಕಾಮಕಾರೇ**

### ಸೂತ್ರಾರ್ಥ

[ಅತಃ] = ಆಪತ್ಕಾಲದಲ್ಲಿ ಸರ್ವಾನ್ನಾನುಮತಿಯನ್ನು ಮಾಡಿದೆಯಾದ್ದರಿಂದ, [ಅಕಾಮಕಾರೇ] = ಯಥೇಚ್ಛಭಕ್ಷಣ ಕೂಡದ ವಿಷಯದಲ್ಲಿ [ಶಬ್ದಃ, ಚ] = ಶಬ್ದ ಪ್ರಮಾಣವೂ ಇದೆ. ಕಠದಲ್ಲಿ 'ತಸ್ಮಾದ್ಬ್ರಾಹ್ಮಣೋ ನ ಸುರಾಂ ಪಿಬೇತ್''—ಇತ್ಯಾದಿ ಪ್ರಮಾಣಗಳು ಸುರಾಪಾನಾದಿಗಳನ್ನು ನಿಷೇಧಿಸಿದೆಯೆಂದು ತಾತ್ಪರ್ಯ.

## 8. ವಿಹಿತತ್ವಾಧಿಕರಣ

ಸೂತ್ರ—**ವಿಹಿತತ್ವಾಚ್ಚಾಶ್ರಮ ಕರ್ಮಾಪಿ**

### ಸಂಗತಿ

ಯಜ್ಞಾದಿ ಕರ್ಮಗಳು ಬ್ರಹ್ಮವಿದ್ಯೆಗೆ ಅಂಗವೆಂದರು. ಮುಮುಕ್ಷುಗಳಲ್ಲದೆ ಕೇವಲ ಆಶ್ರಮಿಗಳೂ ಅವನ್ನು ಅನುಷ್ಠಿಸಬೇಕೆ? ಬೇಡವೆ?—ಎಂಬ ಶಂಕೆಯಿಂದ ಸಂಗತಿ.

### ಸೂತ್ರಾರ್ಥ

[ವಿಹಿತತ್ವಾತ್, ಚ] = ವಿಧಿಸಿರುವುದರಿಂದ, [ಆಶ್ರಮ ಕರ್ಮ, ಅಪಿ] = (ಅಗ್ನಿ ಹೋತ್ರಾದಿಗಳು) ಆಶ್ರಮಕ್ಕೆ ಅಂಗವಾದ ಕರ್ಮವಾಗಿವೆ.

### ವಿವರಣೆ

ಮೇಲೆ ಅಗ್ನಿಹೋತ್ರಾದಿಗಳನ್ನು ವಿದ್ಯಾಂಗವಾಗಿ ಹೇಳಿತು. ಯಾವನಿಗೆ ಮೋಕ್ಷೇಚ್ಛೆ ಹುಟ್ಟಿಲ್ಲವೋ—ಕೇವಲ ಗೃಹಸ್ಥಾಶ್ರಮ ಧರ್ಮದಲ್ಲಿ ಮಾತ್ರವೇ ಇದ್ದಾನೆಯೋ, ಅವನು ಅಗ್ನಿಹೋತ್ರಾದಿಗಳನ್ನು ಆಶ್ರಮಾಂಗವಾಗಿ ಮಾಡಬೇಕೆ? ಬೇಡವೆ?—ಎಂದಲ್ಲಿ,—ಅವು ಆಶ್ರಮಕ್ಕೆ ಅಂಗವಾದಲ್ಲಿ ನಿತ್ಯವಾದ ಮೋಕ್ಷಕ್ಕೆ ಸಾಧನವಾದ ವಿದ್ಯೆಗೂ ಅಂಗವಾಗಿ ಅನಿತ್ಯವಾದ ಸ್ವರ್ಗಕ್ಕೆ ಸಾಧನವಾದ ಆಶ್ರಮಕ್ಕೂ ಅಂಗವಾಗಬೇಕಾಗುವುದು. ಒಂದೇ ನಿತ್ಯ ಫಲಕ್ಕೂ ಅನಿತ್ಯ ಫಲಕ್ಕೂ ಸಾಧನವಾಗ ಕೂಡದಾದ್ದರಿಂದ ಅವು ಆಶ್ರಮಾಂಗವಲ್ಲವೆಂದು ಪೂರ್ವಪಕ್ಷ.

''ಯಾವಜ್ಜೀವಮಗ್ನಿಹೋತ್ರಂ ಜುಹುಯಾತ್'',—ಎಂದು ಬದುಕಿರುವವರೆಗೂ ಅಗ್ನೀಹೋತ್ರವನ್ನು ಮಾಡಬೇಕೆಂದು ಕೇವಲ ಆಶ್ರಮ ನಿಷ್ಠನಿಗೂ ವಿಧಿಸಿರುವುದರಿಂದ ಅವು ಆಶ್ರಮ ಕರ್ಮಗಳೂ ಆಗಿವೆ. ವಿನಿಯೋಗ ಒಂದಾದರೆ ಅದು ನಿತ್ಯಾನಿತ್ಯಗಳೆರಡಕ್ಕೂ ಸಾಧನವಾಗಕೂಡದು. ಇಲ್ಲಿ ಒಂದೇ ವಿನಿಯೋಗ ಭೇದದಿಂದ ಎರಡಕ್ಕೂ ಸಾಧನವಾಗಬಹುದು. ಒಂದು ಅಗ್ನಿಹೋತ್ರವೇ ಜೀವನಾಧಿಕಾರವಾಗಿಯೂ ಸ್ವರ್ಗ ಕಾಮನಾಧಿಕಾರವಾಗಿಯೂ ಅನುಷ್ಠಿಸಲ್ಪಡುತ್ತೆ. ಅದರ ಹಾಗೆ ಇಲ್ಲಿಯೂ ಕಂಡುಕೊಳ್ಳುವುದು.

ಸೂತ್ರ ೨—**ಸಹಕಾರಿತ್ವೇನ ಚ**

### ಸೂತ್ರಾರ್ಥ

(''ಯಜ್ಞೇನ ದಾನೇನ ಬ್ರಾಹ್ಮಣಾ ವಿವಿದಿಷನ್ತಿ'',—ಎಂದು ವಿದ್ಯಾಂಗವಾಗಿಯೂ ವಿಧಿಸಿರುವುದರಿಂದ) ವಿದ್ಯಾಂಗವಾಗಿಯೂ ಅನುಷ್ಠಿಸಬೇಕು.

ಸೂತ್ರ ೩—**ಸರ್ವಥಾಪಿ ತ ಏವೋಭಯಲಿಂಗಾತ್**

**ಸೂತ್ರಾರ್ಥ**

[ಸರ್ವಥಾ ಅಪಿ] = ಎರಡು ಕಡೆಗಳಲ್ಲಿಯೂ ವಿನಿಯೋಗವಿದ್ದಾಗ್ಯೂ, [ಉಭಯ ಲಿಂಗಾತ್] = ಎರಡು ಕಡೆಗಳಲ್ಲಿಯೂ ''ಅಗ್ನಿಹೋತ್ರಂ'' — ಇತ್ಯಾದಿಯಾದ ನಾಮಾದಿಗಳು ಒಂದಾಗಿರುವುದರಿಂದ, [ತೇ ಏವ] = ಆ ಅಗ್ನಿಹೋತ್ರಾದಿಗಳೇ. ಕರ್ಮಭೇದವಿಲ್ಲವೆಂದು ತಾತ್ಪರ್ಯ. ವಿದ್ಯಾರ್ಥವಾಗಿಯೂ ಆಶ್ರಮಾರ್ಥವಾಗಿಯೂ ಆ ಯಜ್ಞಾದಿಗಳೇ ವಿಹಿತವಾಗಿವೆ..

ಸೂತ್ರ ೪—**ಅನಭಿಭವಂ ಚ ದರ್ಶಯತಿ**

**ಸೂತ್ರಾರ್ಥ**

[ಅನಭಿಭವಂ ಚ] = ವಿದ್ಯೆಯನ್ನು ಆರಂಭಿಸಿ, ಪಾಪದಿಂದ ನೆರವೇರದಿರುವುದೆಂಬ, ವಿದ್ಯೆಗೆ ಉಂಟಾಗುವ ಯಾವದೊಂದು ಪ್ರತಿಬಂಧಕವುಂಟೋ—ಅದಿಲ್ಲದಿರುವುದನ್ನು (ಪ್ರತಿಬಂಧಕನಾಶವನ್ನು) [ದರ್ಶಯತಿ] = ''ಧರ್ಮೇಣಪಾಪಮಪನುದತಿ',— (ಅಗ್ನಿಹೋತ್ರಾದಿ ಕರ್ಮಾನುಷ್ಠಾನದಿಂದ ವಿದ್ಯೆಗೆ ವಿರೋಧಿಯಾದ ಪಾಪವನ್ನು ಹೋಗಲಾಡಿಸಿಕೊಳ್ಳುತ್ತಾನೆ)—ಎಂದು ಶ್ರುತಿ ಹೇಳುತ್ತೆ.

ಕರ್ಮವೆಂಬುದು ಪ್ರತಿಬಂಧಕ ನಿವೃತ್ತಿಯ ಮೂಲಕ ವಿದ್ಯೆಗೆ ಸಹಕಾರಿಯಾದ್ದರಿಂದ, ಆಶ್ರಮ ವಿಷಯದಲ್ಲಿಯೂ ವಿದ್ಯೆಯ ವಿಷಯದಲ್ಲಿಯೂ ಉಪಯೋಗಿಸುವುದೆಂದು ತಾತ್ಪರ್ಯ.

## 9. ವಿಧುರಾಧಿಕರಣ

ಸೂತ್ರ—**ಅನ್ತರಾಚಾಪಿತು ತದ್ದೃಷ್ಟೇಃ**

**ಸಂಗತಿ**

ನಾಲ್ಕು ಆಶ್ರಮಿಗಳಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟೆನ್ನಲಾಯಿತು! ಈಗ, ಆಶ್ರಮಿಗಳಲ್ಲದ ವಿಧುರಾದಿಗಳಿಗೆ ಬ್ರಹ್ಮ ವಿದ್ಯೆಯಲ್ಲಿ ಅಧಿಕಾರವಿದೆಯೆ ಇಲ್ಲವೆ?—ಎಂಬ ಸಂಶಯದಿಂದ ಸಂಗತಿ.

**ಸೂತ್ರಾರ್ಥ**

[ತದ್ದೃಷ್ಟೇಃ] = ಆಶ್ರಮವಿಲ್ಲದೆ ಇರತಕ್ಕವರಿಗೂ ಬ್ರಹ್ಮವಿದ್ಯಾನುಷ್ಠಾನವು ಉಪನಿಷತ್ತು ಮುಂತಾದುದರಲ್ಲಿ ಕಾಣುವುದರಿಂದ [ಅನ್ತರಾ ಚ, ಅಪಿ] = ಆ ಆಶ್ರಮಗಳ ನಡುವೆ ವರ್ತಿಸುವವರಿಗೂ (ಬ್ರಹ್ಮ ವಿದ್ಯಾಧಿಕಾರವುಂಟು).

**ವಿವರಣೆ**

ಈ ಅಧಿಕರಣದಲ್ಲಿ ಅನಾಶ್ರಮಿಗಳಿಗೂ ಬ್ರಹ್ಮ ವಿದ್ಯಾಧಿಕಾರವುಂಟೆನ್ನುತ್ತಾರೆ;— ಪತ್ನಿ ಮರಣ ಹೊಂದಿದ ನಂತರ ಮತ್ತೆ ವಿವಾಹವಾಗದೆ ಹಾಗೆಯೇ ಇರುವವನಿಗೆ ವಿಧುರನೆಂದು ಹೆಸರು. ಈ ವಿಧುರನಿಗೂ, ಬ್ರಹ್ಮಚರ್ಯವ್ರತವನ್ನು ಮುಗಿಸಿಬಿಟ್ಟು ಬಳಿಕ ಮದುವೆಯಿಲ್ಲದೆ ಹಾಗೆಯೇ ಇರುವವನಿಗೂ ಒಂದು ಆಶ್ರಮವೆಂಬುದಿಲ್ಲ.

ಇವರನ್ನು ನಿರಾಶ್ರಮಿಗಳೆನ್ನುವರು. ಅವರಿಗೆ ಅಗ್ನಿಹೋತ್ರಾದಿಯಾದ ಆಶ್ರಮ ಕರ್ಮಗಳಿಲ್ಲವಾದ್ದರಿಂದ, ಆ ಕರ್ಮಗಳನ್ನು ಅಂಗವಾಗಿಯುಳ್ಳ ಬ್ರಹ್ಮೋಪಾಸನ ವನ್ನು ಅವರು ಮಾಡಕೂಡದೆಂದು ಕೆಲವರೆನ್ನುವರು.

ರೈಕ್ವರು, ಭೀಷ್ಮರು, ಸಂವರ್ತಕ ಮುಂತಾದ ನಿರಾಶ್ರಮಿಗಳು ಬ್ರಹ್ಮೋಪಾಸನ ದಲ್ಲಿ ನಿರತರಾಗಿದ್ದರೆಂದು ಉಪನಿಷತ್ತು ಮುಂತಾದ ಗ್ರಂಥಗಳಲ್ಲಿ ಪ್ರಸಿದ್ಧವಾಗಿರುವು ದರಿಂದ, 'ಯಜ್ಞೇನ ದಾನೇನ ತಪಸಾನಾಶಕೇನ ಬ್ರಾಹ್ಮಣಾ ವಿವಿದಿಷನ್ತಿ"— ಎಂಬ ಶ್ರುತಿಯಲ್ಲಿ ದಾನ, ತಪಸ್ಸು, ಉಪವಾಸಗಳನ್ನೂ ಬ್ರಹ್ಮವಿದ್ಯಾಂಗವಾಗಿ ಹೇಳುವುದರಿಂದ ಇವು ವಿಧುರಾದಿಗಳಿಗೂ ಕೂಡುವುದರಿಂದ ಇವನ್ನೇ ಅಂಗವಾಗಿ ಹೊಂದಿ ಅವರೂ ಬ್ರಹ್ಮೋಪಾಸನವನ್ನು ಮಾಡಬಹುದೆಂದು ಸಿದ್ಧಾನ್ತ.

### ಸೂತ್ರ ೨—**ಅಪಿಸ್ಮರ್ಯತೇ**

**ಸೂತ್ರಾರ್ಥ**

"ಜಪ್ಯೇನಾಪಿ ಚ ಸಂಸಿದ್ಧ್ಯೇತ್ ಬ್ರಾಹ್ಮಣೋ ನಾತ್ರ ಸಂಶಯಃ", ಅಂದರೆ, ಜಪವನ್ನು ಅಂಗವಾಗಿಟ್ಟುಕೊಂಡು ಬ್ರಹ್ಮೋಪಾಸನವನ್ನು ಮಾಡುವವನೂ ಸಿದ್ಧಿ ಹೊಂದುವನು; ಇದರಲ್ಲಿ ಸಂಶಯವಿಲ್ಲ.—ಎಂದು ಧರ್ಮ ಶಾಸ್ತ್ರದಲ್ಲಿ ಹೇಳಲ್ಪಡುತ್ತೆ. ಆದ್ದರಿಂದ ಅವುಗಳಲ್ಲಿ ಅಧಿಕಾರವುಳ್ಳ ವಿಧುರಾದಿಗಳು ಬ್ರಹ್ಮ ವಿದ್ಯಾಧಿಕಾರಿಗಳಾಗ ಬಹುದು.

### ಸೂತ್ರ ೩—**ವಿಶೇಷಾನುಗ್ರಹಾಚ್ಚ**

**ಸೂತ್ರಾರ್ಥ**

'ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯಯಾತ್ಮಾನ ಮನ್ವಿಚ್ಛೇತ್",— ಅಂದರೆ, ತಪಸ್ಸು, ಬ್ರಹ್ಮಚರ್ಯ, ಶ್ರದ್ಧೆ, ವಿದ್ಯೆ ಮುಂತಾದುದರಿಂದ ಪರಮಾತ್ಮನನ್ನು ಅರಿಯಬೇಕು—ಎಂದು ತಪಸ್ಸು ಮುಂತಾದುದರಿಂದ, ವಿದ್ಯಾನುಗ್ರಹ—ಅಂದರೆ, ಅವು ಗಳಿಂದ ವಿದ್ಯಾನಿಷ್ಪತ್ತಿಯನ್ನು ಶ್ರುತಿಯೂ ಹೇಳುವುದರಿಂದ, ಅವರಿಗೆ ವಿದ್ಯಾಧಿ ಕಾರವುಂಟು.

### ಸೂತ್ರ ೪—**ಅತಸ್ತ್ವಿತರ ಜ್ಯಾಯೋಲಿಂಗಾಚ್ಚ**

**ಸೂತ್ರಾರ್ಥ**

[ಲಿಂಗಾತ್] = ("ಅಗ್ನೇಗೃಹಪತೇಸುಗೃಹಪತಿಃ ತೇನೈತಿ ಬ್ರಹ್ಮವಿತ್..." ಇತ್ಯಾದಿ ಗಾರ್ಹಸ್ಥ್ಯಕ್ಕೆ ಪ್ರಾಶಸ್ತ್ಯ ಗಮಕ ಶ್ರೌತಲಿಂಗ ಮತ್ತು ಅನಾಶ್ರಮನಿಂದಾಪರ) ಸ್ಮೃತಿಯಿಂದ [ಅತಃ] = ಈ ಅನಾಶ್ರಮಿಯಾಗಿರುವುದಕ್ಕಿಂತ [ಇತರತ್] = ಬೇರೆ ಯಾದದ್ದು. ಅಂದರೆ ಆಶ್ರಮಿಯಾಗಿರುವುದು [ಜ್ಯಾಯಃ] = ಶ್ರೇಷ್ಠ.

**ವಿವರಣೆ**

ಆದರೆ, ಆಶ್ರಮ ವ್ಯರ್ಥವಾಗಿಬಿಡುವುದೆಂದಲ್ಲ, "ಅನಾಶ್ರಮೀನ ತಿಷ್ಠೇತ್ತು ದಿನಮೇಕಮಪಿ ದ್ವಿಜಃ",—ಇತ್ಯಾದಿಯಾದ ಧರ್ಮಶಾಸ್ತ್ರ ವಚನಗಳು, ಬ್ರಾಹ್ಮಣ ನೊಂದು ಆಶ್ರಮವಿಲ್ಲದೆ ಇರಕೂಡದು. ಹೀಗೆ ಒಂದು ವರ್ಷವಿದ್ದನಾದರೆ, ಮೂರು

ಕೃಛ್ರವನ್ನು ಪ್ರಾಯಶ್ಚಿತ್ತವಾಗಿ ಮಾಡಬೇಕೆಂದು ಹೇಳುವುದರಿಂದ, ನಿರಾಶ್ರಮಿಯಾಗಿರುವುದಕ್ಕಿಂತ ಒಂದು ಆಶ್ರಮವನ್ನು ಅವಲಂಬಿಸಿರುವುದೇ ಉತ್ತಮ. ನಿರಾಶ್ರಮಿಗೆ ವಿದ್ಯಾಧಿಕಾರವನ್ನು ಹೇಳಿದ್ದು ವಿವಾಹಕ್ಕೆ ಬೇಕಾದ ಧನ ಮುಂತಾದ ಉಪಪತ್ತಿಯಿಲ್ಲದವನಿಗೆ ಆಪತ್ಕಾಲದಲ್ಲಿ ವಿದ್ಯಾಧಿಕಾರವನ್ನು ಹೇಳಿದೆಯೆಂದು ತಾತ್ಪರ್ಯ.

## 10. ತದ್ಭೂತಾಧಿಕರಣ

### ಸೂತ್ರ—ತದ್ಭೂತಸ್ಯತುನಾತದ್ಭಾವೋಜೈಮಿನೇರಪಿನಿಯಮಾತ್ ತದ್ರೂಪಾಭಾವೇಭ್ಯಃ

### ಸಂಗತಿ

ವಿಧುರಾಧಿಕಾರಿಗಳಿಗೆ ವಿದ್ಯಾಧಿಕಾರವುಂಟೆನ್ನಲಾಯಿತು. ಅನಾಶ್ರಮಿತ್ವ ಸಾಮ್ಯದಿಂದ, ಆಶ್ರಮ ಭ್ರಷ್ಟರಿಗೂ ವಿದ್ಯಾಧಿಕಾರವುಂಟೆಂದು ಶಂಕೆಯಿಂದ ಸಂಗತಿ.

### ಸೂತ್ರಾರ್ಥ

[ತದ್ರೂಪಾಭಾವೇಭ್ಯಃ] = ನೈಷ್ಠಿಕಾದ್ಯಾಶ್ರಮ ಧರ್ಮ ಪ್ರಚ್ಯುತಿಗಳಿಂದ [ನಿಯಮಾತ್] = ನಿಯಮಿಸುವುದರಿಂದ, ತದ್ಭೂತಸ್ಯ] = ನೈಷ್ಠಿಕಾದ್ಯಾಶ್ರಮಿಯಾಗಿರುವವನಿಗೆ [ಅತದ್ಭಾವಃ] = ಅನಾಶ್ರಮಿಯಾಗಿರುವಿಕೆ [ನ] = ಸಂಭವಿಸುವುದಿಲ್ಲ [ಜೈಮಿನೇಃ, ಅಪಿ] = ಜೈಮಿನಿಯವರ ಮತವೂ ಇದೇ ಆಗಿದೆ.

### ವಿವರಣೆ

ನೈಷ್ಠಿಕ ಬ್ರಹ್ಮಚಾರಿ, ವಾನಪ್ರಸ್ಥ, ಸನ್ಯಾಸಿ, ಇವರುಗಳು ತಮ್ಮ ಆಶ್ರಮದಲ್ಲಿಂದ ಭ್ರಷ್ಟರಾದಲ್ಲಿ, ಇವರುಗಳಿಗ ಬ್ರಹ್ಮ ವಿದ್ಯಾಧಿಕಾರ ಉಂಟೆ? ಇಲ್ಲವೆ?—ಎಂದು ವಿಚಾರಿಸಿದಲ್ಲಿ, ಆಶ್ರಮದಿಂದ ಭ್ರಷ್ಟರಾದವರಿಗೆ ಆಶ್ರಮ ಧರ್ಮವಿಲ್ಲದಿದ್ದಾಗ್ಯೂ, ವಿಧುರಾದಿಗಳಂತೆ ತಪಸ್ಸು ಮುಂತಾದ ಸಾಮಾನ್ಯ ಧರ್ಮವುಂಟಾದ್ದರಿಂದ ಅವುಗಳಿಂದ ಬ್ರಹ್ಮವಿದ್ಯೆಯನ್ನು ಅನುಷ್ಠಿಸಬಹುದೆಂದು ಕೆಲವರೆನ್ನುವರು.

''ಬ್ರಹ್ಮಚಾರ್ಯಾಚಾರ್ಯಕುಲವಾಸೀ'' ಇತ್ಯಾದಿ, ''ಆತ್ಮಾನಮಾಚಾರ್ಯಕುಲೇಽವಸಾದಯನ್'',—ಎಂದು ನೈಷ್ಠಿಕ ಬ್ರಹ್ಮಚಾರಿಯನ್ನು ಆಚಾರ್ಯಕುಲಕ್ಕೆ ಪರಿಚರ್ಯೆ ಮಾಡಿಕೊಂಡು ಅಲ್ಲಿಯೇ ಇದ್ದುಕೊಂಡು ತನ್ನ ಆಯುಸ್ಸನ್ನು ಕಳೆಯಬೇಕು—ಎಂದೂ, ''ಅರಣ್ಯಮಿಯಾತ್ ತತೋ ನ ಪುನರೇಯಾತ್'',—ಎಂದು ವಾನಪ್ರಸ್ಥನು ಆ ಆಶ್ರಮದಿಂದ ಹಿಂತಿರುಗಕೂಡದೆಂದೂ, ''ಸನ್ನ್ಯಸ್ಯಾಗ್ನಿಂ ನ ಪುನರಾವರ್ತಯೇತ್'',—ಎಂದು ಸನ್ಯಾಸಿಯು ಮತ್ತೆ ಗೃಹಸ್ಥನಾಗಕೂಡದೆಂದೂ, ನಿಯಮಿಸುವುದರಿಂದ, ಹೀಗೆ ಆಶ್ರಮಭ್ರಷ್ಟತೆಯಿಂದ ಅವರುಗಳು ನಿರಾಶ್ರಮಿಯಾಗಿರುವುದು ಅಶಾಸ್ತ್ರೀಯವಾದ್ದರಿಂದ, ಅವರುಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಸಿದ್ಧಾಂತ.

ಸೂತ್ರ ೨—**ನ ಚಾಧಿಕಾರಿಕಮಪಿ ಪತನಾನುಮಾನಾತ್ತದಯೋಗಾತ್**

**ಸೂತ್ರಾರ್ಥ**

[ಪತನಾನುಮಾನಾತ್] = ಪಾತಿತ್ಯವನ್ನು ಸ್ಮೃತಿ ಹೇಳುವುದರಿಂದ, [ತದಯೋಗಾತ್] = ಪ್ರಾಯಶ್ಚಿತ್ತವಿಲ್ಲವಾದ್ದರಿಂದ, [ಆಧಿಕಾರಿಕಂ, ಅಪಿ] = ಪ್ರಾಯಶ್ಚಿತ್ತಾಧಿಕಾರದಲ್ಲಿ ಹೇಳಿದ ಪ್ರಾಯಶ್ಚಿತ್ತವೂ, [ನ] = ಇಲ್ಲ.

**ವಿವರಣೆ**

ಬ್ರಹ್ಮಚಾರಿಯು ಪತಿತನಾದರೆ, ''ಅವಕಿರ್ಣೀಪಶುಶ್ಚ ತದ್ವತ್'',—ಇತ್ಯಾದಿಯಿಂದ ಪ್ರಾಯಶ್ಚಿತ್ತವನ್ನು ಹೇಳಿರುವುದರಿಂದ ನೈಷ್ಠಿಕ ಬ್ರಹ್ಮಚಾರಿಯೂ ಬ್ರಹ್ಮಚಾರಿಯಾದ್ದರಿಂದ ಇವನು ಪತಿತನಾದಾಗ್ಯೂ ಪ್ರಾಯಶ್ಚಿತ್ತ ಮಾಡಿಕೊಂಡು ಬ್ರಹ್ಮವಿದ್ಯೆಯನ್ನು ಅನುಷ್ಠಿಸಬಹುದಲ್ಲವೆ?—ಎಂದಲ್ಲಿ,

''ಆರೂಢೋ ನೈಷ್ಠಿಕಂ ಧರ್ಮಂ ಯಸ್ತು ಪ್ರಚ್ಯವತೇ ದ್ವಿಜಃ । ಪ್ರಾಯಶ್ಚಿತ್ತಂ ನ ಪಶ್ಯಾಮಿ ಯೇನ ಶುಧ್ಯೇತ್ ಸ ಆತ್ಮಹಾ ॥''— (ನೈಷ್ಠಿಕ ಬ್ರಹ್ಮಚಾರಿಯಾಗಿದ್ದು ಪತಿತನಾದವನಿಗೆ, ಅವನು ಮತ್ತೆ ಶುದ್ಧನಾಗುವಂತಹ ಪ್ರಾಯಶ್ಚಿತ್ತವೊಂದನ್ನು ಕಾಣೆನು)—ಎಂದು ಸ್ಮೃತಿಯಲ್ಲಿ ಹೇಳಿರುವುದರಿಂದ, ಅವನಿಗೆ ಪ್ರಾಯಶ್ಚಿತ್ತವಿಲ್ಲ. ಆದ್ದರಿಂದ, ಬ್ರಹ್ಮಚಾರಿಗೆ ಹೇಳಿದ ಪ್ರಾಯಶ್ಚಿತ್ತ ಉಪಕುರ್ವಾಣನೆಂಬ ಬ್ರಹ್ಮಚಾರಿಗಲ್ಲದೆ ಇವನಿಗೆ ಹೇಳಲಿಲ್ಲ. ಅವನು ಪ್ರಾಯಶ್ಚಿತ್ತವನ್ನು ಮಾಡಿಕೊಂಡಾಗ್ಯೂ ಪರಲೋಕ ಸಾಧಕವಾಗುವುದೇ ಹೊರತು ಬ್ರಹ್ಮವಿದ್ಯೆಗೆ ಸಾಧಕವಾಗದೆಂದು ಸಿದ್ಧಾಂತ.

[ಮೇಲೆ ಅವಕೀರ್ಣಿ–ಅಂದರೆ ಬ್ರಹ್ಮಚರ್ಯಭ್ರಷ್ಟ. ಬ್ರಹ್ಮಚರ್ಯ = ಸ್ತ್ರೀ ನಿಯುತಿಃ. ಪಶುಃ = ಗರ್ದಭ—''ಬ್ರಹ್ಮಚಾರ್ಯವಕೀರ್ಣೀ ನೈರೃತಂ ಗರ್ದಭ ಮಾಲಭೇತ''—ಎಂದಿದೆ. ಸ್ತ್ರೀನಿಯುತಿರೂಪ ಬ್ರಹ್ಮಚರ್ಯ ಗೃಹಸ್ಥವ್ಯತಿರಿಕ್ತರಾದ ಮೂವರಿಗೂ ತುಲ್ಯ. ಆದ್ದರಿಂದ ಅವರೆಲ್ಲರಿಗೂ ಅವಕೀರ್ಣ ಪ್ರಾಯಶ್ಚಿತ್ತ ಕರ್ತವ್ಯವೆಂದು ಪೂರ್ವಪಕ್ಷಾಭಿಪ್ರಾಯ.]

[ಉಪಕುರ್ವಾಣ ಬ್ರಹ್ಮಚಾರಿ ಭ್ರಷ್ಟನಾದರೆ—ಅವನಿಗಾಗಿ ಹೇಳಿರುವುದು ಅವಕೀರ್ಣಿ ಪ್ರಾಯಶ್ಚಿತ್ತವೆಂದರ್ಥ]

ಸೂತ್ರ ೩—**ಉಪಪೂರ್ವಮಪೀತ್ಯೇಕೇಭಾವಮಶನವತ್ತದುಕ್ತಂ**

**ಸೂತ್ರಾರ್ಥ**

[ಉಪಪೂರ್ವಂ] = ನೈಷ್ಠಿಕನ ಪಾಪ ಉಪಪಾತಕ. (ಆದ್ದರಿಂದ). [ಅಶನವತ್] = ಮಧುಭೋಜನದಲ್ಲಿ ಹೇಗೋ ಹಾಗೆ [ಭಾವಂ] = ಪ್ರಾಯಶ್ಚಿತ್ತವುಂಟೆಂಬುದನ್ನು [ಏಕೇ] = ಕೆಲವರೆನ್ನುವರು. [ತದುಕ್ತಂ] = ಅದು (ಧರ್ಮಶಾಸ್ತ್ರದಲ್ಲಿಯೂ) ಹೇಳಲ್ಪಟ್ಟಿದೆ.

**ವಿವರಣೆ**

ನೈಷ್ಠಿಕ ಬ್ರಹ್ಮಚಾರಿಯು ಆಚರಿಸಿದ ಪಾಪವನ್ನು ಮಹಾ ಪಾತಕದಲ್ಲಿ ಸೇರಿಸಿಲ್ಲವಾದ್ದರಿಂದ, ಅದು ಉಪಪಾತಕ. ಉಪಕುರ್ವಾಣನಿಗೆ ಕೆಲವು ಧರ್ಮಗಳನ್ನೂ, ಮದ್ಯಪಾನ, ಸ್ತ್ರೀಭೋಗಾದಿಗಳಲ್ಲಿ ಪ್ರಾಯಶ್ಚಿತ್ತವನ್ನೂ ವಿಧಿಸಿ, ''ಉತ್ತರೇಷಾಂ ಚೈತದವಿರೋಧಿ'',—ಇವನಿಗೆ ಹೇಳಿದ ಧರ್ಮಗಳೂ ಪ್ರಾಯಶ್ಚಿತ್ತಗಳೂ ಆ ಆಶ್ರಮ ಧರ್ಮಗಳಿಗೆ ವಿರೋಧವಿಲ್ಲದಿದ್ದಲ್ಲಿ, ಮೇಲ್ಪಟ್ಟ ನೈಷ್ಠಿಕ, ಗೃಹಸ್ಥ, ಮುಂತಾದವರೆಲ್ಲರಿಗೂ ಸಮಾನವೆಂದು ಹೇಳುವುದರಿಂದ, ನೈಷ್ಠಿಕನಿಗೂ ಪ್ರಾಯಶ್ಚಿತ್ತವುಂಟೆಂದು ಕೆಲವರು ಹೇಳಿದರು.

ಸೂತ್ರ ೪—**ಬಹಿಸ್ತೂಭಯಥಾಪಿ ಸ್ಮೃತೇರಾಚಾರಾಚ್ಚ**

**ಸೂತ್ರಾರ್ಥ**

[ಸ್ಮೃತೇಃ] = (ಆರೂಢ ಪತಿತನನ್ನು ಭ್ರಷ್ಟನೆಂದೂ ಅವನಿಗೆ ಪ್ರಾಯಶ್ಚಿತ್ತವಿಲ್ಲವೆಂದೂ) ಸ್ಮೃತಿಯಲ್ಲಿ ''ಪ್ರಾಯಶ್ಚಿತ್ತಂ ನ ಪಶ್ಯಾಮಿ ಯೇನ ಶುಧ್ಯೇತ್ ಸ ಆತ್ಮಹಾ'',—ಎಂದು ಹೇಳುವುದರಿಂದಲೂ, [ಆಚಾರಾತ್] = (ಹಾಗೆಯೇ) ಶಿಷ್ಟಾಚಾರ ಕಾಣುವುದರಿಂದಲೂ, [ಉಭಯಥಾ, ಅಪಿ] = (ಅವನು ಮಾಡಿದ ಪಾಪ) ಉಪಪಾತಕವಾದಾಗ್ಯೂ, ಮಹಾ ಪಾತಕವಾದಾಗ್ಯೂ, [ಬಹಿಃತು] = ಬ್ರಹ್ಮವಿದ್ಯಾಧಿಕಾರವುಳ್ಳವರಿಗಿಂತಲೂ ಬಹಿರ್ಭೂತರೇ ಸರಿ (ಎಂಬುದು ಸಿದ್ಧಾನ್ತ).

**ವಿವರಣೆ**

ಉಪಕುರ್ವಾಣನಾದ ಬ್ರಹ್ಮಚಾರಿಗೆ ಸ್ತ್ರೀನಿಯಮಾತಿಕ್ರಮ ಉಪಪಾತಕದಲ್ಲಿ ಸೇರಿದ್ದೆಂದು ಅದಕ್ಕೆ ಹೇಳಿದ ಪ್ರಾಯಶ್ಚಿತ್ತವನ್ನು, ನೈಷ್ಠಿಕಾದಿಗಳಲ್ಲಿಯೂ ಅತಿದೇಶ ಮಾಡಿದೆ—ಇತ್ತಕಡೆ ಪತನಸ್ಮೃತಿಯೂ ಇದೆ. ಇವೆರಡಕ್ಕೂ ವಿರೋಧ ಪರಿಹಾರ ಹೇಗೆ?—ಎಂದಲ್ಲಿ,—ಕರ್ಮಶಕ್ತಿ ಮೂರು ವಿಧ. (೧). ಪ್ರತ್ಯವಾಯಕರ, (೨).ವೈದಿಕ ಕರ್ಮಾಧಿಕಾರ ಪ್ರತಿಬಂಧಕರ (೩). ಸಜಾತೀಯ ಕರ್ಮರುಚಿಕರಗಳೆಂಬುವು. ಕೆಲವು ಪ್ರಾಯಶ್ಚಿತ್ತಗಳು ಈ ಮೂರು ಶಕ್ತಿಗಳನ್ನೂ ನಾಶ ಮಾಡುತ್ತವೆ. ಕೆಲವು ಇವುಗಳಲ್ಲಿ ಒಂದಲ್ಲ ಒಂದನ್ನು ಮಾತ್ರ ನಾಶಮಾಡುತ್ತವೆ. ಇಲ್ಲಿ ಅತಿದೇಶಗಳ ಮತ್ತು ಪತನ ಸ್ಮೃತಿಗಳ ವಿರೋಧಕ್ಕೆ ಪರಿಹಾರ:—ಅತಿದೇಶ ಸ್ಮೃತಿ (ಉತ್ತರೇಷಾಂ ಚೈತದವಿರೋಧಿ—ಎಂಬುದು) ಪ್ರತ್ಯವಾಯಕರ ಶಕ್ತಿಗೆ ವಿನಾಶಕವಾದ ಪ್ರಾಯಶ್ಚಿತ್ತವನ್ನು ಹೇಳುತ್ತೆ. ಪತನಸ್ಮೃತಿಯಾದರೋ ವೈದಿಕ ಕರ್ಮಾನಧಿಕಾರ ಶಕ್ತಿವಿನಾಶಕ ಪ್ರಾಯಶ್ಚಿತ್ತವಿಲ್ಲವೆಂಬುದನ್ನು ಹೇಳುತ್ತೆ—''ಪ್ರಾಯಶ್ಚಿತ್ತಂ ನ ಪಶ್ಯಾಮಿ ಯೇನ ಶುಧ್ಯೇತ್ ಸ ಆತ್ಮಹಾ''—ಎಂಬುದಾಗಿ. ಆದ್ದರಿಂದ ಇವೆರಡಕ್ಕೂ ವಿರೋಧವಿಲ್ಲ. ಆದ್ದರಿಂದ ಅತಿದೇಶ ಸಿದ್ಧ ಪ್ರಾಯಶ್ಚಿತ್ತದಿಂದ ನರಕಾನುಭವ ಲಾಘವವಿದ್ದಾಗ್ಯೂ, ಪತನ ಸ್ಮೃತಿ ವಚನದಿಂದ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದರ್ಥ. ಆದ್ದರಿಂದ ಶಿಷ್ಟರಾದವರು, ನೈಷ್ಠಿಕಾದಿಗಳಿಂದ ಭ್ರಷ್ಟರಾದವರು

ಪ್ರಾಯಶ್ಚಿತ್ತ ಮಾಡಿಕೊಂಡಾಗ್ಯೂ ಅವರನ್ನು ವರ್ಜಿಸುತ್ತಾರೆ—ಅವರಿಗೆ ಬ್ರಹ್ಮವಿದ್ಯಾದಿಕವನ್ನು ಉಪದೇಶಿಸುವುದಿಲ್ಲ. ಆದ್ದರಿಂದ ಅವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲ.

[ನೈಷ್ಠಿಕಾದಿಗಳ ಭ್ರಷ್ಟತ್ವ ಮಹಾ ಪಾತಕದಲ್ಲಿ ಸೇರದೆ, ಉಪಪಾತಕವೇ ಆದಾಗ್ಯೂ, ಲೋಕದಲ್ಲಿ ಮಹಾ ಪಾತಕ ಪರ್ಯಂತ ಸಕಲ ಪಾಪಕ್ಷಯಕ್ಕೂ ಹೇತುವಾದ ಹರಿ ಕೀರ್ತನ ಸ್ತುತಿ ನಮಸ್ಕಾರಾದಿಗಳು ಇತಿಹಾಸ ಪುರಾಣಾದಿಗಳಲ್ಲಿ ಪ್ರಸಿದ್ಧವಾದಾಗ್ಯೂ, ನೈಷ್ಠಿಕಾದಿ ಭ್ರಷ್ಟರಿಗೆ ಬ್ರಹ್ಮ ವಿದ್ಯೆಯಲ್ಲಿ ಅಧಿಕಾರವಿಲ್ಲ; "ಪ್ರಾಯಶ್ಚಿತ್ತಂ ನ ಪಶ್ಯಾಮಿ" —ಎಂದು ಸಾಕ್ಷಾತ್ತಾಗಿಯೇ ಪ್ರಾಯಶ್ಚಿತ್ತ ನಿಷೇಧ ವಚನ ಸ್ಫುಟತರವಾಗಿದೆ. ವಚನ ವಿರೋಧವಾಗಿ ನ್ಯಾಯ ಪ್ರವರ್ತಿಸಲಾರದು. ಹರಿ ಕೀರ್ತನಾದಿಗಳು ಅವರ ಪಾಪಕ್ಕೆ ಶೋಧಕವಾದಾಗ್ಯೂ, ಅದರಿಂದ ಅವರಿಗೆ ಸಂಭಾಷಣಾದಿಗಳಿಗೆ ಅರ್ಹತೆಯುಂಟಾಗುತ್ತದೆಯೇ ಹೊರತು ಬ್ರಹ್ಮವಿದ್ಯಾಧಿಕಾರಕ್ಕೆ ಅರ್ಹತೆಯಿಲ್ಲ.

"ಆಪೀಠಾನ್ಮೌಳಿಪರ್ಯನ್ತಂ ಪಶ್ಯತಃ ಪುರುಷೋತ್ತಮಂ ।
ಪಾತಕಾನ್ಯಾಶು ನಶ್ಯನ್ತಿ ಕಿಂ ಪುನಸ್ತೂಪಪಾತಕಂ ॥",—ಎಂಬುದರಿಂದ, ಭಗವದವಲೋಕನಾನು ವೃತ್ತಿಯೇ ಮಹಾ ಪಾತಕ ಉಪಪಾತಕಗಳಿಗೆಲ್ಲಾ ವಿನಾಶಕವೆಂದಿದೆ. ಹೀಗೆಯೇ ಯೋಗವೇ ಯೋಗ ಭ್ರಷ್ಟನಿಗೆ ಪಾಪನಿರಾಸಕವೆಂದು ಅಲ್ಲಲ್ಲಿ ಶಾಸ್ತ್ರಗಳಲ್ಲಿ ಉಪದೇಶಿಸಿದೆ. ಆದ್ದರಿಂದ, ಪ್ರಾಯಶ್ಚಿತ್ತವಿಲ್ಲವೆಂಬುದು. ಹೇಗೆ?—ಎಂದು ಶಂಕಿಸಿದಲ್ಲಿ, ಉಪಪಾತಕ ಮಹಾ ಪಾತಕಗಳೆಲ್ಲಕ್ಕೂ ಬ್ರಹ್ಮಾನುಸಂಧಾನವನ್ನೇ ಪ್ರಾಯಶ್ಚಿತ್ತವೆನ್ನುತ್ತಾರೆ. ಆದರೆ, ಯೋಗಿಗಳಿಗೆ ಪ್ರಮಾದ ವಶದಿಂದ ಪಾತವುಂಟಾದಲ್ಲಿ ಯೋಗವೇ ಅದಕ್ಕೆ ಪ್ರಾಯಶ್ಚಿತ್ತ. ಇದರಿಂದ ಆರೂಢ ಪಾತವಾದಲ್ಲಿಯೂ ಪ್ರಾಯಶ್ಚಿತ್ತದಿಂದ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯೆನ್ನಕೂಡದು. ಏಕೆಂದರೆ, ಶಾಸ್ತ್ರ ಪ್ರಶ್ನಿಸತಕ್ಕದ್ದಲ್ಲ. ಅದು ಅಪರ್ಯನುಯೋಜ್ಯ. ಶಾಸ್ತ್ರದಲ್ಲಿ ಹೇಳಿರುವುದನ್ನು ಹಾಗೆಯೇ ಅಂಗೀಕರಿಸಬೇಕು.

ಸರಿ, ಆದರೂ, ಭಗವದನುಸಂಧಾನವು ಸರ್ವಪಾಪಹರವೆಂಬುದು ಶಾಸ್ತ್ರವೇ ಅಲ್ಲವೆ? ಒಂದು ಶಾಸ್ತ್ರಕ್ಕೆ ಮತ್ತೊಂದು ಶಾಸ್ತ್ರ ಪರತಂತ್ರವಲ್ಲವಷ್ಟೆ! ಬಹು ಪಾಪ ಮಾಡಿದ ಅಜಾಮಿಳಾದಿಗಳಿಗೂ ಮುಕ್ತಿ ಪ್ರಾಪ್ತವಾಗಿದೆ. ಹೀಗಿರುವಲ್ಲಿ, ಪ್ರಾಯಶ್ಚಿತ್ತವಿಲ್ಲವೆಂದು ಹೇಳುವುದು ಹೇಗೆ?—ಎಂದಲ್ಲಿ, ಅಜಾಮಿಳಾದಿಗಳಂತೆ ಯಾವಜ್ಜೀವ ಭಗವದನುಸಂಧಾನವೇ ಅಂತಹ ಪಾಪಕ್ಕೂ ನಿಷ್ಕೃತಿಯೆಂಬುದು ಸೂತ್ರಕಾರಾಭಿಪ್ರಾಯ.

'ಶುಚಿರ್ಭವತಿ ಸಂಸ್ಮೃತ್ಯಾಸ್ನಾತೋ ಭವತಿ ಕೀರ್ತನಾತ್ ।
ಪ್ರಣಿಪಾತೇನ ಪೂತಾತ್ಮಾ ಕೃಷ್ಣಸ್ಯೈತೇ ಮಹಾ ಗುಣಾಃ" ॥—ಎಂದಿದೆ. ಆದ್ದರಿಂದ ಭಗವದನುಸಂಧಾನವೇ ಕೊನೆಯವರಿಗೂ, ಅಂತಹ ಪಾಪಗಳಿಗೆ ಪ್ರಾಯಶ್ಚಿತ್ತವೆಂದರ್ಥ.

ಈ ಅರ್ಥವನ್ನೇ ದೃಷ್ಟಾಂತರದಿಂದಲೂ ಶ್ರೀಮದಧಿಕರಣ ಸಾರಾವಳಿಯ ಕೆಳಗಿನ ಶ್ಲೋಕದಲ್ಲಿ ಉಪಪಾದಿಸುತ್ತಾರೆ:—

"ಯೋ ಬಾಲಂ ಹನ್ತಿಯಃ ಸ್ತ್ರೀಂ ಶರಣಮುಪಗತಂ ಯಶ್ಚ ಯೋವಾ ಕೃತಘ್ನಃ,
ಪ್ರಾಯಶ್ಚಿತ್ತೈರ್ವಿಶುದ್ಧಾನಪಿ ಜಗದುರಿಮಾನ್ ಸಾಧು ಸಂಸ್ಪೃಷ್ಟ್ಯನರ್ಹಾನ್ ।
ಸ್ಮೃತ್ಯಾಚಾರಾನು ಸಾರಾದಿಹ ಚ ಗತಿರಿಯಂ ದರ್ಶಿತಾ ಸೂತ್ರಕಾರೈಃ
ಶಾಸ್ತ್ರಂ ನ ಶ್ಯಾಸನೀಯಂ ಯದಿ ಭವತಿ ತದಾ ಸಂಪ್ಲುತೋ ಧರ್ಮ
ಸೇತುಃ ॥"—

ಹೀಗೆ ಶಾಸ್ತ್ರ ಬಲದಿಂದ ಬಾಲ—ಸ್ತ್ರೀ—ಶರಣಾಗತಾದಿ ಘಾತಕರು ಕೃತಘ್ನರು ಮುಂತಾದ ಉತ್ಪಥ ವೃತ್ತಿಗಳೂ ಅಧ್ಯಾತ್ಮವಿತ್ತುಗಳಿಗೆ ಅಪರಿಗ್ರಾಹ್ಯರೆಂದು ಸೂತ್ರ ಕಾರರಿಂದ ದರ್ಶಿತವಾಗಿದೆ. ಹೀಗೆ ನಿಷ್ಕೃತಿಯೇ ಇಲ್ಲವೆಂಬ ಇಷ್ಟು ನಿಷ್ಠುರ ವಚನವನ್ನು ಶಾಸ್ತ್ರವೇಕೆ ಹೇಳುತ್ತದೆ?—ಎಂದರೆ,—ಶಾಸ್ತ್ರ ಪರತಂತ್ರರಾದ ನಮಗೆ ವಿಧಿ ನಿಷೇಧ ರೂಪ ಶಾಸ್ತ್ರ ನಮ್ಮ ಇಷ್ಟಾನುಸಾರ ಶಿಕ್ಷಣೀಯವಾದಲ್ಲಿ, ಧರ್ಮಮರ್ಯಾದೆಯೇ ವಿಧ್ವಸ್ತವಾಗುತ್ತೆ,—ಅಂದರೆ ಕೃತ್ಯಾಕೃತ್ಯ ನಿಯಮವೇ ಹೋಗಿಬಿಡುತ್ತೆ. ಆದ್ದರಿಂದ ಶಾಸ್ತ್ರ ಪರತಂತ್ರರಾದ ನಾವು ಶಾಸ್ತ್ರ ಹೇಳುವಂತೆ ನಡೆಯಬೇಕು. ಭಗವಚ್ಛೇಷತ್ವ ಜ್ಞಾನವುಳ್ಳವರು ಭಗವದಾಜ್ಞೆಯನ್ನೇ ಅನುವರ್ತಿಸಬೇಕು. "ಶ್ರುತಿಸ್ಮೃತಿರ್ಮ-ಮೈವಾಜ್ಞಾ..."—ಎಂದು ಭಗವಂತನೇ ಹೇಳಿದ್ದಾನೆ. ಆದ್ದರಿಂದ ತತ್ತ್ವವಿತ್ತುಗಳು ವಿಶೇಷತಃ ತಮ್ಮ ಅಧಿಕಾರಾನುರೂಪ ಕರ್ಮಾನುಷ್ಠಾನ ಮಾಡತಕ್ಕದ್ದು.]

## 11. ಸ್ವಾಮ್ಯಧಿಕರಣ

### ಸೂತ್ರ—ಸ್ವಾಮಿನಃ ಫಲಶ್ರುತೇ ರಿತ್ಯಾ ತ್ರೇಯಃ

**ಸಂಗತಿ**

ಈ ಅಧಿಕರಣ ಪ್ರಾಸಂಗಿಕ. ಉಪಾಸನದ ಅನುಷ್ಠಾತೃ—ಅನನುಷ್ಠಾತೃ ವಿಭಾಗ ಪ್ರಸಂಗದಿಂದ ಉದ್ಗೀಥೋಪಾಸನಾದಿಗಳ ಅನುಷ್ಠಾತ್ರನನುಷ್ಠಾತೃ ವಿಭಾಗ ಚಿಂತೆ ಮಾಡಲ್ಪಡುತ್ತೆ—ಎಂದು ಸಂಗತಿ.

**ಸೂತ್ರಾರ್ಥ**

[ಫಲಶ್ರುತೇಃ] = (ಯಜಮಾನನಿಗೆ) ಫಲವನ್ನು ಹೇಳುವುದರಿಂದ, [ಸ್ವಾಮಿನಃ] = (ಉದ್ಗೀಥೋಪಾಸನ) ಯಜಮಾನನ ಕೃತ್ಯ. [ಇತಿ] = ಎಂದು [ಆತ್ರೇಯಃ] = ಆತ್ರೇಯರು ಹೇಳುತ್ತಾರೆ.

**ವಿವರಣೆ**

ಕರ್ಮಾಂಗವಾದ ಉದ್ಗೀಥೋಪಾಸನವನ್ನು ಯಜಮಾನ ಮಾಡಬೇಕೆ? ಋತ್ವಿಕ್ಕು ಮಾಡಬೇಕೆ? ಎಂದಲ್ಲಿ, ಫಲ ಹೊಂದುವವರೇ ಸಾಧನವನ್ನೂ ಅನುಷ್ಠಿಸ ಬೇಕು. ಫಲ ಯಜಮಾನನದಾದ್ದರಿಂದ ಅವನೇ ಉದ್ಗೀಥೋಪಾಸನವನ್ನು ಮಾಡ ಬೇಕೆಂದು ಆತ್ರೇಯರು ಹೇಳುತ್ತಾರೆ.

### ಸೂತ್ರ ೨—ಆರ್ತ್ವಿಜ್ಯಮಿತ್ಯೌಡುಲೋಮಿಸ್ತಸ್ಮೈ ಹಿ ಪರಿಕ್ರೀಯತೇ

**ಸೂತ್ರಾರ್ಥ**

[ತಸ್ಮೈ ಹಿ] = ಆ ಯಾಗ ಮಾಡುವುದಕ್ಕಾಗಿಯಲ್ಲವೆ! [ಪರಿಕ್ರೀಯತೇ] = (ಋತ್ವಿಕ್ಕು) ವರಿಸಲ್ಪಡುತ್ತಾನೆ! (ಆದ್ದರಿಂದ] ಆರ್ತ್ವಿಜ್ಯಂ] = ಋತ್ವಿಕ್ಕೇ ಮಾಡಬೇಕು.

(ಉದ್ಗೀಥೋಪಾಸನವನ್ನು) [ಇತಿ] = ಎಂದು [ಔಡುಲೋಮಿಃ] = ಔಡುಲೋಮಿಯೆಂಬುವರು ಹೇಳುತ್ತಾರೆ.

**ವಿವರಣೆ:**

ಯಾಗದ ಫಲ ಯಜಮಾನನದೇ ಆಗಿರುವಾಗ, ಅದನ್ನು ಋತ್ವಿಕ್ಕು ಮಾಡುವಂತೆ, ಉದ್ಗೀಥೋಪಾಸನವನ್ನೂ ಋತ್ವಿಕ್ಕೇ ಮಾಡಬೇಕು. ಕರ್ಮಕಾಂಡದಲ್ಲಿ, ''ಋತ್ವಿಜೋ ವೃಣೀತೇ'',—ಇತ್ಯಾದಿಯಿಂದ ಸಾಂಗವಾದ ಯಾಗವನ್ನು ಮಾಡುವುದಕ್ಕಾಗಿಯೇ ಋತ್ವಿಕ್ಕನ್ನು ವರಿಸುವನೆಂದು ಹೇಳಿದೆ. ಋತ್ವಿಕ್ಕು ಮಾಡಿದಾಗ್ಯೂ ಅದಕ್ಕಾಗಿ ಅವನು ದಕ್ಷಿಣೆಯನ್ನು ತೆಗೆದುಕೊಳ್ಳುವುದರಿಂದ, ಅದಕ್ಕೆ ಮುಖ್ಯ ಕರ್ತೃ ಯಜಮಾನನೇ—ಎಂದು ಸಿದ್ಧಾಂತ.

ಸೂತ್ರ ೪೬—**ಶ್ರುತೇಶ್ಚ**

**ಸೂತ್ರಾರ್ಥ**

[ಈ ಸೂತ್ರ ಶಂಕರಭಾಷ್ಯದಲ್ಲಿ ಅಧಿಕವಾಗಿ ಕಾಣುತ್ತೆ.]

## 12. ಸಹಕಾರ್ಯನ್ತರ ವಿಧ್ಯಧಿಕರಣ

ಸೂತ್ರ—**ಸಹಕಾರ್ಯನ್ತರ ವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿಧ್ಯಾದಿವತ್**

**ಸಂಗತಿ**

ಹಿಂದೆ ಯಜ್ಞಾದಿ ಮತ್ತು ಶಮಾದಿಗಳು ಬ್ರಹ್ಮವಿದ್ಯೆಗೆ ಸಹಕಾರಿಗಳೆಂಬುದು ನಿರೂಪಿತವಾಯಿತು. ಈಗ ಸಹಕಾರ್ಯಂತರ ನಿರೂಪಿತವಾಗುತ್ತೆ—ಎಂದು ಸಂಗತಿ.

**ಸೂತ್ರಾರ್ಥ**

[ತದ್ವತಃ] = ಉಪಾಸಕನಿಗೆ [ವಿಧ್ಯಾದಿವತ್] = ಯಜ್ಞಾದಿ ವಿಧಿ ಮುಂತಾದುದರಂತೆ [ಪಕ್ಷೇಣ] = ಪ್ರಕೃಷ್ಟ ಮನನಶೀಲರಾದ ವ್ಯಾಸಾದಿಗಳಿಗೆ ಪ್ರಸಿದ್ಧವಾದುದರಿಂದ, [ತೃತೀಯಂ] = ಮೂರನೆಯದಾದ ಮೌನವೂ [ಸಹಕಾರ್ಯನ್ತರ ವಿಧಿಃ] = ಬೇರೊಂದು ಸಹಕಾರಿಯಾಗಿ ವಿಧಿಸಲ್ಪಡುವುದು. 'ಮುನಿ'ಃ—ಎಂಬಲ್ಲಿ ವಿಧಿ ಪ್ರತ್ಯಯ ವಿಲ್ಲದಿದ್ದಾಗ್ಯೂ ಅಪ್ರಾಪ್ತವಾದ್ದರಿಂದ ವಿಧೇಯವೆಂದು ಒಪ್ಪಬೇಕು.

**ವಿವರಣೆ**

ತಸ್ಮಾದ್ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇತ್ । ಬಾಲ್ಯಂ ಚ ಪಾಂಡಿತ್ಯಂ ಚ ನಿರ್ವಿದ್ಯ ಅಥ ಮುನಿಃ''— (ಉಪಾಸಕನು ಪಾಂಡಿತ್ಯವನ್ನು ಪಡೆದು ಬಾಲ್ಯ ವೃತ್ತಿಯೊಂದಿಗೆ ಇರಬೇಕು ಅವೆರಡನ್ನೂ ಪಡೆದ ನಂತರ, ಮೌನವನ್ನು ಹೊಂದುವವನಾಗುವನು) —ಎಂಬ ವಾಜಸನೇಯದ ವಾಕ್ಯದಲ್ಲಿ ಬಾಲ್ಯವನ್ನೂ ಪಾಂಡಿತ್ಯವನ್ನೂ ವಿದ್ಯಾಂಗವಾಗಿ ವಿಧಿಸಿರುವುದು ಸುಸ್ಪಷ್ಟ. ಅದರಂತೆ ಮೌನವೂ ವಿಧಿಸಲ್ಪಟ್ಟಿದೆಯೆ? ಇಲ್ಲವೆ?—ಎಂದು ವಿಚಾರ ಮಾಡುವಲ್ಲಿ, ಪಾಂಡಿತ್ಯ, ಮೌನ—

ಎಂಬ ಎರಡು ಪದಗಳೂ ಜ್ಞಾನ ವಾಚಕವಾದುದರಿಂದ, ಮೇಲೆ ಹೇಳಿದ ಪಾಂಡಿತ್ಯವನ್ನೇ ಇಲ್ಲಿ ಅನುವಾದಿಸಿದೆ ಎಂದು ಪೂರ್ವಪಕ್ಷ.—

ಉಪಾಸಕನು 'ಪಾಂಡಿತ್ಯ' (ಶ್ರವಣ ಮನನಗಳಿಂದುಂಟಾದ ಪರಮಾತ್ಮ ಜ್ಞಾನ) ವನ್ನು ಹೊಂದಿ, ತರುವಾಯ ತನ್ನ ವೈಭವವನ್ನು ಪ್ರಕಾಶಪಡಿಸದಿದ್ದು, ಅದರ ನಂತರ ''ಮುನಿಃ''—ಮುಂದೆ ಧ್ಯಾನಿಸಲಿರುವ ಪರಮಾತ್ಮನ ಅಪ್ರಾಕೃತ ದಿವ್ಯಮಂಗಳ ವಿಗ್ರಹ ವನ್ನು ಮನನ ಮಾಡುವನು—ಎಂದು ಆ ವಾಕ್ಯದ ಅರ್ಥ. ಅದರಲ್ಲಿ ಪಾಂಡಿತ್ಯ ಪದದಿಂದ ಹೇಳಲ್ಪಟ್ಟ ಜ್ಞಾನಾನಂದಕ್ಕಿಂತಲೂ ಮೌನಪದದಿಂದ ಹೇಳಲ್ಪಟ್ಟ ಜ್ಞಾನ ಬೇರೆ. ಇದು ಮೊದಲು ಹೇಳಲ್ಪಡಲಿಲ್ಲ. ಆದ್ದರಿಂದ. ಯಜ್ಞಾದಿಗಳಂತೆಯೂ, ಶಮದಮಾದಿಗಳಂತೆಯೂ, ಇದೂ ವಿಧಿಯೆಂದೇ ಹೇಳಬೇಕು. ಇದು ಬಾಲ್ಯ—ಪಾಂಡಿತ್ಯಗಳಂತೆ ವಿದ್ಯೆಗೆ ಅಂತರಂಗ ಸಾಧನವಾಗಿದೆ. ಮುನಿಯೆಂದರೆ, ಈ ಅರ್ಥವನ್ನು ಹೇಳುವುದೊ?—ಎಂದರೆ, ಪ್ರಕೃಷ್ಟ ಮನನಶೀಲರಾದ ಕೆಲವರಲ್ಲಿ ವ್ಯಾಸ ಮುನಿಯೆಂದು ಪ್ರಯೋಗ ಪ್ರಸಿದ್ಧಿಯಿರುವುದರಿಂದ, ಈ ಪದ ಈ ಅರ್ಥವನ್ನು ಹೇಳುವುದು—ಎಂದು ಸಿದ್ಧಾಂತ.

### ಸೂತ್ರ ೨—**ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ**

**ಸೂತ್ರಾರ್ಥ**

ಕೃತ್ಸ್ನಭಾವಾತ್] = ಎಲ್ಲಾ ಆಶ್ರಮಿಗಳಿಗೂ ವಿದ್ಯಾಧಿಕಾರವುಂಟಾದ್ದರಿಂದ, [ಗೃಹಿಣಾ] = ಗೃಹಸ್ಥನೊಂದಿಗೆ [ಉಪಸಂಹಾರಃ] = ನಿಗಮನ ಮಾಡಲ್ಪಟ್ಟಿತು.

**ವಿವರಣೆ**

ಎಲ್ಲಾ ಆಶ್ರಮಿಗಳಿಗೂ ಬ್ರಹ್ಮ ವಿದ್ಯೆಯಲ್ಲಿ ಅಧಿಕಾರವುಂಟಾದಲ್ಲಿ, ಛಾನ್ದೋಗ್ಯ ದಲ್ಲಿ, ''ಸಖಲ್ವೇವಂವರ್ತಯನ್ ಯಾವದಾಯುಷಂ ಬ್ರಹ್ಮಲೋಕಮಭಿ ಸಂಪದ್ಯತೇ'', —(ಹೀಗೆಯೇ ಆಯುಸ್ಸಿರುವವರೆಗೂ ಗೃಹಸ್ಥ ಧರ್ಮವನ್ನು ಅನುಷ್ಠಿಸಿಕೊಂಡಿದ್ದು ಶರೀರಾವಸಾನದಲ್ಲಿ ಪರಮಾತ್ಮನನ್ನು ಸೇರುತ್ತಾನೆ.)—ಎಂದು ಹೇಳಿರುವುದೇಕೆ ಎಂದರೆ, ಎಲ್ಲರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟಾದ್ದರಿಂದ, ಅದರಲ್ಲಿ ಗೃಹಸ್ಥನೂ ಸೇರಿರುವುದರಿಂದ, ಇವನನ್ನು ಹೇಳಿ ಮುಗಿಸಿದೆ. ಹೀಗೆ ಹೇಳಿದ್ದು—ಎಲ್ಲಾ ಆಶ್ರಮಿಗಳೂ ತಮ್ಮ ತಮ್ಮ ಧರ್ಮವನ್ನು ಯಾವಜ್ಜೀವ ಅನುಷ್ಠಿಸಿದ ಮೇಲೆ, ಪರಮಾತ್ಮನನ್ನು ಹೊಂದುತ್ತಾರೆ ಎಂಬುದಕ್ಕೆ ಉಪಲಕ್ಷಣವೆಂದು ಸಿದ್ಧಾಂತ. [ಎಲ್ಲಾ ಆಶ್ರಮಿಗಳಿಗಿಂತ ಗೃಹಸ್ಥನಿಗೇ ಬಹು ಕಷ್ಟಸಾಧ್ಯವಾದ ಅನೇಕ ಕರ್ಮಗಳುಂಟಾದ್ದರಿಂದ, ಮಿಕ್ಕವರಿಗೆ ಇಷ್ಟೊಂದು ಇಲ್ಲವಾದ್ದರಿಂದ ಕೊನೆಯಲ್ಲಿ ಇವನನ್ನು ಹೇಳಿದೆಯೆಂದು ಶಂಕರಭಾಷ್ಯ ಸಿದ್ಧಾಂತ.]

### ಸೂತ್ರ ೩—**ಮೌನವದಿತರೇಷಾಮಪ್ಯುಪದೇಶಾತ್**

ಸೂತ್ರಾರ್ಥ:

[ಮೌನವತ್] = ಮೌನದಂತೆ [ಇತರೇಷಾಂ, ಅಪಿ] = ಮಿಕ್ಕ ಆಶ್ರಮಿಗಳ ಧರ್ಮಗಳನ್ನೂ [ಉಪದೇಶಾತ್] = ಹೇಳುವುದರಿಂದ, (ಇದು ಉಪಲಕ್ಷಣ).

## 13. ಅನಾವಿಷ್ಕಾರಾಧಿಕರಣ

### ಸೂತ್ರ— ಅನಾವಿಷ್ಕುರ್ವನ್ನನ್ವಯಾತ್

**ಸಂಗತಿ**

"ಬಾಲ್ಯೇನ ತಿಷ್ಠಾಸೇತ್"—ಎಂಬುದರಿಂದ ಬಾಲ್ಯ ಉಪಾದೇಯವೆನ್ನಲಾಯಿತು ಹಾಗಾದರೆ ಬಾಲಭಾವವಾದ ಕಾಮಚಾರಾದಿಗಳೂ ಉಪಾದೇಯವೊ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಅನ್ವಯಾತ್] = (ಇದೇ) ವಿದ್ಯೆಯೊಂದಿಗೆ ಅನ್ವಯಿಸಲು ಯೋಗ್ಯವಾದ್ದರಿಂದ' [ಅನಾವಿಷ್ಕುರ್ವನ್] = (ಪಾಂಡಿತ್ಯವನ್ನು) ಪ್ರಕಾಶ ಪಡಿಸದೆ ಇರುತ್ತಾನೆ. (ಎಂಬುದು ಬಾಲ್ಯೇನ ಎಂಬ ಪದದ ಅರ್ಥ).

**ವಿವರಣೆ**

"ಬಾಲ್ಯೇನ ತಿಷ್ಠಾಸೇತ್"—ಎಂಬಲ್ಲಿ ಬಾಲ್ಯವೆಂಬುದೇನು?—ಎಂದಲ್ಲಿ, ಬಾಲನ ಕರ್ಮ, ಅಂದರೆ ಯಥೇಚ್ಛವಾಗಿ ತಿನ್ನುವುದು, (ಕಾಮ ಭಕ್ಷಣ) ತಿರಿಯುವುದು (ಕಾಮಚಾರ), ಮಾತಾಡುವುದು ಮುಂತಾದುವು—ಎಂದು ಪೂರ್ವಪಕ್ಷ.

ಯಥೇಚ್ಛವಾದ ಆಹಾರವಿಹಾರಾದಿಗಳು ಕೂಡದೆಂದು ಶಾಸ್ತ್ರ ಹೇಳುವುದರಿಂದ, ಇಲ್ಲಿ ಬಾಲ್ಯ ಪದಕ್ಕೆ ಅದು ಅರ್ಥವಲ್ಲ. ಬಾಲನು ಅಜ್ಞನಾಗಿದ್ದುಕೊಂಡು ತನ್ನ ವೈಭವವನ್ನು ಹೇಗೆ ಪ್ರಕಾಶಪಡಿಸದೆ ಇದ್ದಾನೆಯೋ ಹಾಗೆ ಜ್ಞಾನಿಯಾದ ಉಪಾಸಕನು ಇರಬೇಕೆಂದರ್ಥ. ಪೂರ್ವ ಪಕ್ಷಿ ಹೇಳಿದ ಯಥೇಚ್ಛಾಚಾರವು ವಿದ್ಯೆಗೆ ವಿರೋಧಿ. ಇದು ವಿದ್ಯೆಗೆ ಅನುಕೂಲ. "ನಾವಿರತೋ ದುಶ್ಚರಿತಾತ್......" ಎಂಬ ಪ್ರಮಾಣವೂ ಈ ಅರ್ಥವನ್ನೇ ಹೇಳುವುದಾದ್ದರಿಂದ, ಇದೇ ಪ್ರಾಮಾಣಿಕವೆಂದು ಸಿದ್ಧಾನ್ತ.

## 14. ಐಹಿಕಾಧಿಕರಣ

### ಸೂತ್ರ—ಐಹಿಕಮಪ್ರಸ್ತುತ ಪ್ರತಿಬಂಧೇ ತದ್ದರ್ಶನಾತ್

**ಸಂಗತಿ**

ಅಂಗಚಿಂತೆ ಮಾಡಲ್ಪಟ್ಟಿತು. ಈಗ ಅಂಗಿನಿಷ್ಠಫಲಸಿದ್ಧಿಸುವ ಸಮಯ ನಿರೂಪಿಸಲ್ಪಡುತ್ತೆ—ಯೆಂದು ಸಂಗತಿ.

**ಸೂತ್ರಾರ್ಥ**

[ಅಪ್ರಸ್ತುತ ಪ್ರತಿಬನ್ಧೇ] = ಪ್ರತಿಬಂಧಕವಿಲ್ಲದಿದ್ದಲ್ಲಿ, [ಐಹಿಕಂ] = ಈ ಸಂಸಾರ ಸಂಬಂಧಿಯಾದ ಫಲ (ವಿಳಂಬವಿಲ್ಲದೆಯೇ ಉಂಟಾಗುವುದು) [ತದ್ದರ್ಶನಾತ್] = ಈ ಅರ್ಥ ಶ್ರುತಿಯಲ್ಲಿ ಕಾಣುವುದರಿಂದ, (ಹೀಗೆಯೇ ಅಂಗೀಕರಿಸಬೇಕು)

**ವಿವರಣೆ**

ಐಹಿಕಫಲಕ್ಕಾಗಿ ಮಾಡುವ ಉಪಾಸನದಿಂದ ಉಂಟಾಗುವ ಮೋಕ್ಷಾತಿರಿಕ್ತವಾದ ಐಹಿಕ ಫಲಗಳು ಉಪಾಸನವನ್ನು ಮಾಡಿದ ಒಡನೆಯೇ ಉಂಟಾಗುವವೊ? ಅಥವಾ

ಕಾಲಾಂತರದಲ್ಲಿಯೋ?—ಎಂದಲ್ಲಿ, ಪ್ರತಿಬಂಧಕವಿಲ್ಲದಿದ್ದಲ್ಲಿ ಈಗ ಉಂಟಾಗುವುದು. ಪ್ರತಿಬಂಧಕ ಇದ್ದಲ್ಲಿ ಕಾಲಾಂತರದಲ್ಲಿ ಉಂಟಾಗುವುದು. 'ಯದೇವ ವಿದ್ಯಯಾ ಕರೋತಿ', ಶ್ರದ್ಧಯೋಪನಿಷದಾತದೇವ ವೀರ್ಯವತ್ತರಂ ಭವತಿ"—ಇತ್ಯಾದಿ ಶ್ರುತಿಗಳು ಈ ಅರ್ಥದಲ್ಲಿ ಪ್ರಮಾಣವೆನ್ನುತ್ತಾರೆ. ಅಂದರೆ, ಅಭ್ಯುದಯ ಫಲ, ಮೋಕ್ಷಫಲ—ಎಂಬುದಾಗಿ ವಿದ್ಯೆ ದ್ವಿವಿಧ. ಅದರಲ್ಲಿ ಅಭ್ಯುದಯ ಫಲವಾದ ವಿದ್ಯೆ ತನಗೆ ಸಾಧನವಾದ ಪುಣ್ಯ ಕರ್ಮಗಳಿಂದ, ಪುಣ್ಯ ಕರ್ಮಾನಂತರವೇ ಉಂಟಾಗುವುದೆ? ಅಥವಾ ಕಾಲಾಂತರದಲ್ಲಿಯೋ?—ಎಂದು ಸಂಶಯ. ಪೂರ್ವಕೃತವಾದ ಪುಣ್ಯ ಕರ್ಮಗಳಿಂದ ಉಪಾಸಕನಾಗಿ ಹುಟ್ಟುತ್ತಾನೆ, ''ಚತುರ್ವಿಧಾಭಜನ್ತೇ ಮಾಂಜನಾಸ್ಸುಕೃತಿನೋಽರ್ಜುನ"—ಎಂಬಂತೆ. ಸಾಧನ ನೆರವೇರಿದ ಮೇಲೆ ವಿಳಂಬಕ್ಕೆ ಕಾರಣವಿಲ್ಲದ್ದರಿಂದ ಪುಣ್ಯ ಕರ್ಮಾನರತರವೇ—ಎಂದು ಪೂರ್ವಪಕ್ಷ.

ಐಹಿಕವೆಂದರೆ—ಅಭ್ಯುದಯ ಫಲಸಾಧನವಾದ ಉಪಾಸನ. ಪ್ರಬಲ ಕರ್ಮಾಂತರದ ಪ್ರತಿಬಂಧಕವಿಲ್ಲದಿದ್ದಲ್ಲಿ ಅನಂತರ—ಪ್ರತಿಬಂಧಕವಿದ್ದಲ್ಲಿ ಅದರ ಅನಂತರವಾದ್ದರಿಂದ—ಅನಿಯಮ. ಏಕೆಂದರೆ, ಪ್ರಬಲ ಕರ್ಮಾನ್ತರದಿಂದ ಕರ್ಮಫಲ ಪ್ರತಿಬಂಧವು ಶ್ರುತಿಯಲ್ಲಿ ಕಂಡುಬರುತ್ತೆ—''ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ, ತದೇವ ವೀರ್ಯವತ್ತರಂ'—ಇತ್ಯುದ್ಗೀಥವಿದ್ಯಾಯುಕ್ತ ಕರ್ಮದ ಫಲಕ್ಕೆ ಪ್ರತಿಬಂಧಕವಿಲ್ಲವೆಂದು ಶ್ರುತಿ ಹೇಳುತ್ತೆ.—ಎಂದು ಸಿದ್ಧಾನ್ತ.

## 15. ಮುಕ್ತಿಫಲಾಧಿಕರಣ

### ಸೂತ್ರ—ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಃ ತದವಸ್ಥಾವಧೃತೇಃ

**ಸಂಗತಿ**

ಮುಕ್ತಿ ಫಲವಾದ ಉಪಾಸನದ ಫಲ ಸ್ವಸಾಧನದ ಅನಂತರವೇ ಉಂಟಾಗುತ್ತದೆಯೋ? ಅಥವಾ ಕಾಲಾಂತರದಲ್ಲಿಯೋ—ಎಂದು ಏನೂ ನಿಯಮವಿಲ್ಲದೆಯೋ?—ಎಂಬ ಶಂಕೆಯಿಂದ ಸಂಗತಿ. (ಆತಿದೇಶಿಕ ಸಂಗತಿ)

**ಸೂತ್ರಾರ್ಥ**

[ತದವಸ್ಥಾವಧೃತೇಃ] = ಆ ಪ್ರತಿಬಂಧಕರೂಪವಾದ ಅವಸ್ಥೆಯ ನಿಶ್ಚಯದಿಂದ, [ಏವಂ] = ಹೀಗೆಯೇ [ಮುಕ್ತಿ ಫಲಾನಿಯಮಃ] ಮೋಕ್ಷ ಫಲಕ್ಕೂ ನಿಯಮವಿಲ್ಲ.

**ವಿವರಣೆ**

ಪ್ರತಿಬಂಧಕವುಂಟಾದಲ್ಲಿ ಉಪಾಸನದಿಂದ ಐಹಿಕಫಲ ವಿಳಂಬದಿಂದ ಉಂಟಾಗುವ ಹಾಗೆಯೇ ಯಾವ ವಿಧವಾದ ಉಪಾಸನದಿಂದಲೂ, ನಶಿಸದ ಭಾಗವತಾಪಚಾರ ಮುಂತಾದ ಪ್ರಬಲ ಪ್ರತಿಬಂಧಕವುಂಟಾದಲ್ಲಿ, ಉಪಾಸನವನ್ನು ಮಾಡಿದ ಕೂಡಲೆ ಮೋಕ್ಷ ದೊರಕುವುದೆಂಬ ನಿಯಮವಿಲ್ಲ. ಆ ಅಪಚಾರ ಫಲಿಸಿ ಕಳೆದ ಮೇಲೆಯೇ

ಮೋಕ್ಷವುಂಟಾಗುವುದು—ಎನ್ನುತ್ತಾರೆ. 'ತದವಸ್ಥಾವಧೃತೇಃ",—ಎಂಬ ಪದದ ದ್ವಿರುಕ್ತಿ ಅಧ್ಯಾಯ ಮುಗಿಯಿತೆಂದು ಅರಿಯುವುದಕ್ಕಾಗಿ.

[ಸಕಲ ಕರ್ಮಗಳಿಗಿಂತಲೂ ಮುಕ್ತಿಯನ್ನು ಫಲವಾಗಿಯುಳ್ಳ ವಿದ್ಯೆಗೆ ಸಾಧನ ವಾದ ಕರ್ಮ ಪ್ರಬಲವಾದ್ದರಿಂದ ಪ್ರತಿಬಂಧ ಸಂಭವಿಸದೆಂಬುದು ಇಲ್ಲಿ ಅಧಿಕವಾದ ಆಶಂಕೆ. ಆದರೆ ಅದರಲ್ಲಿಯೂ ಹಿಂದೆ ಮಾಡಿದ ಪ್ರಬಲವಾದ ಬಹ್ಮವಿದಪಚಾರದ ಸಂಭವವಿದೆಯಾದ್ದರಿಂದ ಪ್ರತಿಬಂಧವಿದೆ ಎಂದು ಪರಿಹಾರ.

''ಅಸ್ತಿ ಮತ್ಸ್ಯಸ್ತಿಮಿರ್ನಾಮ ಶತಯೋಜನಮಾಯತಃ ।

ತಿಮಿಂಗಿಲ ಗಿಲೋಽಪ್ಯಸ್ತಿ ತದ್ಗಿಲೋಪ್ಯಸ್ತಿ ನಾಗರೇ" ॥—ಎಂಬ ಮಾತ್ಸ್ಯ ನ್ಯಾಯದಿಂದ ಸಂಸಾರ ಸಾಗರದಲ್ಲಿರುವವರ ಕರ್ಮಗಳು ಉತ್ತರೋತ್ತರ ಆಧಿಕ್ಯವುಳ್ಳವು. ಹಾಗೆಯೇ ಬ್ರಹ್ಮವಿತ್ತಿನ ಕರ್ಮಗಳಿಗೂ ಕೂಡ, ಅವಕ್ಕಿಂತ ಅಧಿಕವಾದ ಬ್ರಹ್ಮವಿದಪ ಚಾರವೆಂಬ ಕರ್ಮಾನ್ತರವಿದೆ—ಮಹತ್ತರವಾದ ಬ್ರಹ್ಮವಿದಪಚಾರಾದಿಗಳಿಂದ ಬ್ರಹ್ಮ ವಿದ್ಯೋತ್ಪಾದಕವಾದ ನಿವೃತ್ತಿ ಧರ್ಮಕ್ಕೂ ಕೂಡ ನಿರಾಕರಣ ಸಂಭವವುಂಟು. ಇಂತಹ ಮಹತ್ತರ ದುರಿತವಿಲ್ಲದಿದ್ದಲ್ಲಿ ನಿವೃತ್ತಿ ಧರ್ಮ ಬ್ರಹ್ಮವಿದ್ಯೆಯನ್ನು ಒಡನೆಯೇ ಉಂಟುಮಾಡುತ್ತೆ. ಆ ದುರಿತವಿದ್ದಲ್ಲಿ ಕಾಲಾಂತರದಲ್ಲಿ ಉಂಟುಮಾಡುತ್ತೆ. ಆದ್ದರಿಂದ ನಿವೃತ್ತಿ ಧರ್ಮಕ್ಕಿಂತ ಪರಬ್ರಹ್ಮ ಭಕ್ತರ ವಿಷಯಕ ಅಪರಾಧ ಬಲವಾದದ್ದು. ಈ ಅಪರಾಧವಿದ್ದಲ್ಲಿ, ಇದು ಶಾಂತವಾದ ಮೇಲೆಯೇ ವಿದ್ಯಾ ಫಲ. ಅಂತಹ ಅಪರಾಧ ವಿಲ್ಲದಿದ್ದಲ್ಲಿ ಒಡನೆ ಬ್ರಹ್ಮವಿದ್ಯಾ ಫಲವೆಂದು ಭಾವ.]

## ತೃತೀಯಾಧ್ಯಾಯ ಚತುರ್ಥಪಾದದಲ್ಲಿಯ ಪ್ರಧಾನಾರ್ಥ ಪ್ರತಿಪಾದನ

### ಈ ಪಾದದಲ್ಲಿಯ ಅಧಿಕರಣಗಳ ಸಂಖ್ಯೆ-೧೫

೧. ಬ್ರಹ್ಮವಿದ್ಯೆಗೆ ಕರ್ಮ ಅಂಗ—ಕರ್ಮಕ್ಕೆ ವಿದ್ಯೆ ಅಂಗವಲ್ಲ.—''ಪುರುಷಾ ರ್ಥೋಽತಃ; ಎಂಬ ಅಧಿಕರಣದ ಅರ್ಥ.

೨. ರಸತಮತ್ವಾದ್ಯುಪಾಸನೆ—ಪ್ರಮಾಣಾಂತರಾಪ್ರಾಪ್ತವಾದ್ದರಿಂದ— ಚೋದಿ ತವೇ ಹೊರತು ಸ್ತುತಿರೂಪವಲ್ಲ—ಇದು ಸ್ತುತಿಮಾತ್ರಾಧಿಕರಣದ ಅರ್ಥ.

೩. ವಿದ್ಯಾವಿಧಿ ಪ್ರಕರಣದಲ್ಲಿ ಪಠಿತವಾದ ಆಖ್ಯಾನಗಳು ವಿದ್ಯಾವಿಧಾನಾರ್ಥ (ವಿದ್ಯಾವಿಧಿ ಶೇಷಭೂತ) ಗಳು—ಪಾರಿಪ್ಲವಶಂಸನ ಶೇಷಗಳಲ್ಲ—ಇದು ಪಾರಿ-ಪ್ಲವಾಧಿಕರಣದ ಅರ್ಥ.

೪. ಊರ್ಧ್ವರೇತಸ್ಸುಗಳಲ್ಲಿಯೂ ಕೂಡ—ವಿದ್ಯೆ ಅವರ ಆಶ್ರಮನಿಯತ ಧರ್ಮಗಳನ್ನೇ ಅಂಗವಾಗಿಯುಳ್ಳದ್ದು—ಇದು ಅಗ್ನೀಂಧನಾದ್ಯಧಿಕರಣದ ಅರ್ಥ.

೫. ಗೃಹಸ್ಥಾಧಿಕಾರಿಯಲ್ಲಿ ಬ್ರಹ್ಮವಿದ್ಯೆ ಯಜ್ಞದಾನಾದಿ ಸಾಪೇಕ್ಷ. ಊರ್ಧ್ವ-ರೇತಸ್ಸುಗಳಲ್ಲಿ ಹೇಳಿದಂತೆ ಯಜ್ಞಾದಿ ನಿರಪೇಕ್ಷವಲ್ಲ.—ಇದು 'ಸರ್ವಾಪೇಕ್ಷಾ' ಧಿಕರಣದ ಅರ್ಥ.

೬. ಪ್ರವೃತ್ತಿರೂಪವಾದ ಅನೇಕ ಕ್ರಿಯಾನುಷ್ಠಾನದಲ್ಲಿ ವ್ಯಾಪೃತನಾದ ಗೃಹಸ್ಥನೂ ಕೂಡ ವಿಹಿತ ವ್ಯತಿರಿಕ್ತ ವ್ಯಾಪಾರಗಳ ನಿವೃತ್ತಿ ರೂಪವಾದ ಶಾಂತ್ಯಾದ್ಯನುಷ್ಠಾನಕ್ಕೆ ಅರ್ಹ—ಇದು ಶಮದಮಾದ್ಯಧಿಕರಣದ ಅರ್ಥ.

೭. ಅನಾಪತ್ತಿನಲ್ಲಿ ಬ್ರಹ್ಮವಿದ್ಯಾನಿಷ್ಠನಿಗೂ ಕೂಡ ಶುದ್ಧವಾದ ಅನ್ನ ಭಕ್ಷಣದಿಂದಲೇ ಯೋಗ ಸಿದ್ಧಿ—ಇದು ಸರ್ವಾನ್ನಾನುಮತ್ಯಧಿಕರಣದ ಅರ್ಥ.

೮. ಒಂದೇ ಕರ್ಮ ವಿದ್ಯಾರ್ಥ ಮತ್ತು ಆಶ್ರಮಾರ್ಥವೂ ಆಗುತ್ತೆ—ಇದು ವಿಹಿತತ್ವಾಧಿಕರಣದ ಅರ್ಥ.

೯. ವಿಧುರರು ಎರಡು ವಿಧ—ದಾರ ರಹಿತ ಮತ್ತು ಮೃತ ದಾರರೆಂದು. —ಇವರು ಯಜ್ಞಾದ್ಯನರ್ಹರಾದಾಗ್ಯೂ, ಇವರಿಗೂ ವಿದ್ಯಾಧಿಕಾರವುಂಟು—ಇದು ವಿಧುರಾಧಿಕರಣದ ಅರ್ಥ. (ದಾರ ರಹಿತ = ಹೆಂಡತಿಯಿಲ್ಲದವನು. ಮೃತ ದಾರ = ಹೆಂಡತಿ ಸತ್ತವನು.)

೧೦. ನೈಷ್ಠಿಕಾದ್ಯಾಶ್ರಮ ಭ್ರಷ್ಟರಿಗೆ ಬ್ರಹ್ಮ ವಿದ್ಯೆಯಲ್ಲಿ ಅಧಿಕಾರವಿಲ್ಲ—ಇದು ತದ್ಭೂತಾಧಿಕರಣದ ಅರ್ಥ.

೧೧. ಕ್ರತ್ವಂಗವಾದ ಉದ್ಗೀಥ ಮತ್ತು ಅದರ ಅವಯವವಾದ ಪ್ರಣವಾದಿಗಳಲ್ಲಿ ರಸತಮತ್ವಾದಿ ದೃಷ್ಟಿಯನ್ನು ಮಾಡಬೇಕಾದವನು ಋತ್ವಿಕ್ಕು—ಯಜಮಾನನಲ್ಲ ಇದು ಸ್ವಾಮ್ಯಧಿಕರಣದ ಅರ್ಥ.

೧೨. ವಿಹಿತವಾದ ಬ್ರಹ್ಮೋಪಾಸನ ರೂಪ ಸಮಾಧಿಯ ಸಿದ್ಧಿಗಾಗಿ, ಧಾರಣವೆಂಬ ಪ್ರಕೃಷ್ಟ ಮನನದಲ್ಲಿ ನಿಷ್ಠೆ ವಿಹಿತ—ಇದು ಸಹಕಾರ್ಯನ್ತರ ವಿಧ್ಯಧಿಕರಣದ ಅರ್ಥ.

೧೩. ಬ್ರಹ್ಮವಿತ್ತಿಗೆ ವಿಹಿತವಾದ ಬಾಲ್ಯ—ಸ್ವಮಾಹಾತ್ಮ್ಯಗೋಪನ—ಸ್ವಾಚ್ಛ-ನ್ದ್ಯವಲ್ಲ—ಇದು ಅನಾವಿಷ್ಕಾರಾಧಿಕರಣದ ಅರ್ಥ.

೧೪. ಅಭ್ಯುದಯ ಫಲಸಾಧನವಾದ ಉಪಾಸನ ಪ್ರಬಲ ಕರ್ಮದಿಂದ ಪ್ರತಿಬದ್ಧವಾದಲ್ಲಿ ಸಿದ್ಧಿಸದು—ಇದು ಐಹಿಕಾಧಿಕರಣದ ಅರ್ಥ.

೧೫. ಮೋಕ್ಷಾರ್ಥವಾದ ಬ್ರಹ್ಮವಿದ್ಯೆಯೂ ಕೂಡ ಅಬ್ರಹ್ಮ ವಿದ್ಯೆಯಂತೆಯೇ ಪ್ರಬಲತಮ ಭಾಗವತಾಪಚಾರಾದಿ ಪ್ರತಿಬಂಧಕವಿಲ್ಲದಿದ್ದಲ್ಲಿ, ಫಲಿಸುತ್ತೆ—ಅಪಚಾರ ಸಂಭವಿಸಿದಲ್ಲಿ—ತನ್ನಿವೃತ್ತ್ಯನಂತರವೇ ಫಲಿಸತಕ್ಕದ್ದು—ಆದ್ದರಿಂದ ಅನಿಯಮ. ಇದು ಮುಕ್ತಿಫಲಾಧಿಕರಣದ ಅರ್ಥ.

[ಮುಮುಕ್ಷುಗಳಿಗೆ ಕರ್ಮಾಂಗಕವಾದ ಉಪಾಸನಾನುಷ್ಠಾನ ವಿಧಿಯನ್ನು ಸ್ಥಾಪಿಸುವುದರಿಂದ, ಈ ಪಾದದಲ್ಲಿ ನಾಲ್ಕು ಪರಪಕ್ಷಗಳನ್ನು —ಪ್ರತಿಕ್ಷೇಪ ಮಾಡಿದ್ದಾರೆ (ಸೂತ್ರಕಾರರು).

ಆ ಪರಪಕ್ಷಗಳು ಯಾವುವೆಂದರೆ;—

೧) ವಾಕ್ಯಾರ್ಥಜ್ಞಾನ ಮಾತ್ರವೇ ಮೋಕ್ಷೋಪಾಯವೆಂಬ ಕೆಲವು ಮೃಷಾವಾದಿ ಪ್ರಭೃತಿಗಳ ಪಕ್ಷ.

೨) ಜ್ಞಾನ ಕರ್ಮಗಳ ಸಮುಚ್ಚಯವನ್ನು ಮೋಕ್ಷ ಸಾಧನವೆಂಬ ಯಾದವ ಪ್ರಕಾಶೀಯ ಪಕ್ಷ.

೩) ವಿದ್ಯಾಂಗಕವಾದ ಕರ್ಮವೇ ಮೋಕ್ಷಸಾಧನವೆಂಬ ನಿರೀಶ್ವರಮೀಮಾಂಸಕರ ಪಕ್ಷ.

೪) ಪುರುಷ ನಿತ್ಯಮುಕ್ತನಾದ್ದರಿಂದ ಮೋಕ್ಷ ಸಿದ್ಧ—ಸಾಧ್ಯವಲ್ಲ–ವೆಂಬ ಸಾಂಖ್ಯಾದಿಗಳ ಪಕ್ಷ.]

ಇಲ್ಲಿ ಮತ್ತೆ ಕೆಲವರ ಚೋದ್ಯವೇನೆಂದರೆ;— ಸಾಂಸಾರಿಕ ಸಕಲ ದುಃಖ ನಿವೃತ್ತಿಯೇ ಮೋಕ್ಷವೆಂದು ಅಧ್ಯಾತ್ಮವಿತ್ತುಗಳೆನ್ನುತ್ತಾರೆ. ಆ ಮೋಕ್ಷ ಕರ್ಮಾಂಗಕವಾದ ಬ್ರಹ್ಮೋಪಾಸನದಿಂದ ಸಿದ್ಧಿಸುವುದೆನ್ನುವರು. ಇದು ಅಯುಕ್ತವೇ ಸರಿ. ಹೇಗೆಂದರೆ;- —ಮೋಕ್ಷವೆಂಬುದು ವಿದ್ಯಮಾನ ಸಕಲ ದುಃಖ ನಿವೃತ್ತಿಯೆ?—ಅಥವಾ, ಅತೀತ ಸಕಲ ದುಃಖ ನಿವೃತ್ತಿಯೆ? ಅಥವಾ, ಭಾವಿ ದುಃಖ ನಿವೃತ್ತಿಯೆ?—

ಈ ಮೂರೂ ಸಂಭವಿಸುವುದಿಲ್ಲ—ವಿದ್ಯಮಾನವಾದುದು ಕ್ಷಣಿಕವಾದ್ದರಿಂದ ಸ್ವತಃ ನಿವರ್ತಿಸುತ್ತೆ. ಅದಕ್ಕೆ ಕಾರಣ ಬೇಕಿಲ್ಲ. ಅತೀತವಾದುವು ಪೂರ್ವವೇ ನಿರಸ್ತವಾಗಿವೆಯಾದ್ದರಿಂದ ಅದರ ನಿರಸನಕ್ಕಾಗಿ ಉಪಾಸನ ಪ್ರವೃತ್ತಿ ಬೇಕಿಲ್ಲ. ಭಾವಿ ದುಃಖ ನಿರಸನವೂ ಕೂಡ, ಭಾವಿಯಾದುದಕ್ಕೆ ಇನ್ನೂ ಸ್ವರೂಪವೇ ಇಲ್ಲದುದರಿಂದ ಅದರ ನಿರಾಸವನ್ನು ಮಾಡುವುದು ಶಕ್ಯವಲ್ಲ. ವಿದ್ಯಮಾನವಾದ ಘಟವನ್ನು,ಮುಸಲ ಪ್ರಹಾರದಿಂದ ನಾಶಗೊಳಿಸಬಹುದು. ಅವಿದ್ಯಮಾನವಾದ ನರವಿಷಾಣಾದಿಗಳನ್ನು ಧ್ವಂಸ ಮಾಡುವುದು ಹೇಗೆ? ಹಾಗೆಯೇ ಇದೂ ಕೂಡ. ಹೀಗೆ ನಿರಸನೀಯ ದುಃಖವೇ ಇಲ್ಲದ್ದರಿಂದ ಅದರ ನಿರಾಸನಕ್ಕಾಗಿ ಹೇಳುವ ಉಪಾಸನ ವಿಧಿಗೆ ಅರ್ಥವಿಲ್ಲ—ವೆಂಬುದು.

ಇದಕ್ಕೆ ಉತ ರ;—ಸರ್ವಲೋಕವಿದಿತವಾದ ಇದನ್ನು ಕುದೃಷ್ಟಿ ಪರಿಕಲ್ಪಿತವಾದ ದುರ್ವಾದದಿಂದ ನಿವಾರಿಸಲು ಸಾಧ್ಯವಿಲ್ಲ. ಇಲ್ಲಿ ನಾವು ವರ್ತಮಾನ ದುಃಖೋಪರೋಧವನ್ನಾಗಲಿ, ಅತೀತ ದುಃಖೋಪರೋಧವನ್ನಾಗಲಿ, ಭಾವಿದುಃಖದ ಪ್ರಧ್ವಂಸೋತ್ಪಾದನವನ್ನಾಗಲಿ ಹೇಳಲಿಲ್ಲ. ಮತ್ತೇನೆಂದರೆ;—ಕಾರಣವಶಾತ್ ಉಂಟಾಗುವ ಪ್ರಸಕ್ತ ದುಃಖದ ಸಾಮಗ್ರೀ ನಿರೋಧ ಮಾಡಲ್ಪಡುತ್ತೆ. ಇದರಿಂದ ಭಾವಿ ದುಃಖಕ್ಕೆ ಕಾರಣವೂ ಇಲ್ಲದಂತಾಗುತ್ತೆ. ಅಂದರೆ ವಿದ್ಯಾರಂಭಕ್ಕೆ ಹಿಂದೆ ಮಾಡಿದ ಪಾಪಗಳು ಬ್ರಹ್ಮವಿದ್ಯೆಯಿಂದ ನಾಶವಾಗುತ್ತವೆ. ವಿದ್ಯಾರಂಭದ ಅನಂತರದ ಪಾಪಗಳನ್ನು ಮಾಡದಿರುವುದರಿಂದ ಭಾವಿ ದುಃಖಕ್ಕೆ ಕಾರಣಸಾಮಗ್ರಿಯೂ ನಿವೃತ್ತವಾಗುತ್ತೆ. ಲೋಕದಲ್ಲಿಯೂ, ವಾತಪಿತ್ತಶ್ಲೇಷ್ಮಾದಿ ಕಾರಣಗಳ ಪ್ರಕೋಪದಿಂದ ಪ್ರಸ್ತುತ ಮರಣಾದಿ ದುಃಖವು ವೈದ್ಯೋಪದೇಶಸಿದ್ಧವಾದ ಔಷಧದ ಪ್ರಯೋಗದಿಂದ ಕಾರಣ

ಪ್ರತಿಬದ್ಧವಾಗಿ ನಿವಾರಿಸಲ್ಪಡುತ್ತೆ. ಅದರಂತೆ ಇಲ್ಲಿಯೂ ಪೂರ್ವದಲ್ಲಿ ಮಾಡಿದ ದುರಿತಗಳು ಬ್ರಹ್ಮಜ್ಞಾನದಿಂದ ನಷ್ಟವಾಗಿ ಅದೇ ಬ್ರಹ್ಮಜ್ಞಾನದಿಂದ ಭಾವಿ ದುರಿತಗಳ ಅನಾರಂಭವೂ ಆಗಿ ಸಾಮಗ್ರ್ಯುಪರೋಧದಿಂದ ಸಂಸಾರಾನುವೃತ್ತಿ ನಿರುದ್ಧವಾಗುತ್ತೆ,—ಭಾವಿಯಾದ ಅನರ್ಥದ ಪರಿಹಾರಕ್ಕಾಗಿ ಲೋಕದಲ್ಲಿ ಪ್ರವೃತ್ತಿ ಬಹುವಿಧವಾಗಿ ಕಂಡುಬರುತ್ತೆ, ರಾಜದ್ವೇಷಾದಿ ಗಳನ್ನೂ ಸರ್ಪವೃಶ್ಚಿಕಾದಿ ಸಂಸರ್ಗವನ್ನೂ ಪರಿಹರಿಸುವಿರಿ—ಏಕೆ? ಭಾವಿಯಾದ ಅನರ್ಥದ ಪರಿಹಾರಕ್ಕಾಗಿ. ಮುಂದೆ ಮಳೆಯಲ್ಲಿ ನೆನೆಯದಿರುವುದೇ ಮುಂತಾದುದಕ್ಕಾಗಿ ಛತ್ರವನ್ನು ಎತ್ತಿ ಹಿಡಿದುಕೊಳ್ಳುತ್ತೀರಿ ಇದರಂತೆಯೇ, ಸಕಲ ದುಃಖಗಳಿಗೂ ಮೂಲವಾದ ಪಾಪಗಳ ಪ್ರಾಯಶ್ಚಿತ್ತರೂಪವಾದ ಬ್ರಹ್ಮೋಪಾಸನದಲ್ಲಿ ಪ್ರವರ್ತಿಸದಿದ್ದಲ್ಲಿ ನಾನು ಮಾಡಿರುವ ಪಾಪಗಳೆಲ್ಲವೂ ಮುಂದೆ ದುಃಖವನ್ನು ಉಂಟುಮಾಡುತ್ತವೆ—ಎಂದು ನಿಶ್ಚಯಿಸಿ ಭಾವ್ಯನರ್ಥ ಪರಿಹಾರಕ್ಕಾಗಿಯೆಂದೇ ಈ ಅಧ್ಯಾಯದ ಮೂರು—ನಾಲ್ಕನೇ ಪಾದಗಳಲ್ಲಿ ಹೇಳಿದ ಕ್ರಮದಿಂದ ಸಾಂಗವಾದ ವಿದ್ಯಾನುಷ್ಠಾನದಲ್ಲಿಯೂ ಉದ್ಯೋಗಿಸಿರಿ—ಎನ್ನುತ್ತಾರೆ.

ಹೀಗೆ ಕರ್ಮಾಂಗಕ ಬ್ರಹ್ಮವಿದ್ಯೆಯಿಂದ ಸಕಲ ದುಃಖ ನಿವೃತ್ತಿಪೂರ್ವಕ ಬ್ರಹ್ಮಪ್ರಾಪ್ತಿಯೆನ್ನಲಾಯಿತು. ಇಲ್ಲಿ ಕೆಲವರು ಮತ್ತೆ ಚೋದ್ಯ ಮಾಡುತ್ತಾರೆ—ಕಾರಣ—ಕಾರ್ಯ ಭಾವವೇ ದುರ್ನಿರೂಪವಾದ್ದರಿಂದ ವಿದ್ಯೆ ಸಾಧನವೇ ಅಲ್ಲ—ಕರ್ಮವೆಂಬುದು ವಿದ್ಯೆಗೆ ಉಪಕಾರಕವೂ ಅಲ್ಲ. ಕರ್ಮಾನುಗೃಹೀತ ಬ್ರಹ್ಮೋಪಾಸನದಿಂದ ಅಪವರ್ಗ ಸಾಧ್ಯವೆಂಬುದೂ ತಪ್ಪು. ಇವೆಲ್ಲವೂ ವಿಕಲ್ಪಾಸಹಗಳು: ಹೇಗೆಂದರೆ;—

ಕಾರಣದಿಂದ ಕಾರ್ಯ ಭಿನ್ನವೇ ಅಭಿನ್ನವೇ? ಭಿನ್ನವೆಂದಲ್ಲಿ ಅದಕ್ಕೆ ಅದು ಕಾರಣವೇ ಆಗದು. ಘಟಕ್ಕೆ ಘಟ ಕಾರಣವಾಗದು. ಅಭಿನ್ನವೆಂದಲ್ಲಿಯೂ ಕಾರ್ಯವಲ್ಲ—ಘಟಕ್ಕೆ ಘಟವೇ ಕಾರಣವಾಗುವುದಿಲ್ಲ. ಭಿನ್ನಾಭಿನ್ನವೆಂದಲ್ಲಿಯೂ ವ್ಯಾಘಾತ. ಆಗ್ಗೆ ಕಾರಣ ಕುರ್ವತ್ ಕಾರಣವೇ ಅಕುರ್ವತ್ ಕಾರಣವೇ?—ಎರಡೂ ಸಂಭವಿಸುವುದಿಲ್ಲ;—

''ಕುರ್ವತ್ಕಾರ್ಯಮಕುರ್ವದ್ವಾಯುತ್ಕಿಂಚಿತ್ಕಾರಣಂ ಭವೇತ್ ।
ಕುರ್ವಚ್ಛೇದನವಸ್ಥಾನಂ ಅಕುರ್ವತ್ತ್ವವ್ಯವಸ್ಥಿತಿಃ'' ॥

—ಎಂದಿದೆ.

ಅಲ್ಲದೆ ಕಾರಣ ಶಬ್ದಾರ್ಥವನ್ನೇ ನಿರೂಪಿಸಲಾಗುವುದಿಲ್ಲ. ನಿಯತಪೂರ್ವಭಾವಿ ಕಾರಣವೆನ್ನುವುದಾದರೆ, ಅದೇನು, ಸರ್ವಾಪೇಕ್ಷಯಾ ನಿಯತ ಪೂರ್ವಭಾವಿಯೇ?—ಆಗ್ಗೆ ಅತಿ ಪ್ರಸಂಗ—ಕಾರ್ಯಾಪೇಕ್ಷಯಾ ನಿಯತ ಪೂರ್ವಭಾವಿಯೆಂದಲ್ಲಿ ಪರಸ್ಪರಾಶ್ರಯ ದೋಷ—ಏಕೆಂದರೆ ಕಾರ್ಯಕಾರಣಗಳು ಅನ್ಯೋನ್ಯನಿರೂಪಕಗಳಾದ್ದರಿಂದ—ಆದ್ದರಿಂದ ದುರ್ನಿರೂಪವೆನ್ನುವರು ಬೌದ್ಧಾದಿಗಳು.

ಹಾಗಾದರೆ, ಇವರು ಕಾರ್ಯಕಾರಣ ಭಂಗವಾದದಲ್ಲಿ ಯಾವ ಫಲವನ್ನು ಉದ್ದೇಶಿಸಿ ಪ್ರವೃತ್ತರಾದರು? ಪರವಾದಿ ಜಯವನ್ನು ಉದ್ದೇಶಿಸಿಯೆ? ಆಗ್ಗೆ ವಾದ—ಪರವಾದಿ ವಿಜಯಗಳಿಗೆ ಕಾರ್ಯಕಾರಣಭಾವ ಅದರಿಂದಲೇ ಸಿದ್ಧವಾಯಿತು. ಯಾವ ಫಲವನ್ನೂ ಉದ್ದೇಶಿಸದೆ—ಎಂದಲ್ಲಿ—ಅದು ಅನುನ್ಮತ್ತನು ಮಾಡತಕ್ಕ ಕೆಲಸವಲ್ಲ. ನಿತ್ಯವೂ ಭೋಜನ ಸಲಿಲಪಾನಾದಿಗಳನ್ನು ಇವರು ಮಾಡುವುದೇಕೆ?, ಹಸಿವು ಬಾಯಾರಿಕೆಗಳ ನಿವೃತ್ತಿ ಮತ್ತು ತೃಪ್ತಿಗಾಗಿ—ಎಂದಲ್ಲಿ ಕಾರ್ಯಕಾರಣಭಾವ ಸಿದ್ಧ.

ಜೀವ ನಿತ್ಯಮುಕ್ತ. ಆದ್ದರಿಂದ ಅವನಿಗೆ ಮುಕ್ತಿಯೂ ನಿತ್ಯಸಿದ್ಧ. ನಿತ್ಯಸಿದ್ಧವಾದ ಮುಕ್ತಿಗಾಗಿ ಪರಮಾತ್ಮ ಭಜನ ವಿಫಲ—ಏಕೆಂದರೆ ಇದು ಸಿದ್ಧವಾದುದನ್ನು ಅಸಿದ್ಧವಾದುದರಿಂದ ಸಾಧಿಸುವ ನ್ಯಾಯಕ್ಕೆ ವಿಷಯವಾಗುತ್ತೆ. ಸಕಲ ಸಾಂಸಾರಿಕ ದುಃಖೋಚ್ಛೇದ ರೂಪವಾದ್ದರಿಂದ ಮೋಕ್ಷ ಆಗಂತುಕ.—ಎಂಬ ನಿರೀಶ್ವರ ಸಾಂಖ್ಯ ವಾದವೂ ವ್ಯಾಹತ. ಆಗಾಮಿ ಮೋಕ್ಷವಾದಿಗಳಾದ ನಮಗೆ ಇದು ದೂಷಣವಲ್ಲ. ಕರಣಕಳೇಬರ ಸಹಭಾವದಿಂದಲೇ ನಿತ್ಯ ಮುಕ್ತಿಯನ್ನು ಅವರು ಹೇಳುತ್ತಾರೆ. ಕರಣ ಕಳೇಬರ ಸಹಭಾವವೇ ಸಂಸಾರ. ಅದರ ವಿರಹವೇ ಮುಕ್ತಿ—ಯೆಂದು ಪರಸ್ಪರ ವ್ಯಾಘಾತ.

ನಿತ್ಯಮುಕ್ತಿವಾದಿಯಾದ ಸಾಂಖ್ಯನಿಗೆ ಹೇಳಿದ ದೂಷಣವೇ ಮೃಷಾವಾದಿಗೂ ಸಮಾನ. ಆಗಾಮಿಮೋಕ್ಷವೇ ಇಲ್ಲವೆಂದಲ್ಲಿ ಈ ಮೂರು—ನಾಲ್ಕನೇ ಪಾದಗಳಲ್ಲಿ ವಿಚಾರ ಮಾಡಿರುವ ಸಪರಿಕರ ಸಾಧನ ಚಿಂತನವೇ ವ್ಯರ್ಥ ವಾದೀತು. ಮುಕ್ತಿಭ್ರಾಂತಿಸಿದ್ಧ ವಸ್ತುತಃ ಮುಕ್ತಿಯಿಲ್ಲದಿದ್ದಾಗ್ಯೂ ಭ್ರಾಂತಿಸಿದ್ಧ ಮುಕ್ತಿಯೇ ಫಲವೆಂದಲ್ಲಿ–ಸಂಸಾರದ ಭ್ರಾಂತಿಯಿರುವಾಗ ಮುಕ್ತಿಭ್ರಾಂತ್ಯ ಸಂಭವ. ಮುಕ್ತಿದಶಾಕಾಲಿಕಮುಕ್ತಿ ಭ್ರಾಂತಿಯೆಂದಲ್ಲಿ ಆರೋಪಿತ ಮೋಕ್ಷ ವಿಷಯ ಭ್ರಾಂತಿ ಅನುವರ್ತಿಸುವುದರಿಂದ ಆತ್ಮಸ್ವರೂಪವಿರುವವರಿಗೂ ಭ್ರಾಂತಿಯೂ ಇರುತ್ತೆ. ಬಂಧದಶೆಯಲ್ಲಿಯೂ ಜೀವನನ್ನು ಮುಕ್ತನನ್ನಾಗಿ ಹೇಳುವವನಿಗೆ ಸಾಧನಾಧ್ಯಾಯವೇ ವ್ಯರ್ಥ. ಏಕೆಂದರೆ ನಿತ್ಯಮುಕ್ತನಿಗೆ ಸಾಧಿಸತಕ್ಕದ್ದೇನಿದೆ? ಭ್ರಾಂತಿಯ ಶಮನಕ್ಕಾಗಿ ಸಾಧನಾಧ್ಯಾಯವೆಂದಲ್ಲಿ ನಿವರ್ತ್ಯವಾದ ಭ್ರಾಂತಿಯಿದ್ದಂತಾಯಿತು. ಆಗ್ಗೆ ನಿತ್ಯಮುಕ್ತತ್ವ ಸಿದ್ಧಿಯಿಲ್ಲ. ಸಕಲ ಸಾಂಸಾರಿಕ ದುಃಖ ನಿವೃತ್ತಿ ಬ್ರಹ್ಮ ಜ್ಞಾನದ ಕಾರ್ಯವೆಂದಲ್ಲಿ ಕಾರ್ಯ ಅನಿತ್ಯವಾದ್ದರಿಂದ ಅದರ ನಾಶದಿಂದ ಸಂಸಾರೋನ್ಮಜ್ಜನವೇ ಪ್ರಸಂಗಿಸುತ್ತೆ. ನ್ಯಾಯವಾದಿಗಳ ಪಕ್ಷದಲ್ಲಿ ಮುಕ್ತಿ ಪ್ರಧ್ವಂಸ ರೂಪ. ಪ್ರಧ್ವಂಸವು, ಕಾರ್ಯವಾದರೂ ನಿತ್ಯವೆಂಬುದು ಅವರ ಪಕ್ಷ. ಅದರ ಅಭಾವವೇ ನಮಗೆ ಭಾವ. ಅಭಾವರೂಪ ಮುಕ್ತಿಕಾರ್ಯವಾದರೂ ನಿತ್ಯತ್ವವನ್ನು ನ್ಯಾಯವಾದಿಗಳು ಹೇಳುವ ಹಾಗೆ ಭಾವಾಂತರಾಭಾವವಾದಿಗಳಾದ ನಮಗೂ ಕೂಡ. ''ನ ಚ ಪುನರಾವರ್ತತೆ''—ಎಂಬ ನ್ಯಾಯಾನುಗೃಹೀತ ಶ್ರುತಿ ಸಾಮರ್ಥ್ಯದಿಂದ ಅಪಹತಪಾಪ್ಮತ್ವಾದಿ ಗುಣಾಷ್ಟಕಗಳ ಆವಿರ್ಭಾವರೂಪ ಮುಕ್ತಿ ಭಾವರೂಪವಾದರೂ ನಿತ್ಯತ್ವ ಸಿದ್ಧಿಸುತ್ತೆ.

# ಚತುರ್ಥಾಧ್ಯಾಯದ-ಪ್ರಥಮಪಾದ
# ಆವೃತ್ತಿಪಾದ

**ಸಂಗತಿ**

ಉತ್ಪತ್ತಿಕ್ರಮ—ವಿಮರ್ಶಕ್ರಮ—ಎಂದು ಕ್ರಮಗಳೆರಡು ವಿಧ. ವಿಮರ್ಶ ಕ್ರಮದಲ್ಲಿ ಮೊದಲು ಫಲದ ವಿಮರ್ಶೆ, ಬಳಿಕ ಅದರ ಸಾಧನ ವಿಮರ್ಶೆ. ಏಕೆಂದರೆ ಫಲವನ್ನು ವಿಮರ್ಶಿಸಿದ ಮೇಲೆ ಅದರ ಸಾಧನದಲ್ಲಿ ಪ್ರವೃತ್ತಿಯುಂಟಾಗುತ್ತೆ ಉದಾ ಹರಣೆಗೆ ''ಸ್ವರ್ಗಕಾಮೋಯಜೇತ''—ಎಂಬಲ್ಲಿ, ಫಲವಾದ ಸ್ವರ್ಗದ ವಿಮರ್ಶೆ ಯಾದ ನಂತರ, ಅದಕ್ಕೆ ಸಾಧನವಾದ ಜ್ಯೋತಿಷ್ಟೋಮಾದಿಗಳ ವಿಮರ್ಶೆ ನಡೆದಿದೆ ಇದು ವಿಮರ್ಶ ಅಥವಾ ಅವಮರ್ಶ ಕ್ರಮ. ಪ್ರಕೃತ ಬ್ರಹ್ಮವಿದ್ಯೆಯಲ್ಲಿಯಾದರೋ— ಉತ್ಪತ್ತಿ ಕ್ರಮಾನುಸಾರದಿಂದ ಹಿಂದಿನ ಅಧ್ಯಾಯದಲ್ಲಿ, ಸಾಧನವಾದ ವಿದ್ಯಾ ವಿಮರ್ಶೆ, ಬಳಿಕ ಈ ನಾಲ್ಕನೆಯ ಅಧ್ಯಾಯದಲ್ಲಿ ಅದರ ಫಲವಾದ ಬ್ರಹ್ಮಪ್ರಾಪ್ತಿಯ ವಿಮರ್ಶೆ ನಡೆದಿದೆ. ಹೀಗೆ ಉತ್ಪತ್ತಿ ಕ್ರಮದಿಂದ ಅಂಗಗಳೊಡನೆ ಮುಖ್ಯೋಪಾಯ ಮೊದಲು ವಿಮರ್ಶೆಯಾದ ಮೇಲೆ ಬ್ರಹ್ಮಪ್ರಾಪ್ತಿರೂಪ ಫಲವನ್ನು ಇಲ್ಲಿ ಸೂತ್ರಕಾರರು ವ್ಯಕ್ತಪಡಿಸಿದ್ದಾರೆ ಇದು ಅಧ್ಯಾಯ ಸಂಗತಿ ಈ ಬ್ರಹ್ಮಪ್ರಾಪ್ತಿರೂಪ ಫಲವನ್ನು (೧) ಉತ್ತರ ಪೂರ್ವಾಘಾಶ್ಲೇಷವಿನಾಶ, (೨) ಉತ್ಕ್ರಮಣ (೩) ಅರ್ಚಿರಾದಿಗಮನ (೪) ಬ್ರಹ್ಮಪ್ರಾಪ್ತಿ—ಗಳೆಂಬ ನಾಲ್ಕು ಪರ್ವ ಭೇದಗಳಿಂದ ಈ ಅಧ್ಯಾಯದ ನಾಲ್ಕು ಪಾದಗಳಲ್ಲಿ ಕ್ರಮವಾಗಿ ವ್ಯಕ್ತಪಡಿಸಿದ್ದಾರೆ. ಇವುಗಳೊಳಗೆ, ಸ್ಥೂಲ ದೇಹದಿಂದ ಉತ್ಕ್ರಮಣವಾಗುವುದಕ್ಕೆ ಮುಂಚೆ ಯಾವ ಫಲವೋ ಅದನ್ನು ಮೊದಲಿನ ಎರಡು ಪಾದಗಳಿಂದಲೂ ಸ್ಥೂಲ ದೇಹದಿಂದ ಉತ್ಕ್ರಮಣವಾದಮೇಲೆ ಯಾವ ಫಲವೋ ಅದನ್ನು ಮುಂದಿನ ಎರಡು ಪಾದಗಳಿಂದಲೂ ವ್ಯಕ್ತಪಡಿಸಿದ್ದಾರೆ. ಅಶ್ಲೇಷ ವಿನಾಶಾದಿಕ ಮತ್ತು ಉತ್ಕ್ರಮಣ—ಇವೆರಡೂ ಸ್ಥೂಲ ದೇಹದಲ್ಲಿರುವಾಗಲೇ ಉಂಟಾಗುವ ಫಲ. ಅರ್ಚಿರಾದಿ ಮಾರ್ಗದಿಂದ ಹೊರಟು ಬರುವುದು, ಪರಬ್ರಹ್ಮ ಪ್ರಾಪ್ತಿ—ಇವೆರಡೂ ಸ್ಥೂಲ ದೇಹದಿಂದ ಉತ್ಕ್ರಮಣಾನಂತರದ ಫಲ ಹೀಗೆ ಫಲವಿಭಾಗ. ಇದು ಪಾದದ್ವಿಕ ಸಂಗತಿ.

ಫಲಸಂಗ ಕರ್ತೃತ್ವಾಭಿಸಂಧ್ಯಾದಿ ದೋಷರಹಿತವಾಗಿ, ಮೋಕ್ಷಸಾಧನ ವಿದ್ಯೆಗೆ ಅಂಗಗಳಾದ್ದರಿಂದ ಉತ್ಕೃಷ್ಟ ಧರ್ಮಗಳೆನಿಸಿದ ವರ್ಣಾಶ್ರಮ ಧರ್ಮಗಳಿಂದಲೂ, ಶಮದಮಾದಿಗಳಿಂದಲೂ ಕೂಡ, ಬ್ರಹ್ಮವಿದಪಚಾರವೂ ಇಲ್ಲದಿದ್ದಲ್ಲಿ ಬ್ರಹ್ಮೋಪಾಸನ ನಿಷ್ಪನ್ನವಾಗುತ್ತೆ—ಎಂದು ಇದರ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟಿತು. ಆ ವೇದಾಂತವಿಹಿತವಾದ ಉಪಾಸನವನ್ನು ಒಂದು ಸಲ ಮಾಡಿದರೇ ಸಾಕೆ? ಅಥವಾ ಅಸಕೃತ್ (ಅನೇಕ ಸಾರಿ) ಆವೃತ್ತವಾಗುತ್ತಿರಬೇಕೆ?—ಎಂಬ ಶಾಸ್ತ್ರಾರ್ಥ ವಿಚಾರ ರೂಪವಾದ ಬ್ರಹ್ಮೋಪಾಸನದ ಸ್ವರೂಪ ಈ ಅಧಿಕರಣದಲ್ಲಿ ವಿಚಾರ ಮಾಡಲ್ಪಡುತ್ತೆ ಯೆಂಬುದು ಅಧಿಕರಣ ಸಂಗತಿ.

ಈ ಪಾದದಲ್ಲಿ ಹನ್ನೊಂದು ಅಧಿಕರಣಗಳಿವೆ. ಇವು ಎರಡು ಪೇಟಿಕೆಗಳಾಗಿವೆ. ಮೊದಲನೇ ಪೇಟಿಕೆಯಲ್ಲಿ ಆರು ಅಧಿಕರಣಗಳು. ಮಿಕ್ಕ ಐದು ಎರಡನೇ ಪೇಟಿಕೆಯವು.

ಮೊದಲನೆಯ ಪೇಟಿಕೆಯಲ್ಲಿ ಬ್ರಹ್ಮವಿದ್ಯೆ ಶೋಧಿಸಲ್ಪಡುತ್ತೆ. ಎರಡನೆಯದು ಫಲವನ್ನೂ ಬೋಧಿಸುತ್ತೆ. ಅಂದರೆ ಮೊದಲನೆಯ ಪೇಟಿಕೆ ವಿದ್ಯಾವಿಶೋಧಿನೀ— ಎರಡನೆಯದು ಫಲಬೋಧಿನೀ—ಎಂಬುದಾಗಿ ಪೇಟಿಕಾ ಸಂಗತಿ.

"ಶಾಸ್ತ್ರಾರ್ಥಸ್ಯ ಸಕೃತ್ತ್ವೇತು ಕೇsಯಂ ನಿಷ್ಪತ್ತಿಚಿಂತನಾ ।
ಇತ್ಯಾಕ್ಷೇಪಂ ಪ್ರತಿಕ್ಷೇಪ್ತುಂ ಆವೃತ್ತಿ ನ್ಯಾಯಸಂಭವಃ ॥"—ಎಂಬಂತೆ ಈ ಅಧಿಕರಣದ್ದು ಆಕ್ಷೇಪ ಸಂಗತಿ.

ಬ್ರಹ್ಮವಿದ್ಯಾಸ್ವರೂಪ ಅಲ್ಲಲ್ಲಿ ಹಿಂದೆಯೇ ನಿರೂಪಿತವಾಯಿತು. ಮತ್ತೆ ಇಲ್ಲಿ ಅದು ಪುನರುಕ್ತವಾಗುವುದಲ್ಲವೆ?—ಎಂದು ಪೌನರುಕ್ತ್ಯದೋಷವನ್ನು ಶಂಕಿಸಿದಲ್ಲಿ— ಹಿಂದೆ ನಿರೂಪಿತವಾದ ಆಕಾರಕ್ಕಿಂತ ಅಧಿಕವಾದ ಆಕಾರದ ವಿಶೇಷ ಬ್ರಹ್ಮವಿದ್ಯೆಯಲ್ಲಿ ರುವುದರಿಂದ, ಆ ಆಕಾರದ ವಿಶೇಷೋಪಪಾದನವನ್ನು ಮಾಡುವಲ್ಲಿ ಇಲ್ಲಿ ಆ ದೋಷವಿಲ್ಲ.

ಮೋಕ್ಷೋಪಾಯಭೂತವಾದ ಬ್ರಹ್ಮೋಪಾಸನ ಪ್ರತ್ಯಕ್ಷ ರೂಪವೇ ಅಥವಾ ಸ್ಮೃತಿ ರೂಪವೇ? "ಸಕೃತ್ಕೃತಶ್ಶಾಸ್ತ್ರಾರ್ಥಃ"—ಎಂಬ ನ್ಯಾಯದಿಂದ ಇದು ಸಕೃದಾವೃತ್ತವೆ? (ಒಂದು ಸಾರಿ ಆವೃತ್ತಿಯೆ?) ಅಥವಾ, "ಧ್ರುವಾ ಸ್ಮೃತಿಃ"—ಎಂಬ ಪ್ರಮಾಣಾನುಸಾರವಾಗಿ ಅಸಕೃದಾವೃತ್ತವೆ? ಎಂದು ಹಿಂದೆ ಹೇಳಿಲ್ಲ. ಅಷ್ಟೇ ಅಲ್ಲ, "ಸ ಖಲ್ವೇವಂ ವರ್ತಯನ್ಯಾವದಾಯುಷಂ"—ಇತ್ಯಾದಿಯಿಂದ ಉಕ್ತವಾದ, ಯಾವಜ್ಜೀವ ಬ್ರಹ್ಮೋಪಾಸನದ ಅನುವೃತ್ತಿ ಮುಂತಾದುದನ್ನೂ ಹಿಂದೆ ಹೇಳಿಲ್ಲವಾಗಿ ಪೌನರುಕ್ತ್ಯ ಗಂಧವೂ ಪ್ರಸಂಗಿಸುವುದಿಲ್ಲವೆಂದು ತಿಳಿಯಬೇಕು.

## 1. ಆವೃತ್ತ್ಯಧಿಕರಣ

### ಸೂತ್ರ—ಆವೃತ್ತಿರಸಕೃದುಪದೇಶಾತ್

**ಸಂಗತಿ**

[ಆಕ್ಷೇಪಿಕೀ—ಎಂದು ಮೇಲೆಯೇ ವಿವರವಾಗಿ ಹೇಳಿದೆ.]

**ಸೂತ್ರಾರ್ಥ**

[ಉಪದೇಶಾತ್] = ಧ್ಯಾನಸ್ಥಾನದಲ್ಲಿ ಉಪಾಸನಾತ್ಮಕ ಜ್ಞಾನವನ್ನು ಹೇಳುವು ದರಿಂದ, [ಆವೃತ್ತಿಃ] = ಆವೃತ್ತಿಯೆಂಬುದು [ಅಸಕೃತ್] = ಅಡಿಗಡಿಗೂ ಮಾಡ ಲ್ಪಡಬೇಕು.

**ವಿವರಣೆ**

ಮೂರನೇ ಅಧ್ಯಾಯದಲ್ಲಿ ಸಾಂಗವಾದ ಉಪಾಸನ ಹೇಳಲ್ಪಟ್ಟಿತು. ಇನ್ನು ಇದರಲ್ಲಿ ಉಪಾಸನ ಸ್ವರೂಪ ನಿರ್ಣಯಿಸಲ್ಪಡುವುದು. 'ಬ್ರಹ್ಮವೇದ ಬ್ರಹ್ಮೈವ

ಭವತಿ ,—ಇತ್ಯಾದಿ ವಾಕ್ಯಗಳಲ್ಲಿ ಬ್ರಹ್ಮಪ್ರಾಪ್ತಿಗೆ ಸಾಧನವಾಗಿ ಹೇಳಲ್ಪಟ್ಟ ಬ್ರಹ್ಮ ಜ್ಞಾನ, ಅಂದರೆ—ಉಪಾಸನವನ್ನು (ಉಪಾಸನವೆಂದರೇಯೆ ಆವೃತ್ತಿ ಮಾಡಲ್ಪಡ ತಕ್ಕದ್ದೆಂಬುದು ಸಿದ್ಧ) ಎರಡು ಮೂರು ಸಲ ಮಾಡಿದರೇ ಸಾಕೆ? ಅಥವಾ ಅಡಿಗಡಿಗೂ ಮಾಡಬೇಕೆ? ಎಂದಲ್ಲಿ, ಎರಡು ಮೂರು ಸಲ ಮಾಡಿ ಬಿಟ್ಟು ಬಿಟ್ಟರೂ, ಆವೃತ್ತಿಯಾಗಿ ಬಿಡುವುದರಿಂದ ಶಾಸ್ತ್ರ ವಿಧಿ ನಡೆಸಲ್ಪಟ್ಟಂತಾಗುತ್ತೆಯಾಗಿ, ಅಡಿಗಡಿಗೂ ಮಾಡ ಬೇಕಾಗಿಲ್ಲವೆಂದು ಪೂರ್ವಪಕ್ಷ.

"ಬ್ರಹ್ಮವೇದ",—ಎಂಬಲ್ಲಿ ಹೇಳಲ್ಪಟ್ಟ ಬ್ರಹ್ಮಜ್ಞಾನವನ್ನು, ಧ್ಯಾನೋಪಾಸನ ಸ್ಥಾನದಲ್ಲಿ ಹೇಳಿರುವುದಾದ್ದರಿಂದ ಅದು ಧ್ಯಾನ ಪದದ ಅರ್ಥವುಳ್ಳದ್ದಾಗಿರುವುದು. ಧ್ಯಾನ ವೆಂಬುದು—ಎಡಬಿಡದ ಸ್ಮೃತಿ ಪರಂಪರೆ. ಅಂದರೆ ಅಡಿಗಡಿಗೂ ಮಾಡಲ್ಪಟ್ಟ ಜ್ಞಾನದ ಆವೃತ್ತಿ. ಆದ್ದರಿಂದ, ಇಲ್ಲಿ ಹೇಳಲ್ಪಟ್ಟ ಬ್ರಹ್ಮಜ್ಞಾನ ಅಡಿಗಡಿಗೂ ಆವೃತ್ತಿ ಮಾಡಲ್ಪಟ್ಟದ್ದಾಗಿಯೇ ಬ್ರಹ್ಮಪ್ರಾಪ್ತಿಗೆ ಸಾಧನವಾಗುವುದು—ಎಂದು ಸಿದ್ಧಾಂತ. "ಯಸ್ತದ್ವೇದ",—ಎಂದು ಆರಂಭದಲ್ಲಿ ಸಾಮಾನ್ಯವಾಗಿ ಜ್ಞಾನವಾಚಕ ಶಬ್ದವನ್ನು ಹೇಳಿ. ಕಡೆಯಲ್ಲಿ, "ಉಪಾಸ್ತೇ",—ಎಂದು ಉಪಾಸನ ಶಬ್ದದಿಂದ ಉಪಸಂಹರಿಸಿದೆ. ಆರಂಭಿಸಿದುದನ್ನೇ ಮುಗಿಸಬೇಕಾದ್ದರಿಂದ, ಆರಂಭದಲ್ಲಿಯೂ ಉಪಾಸನವೇ ಹೇಳಲ್ಪ ಟ್ಟಿತೆಂದು ತಿಳಿಯಬೇಕು.

## ಸೂತ್ರ—೨ ಲಿಂಗಾಚ್ಚ

### ಸೂತ್ರಾರ್ಥ

ಸ್ಮೃತಿಯಿಂದಲೂ (ಬ್ರಹ್ಮಸ್ಮರಣವು ಅಡಿಗಡಿಗೂ ಮಾಡಲ್ಪಡತಕ್ಕದ್ದೆಂದು ಏರ್ಪಡುತ್ತೆ),

### ವಿವರಣೆ

'ತದ್ರೂಪ ಪ್ರತ್ಯಯೇ ಚೈಕಾಸನ್ತತಿಶ್ಚಾನ್ಯನಿಸ್ಪೃಹಾ ।

ತದ್ಧ್ಯಾನಂ ಪ್ರಥಮೈಃಷಡ್ಭಿರಂಗೈರ್ನಿಷ್ಪಾದ್ಯತೇ ತಥಾ ॥"—ಅಂದರೆ, ಎಡೆಬಿಡದ ಪರಮಾತ್ಮ ವಿಷಯಕ ಸ್ಮೃತಿ ಪರಂಪರೆಯೇ ಧ್ಯಾನವೆನಿಸುವುದೆಂದು ಸ್ಮೃತಿಯಲ್ಲಿಯೂ ಹೇಳುವುದರಿಂದ, ಅಡಿಗಡಿಗೂ ಆವೃತ್ತಿ ಮಾಡಲ್ಪಟ್ಟ ಬ್ರಹ್ಮೋಪಾಸನವೇ ಮೋಕ್ಷ ಸಾಧನವಾಗುವುದು.

[ಪುರಾಣ ವಾಕ್ಯದಲ್ಲಿ "ಸ್ಮರಣಂ ಕೀರ್ತನಂ ವಿಷ್ಣೋಃ..." "ಮದ್ಭಕ್ತಜನ ವಾತ್ಸಲ್ಯಂ..."—ಇತ್ಯಾದಿಯಲ್ಲಿ ಭಕ್ತಿ ಒಂಭತ್ತು ವಿಧ. ಎಂಟು ವಿಧ—ಎಂದು ಸ್ಮರಣ—ಕೀರ್ತನಾದಿಗಳಿಗೆಲ್ಲಾ ಭಕ್ತಿ ಪ್ರಕಾರ ಭೇದವೆಂಬ ವಾದವಿದೆ—ಇವೆಲ್ಲವೂ ಭಕ್ತಿಯ ಕಾರ್ಯವೂ, ಕಾರಣವೂ ಆದ್ದರಿಂದ, ಇವುಗಳಲ್ಲಿ ಭಕ್ತಿ ಶಬ್ದವನ್ನು ಪ್ರಯೋಗಿ ಸಿರುವುದು ಔಪಚಾರಿಕ. ಕೀರ್ತನಾದಿಗಳು ಬಹುಮಾನ್ಯವೆಂಬುದಕ್ಕಾಗಿ ಇವಕ್ಕೆ ಭಕ್ತಿ ಶಬ್ದ ಪ್ರಯೋಗವಿದೆ.]

ಶ್ರೀಮದ್ವಿಷ್ಣು ಪುರಾಣದಲ್ಲಿ,

"ಪ್ರಾಯಶ್ಚಿತ್ತಾನ್ಯಶೇಷಾಣಿ ತಪಃ ಕರ್ಮಾತ್ಮಕಾನಿವೈ ।
ಯಾನಿತೇಷಾಮಶೇಷಾಣಾಂ ಕೃಷ್ಣಾನುಸ್ಮರಣಂ ಪರಂ ॥—ಎಂದು

ಸರ್ವಾತಿಶಯಿತವೂ ಸರ್ವ ವೇದಾನ್ತಸಾರಭೂತವೂ ಆದ ಶ್ರೀಕೃಷ್ಣಾನುಸ್ಮರಣಯೋಗವು ತತ್ತತ್ಪ್ರಾಯಶ್ಚಿತ್ತರೂಪ ಕೃಚ್ಛ್ರಾದಿಗಳಲ್ಲಿ ಶಕ್ತಿ ಹೀನನೂ ದೃಢವಾದ ಅನುತಾಪ ವುಳ್ಳವನೂ ಆದ ಸಂಯಮಾರ್ಹನಿಗೆ (ಯೋಗಾನುಷ್ಠಾನಾರ್ಹನಿಗೆ) ಸರ್ವ ಪ್ರಾಯ ಶ್ಚಿತ್ತಸ್ಥಾನೀಯವಾಗಿ ಹೇಳಲ್ಪಟ್ಟಿದೆ. ಶ್ರೀ ಕೇಶವಾನುಸ್ಮರಣವು ಒಂದೊಂದು ಪ್ರಾಯಶ್ಚಿತ್ತದ ಸ್ಥಾನದಲ್ಲಿ ನಿಲ್ಲುವುದು ಮಾತ್ರವಲ್ಲ, ಸಕಲ ಪ್ರಾಯಶ್ಚಿತ್ತಗಳಿಗೂ ಸಹಕಾರಿಯಾಗಿರುವುದು ಮಾತ್ರವೂ ಅಲ್ಲ, ಮತ್ತೇನೆಂದರೆ, ತಾನು ಒಂದೇ, ಅನಾದಿ ಸಿದ್ಧವಾದ ಅನಂತ ದುಷ್ಕೃತಗಳಿಗೂ ಪ್ರಾಯಶ್ಚಿತ್ತವಾಗಿರುತ್ತೆ. ಹೀಗೆ ಕೇವಲ ಅನಿಷ್ಟನಿವೃತ್ತಿಗೆ ಮಾತ್ರವಲ್ಲ. ಅನಿಷ್ಟನಿವೃತ್ತಿ ಪೂರ್ವಕ ಇಷ್ಟ ಪ್ರಾಪ್ತಿ ರೂಪವಾದ ಮುಕ್ತಿಗೂ ಕೂಡ ಇದೇ ಮೂಲವೆನಿಸಿದೆ.

ಇಲ್ಲಿ, "ಶರಣಂ ತ್ವಾಂ ಪ್ರಪನ್ನಾಯೇ..."—ಎಂಬ ಶ್ಲೋಕದಲ್ಲಿ ಶರಣಾಗತಿಯೇ ಸರ್ವ ಪ್ರಾಯಶ್ಚಿತ್ತವೆಂದೂ ಪರಮಪದಪ್ರಾಪ್ತಿಗೆ ಹೇತುವೆಂದೂ, ಹೇಳಿದೆಯಾಗಿ, ಉಪಾಸಾತ್ಮಕಯೋಗ ಸರ್ವಪ್ರಾಯಶ್ಚಿತ್ತವೆನ್ನುವುದು ಹೇಗೆ?—ಎಂದಲ್ಲಿ, ಶಕ್ತಾಶಕ್ತ ರೂಪ ಅಧಿಕಾರಿ ಭೇದದಿಂದ ಇವೆರಡೂ ಸರ್ವ ಪ್ರಾಯಶ್ಚಿತ್ತವೆಂದು ತಿಳಿಯಬೇಕು. ಸಂಧ್ಯೋಪಾಸನಾದಿ ವರ್ಣಾಶ್ರಮ ಧರ್ಮಗಳು ಹೃದಯ ಕಾಲುಷ್ಯವನ್ನು ಶಮನ ಮಾಡುವುದರಿಂದಲೂ, ಸತ್ತ್ವಗುಣ ವರ್ಧನದಿಂದಲೂ ಹೇಗೆ ಭಕ್ತಿಗೆ ನಿರ್ವರ್ತಕ ವಾಗಿದೆಯೋ—ಹಾಗೆಯೇ ಪ್ರಪತ್ತಿಯೂ ಅಗತಿಕ ಸಮಯಗಳಲ್ಲಿ ಭಕ್ತಿ ವಿರೋಧಿ ಗಳನ್ನು ನಿವರ್ತಿಸತಕ್ಕದ್ದೂ ಆಗಿದೆ. ಇದು ಹೇಗೆಂದರೆ;—ಕೃಪಾಯುಕ್ತನೂ ಅಭಿ ವಂತಾರ್ಥಸಾಧನಶಕ್ತನೂ ಆದ ಸರ್ವಶರಣ್ಯನಲ್ಲಿ ಮಾಡಿದ ಶರಣಾಗತಿಯಿಂದ ಸರ್ವಫಲವೂ ಸುಖದಿಂದ ಸಾಧಿಸಲು ಯೋಗ್ಯವಾದುದು.

"ಯದ್ಯೇನ ಕಾಮ ಕಾಮೇನ ನ ಸಾಧ್ಯಂ ಸಾಧನಾನ್ತರೈಃ ।
ಮುಮುಕ್ಷುಣಾ ಯತ್ಸಾಂಖ್ಯೇನ ಯೋಗೇನ ನ ಚ ಭಕ್ತಿತಃ ॥
ಪ್ರಾಪ್ಯತೇ ಪರಮಂಧಾಮ ಯತೋ ನಾವರ್ತತೇ ಪುನಃ ।
ತೇನ ತೇನಾಪ್ಯತೇ ತತ್ತನ್ನ್ಯಾಸೇ ನೈವ ಮಹಾಮುನೇ ॥
ಪರಮಾತ್ಮಾ ಚ ತೇನೈವ ಪ್ರಾಪ್ಯತೇ ಪುರುಷೋತ್ತಮಃ ॥"

—ಇತ್ಯಾದಿ ಪ್ರಮಾಣಗಳಿಂದ ಪ್ರಪತ್ತಿಗೆ ಸಕಲಫಲ ಸಾಧನವೇ ಸ್ವಭಾವವೆಂದು ತಿಳಿಯುತ್ತೆ.

'ಯೋಬ್ರಹ್ಮಾಣಂ ವಿದಧಾತಿಪೂರ್ವಂ ಯೋವೈವೇದಾಂಶ್ಚ ಪ್ರಹಿಣೋತಿ ತಸ್ಮೈ ।
ತಂಹ ದೇವಮಾತ್ಮ ಬುದ್ಧಿ ಪ್ರಸಾದಂ ಮುಮುಕ್ಷುರ್ವೈಶರಣಮಹಂ ಪ್ರಪದ್ಯೇ" ॥

—ಎಂಬ ಮಂತ್ರದಲ್ಲಿ, ಅಪ್ರಾಪ್ತಾರ್ಥವಾದ್ದರಿಂದ, ಮೋಕ್ಷಾರ್ಥಿಯು ಭಗವಂತನನ್ನು ಶರಣು ಹೊಂದಬೇಕು—ಎಂಬುದು ವಿಧಿಯಾಗಿ ಕಂಡುಬರುತ್ತೆ.

## 2. ಆತ್ಮತ್ವೋಪಾಸನಾಧಿಕರಣ

### ಸೂತ್ರ—ಆತ್ಮೇತಿತೂಪಗಚ್ಛನ್ತಿಗ್ರಾಹಯನ್ತಿ ಚ

**ಸಂಗತಿ**

ಅಸಕೃತ್ ಆವೃತ್ತವೆಂದು ಹೇಳಲ್ಪಟ್ಟ ಉಪಾಸನೆಯಲ್ಲಿ ಉಪಾಸ್ಯವಾದ ಬ್ರಹ್ಮ ಉಪಾಸಕನಿಗಿಂತ ಬೇರೆಯೆಂದು ಉಪಾಸಿಸಬೇಕೆ? ಅಥವಾ ಉಪಾಸಕನಿಗೆ ಆತ್ಮವೆಂದು ಉಪಾಸಿಸಬೇಕೆ? ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಆತ್ಮಾ, ಇತಿ ತು] = ಆತ್ಮಾ ಎಂದೇ [ಉಪಗಚ್ಛನ್ತಿ] = ಧ್ಯಾನಿಸುತ್ತಾರೆ· [ಗ್ರಾಹಯನ್ತಿ ಚ] = (ಈ ಅರ್ಥವನ್ನೇ ಶಾಸ್ತ್ರಗಳು) ಬೋಧಿಸುತ್ತವೆ.

**ವಿವರಣೆ**

ಪರಮಾತ್ಮನನ್ನು ಜೀವನಿಗಿಂತ ಬೇರೆಯಾಗಿ ಧ್ಯಾನಿಸಬೇಕೆ? ಅಥವಾ ತನಗೆ ಆತ್ಮಾ ಎಂದು ಅಭೇದವಾಗಿ ಧ್ಯಾನಿಸಬೇಕೆ? ಎಂದಲ್ಲಿ, ಪರಮಾತ್ಮನಿಗಿಂತ ಜೀವ ಬೇರೆಯಾದವನು. ಈ ಅರ್ಥ ''ಅಧಿಕಂ ತು ಭೇದವ್ಯಪದೇಶಾತ್''—ಇತ್ಯಾದಿ ಸೂತ್ರ ಗಳಲ್ಲಿ ವಿವರಿಸಲ್ಪಟ್ಟಿದೆ. ಬೇರ್ಪಟ್ಟ ವಸ್ತುಗಳನ್ನು ಒಂದೆಂದು ಧ್ಯಾನಿಸುವುದು ಅನುಚಿತವಾದ್ದರಿಂದ ಬೇರೆಯೆಂದೇ ಧ್ಯಾನಿಸಬೇಕು—ಎಂದು ಪೂರ್ವಪಕ್ಷ.

ಪರಮಾತ್ಮನನ್ನು ತನಗೆ ಆತ್ಮಾ ಎಂದೇ ಉಪಾಸಿನಬೇಕು. ಈ ಶರೀರಕ್ಕೆ ತಾನು ಆತ್ಮಾವಾಗಿರುವಂತೆ ಜೀವನಾದ ತನಗೆ ಪರಮಾತ್ಮಾ ಆತ್ಮಾವಾಗಿದ್ದಾನೆ. ಬೇರೆ ಬೇರೆಯಾದ ಶರೀರವನ್ನೂ ಆತ್ಮವನ್ನೂ ಅಭೇದವಾಗಿಯೇ, 'ನಾನು ದೇವ, ನಾನು ಮನುಷ್ಯ'—ಎಂದು ವ್ಯವಹರಿಸುತ್ತಾರೆ. ಅದಕ್ಕೆ ಕಾರಣ ಶರೀರಾತ್ಮ ಸಂಬಂಧ. ಅದು ಜೀವನಿಗೂ ಪರಮಾತ್ಮನಿಗೂ ಸಹ ಉಂಟು. ಉಪಾಸಕರಾದ ಪೂರ್ವ ಪುರುಷ ರುಗಳೂ, ''ತ್ವಂವಾ ಅಹಸಮಸ್ಮಿ, ಅಹಂ ವೈತ್ವಮಸಿ'',—ಎಂದು ತನ್ನನ್ನು ಪರಮಾತ್ಮ ನೆಂದೇ ಉಪಾಸನ ಮಾಡುತ್ತಾರೆ. ''ಯಸ್ಯಾತ್ಮಾ ಶರೀರಂ'',—ಯಾವ ಪರಮಾತ್ಮ ನಿಗೆ ಜೀವ ಶರೀರವೋ—ಎಂದು ಶ್ರುತಿಯೇ ಈ ಅರ್ಥದಲ್ಲಿ ಪ್ರಮಾಣ. ಆದ್ದರಿಂದ ಪರಮಾತ್ಮನನ್ನು ತನಗೆ ಆತ್ಮವೆಂದೇ ಉಪಾಸಿಸಬೇಕೆಂದು ಸಿದ್ಧಾನ್ತ.

## 3. ಪ್ರತೀಕಾಧಿಕರಣ

### ಸೂತ್ರ— ನ ಪ್ರತೀಕೇನ ಹಿ ಸಃ

**ಸಂಗತಿ**

ಆತ್ಮವೆಂದು ಉಪಾಸಿಸಲು ಹೇಳಿತು—ಈಗ ''ಮನೋಬ್ರಹ್ಮೇತ್ಯುಪಾಸೀತ'', ''ಸ ಯೋ ನಾಮ ಬ್ರಹ್ಮೇತ್ಯುಪಾಸ್ತೇ''—ಇತ್ಯಾದಿ ಪ್ರತೀಕೋಪಾಸನಗಳಲ್ಲಿಯೂ ಆತ್ಮತ್ವೇನ ಅನುಸಂಧಾನ ಮಾಡಬೇಕೆ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಪ್ರತೀಕೇ] = ಪ್ರತೀಕದಲ್ಲಿ [ನ] = ಆತ್ಮ ಬುದ್ಧಿ ಮಾಡಕೂಡದು. [ಸಃ] = ಆ ಪ್ರತೀಕವು [ನ, ಹಿ] = ಆತ್ಮಾ ಅಲ್ಲವಷ್ಟೆ!

**ವಿವರಣೆ**

ಪರಮಾತ್ಮೋಪಾಸನವನ್ನು ಹೀಗೆ ಮಾಡಿದಾಗ್ಯೂ, ಪ್ರತೀಕೋಪಾಸನ ಮಾಡು ವಾಗ, ಮನಸ್ಸು, ನಾಮ, ಮುಂತಾದ ಪ್ರತೀಕಗಳು ಪರಮಾತ್ಮನಂತೆ ತನಗೆ ಆತ್ಮಾ ಅಲ್ಲದ್ದರಿಂದ, ಅವುಗಳನ್ನು ತನಗೆ ಆತ್ಮವನ್ನಾಗಿ ಉಪಾಸಿಸಕೂಡದು. ಪ್ರತೀಕೋ ಪಾಸನವೆಂಬುದು—ಪರಮಾತ್ಮನಿಗಿಂತ ಬೇರ್ಪಟ್ಟ ನಾಮ, ಮನಸ್ಸು ಮುಂತಾದ ಬ್ರಹ್ಮವಲ್ಲದವುಗಳಲ್ಲಿ ಬ್ರಹ್ಮ ದೃಷ್ಟಿಯನ್ನು ಮಾಡಿ ಉಪಾಸಿಸುವುದು. [ಪ್ರತೀಕ = ಅಂಗ]

ಸೂತ್ರ ೨—**ಬ್ರಹ್ಮದೃಷ್ಟಿರುತ್ಕರ್ಷಾತ್**

**ಸೂತ್ರಾರ್ಥ**

[ಉತ್ಕರ್ಷಾತ್] = (ಬ್ರಹ್ಮ) ಶ್ರೇಷ್ಠವಾದುದರಿಂದ, [ಬ್ರಹ್ಮದೃಷ್ಟಿಃ] = ಪ್ರತೀಕ ದಲ್ಲಿ ಬ್ರಹ್ಮ ದೃಷ್ಟಿಯನ್ನು ಮಾಡಬೇಕು.

**ವಿವರಣೆ**

"ನಾಮ ಬ್ರಹ್ಮೇತ್ಯುಪಾಸೀತ",—(ನಾಮವನ್ನು ಬ್ರಹ್ಮವಾಗಿ ಉಪಾಸಿಸಬೇಕು) "ಮನೋ ಬ್ರಹ್ಮೇತ್ಯುಪಾಸೀತ"—(ಮನಸ್ಸನ್ನು ಬ್ರಹ್ಮವಾಗಿ ಉಪಾಸಿಸಬೇಕು)— ಎಂದು ಇತ್ಯಾದಿ ಪ್ರತೀಕೋಪಾಸನಗಳಲ್ಲಿ ಬ್ರಹ್ಮವನ್ನು ನಾಮಾದಿಗಳಾಗಿಯೋ, ನಾಮಾದಿಗಳನ್ನು ಬ್ರಹ್ಮವಾಗಿಯೋ, ಉಪಾಸನ ಮಾಡುವುದೇಕೆ?—ಎಂದಲ್ಲಿ, ರಾಜ ನನ್ನು ಸೇವಕನಾಗಿ ನೆನೆಯುವುದು ಅನುಚಿತ. ಸೇವಕನನ್ನು ರಾಜನನ್ನಾಗಿ ನೆನೆದರೆ ಅವನು ಸಂತೋಷಿಸಿ ಅವನಿಗೆ ಉಪಕಾರ ಮಾಡುತ್ತಾನೆ. ಇದರಿಂದ ಮೇಲ್ಪಟ್ಟವನನ್ನು ಕೀಳಾದವನನ್ನಾಗಿ ನೆನೆಯಕೂಡದು. ಕೀಳಾದವನನ್ನು ಮೇಲ್ಪಟ್ಟವನನ್ನಾಗಿ ನೆನೆಯ ಬಹುದೆಂದು ಏರ್ಪಡುವುದರಿಂದ, ಅಚೇತನಗಳಾದ ನಾಮಾದಿಗಳನ್ನೇ ಮೇಲ್ಪಟ್ಟ ವನಾದ ಪರಮಾತ್ಮನನ್ನಾಗಿ ಧ್ಯಾನಿಸಬೇಕೆನ್ನುತ್ತಾರೆ.

## 4. ಆದಿತ್ಯಾದಿಮತ್ಯಧಿಕರಣ

ಸೂತ್ರ— **ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ**

**ಸಂಗತಿ**

ದೇವತೆಗೆ ಉತ್ಕರ್ಷದಿಂದ ದೃಷ್ಟಿ ವಿಶೇಷಣತ್ವವನ್ನು ಹೇಳಿತು. ಆ ಉತ್ಕರ್ಷ ವನ್ನು ಆಕ್ಷೇಪಿಸಿ ಕರ್ಮವೇ ಉತ್ಕರ್ಷವೆಂಬ ಶಂಕೆಯಿಂದ ಅವಾಂತರ ಸಂಗತಿ.

**ಸೂತ್ರಾರ್ಥ**

[ಉಪಪತ್ತೇಃ] = ಸರಿಯಾದದಾದ್ದರಿಂದ, [ಅಂಗೇ] = ಉದ್ಗೀಥಾದಿ ರೂಪವಾದ ಅಂಗದಲ್ಲಿ [ಆದಿತ್ಯಾದಿಮತಯಃ, ಚ] = ಸೂರ್ಯ ಮುಂತಾದವರ ದೃಷ್ಟಿಗಳು (ಮಾಡಲ್ಪಡಬೇಕು)

**ವಿವರಣೆ**

"ಯ ಏವಾ ಸೌ ತಪತಿ ತಮುದ್ಗೀಥಮುಪಾಸೀತ",—ಎಂಬ ಉದ್ಗೀಥಾದ್ಯು ಪಾಸನದಲ್ಲಿ ಕರ್ಮಾಂಗವಾದ ಉದ್ಗೀಥವನ್ನು ಸೂರ್ಯನಾಗಿಯೋ ಸೂರ್ಯನನ್ನು

ಉದ್ಗೀಥವನ್ನಾಗಿಯೋ ಉಪಾಸನೆ ಮಾಡಬೇಕು?—ಎಂದಲ್ಲಿ, ಕರ್ಮಾಂಗವಾಗಿ ಫಲ ಸಾಧನವಾದ ಉದ್ಗೀಥ ಸೂರ್ಯನಿಗಿಂತ ಶ್ರೇಷ್ಠವಾದ್ದರಿಂದ, ಸೂರ್ಯನನ್ನು ಉದ್ಗೀಥ ವಾಗಿಯೇ ಉಪಾಸಿಸಬೇಕೆಂದು ಪೂರ್ವಪಕ್ಷ. ಉದ್ಗೀಥಾದಿಗಳನ್ನು ಅಂಗವಾಗಿಯುಳ್ಳ ಕರ್ಮಗಳಿಂದ ಸೂರ್ಯಾದಿ ದೇವತೆಗಳೇ ಆರಾಧಿಸಲ್ಪಡುವವರಾದ್ದರಿಂದ, ಉದ್ಗೀಥಾದಿ ಗಳಿಗಿಂತ ಸೂರ್ಯಾದಿ ದೇವತೆಗಳೇ ಮೇಲ್ಪಟ್ಟವರು. ಕೀಳಾದುದನ್ನು ಮೇಲಾ ದುದನ್ನಾಗಿ ನೆನೆಯುವುದು ಉಚಿತವಾದ್ದರಿಂದ, ಉದ್ಗೀಥಾದಿಗಳನ್ನು ಸೂರ್ಯಾದಿ ದೇವತೆಗಳಾಗಿ ಧ್ಯಾನಿಸುವುದೇ ಸರಿಯೆಂದು ಸಿದ್ಧಾಂತ.

## 5. ಆಸೀನಾಧಿಕರಣ

### ಸೂತ್ರ— ಆಸೀನಸ್ಸಂಭವಾತ್

**ಸಂಗತಿ**

ಉಪಾಸನವನ್ನು ಕುಳಿತು ಮಾಡಬೇಕೆ? ಅಥವಾ, ಮಲಗಿಯೋ, ನಿಂತೋ? ನಡೆದುಕೊಂಡೋ, ಉಪಾಸನೆ ಮಾಡಬಹುದೋ?—

**ಸೂತ್ರಾರ್ಥ**

[ಸಂಭವಾತ್] = (ಕುಳಿತಿರುವವನಿಗೇ ಚಿತ್ತಸ್ಥೈರ್ಯ) ಉಂಟಾಗುವುದರಿಂದ, [ಆಸೀನಃ] =ಕುಳಿತವನಾಗಿಯೇ (ಉಪಾಸನೆ ಮಾಡಬೇಕು)

**ವಿವರಣೆ**

ಅನವರತ ಸ್ಮೃತಿಸಂತತಿರೂಪವಾದ ಉಪಾಸನವನ್ನು ನಿಂತುಕೊಂಡೇ, ನಡೆದು ಕೊಂಡೇ, ಕುಳಿತೇ, ಮಲಗಿಯೆ, ಮಾಡತಕ್ಕದ್ದು?—ಎಂದಲ್ಲಿ, ನಿಂತಿರುವಾಗಲೂ, ನಡೆ ಯುವಾಗಲೂ, ಪ್ರಯತ್ನದಿಂದ ಮನಸ್ಸು ನಲೆಯಾಗಿರುವುದಿಲ್ಲ. ಮಲಗಿರುವಾಗ ನಿದ್ರೆ ಬಂದುಬಿಡುವುದು, ಆದ್ದರಿಂದ ಕುಳಿತುಕೊಂಡೇ ಉಪಾಸನೆಯನ್ನು ಮಾಡಬೇಕು.

### ಸೂತ್ರ ೨—ಧ್ಯಾನಾಚ್ಚ

**ಸೂತ್ರಾರ್ಥ**

(ಉಪಾಸನವೆಂಬುದು) ಧ್ಯಾನವಾದ್ದರಿಂದ (ಧ್ಯಾನವನ್ನು) ಎಡೆಬಿಡದೆ ಮಾಡ ಬೇಕಾದ್ದರಿಂದ, ಏಕಾಗ್ರಚಿತ್ತನಾಗುವುದಕ್ಕೆ ಕುಳಿತುಕೊಂಡೇ ಉಪಾಸನೆ ಮಾಡಬೇಕು.

### ಸೂತ್ರ ೩—ಅಚಲತ್ವಂ ಚಾಪೇಕ್ಷ್ಯ

**ಸೂತ್ರಾರ್ಥ**

[ಅಚಲತ್ವಂ] = (ಪರ್ವತಾದಿಗಳು) ಚಲಿಸದಿರುವಿಕೆಯನ್ನೇ [ಅಪೇಕ್ಷ್ಯ,ಚ] =ಕುಳಿತು ("ಧ್ಯಾಯತೀವ ಪೃಥಿವೀ ಧ್ಯಾಯತೀವಾಂತರಿಕ್ಷಂ") —ಇತ್ಯಾದಿಗಳಂತೆ ಭೂಮಿ, ಆಕಾಶ, ಪರ್ವತ, ಮುಂತಾದುವು ಧ್ಯಾನಿಸುವಂತಿರುವುವೆಂದು ಹೇಳಿದೆ. ಇದರಿಂದ ಧ್ಯಾನಕ್ಕೆ ನಿಶ್ಚಲವಾಗಿರಬೇಕೆಂದು ಏರ್ಪಡುವುದು. ಅದು ಕುಳಿತವನಿಗೆ ಫಲಿಸುವುದು.

ಸೂತ್ರ ೪—**ಸ್ಮರನ್ತಿ ಚ**

### ಸೂತ್ರಾರ್ಥ

ಅಲ್ಲದೆ, ' ಉಪವಿಶ್ಯಾಸನೇ ಯುಂಜ್ಯಾತ್ ಯೋಗಮಾತ್ಮವಿಶುದ್ಧಯೇ"—(ಕುಳಿತು ಯೋಗಾಭ್ಯಾಸವನ್ನು ಮಾಡಬೇಕು) "ಶುಚೌದೇಶೇ ಪ್ರತಿಷ್ಠಾಪ್ಯ ಸ್ಥಿರ ಮಾಸನಮಾತ್ಮನಃ । ನಾತ್ಯುಚ್ಛ್ರಿತಂ ನಾತಿನೀಚಂ ಚೇಲಾಜಿನ ಕುಶೋತ್ತರಂ ।ತತ್ರೈ ಕಾಗ್ರಂಮನಃ ಕೃತ್ವಾಯತಚಿತ್ತೇನ್ದ್ರಿಯಕ್ರಿಯಃ। ಉಪವಿಶ್ಯಾಸನೇ..." ॥—ಇತ್ಯಾದಿ ಯಾಗಿ ಕುಳಿತೇ ಧ್ಯಾನ ಮಾಡಬೇಕೆಂದು ಶ್ರೀ ಭಗವದ್ಗೀತಾದಿಗಳಲ್ಲಿ ಹೇಳಿದ್ದಾರೆ.

ಸೂತ್ರ ೫—**ಯತ್ರೈಕಾಗ್ರತಾ ತತ್ರಾವಿಶೇಷಾತ್**

### ಸೂತ್ರಾರ್ಥ

[ಅವಿಶೇಷಾತ್] = ಚಿತ್ತಸ್ಥೈರ್ಯಕ್ಕೆ ಅನುಕೂಲವಾದ ದೇಶ ಕಾಲಗಳಿಗಿಂತ ಬೇರೆಯಾದ ದೇಶ ಕಾಲ ವಿಶೇಷಗಳನ್ನು ವಿಶೇಷಿಸಿ ಹೇಳಿಲ್ಲವಾದ್ದರಿಂದ [ಯತ್ರ] = ಎಲ್ಲಿ [ ಏಕಾಗ್ರತಾ] = ಚಿತ್ತ ಸ್ಥೈರ್ಯ (ಉಂಟಾಗುವುದೋ) [ತತ್ರ] = ಅಲ್ಲಿ (ಆ ಸ್ಥಳ ಮತ್ತು ಕಾಲಗಳಲ್ಲಿ) (ಇದ್ದು ಉಪಾಸನ ಮಾಡಬೇಕು).

### ವಿವರಣೆ

"ಶರ್ಕರಾದಿರಹಿತೇ ಮನೋಽನುಕೂಲೆ ಶುಚೌದೇಶೇ",—ಎಂದು ಮಾತ್ರ ಹೇಳಿದೆ. ಇದರಿಂದ ದೇಶಕಾಲಗಳಿಗೆ ನಿಯಮವಿಲ್ಲದಿದ್ದಾಗ್ಯೂ ಕುಳಿತೇ ಉಪಾಸಿಸಬೇಕೆಂಬ ನಿಯಮ ಮಾತ್ರ ಉಂಟೆಂದು ಭಾವ.

## 6. ಆಪ್ರಯಾಣಾಧಿಕರಣ

ಸೂತ್ರ—**ಆ ಪ್ರಯಾಣಾತ್ ತತ್ರಾಪಿ ಹಿ ದೃಷ್ಟಂ**

### ಸಂಗತಿ

ಈ ಉಪಾಸನವನ್ನು ಒಂದು ದಿನ ಮಾಡಿದರೆ ಸಾಕೆ? ಅಥವಾ ಯಾವಜ್ಜೀವ ದಿನವೂ ಮಾಡುತ್ತಿರಬೇಕೆ?—ಎಂಬ ಶಂಕೆಯಿಂದ ಸಂಗತಿ.

### ಸೂತ್ರಾರ್ಥ

[ಆ ಪ್ರಯಾಣಾತ್] = ಸಾಯುವವರೆಗೂ (ಉಪಾಸನವನ್ನು ) ಮಾಡಬೇಕು. [ತತ್ರ. ಅಪಿ] = ಆ ಕಾಲದಲ್ಲಿಯೂ [ದೃಷ್ಟಂ] = ಉಪಾಸನ ಕಾಣಲ್ಪಟ್ಟಿದೆ.

### ವಿವರಣೆ

ಈ ಉಪಾಸನವನ್ನು ಒಂದು ದಿನ ಮಾಡಿದಾಗ್ಯೂ, 'ಉಪಾಸೀತ'—ಎಂಬ ವಿಧಿಯನ್ನು ಅನುಷ್ಠಿಸಿದಂತಾದ್ದರಿಂದ, ಎಂದೆಂದೂ ಮಾಡಬೇಕೆಂಬ ವಿಧಿಯಿಲ್ಲ. "ಸ ಖಲ್ವೇವಂವರ್ತಯನ್ ಯಾವದಾಯುಷಂ"—ಎಂಬ ವಾಕ್ಯದಲ್ಲಿ ಯಾವದಾಯುಷ"—ಮಾಡಬೇಕೆಂಬ ವಿಧಿ ಪ್ರತ್ಯಯವಿಲ್ಲದ್ದರಿಂದ, ಅದು ಇದಕ್ಕೆ ಪ್ರಮಾಣ ವಾಗದು.—ಎಂದು ಪೂರ್ವಪಕ್ಷ.

"ಸ ಖಲ್ವೇವಂವರ್ತಯನ್ ಯಾವದಾಯುಷಂ",—ಎಂಬ ವಾಕ್ಯದಲ್ಲಿ ಯಾವದಾಯುಷ ಈ ಉಪಾಸನವನ್ನು ಮಾಡಿದವನಾಗಿ ಅನಂತರ ಮೋಕ್ಷ ಹೊಂದುವನೆಂದು ಹೇಳಿದೆ. ಅದರಲ್ಲಿ ವಿಧಿ ಪ್ರತ್ಯಯವಿಲ್ಲದಿದ್ದಾಗ್ಯೂ, ಈ ಅರ್ಥವನ್ನು ಮತ್ತೆಲ್ಲಿಯೂ ಹೇಳಿಲ್ಲವಾದ್ದರಿಂದ, ಅಪೂರ್ವವಾದ್ದರಿಂದ. ಅದನ್ನು ವಿಧಿಯೆಂದೇ ಒಪ್ಪಬೇಕು—ಎಂದು ಸಿದ್ಧಾಂತ. "ತತ್ರ, ಅಪಿ"—ಎಂಬುದಕ್ಕೆ ಉಪಾಸನವನ್ನು ಮಾಡಲು ತೊಡಗಿದ ದಿವಸದಿಂದ, ಸಾಯುವವರಿಗೂ ಎಂದರ್ಥ. ಇದಕ್ಕೆ ಪ್ರಮಾಣ "ಸ ಖಲ್ವೇವಂ..." ಎಂಬ ವಾಕ್ಯ.

## 7. ತದಧಿಗಮಾಧಿಕರಣ

### ಸೂತ್ರ—ತದಧಿಗಮೇ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್

**ಸಂಗತಿ**

[ ಪೇಟಿಕಾ—೨]—ಹಿಂದಿನ ಪೇಟಿಕೆಯಲ್ಲಿ ವಿದ್ಯಾಸ್ವರೂಪವನ್ನು ಶೋಧಿಸಿದ ಬಳಿಕ ಈ ಪೇಟಿಕೆಯಲ್ಲಿ—ವಿದ್ಯಾ ಫಲವನ್ನು ಚಿಂತಿಸಲು ತೊಡಗುತ್ತಾರೆ.

**ಸೂತ್ರಾರ್ಥ**

[ತದ್ವ್ಯಪದೇಶಾತ್] = ಅದನ್ನೇ ಉಪನಿಷತ್ತಿನಲ್ಲಿ ಹೇಳುವುದರಿಂದ, [ತದಧಿಗಮೇ] = ಆ ಬ್ರಹ್ಮವಿದ್ಯೆ ಪ್ರಾಪ್ತವಾದ ಮೇಲೆ, [ಉತ್ತರ ಪೂರ್ವಾಘಯೋಃ] = ಉಪಾಸನಾನಂತರ ಮಾಡುವ ಪಾಪಕ್ಕೂ, ಅದಕ್ಕೆ ಮುಂಚೆ ಮಾಡಿದ ಪಾಪಕ್ಕೂ [ಅಶ್ಲೇಷ ವಿನಾಶೌ] = ಅಂಟದಿರುವಿಕೆ ಮತ್ತು ನಾಶಗಳು (ಸಂಭವಿಸುವುವು)

**ವಿವರಣೆ**

ಉಪಾಸಕನಿಗೆ ವಿದ್ಯಾಮಾಹಾತ್ಮ್ಯದಿಂದ ಪಾಪ ನಶಿಸುವುದೋ? ನಶಿಸದೋ?—ಎಂದಲ್ಲಿ, "ನಾಭುಕ್ತಂಕ್ಷೀಯತೇಕರ್ಮ ಕಲ್ಪಕೋಟಿ ಶತೈರಪಿ",—ಎಂಬಂತೆ ಅವರವರು ಮಾಡಿದ ಕರ್ಮವನ್ನು ಎಷ್ಟು ಕೋಟಿ ಕಲ್ಪಗಳಾದರೂ ಅನುಭವಿಸಿಯೇ ತೀರಬೇಕು. ಅನುಭವಿಸದೆ ತೀರದು ಎಂದು ಪೂರ್ವಪಕ್ಷ.

"ತದ್ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯನ್ತೇ ಏವಮೇವಂವಿದಿ ಪಾಪಂ ಕರ್ಮನಶ್ಲಿಷ್ಯತೇ"—ಅಂದರೆ, ತಾವರೆ ಎಲೆಯಲ್ಲಿ ನೀರು ಅಂಟದ ಹಾಗೆ ಉಪಾಸಕನಲ್ಲಿ ಪಾಪ ಅಂಟದು—ಎಂದಿರುವುದರಿಂದಲೂ, "ತದ್ಯಥೇಷೀಕತೂಲಮಗ್ನೌ ಪ್ರೋತಂ ಪ್ರದೂಯೇತ ಏವಂ ಹಾಸ್ಯಸರ್ವೇ ಪಾಪ್ಮಾನಃ ಪ್ರದೂಯನ್ತೇ"—ಅಂದರೆ ಇಷೀಕವೆಂಬ ಹತ್ತಿ ಬೆಂಕಿಯಲ್ಲಿ ಹಾಕಿದರೆ ಬೆಂದು ಹೋಗುವಂತೆ ಉಪಾಸಕನ ಪಾಪ ಉಪಾಸನೆಯ ಮಾಹಾತ್ಮ್ಯದಿಂದ ನಶಿಸಿಹೋಗುವುವು—ಎಂದಿರುವುದರಿಂದಲೂ, "ಉಪಾಸಕನಿಗೆ ಪಾಪ ಸಂಭವಿಸದು. ಉಪಾಸನವನ್ನು ಮಾಡಲು ತೊಡಗಿದ ಮೇಲೆ ಅಬುದ್ಧಿಪೂರ್ವಕವಾಗಿ ಮಾಡಿದ ಪಾಪ ಅಂಟದು. ಅದಕ್ಕೆ ಮುಂಚೆ ಮಾಡಿದ ಪಾಪ ನಶಿಸಿ ಹೋಗುವುದು".—ಎಂದು ಸಿದ್ಧಾಂತ. "ನಾಭುಕ್ತಂಕ್ಷೀಯತೇ ಕರ್ಮ..."

ಅಂದರೆ, ಮಾಡಿದ ಪಾಪ ಇವನಿಗೆ ದುಃಖಾನುಭವವನ್ನು ಉಂಟುಮಾಡತಕ್ಕ ಶಕ್ತಿಯನ್ನುಳ್ಳದ್ದು ಎಂದರ್ಥ. "ಏವಂ ವಿದಿ",—ಇತ್ಯಾದಿವಾಕ್ಯ, ಬೆಂಕಿಯಿರುವಾಗ ಶೀತವುಂಟಾಗದ ಹಾಗೆ, ಉಪಾಸನವಿರುವಾಗ ಪಾಪಕ್ಕೆ ಆ ಶಕ್ತಿಯುಂಟಾಗುವುದಿಲ್ಲವೆನ್ನುವುದು "ಏವಂ ,, ಹಾಸ್ಯ."—ಇತ್ಯಾದಿವಾಕ್ಯ ಬೆಂಕಿಯುನ್ನು ತಂದರೆ ಮೊದಲಿದ್ದ ಛಳಿಬಿಟ್ಟುಹೋಗುವ ಹಾಗೆ ಪಾಪಕ್ಕೆ ಉಂಟಾದ ಶಕ್ತಿ ಉಪಾಸನ ಮಹಿಮೆಯಿಂದ ನಶಿಸುವುದೆನ್ನುವುದು. ಆದ್ದರಿಂದ ಶಾಸ್ತ್ರಗಳಿಗೆ ಪರಸ್ಪರ ವಿರೋಧವಿಲ್ಲ.

[ಹೀಗೆ ಅಬುದ್ಧಿಪೂರ್ವೋತ್ತರಾಘವನ್ನು ಹೇಳಿ, ಬುದ್ಧಿಪೂರ್ವೋತ್ತರಾಘವು ಬ್ರಹ್ಮವಿತ್ತುಗಳು ಕೆಲವರಲ್ಲಿ ಉತ್ಪನ್ನವೇ ಆಗದೆಂದೂ, ಕೆಲವರಲ್ಲಿ ಉತ್ಪನ್ನವಾದಲ್ಲಿ ಅದಕ್ಕೆ ಪ್ರಾಯಶ್ಚಿತ್ತವನ್ನೂ ಮತ್ತೆ ಕೆಲವರಲ್ಲಿ ಅವರು ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದಲ್ಲಿ ಕ್ಷಿಪ್ರದಲ್ಲಿ ಅದರ ಉಪಭೋಗವನ್ನೂ ಉಪಪಾದಿಸಿ, ಹೇಗೂ ಭಾಗವತನು ಅಪರಾಧಿಯಾದರೂ ಕ್ರಮಶಃ ಮುಕ್ತಿಯುಂಟೆಂಬುದನ್ನು—"ನಖಲು ಭಾಗವತಾಯಮ ವಿಷಯಂ ಗಚ್ಛನ್ತಿ । ಇಷ್ಟೈವೈಷಾಂ ಕೇಚಿದುಪಪ್ಲವಾ ಭವನ್ತಿ ಕಾಣಾ ಭವನ್ತಿ ಖಂಜಾ ಭವನ್ತಿ"—ಇತ್ಯಾದಿ ಶ್ರುತ್ಯುಕ್ತ ಪ್ರಕಾರದಿಂದ ಉಪಪಾದಿಸುತ್ತಾರೆ. ಪ್ರತಿಪದ ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದಲ್ಲಿ ಲಘುದಂಡವನ್ನು ಅನುಭವಿಸಬೇಕು. ಇದು ವೃತ್ರಾಸುರ ಪ್ರಭೃತಿಗಳಲ್ಲಿ ದೃಷ್ಟವೇ ಆಗಿದೆ. ವೃತ್ರನು ಭಾಗವತ. ಯಾವುದೋ ಅಪಚಾರದಿಂದ ಅಸುರ ದೇಹವನ್ನು ಹೊಂದಿ ಅದರಲ್ಲಿಯೂ ಜಾತಿ ಸ್ವಭಾವದಿಂದ ದೇವ ಪ್ರಕೃತಿಗಳಲ್ಲಿ ಅಪರಾಧವೆಸಗುವವನಾಗಿ ಅದಕ್ಕೆ ಅನುರೂಪವಾದ ಉಪಭೋಗವನ್ನೂ ಅನುಭವಿಸಿ, ಭಗವಂತನನ್ನೇ ಧ್ಯಾನಿಸುವವನಾಗಿ ಮೋಕ್ಷವನ್ನು ಹೊಂದಿದನೆಂದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಕ್ಷತ್ರಬಂಧುವೆಂಬ ಕ್ಷುದ್ರ ಕ್ಷತ್ರಿಯನು ನಾನಾ ಅಗ್ರಹಾರ ಗ್ರಾಮಾದಿಗಳನ್ನು ಪೀಡಿಸುವುದರಲ್ಲಿಯೇ ನಿರತನಾಗಿದ್ದಾಗ್ಯೂ ಮಹರ್ಷಿ ಕಟಾಕ್ಷ ವಿಶೇಷದಿಂದ ಉಂಟಾದ ಪರಮಾರ್ತಿಯಿಂದ ಭಗವನ್ನಾಮವನ್ನು ಉಚ್ಚರಿಸಿ ಅದರ ಮಾಹಾತ್ಮ್ಯದಿಂದ ವಿಧ್ವಸ್ತವಾದ ಪಾಪಗಳುಳ್ಳವನಾಗಿ ಆ ಕ್ಷಣವೇ ಭಗವಂತನನ್ನು ಸೇರಿದನೆಂದು ಶ್ರೀ ವಿಷ್ಣುಧರ್ಮೋತ್ತರಾದಿಗಳಲ್ಲಿ ಪ್ರಸಿದ್ಧವಾಗಿದೆ.

ಇದರ ಮೇಲೆ, ಅಪರಾಧಶತವನ್ನು ಅನುಷ್ಠಿಸಿ ಭಗವಂತನಿಗೆ ಜನ್ಮತ್ರಯ ಶತ್ರುವಾದ ಶಿಶುಪಾಲ, ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೆಯೇ ಬ್ರಹ್ಮಪ್ರಾಪ್ತಿಯನ್ನು ಪಡೆದುದು ಹೇಗೆ?—ಎಂದಲ್ಲಿ, ಅವನೂ ಕೂಡ ಜನ್ಮತ್ರಯ ಮಾತ್ರ ಅನುವೃತ್ತವಾದ ಶಾತ್ರವಾಚರಣರೂಪ ಭಗವದಾಜ್ಞಾನುಪಾಲನ ಮಾಹಾತ್ಮ್ಯದಿಂದ, ಅಥವಾ ಕಡೆಯಲ್ಲಿ ಶ್ರೀ ಕೃಷ್ಣನ ದಿವ್ಯಮಂಗಳ ವಿಗ್ರಹಾವಲೋಕನರೂಪ ಸರ್ವಪಾಪ ಪ್ರಾಯಶ್ಚಿತ್ತ ವೈಭವದಿಂದ ಸಿದ್ಧಿಯನ್ನು ಪಡೆದುದಾಗಿ,

"ಸುಕೃತೇನ ಪುರಾಕೃತೇನ ಚೇದ್ಯಃ ಪ್ರತಿಪನ್ನ ಪ್ರಕೃತಿರ್ವಿಲೀನವೈರಃ ।
ಕ್ಷಣಮದ್ಭುತ ಕೃಷ್ಣರೂಪದರ್ಶೀ ಶಿಥಿಲಾಕೃಷ್ಟಪಿಲೀಮುಖೋऽವತಸ್ಥೇ ॥"

—ಎಂದು ಶ್ರೀಕೃಷ್ಣಾವತಾರ ಕಾವ್ಯದಲ್ಲಿ ಶ್ರೀ ದೇಶಿಕರವರೇ ಹೇಳಿದ್ದಾರೆ. ಆದ್ದರಿಂದ ಬ್ರಹ್ಮನಿಷ್ಠರಿಗೆ ಮುಕ್ತಿಸಿದ್ಧಿ ನಿಶ್ಚಿತ. ಅದು ಅವರವರ ಪ್ರಾಚೀನ ಸುಕೃತ ವಿಶೇಷ

ಮೂಲಕವಾದ ವಿದ್ಯಾನಿಷ್ಪತ್ತಿಗೆ ಅನುಗುಣವಾದ್ದರಿಂದ ಕಾಲ ನಿಯಮವಿಲ್ಲವಾಗಿ ಅನಿಯತ ಕಾಲದಿಂದ ಮೋಕ್ಷ ಸಿದ್ಧಿಯೆಂಬುದು ಭಗವದ್ಬಾದರಾಯಣರ ಮತ.]

## 8. ಇತರಾಧಿಕರಣ

### ಸೂತ್ರ—ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇತು

**ಸಂಗತಿ**

ಉತ್ತರ ಪೂರ್ವಾಘಗಳಿಗೆ ಹೇಳಿದ ಅಶ್ಲೇಷ ವಿನಾಶ ಉತ್ತರ ಪೂರ್ವ ಸುಕೃತಗಳಿಗೂ ಉಂಟೆ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಪಾತೇ. ತು] = ಶರೀರ ನಶಿಸುವಾಗ, [ಇತರಸ್ಯ, ಅಪಿ] = ಪುಣ್ಯಕ್ಕೂ ಕೂಡ [ಏವಂ] = ಹಿಂದೆ ಹೇಳಿದ ನ್ಯಾಯದಿಂದ, [ಅಸಂಶ್ಲೇಷಃ] = ಅಂಟದಿರುವಿಕೆ (ಸಿದ್ಧ)

**ವಿವರಣೆ**

ಶಾಸ್ತ್ರಕ್ಕೂ ಪಾಪ ನಿಷಿದ್ಧವಾದ್ದರಿಂದ ಅನಿಷ್ಟವಾದ ಪಾಪ ನಶಿಸಬಹುದು ಶಾಸ್ತ್ರ ವಿಹಿತವಾದ್ದರಿಂದ ಇಷ್ಟವಾದ ಪುಣ್ಯವೇನು ಮಾಡುವುದು?—ಎಂದಲ್ಲಿ, ಮೋಕ್ಷಕ್ಕೆ ಪಾಪ ಹೇಗೋ ಹಾಗೆ ಪುಣ್ಯವೂ ಪ್ರತಿಬಂಧಕವಾದ್ದರಿಂದಲೂ, "ತತ್ಸುಕೃತ ದುಷ್ಕೃತೇ ವಿಧೂನತೇ"—ಎಂದು ಪುಣ್ಯಪಾಪಗಳೆರಡನ್ನೂ ಒದರಿ ಬಿಟ್ಟು ಹೋಗುತ್ತಾನೆ. ಎನ್ನುವುದರಿಂದಲೂ, ಶರೀರ ನಶಿಸಿದ ಬಳಿಕ ಆಯುರಾರೋಗ್ಯಾದಿಗಳನ್ನು ಬೆಳಸತಕ್ಕ ಪುಣ್ಯವೂ ನಶಿಸುವುದೆಂದು ಸಿದ್ಧಾನ್ತ.

## 9. ಅನಾರಬ್ಧಕಾರ್ಯಾಧಿಕರಣ

### ಸೂತ್ರ—ಅನಾರಬ್ಧಕಾರ್ಯೇ ಏವತು ಪೂರ್ವೇ ತದವಧೇಃ

**ಸಂಗತಿ**

ಬ್ರಹ್ಮ ವಿದ್ಯೋತ್ಪತ್ತಿಗೆ ಪೂರ್ವೋತ್ತರಗಳಾದ ಸುಕೃತ ದುಷ್ಕೃತಗಳಿಗೆ ಅಶ್ಲೇಷ ವಿನಾಶಗಳನ್ನು ಹೇಳಿಯಾಯಿತು. ಅದಕ್ಕಿಂತ ಹಿಂದಿನ ಸುಕೃತ ದುಷ್ಕೃತಗಳೆಲ್ಲವೂ ಅವಿಶೇಷದಿಂದ ವಿನಾಶ ಹೊಂದುತ್ತವೆಯೋ? ಅಥವಾ ಅವುಗಳಲ್ಲಿ ಅನಾರಬ್ಧ ಕಾರ್ಯಗಳು ಮಾತ್ರ ವಿನಾಶ ಹೊಂದುವುವೆ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ತದವಧೇಃ] = ಶರೀರವಿರುವವರಿಗೆ ಕರ್ಮವುಂಟೆನ್ನುವುದರಿಂದ, [ಅನಾರಬ್ಧ ಕಾರ್ಯೇ] = ಫಲವನ್ನು ಕೊಡಲು ಆರಂಭವಾಗದ [ಪೂರ್ವೇ ಏವ] = ಮುಂಚಿನ ಕರ್ಮಗಳೇ (ನಶಿಸುತ್ತವೆ)

**ವಿವರಣೆ**

ಉಪಾಸಕನಿಗೆ ಪುಣ್ಯಪಾಪಗಳು ನಶಿಸುವುವೆನ್ನಲಾಯಿತು. ಅವುಗಳಲ್ಲಿ ಕೆಲವು ನಶಿಸಿ ಕೆಲವು ಇರುವುವೆ? ಅಥವಾ ಎಲ್ಲವೂ ನಶಿಸುವುವೆ?—ಎಂದಲ್ಲಿ, "ಸರ್ವೇ

ಪಾಪ್ಮಾನಃ ಪ್ರದೂಯನ್ತೇ''—(ಎಲ್ಲಾ ಕರ್ಮಗಳೂ ನಶಿಸುವುವು) ಎನ್ನುವುದರಿಂದ ಒಂದೂ ನಿಲ್ಲುವುದಿಲ್ಲವೆಂದು ಪೂರ್ವಪಕ್ಷ.

ಉಪಾಸನ ಪೂರ್ತಿಯಾಗುವವರಿಗೂ ಶರೀರವಿರಬೇಕಾದ್ದರಿಂದ, ಆ ಶರೀರದ ಸ್ಥಿತಿಗೆ ಕರ್ಮವಲ್ಲದೆ ಮತ್ತೆ ಯಾವ ಹೇತುವೂ ಇಲ್ಲವಾದ್ದರಿಂದಲೂ, ''ತಸ್ಯ ತಾವ ದೇವ ಚಿರಂ ಯಾವನ್ನ ವಿಮೋಕ್ಷ್ಯೇ''—ಎಂದು ಶರೀರಾವಸಾನ ಪರ್ಯಂತ ಕರ್ಮ ವಿರುವುದಾಗಿ ಹೇಳಿರುವುದರಿಂದಲೂ, ಉಪಾಸನಕ್ಕೆ ಮುಂಚೆ ಮಾಡಿದ ಸಂಚಿತ ಕರ್ಮಗಳೇ ನಶಿಸುವುವು. ಪ್ರಾರಬ್ಧ ನಶಿಸದು—ಎಂದ ಸಿದ್ಧಾನ್ತ. ಪ್ರಾರಬ್ಧವೆಂದರೆ,—ಮಾಡಿದ ಕರ್ಮಗಳಲ್ಲಿ ಯಾವುದು ತನ್ನ ಫಲವನ್ನು ಅನುಭವಗೊಳಿಸಲು ಆರಂಭಿಸಿ ಬಿಟ್ಟಿದೆಯೋ ಅದು. ಮಿಕ್ಕಿದ್ದು ಸಂಚಿತ.

## 10. ಅಗ್ನಿಹೋತ್ರಾದ್ಯಧಿಕರಣ

### ಸೂತ್ರ—**ಅಗ್ನಿಹೋತ್ರಾದಿತು ತತ್ಕಾರ್ಯಾಯೈವ ತದ್ದರ್ಶನಾತ್**

### ಸಂಗತಿ

''ಇತರಸ್ಯಾಪ್ಯಸಂಶ್ಲೇಷಃ ಪಾತೇತು''—ಎಂದು ವಿದ್ಯಾ ಬಲದಿಂದ ಸುಕೃತವೂ ಅಂಟುವುದಿಲ್ಲವೆಂಪರು. ಈಗ ಅಗ್ನಿಹೋತ್ರಾದಿ ನಿತ್ಯ ನೈಮಿತ್ತಿಕಗಳು ಆಶ್ರಮ ಧರ್ಮ ಗಳಾದಾಗ್ಯೂ ಅವೂ ಸುಕೃತಗಳೇ ಆದ್ದರಿಂದ, ಆ ಫಲವೂ ಅಂಟದಿರುವುದರಿಂದ, ಇಷ್ಟವಿಲ್ಲದವನು ಅದನ್ನು ಮಾಡದೆಯೂ ಇರಬಹುದೇ— ಎಂಬ ಶಂಕೆಯಿಂದ ಸಂಗತಿ.

### ಸೂತ್ರಾರ್ಥ

[ತದ್ದರ್ಶನಾತ್] = ವಿದ್ಯಾಂಗವಾಗಿ ಕಾಣುವುದರಿಂದ, [ ಅಗ್ನಿ ಹೋತ್ರಾದಿ, ತು] =ಅಗ್ನಿಹೋತ್ರ ಮುಂತಾದ ಕರ್ಮ [ತತ್ಕಾರ್ಯಾಯ, ಏವ] = ಉಪಾಸನ ರೂಪ ಕಾರ್ಯಕ್ಕಾಗಿಯೇ [ಆಗಿದೆ].

### ವಿವರಣೆ

ಪಾಪದಂತೆ ಪುಣ್ಯವೂ ನಶಿಸುವುದರಿಂದ, ಅಗ್ನಿಹೋತ್ರಾದಿ ಕರ್ಮಗಳನ್ನು ಮಾಡಬೇಡವಲ್ಲವೆ? ಎಂದಲ್ಲಿ,, ''ಯಜ್ಞೇನ ದಾನೇನ'', ''ವಿವಿದಿಷನ್ತಿ''—ಎಂಬಂತೆ, ಯಜ್ಞಾದಿಗಳನ್ನು ಅಂಗವಾಗಿ ಹೊಂದಿಯೇ ಉಪಾಸನವನ್ನು ಮಾಡಬೇಕೆಂದು ಹೇಳುವುದರಿಂದ, ಅಗ್ನಿಹೋತ್ರಾದಿ ಕರ್ಮಗಳನ್ನು ಮಾಡಿದರೆ, ಮನಸ್ಸು ನಿರ್ಮಲ ವಾಗಿ ಉಪಾಸನ ಮೇಲ್ಮೇಲೆ ನಡೆಯುವುದು. ಇಲ್ಲದಿದ್ದಲ್ಲಿ, ಪಾಪದಿಂದ ಮನಸ್ಸು ಕಲಗಿ ಉಪಾಸನ ನೆರವೇರದಾದ್ದರಿಂದಲೂ, ಆ ಉಪಾಸನವನ್ನು ಯಾವಜ್ಜೀವ ಮಾಡ ಬೇಕಾಗಿರುವುದರಿಂದಲೂ, ಅವನ್ನು ಮಾಡಿಯೇ ತೀರಬೇಕೆನ್ನುತ್ತಾರೆ.

### ಸೂತ್ರ ೨—**ಅತೋऽನ್ಯಾಪಿ ಹ್ಯೇಕೇಷಾಮುಭಯೋಃ**

### ಸೂತ್ರಾರ್ಥ

[ಉಭಯೋಃ] = ಪೂರ್ವೋತ್ತರ ಕರ್ಮಗಳೆರಡರಲ್ಲಿಯೂ [ಅತಃ] = ಉಪಾ ಸನಕ್ಕೆ ಸಹಕಾರಿಯಾದ ಕರ್ಮಕ್ಕಿಂತ [ಅನ್ಯಾ ಅಪಿ] = ಬೇರೆ ಕರ್ಮವೂ (ಉಂಟಾದ್ದ ರಿಂದ, ಅದಕ್ಕಾಗಿಯೂ) [ಏಕೇಷಾಂ] = ಕೆಲವರ (ವಚನಗಳು ಕಾಣುತ್ತವೆ).

**ವಿವರಣೆ**

ಅಗ್ನಿಹೋತ್ರಾದಿ ಸತ್ಕರ್ಮಗಳಲ್ಲಿ ಕೆಲವು ವಿದ್ಯಾಸಾಧನಗಳು, ಕೆಲವು ಅನುಭವ ವಿನಾಶ್ಯಗಳು, ಅದಲ್ಲಿ, "ತಸ್ಯ ಪುತ್ರಾದಾಯಮುಪಯನ್ತಿ ಸುಹೃದಸ್ಸಾಧುಕೃತ್ಯಾಂ ದ್ವಿಷನ್ತಃ ಪಾಪಕೃತ್ಯಾಂ"—(ಉಪಾಸಕನ ಧನವನ್ನು ಪುತ್ರರೂ, ಪುಣ್ಯವನ್ನು ಸುಹೃತ್ತುಗಳೂ, ಪಾಪವನ್ನು ಶತ್ರುಗಳೂ ಹೊಂದುತ್ತಾರೆ) ಎಂದು ಯಾವುದನ್ನು ಉದ್ದೇಶಿಸಿ ಹೇಳಿದೆ?—ಎಂದಲ್ಲಿ, ವಿದ್ಯೆಗೆ ಅನುಪಯೋಗಿಯಾಗಿ ವಿದ್ಯಾಧಿಗಮಕ್ಕೆ ಪೂರ್ವೋತ್ತರಗಳಾಗಿ ಮುಂಚೆ ಹೇಳಿದ ಕರ್ಮಗಳಲ್ಲಿ ಯಾವವು ಫಲಪ್ರದಾನಕ್ಕೆ ಆರಂಭವಾಗದೆ ಪ್ರಬಲ ಪ್ರತಿಬಂಧಕದಿಂದ ಪ್ರತಿಬದ್ಧ ಫಲಗಳಾಗಿವೆಯೋ, ಅವನ್ನು "ಸುಹೃದಸ್ಸಾಧುಕೃತ್ಯಾಂ ,—ಇತ್ಯಾದಿ ವಾಕ್ಯ ಹೇಳುತ್ತದೆಯೆನ್ನುತ್ತಾರೆ.

ಸೂತ್ರ ೩—**ಯದೇವ ವಿದ್ಯಯೇತಿ ಹಿ**

**ಸೂತ್ರಾರ್ಥ**

[ಯತ್, ಏವ] = ಯಾವ ಕರ್ಮವೇ [ವಿದ್ಯಯಾ] = "ಯದೇವ ವಿದ್ಯಯಾ ಕರೋತಿ—"ಎಂದು ವಿದ್ಯೆಯಿಂದ ಕೂಡಿದುದಾಗಿ (ಮಾಡಲ್ಪಡುವುದೋ ಅದೇ ಶೀಘ್ರದಲ್ಲಿ ಫಲವನ್ನು ಕೊಡುವುದು) [ಇತಿ ಹಿ] = ಎಂದಲ್ಲವೇ ಹೇಳಲ್ಪಟ್ಟಿದೆ: ಇದರಿಂದ ಕೆಲವು ಕರ್ಮಗಳು ಪ್ರತಿಬಂಧಕದಿಂದ ಆಗಲೇ ಫಲವನ್ನು ಕೊಡದೆ ಕೆಲವು ಕಾಲ ಕಳೆದು ಆ ಪ್ರತಿಬಂಧಕ ಹೋದ ಮೇಲೆ ಫಲವನ್ನು ಕೊಡುವುವೆಂದು ತೋರುವುದರಿಂದ ಆ ಸಂಚಿತ ಕರ್ಮಗಳೇ ಸುಹೃತ್ತುಗಳನ್ನು ಹೊಂದುವುದೆಂದು ಹೇಳಲ್ಪಟ್ಟಿವೆ.

## 11. ಇತರ ಕ್ಷಪಣಾಧಿಕರಣ

ಸೂತ್ರ—**ಭೋಗೇನ ತ್ವಿತರೇಕ್ಷಪಯಿತ್ವಾಥ ಸಂಪದ್ಯತೇ**

**ಸಂಗತಿ**

ಯಾವ ಪುಣ್ಯಪಾಪಗಳಿಗೆ ಅಶ್ಲೇಷ—ವಿನಾಶಗಳು ಹೇಳಲ್ಪಟ್ಟಿವೆಯೋ?—ಅವುಗಳಿಗಿಂತ ಬೇರೆಯಾಗಿಯೂ, ಫಲಕೊಡಲು ಆರಬ್ಧವೂ ಆದ ಪುಣ್ಯಪಾಪಗಳು ಯಾವ ಶರೀರದಲ್ಲಿರುವಾಗಲೇ ಉಪಾಸನವನ್ನು ಮಾಡುತ್ತಾನೆಯೋ— ಆ ಶರೀರ ನಶಿಸುವಾಗಲೇ ನಶಿಸುವುವೊ? ಅಥವಾ ಇನ್ನೂ ಕೆಲವು ಜನ್ಮಗಳು ಕಳೆದ ಮೇಲೆ ನಶಿಸುವುವೋ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಇತರೇ] = ಬೇರೆಯಾದ, [ಪ್ರಾರಬ್ಧವಾದ) ಪುಣ್ಯಪಾಪಗಳನ್ನು [ಭೋಗೇನ] = ಅನುಭವಿಸುವುದರಿಂದ, [ಕ್ಷಪಯಿತ್ವಾ] = ನಾಶಗೊಳಿಸಿ [ಅಥ] = ಅನಂತರ, [ಸಂಪದ್ಯತೇ] = (ಬ್ರಹ್ಮವನ್ನು ಸೇರುತ್ತಾನೆ.)

**ವಿವರಣೆ**

ಪ್ರಾರಬ್ಧ ಕರ್ಮ ಎಷ್ಟು ಫಲವನ್ನು ಕೊಡುವುದೋ, ಅಷ್ಟು ಫಲವನ್ನೂ ಅನುಭವಿಸಿಯಾದ ಮೇಲೆಯೇ ಆ ಕರ್ಮಗಳು ನಶಿಸುವುವು. ಅದು ಈ ಜನ್ಮದಲ್ಲಿ ಮುಗಿದರೂ ಮುಗಿಯಬಹುದು. ಕೆಲವು ಜನ್ಮಗಳು ಕಳೆದ ಮೆಲೆ ಮುಗಿದರೂ ಮುಗಿಯ

ಬಹುದು. "ತಸ್ಯ ತಾವದೇವ ಚಿರಂ"—ಎಂಬ ವಾಕ್ಯವೂ ಪ್ರಾರಬ್ಧ ಕರ್ಮ ನಶಿಸು ವವರಿಗೂ ಸಂಸಾರದಲ್ಲಿದ್ದು, ತರುವಾಯ ಮೋಕ್ಷವನ್ನು ಹೊಂದುವನೆಂದೇ ಹೇಳುತ್ತದೆ —ಎನ್ನುತ್ತಾರೆ.

ಹೀಗೆ ಬ್ರಹ್ಮವಿದ್ಯೆಗೆ ಪೂರ್ವದಲ್ಲಿ ಅನುಷ್ಠಿತವಾಗಿದ್ದು, ಅಭುಕ್ತವೂ ಅನಾರ ಬ್ಧಫಲವೂ ಅನಾದಿ ಕಾಲದಿಂದ ಸಂಚಿತವೂ ಅನಂತವೂ ಆದ ಪುಣ್ಯ-ಪಾಪ ಕರ್ಮಗಳು ವಿದ್ಯಾ ಮಾಹಾತ್ಮ್ಯದಿಂದ ನಶಿಸುವುವು. ವಿದ್ಯಾರಂಭವಾದ ನಂತರ ಅನುಷ್ಠಿತವಾದುವು ಅಂಟುವುದಿಲ್ಲ. ಇವುಗಳಲ್ಲಿ ಪುಣ್ಯರೂಪವಾದುದೆಲ್ಲವೂ ಉಪಾಸಕನ ಸುಹೃತ್ತುಗಳಿಗೂ, ಪಾಪಗಳೆಲ್ಲವೂ ಅವನ ದ್ವೇಷಿಗಳಿಗೂ ಹೋಗುತ್ತವೆ—ಯೆಂಬುದು ನಿರವದ್ಯ.

## ಪಾದ ೨

## ಉತ್ಕ್ರಾನ್ತಿ ಪಾದ

### ಸಂಗತಿ

[ಪ್ರಥಮಾಧ್ಯಾಯದಲ್ಲಿ ಪರತತ್ತ್ವ ಪ್ರತಿಪಾದನ ಮಾಡಲ್ಪಟ್ಟಿತು. ದ್ವಿತೀಯಾ ಧ್ಯಾಯದಲ್ಲಿ ನಿತ್ಯತ್ವ—ಜ್ಞಾತೃತ್ವ—ಪ್ರಮುಖ ಗುಣಗಳಿಂದ ಕೂಡಿದ ಜೀವಾತ್ಮನ ತತ್ತ್ವ ನಿಪುಣವಾಗಿ ಹೇಳಲ್ಪಟ್ಟಿತು. ತೃತೀಯಾಧ್ಯಾಯದ ವೈರಾಗ್ಯ ಪಾದ (೧ನೇಪಾದ) ದಲ್ಲಿ ಜಗದಟವಿಯಲ್ಲಿ ಮಹಾಜಾಂಘಿಕನಾದ ಜೀವಾತ್ಮನ ದುಃಖವೂ ಪ್ರೋಕ್ತವಾ ಯಿತು. ಮಿಕ್ಕ ಶಾಸ್ತ್ರಾಂಶದಲ್ಲಿ ವಿದ್ಯಾರಂಭವನ್ನು ಉಪಕ್ರಮಿಸಿ—ವಿದ್ಯಾವಸಾನ ದವರಿಗೆ ನಡುವೆ ಹೇಳಬೇಕಾದುದೆಲ್ಲವನ್ನೂ ಹೇಳಿದರು. ಅನಂತರ, ಪ್ರಾರಬ್ಧಾವ ಸಾನದಲ್ಲಿ ಸ್ಥೂಲ ಶರೀರವನ್ನು ಬಿಡುವ ಜೀವನ ಗತ್ಯುಪಕ್ರಾಂತಿ ಪ್ರಕಾರವನ್ನು ಈ ಉತ್ಕ್ರಾನ್ತಿ ಪಾದದಲ್ಲಿ ಹೇಳುತ್ತಾರೆ. [ಜಾಂಘಿಕ = ಓಡಿ ನಡೆಯುವವನು]

ಇದರ ಮೇಲೆ ಆಕ್ಷೇಪ—ಜಾಗ್ರತ್ಸ್ವಪ್ನ—ಸುಷುಪ್ತಿ—ಮೂರ್ಛಾ ಪ್ರಸಂಗದಿಂದ ವೈರಾಗ್ಯ ಪಾದದಲ್ಲಿಯೇ ಮರಣ ವಿಚಾರವನ್ನೂ ಚಿಂತಿಸಬೇಕಾಗಿದ್ದಿತು. ಆ ಸ್ಥಾನದಲ್ಲಿ ಈಗ ಅದನ್ನು ಚಿಂತಿಸುವುದೇಕೆ?—ಎಂದು.

### ಸಮಾಧಾನ

ಬ್ರಹ್ಮೋಪಾಸಕನು ಮಹಾನುಭಾವನಾದ್ದರಿಂದ ಅವನಿಗೆ ಮರಣವೇ ಇಲ್ಲವೆಂದು ಕೆಲವು ಬಾಲಬುದ್ಧಿಗಳು ತಿಳಿದಿದ್ದಾರೆ. ಅದನ್ನು ನಿವಾರಿಸಿ, ಬ್ರಹ್ಮೋಪಾಸಕನಿಗೂ ಮರಣವುಂಟೆಂದು ಜ್ಞಾಪಿಸುವುದಕ್ಕಾಗಿ ಫಲಾಧ್ಯಾಯದಲ್ಲಿ ಅದು ಅನುಬದ್ಧವಾಗಿರು ವುದು ಅದಕ್ಕೆ ಸುಸ್ಥಾನವೇ ಆಗಿದೆ. ಅಲ್ಲದೆ ಬ್ರಹ್ಮೋಪಾಸಕನಿಗೆ ಅಸಾಧಾರಣವಾದ ಮೂರ್ಧನ್ಯ ನಾಡಿಯಿಂದ ಗಮನ ವಿಶೇಷವಿರುವುದನ್ನು ಹೇಳಲು, ಸರ್ವ ಸಾಧಾರಣ ವಾದ ಉತ್ಕ್ರಮಣವನ್ನು ಇಲ್ಲಿ ಹೇಳಲಾಗಿದೆ. ಮತ್ತು, ವಿದ್ಯಾ ಫಲಗಳ ನಡುವೆ ದುಃಖಾತ್ಮಕವಾದ ಮರಣದ ಪ್ರಸಕ್ತಿಯೇ ಕೂಡದು—ಎಂದು ಶಂಕಿಸುವ ಕೆಲವರಿಗೆ, ಬ್ರಹ್ಮೋಪಾಸನದ ಫಲವಾದ ಉತ್ತರ ಪೂರ್ವಾಘಾಶ್ಲೇಷ ವಿನಾಶ—

ಅರ್ಚಿರಾದಿಗಮನ— ಬ್ರಹ್ಮಪ್ರಾಪ್ತಿಗಳ ನಡುವೆ ಬ್ರಹ್ಮವಿತ್ತಿನ ಮರಣವನ್ನೂ ಫಲಕೋಟಿಯಲ್ಲಿ ಸೇರಿಸಿರುವುದು. ಮರಣ ಉಪಾಸಕನಿಗೆ ಸುಖಾತ್ಮಕವೇ ಹೊರತು ದುಃಖಾತ್ಮಕವಲ್ಲ—ಎಂದು ತಿಳಿಸುವುದಕ್ಕಾಗಿ.

ಮತ್ತೆಯೂ, ಬ್ರಹ್ಮ ವಿದ್ಯಾಮಾಹಾತ್ಮ್ಯದಿಂದ, ಹೇಗೆ ಉತ್ಕ್ರಮಿಸಿದರೂ ನಾಡೀ ವಿಶೇಷ ಪ್ರಾಪ್ತಿ—ಅರ್ಚಿರಾದಿ—ಮಾರ್ಗದಿಂದ ಗಮನಗಳು ಆಗಿಯೇ ಅಗುವುವು. ಉತ್ಕ್ರಮಣ ನಿಯಮದಿಂದಾಗಲಿ, ಅದನ್ನು ಚಿಂತಿಸಿಯಾಗಲಿ, ಇಲ್ಲಿ ಆಗಬೇಕಾದ್ದೇನು?—ಎಂದಲ್ಲಿ, ಶ್ರುತ್ಯುಕ್ತಕ್ರಮ ವ್ಯತಿರಿಕ್ತವಾಗಿಯೂ ಸಂಪತ್ತ್ಯಾದಿಗಳನ್ನು ಕೆಲವು ಪೂರ್ವಪಕ್ಷಿಗಳು ಹೇಳುತ್ತಾರೆ. "ಮನಸಿ ಕರಣಗ್ರಾಮಂ..."ಇತ್ಯಾದಿ ನಿಯಮದಿಂದಲೇ ಸಂಪತ್ತಿಯೆಂಬುದನ್ನು ಸಿದ್ಧಾಂತಿಸುವುದಕ್ಕಾಗಿ ಇಲ್ಲಿ ಅದು ಸಂಗತವಾಗಿದೆ. ಮತ್ತೆಯೂ. ಉತ್ಕ್ರಾನ್ತಿ ಹೇಗಾದರೇನು? ಅದನ್ನು ತಾನೇಕೆ ಚಿಂತಿಸಬೇಕು?—ಎಂದಲ್ಲಿ ಫಲ ವಿಶೇಷ ಸಿದ್ಧಿಗಾಗಿ, ಅದನ್ನು ಚಿಂತಿಸಬೇಕೆನ್ನುವುದಕ್ಕೆ—"ನೈತೇ ಸೃತೀ ಪಾರ್ಥ ಜಾನನ್‌ಯೋಗೀ ಮುಹ್ಯತಿ ಕಶ್ಚನ"—ಇತ್ಯಾದಿಯಾಗಿ ಭಗವಂತನಿಂದ ಹೇಳಲ್ಪಟ್ಟಿರುವುದೇ ಪ್ರಮಾಣ. ಇದರಲ್ಲಿ ಅವನು ಹೇಳಿರುವ ಗತಿ ಚಿಂತನ ಉತ್ಕ್ರಾಂತಿ ಚಿಂತನಕ್ಕೂ ಉಪಲಕ್ಷಣ. ಈ ಉತ್ಕ್ರಾನ್ತಿ ಚಿಂತನವು ವಿದ್ಯಾ ನಿಷ್ಪತ್ತ್ಯಾದಿಗಳಿಗೂ ಉಪಕರಿಸುತ್ತದೆಯೆಂದು " ತಸ್ಮಾತ್ತಚ್ಚಿನ್ತನಂ ಕ್ವಾಪ್ಯುಪಕುರುತ ಇತಿಸ್ಥಾಪ್ಯ ಮೇತದ್ಯಥಾರ್ಹಂ"—ಎಂದು ಶ್ರೀಮದಾಚಾರ್ಯರು ಶ್ರೀ ಅಧಿಕರಣಸಾರಾವಳಿಯಲ್ಲಿ ಅಪ್ಪಣೆ ಕೊಡಿಸಿದ್ದಾರೆ.

ಅಲ್ಲದೆ, ಈ ಉತ್ಕ್ರಮಣಾದಿ ವಚನಕ್ಕೆ ಮೃಷಾವಾದಿ ಪ್ರಭೃತಿಗಳ ನಿರಾಕರಣವೂ ಪ್ರಯೋಜನವೆಂದು ಶ್ರೀಮದಾಚಾರ್ಯರ ಅಭಿಪ್ರಾಯ;—ಜೀವ ನಿತ್ಯಮುಕ್ತನೆಂದು ಸಾಂಖ್ಯರೂ ಮೃಷಾವಾದಿಗಳೂ ಹೇಳುತ್ತಾರೆ. ಮೃಷಾವಾದಿಗಳು ಜೀವನ್ಮುಕ್ತಿಯನ್ನೂ ಹೇಳುತ್ತಾರೆ;— ತತ್ತ್ವಜ್ಞಾನ ಸಂಪನ್ನವಾದಲ್ಲಿ ಜೀವಿಸಿರುವಾಗಲೇ ಮುಕ್ತಿಯೆನ್ನುತ್ತಾರೆ. ಇವರ ಜಲ್ಪಗಳಿಂದ ಪ್ರಚಲಿತವಾದ ವೇದಗಳ ಸಂಕ್ಷೋಭದ ಶಾಂತಿಗಾಗಿ—ಬ್ರಹ್ಮೋಪಾಸಕನಿಗೂ ಪ್ರಾರಬ್ಧ ಕರ್ಮ ಫಲ ತಪ್ಪಿದ್ದಲ್ಲ. ಅವನ ಉತ್ಕ್ರಮಣಾದಿಕವೂ ಇತರರಂತೆಯೇ. ಮೂರ್ಧನ್ಯನಾಡೀ ವಿಶೇಷ ಮುಂತಾದುದು ಮಾತ್ರ ಅವನಿಗೆ ಅಧಿಕ—ಎಂಬಿವೇ ಮುಂತಾದುದನ್ನು ಸೂತ್ರಕಾರರೇ ಇಲ್ಲಿ ಹೇಳಿದ್ದಾರೆ.

ಉಪಾಸಕನಿಗೆ ಮುಂದಿನ ಚಿಂತೆ ಕರ್ತವ್ಯವೆಂದಲ್ಲಿ ಪುತ್ರಾದಿಗಳಲ್ಲಿ ಭಾವಿಯಾದ ನಿಧ್ಯುಮನಾದಿಕವನ್ನೂ ಅವನು ಚಿಂತಿಸಬೇಕಲ್ಲವೆ?—ಎಂದಲ್ಲಿ, ಎಷ್ಟು ಮಾತ್ರ ಅವನು ಚಿಂತಿಸಬೇಕೆಂದು ಭಗವದ್ಗೀತಾದಿಗಳಲ್ಲಿ "ಕವಿಂ ಪುರಾಣಂ..."—ಇತ್ಯಾದಿ ಶ್ಲೋಕಗಳಿಂದ ಐಶ್ವರ್ಯಾರ್ಥಿಪ್ರಭೃತ್ಯುಪಾಸಕರಿಗೆ ವ್ಯವಸ್ಥಿತವಾಗಿದೆಯೋ ಅಷ್ಟು ಮಾತ್ರ ಚಿಂತನೀಯವೇ ಹೊರತು ಪುತ್ರ ಕಳತ್ರ ಬಂಧ್ವಾದಿ ವಿಷಯಗಳ ಬಗ್ಗೆ ಚಿಂತಿಸಬೇಕೆನ್ನುವುದಕ್ಕೆ ಪ್ರಮಾಣವಿಲ್ಲ. ಉಪಕ್ರಾಂತವಾದ ಯೋಗವನ್ನು ಅವಿಚ್ಛಿನ್ನವಾಗಿ ಅನುಸಂಧಾನ ಮಾಡುವುದು ಮಾತ್ರ ಇಲ್ಲಿ ಭಾವ್ಯ.]

## 1. ವಾಗಧಿಕರಣ

### ಸೂತ್ರ—ವಾಙ್ಮನಸಿ ದರ್ಶನಾಚ್ಛಬ್ದಾಚ್ಚ

**ಸಂಗತಿ**

ಸ್ಥೂಲ ಶರೀರವಿರುವಾಗ ಯಾವದೊಂದು ವಿದ್ಯಾ ಫಲವುಂಟೋ ಅದನ್ನು ಹೇಳಿಯಾಯಿತು. ಆ ಶರೀರ ವಿನಾಶ ಹೊಂದುವಾಗ ಗತ್ಯುಪಕ್ರಮದಲ್ಲಿಯ ಫಲ ಇಲ್ಲಿ ಚಿಂತಿಸಲ್ಪಡುತ್ತೆಯೆಂಬುದು ಪಾದ ಸಂಗತಿ. ಇಲ್ಲಿ ಉತ್ಕ್ರಾಂತ್ಯುಪಕ್ರಮವನ್ನು ಹೇಳುವುದರಿಂದ ಪ್ರಥಮಾಧಿಕರಣದ ಸಂಗತಿ.

**ಸೂತ್ರಾರ್ಥ**

[ದರ್ಶನಾತ್] = ಪ್ರತ್ಯಕ್ಷವಾಗಿ ಕಾಣುವುದರಿಂದಲೂ, [ಶಬ್ದಾತ್ ಚ] = (ವೇದ) ಶಬ್ದದಿಂದಲೂ [ವಾಕ್] = ವಾಗಿಂದ್ರಿಯವು [ಮನಸಿ] = ಮನಸ್ಸಿನಲ್ಲಿ (ಸೇರುತ್ತದೆ)

[ಇಲ್ಲಿ [ವಾಕ್]—ಎಂಬ ಪದಕ್ಕೆ ವಾಗಿಂದ್ರಿಯದ ವ್ಯಾಪಾರ—ಎಂಬುದು ಶಂಕರ ಭಾಷ್ಯದಲ್ಲಿಯ ಅರ್ಥ.]

**ವಿವರಣೆ**

ಉಪಾಸಕನ ಅರ್ಚಿರಾದಿ ಗತಿಯನ್ನು ಹೇಳುವ ಅಭಿಪ್ರಾಯದಿಂದ ಮೊದಲು ಉತ್ಕ್ರಾಂತಿ ಪ್ರಕಾರವನ್ನು ಇದರಲ್ಲಿ ವಿಚಾರ ಮಾಡುತ್ತಾರೆ. "ವಾಕ್ ಮನಸಿ ಸಂಪದ್ಯತೇ"—ಎಂಬಲ್ಲಿ ಪುರುಷನು ಸಾಯುವಾಗ ಮೊದಲು ವಾಕ್ಕು ಮನಸ್ಸಿನಲ್ಲಿ ಲಯಿಸುವುದೆಂದು ಹೇಳಿದೆ. ಅದಕ್ಕೆ ವಾಗಿಂದ್ರಿಯವೇ ಲಯಿಸುವುದೆಂದರ್ಥವೊ? ಅದರ ವ್ಯಾಪಾರ ಲಯಿಸುವುದೆಂದರ್ಥವೊ?—ಎಂದಲ್ಲಿ, ವಸ್ತುಗಳಿಗೆ ಲಯ ತನ್ನ ಉಪಾದಾನ ಕಾರಣದಲ್ಲಿಯಾದ್ದರಿಂದ ವಾಕ್ಕಿಗೆ ಮನಸ್ಸು ಉಪಾದಾನವಲ್ಲದ್ದರಿಂದ, ಅದರ ವ್ಯಾಪಾರವೇ ಲಯಿಸುವುದೆಂದು ಪೂರ್ವಪಕ್ಷ. ಲೋಕದಲ್ಲಿ ಸಾಯುವವನಿಗೆ ವಾಗಿಂದ್ರಿಯ ಹೋದ ಮೇಲೆ ಮನಸ್ಸಿರುವುದಾಗಿ ಕಾಣುವುದರಿಂದಲೂ, ಶ್ರುತಿಯಲ್ಲಿ ವಾಗಿಂದ್ರಿಯವನ್ನು ಹೇಳುವ 'ವಾಕ್'—ಎಂಬ ಪದಕ್ಕೆ ಅದರ ವ್ಯಾಪಾರವೆಂಬ ಪದಕ್ಕೂ ವಾಕ್ಕಿನ ವ್ಯಾಪಾರ ನಶಿಸಿದ ಮೇಲೆ ಆ ಇಂದ್ರಿಯ ಇದೆಯೆಂಬುದಕ್ಕೂ ಪ್ರಮಾಣ ಕಾಣದುದರಿಂದಲೂ, ಇಲ್ಲಿ ಹೇಳುವ ಲಯವೆಂಬುದು ಕಟಕವು ಚಿನ್ನದಲ್ಲಿ ಲಯಿಸುವಂತಲ್ಲ. ಒಬ್ಬನು ಮತ್ತೊಬ್ಬನೊಂದಿಗೆ ಸೇರುವ ಹಾಗೆ ವಾಕ್ಕು ಮನಸ್ಸಿನಲ್ಲಿ ಹೋಗಿ ಸೇರುವುದು—ಎಂದು ಅರ್ಥವಾದ್ದರಿಂದಲೂ, ವಾಗಿಂದ್ರಿಯವೇ ಮನಸ್ಸಿನಲ್ಲಿ ಲಯಿಸುವುದೆಂದು ಸಿದ್ಧಾಂತ.

### ಸೂತ್ರ 2—ಅತ ಏವ ಸರ್ವಾಣ್ಯನು

**ಸೂತ್ರಾರ್ಥ**

[ಅತಃ, ಏವ] = ಸಂಪದ್ಯತೇ—ಎಂಬ ಪದಕ್ಕೆ ಲಯಿಸುವುದೆಂಬ ಅರ್ಥವಿಲ್ಲದೆ (ಸಂಯೋಗ) ಅಂದರೆ ಸೇರಿರುವುದೆಂಬ ಅರ್ಥವಾದ್ದರಿಂದಲೇ, [ಸರ್ವಾಣಿ, ಅನು] =

(''ತಸ್ಮಾದುಪಶಾನ್ತ ತೇಜಾಃ ಅಪುನರ್ಭವಮಿಂದ್ರಿಯೈರ್ಮನಸಿ ಸಂಪದ್ಯಮಾನೈಃ''—ಎಂಬ ಶ್ರುತಿಯಲ್ಲಿ ಹೇಳುವ ಮನಸ್ಸಿನಲ್ಲಿ ಸಂಪನ್ನವಾದ ಸಕಲ ಇಂದ್ರಿಯಗಳೊಂದಿಗೆ—ಎಂಬ ಅರ್ಥವೂ, ಉಪಪನ್ನವಾಗುವುದು). ವಾಕ್ಕಿನಂತೆಯೇ ಮಿಕ್ಕ ಇಂದ್ರಿಯ ಗಳೂ ಮನಸ್ಸಿನಲ್ಲಿ ಹೋಗಿ ಸೇರುವುವೆಂದು ತಾತ್ಪರ್ಯ.

## 2. ಮನೋಽಧಿಕರಣ

### ಸೂತ್ರ—ತನ್ಮನಃ ಪ್ರಾಣ ಉತ್ತರಾತ್

**ಸಂಗತಿ**

ಪ್ರಾಣನಲ್ಲಿ ಮನಸ್ಸಿನ ಲಯವೋ? ಸಂಯೋಗವೋ?—ಎಂದು ವಿಚಾರ.

**ಸೂತ್ರಾರ್ಥ**

[ತತ್] = ಆ [ಮನಃ] = ಮನಸ್ಸು [ಉತ್ತರಾತ್] = ಮೇಲಿನ ವಾಕ್ಯದಿಂದ, [ಪ್ರಾಣೇ] = ಪ್ರಾಣನಲ್ಲಿ ಸಂಬದ್ಧವಾಗುವುದು.

**ವಿವರಣೆ**

''ಮನಃ ಪ್ರಾಣೇ''—ಎಂಬ ಮೇಲಿನ ವಾಕ್ಯದಲ್ಲಿ ಮನಸ್ಸಿಗೆ ಪ್ರಾಣನಲ್ಲಿ ಲಯವೆ? ಅಥವಾ, ಮುಂಚಿನ ಹಾಗೆ ಸಂಯೋಗವೇಯೋ?—ಎಂದಲ್ಲಿ, ಮುಂಚೆ ವಾಕ್ಕಿಗೆ ಮನಸ್ಸು ಪ್ರಕೃತಿಯಲ್ಲದ್ದರಿಂದ, ವಾಕ್ಕಿಗೆ ಮನಸ್ಸಿನಲ್ಲಿ ಲಯವನ್ನು ಹೇಳಲು ಸರಿ ಹೋಗಲಿಲ್ಲ. ''ಅನ್ನಮಯಂ ಹಿ ಸೋಮ್ಯ ಮನಃ''—ಎಂದು ಮನಸ್ಸನ್ನು ಅನ್ನ ವಿಕಾರವಾಗಿ ಹೇಳುವುದರಿಂದಲೂ, ''ತಾ ಅನ್ನಮಸೃಜನ್ತ''—ಎಂದು ನೀರು ಅನ್ನವನ್ನು ಪಡೆದುದಾಗಿ ಹೇಳುವುದರಿಂದಲೂ, ''ಮನೋಮಯಃ ಪ್ರಾಣಃ'',—ಎಂದು ಪ್ರಾಣನನ್ನು ಜಲದ ವಿಕಾರವಾಗಿ ಹೇಳುವುದರಿಂದಲೂ, ಮನಸ್ಸಿಗೂ ಪ್ರಾಣನಿಗೂ ಈ ವಿಧವಾದ ಸಂಬಂಧದ ಬಗ್ಗೆ ಮೊದಲಿನ ಹಾಗೆ ಅನುಪಪತ್ತಿಯಿಲ್ಲದ್ದರಿಂದ, ಪ್ರಾಣ ದಲ್ಲಿ ಮನಸ್ಸಿಗೆ ಲಯವನ್ನು ಹೇಳುವುದೇ ಉಚಿತವೆಂದು ಪೂರ್ವಪಕ್ಷ.

''ಅನ್ನಮಯಂ ಹಿ ಸೋಮ್ಯ ಮನಃ, ಆಪೋಮಯಃ ಪ್ರಾಣಃ''—ಇತ್ಯಾದಿ ಕಡೆಗಳಲ್ಲಿ ಮನಸ್ಸಿಗೆ ಅನ್ನವನ್ನೂ ಪ್ರಾಣನಿಗೆ ಜಲವನ್ನೂ ಉಪಾದಾನವಾಗಿ ಹೇಳಿಲ್ಲ. ಅನ್ನದಿಂದ ಮನಸ್ಸಿಗೆ, ಜಲದಿಂದ ಪ್ರಾಣಕ್ಕೆ ಸಹಕಾರದಿಂದ ಬಲವುಂಟಾಗುವುದು. ಅಂದರೆ, ಆಪ್ಯಾಯನವುಂಟಾಗುವುದು—ಎಂದೇ ಹೇಳಿದೆ,. ನಿಮ್ಮ ಪ್ರಕಾರವಾಗಿಯೂ, ಮನಸ್ಸಿಗೆ ಅನ್ನವೂ, ಅನ್ನಕ್ಕೆ ಜಲವೂ ಕಾರಣವಾದಾಗ್ಯೂ ಜಲಕ್ಕೆ ಪ್ರಾಣ ಕಾರಣ ವಲ್ಲದ್ದರಿಂದ, ''ಮನಃ ಪ್ರಾಣೇ'',—ಎಂಬಲ್ಲಿ ಪ್ರಾಣ ಪದಕ್ಕೆ ಪ್ರಾಣ ಕಾರಣವಾದ ಜಲವೆಂದರ್ಥವನ್ನು ಹೇಳಬೇಕು. ಆಗ್ಗೆ ಪ್ರಾಣಪದ ಲಾಕ್ಷಣಿಕವಾಗುವುದು. ಆದ್ದರಿಂದ ಆ ಯುಕ್ತಿ ಸರಿಯಲ್ಲ. ಮುಂಚಿನಂತೆಯೇ ಮನಸ್ಸು ಪ್ರಾಣನೊಂದಿಗೆ ಕೂಡುತ್ತದೆ—ಎನ್ನುವುದೇ ಸರಿಯೆಂದು ಸಿದ್ಧಾಂತ.

## 3. ಅಧ್ಯಕ್ಷಾಧಿಕರಣ

### ಸೂತ್ರ—ಸೋಽಧ್ಯಕ್ಷೇ ತದುಪಗಮಾದಿಭ್ಯಃ

**ಸಂಗತಿ**

ಪ್ರಾಣ ತೇಜಸ್ಸಿನಲ್ಲಿ ಸಂಪನ್ನವಾಗುತ್ತದೆಯೋ? ಅಥವಾ ಜೀವನಲ್ಲಿಯೋ?— ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ತದುಪಗಮಾದಿಭ್ಯಃ] = ಆ ಜೀವನ ಹತ್ತಿರದಲ್ಲಿ ಹೋಗುವುದು ಮುಂತಾದು ದರಿಂದ. [ಸಃ] = ಆ ಪ್ರಾಣ [ಅಧ್ಯಕ್ಷೇ] = ಜೀವನಲ್ಲಿ ಸೇರುವುದು.

**ವಿವರಣೆ**

"ಪ್ರಾಣಸ್ತೇಜಸಿ"—ಎಂಬ ಮೇಲಣ ವಾಕ್ಯಕ್ಕೆ ಪ್ರಾಣ ತೇಜಸ್ಸಿನಲ್ಲಿ ಸೇರುವುದೆಂದರ್ಥವೆ? ಅಥವಾ, ತೇಜಸ್ಸು ಮುಂತಾದ ಪಂಚಭೂತಗಳೊಂದಿಗೆ ಕೂಡಿದ ಜೀವನಲ್ಲಿ ಸೇರುವುದೆಂದರ್ಥವೇ?—ಎಂದಲ್ಲಿ, 'ತೇಜಸಿ',—ಎಂದು ತೇಜಸ್ಸಿನಲ್ಲಿ ಸೇರುವುದೆಂದು ಹೇಳುವುದರಿಂದ ಅದರಲ್ಲಿಯೇ ಸೇರುವುದೆಂದು ಪೂರ್ವಪಕ್ಷ.

"ಏವಮೇವೇಮಮಾತ್ಮಾನಮನ್ತ ಕಾಲೇ ಸರ್ವೇ ಪ್ರಾಣಾಃ ಅಭಿಸಮಾಯನ್ತಿ" —ಎಂದು, ಸಾಯುವಾಗ, ಪ್ರಾಣಗಳೆಲ್ಲವೂ ಜೀವನನ್ನು ಕುರಿತು ಅಭಿಮುಖವಾಗಿ ಬರುವುವೆನ್ನುವುದರಿಂದಲೂ, "ತಮುತ್ಕ್ರಾಮನ್ತಂ ಪ್ರಾಣೋಽನೂತ್ಕ್ರಾಮತಿ"— ಎಂದೂ, ಜೀವನು ಹೊರ ಹೊರಡುವಾಗ ಪ್ರಾಣನೂ ಜತೆಯಲ್ಲಿಯೇ ಹೊರಕ್ಕೆ ಹೊರಟು ಬರುವುದೆನ್ನುವುದರಿಂದಲೂ,"ಅಸ್ಮಿನ್ ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮಿ"— ಎಂದು ಜೀವನಿದ್ದರೆ ತಾನಿರುವುದಾಗಿಯೂ, ಹೀಗೆ ಸರ್ವ ಕಾಲಗಳಲ್ಲಿಯೂ ಜೀವನೊಂದಿಗೆ ಪ್ರಾಣನಿಗೆ ಸಂಬಂಧವನ್ನು ಹೇಳುವುದರಿಂದ, "ಪ್ರಾಣಃ ತೇಜಸಿ",—ಎಂಬ ವಾಕ್ಯದಲ್ಲಿಯೂ ಪ್ರಾಣನಿಗೆ ಜೀವನೊಂದಿಗೆ ಸೇರುವಿಕೆಯನ್ನೇ ಹೇಳಿದೆ. ಆದರೆ ತೇಜಸ್ಸಿನಲ್ಲಿ ಸೇರುವುದಾಗಿ ಹೇಳಿರುವುದೇಕೆ?—ಎಂದಲ್ಲಿ, ಯಮುನೆ ಗಂಗೆಯಲ್ಲಿ ಸೇರಿ ಅದರ ಮಾರ್ಗವಾಗಿ ಸಮುದ್ರದಲ್ಲಿ ಸೇರುವುದಾಗ್ಯೂ, ಯಮುನೆ ಸಮುದ್ರಕ್ಕೆ ಹೋಗಿ ಸೇರುತ್ತದೆ—ಎನ್ನುವಂತೆ, ಪ್ರಾಣನೂ ಮೊದಲು ಜೀವನೊಂದಿಗೆ ಸೇರಿ ಆನಂತರ ಅವನೊಂದಿಗೆ ತೇಜಸ್ಸಿನಲ್ಲಿ ಸೇರುವುದೆಂದು ಅರ್ಥವನ್ನು ಹೇಳಬೇಕೆಂದು ಸಿದ್ಧಾನ್ತ.

ಸೂತ್ರದಲ್ಲಿಯ ಉಪಗಮಾದಿಭ್ಯಃ—ಎಂಬಲ್ಲಿ 'ಆದಿ' ಶಬ್ದಕ್ಕೆ, ಉಪಗಮದೊಂದಿಗೆ ಉತ್ಕ್ರಾಂತಿ, ಪ್ರತಿಷ್ಠಾ—ಎಂಬ ಅರ್ಥಗಳೂ ವಿವಕ್ಷಿತ.

## ೪. ಭೂತಾಧಿಕರಣ

### ಸೂತ್ರ—ಭೂತೇಷು ತಚ್ಛ್ರುತೇಃ

**ಸಂಗತಿ**

ಇಲ್ಲಿ ಜೀವನಿಗೆ ಭೂತಾಂತರಗಳೊಡಗೂಡಿದ ತೇಜಸ್ಸಂಯೋಗವೇ, ಅಥವಾ ತೇಜೋ ಮಾತ್ರ ಸಂಯೋಗವೇ? ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ತಚ್ಛ್ರುತೇಃ] = ಜೀವ ಸರ್ವಭೂತಮಯನೆಂದು, "ಪೃಥ್ವೀಮಯ—ಆಪೋಮಯಸ್ತೇಜೋಮಯಃ" ಇತ್ಯಾದಿಯಿಂದ ಜೀವನನ್ನು ಪಂಚಭೂತಮಯನನ್ನಾಗಿ ಅಂದರೆ, ಪಂಚಭೂತಮಯವಾದ ಶರೀರಯುಕ್ತನಾಗಿ ಹೇಳುವುದರಿಂದ [ಭೂತೇಷು] = (ಪ್ರಾಣನೊಂದಿಗೆ ಕೂಡಿದ ಜೀವನು ತೇಜಸ್ಸೊಂದಿಗೆ ಕೂಡಿದ) ಐದು ಭೂತ ಸೂಕ್ಷ್ಮಗಳಲ್ಲಿ (ಸೇರುತ್ತಾನೆ—ಎಂದು, "ಪ್ರಾಣಸ್ತೇಜಸಿ,—ಎಂಬ ವಾಕ್ಯಕ್ಕೆ ತಾತ್ಪರ್ಯ.)

**ಸೂತ್ರ 2—ನೈಕಸ್ಮಿನ್ ದರ್ಶಯತೋ ಹಿ**

**ಸೂತ್ರಾರ್ಥ**

[ಏಕಸ್ಮಿನ್] = (ತೇಜಸ್ಸು ಮುಂತಾದ ಒಂದೊಂದು ತತ್ತ್ವವೂ ಒಂಟೊಂಟಿಯಾಗಿಯೇ ಇದ್ದು ಶರೀರಾದಿಗಳಾಗಿ ಪರಿಣಮಿಸಲು ಯೋಗ್ಯಗಳಲ್ಲದ್ದರಿಂದ, ಕಾರ್ಯಕರವಲ್ಲದ) ಒಂಟಿಯಾದ ತೇಜಸ್ಸಿನಲ್ಲಿ [ನ] = (ಜೀವ) ಸೇರುವುದಿಲ್ಲ. (ತನ್ನ ಶರೀರಕ್ಕೆ ಆರಂಭಗಳಾದ ಐದು ಭೂತಸೂಕ್ಷ್ಮಗಳೊಂದಿಗೇ ಸೇರುತ್ತಾನೆ.) [ದರ್ಶಯತಃ,ಹಿ] = ("ತಾಸಾಂತ್ರಿವೃತಂ ತ್ರಿವೃತಂ ಏಕೈಕಾಂಕರವಾಣಿ" ಅಂದರೆ, ಪೃಥಿವ್ಯಾದಿಗಳನ್ನು ಭಾಗ ಕ್ರಮದಲ್ಲಿ ಒಂದಾಗಿ ಸೇರಿಸಿ, ಅನಂತರ ಸೃಷ್ಟಿಸುತ್ತೇನೆ—ಎಂದು ಶ್ರುತಿಯೂ),

"ನಾನಾವೀರ್ಯಾಃ ಪೃಥಗ್ಭೂತಾಃ ತತಸ್ತೇ ಸಂಹತಿಂ ವಿನಾ ।
ನಾಶಕ್ನುವನ್ ಪ್ರಜಾಃಸ್ರಷ್ಟು ಮಸಮಾಗಮ್ಯ ಕೃತ್ಸ್ನಶಃ ॥—ಇತ್ಯಾದಿಯಿಂದ, ಪಂಚಭೂತಗಳೂ ಒಂಟೊಂಟಿಯಾಗಿಯೇ ಯಾವುದನ್ನೂ ಸೃಷ್ಟಿಸಲು ಸಾಮರ್ಥ್ಯವಿಲ್ಲದಿದ್ದು ಅನಂತರ ಒಂದರೊಂದಿಗೆ ಒಂದು ಸೇರಿ ಮಹದಾದಿಗಳನ್ನು ಸೃಷ್ಟಿಸಿದವೆಂದು ಸ್ಮೃತಿಯೂ, ಪಂಚಭೂತಗಳು ಒಂಟೊಂಟಿಯಾಗಿಯೇ ಕಾರ್ಯಯೋಗ್ಯಗಳಲ್ಲವೆಂಬುದನ್ನು ಪ್ರಕಾಶ ಪಡಿಸುತ್ತವೆಯಷ್ಟೆ! ಆದ್ದರಿಂದ ಭೂತಾಂತರ ಸಂಸೃಷ್ಟವಾದ ತೇಜಸ್ಸಿನಲ್ಲಿಯೇ ಸಂಪತ್ತಿ.

## 5. ಆಸೃತ್ಯಧಿಕರಣ

**ಸೂತ್ರ—ಸಮಾನಾಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ**

**ಸಂಗತಿ**

ಈ ಉತ್ಕ್ರಾನ್ತಿಯು ಉಪಾಸಕರು ಮತ್ತು ಉಪಾಸಕರಲ್ಲದವರು— ಈ ಎರಡು ಬಗೆಯವರಿಗೂ ಸಮಾನವೋ? ಅಥವಾ, ಉಪಾಸಕರಲ್ಲದವರಿಗೆ ಮಾತ್ರವೋ?—ಎಂಬ ಚಿಂತೆಯಿಂದ ಸಂಗತಿ.

**ಸೂತ್ರಾರ್ಥ**

[ಆಸೃತ್ಯುಪಕ್ರಮಾತ್] = ಅರ್ಚಿರಾದಿ ಗತಿಯಲ್ಲಿ ಹೋಗಲು ತೊಡಗುವುದಕ್ಕೆ ಮುಂಚೆ [ಸಮಾನಾ] = ಉಪಾಸಕನಿಗೂ ಅನುಪಾಸಕನಿಗೂ ಉತ್ಕ್ರಾನ್ತಿ ಸಮಾನವಾಗಿರುವುದು. [ಅನುಪೋಷ್ಯ] = (ಶರೀರ ಸಂಬಂಧವನ್ನು) ದಹಿಸದೆ [ಅಮೃತತ್ವಂ,ಚ] = (ಹೇಳಲ್ಪಟ್ಟ) ಮೋಕ್ಷವೆಂಬುದು (ಮುಖ್ಯವಲ್ಲ, ಗೌಣ)

### ಸೂತ್ರ ೩—**ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ**

**ಸೂತ್ರಾರ್ಥ**

[ಪ್ರಮಾಣತಃ,ಚ] = ಪ್ರಮಾಣದಿಂದಲೂ [ತಥಾ] = ಹಾಗೆ ಸೂಕ್ಷ್ಮ ಶರೀರ ವುಂಟೆಂದು [ಉಪಲಬ್ಧೇಃ] = ಕಾಣುವುದರಿಂದ, [ಸೂಕ್ಷ್ಮಂ] = ಸೂಕ್ಷ್ಮ ಶರೀರ (ಮೋಕ್ಷಕ್ಕೆ ಹೋಗುವವರಿಗೂ ಇರುವುದು.)

**ವಿವರಣೆ**

"ತಂ ಪ್ರತಿಬ್ರೂಯಾತ್ ಸತ್ಯಂ ಬ್ರೂಯಾತ್"—ಇತ್ಯಾದಿಗಳಿಂದ, ಉಪಾಸಕನು ಅರ್ಚಿರಾದಿ ಗತಿಯಲ್ಲಿ ಹೋಗುವಾಗ ಚಂದ್ರ ಮುಂತಾದವರೊಂದಿಗೆ ಮಾತಾಡುವ ಹಾಗೆ ಉಪನಿಷತ್ತಿನಲ್ಲಿ ಹೇಳುವುದರಿಂದ, ಅದು ಶರೀರವಿಲ್ಲದಿದ್ದಲ್ಲಿ ಸರಿಯಾಗು ವುದಿಲ್ಲವಾದ್ದರಿಂದ, ಸೂಕ್ಷ್ಮ ಶರೀರವುಂಟೆಂಬುದು ಸಿದ್ಧ. ಆದ್ದರಿಂದಲೂ ಬಂಧವು ದಗ್ಧವಾಗಿಲ್ಲ.

### ಸೂತ್ರ ೪—**ನೋಪಮರ್ದೇನಾತಃ**

**ಸೂತ್ರಾರ್ಥ**

[ಅತಃ] = ಮೇಲೆ ಹೇಳಿದ ಹೇತುಗಳಿಂದ [ಉಪಮರ್ದೇನ] = ಶರೀರ ನಾಶದಿಂದ, [ನ] = ಮೋಕ್ಷವನ್ನು ಹೇಳಿಲ್ಲ. ಆದ್ದರಿಂದ ಮೋಕ್ಷವನ್ನು ಅನುಭವಿಸು ತ್ತಾನೆಯೆಂಬುದಕ್ಕೆ ಪುಣ್ಯಪಾಪ ಸಂಬಂಧವನ್ನು ಛೇದಿಸುವುದೇ ಅರ್ಥ. ಇದರಿಂದ,

"ಯದಾ ಸರ್ವೇ ಪ್ರಮುಚ್ಯನ್ತೇ ಕಾಮಾಯೇಽಸ್ಯ ಹೃದಿಸ್ಥಿತಾಃ ।

ಅಥಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥"—ಎಂಬ ವಚನ ಬಂಧೋಪಮರ್ದ (ಶರೀರನಾಶ) ದಿಂದ ಮೋಕ್ಷವನ್ನು ಹೇಳುವುದಿಲ್ಲ.

ಜೀವನ್ಮುಕ್ತಿ ನಿರಾಕರಣೇಚ್ಛೆಯಿಂದ ಈ ಸೂತ್ರ ಹೇಳಲ್ಪಟ್ಟಿದೆ ಉಪಾಸನ ವನ್ನು ವಿಧಿಸಿರುವುದಕ್ಕೂ, ಆ ಉಪಾಸನ ಬದುಕಿರುವವರಿಗೂ ಅನುವರ್ತಿಸಬೇಕೆಂಬು ದಾಗಿ ಶ್ರುತಿ ಹೇಳುವುದಕ್ಕೂ ಉತ್ಕ್ರಾಂತಿ ಶ್ರುತಿಗೂ, ಅರ್ಚಿರಾದಿ ಮಾರ್ಗ ಶ್ರುತಿಗೂ, ದೇಶವಿಶೇಷಪ್ರಾಪ್ತಿಯಿಂದ ಸರ್ವಬಂಧ ವಿಮೋಕ್ಷ ಶ್ರುತಿಗೂ, ಇನ್ನೂ ಇಂತಹ ಅನೇಕ ಶ್ರುತಿಗಳಿಗೂ ಭಾಧೆ ಪ್ರಸಂಗಿಸುವುದರಿಂದಲೂ, ಪ್ರತ್ಯಕ್ಷ ವಿರೋಧದಿಂದಲೂ, ಜೀವನ್ಮುಕ್ತಿ ಅನುಪಪನ್ನವೆಂದು ಭಾವ.

"ವೇದಾನಿಮಂ ಲೋಕಮಮುಂಚ ಪರಿತ್ಯಜ್ಯ ಆತ್ಮಾನಮನ್ವಿಚ್ಛೇತ್ ಬುದ್ಧೇ ಕ್ಷೇಮ ಪ್ರಾಪಣಂ ತಚ್ಛಾಸ್ತ್ರೈರ್ವಿಪ್ರತಿಷಿದ್ಧಂ, ಬುದ್ಧೇಚೇತ್ ಕ್ಷೇಮ ಪ್ರಾಪಣಾಂ ಇಹೈವ ನ ದುಃಖಮುಪಲಭೇತ"—ಎಂದು ಭಗವದಾಪಸ್ತಂಬರೂ ಹೇಳಿದ್ದಾರೆ.

### ಸೂತ್ರ ೫—**ಅಸ್ಯೈವ ಚೋಪಪತ್ತೇರೂಷ್ಮಾ**

**ಸೂತ್ರಾರ್ಥ**

[ಅಸ್ಯ] = ಈ ಸೂಕ್ಷ್ಮ ಶರೀರಕ್ಕೆ [ಉಪಪತ್ತೇಃ, ಏವ] = ಸ್ಥೂಲ ಶರೀರದ ಏಕದೇಶದಲ್ಲಿ ಸ್ಥಿತಿ ಉಪಪನ್ನವಾಗುವುದರಿಂದ, [ಊಷ್ಮಾ] = ಉಷ್ಣ ತೋರುವುದು.

**ವಿವರಣೆ**

ಸ್ಥೂಲ ಶರೀರದ ಉಷ್ಣ ಎಲ್ಲೆಲ್ಲಿಯೂ ವ್ಯಾಪಿಸಿರುವುದು. ಸಾಯುವಾಗ ಒಂದು ಭಾಗದಲ್ಲಿಯೇ ಉಷ್ಣ ಕಂಡು ಬರುವುದು. ಆ ಉಷ್ಣವೂ ಸ್ಥೂಲ ದೇಹದ್ದಾದರೆ ಮತ್ತೊಂದೆಡೆಯಲ್ಲಿಯೂ ಕಾಣಬೇಕು. ಹಾಗೆ ಕಾಣದುದರಿಂದ ಅದು ಸ್ಥೂಲ. ದೇಹದ್ದಲ್ಲ, ಸೂಕ್ಷ್ಮ ದೇಹದ್ದು—ಎನ್ನಬೇಕು. ಇದರಿಂದ ಸಾಯುವಾಗ ಸೂಕ್ಷ್ಮ ಶರೀರವುಂಟೆಂದೂ, ಅದರೊಡನೆ ಜೀವ ಹೊರ ಹೊರಡುತ್ತಾನೆಯೆಂದೂ ಏರ್ಪಡು ವುದೆನ್ನುತ್ತಾರೆ.

ಸೂತ್ರ ೬—**ಪ್ರತಿಷೇಧಾದಿತಿ ಚೇನ್ನ ಶಾರೀರಾತ್ ಸ್ಪಷ್ಟೋಹ್ಯೇಕೇಷಾಂ**

**ಸೂತ್ರಾರ್ಥ**

[ಪ್ರತಿಷೇಧಾತ್] = (ಉಪಾಸಕನಿಗೆ) ಉತ್ಕ್ರಾಂತಿಯನ್ನು ನಿಷೇಧಿಸಿರುವುದರಿಂದ (ಉತ್ಕ್ರಮಣವಿಲ್ಲ) [ಇತಿ ಚೇತ್] = ಎಂದಲ್ಲಿ, [ಶಾರೀರಾತ್] = ಜೀವನಿಂದ (ಉತ್ಕ್ರಾಂತಿಯಿಲ್ಲವೆನ್ನುವುದರಿಂದ) [ನ] = ಉತ್ಕ್ರಾಂತಿಯಿಲ್ಲವೆಂಬುದಿಲ್ಲ. [ಏಕೇಷಾಂ] = ಒಂದು ಶಾಖೆಯವರ ಮಂತ್ರದಲ್ಲಿ [ಸ್ಪಷ್ಟಃ, ಹಿ] = (ಈ ಅರ್ಥ) ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

**ವಿವರಣೆ**

ಮತ್ತೆಯೂ ಉಪಾಸಕನಿಗೆ ಉತ್ಕ್ರಾಂತಿಯಿಲ್ಲವೆಂದು ಆಶಂಕಿಸಿ ಪರಿಹರಿಸುತ್ತಾರೆ; —"ಸ ಏತಾಸ್ತೇಜೋಮಾತ್ರಾಸ್ಸಮಭ್ಯಾದದಾನೋ ಹೃದಯ ಮೇವಾನ್ವಪಕ್ರಾಮತಿ" —ಎಂದು ಉಪಕ್ರಮಿಸಿ, ತೇನ ಪ್ರದ್ಯೋತೇನೈಷ ಆತ್ಮಾ ನಿಷ್ಕ್ರಾಮತಿ ತಮುತ್ಕ್ರಾಮನ್ತಂ ಪ್ರಾಣೋಽನೂತ್ಕ್ರಾಮತಿ"—ಎಂದು ಅನುಪಾಸಕನಿಗೆ ಉತ್ಕ್ರಾನ್ತಿ ಪ್ರಕಾರ ವನ್ನು ಹೇಳಿ, "ಅನ್ಯನ್ನವತರಂ ಕಲ್ಯಾಣ ತರಂ ರೂಪಂ ಕುರುತೇ"—ಎಂದು ದೇಹಾನ್ತರ ಪರಿಗ್ರಹವನ್ನು ಹೇಳಿ, "ಪ್ರಾಪ್ಯಾನ್ತಂ ಕರ್ಮಣಸ್ತಸ್ಯ ಯತ್ಕಿಂಚೇಹ ಕರೋತ್ಯಯಂ। ತಸ್ಮಾಲ್ಲೋಕಾತ್ ಪುನರೇತ್ಯಸ್ಮೈಲೋಕಾಯ ಕರ್ಮಣೇ ಇತಿತು ಕಾಮಯಮಾನಃ"— ಎಂದು ಅನುಪಾಸಕನ ವಿಷಯವನ್ನು ಮುಗಿಸಿ. "ಅಥಾಕಾಮಯಮಾನೋ ಯೋಽ ಕಾಮೋನಿಷ್ಕಾಮ ಆಪ್ತಕಾಮಆತ್ಮಕಾಮಃನ ತಸ್ಯ ಪ್ರಾಣಾ ಉತ್ಕ್ರಾಮನ್ತಿ ಬ್ರಹ್ಮೈವಸನ್ ಬ್ರಹ್ಮಾಪ್ಯೇತಿ",—ಎಂದು ಉಪಾಸಕನಿಗೆ ಉತ್ಕ್ರಾಂತಿಯನ್ನು ಪ್ರತಿಷೇಧಿಸಿದೆ. ಹಾಗೆಯೇ ಪೂರ್ವತ್ರ ಆರ್ತಭಾಗ ಪ್ರಶ್ನೆಯಲ್ಲಿಯೂ ಉಪಾಸಕನಿಗೆ ಉತ್ಕ್ರಾಂತಿಯ ಪ್ರತಿಷೇಧವಿದೆ. 'ಅಪಪುನರ್ಮೃತ್ಯುಂಜಯತಿ"—ಎಂದು ಉಪಾಸಕನನ್ನು ಸ್ತುತಿಸಿ, "ಯಾಜ್ಞವಲ್ಕ್ಯೇತಿ ಹೋವಾಚ ಯತ್ರಾಯಂ ಪುರುಷೋಮ್ರಿಯತೇ ಉದಸ್ಮಾತ್ಪ್ರಾಣಾಃ ಕ್ರಾಮನ್ತ್ಯಾಹೋನ"—ಎಂದು ಪ್ರಶ್ನಿಸಲ್ಪಟ್ಟು, "ನೇತಿ ಹೋವಾಚ ಯಾಜ್ಞವಲ್ಕ್ಯೋಽತ್ರೈವ ಸಮವಲೀಯನ್ತೇ ಸ ಉಚ್ಛ್ವಯತ್ಯಾಧ್ಮಾತೋ ಮೃತಶ್ಶೇತೇ"—ಎಂದು ಹೇಳಿದೆ. ಆದ್ದರಿಂದ ಉಪಾಸಕನು ಇಲ್ಲಿಯೇ ಮೋಕ್ಷ ಪಡೆಯುತ್ತಾನೆ. ಅವನಿಗೆ ಉತ್ಕ್ರಾಂತಿಯಿಲ್ಲ ವೆಂದು ಪೂರ್ವಪಕ್ಷ.

"ನ ತಸ್ಯ ಪ್ರಾಣಾ ಉತ್ಕ್ರಾಮನ್ತಿ"—ಎಂಬಲ್ಲಿ ಉಪಾಸಕನ ಶರೀರದಿಂದ ಪ್ರಾಣ ಹೊರ ಹೊರಡುವುದಿಲ್ಲ ಎಂದು ಅರ್ಥವಲ್ಲ. ಜೀವನನ್ನು ಬಿಟ್ಟು ಪ್ರಾಣ ಅಲುಗುವುದಿಲ್ಲ. ಅರ್ಚಿರಾದಿ ಮಾರ್ಗದಲ್ಲಿ ಹೋಗುವಾಗ ಜತೆಯಲ್ಲಿಯೇ ಇರುವುದೆಂದೇ ಆ ವಾಕ್ಯಕ್ಕೆ ಅರ್ಥ. ಇಲ್ಲಿ ಈ ಅರ್ಥ ಸ್ಪಷ್ಟವಾಗಿ ಇಲ್ಲದಿದ್ದಾಗ್ಗೂ, ಮಾಧ್ಯಂದಿನ ಶಾಖೆಯಲ್ಲಿ, "'ಯೋಕಾಮೋ ನಿಷ್ಕಾಮ ಆಪ್ತ ಕಾಮಃ ನ ತಸ್ಮಾತ್ ಪ್ರಾಣಾ ಉತ್ಕ್ರಾಮನ್ತಿ''—ಎಂದು ಉಪಾಸಕನನ್ನು "ಅಕಾಮಃ ನಿಷ್ಕಾಮಃ"—ಇತ್ಯಾದಿಯಿಂದ ಹೇಳಿ ತರುವಾಯ ಅಲ್ಲಿಂದ ಪ್ರಾಣಗಳು ಹೊರ ಹೊರಡುವುದಿಲ್ಲವೆಂದು ಈ ಅರ್ಥವನ್ನೇ ಸ್ಪಷ್ಟವಾಗಿ ಹೇಳಿದೆ. ಆದ್ದರಿಂದ ಅದನ್ನೇ ಇಲ್ಲಿಯೂ ಅರ್ಥವಾಗಿ ಗ್ರಹಿಸಬೇಕು. ಒಂದು ವಾಕ್ಯ ಎರಡು ಅರ್ಥಗಳನ್ನು ಕೊಡುವುದಾದಲ್ಲಿ, ಮತ್ತೊಂದೆಡೆಯಲ್ಲಿ ಈ ಎರಡರೊಳಗೆ ಯಾವ ಅರ್ಥವನ್ನು ಸ್ಪಷ್ಟವಾಗಿ ಹೇಳಿದೆಯೋ ಅದನ್ನೇ ಇಲ್ಲಿಯೂ ಅಂಗೀಕರಿಸುವುದು ಉಚಿತವೆಂದು ಸಿದ್ಧಾನ್ತ.

ಸೂತ್ರ—೭ **ಸ್ಮರ್ಯತೇ ಚ**

**ಸೂತ್ರಾರ್ಥ**

ಈ ಅರ್ಥ ಸ್ಮೃತಿಯಲ್ಲಿಯೂ ಹೇಳಲ್ಪಟ್ಟಿದೆ.

**ವಿವರಣೆ**

''ಊರ್ಧ್ವಮೇಕಸ್ಥಿತಸ್ತೇಷಾಂ ಯೋಭಿತ್ವಾ ಸೂರ್ಯಮಂಡಲಂ ।

ಬ್ರಹ್ಮಲೋಕಮಭಿಕ್ರಮ್ಯ ತೇನ ಯಾತಿ ಪರಾಂ ಗತಿಂ ॥ "—ಎಂದು ಮೇಲೆ ಹೇಳಿದ ಅಧಿಕಾರಿಗಳಲ್ಲಿ ಶ್ರೇಷ್ಠನಾಗಿ ಸೂರ್ಯಮಂಡಲವನ್ನು ಭೇದಿಸಿಕೊಂಡು ಹೋಗಿ ಬ್ರಹ್ಮಲೋಕವನ್ನು ಆಕ್ರಮಿಸಿ ಆ ದಾರಿಯಿಂದ ಪರಮಪ್ರಾಪ್ಯವಾದ ಮೋಕ್ಷವನ್ನು ಹೊಂದುತ್ತಾನೆಯೆಂದು ಸ್ಮೃತಿಯಲ್ಲಿ ಉಪಾಸಕನು ದೇಶಾಂತರಕ್ಕೆ ಹೋಗುವುದಾಗಿ ಹೇಳಿರುವುದರಿಂದ ಅವನ ಪ್ರಾಣಗಳು ಶರೀರದಿಂದ ಉತ್ಕ್ರಮಿಸುವುವು—ಎಂಬುದು ಸಿದ್ಧವೆನ್ನುತ್ತಾರೆ.

## 6. ಪರಸಂಪತ್ತ್ಯಧಿಕರಣ

ಸೂತ್ರ—**ತಾನಿ ಪರೇ ತಥಾಹ್ಯಾಹ**

**ಸಂಗತಿ**

ಜೀವ ಪರಿಷ್ವಕ್ತವಾದ ಭೂತಸೂಕ್ಷ್ಮಗಳು, ಯಥಾ ಕರ್ಮ ಯಥಾ ವಿದ್ಯ ಸ್ವಕಾರ್ಯಕ್ಕಾಗಿ ಹೋಗುವುವೆ? ಅಥವಾ, ಪರಮಾತ್ಮನಲ್ಲಿ ಸಂಪನ್ನವಾಗುವುವೆ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ತಾನಿ] = ಆ ಭೂತಸೂಕ್ಷ್ಮಗಳು [ಪರೇ] = ಪರಮಾತ್ಮನಲ್ಲಿ ಸಂಪನ್ನಗಳಾಗುವುವು. [ತಥಾಹಿ] = ಅದು ಹಾಗೆಯೇ ಅಲ್ಲವೆ! [ಆಹ] = ಶ್ರುತಿ ಹೇಳಿದೆ.

**ವಿವರಣೆ**

ಶರೀರದಿಂದ ಹೊರಹೊರಟು ಬಂದಾದ ಮೇಲೆ ಜೀವನು ಭೂತಸೂಕ್ಷ್ಮಗಳೊಡನೆ ಕೂಡಿ ಪರಮಾತ್ಮನಲ್ಲಿ ಲಯಿಸುತ್ತಾನೆಯೆಂದು, "ತೇಜಃ ಪರಸ್ಯಾಂ ದೇವತಾಯಾಂ"—ಎಂದು ಶ್ರುತಿ ಹೇಳುತ್ತೆ. ಆದ್ದರಿಂದ ಇವನು ಮಾಡಿದ ಕರ್ಮಾನುಗುಣವಾಗಿಯೂ, ಉಪಾಸನಾನುಗಣವಾಗಿಯೂ ದುಃಖಾನುಭವವನ್ನು ಮಾಡಲು ಲೋಕಾಂತರಗಳಿಗೆ ಹೋಗುವುದಿಲ್ಲವೆನ್ನುತ್ತಾರೆ. ದೀರ್ಘ ಕಾಲ ಸುಖ ದುಃಖಾನುಭವವನ್ನು ಮಾಡಿದ ಆಯಾಸ ತೀರುವುದಕ್ಕಾಗಿ ಪರಮಾತ್ಮನಲ್ಲಿ ಹೋಗಿ ಸೇರುವನೆಂದು ತಾತ್ಪರ್ಯ.

## 7. ಅವಿಭಾಗಾಧಿಕರಣ

### ಸೂತ್ರ—ಅವಿಭಾಗೋ ವಚನಾತ್

**ಸಂಗತಿ**

ಪರಮಾತ್ಮನಲ್ಲಿ ಜೀವನಿಗೆ ಸಂಪತ್ತಿಯು ಪ್ರಾಕೃತ ಲಯದಂತೆ ಕಾರಣಾಪತ್ತಿ-ರೂಪವೇ? ಅಥವಾ, 'ವಾಙ್ಮನಸಿ'—ಇತ್ಯಾದಿಯಂತೆ ಅವಿಭಾಗರೂಪವೆ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ವಚನಾತ್] = ಶ್ರುತಿವಚನದಿಂದ [ಅವಿಭಾಗಃ] = ಬೇರ್ಪಟ್ಟು ತೋರುವುದಿಲ್ಲ, (ಪೃಥಗ್ವ್ಯವಹಾರಕ್ಕೆ ಅನರ್ಹವಾದ ಸಂಸರ್ಗ.)

**ವಿವರಣೆ**

ಭೂತಸೂಕ್ಷ್ಮಗಳೊಂದಿಗೆ ಕೂಡಿದ ಜೀವ ಪರಮಾತ್ಮನಲ್ಲಿ ಲಯಿಸುವುದೆಂಬುದು ಚಿನ್ನದಲ್ಲಿ ಕಟಕದಂತೆಯಲ್ಲ. ವಾಕ್ಕು ಮನಸ್ಸಿನಲ್ಲಿ ಲಯಿಸುವಂತೆಯೇ ನಾಮರೂಪಗಳಿಲ್ಲದೆ ಇದೊಂದು ವಸ್ತುವೆಂದು ಬೇರ್ಪಟ್ಟು ತೋರದ ಹಾಗೆ ಸೇರಿಬಿಡುವನು. "ವಾಙ್ಮನಸಿ ಸಂಪದ್ಯತೇ"—ಎಂಬಲ್ಲಿಯುಳ್ಳ, "ಸಂಪದ್ಯತೇ"—ಎಂಬ ಪದವನ್ನೇ, "ತೇಜಃಪರಸ್ಯಾಂ ದೇವತಾಯಾಂ"—ಎಂಬಲ್ಲಿಯೂ ಇಟ್ಟುಕೊಳ್ಳಬೇಕಾದ್ದರಿಂದ, ಅಲ್ಲಿ ಆ ಪದಕ್ಕೆ ಏನು ಅರ್ಥವೋ, ಆ ಅರ್ಥವನ್ನೇ ಇಲ್ಲಿಯೂ ಹೇಳಬೇಕಾದ್ದರಿಂದ ಇದೇ ತಾತ್ಪರ್ಯ.

## 8. ತದೋಕೋಽಧಿಕರಣ

### ಸೂತ್ರ—ತದೋಕೋಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾ-ಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತ ಶ್ಶತಾಧಿಕಯಾ

**ಸಂಗತಿ**

ಹೀಗೆ ಗತ್ಯುಪಕ್ರಮದವರಿಗೆ ಉಪಾಸಕ—ಅನುಪಾಸಕರಿಗೆ ಸಮಾನವಾದ ಆಕಾರ ಉಕ್ತವಾಯಿತು. ಈಗ ವಿದ್ವಾಂಸನಿಗೆ (ಉಪಾಸಕನಿಗೆ) ವಿಶೇಷವೇನೆಂಬುದು ಹೇಳಲ್ಪಡುತ್ತೆ.

**ಸೂತ್ರಾರ್ಥ**

[ವಿದ್ಯಾಸಾಮರ್ಥ್ಯಾತ್] = ಉಪಾಸನದ ಮಹಿಮೆಯಿಂದಲೂ, [ತಚ್ಛೇಷಗತ್ಯನುಸ್ಮೃತಿಯೋಗಾತ್, ಚ] = ಆ ವಿದ್ಯೆಗೆ ಅಂಗವಾದ ಅರ್ಚಿರಾದಿ ಗತಿಚಿನ್ತನದಿಂದಲೂ [ಹಾರ್ದಾನುಗೃಹೀತಃ] = ಹೃದಯವರ್ತಿಯಾದ ಪರಮಾತ್ಮನಿಂದ ಅನುಗ್ರಹಿಸಲ್ಪಟ್ಟವನಾಗುತ್ತಾನೆ. (ಬಳಿಕ) [ತದೋಕಃ] = ಆ ಜೀವನ ಸ್ಥಾನವಾದ ಹೃದಯ [ಅಗ್ರಜ್ವಲನಂ] = ಅಗ್ರದಲ್ಲಿ (ನಾಡಿಯ ಬಾಯಿಯಲ್ಲಿ) ಪ್ರಕಾಶಿಸುತ್ತದೆ. [ತತ್ಪ್ರಕಾಶಿತದ್ವಾರಃ] = ಅದರಿಂದ ಪ್ರಕಾಶಿಸಲ್ಪಟ್ಟ (ದ್ವಾರ) ದಾರಿಯುಳ್ಳವನಾಗಿ, [ಶತಾಧಿಕಯಾ] = ನೂರೊಂದನೇ ನಾಡಿಯಿಂದ (ಉಪಾಸಕ ಉತ್ಕ್ರಮಿಸುತ್ತಾನೆ)

**ವಿವರಣೆ**

'ಶತಂಚೈಕಾಚ ಹೃದಯಸ್ಯ ನಾಡ್ಯಃ ತಾಸಾಂ ಮೂರ್ಧಾನಮಭಿನಿಸ್ಸೃತೈಕಾ। ತಯೋಽರ್ಧ್ವಮಾಯನ್ ಅಮೃತತ್ವ ಮೇತಿವಿಷ್ವಙ್ಙನ್ಯಾ ಉತ್ಕ್ರಮಣೇ ಭವನ್ತಿ"—ಎಂಬ ಶ್ರುತಿಯು ಹೃದಯದಲ್ಲಿ ನೂರೊಂದು ನಾಡಿಗಳುಂಟು. ಅವುಗಳಲ್ಲಿ ಒಂದು ಶಿರಸ್ಸಿನ ಮಾರ್ಗವಾಗಿ ಹೊರಪಟ್ಟಿದೆ. ಆ ನಾಡೀ ಮಾರ್ಗದಿಂದ ಮೇಲಕ್ಕೆ ಹೊರಟು ಬಂದವನು ಮುಕ್ತಿಯನ್ನು ಹೊಂದುತ್ತಾನೆಯೆಂದು ಹೇಳಿದೆ. ಆ ನಾಡಿ ಅತಿ ಸೂಕ್ಷ್ಮವಾದ್ದರಿಂದ ಅದು ಜೀವನಿಂದ ಕಂಡುಹಿಡಿಯಲು ಸಾಧ್ಯವಿಲ್ಲವೆಂದಲ್ಲಿ, ಪರಮಪುರುಷನ ಆರಾಧನರೂಪವಾದ ಉಪಾಸನದಿಂದಲೂ, ಅದಕ್ಕೆ ಅಂಗವಾದ ಪ್ರತಿದಿನವೂ ಮಾಡುವ ಅರ್ಚಿರಾದಿ ಗತಿಚಿಂತನದಿಂದಲೂ, ಪರಮಪುರುಷ ಪ್ರೀತನಾಗುತ್ತಾನೆ. ಅವನ ಅನುಗ್ರಹದಿಂದ ಜೀವನ ಹೃದಯದ ಅಗ್ರವು ದೀಪದಂತೆ ಬೆಳಗುತ್ತೆ. ಅದರಿಂದ ಆ ನಾಡಿಯು ಕಾಣಿಸುತ್ತೆ. ಅದನ್ನು ಆಶ್ರಯಿಸಿಕೊಂಡು ಶಿರಸ್ಸಿನ ಮಾರ್ಗವಾಗಿಯೇ ಉತ್ಕ್ರಮಿಸುತ್ತಾನೆ.

## 9. ರಶ್ಮ್ಯನುಸಾರಾಧಿಕರಣ

### ಸೂತ್ರ—ರಶ್ಮ್ಯನುಸಾರೀ

**ಸಂಗತಿ**

ಶತಾಧಿಕವಾದ ಮೂರ್ಧನ್ಯ ನಾಡಿಯಿಂದ ಹೊರಕ್ಕೆ ಬಂದು ಉಪಾಸಕನು ಮುಂದಕ್ಕೆ ರಶ್ಮ್ಯನುಸಾರವಾಗಿ ಹೋಗುವನೆ? ಅಥವಾ ಆ ರೀತಿ ನಿಯಮವಿಲ್ಲವೆ?—ಎಂಬ ಶಂಕೆಯಿಂದ ಸಂಗತಿ. [ರಶ್ಮಿಯೆಂದರೆ ಇಲ್ಲಿ ಸೂರ್ಯಕಿರಣಗಳು]

**ಸೂತ್ರಾರ್ಥ**

ಸೂರ್ಯಕಿರಣಗಳನ್ನು ಅನುಸರಿಸಿದವನಾಗಿ ಉಪಾಸಕ ಹೋಗುತ್ತಾನೆ.

**ವಿವರಣೆ**

"ಅಸ್ಮಾಚ್ಛರೀರಾದುಪಕ್ರಮ್ಯ ಅಥೈತೈರೇವ ರಶ್ಮಿಭಿಃ ಊರ್ಧ್ವಮಾಕ್ರಮತೇ"—ಎಂದು ಉಪಾಸಕನು ಈ ಶರೀರದಲ್ಲಿಯಿಂದ ಹೊರಟು ಸೂರ್ಯಕಿರಣಗಳ ಮಾರ್ಗವಾಗಿ ಹೋಗುವುದಾಗಿ ಹೇಳಿದೆ. ಹಗಲಲ್ಲಿ ಮೃತನಾದರೆ ಸೂರ್ಯಕಿರಣಗಳುಂಟು.

ರಾತ್ರಿಯಲ್ಲಿ ಅವಿಲ್ಲವಾದ್ದರಿಂದ, ಆಗ ಮೃತನಾದ ಉಪಾಸಕ ಹೇಗೆ ಹೋಗುತ್ತಾನೆ?— ಎಂದಲ್ಲಿ, ರಾತ್ರಿಯಲ್ಲಿಯೂ ಉಷ್ಣ ಕಾಣುವುದರಿಂದ ಆಗಲೂ ಸೂರ್ಯಕಿರಣ ಗಳುಂಟು. ಶೀತ ಕಾಲದಲ್ಲಿ ಕಾಣದಿರುವುದು ಅಧಿಕ ಶೀತದಿಂದ ಅದರ ಉಷ್ಣ ಕಡಿಮೆ ಯಾಗಿರುವುದೇ ಹೊರತು, ಅದಿಲ್ಲವೆಂಬುದಿಲ್ಲ. ಆದ್ದರಿಂದ ರಾತ್ರಿ ಮೃತನಾದ ಉಪಾಸಕನೂ ಆ ಮಾರ್ಗವಾಗಿಯೇ ಹೋಗುವನೆನ್ನುತ್ತಾರೆ.

## 10. ನಿಶಾಧಿಕರಣ

### ಸೂತ್ರ—ನಿಶಿನೇತಿಚೇನ್ನ ಸಂಬಧಸ್ಯ ಯಾವದ್ದೇಹ ಭಾವಿತ್ವಾತ್ ದರ್ಶಯತಿ ಚ

### ಸಂಗತಿ

ರಾತ್ರಿಯಲ್ಲಿ ಮೃತನಾದ ಉಪಾಸಕನಿಗೆ ಬ್ರಹ್ಮ ಪ್ರಾಪ್ತಿಯುಂಟೆ ಇಲ್ಲವೆ?— ಎಂಬ ಶಂಕೆಯಿಂದ ಸಂಗತಿ.

### ಸೂತ್ರಾರ್ಥ

[ನಿಶಿ] = ರಾತ್ರಿಯಲ್ಲಿ (ಮೃತನಾದವನಿಗೆ) [ನ] = ಮೋಕ್ಷವಿಲ್ಲ. [ಇತಿ ಚೇತ್] = ಎಂದಲ್ಲಿ [ಸಂಬಂಧಸ್ಯ] = ಕರ್ಮ ಸಂಬಂಧಕ್ಕೆ [ಯಾವದ್ದೇಹಭಾವಿತ್ವಾತ್] =. ಶರೀರವಿರುವ ಪರ್ಯಂತವೇ ಸ್ಥಿತಿಯುಂಟಾದ್ದರಿಂದ [ನ] = ಮೋಕ್ಷವಿಲ್ಲವೆಂಬುದಿಲ್ಲ [ದರ್ಶಯತಿ, ಚ] = ಶ್ರುತಿಯೂ ಇದನ್ನು ಹೇಳುವುದು.

### ವಿವರಣೆ

"ದಿವಾ ಚ ಶುಕ್ಲಪಕ್ಷಶ್ಚ ಉತ್ತರಾಯಣಮೇವ ಚ।

ಮುಮುಕ್ಷೂಣಾಂ ಪ್ರಶಸ್ತಾನಿ ವಿಪರೀತಂತು ಗರ್ಹಿತಂ॥",—(ಹಗಲು, ಶುಕ್ಲ ಪಕ್ಷ, ಉತ್ತರಾಯಣಗಳಲ್ಲಿ ಮೃತಿ ಹೊಂದುವುದೇ ಮುಮುಕ್ಷುವಿಗೆ ಪ್ರಶಸ್ತ. ಮತ್ತೆ ಕಾಲದಲ್ಲಿ ಮೃತಿ ಹೊಂದವುದು, ನಿಂದ್ಯ. ಅಂದರೆ, ಮೋಕ್ಷಹೇತುವಾಗದು) ಎಂದಿರುವುದರಿಂದ, ರಾತ್ರಿಯಲ್ಲಿ ಮೃತನಾದ ಉಪಾಸಕನಿಗೆ ಮೋಕ್ಷವಿಲ್ಲವೆಂದಲ್ಲಿ, ಉಪಾಸಕನಿಗೆ ಉಪಾಸನೆಯು ಬಲದಿಂದ ಸಂಚಿತ ಕರ್ಮಗಳು ನಶಿಸುತ್ತವೆ. ಪ್ರಾರಬ್ಧವು ಚರಮ [ಕೊನೆಯ] ದೇಹದೊಂದಿಗೇ ಮುಗಿದು ಬಿಡುವುದು. ಆಗಾಮಿಯಾದುದು ಅಂಟುವುದಿಲ್ಲ. ಇನ್ನು ಸಂಸಾರದಲ್ಲಿರುವುದಕ್ಕೆ ಬೇರೆ ಯಾವ ಹೇತುವೂ, ಇಲ್ಲವಾದ್ದ ರಿಂದ, ಅವನೂ ಮುಕ್ತಿಯನ್ನು ಹೊಂದುತ್ತಾನೆ. 'ತಸ್ಯತಾವದೇವ ಚಿರಂ'— ಎಂಬುದು ಇದಕ್ಕೆ ಪ್ರಮಾಣ. ಮೇಲೆ ಹೇಳಿದ ಪ್ರಮಾಣ ಅನುಪಾಸಕನ ವಿಷಯ ವೆನ್ನುತ್ತಾರೆ.

ಹಗಲು ರಾತ್ರಿಯೆನ್ನದೆ ಪ್ರಾರಬ್ಧ ಕರ್ಮದ ಅವಸಾನದಲ್ಲಿ ಉಪಾಸಕನಿಗೆ ಮೋಕ್ಷವೆಂದು ಹೇಳಿದೆ. ಅಪ್ರಶಸ್ತ ಕಾಲವಾದ ರಾತ್ರಿಯಲ್ಲಿ ಮೃತವಾದ ಶರೀರ ಚರಮ ಶರೀರವಾಗದು. ಚರಮತ್ವವು ಸಿದ್ಧವಾದರಲ್ಲವೆ, ಬ್ರಹ್ಮಪ್ರಾಪ್ತಿ ಸಿದ್ಧಿ!—ಎಂಬುದು ಸರಿಯಲ್ಲ. "ಅಥ ಯೋದಕ್ಷಿಣೇ ಪ್ರಮೀಯತೇ ಪಿತೃಣಾ ಮೇವ ಮಹಿಮಾನಂ

ಗತ್ವಾ...''—ಇತ್ಯಾದಿಯಾಗಿ ಆರಂಭಿಸಿ, ತಸ್ಮಾದ್ಬ್ರಹ್ಮಣೋ ಮಹಿಮಾನ ಮಾಪ್ನೋತಿ" —ಎಂಬುದರಿಂದ ದಕ್ಷಿಣಾಯನಾದ್ಯ ಪ್ರಶಸ್ತ ಕಾಲದಲ್ಲಿ ಮೃತನಿಗೂ ಬ್ರಹ್ಮಪ್ರಾಪ್ತಿ ಶ್ರುತವಾದ್ದರಿಂದ ಅಪ್ರಶಸ್ತ ಕಾಲವೆಂಬ ಕಾರಣದಿಂದ ಚರಮ ದೇಹತ್ವಕ್ಕೆ ಬಾಧೆಯಿಲ್ಲ.

## 11. ದಕ್ಷಿಣಾಯನಾಧಿಕರಣ

### ಸೂತ್ರ—ಅತಶ್ಚಾಯನೇಽಪಿ ದಕ್ಷಿಣೇ

**ಸಂಗತಿ**

ರಾತ್ರಿ ಮೃತನಾದ ಉಪಾಸಕನಿಗೆ ಬ್ರಹ್ಮಪ್ರಾಪ್ತಿಯುಂಟೆಂಬುದಕ್ಕೆ ಹೇಳಿದ ಹೇತುವಿನಿಂದಲೇ ದಕ್ಷಿಣಾಯನದಲ್ಲಿ ಮೃತನಾದ ಉಪಾಸಕನಿಗೂ ಬ್ರಹ್ಮಪ್ರಾಪ್ತಿ ಯುಂಟಲ್ಲವೆ?—ಎಂದು ಅತಿದೇಶ ಸಂಗತಿ.

[ಅತಃ, ಚ] = ಆದ್ದರಿಂದಲೇ [ದಕ್ಷಿಣಾಯನೇ, ಅಪಿ] = ದಕ್ಷಿಣಾಯನ ದಲ್ಲಿಯೂ (ದಕ್ಷಿಣಾಯನದಲ್ಲಿ ಮೃತನಾದವನಿಗೂ ಮೋಕ್ಷವುಂಟು)

**ವಿವರಣೆ**

"ಅಥಯೋದಕ್ಷಿಣೇ ಪ್ರಮೀಯತೇ ಪಿತೃಣಾಮೇವ ಮಹಿಮಾನಂ ಗತ್ವಾ, ಚಂದ್ರಮಸಸ್ಸಾಯುಜ್ಯಂ ಗಚ್ಛತಿ"—ಎಂಬ ಶ್ರುತಿ ದಕ್ಷಿಣಾಯನದಲ್ಲಿ ಮೃತನಾದವನು ಚಂದ್ರನನ್ನು ಹೊಂದುವುದಾಗಿ ಹೇಳುವುದರಿಂದಲೂ, "ಅದ್ವೈತಮೇವಾಧ್ವಾನಂ ಪುನ ರ್ನಿವರ್ತನ್ತೇ"—ಎಂಬ ಶ್ರುತಿ ಚಂದ್ರಲೋಕಕ್ಕೆ ಹೋದವರು ಮತ್ತೆ ಸಂಸಾರಕ್ಕೆ ಹಿಂತಿರುಗುವರೆಂದು ಹೇಳಿರುವುದರಿಂದಲೂ, ಶ್ರೀ ಭೀಷ್ಮರು ಮರಣಕ್ಕಾಗಿ ಉತ್ತ ರಾಯಣ ಬರುವವರಿಗೂ ಪ್ರಾಣವನ್ನು ಧರಿಸಿದ್ದುದರಿಂದಲೂ, ದಕ್ಷಿಣಾಯನದಲ್ಲಿ ಮೃತನಾದವನಿಗೆ ಮೋಕ್ಷವಿಲ್ಲವೆಂದಲ್ಲಿ, ಮೇಲೆ ಹೇಳಿದಂತೆ ಸಂಸಾರ ಹೇತುವಾದ ಕರ್ಮ ಉಪಾಸಕನಿಗೆ ಇಲ್ಲವಾದ್ದರಿಂದಲೂ, ಚಂದ್ರಲೋಕಕ್ಕೆ ಹೋದ ಉಪಾಸಕನೂ ಅಲ್ಲಿ ಸ್ವಲ್ಪ ಕಾಲ ಶ್ರಮ ನೀಗಿಸಿಕೊಂಡು ಅನಂತರ ಮೋಕ್ಷವನ್ನು ಹೊಂದುವನೆಂದು "ತಸ್ಮಾದ್ಬ್ರಹ್ಮಣೋಮಹಿಮಾನಮಾಪ್ನೋತಿ"—ಎಂಬ ಮುಂದಿನ ವಾಕ್ಯದಲ್ಲಿ ತೋರು ವುದರಿಂದಲೂ, ದಕ್ಷಿಣಾಯನದಲ್ಲಿ ಮೃತನಾದ ಉಪಾಸಕನಿಗೂ ಮೋಕ್ಷವುಂಟು. ದಕ್ಷಿ ಣಾಯನದಲ್ಲಿ ಮರಣವನ್ನು ಅಪ್ರಶಸ್ತವನ್ನಾಗಿ ಹೇಳಿದ್ದು ಅನುಪಾಸಕನ ವಿಷಯ. ಶ್ರೀ ಭೀಷ್ಮಾಚಾರ್ಯರೂ ಸ್ವಚ್ಛಂದ ಮರಣದವರು. ಉತ್ತರಾಯಣಕ್ಕೆ ಪ್ರಾಶಸ್ತ್ಯ ಪ್ರದರ್ಶನದ ಮೂಲಕ ಧರ್ಮಪ್ರವರ್ತನೆಗಾಗಿ ಉತ್ತರಾಯಣಕ್ಕೆ ಕಾದಿದ್ದರು.

### ಸೂತ್ರ ೨—ಯೋಗಿನಃ ಪ್ರತಿಸ್ಮರ್ಯೇತೇ ಸ್ಮಾರ್ತೇ ಚೈತೇ

**ಸೂತ್ರಾರ್ಥ**

[ಯೋಗಿನಃ, ಪ್ರತಿ] = ಉಪಾಸಕರನ್ನು ಕುರಿತು, [ಏತೇ] = ಇವು [ಸ್ಮಾರ್ತೇ] = ಸ್ಮರಿಸತಕ್ಕವುಗಳಾಗಿ [ಸ್ಮರ್ಯತೇ] = ಸ್ಮೃತಿಯಲ್ಲಿ ಹೇಳಲ್ಪಟ್ಟಿವೆ.

**ವಿವರಣೆ**

ಯತ್ರ ಕಾಲೇತ್ವನಾವೃತ್ತಿಂ ಆವೃತ್ತಿಂ ಚೈವ ಯೋಗಿನಃ ।—ಎಂದು ಉಪ ಕ್ರಮವಾಗಿ, ''ಅಗ್ನಿರ್ಜ್ಯೋತಿರಹಃ ಶುಕ್ಲಃ''—ಇತ್ಯಾದಿಯಿಂದ ಗೀತೆಯಲ್ಲಿ ಉತ್ತರಾ ಯಣದಲ್ಲಿ ಮೃತನಾದವನು ಮತ್ತೆ ಸಂಸಾರವನ್ನು ಹೊಂದುವುದಿಲ್ಲ. ದಕ್ಷಿಣಾಯನ ದಲ್ಲಿ ಮೃತನಾದವನು ಮತ್ತೆ ಸಂಸಾರ ಹೊಂದುವನು ಎಂದು ಪ್ರಧಾನವಾಗಿ ಆರಂಭಿಸಿ ಹೇಳಿದೆಯಲ್ಲವೆ?—ಎಂದಲ್ಲಿ,—ಅಲ್ಲಿ ಮರಣ ಕಾಲವನ್ನು ಹೇಳಿಲ್ಲ. ದೇವಯಾನ–ಪಿತೃಯಾಣಗಳೆಂಬ ಎರಡು ಮಾರ್ಗಗಳನ್ನೂ ಉಪಾಸಕನು ನಿತ್ಯ ಅನುಸಂಧಾನ ಮಾಡಲು ಹೇಳಿದೆ. ಹೀಗೆ ಅರ್ಥವನ್ನು ಹೇಳುವುದಕ್ಕೆ ಪ್ರಮಾಣ, ''ನೈತೇಸೃತೀ ಪಾರ್ಥಜಾನನ್ ಯೋಗೀಮುಹ್ಯತಿ ಕಶ್ಚನ ।''—ಇತ್ಯಾದಿ ಮುಂದಿನ ವಾಕ್ಯ —ಎನ್ನುತ್ತಾರೆ.

ಇದರಲ್ಲಿ ವಕ್ಷ್ಯಮಾಣವಾದ ಅರ್ಥ ಸಂಕಲನ:—

ಬ್ರಹ್ಮರಂಧ್ರದಿಂದ ಹೊರಹೊರಟು, ನಾಡೀನಿಬದ್ಧವಾದ ಸೂರ್ಯರಶ್ಮಿಗಳನ್ನು ಅವಲಂಬಿಸಿ, ಅತಿವಹನಕ್ಕಾಗಿ ಇದಿರುಗೊಂಡು ಬರುವ ದೇವ ಬೃಂದಗಳಿಂದ ಉಪಾ ಹಾರ ಸಮರ್ಪಿಸಲ್ಪಟ್ಟು ಬ್ರಹ್ಮವಿತ್ ಹೋಗುವ ಮಾರ್ಗದಿಂದ ನಮ್ಮನ್ನು ಮುಕ್ತಿ ಸ್ಥಾನಭೂತವಾದ ಪರಮಪದವನ್ನು ಹೊಂದಿಸತಕ್ಕ ಅರ್ಚಿರಾದಿ ರೂಪವಾದ ಮುಕ್ತಿಘಂಟಾಪಥವು ಐದು ಅಧಿಕರಣಗಳಿಂದ, ಸರ್ವೋಪನಿಷದರ್ಥಮನನಶೀಲ ರಾದ ಶ್ರೀ ವ್ಯಾಸರಿಂದ ಪೂರ್ವಪಕ್ಷ ನಿರಸನಪೂರ್ವಕವಾಗಿ ಈ ಪಾದದಲ್ಲಿ ಸಿದ್ಧಾಂತ ಮಾಡಲ್ಪಟ್ಟಿದೆ.

## ಪಾದ 3
## ಗತಿಪಾದ

### 1. ಅರ್ಚಿರಾದ್ಯಧಿಕರಣ
### ಸೂತ್ರ—ಅರ್ಚಿರಾದಿನಾತತ್ಪ್ರಥಿತೇಃ

**ಸಂಗತಿ**

ಹಾರ್ದಾನುಗ್ರಹದಿಂದ ನಾಡೀ ವಿಶೇಷದ ಮೂಲಕ ಉಪಾಸಕನ ಗತ್ಯುಪ ಕ್ರಮವನ್ನು ಹೇಳಿಯಾಯಿತು. ಅನಂತರ ಅವನು ಹೋಗುವ ಮಾರ್ಗವನ್ನು ಈ ಪಾದದಲ್ಲಿ ನಿರ್ಣಯಿಸುತ್ತಾರೆ.

**ಸೂತ್ರಾರ್ಥ**

[ತತ್ಪ್ರಥಿತೇಃ] = ಅದಕ್ಕೇ ಪ್ರಸಿದ್ಧಿಯುಂಟಾದುದರಿಂದ, (ಅರ್ಚಿರಾದಿನಾ) = (ಮೃತನಾದ ಉಪಾಸಕ) ಅರ್ಚಿರಾದಿ ದಾರಿಯಿಂದ ಹೋಗುವನು.

**ವಿವರಣೆ**

ಇದರಲ್ಲಿ ಉಪಾಸಕನು ಹೋಗುವ ದಾರಿಯನ್ನು ನಿರೂಪಿಸುತ್ತಾರೆ;—ಛಾನ್ದೋ ಗ್ಯದಲ್ಲಿಯ ಉಪಕೋಸಲ ವಿದ್ಯೆಯಲ್ಲಿ, ''ಅರ್ಚಿಷಮೇವಾಭಿಸಂಭವನ್ತಿ ಅರ್ಚಿಷೋಽ

ಹರಹ್ನ ಆಪೂರ್ಯಮಾಣ ಪಕ್ಷಮಾಪೂರ್ಯಮಾಣಪಕ್ಷಾದ್ಯಾನ್ ಷಡುದಙ್ಙೇತಿ ಮಾಸಾನ್ ಮಾಸೇಭ್ಯಸ್ಸಂವತ್ಸರಂ ಸಂವತ್ಸರಾದಾದಿತ್ಯಂ ಆದಿತ್ಯಾಚ್ಚನ್ದ್ರಮಸಂ ಚನ್ದ್ರಮಸೋ ವಿದ್ಯುತಂ ತತ್ಪುರುಷೋ ಮಾನವಸ್ಸಏನಾನ್ ಬ್ರಹ್ಮ ಗಮಯತಿ,"— ಅಂದರೆ, ಉಪಾಸಕನು ಶರೀರದಿಂದ ಹೊರಕ್ಕೆ ಹೊರಟು ಕ್ರಮವಾಗಿ ಅಗ್ನಿ, ದಿನ, ಶುಕ್ಲಪಕ್ಷ, ಉತ್ತರಾಯಣ, ವರ್ಷ, ಸೂರ್ಯ, ಚನ್ದ್ರ, ಮಿಂಚು, ಆದ ಇವುಗಳನ್ನು ದಾಟಿ ಹೋಗಿ ಬಳಿಕ ಅಲ್ಲಿಂದ, ಅಮಾನವನಿಂದ ಪರಮಾತ್ಮನನ್ನು ಹೊಂದಿಸಲ್ಪಡುತ್ತಾನೆ —ಎಂದು ಹೇಳಿದೆ. ಕೌಷೀತಕಿಯಲ್ಲಿ, "ಅಗ್ನಿಲೋಕಮಾಗಚ್ಛತಿ ಸ ವಾಯುಲೋಕಂ ಸ ವರುಣಲೋಕಂ ಸ ಆದಿತ್ಯಲೋಕಂ ಸ ಇನ್ದ್ರಲೋಕಂ ಸ ಪ್ರಜಾಪತಿಲೋಕಂ, ಸ ಬ್ರಹ್ಮಲೋಕಂ,"—ಎಂದು ಕ್ರಮವಾಗಿ ಅಗ್ನಿಲೋಕ, ವಾಯುಲೋಕ ವರುಣಲೋಕ, ಆದಿತ್ಯಲೋಕ, ಇನ್ದ್ರಲೋಕ, ಬ್ರಹ್ಮಲೋಕಗಳನ್ನು ದಾಟಿ ಪರಮಾತ್ಮನನ್ನು ಹೊಂದುತ್ತಾನೆ—ಎಂದಿದೆ. ಹೀಗೆ ಅನೇಕ ಸ್ಥಳಗಳಲ್ಲಿ ಅನೇಕ ವಿಧವಾಗಿ ಹೇಳಿರುವುದರಿಂದ, ಒಂದೊಂದೆಡೆಯಲ್ಲಿಯೂ ಬೇರೆ ಬೇರೆ ದಾರಿಯನ್ನು ಹೇಳಿರುವುದರಿಂದ, ಉಪಾಸಕನು ಅವುಗಳಲ್ಲಿ ಯಾವುದೋ ಒಂದು ದಾರಿಯಿಂದಲೇ ಹೋಗುವನೆನ್ನುವುದೆ? ಅಥವಾ—ಇವುಗಳೆಲ್ಲವೂ ಒಂದೇ ದಾರಿಯಾಗಿ ಆ ದಾರಿಯಿಂದಲೇ ಎಲ್ಲರೂ ಹೋಗುವರು—ಎನ್ನುವುದೇ?—ಎಂದಲ್ಲಿ,—ಎಲ್ಲಾ ಕಡೆಗಳಲ್ಲಿಯೂ, ಸೂರ್ಯ ಮುಂತಾದ ಹೆಸರುಗಳನ್ನು ಅನುಗತವಾಗಿ ಹೇಳಿರುವುದರಿಂದ, ಅವುಗಳೆಲ್ಲವೂ ಒಂದೇ ಮಾರ್ಗವೆಂದೇ ಏರ್ಪಡುತ್ತೆ. ಉಪಾಸನವನ್ನು ಹೇಳುವ ಪ್ರಕರಣಗಳಲ್ಲಿ ಒಂದೊಂದೆಡೆಯಲ್ಲಿ ಕೆಲ ಕೆಲವು ಗುಣಗಳನ್ನು ಹೇಳಿದ್ದಾಗ್ಯೂ, ಮತ್ತೊಂದೆಡೆಯಲ್ಲಿ ಹೇಳಿದ ಗುಣಗಳನ್ನೂ ಆಯಾ ಸ್ಥಳಗಳಲ್ಲಿ ಅನುಸಂಧಾನ ಮಾಡುವಂತೆ, ಇಲ್ಲಿಯೂ. ಅರ್ಚಿರಾದಿ ಮಾರ್ಗದಲ್ಲಿರುವುವುಗಳನ್ನೆಲ್ಲಾ ಒಂದೆಡೆಯಲ್ಲಿ ಹೇಳದಿದ್ದಾಗ್ಯೂ, ಮತ್ತೊಂದು ಕಡೆ ಹೇಳಿದವುಗಳನ್ನೂ ಇಲ್ಲಿಯೂ ಅನುಸಂಧಾನ ಮಾಡಿಕೊಳ್ಳಬೇಕು. ಆದ್ದರಿಂದ, ಅರ್ಚಿರಾದಿ ಮಾರ್ಗವೆನ್ನುವುದು ಒಂದೇ. ಅದರಿಂದಲೇ ಉಪಾಸಕರುಗಳೆಲ್ಲರೂ ಹೋಗುವರು—ಎನ್ನುತ್ತಾರೆ.

## 2. ವಾಯ್ವಧಿಕರಣ

### ಸೂತ್ರ—ವಾಯುಮಬ್ದಾದವಿಶೇಷ ವಿಶೇಷಾಭ್ಯಾಂ

**ಸಂಗತಿ**

ಉಪಾಸಕನು ಅರ್ಚಿರಾದಿ ಮಾರ್ಗದಿಂದಲೇ ಹೋಗುವನೆನ್ನಲಾಯಿತು. ಸಂವತ್ಸರ—ಆದಿತ್ಯರ ನಡುವೆ ಪ್ರಾಪ್ತವಾದ ವಾಯು—ದೇವ ಲೋಕಗಳು ಅನಿಯತ ಕ್ರಮದಿಂದ ನಿವೇಶ ಮಾಡಲ್ಪಡಬೇಕೆ? ಅಥವಾ ಇಲ್ಲವೆ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಅವಿಶೇಷ ವಿಶೇಷಾಭ್ಯಾಂ] = ಸಾಮಾನ್ಯವಾಗಿಯೂ ವಿಶೇಷವಾಗಿಯೂ, ಹೇಳುವುದರಿಂದ, [ಅಬ್ದಾತ್] = ಸಂವತ್ಸರಕ್ಕಿಂತ ಮೇಲೆ [ವಾಯುಂ] = ವಾಯುವನ್ನು (ಇರಿಸಬೇಕು.)

**ವಿವರಣೆ**

ಛಾನ್ದೋಗ್ಯದಲ್ಲಿ, ಅರ್ಚಿರಾದಿ ಮಾರ್ಗದಲ್ಲಿ, ''ಮಾಸೇಭ್ಯಸ್ಸಂವತ್ಸರಂ'',— ಎಂದು ಉತ್ತರಾಯಣದ ನಂತರ ಸಂವತ್ಸರವನ್ನು ಹೇಳಿದೆ. ವಾಜಸನೇಯದಲ್ಲಿ, ''ಮಾಸೇಭ್ಯಃ ದೇವಲೋಕಂ ದೇವಲೋಕಾದಾದಿತ್ಯಂ'',—ಎಂದು ಅವೆರಡರ ನಡುವೆ ದೇವಲೋಕವನ್ನು ಹೇಳಿದೆ. ಮತ್ತೊಂದೆಡೆಯಲ್ಲಿ, ''ಸ ವಾಯು ಲೋಕ ಮಾಗಚ್ಛತಿ......ಸ ಆದಿತ್ಯ ಮಾಗಚ್ಛತಿ'' ,—ಎಂದು ಸೂರ್ಯನಿಗಿಂತ ಮುಂಚೆ ವಾಯು ಲೋಕವನ್ನು ಹೇಳಿದೆ. ಇಲ್ಲಿ ಒಂದು ಕಡೆ, ಹೇಳಿದ್ದನ್ನು ಮತ್ತೊಂದು ಕಡೆಯೂ ಇಟ್ಟುಕೊಳ್ಳಬೇಕಾದುದರಿಂದ, ಉತ್ತರಾಯಣಕ್ಕೂ ಸೂರ್ಯನಿಗೂ ನಡುವೆ ವಾಯು ವನ್ನೂ ದೇವ ಲೋಕವನ್ನೂ ಅನುಸಂಧಾನ ಮಾಡಬೇಕು. ಇವೆರಡನ್ನೂ ಒಂದು ಕಡೆಯಲ್ಲಿ ಹೇಳಿಲ್ಲ. ಒಂದೊಂದನ್ನು ಒಂದೊಂದು ಕಡೆಯಲ್ಲಿ ಹೇಳಿದೆ. ಆದ್ದರಿಂದ ಇವೆರಡೂ ಒಂದೋ ಅಥವಾ ಬೇರೆಯೋ?—ಎಂದು ವಿಚಾರ ಮಾಡುವಲ್ಲಿ— ದೇವಲೋಕ ಪದ ವಾಯುವಿಗೂ ಸ್ವರ್ಗಕ್ಕೂ ಕೂಡ ವಾಚಕವಾದ್ದರಿಂದ, ಸಾಮಾನ್ಯ ವಾಗಿದೆ. ವಾಯು ಪದ ಅದೊಂದನ್ನೇ ಹೇಳುತ್ತೆ. ಸಾಮಾನ್ಯ ಪದಕ್ಕೆ ವಿಶೇಷದಲ್ಲಿ ಪರ್ಯವಸಾನ ನ್ಯಾಯವಾದ್ದರಿಂದ, ದೇವಲೋಕ ಪದವೂ ವಾಯುವನ್ನೇ ಹೇಳುತ್ತೆ. ಇನ್ನು ಆ ವಾಯುವನ್ನು ವರ್ಷಕ್ಕೆ ಅನಂತರವೂ ಆದಿತ್ಯನಿಗೆ ಮುಂಚೆಯೂ ಇರಿಸ ಬೇಕೆನ್ನುತ್ತಾರೆ.

## 3. ವರುಣಾಧಿಕರಣ

ಸೂತ್ರ—**ತಟಿತೋಧಿ ವರುಣಸ್ಸಂಬನ್ಧಾತ್**

**ಸಂಗತಿ**

ವರುಣಾದಿಗಳನ್ನು ಪಾರಕ್ರಮದಲ್ಲಿಯೇ ಇಟ್ಟುಕೊಳ್ಳಬೇಕೆ? ಅಥವಾ ವಿದ್ಯು ತ್ತಾದ ಮೇಲೆಯೇ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಸಂಬನ್ಧಾತ್] = ವರುಣನಿಗೂ ಮಿಂಚಿಗೂ ಸಂಬಂಧವುಂಟಾದ್ದರಿಂದ, [ವರುಣಃ] = ವರುಣನು, [ತಟಿತಃ, ಅಧಿ] = ಮಿಂಚಿನ ನಂತರ (ನಿವೇಶಿಸಲ್ಪಡಬೇಕು.)

**ವಿವರಣೆ**

ಛಾನ್ದೋಗ್ಯದಲ್ಲಿ, ''ಆದಿತ್ಯಾಚ್ಚನ್ದ್ರಮಸಂ ಚನ್ದ್ರಮಸೋ ವಿದ್ಯುತಂ ತತ್ಪು ರುಷೋಽಮಾನವಸ್ಸ ಏನಾನ್ ಬ್ರಹ್ಮ ಗಮಯತಿ''—ಎಂದು ಸೂರ್ಯನಿಗೂ ಮೇಲೆ ಚಂದ್ರನನ್ನೂ ಅವನಿಗಿಂತ ಮೇಲೆ ಮಿಂಚನ್ನೂ ಹೇಳಿರುವುದರಿಂದ, ಆ ಪರಂಪರೆಯನ್ನೇ ಅಂಗೀಕರಿಸಬೇಕು. ಕೌಷೀತಕಿಯಲ್ಲಿ,'' ಸ ವಾಯುಲೋಕಂ ಸ ವರುಣಲೋಕಂ ಸ ಆದಿತ್ಯಲೋಕಂ ಸ ಇಂದ್ರಲೋಕಂ ಸ ಪ್ರಜಾಪತಿಲೋಕಂ ಸ ಬ್ರಹ್ಮಲೋಕಂ'',— ಎಂದು ವಾಯುವಿಗೂ ಸೂರ್ಯನಿಗೂ ನಡುವೆ ವರುಣನನ್ನೂ ಸೂರ್ಯನಿಗೆ ಮೇಲೆ ಇಂದ್ರನನ್ನೂ ಬ್ರಹ್ಮನನ್ನೂ ಹೇಳಿದೆ. ಇಲ್ಲಿ ವರುಣನನ್ನು ಆ ಜಾಗದಲ್ಲಿಯೇ ಅಥವಾ

ಬೇರೆ ಜಾಗದಲ್ಲಿಯೇ ನಿವೇಶಿಸತಕ್ಕದ್ದು?—ಎಂದಲ್ಲಿ,—ವಿದ್ಯುತ್ತು ಮೇಘದ ನಡುವೆ ಉಂಟಾಗುವುದರಿಂದಲೂ, ವರುಣ ಮೇಘವಾಹನನಾದ್ದರಿಂದಲೂ, ವಿದ್ಯುತ್ತಿಗೂ ವರುಣನಿಗೂ ಈ ವಿಧವಾದ ಸಂಬಂಧವುಂಟಾದ್ದರಿಂದ, ವರುಣನನ್ನು ವಿದ್ಯುತ್ತಾದ ಮೇಲೆ ಹೇಳಬೇಕು. ಇಂದ್ರನನ್ನೂ ಬ್ರಹ್ಮನನ್ನೂ ಈ ವರುಣನಾದ ಮೇಲೆ ಹೇಳಬೇಕು. ವಿದ್ಯುತ್ತಿಗೆ ಮೇಲೆ ಮೂವರಿದ್ದರೆ, "ಸ ಏತಾನ್ ಬ್ರಹ್ಮ ಗಮಯತಿ",—ಎಂದು ಆ ವಿದ್ಯುತ್ಪುರುಷನೇ ಉಪಾಸಕನನ್ನು ಮೋಕ್ಷ ಹೊಂದಿಸುವನು ಎಂಬ ವಾಕ್ಯ ವಿರೋಧಿಸದೋ—ಎಂದಲ್ಲಿ—ಚಂದ್ರಾಧಿಷ್ಠಾನ ದೇವತೆಗೆ ಮೇಲೆ ವಿದ್ಯುದಧಿಷ್ಠಾನ ದೇವತೆಯಾದ ಅಮಾನವನೆಂಬ ನಿತ್ಯಸೂರಿಯೇ ಉಪಾಸಕರುಗಳನ್ನು ಪರಮಪದಕ್ಕೆ ಒಯ್ಯುತ್ತಾನೆ. ವರುಣ ಮುಂತಾದವರು ಅದಕ್ಕೆ ಸಹಾಯ ಮಾಡುವುದರಿಂದ ಅವರುಗಳನ್ನೂ ಆತಿವಾಹಿಕರನ್ನಾಗಿ ಹೇಳಿದೆಯೆನ್ನುತ್ತಾರೆ. ಪಾಠಕ್ರಮಕ್ಕಿಂತ ಅರ್ಥ ಕ್ರಮಬಲವತ್ತರವಾದ್ದರಿಂದಲೂ, ವಿದ್ಯುತ್ತಾದ ಮೇಲೆ ವರುಣನನ್ನು ಇಟ್ಟುಕೊಳ್ಳಬೇಕು. ವಿದ್ಯುತ್ತಿನ ಗಮಯಿತೃತ್ವವು ವ್ಯವಧಾನಸಹವೆಂದು ತಿಳಿಯತಕ್ಕದ್ದು. (ವ್ಯವಧಾನ = ವಿರಾಮ)

## 4. ಆತಿವಾಹಿಕಾಧಿಕರಣ

### ಸೂತ್ರ—ಆತಿವಾಹಿಕಾಸ್ತಲ್ಲಿಂಗಾತ್

**ಸಂಗತಿ**

ಅರ್ಚಿರಾದಿಗಳು ಮಾರ್ಗಚಿಹ್ನ ಭೂತರೆ? ಅಥವಾ ಭೋಗಭೂಮಿಗಳೆ? ಅಥವಾ ಅತಿವೋಢೃಗಳೆ?—ಎಂಬ ಶಂಕೆಯಿಂದ ಸಂಗತಿ. [ಅತಿವೋಢೃ = ಒಯ್ಯುತಕ್ಕವರು ಅಥವಾ ಆತಿವಾಹಿಕರು]

**ಸೂತ್ರಾರ್ಥ**

[ತಲ್ಲಿಂಗಾತ್] = ಆತಿವಾಹಿಕರೆನ್ನುವುದಕ್ಕೆ ಹೇತು ಉಂಟಾದ್ದರಿಂದ, [ಆತಿವಾಹಿಕಾಃ] = (ಅಗ್ನಿ ಮುಂತಾದವರುಗಳು) ಆತಿವಾಹಿಕರು.

**ವಿವರಣೆ**

ಅರ್ಚಿರಾದಿ ಮಾರ್ಗದಲ್ಲಿ ಹೇಳಲ್ಪಟ್ಟ ಅಗ್ನಿ, ದಿನ, ಶುಕ್ಲಪಕ್ಷ, ಮುಂತಾದವರುಗಳು ಆ ದಾರಿಗೆ ಚಿಹ್ನೆಗಳೆ? ಅಥವಾ ಭೋಗಭೂಮಿಯೇ? ಅಥವಾ ಉಪಾಸಕರನ್ನು ಒಯ್ಯುವ ಆತಿವಾಹಿಕರೆ?—ಎಂದಲ್ಲಿ, ಒಂದು ಊರಿಗೆ ಹೋಗುವವನನ್ನು ಕುರಿತು ನೀನು ಇಲ್ಲಿಂದ ಹೊರಟು ಈ ಬೆಟ್ಟವನ್ನೂ ಅದಕ್ಕೆ ಆಚೆ ಇರುವ ಈ ನದಿಯನ್ನೂ ಆಮೇಲೆ ಈ ಮರವನ್ನೂ ಬಳಿಕ, ಇಂಥ ಊರನ್ನೂ ದಾಟಿ ಹೋಗಿ ಅನಂತರ ಈ ಊರನ್ನು ಸೇರುವೆ—ಎಂದು ಹೋಗುವ ದಾರಿಗೆ ಗುರುತುಗಳನ್ನು ಹೇಳುವ ಹಾಗೆ ಪರಮಪದಕ್ಕೆ ಹೋಗುವವನಿಗೆ ದಾರಿಯ ಗುರುತುಗಳನ್ನು ಹೇಳಿದೆ. ಇವು ಅಚೇತನಗಳಾದ್ದರಿಂದ ಆತಿವಾಹಿಕರಾಗಲಾರರು. ಲೋಕದಲ್ಲಿ ಚೇತನರಾದ ಪುರುಷರುಗಳನ್ನೇ ದಾರಿಗಳಲ್ಲಿ ಹೊತ್ತುಕೊಂಡು ಹೋಗುವವರನ್ನಾಗಿ ನಿಯಮಿಸುತ್ತಾರೆ. ಎಂದು ಕೆಲವರೆನ್ನುವರು.

ದಿನ ಮುಂತಾದ ಕಾಲಗಳು ದಾರಿಗೆ ಗುರುತುಗಳಾಗಲಾರವಾದ್ದರಿಂದ, ಇವು ಭೋಗಭೂಮಿಗಳಾಗಿರಬೇಕು. ಹೋಗುವ ಉಪಾಸಕರು ಅಲ್ಲಲ್ಲಿಯೇ ತಂಗಿದ್ದು ಶ್ರಮ ಪರಿಹರಿಸಿಕೊಂಡು ಹೋಗಬೇಕೆಂದು ಕೆಲವರೆನ್ನುವರು.

"ಸ ಏತಾನ್ ಬ್ರಹ್ಮ ಗಮಯತಿ",—ಎಂದು ಉಪಾಸಕರನ್ನು ಆ ವಿದ್ಯುತ್ಪುರುಷ ಬ್ರಹ್ಮಲೋಕಕ್ಕೆ ಒಯ್ಯುತ್ತಾನೆಯೆಂದು ಹೇಳಿರುವುದರಿಂದ ಆ ವಿದ್ಯುತ್ಪುರುಷನಿಗೆ ಮುಂಚೆಯೂ ಆಮೇಲೆಯೂ ಹೇಳಲ್ಪಟ್ಟ ಅಗ್ನಿ ಮುಂತಾದವರುಗಳೂ ಆತಿವಾಹಿಕ (ಒಯ್ಯುತಕ್ಕವ) ರೆನ್ನುತ್ತಾರೆ ಸೂತ್ರಕಾರರು.

[ಉಭಯ ವ್ಯಾಮೋಹಾತ್ ತತ್ಸಿದ್ಧೇಃ]—ಎಂಬ ಸೂತ್ರವೊಂದು ಇವೆರಡರ ನಡುವೆ ಶಂಕರಭಾಷ್ಯದಲ್ಲಿದೆ]

### ಸೂತ್ರ ೨—ವೈದ್ಯುತೇನೈವ ತತಸ್ತಚ್ಛ್ರುತೇಃ

**ಸೂತ್ರಾರ್ಥ**

[ತಚ್ಛ್ರುತೇಃ] = ("ಸ ಏನಾನ್ ಬ್ರಹ್ಮ ಗಮಯತಿ"—ಆ ವಿದ್ಯುತ್ಪುರುಷನು ಈ ಉಪಾಸಕರುಗಳನ್ನು ಬ್ರಹ್ಮವನ್ನು ಹೊಂದಿಸುತ್ತಾನೆ—ಎಂಬ) ಆ ಶ್ರುತಿಯಿಂದ [ತತಃ] = ವಿದ್ಯುತ್ತಿಗೆ ಅನಂತರ, [ವೈದ್ಯುತೇನ. ಏವ] = ವಿದ್ಯುತ್ಪುರುಷನಿಂದಲೇ, (ಉಪಾಸಕ ಬ್ರಹ್ಮವನ್ನು ಹೊಂದುತ್ತಾನೆ. ಅದಕ್ಕೆ ಮೇಲಿರುವ ವರುಣ, ಇಂದ್ರ, ಬ್ರಹ್ಮ—ಇವರು ಆ ವಿದ್ಯುತ್ಪುರುಷನಿಗೆ ಸಹಾಯ ಮಾಡುತ್ತಾರೆಯೆಂದು ತಾತ್ಪರ್ಯ).

## 5. ಕಾರ್ಯಾಧಿಕರಣ

### ಸೂತ್ರ—ಕಾರ್ಯಂ ಬಾದರಿಃ ಅಸ್ಯಗತ್ಯುಪಪತ್ತೇಃ

**ಸಂಗತಿ**

ಈಗ, ಈ ಅರ್ಚಿರಾದಿಗಣ ಕಾರ್ಯಂ—ಎಂದರೆ ಹಿರಣ್ಯ ಗರ್ಭೋಪಾಸಕರನ್ನು ಒಯ್ಯುತ್ತಾರೆಯೇ? ಅಥವಾ ಪರಬ್ರಹ್ಮೋಪಾಸಕರನ್ನೇ, ಅಥವಾ ಪ್ರತ್ಯಗಾತ್ಮನನ್ನು ಪರಬ್ರಹ್ಮಾತ್ಮಕವಾಗಿ ಉಪಾಸಿಸುವರನ್ನೇ ಒಯ್ಯುತ್ತಾರೆಯೋ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಅಸ್ಯ] = ಈ ಉಪಾಸಕನಿಗೆ [ಗತ್ಯುಪಪತ್ತೇಃ] = ಗಮನ ಉಪಪನ್ನವಾಗುವುದರಿಂದ, [ಕಾರ್ಯಂ] = ಕಾರ್ಯವಾದ ಚತುರ್ಮುಖ ಬ್ರಹ್ಮನನ್ನು (ಸಗುಣ ಬ್ರಹ್ಮವನ್ನು—ಎಂದು ಶಂಕರಭಾಷ್ಯ) (ಉಪಾಸಿಸುವವರನ್ನೇ ಆತಿವಾಹಿಕರುಗಳು ಒಯ್ಯುವರು—ಎಂದು) [ಬಾದರಿಃ] = ಬಾದರಿಯೆಂಬುವರು (ಹೇಳುತ್ತಾರೆ).

**ವಿವರಣೆ**

ಚತುರ್ಮುಖ ಬ್ರಹ್ಮೋಪಾಸಕರು, ಪರಿಶುದ್ಧ ಜೀವಾತ್ಮೋಪಾಸಕರು, ಪರಬ್ರಹ್ಮೋಪಾಸಕರು ಎಂದು ಉಪಾಸಕರು ಮೂರು ಬಗೆ. ಇವರುಗಳಿಗೆ ತಾವು ಉಪಾಸಿಸುವ ಸ್ವರೂಪವೇ ತಮ ತಮಗೆ ಪ್ರಾಪ್ಯವಾಗಿರುವುದು. ಇವರುಗಳಲ್ಲಿ

ಯಾರನ್ನು ಆತಿವಾಹಿಕರು ಒಯ್ಯುತ್ತಾರೆ?—ಎಂದು ವಿಚಾರಿಸುವಲ್ಲಿ, ಪರಮಾತ್ಮೋಪಾಸಕನಿಗೆ ಪ್ರಾಪ್ಯವಾದ ಸ್ವರೂಪ ಎಲ್ಲೆಲ್ಲಿಯೂ ಪೂರ್ಣವಾಗಿ ನೆರೆದಿರುವುದರಿಂದ, ಅದಕ್ಕಾಗಿ ದೇಶಾಂತರಕ್ಕೆ ಹೋಗಬೇಕಿಲ್ಲ. ಅವನಿಗೆ ಅವಿದ್ಯೆಯ ನಿವೃತ್ತಿ ಮಾತ್ರವೇ ಬೇಕಾದ್ದು. ಮೊದಲಿನವನಿಗೆ ಪ್ರಾಪ್ಯವಾದ ಸ್ವರೂಪ ದೇಶಾಂತರದಲ್ಲಿರುವುದರಿಂದ ಅವನೇ ಹೋಗಬೇಕಾದವನು. ಅವನನ್ನೇ ಆತಿವಾಹಿಕರು ಒಯ್ಯುವರು—ಎಂದು ಬಾದರಿಯ ಮತ. ಇದು ಪೂರ್ವಪಕ್ಷ.

## ಸೂತ್ರ ೨—**ವಿಶೇಷಿತತ್ವಾಚ್ಚ**

### ಸೂತ್ರಾರ್ಥ

(ಬಹುವಚನಗಳಿಂದ ಪ್ರಾಪ್ಯವನ್ನು) ವ್ಯಾವರ್ತಿಸಿರುವುದರಿಂದಲೂ (ಈ ಅರ್ಥವೇ ಸರಿ)

### ವಿವರಣೆ

''ಪ್ರಜಾಪತೇಸ್ಸಭಾಂವೇಶ್ಮಪ್ರಪದ್ಯೇ''—ಎಂದು ಅರ್ಚಿರಾದಿ ದಾರಿಯಿಂದ ಹೋದವನು ಪ್ರಜಾಪತಿಯ ಸಭೆಯನ್ನು ಹೊಂದುತ್ತಾನೆ,—ಎಂದು ಹಿರಣ್ಯಗರ್ಭನಾದ ಬ್ರಹ್ಮನನ್ನು ಹೊಂದುವುದಾಗಿ ತಾನು ಅನುಸಂಧಾನ ಮಾಡುವುದರಿಂದಲೂ, ಆತಿವಾಹಿಕರು ಅವನನ್ನು ಹಿರಣ್ಯಗರ್ಭನಲ್ಲಿಗೇ ಒಯ್ಯುತ್ತಾರೆಯೆಂದರ್ಥವಾಗುತ್ತೆ. ''ಪುರುಷೋ ಮಾನವ ಏತ್ಯ ಬ್ರಹ್ಮಲೋಕಾನ್ ಗಮಯತಿ''—ಇತಿ ಬಹುವಚನವಾದ ಲೋಕ ಶಬ್ದದಿಂದಲೂ, ಲೋಕ ವಿಶೇಷವರ್ತಿಯಾದ ಹಿರಣ್ಯಗರ್ಭನ ಉಪಾಸಕರನ್ನೇ ಅಮಾನವನು ಅರ್ಚಿರಾದಿ ಮಾರ್ಗದಿಂದ ಅವನಲ್ಲಿಗೆ ಒಯ್ಯುತ್ತಾನೆಯೆಂದು ಅರ್ಥವಾಗುತ್ತೆ.

## ಸೂತ್ರ ೩—**ಸಾಮೀಪ್ಯಾತ್ತು ತದ್ವ್ಯಪದೇಶಃ**

### ಸೂತ್ರಾರ್ಥ

[ಸಾಮೀಪ್ಯಾತ್] = ಸಮೀಪದಲ್ಲಿರುವುದರಿಂದ [ತದ್ವ್ಯಪದೇಶಃ] = ''ಬ್ರಹ್ಮ''—ಎಂದು ಹೇಳಬಹುದು.

### ವಿವರಣೆ

''ಬ್ರಹ್ಮ ಗಮಯತಿ''—ಎಂದು ಬ್ರಹ್ಮಪದ ನಪುಂಸಕಲಿಂಗವಾಗಿರುವುದರಿಂದ, ಅದು ಪರಬ್ರಹ್ಮವನ್ನೇ ಹೇಳುವುದೇ ಹೊರತು ಮತ್ತೊಂದನ್ನು ಹೇಳದು. ಆಗ್ಗೆ ಪುಲ್ಲಿಂಗವಾಗಿ ''ಬ್ರಹ್ಮಾಣಂ ಗಮಯತಿ''—ಎಂದಿರಬೇಕಿತ್ತಲ್ಲವೆ?—ಎಂದಲ್ಲಿ, ''ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ''—ಎಂದು ಪರಬ್ರಹ್ಮದ ಆದಿ ಸೃಷ್ಟಿಯಾಗಿ ಅದಕ್ಕೆ ಅವ್ಯವಹಿತ ಕೆಳಗಿನ ಹಂತದಲ್ಲಿ ಇರುವುದರಿಂದ ಆ ಸಾಮೀಪ್ಯಕ್ಕಾಗಿ ಅದನ್ನು ಹೇಳುವ ಶಬ್ದದಿಂದ ಇದನ್ನು ಹೇಳಿದೆಯೆನ್ನುತ್ತಾರೆ.

ಸೂತ್ರ ೪—**ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮಭಿಧಾನಾತ್**

**ಸೂತ್ರಾರ್ಥ**

[ಕಾರ್ಯಾತ್ಯಯೇ] = ಕಾರ್ಯವಾದ ಬ್ರಹ್ಮಲೋಕದ ನಾಶ ಕಾಲದಲ್ಲಿ, [ತದಧ್ಯಕ್ಷೇಣ ಸಹ] = ಅದಕ್ಕೆ ಸ್ವಾಮಿಯಾದ ಚತುರ್ಮುಖನೊಂದಿಗೆ ಕೂಡಿ [ಅತಃ ಪರಂ] = ಇದಕ್ಕಿಂತ ಮೇಲಾದ ಬ್ರಹ್ಮ ಸ್ವರೂಪವನ್ನು (ಹೊಂದುತ್ತಾನೆ ಯೆಂದು) [ಅಭಿಧಾನಾತ್] = ಹೇಳುವುದರಿಂದ, (ವಿರೋಧವಿಲ್ಲ)

**ವಿವರಣೆ**

ಅರ್ಚಿರಾದಿ ಗತಿಯಿಂದ ಹೋದವನಿಗೆ "ಇಮಂ ಮಾನವ ಮಾವರ್ತಂ ನಾ ವರ್ತನ್ತೇ"—ಎಂದು ಪುನರಾವೃತ್ತಿಯಿಲ್ಲವೆಂಬುದಾಗಿ ಹೇಳಿದೆ. ಕಾರ್ಯರೂಪವಾದ ಬ್ರಹ್ಮಲೋಕ ನಿತ್ಯವಲ್ಲ. ಕೆಲವು ದಿನಗಳ ನಂತರ ನಶಿಸಿಬಿಡುವುದಾದ್ದರಿಂದ ಕಾರ್ಯ ಬ್ರಹ್ಮವನ್ನು ಹೊಂದುವುದಾಗಿ ಆ ಶ್ರುತಿ ಹೇಳುವುದೆನ್ನುವುದು ಸರಿಯಲ್ಲವೆಂದಲ್ಲಿ, ಉಪಾಸಕನು ಕಾರ್ಯರೂಪವಾದ ಬ್ರಹ್ಮಲೋಕದಲ್ಲಿ ಹೋಗಿದ್ದು, ಅಲ್ಲಿ ತತ್ತ್ವಜ್ಞಾನ ವನ್ನು ಪಡೆದು ಆ ಲೋಕ ನಶಿಸುವಾಗ ಅದಕ್ಕೆ ಅಧಿಪತಿಯಾದ ಬ್ರಹ್ಮನೊಂದಿಗೆ ಸರ್ವೋತ್ತಮವಾದ ವಿಷ್ಣು ಸ್ವರೂಪವನ್ನು ಹೊಂದುತ್ತಾನೆಯೆನ್ನುವುದರಿಂದ, ಮೇಲೆ ಹೇಳಿದ ಶ್ರುತಿಗೆ ವಿರೋಧವಿಲ್ಲವೆನ್ನುತ್ತಾರೆ. ("ಅಭಿಧಾನಾತ್"—ಪುನರಾವೃತ್ತಿಯಿಲ್ಲ ವೆನ್ನುವುದರಿಂದ ಈ ಅರ್ಥವನ್ನು ಹೀಗೆಯೇ ನಿಶ್ಚಯಿಸಬೇಕು—ಎಂದು ಆ ಪದವನ್ನು ಹೇತುವಾಚಕವಾಗಿ ಶಂಕರಭಾಷ್ಯದಲ್ಲಿ ಹೇಳಿದೆ.).

ಸೂತ್ರ ೫—**ಸ್ಮೃತೇಶ್ಚ**

**ಸೂತ್ರಾರ್ಥ**

"ಬ್ರಹ್ಮಣಾಸಹ ತೇ ಸರ್ವೇಸಂಪ್ರಾಪ್ತೇ ಪ್ರತಿಸಂಚರೇ ।
ಪರಸ್ಯಾನ್ತೇ ಕೃತಾತ್ಮಾನಃ ಪ್ರವಿಶನ್ತಿ ಪರಂ ಪದಂ ॥"—ಎಂಬ ಸ್ಮೃತಿ-ಯಿಂದಲೂ, (ಕಾರ್ಯ ಬ್ರಹ್ಮವನ್ನು ಹೊಂದಿದವರು ಆ ಬ್ರಹ್ಮದ ಅವಸಾನ ಕಾಲದಲ್ಲಿ ಆ ಲೋಕ ನಶಿಸುವಾಗ, ತತ್ತ್ವಜ್ಞಾನವನ್ನು ಪಡೆದು ಆ ಬ್ರಹ್ಮನೊಂದಿಗೇ ಪರಸ್ವರೂಪವನ್ನು ಹೊಂದುವರೆಂಬುದು ಸಿದ್ಧ). ಆದ್ದರಿಂದ ಆತಿವಾಹಿಕರು ಕಾರ್ಯ ಬ್ರಹ್ಮವನ್ನು ಉಪಾಸಕರಿಂದ ಹೊಂದಿಸುವರು—ಎನ್ನುತ್ತಾರೆ. [ಈ ಐದು ಸೂತ್ರ ಗಳೂ ಶಂಕರಭಾಷ್ಯ ಪೂರ್ವಪಕ್ಷ]

ಸೂತ್ರ ೬—**ಪರಂ ಜೈಮಿನಿರ್ಮುಖ್ಯತ್ವಾತ್**

**ಸೂತ್ರಾರ್ಥ**

[ಮುಖ್ಯತ್ವಾತ್] = (ಬ್ರಹ್ಮ ಶಬ್ದ) ಮುಖ್ಯವಾದುದರಿಂದ, [ಪರಂ] = ಪರ ಬ್ರಹ್ಮವನ್ನು (ಉಪಾಸಿಸುವವನನ್ನೇ ಆತಿವಾಹಿಕರು ಒಯ್ಯುವರು ಎಂದು) [ಜೈಮಿನಿಃ] = ಜೈಮಿನಿ ಹೇಳುತ್ತಾರೆ.

**ವಿವರಣೆ**

ಈಗ ಜೈಮಿನಿ ಹೇಳುವರು: ''ಬ್ರಹ್ಮಗಮಯತಿ'',—ಎಂಬಲ್ಲಿ ನಪುಂಸಕಲಿಂಗವಾದ ಬ್ರಹ್ಮ ಶಬ್ದ ಪರಬ್ರಹ್ಮದಲ್ಲಿ ಮುಖ್ಯವಾದುದರಿಂದಲೂ, ಆ ಪರಬ್ರಹ್ಮ ಸರ್ವ ವ್ಯಾಪಿಯಾದಾಗ್ಯೂ, ಉಪಾಸಕನಿಗೆ ಯಾಗಾದಿ ಸಹಕಾರಿಗಳಿಂದ ಉಪಾಸನೋತ್ಪತ್ತಿ ಯಂತೆ ಅವಿದ್ಯಾ ನಿವೃತ್ತಿರೂಪ ಮೋಕ್ಷವೂ ಪರಮಪದವೆಂಬ ದೇಶಾಂತರದಲ್ಲಿ ಹೋದ ಮೇಲೆಯೇ ಉಂಟಾಗುವುದೆಂಬುದು ಶಾಸ್ತ್ರಸಿದ್ಧವಾದುದರಿಂದಲೂ, ಪರ ಬ್ರಹ್ಮದಂತೆ ಅದರ ಮಹಿಮೆಯಿಂದ ಸೃಷ್ಟಿಸಲ್ಪಟ್ಟ ಅತ್ಯದ್ಭುತಗಳಾಗಿ ಶಾಸ್ತ್ರ ಸಿದ್ಧ ಗಳಾಗಿರುವ ಅನೇಕ ಲೋಕಗಳೂ ಪ್ರಾಪ್ಯವಾದುದರಿಂದ, ''ಬ್ರಹ್ಮ ಲೋಕಾನ್''— ಎಂಬ ಲೋಕ ಶಬ್ದದ ಬಹುವಚನಕ್ಕೆ ವಿರೋಧವಿಲ್ಲವಾದ್ದರಿಂದಲೂ, ಪರಬ್ರಹ್ಮವನ್ನು ಆತಿವಾಹಿಕರು ಉಪಾಸಕರಿಂದ ಹೊಂದಿಸುವರು ಎಂಬುದೇ ಉಚಿತವೆಂದು ಜೈಮಿನಿ ಹೇಳಿದರು

ಸೂತ್ರ ೭—**ದರ್ಶನಾಚ್ಚ**

**ಸೂತ್ರಾರ್ಥ**

''ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂಜ್ಯೋತಿರುಪ ಸಂಪದ್ಯಸ್ವೇನ ರೂಪೇಣಾಭಿನಿಷ್ಪದ್ಯತೇ''—ಅಂದರೆ, ಈ ಜೀವ ಶರೀರದಿಂದ ಹೊರ ಹೊರಟು ಪರಮಾತ್ಮಸ್ವರೂಪವನ್ನು ಹೊಂದಿ ಅವಿದ್ಯಾ ವಿನಿರ್ಮುಕ್ತನಾಗಿ ಸ್ವಸ್ವರೂಪ ವನ್ನು ಹೊಂದುವನು—ಎಂದು ಶ್ರುತಿ ಹೇಳುವುದರಿಂದಲೂ (ಇದೇ ಉಪಪನ್ನ).

ಸೂತ್ರ ೮—**ನ ಚ ಕಾರ್ಯೇ ಪ್ರತ್ಯಭಿಸನ್ಧಿಃ**

**ಸೂತ್ರಾರ್ಥ**

[ಕಾರ್ಯೇ] = ಕಾರ್ಯ ಬ್ರಹ್ಮ ವಿಷಯವಾದ [ಪ್ರತ್ಯಭಿಸನ್ಧಿಃ] = ಪ್ರತ್ಯ- ಭಿಜ್ಞೆ [ನ] = ಇಲ್ಲ.

**ವಿವರಣೆ**

''ಪ್ರಜಾಪತೇಸ್ಸಭಾಂವೇಶ್ಮ ಪ್ರಪದ್ಯೇ''—ಎಂದು ಉಪಾಸಕನು ಚತುರ್ಮುಖ ಬ್ರಹ್ಮಾನುಸಂಧಾನವನ್ನು ಮಾಡುವುದರಿಂದ ಇದು ಕಾರ್ಯ ಬ್ರಹ್ಮದ ವಿಷಯ ವೆಂಬುದು ಸರಿಯಲ್ಲ. ಮುಂದಿನ ವಾಕ್ಯದಲ್ಲಿ, ''ಯಶೋಽಹಂ ಭವಾಮಿ ಬ್ರಾಹ್ಮಣಾನಾಂ'' —ಎಂದು, ಸಕಲ ಅವಿದ್ಯೆಗಳೂ ನಶಿಸಿದ ಮೇಲೆ, ಸರ್ವವೂ ಪರಮಾತ್ಮ ಸ್ವರೂಪ ವೆಂದು ಅನುಸಂಧಾನಮಾಡುವುದರಿಂದಲೂ, ''ಅಶ್ವ ಇವರೋಮಾಣಿ ವಿಧೂಯ ಪಾಪಂ'',—ಅಂದರೆ ಕುದುರೆಯು ಕೂದಲನ್ನು ಒದರುವಂತೆ ಪಾಪವನ್ನು ಒದರಿ, ರಾಹುವಿನಿಂದ ಬಿಡಲ್ಪಟ್ಟ ಚಂದ್ರನಂತೆ, ಶರೀರವನ್ನು ಬಿಟ್ಟು, ನಿತ್ಯವಾದ ಬ್ರಹ್ಮ ಲೋಕವನ್ನು ಹೊಂದುತ್ತಾನೆಯೆಂದು ಸಾಕ್ಷಾತ್ ಅವಿದ್ಯಾ ನಿವೃತ್ತಿಯನ್ನು ಹೇಳಿ ಪ್ರಾಪ್ಯದೇಶವನ್ನು ನಿತ್ಯವೆಂದೂ ಹೇಳುವುದರಿಂದ, ಅದು ಪರಮಾತ್ಮ ವಿಷಯ ಆದ್ದರಿಂದ, ಪರಮಾತ್ಮಪ್ರಾಪ್ತಿಯನ್ನೇ ಹೇಳಿದೆಯೆನ್ನುತ್ತಾರೆ.

## ಸೂತ್ರ — ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣಃ ಉಭಯಥಾಚದೋಷಾತ್ತತ್ಕ್ರತುಶ್ಚ

### ಸೂತ್ರಾರ್ಥ

[ಉಭಯಥಾ ,ಚ] = (ಮೇಲೆ ಹೇಳಿದ) ಎರಡು ವಿಧಗಳಲ್ಲಿಯೂ, [ದೋಷಾತ್] = ದೋಷವಿರುವುದರಿಂದ, [ತತ್ಕ್ರತುಃ, ಚ] = ಉಪಾಸಕನು ಉಪಾಸನೆಗೆ ಅನುಗುಣವಾದ ಫಲವನ್ನು ಹೊಂದುವನು. [ಅಪ್ರತೀಕಾಲಂಬನಾನ್] = ಪ್ರತೀಕೋಪಾಸಕರಲ್ಲದ ಮಿಕ್ಕ ಉಪಾಸಕರನ್ನು [ನಯತಿ] = (ಆತಿವಾಹಿಕನು) ಹೊಂದಿಸುವನು— ಎಂದು, [ಬಾದರಾಯಣಃ] = ಬಾದರಾಯಣರು ಹೇಳುತ್ತಾರೆ.

### ವಿವರಣೆ

ಮೇಲೆ ಹೇಳಿದ ಮತಗಳೆರಡನ್ನೂ ಈ ಸೂತ್ರದಿಂದ ಹಿಡಿದು ನಿರಸನ ಮಾಡುತ್ತಾರೆ. (ಇದರ ಹಿಂದಿನ ಎಂಟು ಸೂತ್ರಗಳೂ ನಮ್ಮ ಸಿದ್ಧಾಂತಕ್ಕೆ ಪೂರ್ವಪಕ್ಷಗಳೆಂದಹಾಗಾಯಿತು). ಅವೆರಡು ಮತಗಳೂ ಸರಿಯಲ್ಲ. ಚತುರ್ಮುಖರೂಪವಾದ ಬ್ರಹ್ಮನ ಉಪಾಸಕನನ್ನು ಹೇಳುವ ಪಕ್ಷದಲ್ಲಿ, "ಅಸ್ಮಾತ್ ಶರೀರಾತ್ ಸಮುತ್ಥಾಯ ಪರಂಜ್ಯೋತಿರುಪಸಂಪದ್ಯಸ್ವೇನ ರೂಪೇಣಾಭಿನಿಷ್ಪದ್ಯತೇ"—(ಈ ಜೀವ ಈ ಶರೀರದಿಂದ ಹೊರಟು ಬ್ರಹ್ಮವನ್ನು ಸೇರಿ ಸ್ವಸ್ವರೂಪಾವಿರ್ಭಾವವನ್ನು ಹೊಂದುತ್ತಾನೆ—ಎಂಬ ವಾಕ್ಯ ಸರಿಹೋಗದು. ಪರಮಾತ್ಮೋಪಾಸನವನ್ನು ಮಾತ್ರ ಹೇಳಿದಲ್ಲಿ, "ಯೇಚೇಮೇಽರಣ್ಯೇ ಶ್ರದ್ಧಾತಪ ಇತ್ಯುಪಾಸತೇ ಅರ್ಚಿಷಮೇವಾಭಿ ಸಂಭವನ್ತಿ",—ಎಂದು ಪಂಚಾಗ್ನಿ ವಿದ್ಯೋಪಾಸಕನಿಗೂ ಅರ್ಚಿರಾದಿಗತಿಯನ್ನು ಹೇಳಿರುವುದು ಸರಿಹೋಗದು. ಆದ್ದರಿಂದ, ಪರಮಾತ್ಮೋಪಾಸಕನನ್ನೂ ಕೇವಲ ಪರಿಶುದ್ಧ ಜೀವಾತ್ಮ ಸ್ವರೂಪೋಪಾಸಕನನ್ನೂ—ಈ ಇಬ್ಬರನ್ನೂ ಆತಿವಾಹಿಕರು ಹೊಂದಿಸುವರು. ಪ್ರತೀಕೋಪಾಸಕನನ್ನು ಒಯ್ಯುವುದಿಲ್ಲ. ಅರ್ಚಿರಾದಿ ಗತಿಯಿಂದ ಹೋದವನಿಗೆ ಪರಮಾತ್ಮ ಸ್ವರೂಪವೂ ಬ್ರಹ್ಮಾತ್ಮಕ ಸ್ವಾತ್ಮಸ್ವರೂಪವೂ ಪ್ರಾಪ್ಯವಾಗುವುದು. ಪ್ರತೀಕೋಪಾಸಕನಿಗೆ ಇವೆರಡೂ ಇಲ್ಲ. "ಯಥಾಕ್ರತು ರಸ್ಮಿನ್ ಲೋಕೇ ಪುರುಷೋ ಭವತಿ",—ಇತ್ಯಾದಿ ಶ್ರುತಿ, ಇಲ್ಲಿ ಯಾವುದನ್ನು ಯಾವ ವಿಧವಾಗಿ ಉಪಾಸಿಸುತ್ತಾನೆಯೋ ಅಲ್ಲಿ ಹೋಗಿ ಅದನ್ನು ಆ ವಿಧವಾಗಿಯೇ ಅನುಸಂಧಿಸುತ್ತಾನೆ ಯೆನ್ನುತ್ತದೆ. ಪರಮಾತ್ಮೋಪಾಸಕನು ಸ್ವಾತ್ಮಕ ಬ್ರಹ್ಮವನ್ನೂ, ಪಂಚಾಗ್ನಿ ವಿದ್ಯೋಪಾಸಕನು ಬ್ರಹ್ಮಾತ್ಮಕ ಸ್ವಾತ್ಮವನ್ನೂ ಉಪಾಸಿಸುವುದರಿಂದ, ಅಲ್ಲಿ ಹೋಗಿ ಆ ವಿಧವಾದ ಅನುಭವವನ್ನೇ ಮಾಡುತ್ತಾನೆ. ಪ್ರತೀಕೋಪಾಸಕನು ನಾಮಾದಿ ಪ್ರತೀಕದಲ್ಲಿ ಬ್ರಹ್ಮಬುದ್ಧಿ, ಅಂದರೆ—ನಾಮಾದಿಯನ್ನು ಬ್ರಹ್ಮವನ್ನಾಗಿ ನೆನೆದು ಉಪಾಸಿಸುತ್ತಾನೆ. ಆ ಉಪಾಸನದಲ್ಲಿ ವಿಶೇಷ್ಯವಾಗಿಯಾಗಲಿ, ವಿಶೇಷಣವಾಗಿಯಾಗಲಿ, ಬ್ರಹ್ಮ ತೋರುವುದಿಲ್ಲವಾಗಿ, ಅವನಿಗೆ ಬ್ರಹ್ಮಾನುಭವವೂ ಅದಕ್ಕೆ ಕಾರಣವಾದ ಅರ್ಚಿರಾದಿ ಗತಿಯೂ ಇಲ್ಲವೆಂದು ಸಿದ್ಧಾಂತ.

## ಸೂತ್ರ ೧೦—ವಿಶೇಷಂ ಚ ದರ್ಶಯಂತಿ

### ಸೂತ್ರಾರ್ಥ

[ವಿಶೇಷಂ ಚ] = (ಇತರ ಉಪಾಸಕನಿಗಿಂತಲೂ) ವ್ಯಾವೃತ್ತಿಯನ್ನೂ [ದರ್ಶಯಂತಿ] = ಶ್ರುತಿ ತೋರಿಸುತ್ತದೆ.

### ವಿವರಣೆ

ನಾಮ, ವಾಕ್ಕು, ಮನಸ್ಸು ಮುಂತಾದ ಪ್ರಾಣ ಪರ್ಯಂತವಾದ ಪ್ರತೀಕೋಪಾಸನಗಳಲ್ಲಿ, ನಾಮೋಪಾಸನಕ್ಕಿಂತ ವಾಗುಪಾಸನಕ್ಕೆ, ಅದಕ್ಕಿಂತ ಮನಉಪಾಸನಕ್ಕೆ— ಹೀಗೆ ಮೇಲ್ಮೇಲೆ ಹೋಗುತ್ತಾ ಹೋಗುತ್ತಾ, ಒಂದಕ್ಕಿಂತ ಒಂದಕ್ಕೆ ಬಲವನ್ನು ಅಧಿಕವಾಗಿ ಹೇಳಿದೆ. ಪ್ರತೀಕಗಳೊಂದಕ್ಕೊಂದು ನ್ಯೂನಾಧಿಕಗಳಾದ್ದರಿಂದ ಫಲದಲ್ಲಿಯೂ ಭೇದವಿದೆ. ಬ್ರಹ್ಮವು ಸರ್ವೋತ್ಕೃಷ್ಟವಾಗಿ ಏಕರೂಪವಾಗಿರುವುದರಿಂದ, ಅದರಲ್ಲಿ ಫಲ ಭೇದವಿಲ್ಲ. ಇದಕ್ಕೆ ಅರ್ಚಿರಾದಿ ಗತಿಯಿಲ್ಲದೆಯೇ ಫಲಾನುಭವವನ್ನು ಹೇಳಿದೆ ಆದ್ದರಿಂದ, ಪ್ರತೀಕೋಪಾಸಕನಿಗೆ ಅರ್ಚಿರಾದಿ ಗತಿಯಿಲ್ಲ. ಪರಮಾತ್ಮೋಪಾಸಕನಿಗೂ ಪಂಚಾಗ್ನಿ ವಿದ್ಯಾನಿಷ್ಠನಿಗೂ—ಇವರಿಬ್ಬರಿಗೇ ಅರ್ಚಿರಾದಿ ಗತಿಯುಂಟು ಎಂದು ಸಿದ್ಧಾಂತ. "ಯಾವನ್ನಾಮ್ನೋಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ"—ಇತ್ಯಾದಿ ಶ್ರುತಿಯು ನಾಮಾದಿ ಪ್ರಾಣ ಪರ್ಯಂತವಾದ ಪ್ರತೀಕೋಪಾಸಕರಿಗೆ ಅರ್ಚಿರಾದಿ ಗತಿಯ ಅಗತ್ಯವಿಲ್ಲದೆ ದೇವಾದಿ ನಾಮಗಳಿಗೆ ಗೋಚರವಾದಷ್ಟು ಮಾತ್ರ ಪರಿಮಿತ ಫಲ ವಿಶೇಷವನ್ನು ತೋರಿಸುತ್ತದೆ. "ಬ್ರಹ್ಮಣಾ ಸಹ ತೇಸರ್ವೇ"—ಇತ್ಯಾದಿ ವಚನವೂ ಅರ್ಚಿರಾದಿ ಗತ ಪುರುಷರ ವಿಷಯವಲ್ಲ. ಇದು ಚತುರ್ಮುಖಿ ಲೋಕಸ್ಥ ಯೋಗಿಯ ವಿಷಯ.

"ತೇ ಬ್ರಹ್ಮಲೋಕೇತು ಪರಾನ್ತಕಾಲೇ..."—ಎಂಬಲ್ಲಿ, "ಬ್ರಹ್ಮೈವ ಲೋಕೋ ಬ್ರಹ್ಮಲೋಕಃ"—ಎಂದು ಕರ್ಮಧಾರಯ. ಅಲ್ಲಿರುವ ಬ್ರಹ್ಮನಿಷ್ಠರು, "ಅನ್ತಕಾಲೇಚ ಮಾಮೇವ ಸ್ಮರನ್ ಮುಕ್ತ್ವಾ ಕಳೇಬರಂ"—ಎಂಬಲ್ಲಿ ಹೇಳಿರುವ ಚರಮ ದೇಹಾವಸಾನ ಸಮಯದಲ್ಲಿ, "ಪರಾಮೃತಾತ್"—ಎಂದರೆ, ಪ್ರಸನ್ನವಾದ ಬ್ರಹ್ಮವನ್ನು ಹೊಂದಿ ಎಲ್ಲರೂ ಪರಿಮುಕ್ತರಾಗುತ್ತಾರೆ—ಎಂದರ್ಥ. ಅಂತಕಾಲ ಶಬ್ದಕ್ಕೆ ಚರಮ ದೇಹಾವಸಾನ ಪರತ್ವವು ಸ್ಮೃತಿ ಪ್ರಸಿದ್ಧ. ಆದ್ದರಿಂದ ಈ ಪಕ್ಷದಲ್ಲಿಯೇ ಸ್ವಾರಸ್ಯ. ಆದ್ದರಿಂದ ಅಚಿನ್ಮಿಶ್ರ ಅಥವಾ ಕೇವಲ ಅಚಿದ್ವಸ್ತುವನ್ನು ಬ್ರಹ್ಮದೃಷ್ಟಿಯಿಂದಲೂ. ಅದಿಲ್ಲದೆಯೂ, ಉಪಾಸಿಸುವವರನ್ನು ಆತಿವಾಹಿಕಗಣ ಬ್ರಹ್ಮಕ್ಕೆ ಒಯ್ಯುವುದಿಲ್ಲ. ಪರಬ್ರಹ್ಮೋಪಾಸಕರನ್ನೂ, ಪ್ರಕೃತಿವಿಯುಕ್ತನಾದ ತನ್ನನ್ನು ಬ್ರಹ್ಮಾತ್ಮವೆಂದು ಉಪಾಸಿಸುವವರನ್ನೂ—ಈ ಎರಡು ವಿಧದವರುಗಳನ್ನು ಮಾತ್ರವೇ ಆತಿವಾಹಿಕಗಣ ಒಯ್ಯುತ್ತವೆಯೆಂದು ಸಿದ್ಧ

## ಪಾದ ೪

## 1. ಸಂಪದ್ಯಾವಿರ್ಭಾವಾಧಿಕರಣ

### ಸೂತ್ರ—ಸಂಪದ್ಯಾವಿರ್ಭಾವಃ ಸ್ವೇನಶಬ್ದಾತ್

**ಸಂಗತಿ**

ಫಲಾಧ್ಯಾಯವೆಂಬ ಈ ನಾಲ್ಕನೆಯ ಅಧ್ಯಾಯದಲ್ಲಿ ಕಳೆದ ಮೂರು ಪಾದಗಳೊಳಗೆ, ಪ್ರಥಮ ಪಾದದಲ್ಲಿ ಬ್ರಹ್ಮೋಪಾಸಕನ ಪುಣ್ಯ ಪಾಪರೂಪ ಸಕಲ ಕರ್ಮಗಳ ನಿರಸನ ಹೇಳಲ್ಪಟ್ಟಿತು. ಎರಡನೆಯ ಪಾದದಲ್ಲಿ, ಸ್ಥೂಲ ದೇಹ ನಿವೃತ್ತಿರೂಪವಾದ ಫಲಪರ್ವ ಹೇಳಲ್ಪಟ್ಟಿತು. ಮೂರನೇ ಪಾದದಲ್ಲಿ ಸೂಕ್ಷ್ಮ ದೇಹ ನಿವೃತ್ತಿರೂಪ ಫಲಪರ್ವ ಪ್ರತಿಪಾದಿತವಾಯಿತು. ಈಗ ಈ ನಾಲ್ಕನೇ ಪಾದದಲ್ಲಿ, ವಿರಜಾಸ್ನಾನದಿಂದ ದೇಹ ಸಂಬಂಧ ಮತ್ತು ಅದರ ಸಂಬಂಧಾದಿ ರೂಪವಾದ ಸಕಲ ಉಪಾಧಿಗಳೂ ನಿರ್ಧೂತವಾದ ಮುಕ್ತನಿಗೆ ದೇಶ ಕಾಲಾದ್ಯುಪಾಧಿ ಶೂನ್ಯವಾದ ನಿರತಿಶಯ ಮಹಾನಂದ ಪ್ರಾಪ್ತಿಯು ಪ್ರತಿಪಾದಿತವಾಗಿದೆ.—ಹೀಗೆ ಪಾದ ಸಂಗತಿ.

ಇದರಲ್ಲಿ, ಮೊದಲನೆಯ ಮೂರು ಅಧಿಕರಣಗಳು ಸೇರಿ ಒಂದು ಪೇಟಿಕೆ—ಮುಂದಿನ ಮೂರು ಅಧಿಕರಣಗಳು ಸೇರಿ, ಮತ್ತೊಂದು ಪೇಟಿಕೆ—ಹೀಗೆ ಒಟ್ಟು ಎರಡು ಪೇಟಿಕೆಗಳಿವೆ.

ಮೊದಲನೆಯ ಪೇಟಿಕೆಯಲ್ಲಿ ಸ್ವಸ್ವರೂಪಾವಿರ್ಭಾವವೂ, ಎರಡನೆಯ ಪೇಟಿಕೆಯಲ್ಲಿ ಸ್ವಚ್ಛಂಧ ಕೈಂಕರ್ಯ ಭೋಗವೂ ವಿಚಾರ ಮಾಡಲ್ಪಟ್ಟಿವೆಯೆಂಬುದಾಗಿ—ಪೇಟಿಕಾ ಸಂಗತಿ.

ಸಕಲ ಪ್ರತಿಬಂಧಕವೂ ನಿಶ್ಶೇಷವಾಗಿ ನಿರಸ್ತವಾಗಲಾಗಿ., ಭಗವಂತನೇ ಜೀವನಿಗೆ ಗುಣಾಷ್ಟಕದ ಆವಿರ್ಭಾವಾದಿಗಳನ್ನು ತಾನೇ ಕೊಡುತ್ತಾನೆ. ಇದು ಕರ್ಮಾದ್ಯುಪಾಧಿ ಮೂಲಕವಲ್ಲ.

ಪ್ರಥಮಾಧಿಕರಣದಲ್ಲಿ—ಅರ್ಚಿರಾದಿ ಗತಿಯಿಂದ ಹೋಗಿ ಅಪುನರಾವೃತ್ತಿ ಲಕ್ಷಣವುಳ್ಳ ಮೋಕ್ಷ ಹೊಂದುವ ಮುಕ್ತರ ಐಶ್ವರ್ಯ ಪ್ರಕಾರವನ್ನು ಚಿಂತಿಸಲು ಆರಂಭಿಸಿ ಮೊದಲು ಮುಕ್ತನ ಸ್ವರೂಪವನ್ನು ನಿರೂಪಿಸುತ್ತಾರೆ.

**ಸೂತ್ರಾರ್ಥ**

[ಸ್ವೇನ ಶಬ್ದಾತ್] = 'ಸ್ವೇನ'—ಎಂಬ ಶಬ್ದದಿಂದ, (ವಿಶೇಷಿಸಿರುವುದರಿಂದ) [ಸಂಪದ್ಯ] = (ಪರಮಾತ್ಮನನ್ನು) ಸೇರಿ [ಆವಿರ್ಭಾವಃ] = ಸ್ವಸ್ವರೂಪಾವಿರ್ಭಾವ (ಪ್ರತಿಪಾದಿಸಲ್ಪಡುತ್ತೆ)

**ವಿವರಣೆ**

ಈ ಪಾದದಲ್ಲಿ ಮುಕ್ತೈಶ್ವರ್ಯವನ್ನು ನಿರೂಪಿಸುವುದಕ್ಕಾಗಿ ಮೊದಲು ಈ ಅಧಿಕರಣದಲ್ಲಿ ಮುಕ್ತನ ಸ್ವರೂಪವನ್ನು ನಿರೂಪಿಸುತ್ತಾರೆ;—"ಪರಂಜ್ಯೋತಿರುಪಸಂಪದ್ಯಸ್ವೇನ ರೂಪೇಣಾಭಿ ನಿಷ್ಪದ್ಯತೇ",—(ಈ ಶರೀರವನ್ನು ಬಿಟ್ಟು ಹೋಗಿ ಪರಮಾತ್ಮ

ನನ್ನು ಸೇರಿ ಸ್ವಸ್ವರೂಪದೊಡನೆ ಕೂಡಿದವನಾಗುತ್ತಾನೆ)—ಎಂಬಲ್ಲಿ; ಸ್ವರ್ಗವನ್ನು ಹೊಂದಿದವನಿಗೆ ದೇವಾದಿರೂಪವುಂಟಾಗುವಂತೆ, ಮುಕ್ತನಿಗೆ ಅಲ್ಲೊಂದು ರೂಪ ವುಂಟಾಗುವುದೆಂದೆ? ಅಥವಾ ತನಗೆ ಸ್ವಾಭಾವಿಕವಾಗಿಯುಳ್ಳ ಸ್ವರೂಪವೇ ಪ್ರಕಟ ವಾಗುತ್ತದೆಂದೆ?—ಎಂದಲ್ಲಿ,—ಮೋಕ್ಷವೂ ಫಲವಾದ್ದರಿಂದ, ಅಲ್ಲಿ ಬೇರೊಂದು ರೂಪ ಬರುವುದೆಂದೇ ಹೇಳಬೇಕು.—ಎಂದು ಪೂರ್ವಪಕ್ಷ.

ಅಲ್ಲಿ ಬೇರೊಂದು ರೂಪ ಉಂಟಾಗುವ ಪಕ್ಷದಲ್ಲಿ, ''ರೂಪೇಣಾಭಿನಿಷ್ಪದ್ಯತೇ'',—(ರೂಪದೊಂದಿಗೆ ಕೂಡಿದವನಾಗುತ್ತಾನೆ) ಎಂದಿಷ್ಟೇ ಸಾಕಾಗಿರುವಲ್ಲಿ, 'ಸ್ವೇನ',—(ತನ್ನ ಸ್ವಾಭಾವಿಕ ರೂಪದೊಂದಿಗೆ) ಎಂಬುದಕ್ಕೆ ಪ್ರಯೋಜನವಿಲ್ಲ. ಆದ್ದರಿಂದ ಮುಕ್ತನು ಸ್ವಸ್ವರೂಪಾವಿರ್ಭಾವವನ್ನು ಹೊಂದುತ್ತಾನೆಯೆಂದೇ ಆ ಶ್ರುತಿ ಹೇಳುವು ದೆಂದು ಸಿದ್ಧಾಂತ.

### ಸೂತ್ರ ೨—ಮುಕ್ತಃ ಪ್ರತಿಜ್ಞಾನಾತ್

**ಸೂತ್ರಾರ್ಥ**

[ಪ್ರತಿಜ್ಞಾನಾತ್] = (ಮುಕ್ತನ ನಿರೂಪಣವನ್ನೇ) ಪ್ರತಿಜ್ಞೆ ಮಾಡುವುದರಿಂದ, [ಮುಕ್ತಃ] = ಸಂಸಾರದಿಂದ ಬಿಡಲ್ಪಟ್ಟವನೇ (ಇಲ್ಲಿ ಪ್ರತಿಪಾದಿಸಲ್ಪಡುತ್ತಾನೆ).

**ವಿವರಣೆ**

ಸ್ವಾಭಾವಿಕವಾದ ರೂಪ ಯಾವಾಗಲೂ ಇರುವುದರಿಂದ, ಅದು ಫಲವಾಗ ಲಾರದು. ''ಅಭಿನಿಷ್ಪದ್ಯತೇ''—ಎಂಬುದಕ್ಕೆ ಉಂಟಾಗುತ್ತಾನೆ,—ಎಂದು ಅರ್ಥ ವಾಗುವುದರಿಂದ, ಅದೂ ಸ್ವರೂಪಾವಿರ್ಭಾವ ಪಕ್ಷದಲ್ಲಿ ಸರಿಹೋಗದು,—ಎಂದಲ್ಲಿ,—ರೋಗ ಕಳೆದ ಮೇಲೆ, ''ಅರೋಗೋ ನಿಷ್ಪದ್ಯತೇ'',—(ರೋಗ ಹೋದವನಾಗಿ ಯಾಗುತ್ತಾನೆ)—ಎಂದು ಉತ್ಪತ್ತಿಯಿಲ್ಲದೆಡೆಯಲ್ಲಿಯೂ ಕೂಡ ಪ್ರಯೋಗಿಸುವುದರಿಂದ ಇಲ್ಲಿ ಅವಿದ್ಯಾ ನಿವೃತ್ತಿಯನ್ನು ಹೇಳಲು ಕೂಡುವುದರಿಂದ, ಅದಕ್ಕೆ ವಿರೋಧವಿಲ್ಲ. ''ಇದು ಸಿದ್ಧಿಸಿತು'',—ಎನ್ನಬೇಕಾದ ಕಡೆ 'ಇದು ನಿಷ್ಪನ್ನವಾಯಿತು'—ಎನ್ನುವು ದರಿಂದ, ನಿಷ್ಪತ್ತಿಯೆಂದು ಸಿದ್ಧಿಗೂ ಹೆಸರಾಗಿ, ಸ್ವಸ್ವರೂಪ ಸಿದ್ಧಿಸಿತೆಂದರ್ಥ. ''ಏತಂ ತ್ವೇವ ತೇ ಭೂಯೋನು ವ್ಯಾಖ್ಯಾಸ್ಯಾಮಿ'',—ಎಂದು ಜಾಗರಿತ ಸ್ವಪ್ನ ಸುಷುಪ್ತಿ—ಗಳೆಂಬ ಮೂರು ಅವಸ್ಥೆಗಳಿಂದಲೂ ಬಿಡಲ್ಪಟ್ಟವನಾಗಿ ಜೀವಸ್ವರೂಪವನ್ನು ಹೇಳು ವುದಾಗಿ, ಆದಿಯಲ್ಲಿ ಪ್ರತಿಜ್ಞೆ ಮಾಡುವುದರಿಂದ, ಇಲ್ಲಿ ಅನಾದಿಯಾದ ಸಂಸಾರದಿಂದ ಬಿಡಲ್ಪಟ್ಟು ಸ್ವಸ್ವರೂಪದೊಂದಿಗಿರುವವನನ್ನೇ ಇಲ್ಲಿಯೂ ಹೇಳಿದೆಯೆನ್ನುತ್ತಾರೆ.

### ಸೂತ್ರ ೩—ಆತ್ಮಾ ಪ್ರಕರಣಾತ್

**ಸೂತ್ರಾರ್ಥ**

[ಪ್ರಕರಣಾತ್] = ಆತ್ಮ ಪ್ರಕರಣವಾದ್ದರಿಂದ, [ಆತ್ಮಾ] = (ಪರಮಪುರು ಷಾರ್ಥರೂಪವಾದ) ಆತ್ಮಾ (ಪ್ರತಿಪಾದಿಸಲ್ಪಡುತ್ತಾನೆ).

**ವಿವರಣೆ**

ಸ್ವಸ್ವರೂಪವು ಸುಷುಪ್ತಿಯಲ್ಲಿಯೂ ಉಂಟಾಗುವುದರಿಂದ, ಆಗ ಪುರುಷಾರ್ಥ ವಾಗಿ ಕಾಣದುದರಿಂದ ಸ್ವಸ್ವರೂಪಾವಿರ್ಭಾವ ಮೋಕ್ಷವೆಂಬ ಶಾಸ್ತ್ರ ಪುರುಷಾರ್ಥ ಪ್ರತಿಪಾದಕವಾಗದಲ್ಲವೆ? ಎಂದಲ್ಲಿ, ಆತ್ಮಸ್ವರೂಪವು ಅಪಹತಪಾಪ್ಮತ್ವಾದಿ ಗುಣಗಳ ನ್ನುಳ್ಳದಾಗಿ ನಿರತಿಶಯಾನಂದ ರೂಪವಾಗಿರುವುದು. ಆ ಸ್ವರೂಪವು ಅನಾದಿಯಾದ ಅವಿದ್ಯೆಯಿಂದ ಮರೆಯಾಗಿರುವುದರಿಂದ ಸುಷುಪ್ತ್ಯಾದಿಗಳಲ್ಲಿ ತೋರದು. ಪರಮಾತ್ಮ ನನ್ನು ಹೊಂದಿದ ಮೇಲೆ ಅವಿದ್ಯೆ ಕಳೆಯುವುದರಿಂದ, ಸ್ವಾಭಾವಿಕ ರೂಪ ಪ್ರಕಾಶಿ ಸುವುದು. ಇವನಿಗೆ ಇದೇ ಸ್ವರೂಪವೆಂಬುದು. ಇದು ''ಯ ಆತ್ಮಾ ಅಪಹತಪಾಪ್ಮಾ ವಿಜರಃ''—ಇತ್ಯಾದಿ ವಾಕ್ಯಗಳಿಂದ ಸಿದ್ಧಿಸುವುದು. ಈ ವಿಧವಾದ ಸ್ವರೂಪವು ನಿರತಿ ಶಯ ಪುರುಷಾರ್ಥರೂಪವಾದ್ದರಿಂದ, ಶಾಸ್ತ್ರವು ಪುರುಷಾರ್ಥ ಪ್ರತಿಪಾದಕವಾಗಲು ಕೊರತೆಯಿಲ್ಲವೆನ್ನುತ್ತಾರೆ.

## 2. ಅವಿಭಾಗೇನ ದೃಷ್ಟತ್ವಾಧಿಕರಣ

### ಸೂತ್ರ—ಅವಿಭಾಗೇನ ದೃಷ್ಟತ್ವಾತ್

**ಸಂಗತಿ**

ಮುಕ್ತನು ತನ್ನನ್ನು ಪರಮಾತ್ಮನಿಂದ ಬೇರ್ಪಟ್ಟವನನ್ನಾಗಿ ಅನುಭವಿಸುತ್ತಾ ನೆಯೆ? ಅಥವಾ, ಅವನಿಗೆ ಪ್ರಕಾರವಾಗಿದ್ದುಕೊಂಡು ಅವಿಭಕ್ತನನ್ನಾಗಿ ಅನುಭವಿಸು ತ್ತಾನೆಯೆ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ದೃಷ್ಟತ್ವಾತ್] = (ಸ್ವಸ್ವರೂಪ) ಕಾಣಲ್ಪಟ್ಟದ್ದಾದ್ದರಿಂದ, [ಅವಿಭಾಗೇನ] = ವಿಭಾಗವಿಲ್ಲದೆಯೇ, (ಅನುಭವಿಸುತ್ತಾನೆ).

**ವಿವರಣೆ**

ಜೀವನು ಮುಕ್ತನಾದ ಮೇಲೆ ತನ್ನನ್ನು ಎಂಥವನನ್ನಾಗಿ ಅನುಭವಿಸುತ್ತಾನೆ?— ಎಂದಲ್ಲಿ, ''ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ',— (ಬ್ರಹ್ಮದೊಂದಿಗೆ ಕೂಡಿದವನಾಗಿದ್ದುಕೊಂಡು ಸಮಸ್ತ ಕಾಮಗಳನ್ನೂ ಅನುಭವಿ ಸುತ್ತಾನೆ)—ಎನ್ನುವುದರಿಂದಲೂ, ''ಪರಮಂ ಸಾಮ್ಯಮುಪೈತಿ'',—ಎಂದು ಇವನನ್ನು ಪರಮಾತ್ಮನಿಗೆ ಸಮಾನವಾಗಿ ಹೇಳುವುದರಿಂದಲೂ, ಪರಮಾತ್ಮನಂತೆ ತನ್ನನ್ನೂ ಒಬ್ಬನನ್ನಾಗಿ ಬೇರೆಯಾಗಿ ಅನುಭವಿಸುತ್ತಾನೆ—ಎಂದು ಪೂರ್ವಪಕ್ಷ.

ಆತ್ಮನು ಪರಮಾತ್ಮನಿಗೆ ಶರೀರವಾಗಿ ಯಾವಾಗಲೂ ಅವನೊಂದಿಗೆ ಸೇರಿಯೇ ಇರುವನು. ಇದು ಸಂಸಾರ ದಶೆಯಲ್ಲಿ, ಅಜ್ಞಾನದಿಂದ ಕಾಣುವುದಿಲ್ಲ. ಅದರಿಂದ ತನ್ನನ್ನೂ ಪರಮಾತ್ಮನನ್ನೂ ಬೇರೆ ಬೇರೆಯಾಗಿ ಕಾಣುತ್ತಾನೆ. ಪರಮಾತ್ಮೋಪಾಸನ ದಿಂದ ಆ ಅಜ್ಞಾನ ನಶಿಸಿದ ಮೇಲೆ ಯಥಾವಸ್ಥಿತ ರೂಪ ಕಾಣುವುದರಿಂದ ಪರಮಾತ್ಮ ನನ್ನೂ ತನ್ನನ್ನೂ ಬೇರೆ ಬೇರೆಯಾಗಿ ಕಾಣವುದಿಲ್ಲ. ಅವನಿಗೆ ಶರೀರವಾದ ತನ್ನನ್ನು ಅವನೊಡನೆ ಒಂದಾಗಿಯೇ ಅನುಸಂಧಾನ ಮಾಡುತ್ತಾನೆ. ''ಸೋಽಶ್ನುತೇ' —

ಎಂಬ ಶ್ರುತಿಗೆ ಪರಮಾತ್ಮನೊಂದಿಗೆ, ಅಂದರೆ, ಪರಮಾತ್ಮನನ್ನೂ ಅವನ ಗುಣಗಳನ್ನೂ ಅನುಭವಿಸುತ್ತಾನೆಯೆಂದರ್ಥ. ಪರಮಾತ್ಮನೊಂದಿಗೆ ಸಮಾನವಾಗಿದ್ದಾನೆಯೆಂಬು ದಕ್ಕೆ ಸಿಂಹದಂಥ ಪುರುಷ ಸಿಂಹಕ್ಕಿಂತ ಬೇರ್ಪಟ್ಟಿರುವ ಹಾಗೆ ಇವನು ಇದ್ದಾನೆಯೆಂದು ಅರ್ಥವಲ್ಲ. ಪರಮಾತ್ಮನಿಗಿರುವ ಅಪಹತಪಾಪ್ಮತ್ವಾದಿ ಗುಣಗಳೂ ಇವನಿಗೆ ಉಂಟೆಂದರ್ಥ. ಆದ್ದರಿಂದ ಅದಕ್ಕೆ ವಿರೋಧವಿಲ್ಲವೆಂದು ಸಿದ್ಧಾನ್ತ.

## 3. ಬ್ರಾಹ್ಮಾಧಿಕರಣ

### ಸೂತ್ರ—ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ

**ಸಂಗತಿ**

ಇದಕ್ಕೆ ಪ್ರಥಮಾಧಿಕರಣದೊಡನೆ ಸಂಗತಿ;—ಅಲ್ಲಿ ಪರಂಜ್ಯೋತಿಸ್ಸನ್ನು ಹೊಂದಿ ತಿರೋಧಾನವನ್ನು ಕಳೆದುಕೊಂಡು ಪ್ರತ್ಯಗಾತ್ಮನಿಗೆ ಸ್ವಸ್ವರೂಪಾವಿರ್ಭಾವವನ್ನು ಹೇಳಿ ದರು. ಅಲ್ಲಿ ಯಾವ ಸ್ವರೂಪದಿಂದ ಆವಿರ್ಭವಿಸುತ್ತಾನೆರಿಯೋ ಆ ಸ್ವರೂಪ, ಶ್ರುತಿ ವೈವಿಧ್ಯದ ಕಾರಣ, ಈಗ ವಿಚಾರ ಮಾಡಲ್ಪಡುತ್ತೆ—ಯೆಂದು ಸಂಗತಿ.

**ಸೂತ್ರಾರ್ಥ**

[ಉಪನ್ಯಾಸಾದಿಭ್ಯಃ] = ಉಪನ್ಯಾಸ (ಹೇಳುವುದು) ಮುಂತಾದುದರಿಂದ, [ಬ್ರಾಹ್ಮೇಣ] = ಬ್ರಹ್ಮ ಸಂಬಂಧಿಯಾದ ಗುಣದೊಡನೆ (ಮುಕ್ತಿಯಲ್ಲಿ ಆವಿರ್ಭ ವಿಸುತ್ತಾನೆ)—ಎಂದು [ಜೈಮಿನಿಃ] = ಜೈಮಿನಿ ಹೇಳುತ್ತಾರೆ.

**ವಿವರಣೆ**

ಮುಕ್ತಿಯಲ್ಲಿ ಜೀವನಿಗೆ ಆವಿರ್ಭವಿಸುವುದು ಅಪಹತಪಾಪ್ಮತ್ವಾದಿ ಗುಣಗಳೇ? ಅಥವಾ, ಚೈತನ್ಯ ಸ್ವರೂಪ (ವಿಜ್ಞಾನ) ಮಾತ್ರವೇ? ಅಥವಾ ಎರಡೂನೋ?—ಎಂದಲ್ಲಿ,—ಪ್ರಜಾಪತಿ ವಾಕ್ಯದಲ್ಲಿ ಜೀವನಿಗೆ "ಅಪಹತಪಾಪ್ಮಾ",—ಎಂದು ತೊಡಗಿ "ಸತ್ಯ ಸಂಕಲ್ಪಃ",—ಎನ್ನುವುದರವರಿಗೂ, ಬ್ರಹ್ಮಕ್ಕೆ ಉಂಟಾದ ಅಪಹತಪಾಪ್ಮತ್ವ, ಜ್ಞಾನ, ಸತ್ಯಕಾಮತ್ವ,—ಮುಂತಾದ ಗುಣಗಳನ್ನು ಹೇಳುವುದರಿಂದ ಆ ಗುಣಗಳೇ ಆವಿರ್ಭವಿಸುವುವು. ಜ್ಞಾನ ಆತ್ಮನಿಗೆ ಸ್ವರೂಪವಲ್ಲ. ಆದರೆ ಅದರಲ್ಲಿ ಗುಣಗಳಿರು ವುದಿಲ್ಲ. ಇದರಿಂದ ಅದು ಜಡ ಎನ್ನಬೇಕಾದ್ದರಿಂದ, ಅಜ್ಞಾನ ಸ್ವರೂಪಕ್ಕೆ ಆವಿರ್ಭಾವ ವಿಲ್ಲವೆನ್ನುತ್ತಾರೆ—ಜೈಮಿನಿ. ಅಪಹತಪಾಪ್ಮತ್ವಾದಿಯೇ ಜೀವನಿಗೆ ಸ್ವರೂಪ ವಾದ್ದರಿಂದ ಆ ರೂಪದಿಂದಲೇ ಇವನು ಆವಿರ್ಭವಿಸುತ್ತಾನೆಯೆಂದು ಭಾವ. 'ಬ್ರಾಹ್ಮೇಣ' —ಎಂದರೆ ಬ್ರಹ್ಮಸಂಬಂಧಿಯಾದ ಅಪಹತಪಾಪ್ಮತ್ವಾದಿಗುಣಗಳೊಂದಿಗೆ—ಎಂದರ್ಥ 'ಆದಿ'–ಶಬ್ದಕ್ಕೆ ಸತ್ಯಸಂಕಲ್ಪತ್ವಾದಿಗುಣಾಧೀನವಾದ "ಜಕ್ಷತ್ಕ್ರೀಡನ್‌ರಮ ಮಾಣಃ" ಇತ್ಯಾದಿ ವಾಕ್ಯದಿಂದ ತಿಳಿಯುವ ವ್ಯವಹಾರಗಳೂ ಅರ್ಥ. ಆದ್ದರಿಂದ ವಿಜ್ಞಾನ ಮಾತ್ರ ಸ್ವರೂಪತ್ವವು ಪ್ರತ್ಯಗಾತ್ಮನಿಗೆ ಸಂಭವಿಸುವುದಿಲ್ಲ.

ಸೂತ್ರ ೨—**ಚಿತಿತನ್ಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ**

**ಸೂತ್ರಾರ್ಥ**

[ತದಾತ್ಮಕತ್ವಾತ್] = ಚೈತನ್ಯ ಆತ್ಮನಿಗೆ ಸ್ವರೂಪವಾದ್ದರಿಂದ, [ಚಿತಿ ತನ್ಮಾತ್ರೇಣ] = ಚೈತನ್ಯಮಾತ್ರ ಸ್ವರೂಪದೊಂದಿಗೆ (ಆವಿರ್ಭವಿಸುತ್ತಾನೆ) [ಇತಿ] = ಹೀಗೆಂದು [ಔಡುಲೋಮಿಃ] = ಔಡುಲೋಮಿ ಹೇಳುತ್ತಾರೆ.

**ವಿವರಣೆ**

"ಸ ಯಥಾ ಸೈನ್ಧವ ಘನಃ... —ಎಂದು ತೊಡಗಿ. "ವಿಜ್ಞಾನ ಘನ ಏವ",— ಎನ್ನುವುದರವರಿಗೆ ಉಪ್ಪಿನ ಹರಳು ಒಳಗೂ ಹೊರಗೂ ಎಲ್ಲೆಲ್ಲಿಯೂ ಬೇರೊಂದು ರಸವಿಲ್ಲದೆ ಉಪ್ಪಾಗಿಯೇ ಇರುವಂತೆ, ಆತ್ಮನೂ ಒಳಗೂ ಹೊರಗೂ. ಎಲ್ಲೆಲ್ಲಿಯೂ ಬೇರೊಂದು ಗುಣವಿಲ್ಲದೆ ಜ್ಞಾನಮಯವಾಗಿಯೇ ಇರುತ್ತಾನೆಯೆನ್ನುವುದರಿಂದ, ಜ್ಞಾನವೇ ಅವನಿಗೆ ಸ್ವರೂಪ. ಅದೇ ಮುಕ್ತಿಯಲ್ಲಿ ಆವಿರ್ಭವಿಸುತ್ತದೆ. ಅಪಹತ-ಪಾಪ್ಮತ್ವಾದಿಗಳು ಸ್ವರೂಪವಲ್ಲ—ಎಂಬುದು ಔಡುಲೋಮಿಯ ಮತ.

ಸೂತ್ರ ೩—**ಏವಮಪ್ಯುಪನ್ಯಾಸಾತ್ ಪೂರ್ವಭಾವಾದವಿರೋಧಂ ಬಾದರಾಯಣಃ**

**ಸೂತ್ರಾರ್ಥ**

[ಏವಂ, ಅಪಿ] = ಹೀಗೆ ಆತ್ಮನು ಜ್ಞಾನ ಸ್ವರೂಪನಾಗಿದ್ದಾಗ್ಯೂ, [ಉಪನ್ಯಾಸಾತ್] = (ಮಿಕ್ಕ ಗುಣಗಳನ್ನೂ) ಹೇಳುವುದರಿಂದ, [ಪೂರ್ವ ಭಾವಾತ್] = ಮೊದಲು ಹೇಳಿದವುಗಳಿಗೂ ಸ್ಥಿತಿಯುಂಟಾದ್ದರಿಂದ. [ಅವಿರೋಧಂ] = ವಿರೋಧ ವಿಲ್ಲದಿರುವಿಕೆಯನ್ನು [ಬಾದರಾಯಣಃ] = ಬಾದರಾಯಣರು ಹೇಳುತ್ತಾರೆ.

**ವಿವರಣೆ**

ಆತ್ಮನು ಜ್ಞಾನ ಸ್ವರೂಪನಾದಾಗ್ಯೂ, "ಯ ಆತ್ಮಾ ಅಪಹತಪಾಪ್ಮಾ",— ಇತ್ಯಾದಿ ಶ್ರುತಿ ಮಿಕ್ಕ ಗುಣಗಳನ್ನೂ ಹೇಳುವುದರಿಂದ, ಅವುಗಳನ್ನು ಒಪ್ಪಿಕೊಳ್ಳಬೇಕು. ಎರಡು ಶ್ರುತಿಗಳಲ್ಲಿ ಒಂದನ್ನು ಪ್ರಮಾಣವಾಗಿ ಮಾಡಿ ಮತ್ತೊಂದನ್ನು ಅಪ್ರಮಾಣ ವಾಗಿ ಮಾಡಕೂಡದು. ಆತ್ಮನ ಸ್ವರೂಪ ಜ್ಞಾನವಾಗಿ, ಅದಕ್ಕೆ ಅಪಹತಪಾಪ್ಮತ್ವಾದಿ ಗಳು ಗುಣಗಳಾಗಿರುವುವು. ಉಪ್ಪಿನ ಹರಳು ಲವಣ ರಸಮಯವೇ ಎಂದಲ್ಲಿ, ಮಿಕ್ಕ ಗುಣಗಳಿಲ್ಲವೆಂದಲ್ಲ. ಜ್ಞಾನವೆಂಬುದು ಸ್ವಯಂಪ್ರಕಾಶ. ಅದರಲ್ಲಿ ಪ್ರಕಾಶಿಸದ ಜಾಗವಿಲ್ಲವೇದೇ ಅದಕ್ಕೆ ಅರ್ಥ. ಆದ್ದರಿಂದ ಮುಕ್ತಿಯಲ್ಲಿ ಎರಡು ಸ್ವರೂಪವೂ ಆವಿರ್ಭವಿಸುವುದು—ಎಂಬುದರಲ್ಲಿ ವಿರೋಧವಿಲ್ಲವೆಂದು ಭಗವದ್ವ್ಯಾಸರು ತಮ್ಮ ಮತ ವನ್ನು ಪ್ರಕಾಶಪಡಿಸಿದ್ದಾರೆ.

## 4. ಸಂಕಲ್ಪಾಧಿಕರಣ

ಸೂತ್ರ—**ಸಂಕಲ್ಪಾದೇವ ತ ಚ್ಛ್ರುತೇಃ**

**ಸಂಗತಿ**

ಮುಕ್ತನು ಪರಬ್ರಹ್ಮ ಸಂಪತ್ತಿಯನ್ನು ಹೊಂದಿ, ಜ್ಞಾನಸ್ವರೂಪನಾಗಿ ಅಪಹತ-ಪಾಪ್ಮತ್ವಾದಿ ಸತ್ಯ ಸಂಕಲ್ಪತ್ವ ಪರ್ಯಂತ ಗುಣಕನಾಗಿ ಆವಿರ್ಭವಿಸುತ್ತಾನೆಯೆನ್ನ

ಲಾಯಿತು. ಅರದ ಮೇಲೆ ಈಗ ಸತ್ಯಸಂಕಲ್ಪತ್ವ ಪ್ರಯುಕ್ತ ವ್ಯವಹಾರಗಳು ಶ್ರುತವಾಗುತ್ತವೆ.

**ಸೂತ್ರಾರ್ಥ**

[ತಚ್ಛ್ರುತೇಃ] = ಆ ಅರ್ಥವನ್ನು ಶ್ರುತಿ ಹೇಳುವುದರಿಂದ, [ಸಂಕಲ್ಪಾತ್, ಏವ] = ಸಂಕಲ್ಪದಿಂದಲೇ (ಉಂಟಾಗುವುವು).

**ವಿವರಣೆ**

"ಸ ಯದಾ ಪಿತೃ ಲೋಕ ಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಸ್ಸಮುತ್ತಿಷ್ಠನ್ತಿ"—ಎಂದೂ," ಜಕ್ಷತ್ಕ್ರೀಡನ್ ರಮಮಾಣಃ,—ಎಂದೂ ಮುಕ್ತನು ತನ್ನ ಪಿತೃಗಳೊಂದಿಗೆ ಕಲೆತಿರಲು ಬಯಸಿದಲ್ಲಿ, ತನ್ನ ಸಂಕಲ್ಪದಿಂದಲೇ ಅವರುಗಳು ಎದ್ದು ಬರುತ್ತಾರೆ. ಇಚ್ಛೆಯುಂಟಾದಲ್ಲಿ ಸ್ತ್ರೀಯರೊಂದಿಗೂ ವಾಹನಗಳೊಂದಿಗೂ ಯಥೇಚ್ಛವಾಗಿ ಕ್ರೀಡಿಸುವನು—ಎಂದು ಹೇಳಿದೆ. ಅವುಗಳನ್ನು ಪಡೆಯಲು ಸಂಕಲ್ಪವೇ ಸಾಕೇ? ಇನ್ನೂ ಕೆಲವು ಪ್ರಯತ್ನವನ್ನೂ ಮಾಡಬೇಕೆ?—ಎಂದಲ್ಲಿ, ರಾಜನು ಸತ್ಯ-ಸಂಕಲ್ಪನಾಗಿದ್ದಾಗ್ಯೂ, ಯಾವುದನ್ನಾದರೂ ಪಡೆಯಬೇಕಾದರೆ ಕೆಲವು ಪ್ರಯತ್ನಗಳನ್ನು ಮಾಡಬೇಕಾಗಿರುವಂತೆ, ಮುಕ್ತನಿಗೂ ಕೆಲವು ಪ್ರಯತ್ನಗಳು ಬೇಕಾಗಿರುವುವು—ಎಂದು ಪೂರ್ವಪಕ್ಷ. "ಸಂಕಲ್ಪಾದೇವ",—(ಸಂಕಲ್ಪದಿಂದಲೇ) ಅವರು ಅವುಗಳನ್ನು ಹೊಂದುವುದಾಗಿ ಅವಧಾರಣ ಮಾಡಿ ಹೇಳಿರುವುದರಿಂದ ಬೇರೊಂದು ಕಾರಣವಿಲ್ಲವೆಂದು ಏರ್ಪಡುವುದು. ಬೇರೊಂದು ಕಾರಣ ಉಂಟೆಂಬುದಕ್ಕೆ ಪ್ರಮಾಣವಿಲ್ಲ. ಸಂಸಾರಿಗಳಿಗೆ ಸತ್ಯಸಂಕಲ್ಪತ್ವ ಇಲ್ಲವಾದ್ದರಿಂದ, ರಾಜನ ದೃಷ್ಟಾಂತ ಹೇಳಕೂಡದು. ಆದ್ದರಿಂದ ಸತ್ಯಸಂಕಲ್ಪತ್ವ ಮಾತ್ರದಿಂದಲೇ ಮುಕ್ತನು ಸಮಸ್ತ ವಸ್ತುಗಳನ್ನೂ ಪಡೆಯುತ್ತಾನೆಯೆಂದು ಸಿದ್ಧಾನ್ತ.

ಸೂತ್ರ ೨—**ಅತ ಏವಚಾನನ್ಯಾಧಿಪತಿಃ**

**ಸೂತ್ರಾರ್ಥ**

[ಅತಃ ಏವ] = ಮುಕ್ತನು ಸತ್ಯಸಂಕಲ್ಪನಾದ್ದರಿಂದಲೇ [ಅನನ್ಯಾಧಿಪತಿಃ, ಚ] = ಬೇರೊಂದನ್ನು ನಿಯಾಮಕನಾಗಿ ಉಳ್ಳವನಲ್ಲ "ಅನ್ಯಾಧಿಪತಿ"—ಎಂದರೆ, ಶಾಸ್ತ್ರದಲ್ಲಿ ಹೇಳಿರುವ ವಿಧಿ–ನಿಷೇಧಗಳಿಗೆ ಕಟ್ಟು ಬಿದ್ದಿರುವವನೆಂದರ್ಥ. ಹಾಗೆ ಕಟ್ಟಲ್ಪಟ್ಟರೆ, ಇವನು ಸತ್ಯಸಂಕಲ್ಪನಾಗಲಾರನು. ಅಂದರೆ, ನೆನೆದಹಾಗೆಲ್ಲಾ ಮಾಡಲಾರನು. ಇವನನ್ನು ಸತ್ಯಸಂಕಲ್ಪನೆನ್ನುವುದರಿಂದ, ಅನನ್ಯಾಧಿಪತಿಯೆಂಬುದೂ ಸಿದ್ಧ. ಅನ್ಯಾಧಿಪತಿಯುಳ್ಳದವನು ಅನನ್ಯಾಧಿಪತಿ.

## 5. ಅಭಾವಾಧಿಕರಣ

ಸೂತ್ರ—**ಅಭಾವಂ ಬಾದರಿರಾಹಹ್ಯೇವಂ**

**ಸಂಗತಿ**

ಮುಕ್ತನಿಗೆ ದೇಹೇಂದ್ರಿಯಾದಿಗಳಿವೆಯೆ? ಅಥವಾ ಇಲ್ಲವೆ? ಅಥವಾ ಇದೆ ಮತ್ತು ಇಲ್ಲವೆನ್ನುವುದು ಅವನ ಸಂಕಲ್ಪಾನುಸಾರವೆಂತಲೆ?—ಎಂಬ ಶಂಕೆಯಿಂದ ಸಂಗತಿ.

**ಸೂತ್ರಾರ್ಥ**

[ಬಾದರಿಃ] = ಬಾದರಿಯೆಂಬುವರು [ಅಭಾವಂ] = (ಮುಕ್ತನಿಗೆ ಶರೀರೇಂದ್ರಿಯಗಳು) ಇಲ್ಲವೆಂಬುದನ್ನು (ಹೇಳಿದ್ದಾರೆ) [ಏವಂ] = ಹೀಗೆಯೇ, [ಅಹ, ಹಿ] = ಶ್ರುತಿ ಹೇಳುವುದಷ್ಟೆ!

**ವಿವರಣೆ**

ಮುಕ್ತನಿಗೆ ಶರೀರೇಂದ್ರಿಯಾದಿಗಳು ಇವೆಯೆ? ಇಲ್ಲವೆ?—ಎಂದಲ್ಲಿ, ''ನ ಹವೈ ಸ ಶರೀರರಸ್ಯ ಸತಃ ಪ್ರಿಯಾಪ್ರಿಯಯೋರಪಹತಿರಸ್ತಿ'',—ಶರೀರವಿರುವವರೆಗೂ ಸುಖ ದುಃಖಗಳು ಬಿಡುವುದಿಲ್ಲವೆಂದೂ, ಶರೀರವಿಲ್ಲದಿದ್ದಲ್ಲಿ ಅವು ಸ್ಪರ್ಶಿಸವೆಂದೂ ಹೇಳುವುದರಿಂದ, ಶರೀರವಿಲ್ಲವೆನ್ನುತ್ತಾರೆ—ಬಾದರಿ.

## ಸೂತ್ರ ೨—ಭಾವಂ ಜೈಮಿನಿರ್ವಿಕಲ್ಪಾಮನನಾತ್

**ಸೂತ್ರಾರ್ಥ**

[ವಿಕಲ್ಪಾಮನನಾತ್] = (ಸ ಏಕಧಾಭವತಿ ತ್ರಿಧಾಭವತಿ ಪಂಚಧಾ ಸಪ್ತಧಾ—ಇತ್ಯಾದಿಯಾಗಿ ಮುಕ್ತಿಯಲ್ಲಿ ಒಬ್ಬನಾಗುತ್ತಾನೆ ಮೂರಾಗಿ ಆಗುತ್ತಾನೆ. ಐದಾಗಿ. ಏಳಾಗಿ,,—ಎಂದು ಹೀಗೆ) ಅನೇಕ ವಿಧ ಕಲ್ಪನೆಯನ್ನು ಹೇಳುವುದರಿಂದ, [ಭಾವಂ] = ಶರೀರವುಂಟೆಂಬುದನ್ನು [ಜೈಮಿನಿಃ] = ಜೈಮಿನಿಯೆಂಬುವರು ಹೇಳುತ್ತಾರೆ. (ಆತ್ಮ ಸ್ವರೂಪ ಅನೇಕವಾಗಿ ಆಗಬೇಕಾದರೆ ಶರೀರದ ಮೂಲಕವೇ ಆಗಬೇಕು ಎಂದು ತಾತ್ಪರ್ಯ).

## ಸೂತ್ರ ೩—ದ್ವಾದಶಾಹವದುಭಯವಿಧಂ ಬಾದರಾಯಣೋಽತಃ

**ಸೂತ್ರಾರ್ಥ**

[ದ್ವಾದಶಾಹವತ್] = ದ್ವಾದಶಾಹವೆಂಬ ಯಾಗದಂತೆ, [ಅತಃ] = ಸತ್ಯಸಂಕಲ್ಪತ್ವದಿಂದ [ಉಭಯವಿಧಂ] = ಎರಡು ವಿಧವನ್ನೂ [ಬಾದರಾಯಣಃ] = ವ್ಯಾಸದೇವರು ಹೇಳುತ್ತಾರೆ.

**ವಿವರಣೆ**

ದ್ವಾದಶಾಹವೆಂದು ಒಂದು ಯಾಗವುಂಟು ಅದು ಅನೇಕರು ಸೇರಿ ಮಾಡತಕ್ಕದ್ದು. ಆಗ್ಗೆ ಅದು ಸತ್ರವೆನಿಸುತ್ತದೆ. ಅದನ್ನೇ ಒಬ್ಬ ಮಾಡಲೂಬಹುದು. ಆಗ್ಗೆ ಅದು 'ಅಹೀನ'—ವೆನಿಸುತ್ತದೆ ಇವೆರಡೂ ಶ್ರುತಿಸಿದ್ಧ. ಈ ಒಂದು ಯಾಗವೇ ಸಂಕಲ್ಪಭೇದದಿಂದ 'ಸತ್ರ' ಮತ್ತು ಅಹೀನ''—ಎಂದು ಎರಡು ವಿಧವಾಗುವಂತೆ, ಒಬ್ಬ ಮುಕ್ತನೇ ''ನಾನು ಶರೀರವನ್ನು ಹೊಂದಬೇಕು'',—ಎಂದು ಸಂಕಲ್ಪಿಸಿದಾಗ ಶರೀರ ಹೊಂದುತ್ತಾನೆ. 'ಶರೀರ ಬೇಡ'—ಎಂದು ಸಂಕಲ್ಪಿಸಿದನಾದರೆ ಶರೀರವಿಲ್ಲದೆಯೂ ಇರುವನು. ಆದ್ದರಿಂದ ಇವೆರಡಕ್ಕೂ ವಿರೋಧವಿಲ್ಲ—ಎಂದು ಭಗವದ್ವ್ಯಾಸರೆನ್ನುತ್ತಾರೆ,

[ಮೋಕ್ಷದಲ್ಲಿ ಪುಣ್ಯಾದಿಗಳಿಲ್ಲವಾದ್ದರಿಂದ, ತನ್ಮೂಲಕವಾದ ಶರೀರರಾಹಿತ್ಯವನ್ನು ಬಾದರಿ ಹೇಳಿದರೆ, ಅದರಲ್ಲಿ ತಪ್ಪೇನಿದೆ?—ಎಂದಲ್ಲಿ—ಸ್ವಚ್ಛಂದ ದೇಹವಿದೆಯೆಂಬ ವಚನವಿರುವುದರಿಂದ, ನಿಯಮೇನ ದೇಹವಿಲ್ಲವೆಂದು ಬಾದರಿ ಹೇಳುವುದು ತಪ್ಪು.

ಮುಕ್ತನಿಗೆ ದುಃಖಾರ್ಹ ದೇಹವಿಲ್ಲದಿರುವುದರಿಂದ, ಶುಭ ಶರೀರವಿದೆಯೆಂದು ಜೈಮಿನಿ ಹೇಳುವುದರಲ್ಲಿ ತಪ್ಪೇನು?—ಎಂದಲ್ಲಿ, ದೇಹ ಅನಿಯಮವೆಂದು ಸ್ಥಾಪನೆಯಿರುವುದರಿಂದ—ನಿಯಮೇನ ದೇಹವಿದೆಯೆಂದು ಜೈಮಿನಿ ಹೇಳುವುದು ತಪ್ಪು.

ಆದ್ದರಿಂದ, ಭಗವತ್ಸಂಕಲ್ಪ ಮೂಲವಾದ ಸ್ವಸಂಕಲ್ಪದಿಂದಲೇ ಮುಕ್ತನು ಶರೀರಿಯೂ ಅಶರೀರಿಯೂ ಆಗಿರಬಹುದು—ಆದ ಕಾರಣ— ಈ ವಿಷಯದಲ್ಲಿ ಹೀಗೆಯೇ—ಎಂಬ ನಿಯಮವಿಲ್ಲವೆಂಬುದು ಸಿದ್ಧಾಂತಿಯಾದ ವ್ಯಾಸರ ಮತ]

## ಸೂತ್ರ ೪—**ತನ್ವಭಾವೇ ಸನ್ಧ್ಯವದುಪಪತ್ತೇಃ**

### ಸೂತ್ರಾರ್ಥ

[ತನ್ವಭಾವೇ] = ಶರೀರವಿಲ್ಲದಿರುವಾಗ, [ಸನ್ಧ್ಯವತ್] = ಸ್ವಪ್ನದಲ್ಲಿ ಹೇಗೋ ಹಾಗೆ, [ಉಪಪತ್ತೇಃ] = (ಅನುಭವ) ಉಪಪನ್ನವಾಗುವುದರಿಂದ, ಜೀವನು ಸೃಷ್ಟಿಸುವುದಿಲ್ಲ.

### ವಿವರಣೆ

ಮುಕ್ತನು ಸತ್ಯಸಂಕಲ್ಪನಾದಾಗ್ಯೂ ತನ್ನ ಶರೀರೋಪಕರಣಾದಿಗಳನ್ನು ತಾನೇ ಸೃಷ್ಟಿಸುತ್ತಾನೆಯೆಂಬ ನಿಯಮವಿಲ್ಲ ತಾನು ಸೃಷ್ಟಿಸದಿರುವಾಗ ಸ್ವಪ್ನದಲ್ಲಿ ಸರ್ವೇಶ್ವರ ಸೃಷ್ಟಿಸುವ ಶರೀರೋಪಕರಣಾದಿಗಳಿಂದ ಅನುಭವಿಸುವಂತೆ ಮುಕ್ತಿಯಲ್ಲಿಯೂ ಸರ್ವೇಶ್ವರ ಸೃಷ್ಟಿಸುವ ಶರೀರೋಪಕರಣಾದಿಗಳಿಂದಲೇ, ಅವನು ಸೃಷ್ಟಿಸುವ ಪಿತೃ-ಲೋಕಾದಿಗಳನ್ನು ಅನುಭವಿಸುತ್ತಾನೆ—ಎನ್ನುತ್ತಾರೆ. "ತನ್ವಭಾವೇ"—ಎಂದರೆ, ತಾನು ಸೃಷ್ಟಿಸಿದ ಶರೀರವಿಲ್ಲದಿರುವಾಗ—ಎಂದರ್ಥ.

## ಸೂತ್ರ ೫—**ಭಾವೇ ಜಾಗ್ರದ್ವತ್**

### ಸೂತ್ರಾರ್ಥ

[ಭಾವೇ] = ಶರೀರವುಂಟಾದಲ್ಲಿ [ಜಾಗ್ರದ್ವತ್] = ಜಾಗ್ರದವಸ್ಥೆಯಲ್ಲಿ ಹೇಗೋ ಹಾಗೆ, (ಅನುಭವಿಸುತ್ತಾನೆ).

### ವಿವರಣೆ

ಮುಕ್ತಿಯಲ್ಲಿ ಜೀವನು ತಾನೇ ಭಗವಂತನಿಗೆ ಲೀಲಾರಸ ಹೇತುವಾದ ಸ್ವಶರೀರಾದಿಗಳನ್ನೂ ಲೀಲೋಪಕರಣಗಳನ್ನೂ ಸೃಷ್ಟಿಸುವಲ್ಲಿ, ಈಗ ಅರಸರು ತಮ್ಮ ಸಾಮರ್ಥ್ಯದಿಂದ ಉಪಕರಣಗಳನ್ನು ಸೇರಿಸಿಕೊಂಡು ಅನುಭವಿಸುವಂತೆ ಅನುಭವಿಸುತ್ತಾನೆ. ಅವುಗಳೆಲ್ಲವೂ ಭಗವಲ್ಲೀಲಾರಸಜನಕವಾದುದರಿಂದ ಇವನ ಭಗವದನುಭವಕ್ಕೆ ಕೊರತೆಯಿಲ್ಲವನ್ನುತ್ತಾರೆ. "ಭಾವೇ" = ತಾನು ಸೃಷ್ಟಿಸಿದ ಶರೀರೋಪಕರಣಗಳು ಉಂಟಾದಲ್ಲಿ—ಎಂದರ್ಥ.

## ಸೂತ್ರ ೬—**ಪ್ರದೀಪವದಾವೇಶಸ್ತಥಾಹಿ ದರ್ಶಯತಿ**

### ಸೂತ್ರಾರ್ಥ

[ಪ್ರದೀಪವತ್] = ದೀಪದಂತೆ [ಆವೇಶಃ] = (ಮುಕ್ತನಿಗೆ ಅನೇಕ ಶರೀರಗಳಲ್ಲಿ) ಪ್ರವೇಶ (ಉಂಟು) [ತಥಾ] = ಹಾಗೆಯೇ [ದರ್ಶಯತಿ, ಹಿ] = ಶಾಸ್ತ್ರ ಹೇಳುವುದಷ್ಟೆ!

**ವಿವರಣೆ**

ಅಣುವಾದ ಜೀವನಿಗೆ ಒಂದೇ ಕಾಲದಲ್ಲಿ ಅನೇಕ ಶರೀರಗಳಲ್ಲಿ ಸಂಬಂಧ ಕೂಡದು ದರಿಂದ ಒಂದೇ ಕಾಲದಲ್ಲಿ ಅನೇಕ ಶರೀರಗಳನ್ನು ಹೇಗೆ ಪರಿಗ್ರಹಿಸುವನು?—ಎಂದಲ್ಲಿ— ಒಂದು ದೀಪ ತಾನಿರುವ ಒಂದು ಜಾಗದಿಂದಲೇ ತನ್ನ ಪ್ರಭೆಯಿಂದ ಎಲ್ಲೆಲ್ಲಿಯೂ ವ್ಯಾಪಿಸುವಂತೆ, ಮುಕ್ತನೂ ಜ್ಞಾನದಿಂದ ಸ್ವೇಚ್ಛೆಯಾಗಿ ಅನೇಕ ಶರೀರಗಳಲ್ಲಿ ವ್ಯಾಪಿಸಬಹುದು. ಯೋಗಿಗಳೂ ಹಾಗೆಯೇ ವ್ಯಾಪಿಸಿ ಅನೇಕ ಶರೀರ ಪರಿಗ್ರಹ ಮಾಡುವುದನ್ನು ಕಂಡಿದ್ದೇವೆ. ಜೀವ ಅಣುವೆಂಬುದಕ್ಕೂ, ಅವನಿಗೆ ಅನೇಕ ಶರೀರ ಗಳುಂಟೆಂಬುದಕ್ಕೂ ಪ್ರಮಾಣ—'ವಾಲಾಗ್ರ ಶತಭಾಗಸ್ಯ ಶತಧಾಕಲ್ಪಿತಸ್ಯ ಚ। ಭಾಗೋ ಜೀವಸ್ಸ ವಿಜ್ಞೇಯಸ್ಸ ಚಾನನ್ತ್ಯಾಯ ಕಲ್ಪತೇ" ॥ —ಬತ್ತದ ಬಾಲದ ತುದಿಯಲ್ಲಿಯ ಹತ್ತು ಸಾವಿರ ಭಾಗಗಳಲ್ಲಿ ಒಂದು ಭಾಗದಂತಹವನು ಜೀವ. ಅವನು ಅನೇಕ ಶರೀರಗಳನ್ನು ಎತ್ತುತ್ತಾನೆ—ಎಂಬ ಶ್ರುತಿಯೇ ಇದಕ್ಕೆ ಪ್ರಮಾಣ.

[ಜೀವನಿಗೆ ಭಗವಂತನೊಡನೆ ಪರಮಸಾಮ್ಯ ಹೇಳುವುದರಿಂದ ಮುಕ್ತಾವಸ್ಥೆ ಯಲ್ಲಿ ಇವನಿಗೂ ವಿಭುತ್ವವನ್ನೂ ಕಲ್ಪಿಸಿ ಅದರಿಂದ ಅನೇಕ ಶರೀರ ಪರಿಗ್ರಹವನ್ನು ಏಕೆ ಅಂಗೀಕರಿಸಬಾರದು?—ಎಂದಲ್ಲಿ, 'ಕ್ಲ್ರುಪ್ತ ಕಲ್ಪ್ಯ ವಿರೋಧೇತು ಯುಕ್ತೋ ಕ್ಲ್ರುಪ್ತ ಪರಿಗ್ರಹಃ'—ಎಂಬ ನ್ಯಾಯದಿಂದ ಸೌಭರ್ಯಾದಿಗಳ ವಿಷಯದಲ್ಲಿ ಕ್ಲ್ರುಪ್ತ ವಾಗಿರುವಂತೆ ಜ್ಞಾನವ್ಯಾಪ್ತಿಯಿಂದಲೇ ನಾನಾ ಶರೀರ ಪರಿಗ್ರಹವೆಂಬುದು ನ್ಯಾಯ ವೆಂಬುದು ಇದ್ದಕ್ಕೆ ತಕ್ಕ ಉತ್ತರ.

ಇದರ ಮೇಲೆಯೂ, ಅಣುವಾದ ಜೀವನಿಗೆ ಅನೇಕ ಶರೀರ ಪರಿಗ್ರಹ ಏಕ ಕಾಲದಲ್ಲಿ ಅನುಪಪನ್ನ ಆದರೂ ಧರ್ಮಭೂತಜ್ಞಾನದ್ವಾರಾ ಅದು ಏಕೆ ಆಗಬಾರದು? ಸ್ವರೂಪ ಜ್ಞಾನದಿಂದಲಾದರಲ್ಲವೇ ಅನುಪಪನ್ನ!—ಎಂದಲ್ಲಿ, ಅಣುವಾದ ಜೀವ ಅದನ್ನೆಲ್ಲಾ ಹೇಗೆ ಧರಿಸಬಲ್ಲ!—ಎಂದು ಆಕ್ಷೇಪಿಸುತ್ತಾರೆ. ಧರ್ಮಭೂತ ಜ್ಞಾನದ ವ್ಯಾಪ್ತಿಯಿಂದಲೇ ಬಲ್ಲನೆಂದರೆ, ಮುಕ್ತನ ಆ ಜ್ಞಾನ ಸಕಲ ವಸ್ತುಗಳಲ್ಲಿಯೂ ವ್ಯಾಪಿಸಿದೆ—ಏಕೆಂದರೆ ಅದು ಅಸಂಕುಚಿತ. ಆಗ ಈಶ್ವರನಂತೆ ಇವನಿಗೂ ಸರ್ವಕ್ಕೂ ಧಾರಕತ್ವ ಪ್ರಸಂಗಿಸುವುದು. ಆಗ್ಗೆ ಜೀವ—ಈಶ್ವರ—ಎಂಬ ವಿಭಾಗವೇ ಸಿದ್ಧಿಸದು.—ಎಂದಲ್ಲಿ, ಇದಕ್ಕೆ ಉತ್ತರ—

ವ್ಯಾಪ್ತಿಮಾತ್ರದಿಂದಲೇ ಸರ್ವಧಾರಕತ್ವವೆಂದು ಆಗದು. ಹಾಗಾಗುವಲ್ಲಿ ಕಾಲವೂ ಸರ್ವತ್ರ ವ್ಯಾಪ್ತವಾಗಿದೆಯಷ್ಟೆ! ಅದಕ್ಕೂ ಈಶ್ವರನಂತೆ ಸರ್ವಧಾರಕತ್ವ ಪ್ರಸಂಗಿಸದೆ? ಆದ್ದರಿಂದ, ಇಲ್ಲಿ ಮುಕ್ತನು ಏಕಕಾಲದಲ್ಲಿ ನಾನಾ ಶರೀರಗಳಿಗೆ ಧಾರಕ ನಾಗುವುದು ಒಂದು ಶಕ್ತಿ ವಿಶೇಷದಿಂದ. ಮುಕ್ತನಿಗೆ ಸರ್ವಾಧಾರಕತೆಗೆ ಅನುಕೂಲವಾದ ಶಕ್ತಿಯಿಲ್ಲವಷ್ಟೆ!

ಮುಕ್ತನಿಗಿರುವ ಈ ಧಾರಕತ್ವಶಕ್ತಿ ನಿಯಮಿತ ವಿಷಯದಲ್ಲಿ ಮಾತ್ರ. ಇದು ಕ್ವಾಚಿತ್ಕ ಇದಕ್ಕೆ ನಿಯಾಮಕ—'ಜಗದ್ವ್ಯಾಪಾರವರ್ಜಂ..."—ಎಂಬ ಸೂತ್ರ. ಎಲ್ಲಿ ಮುಕ್ತನ ಧರ್ಮಭೂತ ಜ್ಞಾನಕ್ಕೆ ಶಕ್ತಿ ಇದೆಯೋ—ಅಲ್ಲಿಯೂ ಸರ್ವಶಕ್ತಿಯುಳ್ಳ

ಈಶ್ವರನ ಸ್ವೇಚ್ಛೆಯಿಂದಲೇ ಅದು ನಿಯಮಿಸಲ್ಪಡುತ್ತೆ. ಹಾಗಾದರೆ ಮುಕ್ತರಲ್ಲದ ಸೌಭರಿಯೇ ಮುಂತಾದವರಿಗೆ ಏಕಕಾಲದಲ್ಲಿ ಅನೇಕ ದೇಹ ಪರಿಗ್ರಹ ಶಕ್ತಿ ಬಂದುದು ಹೇಗೆ—ಎಂದರೆ, ಅದು ಈಶ್ವರದತ್ತವಾದ ಯೋಗಶಕ್ತಿಯಿಂದ. ಅಷ್ಟೇ ಅಲ್ಲ. ಅನಾದಿ ಕರ್ಮ ಪರಿಪಾಕವೂ ಅದಕ್ಕೆ ಕಾರಣ. ಕರ್ಮಾನುಗ್ರಹೀತ ಜ್ಞಾನ ಪರಿಪಾಕದಿಂದ ಉಂಟಾದ ಅಂತಹ ಶಕ್ತಿಯೇ ಯೋಗಸಿದ್ಧಿಯೆಂಬುದು.

ಇಲ್ಲಿ ಮತ್ತೊಂದು ಚೋದ್ಯ—ಬಂಧ ದಶೆಯಲ್ಲಿ ಸಂಕುಚಿತವಾಗಿರುವ ಜ್ಞಾನಕ್ಕೆ ಮುಕ್ತಿ ದಶೆಯಲ್ಲಿ ವಿಕಾಸವೆಂದೆನ್ನುವಿರಿ. ಆ ಸಂಕೋಚ–ವಿಕಾಸಗಳು ಜೀವ ಸ್ವರೂಪಕ್ಕೇ ಏಕಾಗಬಾರದು? ಇದು ಪ್ರಮಾಣಕ್ಕೆ ಅನುಕೂಲವೂ ಆಗಿದೆ. ''ಯಯಾ ಕ್ಷೇತ್ರಜ್ಞ ಶಕ್ತಿಸ್ಸಾವೇಷ್ಟಿತಾ ನೃಪ ಸರ್ವಗಾ",—ಎಂಬುದರಿಂದ, ಜೀವ ಸ್ವರೂಪಕ್ಕೇ ಕರ್ಮಗಳಿಂದ ಆವೇಷ್ಟನವನ್ನು ಹೇಳಿದೆ. ಕರ್ಮನಿರ್ಮುಕ್ತನಾದ ಅವನಿಗೇ ಅದು ವಿಕಾಸವೂ ಆಗುವುದು. ಪ್ರಮಾಣ ವಿರುದ್ಧವಾದ ಸಂಕೋಚ–ವಿಕಾಸಗಳನ್ನು ಧರ್ಮಭೂತ ಜ್ಞಾನಕ್ಕೆ ಏಕೆ ಕಲ್ಪಿಸಬೇಕು?—ಎಂದಲ್ಲಿ,

ನಿರವಯವವಾದ ಜೀವನಿಗೆ ನೀವು ಹೇಳುವ ವಿಕಾಸ ಹೇಗೆ ಸಂಭವಿಸೀತು?—ಎಂದರೆ ನಿರವಯವವಾದ ಧರ್ಮಭೂತ ಜ್ಞಾನಕ್ಕೆ ಮಾತ್ರ ಸಂಕೋಚ–ವಿಕಾಸಗಳನ್ನು ಹೇಗೆ ಹೇಳುವಿರಿ?—ನಿರವಯವತ್ವ ಇವೆರಡಕ್ಕೂ ಸಮಾನವಲ್ಲವೆ?—ಅಲ್ಲದೆ,

ಪುರುಷನ ಜ್ಞಾನ ನಿರವಯವವಾದಾಗ್ಯೂ ಅವಸ್ಥಾ ಭೇದದಿಂದ ಸ್ಮೃತಿ–ಅನುಭೂತಿ–ಮುಂತಾದ ನಾನಾ ವಿಕೃತಿಯುಳ್ಳದ್ದಾಗುವಂತೆಯೇ, ಜೀವನೂ ಬದ್ಧದಶೆಯಲ್ಲಿ ಅಣು, ಮುಕ್ತ ದಶೆಯಲ್ಲಿ ವಿಭು—ಎಂದಾಗಲಿ, ಈ ಪರಿಮಾಣ ಭೇದವನ್ನು ಮುಕ್ತ—ಬದ್ಧನೆಂಬ ವ್ಯವಸ್ಥೆಯಿಂದ ನಿರವಯವವಾದ ಧರ್ಮಭೂತಜ್ಞಾನದಲ್ಲಿಯೂ ಇರುವುದಾಗಿ ನೀವೂ ಹೇಳಲೇ ಬೇಕಲ್ಲವೆ?—ಎಂದಲ್ಲಿ,—ಸ್ವರೂಪತಃ ಜೀವ ನಿರ್ವಿಕಾರ—ಏಕರೂಪೀ. ಏಕರೂಪನಾದ ಜೀವನಿಗೆ ಇದೆಂದೂ ಸಂಭವಿಸದೆಂದು/ಜೈನ ಮತ ಭಂಗ ಪ್ರಕರಣದಲ್ಲಿ, ಸೂತ್ರಕಾರರೇ, ''ನೈಕಸ್ಮಿನ್ ಅಸಂಭವಾತ್",—''ನ ಚ ಪರ್ಯಾಯಾ ದಪ್ಯವಿರೋಧೋವಿಕಾರಾದಿಭ್ಯಃ"—ಎಂಬ ಸೂತ್ರಗಳಲ್ಲಿ ನಿರಾಕರಿಸಿದ್ದಾರೆ. ಆತ್ಮ ನಿರ್ವಿಕಾರನೆಂಬುದು ಪ್ರಮಾಣ ಪ್ರತಿಪನ್ನ. ಅಣುವಾದ ಅವನಿಗೇ ಮುಕ್ತನಾದಾಗ ಆನಂತ್ಯವೂ ಅದೇ ಪ್ರಮಾಣ ಪ್ರತಿಪನ್ನ. ಇವೆರಡಕ್ಕೂ ವಿರೋಧ ಬರಕೂಡದು. ಈ ಅವಿರೋಧ—ಜೀವನಿಗೆ ಸ್ವರೂಪ ವಿಕಾರವಿಲ್ಲದ್ದರಿಂದಲೂ, ಧರ್ಮಭೂತಜ್ಞಾನದಲ್ಲಿ ಶ್ರುತಿ ಪ್ರತಿಪನ್ನವಾದ ಆನಂತ್ಯವನ್ನು ಸ್ವೀಕರಿಸುವುದರಿಂದಲೂ, ವಿಷಯ ಭೇದದಿಂದ ಸಿದ್ಧಿಸುತ್ತೆ. ಜ್ಞಾನಕ್ಕಾದರೋ ಸಾಕ್ಷಾತ್ತಾದ ನಿರ್ವಿಕಾರತ್ವ ವಚನವಿಲ್ಲ. ಅಲ್ಲದೆ ಸವಿಕಾರತ್ವ ವಚನಗಳೇ ಇವೆ. ಜ್ಞಾನಕ್ಕೆ ಸಂಕೋಚ ವಿಕಾಸಗಳನ್ನು ಹೇಳುವ ಶ್ರುತಿ—ಸ್ಮೃತಿ—ಇತಿಹಾಸ—ಪುರಾಣ ವಚನಗಳು ಅನಂತವಾಗಿವೆ. ಆತ್ಮನಲ್ಲಿ ತಿರೋಧಾನ ವಚನವಾದರೋ—ಜ್ಞಾನದ್ವಾರಾ—ಮೋಡಗಳಿಂದ ಸೂರ್ಯರಶ್ಮಿಗೆ ತಿರೋಧಾನವಾಗುವಂತೆ ಜೀವನಿಗೂ ಸ್ವರೂಪ ಪರಿಣಾಮ—'ಅಸ್ಯಸೋಮ್ಯಮಹತೋ ವೃಕ್ಷಸ್ಯ"—ಎಂದು ತೊಡಗಿ ''ಅಸ್ಯಯದೇಕಾಂಶಾಖಾಂ ಜೀವೋ ಜಹಾತ್ಯಥ ಸಾ ಶುಷ್ಯತಿ

ದ್ವಿತೀಯಾಂ ಜಹಾತಿ ಅಥ ಸಾಶುಷ್ಯತಿ, ತೃತೀಯಾಂ ಜಹಾತ್ಯಥ ಸಾಶುಷ್ಯತಿ ಸರ್ವಂ ಜಹಾತಿ ಸರ್ವಂ ಶುಷ್ಯತಿ—ಇತ್ಯಾದಿಯಲ್ಲಿ—ವೃಕ್ಷದ ಸರ್ವಶಾಖೆಗಳಲ್ಲಿಯೂ ವ್ಯಾಪ್ತಿಯಿಂದ ಜೀವನಿದ್ದಾನೆ. ಕೆಲವು ಶಾಖೆಗಳನ್ನು ಅವನು ಬಿಟ್ಟಾಗ ಒಣಗಿ ಹೋಗುತ್ತವೆ. ಅವನೆಲ್ಲಿದ್ದಾನೆಯೋ ಆ ಶಾಖೆಗಳು ವೃದ್ಧಿಹೊಂದುತ್ತವೆ—ಎಂದು ಪ್ರಹಾಣ—(ಬಿಡುವುದು) (ಅಪ್ರಹಾಣ) ಬಿಡದಿರುವುದು ಕಂಡುಬರುವುದರಿಂದ, ಪ್ರತಿಪಾದಿತವಾಗಿದೆ. ಆದ್ದರಿಂದ, ಆವರಣವಿಲ್ಲದಿದ್ದಲ್ಲಿ, "ಸ ಚ ಆನಂತ್ಯಾಯ ಕಲ್ಪತೇ"—ಎಂಬಲ್ಲಿ, ಹೇಳಿರುವ ಆನಂತ್ಯ ಧರ್ಮಭೂತ ಜ್ಞಾನ ದ್ವಾರಕವಲ್ಲ. ಅದ್ವಾರಕವೇ–ಎಂದಲ್ಲಿ, ಶಾಖೆಗಳನ್ನು ಜೀವ ಬಿಡುವುದೆಂದರೆ ಸ್ವರೂಪತಃ ಬಿಡುವುದೆಂದಲ್ಲ. ಏಕೆಂದರೆ ಜೀವನಿಗೆ ಸ್ವರೂಪವಿಕಾರವಿಲ್ಲ. ಆದ್ದರಿಂದ ಸ್ವೀಯತ್ವಾಭಿಮಾನ ನಿವೃತ್ತಿ ಮಾತ್ರ ಇಲ್ಲಿ ಪ್ರಹಾಣ (ಬಿಡುವುದು) ಎಂಬುದು. "ವಾಸಾಂಸಿ ಜೀರ್ಣಾನಿ ಯಥಾ ವಿಹಾಯ..." ಇತ್ಯಾದಿಗಳಲ್ಲಿ ಹೇಗೋ ಹಾಗೆ,—ಎಂದು ಸಮಾಧಾನ. ಈ ಅಭಿಮಾನ ನಿವೃತ್ತಿ ಅವನ ಪುಣ್ಯಪಾಪರೂಪ ಕರ್ಮೋಪಾಧಿಕ, ಆದ್ದರಿಂದ ಇಲ್ಲಿ ಹೇಳುವ ಪ್ರಹಾಣ—ತ್ಯಾಗಾತ್ಮಕ—ಜೀವ ಸ್ವರೂಪ ಸಂಬಂಧ ಪ್ರಹಾಣವಲ್ಲ. ಪ್ರಹಾಣವು ಕರ್ಮನಾಶ ರೂಪವಾದಲ್ಲಿ, "ಜೀವೋಜಹಾತಿ" (ಜೀವ ಬಿಡುತ್ತಾನೆ)—ಎಂದು ಜೀವ ಕರ್ತೃಕತ್ವ ಹೇಗೆ ಸಂಭವಿಸುತ್ತೆ ಎಂದಲ್ಲಿ, "ಕ್ಷೇತ್ರಂ ಜಹಾತಿ" (ಕ್ಷೇತ್ರವನ್ನು ಬಿಡುತ್ತಾನೆ) 'ಹಸ್ತಿನಂ ಜಹಾತಿ' (ಆನೆಯನ್ನು ಬಿಡುತ್ತಾನೆ) 'ಪಶೂನ್, ಗೃಹಂ ಜಹಾತಿ' (ಪಶುಗಳನ್ನೂ ಮನೆಯನ್ನೂ ಬಿಡುತ್ತಾನೆ) ಇತ್ಯಾದಿಗಳಲ್ಲಿ ಕ್ಷೇತ್ರಾದಿ ಸ್ವರೂಪತ್ಯಾಗ ಸಂಭವವಿಲ್ಲದ್ದರಿಂದ, ಸ್ವೀಯತ್ವ—ಎಂಬ ಅಭಿಮಾನವನ್ನು ಬಿಡುವುದೆಂದೇ 'ಜಹಾತಿ'—ಎಂಬುದರ ಅರ್ಥ. 'ಜಹಾತಿ'—ಯೆಂಬುದು ತ್ಯಾಗಾರ್ಥಕ. ಕರ್ಮನಾಶದ ಕಾರ್ಯವಾದ ಅಭಿಮಾನ ವಿಶೇಷರೂಪ ಧರ್ಮಭೂತ ಜ್ಞಾನ ಸಂಬಂಧದ ತ್ಯಾಗ ರೂಪವಾದ್ದರಿಂದ, ಇಲ್ಲಿ ಹೇಳಿರುವ 'ಪ್ರಹಾಣ' (ಬಿಡುವುದು) ಕ್ಕೆ ಜೀವನು ಕರ್ತೃವಾಗಬಹುದೆಂದು ಭಾವ.

ಸೂತ್ರ ೭—**ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷ ಮಾವಿಷ್ಕೃತಂ ಹಿ**

**ಸೂತ್ರಾರ್ಥ**

[ಸ್ವಾಪ್ಯಯಸಂಪತ್ತ್ಯೋಃ] = ಸುಷುಪ್ತಿ—ಮರಣಗಳೆಂಬ ಎರಡು ಅವಸ್ಥೆಗಳಲ್ಲಿ, [ಅನ್ಯತರಾಪೇಕ್ಷಂ] = ಒಂದು ಅವಸ್ಥೆಯನ್ನು ಹೇಳುತ್ತದೆ. [ಆವಿಷ್ಕೃತಂ, ಹಿ] = ಶ್ರುತಿಯಿಂದ ಇದು ಪ್ರಕಾಶಿತವಾಗಿದೆಯಷ್ಟೆ!

**ವಿವರಣೆ**

"ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ನ ಬಾಹ್ಯಂ ಕಿಂ ಚ ನ ವೇದ ನಾನ್ತರಂ"—ಎಂದು ಪರಮಾತ್ಮನನ್ನು ಹೊಂದಿದವನಿಗೆ ಎಂತಹ ಜ್ಞಾನವೂ ಇರುವುದಿಲ್ಲವೆನ್ನುವುದರಿಂದ, ಮುಕ್ತನಿಗೆ ಜ್ಞಾನ ವ್ಯಾಪ್ತಿ ಹೇಗೆ ಕೂಡುವುದು?—ಎಂದಲ್ಲಿ, ಈ ಶ್ರುತಿ ಮುಕ್ತನ ವಿಷಯವೆನ್ನಕೂಡದು. "ನಾ ಹ ಖಲ್ವಯಮೇವಂ ಸಂಪ್ರತ್ಯಾತ್ಮಾನಂ ಜಾನಾತ್ಯಯ ಮಹಮಸ್ಮೀತಿನೋ ಏವೇಮಾನಿ ಭೂತಾನಿ ವಿನಾಶಮೇವಾಪೀತೋ ಭವತಿ",—ಈ ಸುಷುಪ್ತನಾದವನು ತನ್ನನ್ನೂ ಪರರನ್ನೂ ಅರಿಯುವುದಿಲ್ಲ. ಇವನಿಗೆ

ಜ್ಞಾನ ನಶಿಸಿಬಿಟ್ಟಿತೆಂದು ನಿದ್ರಿಸುವವನನ್ನು ಕುರಿತೂ, "ಏತೇಭ್ಯೋ ಭೂತೇಭ್ಯಸ್ಸಮುತ್ಥಾಯ ತಾನ್ಯೇವಾನುವಿನಶ್ಯತಿ"—ಎಂದು ಈ ಪಾಂಚಭೌತಿಕವಾದ ಶರೀರವನ್ನು ಬಿಟ್ಟು ಹೊರಹೊರಟಮೇಲೆ ಇದರಲ್ಲಿ ಒಂದನ್ನೂ ಅರಿಯುವುದಿಲ್ಲವೆಂದು ಮೃತನಾದವನನ್ನು ಕುರಿತೂ ಜ್ಞಾನವಿಲ್ಲವೆಂದು ಕೆಲವು ಶ್ರುತಿಗಳು ಹೇಳುತ್ತವೆ. 'ಸರ್ವಂ ಹ ಪಶ್ಯಃ ಪಶ್ಯತಿ ಸರ್ವಮಾಪ್ನೋತಿ ಸರ್ವಶಃ'—ಎಂದು ಮುಕ್ತ ಎಲ್ಲವನ್ನೂ ನೋಡುತ್ತಾನೆಯೆಂದೂ "ಮನಸೈತಾನ್ ಕಾಮಾನ್ ಪಶ್ಯನ್ ರಮತೇ"—ಮುಕ್ತನು ಸಂಕಲ್ಪ ಮಾತ್ರದಿಂದಲೇ ಸಕಲ ಭೋಗ್ಯ ವಸ್ತುಗಳನ್ನೂ ನೋಡುತ್ತಾನೆ—ಎಂದು ಮುಕ್ತನನ್ನು ಸರ್ವಜ್ಞನೆಂದೂ ಕೆಲವು ಶ್ರುತಿಗಳು ಹೇಳುತ್ತವೆ. ಆದ್ದರಿಂದ ಅವುಗಳಿಗೆ ವಿರೋಧವಿಲ್ಲದ ಹಾಗೆ, "ಪ್ರಾಜ್ಞೇನ",—ಎಂಬ ಶ್ರುತಿ ಮುಕ್ತನ ವಿಷಯವಲ್ಲ. ಆ ಇಬ್ಬರಲ್ಲಿ ( ಅಂದರೆ ಸುಷುಪ್ತ ಮತ್ತು ಮೃತ) ಒಬ್ಬರ ವಿಷಯವೆನ್ನಬೇಕು. ಆದ್ದರಿಂದ ಮುಕ್ತನು ಜ್ಞಾನ ವ್ಯಾಪ್ತಿಯಿಂದ ಅನೇಕ ಶರೀರ ಪರಿಗ್ರಹವನ್ನು ಮಾಡಲು ತಡೆಯಿಲ್ಲವೆನ್ನುತ್ತಾರೆ. ಇಲ್ಲಿ ಸ್ವಾಪ್ಯಯ ಎಂದರೆ ಸುಷುಪ್ತಿ, ಸಂಪತ್ತಿಯೆಂದರೆ ಮರಣ. "ವಾಙ್ಮನಸಿ ಸಂಪದ್ಯತೇ"—ಎಂದು ಆರಂಭಿಸಿ, "ತೇಜಃ ಪರಸ್ಯಾಂ ದೇವತಾಯಾಂ", —ಎಂಬ ವಚನದಿಂದ ಆ ಎರಡು ಅವಸ್ಥೆಗಳಲ್ಲಿಯೂ ಪ್ರಾಜ್ಞತೆಯ ಪ್ರಾಪ್ತಿ ಮತ್ತು ನಿಸ್ಸಂಬೋಧತ್ವಗಳಿವೆ. ಆದ್ದರಿಂದ ಆ ಸುಷುಪ್ತ—ಮೃತ—ಇವರಿಬ್ಬರಲ್ಲಿ ಒಬ್ಬರ ವಿಷಯವಿದು. ಸ್ವಾಪ (ಸುಷುಪ್ತಿ) ಯಲ್ಲಿ ಬ್ರಹ್ಮಸಂಪತ್ತಿಯು ಪ್ರಸಿದ್ಧವಾದ್ದರಿಂದ—ಮೃತಿಯಲ್ಲಿ ಬ್ರಹ್ಮಸಂಪತ್ತಿವಿಷಯಕ ಪ್ರಮಾಣವನ್ನು ಹೇಳಿದೆ. "ತೇಜಃ ಪರಸ್ಯಾಂ"—ಎಂದು] [ಮೇಲೆ 'ನಿಸ್ಸಂಬೋಧತ್ವ'—ಎಂದರೆ, ಎಂತಹ ಜ್ಞಾನವೂ ಇಲ್ಲದಿರುವುದೆಂದರ್ಥ]

## 6. ಜಗದ್ವ್ಯಾಪಾರ ವರ್ಜಾಧಿಕರಣ

### ಸೂತ್ರ—ಜಗದ್ವ್ಯಾಪಾರ ವರ್ಜಂ ಪ್ರಕರಣಾದಸನ್ನಿಹಿತತ್ವಾಚ್ಚ

**ಸಂಗತಿ**

ಮುಕ್ತನ ಐಶ್ವರ್ಯವೆಂತಹದು?—ಜಗತ್ಸೃಷ್ಟ್ಯಾದಿಯಾದ ಪರಮಪುರುಷನಿಗೇ ಅಸಾಧಾರಣವಾದ ಸರ್ವೇಶ್ವರತ್ವವೇ? ಅಥವಾ ಅದಿಲ್ಲದೆ ಕೇವಲ ಪರಮಪುರುಷಾನುಭವ ವಿಷಯವೆ?—ಎಂಬ ಸಂಶಯದಿಂದ ಸಂಗತಿ.

**ಸೂತ್ರಾರ್ಥ**

[ಪ್ರಕರಣಾತ್] = ಪರಮಾತ್ಮ ಪ್ರಕರಣದಿಂದಲೂ, [ಅಸನ್ನಿಹಿತತ್ವಾತ್, ಚ] = (ಆ ಪ್ರಕರಣಗಳಲ್ಲಿ ಮುಕ್ತನ) ಸಾನ್ನಿಧ್ಯವಿಲ್ಲದುದರಿಂದಲೂ, [ಜಗದ್ವ್ಯಾಪಾರ ವರ್ಜಂ] = ಜಗತ್ಸೃಷ್ಟ್ಯಾದಿ ವ್ಯಾಪಾರವನ್ನು ಬಿಟ್ಟು, ಮುಕ್ತನಿಗೆ ಪರಮಾತ್ಮನೊಂದಿಗೆ ಸಾಮ್ಯವುಂಟು.

**ವಿವರಣೆ**

ಮುಕ್ತನಿಗೆ ಸರ್ವೇಶ್ವರನ ಹಾಗೆ ಜಗತ್ಸೃಷ್ಟಿ, ಸಕಲ ಜಗನ್ನಿಯಮನ ಮುಂತಾದ ಐಶ್ವರ್ಯವುಂಟೆ? ಇಲ್ಲವೆ?—ಎಂದಲ್ಲಿ, "ನಿರಂಜನಃ ಪರಮಂ ಸಾಮ್ಯಮುಪೈತಿ"—

ಎಂದು ಪರಮಾತ್ಮನೊಡನೆ ಅತ್ಯಂತ ಸಾಮ್ಯವನ್ನು ಹೊಂದುವನೆಂದು ಹೇಳಿರುವು ದರಿಂದ, ಅವು ಇಲ್ಲದಿದ್ದಲ್ಲಿ ಅತ್ಯಂತ ಸಾಮ್ಯವುಂಟೆಂದು ಹೇಳಕೂಡದಾದ್ದರಿಂದ ಅವು ಉಂಟೆನ್ನುತ್ತಾರೆ—ಪೂರ್ವಪಕ್ಷಿ.

'ಯತೋವಾ ಇಮಾನಿ ಭೂತಾನಿ ಜಾಯನ್ತೇ',—"ಏಕೋಹವೈ ನಾರಾಯಣ ಆಸೀತ್"—ಇತ್ಯಾದಿಗಳಾದ ಜಗತ್ಕಾರಣತ್ವವನ್ನು ಹೇಳುವ ಪ್ರಕರಣಗಳಲ್ಲಿ ಪರಮ ಪುರುಷನನ್ನೇ ಹೇಳಿದೆ. ಮುಕ್ತನನ್ನು ಎಲ್ಲಿಯೂ ಹೇಳಿಲ್ಲ. ಅಲ್ಲದೆ, ಜಗತ್ಸೃಷ್ಟ್ಯಾದಿ ಗಳನ್ನು ಪರಮಪುರುಷನಿಗೇ ಅಸಾಧಾರಣ ಲಕ್ಷಣವನ್ನಾಗಿ ಹೇಳಿದೆ. ಅದು ಮುಕ್ತನಿಗೂ ಉಂಟಾದಲ್ಲಿ ಅದು ಪರಮಪುರುಷನ ಲಕ್ಷಣವಾಗದು. ಆದ್ದರಿಂದ ಮುಕ್ತನಿಗೆ ಜಗತ್ಸೃಷ್ಟ್ಯಾದಿಗಳು ಸಂಭವಿಸವು. ಮಿಕ್ಕ ಆನಂದಾನುಭವಾದಿಗಳಲ್ಲಿ ಪರಮಾತ್ಮ-ನೊಂದಿಗೆ ಅತ್ಯಂತ ಸಾಮ್ಯವನ್ನು ಹೊಂದುತ್ತಾನೆಂಬುದು ಸಿದ್ಧಾನ್ತ.

## ಸೂತ್ರ ೨—**ಪ್ರತ್ಯಕ್ಷೋಪದೇಶಾನ್ನೇತಿ ಚೇನ್ನಾಧಿಕಾರಿಕಮಂಡಲ-ಸ್ಥೋಕ್ತೇಃ**

### ಸೂತ್ರಾರ್ಥ

[ಪ್ರತ್ಯಕ್ಷೋಪದೇಶಾತ್] = ಶ್ರುತಿಯಿಂದ ಹೇಳಲ್ಪಡುವುದರಿಂದ, [ನ] = ಜಗ-ದ್ವ್ಯಾಪಾರ ವರ್ಜವೆಂಬುದಿಲ್ಲ. [ಇತಿ ಚೇತ್] = ಎಂದರೆ [ನ] = ಇಲ್ಲ. [ಆಧಿ ಕಾರಿಕಮಂಡಲಸ್ಥೋಕ್ತೇಃ] = ಅಧಿಕಾರದಲ್ಲಿ ನಿಯಮಿಸಲ್ಪಟ್ಟ ಹಿರಣ್ಯಗರ್ಭಾದಿಗಳ ಲೋಕಗಳಲ್ಲಿಯ ಭೋಗವನ್ನು ಹೇಳಿರುವುದರಿಂದ.

### ವಿವರಣೆ

"ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ"—(ಎಲ್ಲಾ ಲೋಕ ಗಳಲ್ಲಿಯೂ ಯಥೇಚ್ಛವಾಗಿ ಮುಕ್ತನು ಸಂಚರಿಸುತ್ತಾನೆ) ಎಂದೂ "ಕಾಮಾನ್ನೀಕಾಮ ರೂಪ್ಯನುಸಂಚರನ್"—(ಇಷ್ಟರೂಪವನ್ನೆತ್ತಿಕೊಂಡು ಇಷ್ಟಬಂದದ್ದನ್ನು ಭಕ್ಷಿಸುತ್ತಾ ಸಂಚರಿಸುವವನಾಗಿ)—ಎಂದೂ ಹೇಳಿರುವುದರಿಂದ, ಇವನು ಸಕಲ ಲೋಕಾಧಿ ಪತಿಯಲ್ಲದಿದ್ದಲ್ಲಿ ಇದೆಲ್ಲವೂ ಕೂಡದುದರಿಂದ, ಮುಕ್ತನೂ ಲೋಕಗಳೆಲ್ಲಕ್ಕೂ ನಿಯನ್ತೃ ವಾಗುತ್ತಾನೆ—ಎಂದು ಅಂಗೀಕರಿಸಬೇಕು—ಎಂದಲ್ಲಿ,—ಆ ವಾಕ್ಯದಲ್ಲಿ ಬ್ರಹ್ಮ ಲೋಕಾದಿ ಸಕಲ ಲೋಕಗಳಲ್ಲಿಯೂ ಇರುವ ಸಮಸ್ತ ಭೋಗಗಳನ್ನೂ, ಇಷ್ಟವಾದಲ್ಲಿ ಅನುಭವಿ ಸುತ್ತಾನೆಯೆಂದೇ ಹೇಳಿದೆ. ಅವುಗಳನ್ನು ನಿಯಮಿಸುತ್ತಾನೆಯೆಂದಲ್ಲ. ಆದ್ದರಿಂದ ಲೋಕನಿಯಮನಾದಿಗಳು ಕೂಡುವುದಿಲ್ಲ.

## ಸೂತ್ರ ೩—**ವಿಕಾರಾವರ್ತಿ ಚ ತಥಾಹಿ ಸ್ಥಿತಿಮಾಹ**

### ಸೂತ್ರಾರ್ಥ

[ವಿಕಾರಾವರ್ತಿ, ಚ] = ವಿಕಾರದಲ್ಲಿಲ್ಲದ ಬ್ರಹ್ಮಸ್ವರೂಪವೇ (ಮುಕ್ತನಿಗೆ ಭೋಗ್ಯ ವಾಗಿ ಹೇಳಲ್ಪಟ್ಟಿದೆ) [ತಥಾ ಸ್ಥಿತಿಂ] = ಅಂತಹ ಬ್ರಹ್ಮದಲ್ಲಿ ಇರುವಿಕೆಯನ್ನು [ಆಹ,ಹಿ] = ಹೇಳಿದೆಯಷ್ಟೆ!

**ವಿವರಣೆ**

ಉತ್ಪತ್ತಿ ಮುಂತಾದ ವಿಕಾರವುಳ್ಳ ಬ್ರಹ್ಮಲೋಕದಲ್ಲಿರುವ ಭೋಗಗಳನ್ನು ಮುಕ್ತ ಅನುಭವಿಸಬಹುದೋ?—ಎಂದಲ್ಲಿ—ಉತ್ಪತ್ತ್ಯಾದಿ ವಿಕಾರ ಶೂನ್ಯವಾಗಿ ಅನಂತಕಲ್ಯಾಣ ಗುಣಾಕರವಾಗಿ ಸಮಸ್ತ ವಿಭೂತಿಗಳೊಡನೆ ಕೂಡಿದ ಪರಮಾತ್ಮ ಸ್ವರೂಪವನ್ನೇ ಮುಕ್ತನಿಗೆ ಭೋಗ್ಯವನ್ನಾಗಿ ಹೇಳಿದೆ. ಈ ವಿಧವಾದ ಪರಮಾತ್ಮ ಸ್ವರೂಪದಲ್ಲಿ ಗುಣಗಳಿಗೆ ಹೇಗೋ ಹಾಗೆ, ಬ್ರಹ್ಮಲೋಕಾದಿ ವಿಭೂತಿಗಳೂ ಅಂತರ್ಗತಗಳಾದ್ದರಿಂದ ಪರಮಾತ್ಮ ಸ್ವರೂಪದಲ್ಲಿ ಸೇರಿದವೆಂದು, ಕಲ್ಯಾಣ ಗುಣಗಳ ಹಾಗೆ ವಿಭೂತಿಯನ್ನೂ ಅನುಭವಿಸಬಹುದು. ವಿಭೂತಿಯೊಂದಿಗೆ ಕೂಡಿದ ಬ್ರಹ್ಮವನ್ನು ಅನುಭವಿಸುವಾಗ, ಆ ವಿಭೂತಿಯಲ್ಲಿ ಸೇರಿದ ಬ್ರಹ್ಮಲೋಕಾದಿಗಳಲ್ಲಿ ಯಥೇಷ್ಟ ಸಂಚಾರವೂ ಯುಕ್ತ ವಾಗಿದೆ 'ಯದಾಹ್ಯೇವ್ಯಷ ಏತಸ್ಮಿನ್ ಅದೃಶ್ಯೇ ನಾತ್ಮ್ಯೇಽನಿರುಕ್ತೇಽನಿಲಯನೇಽ ಭಯಂ ಪ್ರತಿಷ್ಠಾಂವಿನ್ದತೇ ಅಥ ಸೋಽಭಯಂಗತೋ ಭವತಿ"—"ರಸೋವೈಸಃ ರಸಂಹ್ಯೇವಾಯಂಲಬ್ಧ್ವಾ ಆನಂದೀ ಭವತಿ"—ಇತ್ಯಾದಿ ಶ್ರುತಿಗಳೇ ಮುಕ್ತನು ಸವಿ ಭೂತಿಕ ಬ್ರಹ್ಮಾನುಭವವನ್ನು ಮಾಡುತ್ತಾನೆಯನ್ನುವುದಕ್ಕೆ ಪ್ರಮಾಣವೆನ್ನುತ್ತಾರೆ ಆದ್ದರಿಂದ ಸವಿಭೂತಿಕ ಬ್ರಹ್ಮವನ್ನು ಅನುಭವಿಸುವವನಾಗಿ ವಿಕಾರಗಳ ಅಂತರ್ವರ್ತಿ ಗಳಾದ ಆಧಿಕಾರಿಕರಾದ ಬ್ರಹ್ಮಾದಿಗಳ ಲೋಕಗಳಲ್ಲಿಯ ಭೋಗಗಳನ್ನೂ ಅನುಭವಿ ಸುತ್ತಾನೆಯೆಂದು "ಸರ್ವೇಷು ಲೋಕೇಷು ಕಾಮಚಾರಃ..."—ಇತ್ಯಾದಿಯಿಂದ ಹೇಳಿದೆ. ಆದ್ದರಿಂದ ಮುಕ್ತನಿಗೆ ಜಗದ್ವ್ಯಾಪಾರವಿಲ್ಲ.

## ಸೂತ್ರ ೪—ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ

**ಸೂತ್ರಾರ್ಥ**

[ಪ್ರತ್ಯಕ್ಷಾನುಮಾನೇ] = ('ಭೀಷಾಸ್ಮಾದ್ವಾತಃ ಪವತೇ'—ಪರಮಾತ್ಮನಿಗೆ ಹೆದರಿ ವಾಯು, ಸೂರ್ಯ, ಅಗ್ನಿ, ಇಂದ್ರ, ಯಮ, ಮುಂತಾದವರು ತಮ್ಮ ತಮ್ಮ ಕಾರ್ಯ ವನ್ನು ತಪ್ಪದೆ ಮಾಡುತ್ತಾರೆ. ಇತ್ಯಾದಿ)—ಶ್ರುತಿಗಳೂ, ("ಅಹಂ ಸರ್ವಸ್ಯ ಜಗತಃ ಪ್ರಭವಃ ಪ್ರಳಯಸ್ತಥಾ",—ನಾನೇ ಜಗತ್ತಿನ ಉತ್ಪತ್ತಿ, ಸ್ಥಿತಿ, ಪ್ರಳಯಗಳಿಗೆ ಕಾರಣ — ಎಂದು—ಪರಮಪುರುಷನು ಹೇಳುವ ಗೀತೆ ಮುಂತಾದ) ಸ್ಮೃತಿಗಳೂ, [ಏವಂ] = ಹೀಗೆ ಪರಮಾತ್ಮನೇ ಜಗತ್ಕಾರಣನಾದ ಸರ್ವೇಶ್ವರ—ಎಂಬ ಅರ್ಥವನ್ನು [ದರ್ಶಯತಃ ಚ] = ತೋರಿಸುತ್ತವೆ. ಪರಮಾತ್ಮನೇ ಜಗತ್ಕಾರಣನೆನ್ನುವುದಕ್ಕೆ ಶ್ರುತಿ ಸ್ಮೃತಿಗಳೇ ಪ್ರಮಾಣವಂದು ತಾತ್ಪರ್ಯ. ಆದ್ದರಿಂದ ಮುಕ್ತನಿಗೆ ಸತ್ಯಸಂಕಲ್ಪತ್ವ ಮತ್ತು ಪರಮಪುರುಷ ಸಾಮ್ಯವು—ಜಗದ್ವ್ಯಾಪಾರ ವರ್ಜ.

## ಸೂತ್ರ ೫—ಭೋಗಮಾತ್ರ ಸಾಮ್ಯಲಿಂಗಾ ಚ್ಚ

**ಸೂತ್ರಾರ್ಥ**

'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ",—ಆ ಮುಕ್ತನು ಪರಮಾತ್ಮನೂ ತಾನೂ ಆಗಿ, ಪರಮಾತ್ಮ ಸ್ವರೂಪವನ್ನೂ, ಕಲ್ಯಾಣ ಗುಣಗಳನ್ನೂ ಅನುಭವಿಸುತ್ತಾನೆ—ಎಂದು ಅನುಭವ ಮಾತ್ರದಲ್ಲಿ ಪರಮಾತ್ಮನೊಂದಿಗೆ

ಮುಕ್ತನಿಗೆ ಸಾಮ್ಯವನ್ನು ಹೇಳುವ ಹೇತುವಿನಿಂದಲೂ, (ಮುಕ್ತನಿಗೆ ಜಗದ್ವ್ಯಾಪಾರವಿಲ್ಲ). ಪರಮಾತ್ಮ ಆನಂದ ಸ್ವರೂಪಿಯಾದ್ದರಿಂದ ತನಗೂ ಇತರರಿಗೂ ಸಹ ಅನುಭಾವ್ಯನಾಗುತ್ತಾನೆ.

## ಸೂತ್ರ ೬—ಅನಾವೃತ್ತಿಶ್ಶಬ್ದಾದನಾವೃತ್ತಿಶ್ಶಬ್ದಾತ್

**ಸೂತ್ರಾರ್ಥ**

[ಶಬ್ದಾತ್] = ಶ್ರುತಿ ವಾಕ್ಯದಿಂದ, [ಅನಾವೃತ್ತಿಃ] = ಮತ್ತೆ (ಸಂಸಾರದಲ್ಲಿ) ಬರದೇ ಇರುವುದು, ಸಿದ್ಧಿಸುವುದು.

ಮುಕ್ತನ ಐಶ್ವರ್ಯ ಪರಮಪುರುಷನಿಗೆ ಅಧೀನವೆಂದರು. ಈ ಮುಕ್ತೈಶ್ವರ್ಯವನ್ನು ಕರುಣಿಸಿದ ಆ ಪರಮಪುರುಷ ಪರಮ ಸ್ವತಂತ್ರನಾದ್ದರಿಂದ ಮತ್ತೆ ಯಾವಾಗಲಾದರೂ ಮುಕ್ತನನ್ನು ಸಂಸಾರಕ್ಕೂ ಹಿಂತಿರುಗಿಸಬಹುದಲ್ಲವೆ?—ಎಂದಲ್ಲಿ, ಅದಕ್ಕೆ ಉತ್ತರ;—ಆ ಪರಮಪುರುಷನು ನಿಖಿಲಹೇಯ ಪ್ರತ್ಯನೀಕ, ಸಮಸ್ತ ಕಲ್ಯಾಣ ಗುಣಾಕರ, ಸಮಸ್ತ ವಸ್ತು ವಿಲಕ್ಷಣ, ಆಶ್ರಿತವಾತ್ಸಲ್ಯೈಕಜಲಧಿ ಪರಮ ಕಾರುಣಿಕ, ಸರ್ವಜ್ಞ, ಸತ್ಯಸಂಕಲ್ಪ— ನಿಖಿಲ ಜಗತ್ಕಾರಣ, ಸರ್ವ ನಿಯಂತೃ ಎಂದು ಇತ್ಯಾದಿಯಾಗಿ ಹೇಳುವ ಶಾಸ್ತ್ರದಿಂದಲೇ, ಆ ಮುಕ್ತರಾದವರು ಮಾಡಿದ್ದ ತನ್ನ ಆರಾಧನರೂಪವಾದ ಉಪಾಸನದಿಂದ ಪ್ರೀತನಾದ ಆ ಭಗವಂತ ಅನಾದಿಕಾಲದಿಂದ ಪ್ರವೃತ್ತವಾದ ಅವರ ಅನಂತ ದುಸ್ತರ ಕರ್ಮ ಸಂಚಯರೂಪವಾದ ಅವಿದ್ಯೆಯನ್ನು ಹೋಗಲಾಡಿಸಿ, ತನ್ನ ಯಾಥಾತ್ಮ್ಯಾನುಭವರೂಪವಾದ ಅನವಧಿಕಾತಿಶಯಾನಂದವನ್ನೂ ಕೊಟ್ಟು ಮತ್ತೆ ಎಂದೂ ಅವರನ್ನು ಸಂಸಾರಕ್ಕೆ ಹಿಂತಿರುಗಿಸುವುದಿಲ್ಲವೆಂದೂ ತಿಳಿಯುತ್ತೆ. "ಸ ಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ, ನ ಚ ಪುನರಾವರ್ತತೇ ನ ಚ ಪುನರಾವರ್ತತೇ"—ಇತ್ಯಾದಿಯೇ ಆ ಶಾಸ್ತ್ರ. ಹಾಗೆಯೇ ಭಗವಂತ ತಾನೂ,

"ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಂ ।
ನಾಪ್ನುವನ್ತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂಗತಾಃ ॥
ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।
ಮಾಮುಪೇತ್ಯತು ಕೌನ್ತೇಯ ಪುನರ್ಜನ್ಮ ನ ವಿದ್ಯತೇ ॥"—ಇತ್ಯಾದಿಯಾಗಿ,

ತನ್ನನ್ನು ಸೇರಿದವರೆಂದೂ ಮತ್ತೆ ದುಃಖಸಾಗರವಾದ ಸಂಸಾರಕ್ಕೆ ಮರಳುವುದಿಲ್ಲವೆಂಬುದಾಗಿ ಹೇಳಿದ್ದಾನೆ. ಆ ಪರಮಪುರುಷ ಸತ್ಯಸಂಕಲ್ಪ. ಜ್ಞಾನಿಗೆ ತಾನು 'ಅತ್ಯರ್ಥಪ್ರಿಯ''—ಅವನೂ ತನಗೆ ಅಷ್ಟೇ ಪ್ರಿಯ. ಅವನು ಅತ್ಯುದಾರಿ, ತನಗೆ ಪ್ರಾಣಭೂತ, ಯುಕ್ತಾತ್ಮ, ತನ್ನನ್ನೇ ಅನುತ್ತಮ ಗತಿಯನ್ನಾಗಿ ತಿಳಿದಿರುವವನು. ಅನೇಕಾನೇಕ ಜನ್ಮಗಳ ನಂತರ ಈ ಜನ್ಮವನ್ನು ಪಡೆದು ತನ್ನನ್ನು ಆಶ್ರಯಿಸಿದ್ದಾನೆ. ತಾನೇ ಅವನಿಗೆ ಎಲ್ಲವೂ—ಎಂದು ತಿಳಿದಿರುವ ಅಂಥ ಮಹಾತ್ಮನು ಬಹುದುರ್ಲಭ—ಇತ್ಯಾದಿಯಾಗಿ ತಾನೇ ಆ ಮುಕ್ತನನ್ನು ಕೊಂಡಾಡಿದ್ದಾನೆ. "ಚಿತಃ ಪರಮಚಿಲ್ಲಾಭಃ ಚಿಲ್ಲಾಭಸ್ತು ಪರಾತ್ಮನಃ"—ಅಂದರೆ, ಈ ಜೀವಾತ್ಮ—ಪರಮಾತ್ಮರ

ಪರಸ್ಪರ ಸಂಶ್ಲೇಷ ಇವರಿಬ್ಬರಿಗೂ ಪರಮ ಲಾಭವೆನಿಸಿದೆ. ಇಂತಹ ಜ್ಞಾನಿಯನ್ನು ದುಃಖಸಾಗರವಾದ ಸಂಸಾರದಿಂದ ಮೇಲಕ್ಕೆ ಎತ್ತಿ ತನ್ನ ಬಳಿ ಬರಮಾಡಿಕೊಂಡ ಸತ್ಯಸಂಕಲ್ಪನಾದ ಪರಮಾತ್ಮನಿಗೆ ಮತ್ತೆಂದೂ ಅವನನ್ನು ಹಿಂದಕ್ಕೆ ಕಳುಹಿಸುವ ಇಚ್ಛೆ ಉದಿಸುವ ಸಂಭವವಿಲ್ಲ. ಆದ್ದರಿಂದ ಅವನಿಂದ ಮುಕ್ತನಿಗೆ ಸಂಸಾರಪ್ರಾಪ್ತಿಯು ಶಂಕೆಗೆ ಆಸ್ಪದವಿಲ್ಲ.

ಒಂದು ವೇಳೆ, ಮುಕ್ತನೇ ಮತ್ತೆಯೂ ಸಂಸಾರಕ್ಕೇ ಹಿಂತಿರುಗಲು ಇಷ್ಟ ಪಟ್ಟರೋ?—ಎಂದಲ್ಲಿ, ಅಂತಹ ಇಚ್ಛೆಯನ್ನು ಹುಟ್ಟಿಸುವ ಕರ್ಮಬಂಧ ನಿಶ್ಶೇಷವಾಗಿ ಉಚ್ಛಿನ್ನವಾಗಿ ಅವನು ಅಸಂಕುಚಿತ ಜ್ಞಾನನೂ ಪರಬ್ರಹ್ಮಾನುಭವೈಕ ಸ್ವಭಾವನೂ ತದೇಕಪ್ರಿಯನೂ ಆಗಿ ಎಷ್ಟೋ ಕಾಲದಿಂದ ಬಯಸಿದ್ದು, ಲಭಿಸಿದ ಪರಮ ಪುರುಷಾರ್ಥದಿಂದ ಪುನಃ ಪುನಃ, "ಹಾವು ಹಾವು ಹಾವು"—ಇತ್ಯಾದಿಯಾಗಿ ಆನಂದಿ ಸುತ್ತಿದ್ದಾನೆ. ಹಿಂದೆ ತಾನು ಅನುಭವಿಸುತ್ತಿದ್ದ ಸಂಸಾರದ ಕ್ರೌರ್ಯವನ್ನು ಭಗವಂತನಲ್ಲಿ ಅರಿಕೆಮಾಡಿ, ಅದರಿಂದ ವಿಮೋಚನೆಯನ್ನು ಪಡೆದು, ಭಗವದ್ವಿಷಯದಲ್ಲಿ ಆಶಾಭಿ ನಿವೇಶದ ವೃದ್ಧಿಯಿಂದ,

"ಒಳಿವಿಲ್ ಕಾಲಮೆಲ್ಲಾಮುಡನಾಯ್‌ಮನ್ನಿ
ವಳುವಿಲಾವಡಿಮೈ ಶೈಯ್ಯವೇಂಡುಂನಾಮ್",—

ಎಂಬಂತೆ, ತಾನು ಮನೋರಥಿಸಿದ್ದಂತೆಯೇ, ಸರ್ವದೇಶ—ಸರ್ವಕಾಲ—ಸರ್ವಾವಸ್ಥೋ—ಚಿತ ಸರ್ವವಿಧ ಕೈಂಕರ್ಯಗಳನ್ನೂ ಪಡೆದು ಸ್ವಾಭೀಷ್ಟಲಾಭದಿಂದ "ಚಿರಸ್ಯಪೂರ್ಣಃ ಖಲುಮೇಮನೋರಥಃ" —"ಚಿರಾಯಮೇಕೂಲಮಿವಾಸಿ ಲಬ್ಧಃ" ಎಂಬಂತೆ ತನ್ನ ಚಿರಾಭಿಲಷಿತ ಮನೋರಥವು ಈಗ ಪರಿಪೂರ್ಣವಾದ್ದರಿಂದ, ಶಾಂತೋತ್ಕಂಠನಾಗಿ, ಮತ್ತೆಯೆಂದೂ ಅಲ್ಲಿಂದ ತನ್ನನ್ನು ಅಗಲಿಸಿ ದುಃಖ ಭೂಯಿಷ್ಠವಾದ ಸಂಸಾರ ಸಾಗರದಲ್ಲಿ ತಳ್ಳಕೂಡದೆಂದು ಆರ್ತಸ್ವರದಿಂದ ಆ ಭಗವಂತನ ಮೇಲೆಯೂ ಅವನ ದಿವ್ಯ ಮಹಿಷಿಯ ಮೇಲೆಯೂ ಆಣೆಯಿಟ್ಟು ನಿರ್ಬಂಧಿಸಿಕೊಂಡು, ನಿರಸ್ತ ಸಮಸ್ತ ಪ್ರತಿಬಂಧಕನಾಗಿ ಅವನನ್ನೇ ಪರಿಪೂರ್ಣವಾಗಿ ಮೇಲ್ಮೇಲೆ ಅನುಭವಿಸಬೇಕೆಂಬ ಉತ್ಕಂಠಾತಿಶಯ ಉತ್ಕೂಲವಾಗಿರುವ ಆ ಮುಕ್ತನಿಗೆ ಮತ್ತೆ ಹೇಯವಾದ ಸಂಸಾರಕ್ಕೆ ಮರಳುವ ಇಚ್ಛೆಯಾದರೂ ಹೇಗೆ ಸಂಭವಿಸೀತು? ಆದ್ದರಿಂದ ಮುಕ್ತನ ಸ್ವೇಚ್ಛೆ ಯಿಂದಾಗಲಿ, ಪರಮಾತ್ಮ ಸಂಕಲ್ಪದಿಂದಾಗಲಿ, ಶಾಸ್ತ್ರದಿಂದಲಾಗಲಿ, ಮುಕ್ತನಿಗೆ ಪುನರಾ ವೃತ್ತಿ ಹೇಗೂ ಇಲ್ಲವಾದ್ದರಿಂದ, ಪರಮಪದದಲ್ಲಿದ್ದುಕೊಂಡೇ, ನಿರಸ್ತಸಮಸ್ತ ಹೇಯನೂ, ಸಮಸ್ತ ಕಲ್ಯಾಣ ಗುಣಾಕರನೂ ನಿಸ್ಸಮಾಭ್ಯಧಿಕನೂ, ಅನಂತ ಗರುಡ ವಿಷ್ವಕ್ಸೇನಾದಿ ಸಕಲ ಪರಿಜನ ಸಂಸೇವ್ಯಮಾನನೂ, ಶ್ರೀ—ಭೂ—ನೀಳಾದಿ ದಿವ್ಯ ಮಹಿಷೀಸಮೇತನೂ, ಉಭಯ ವಿಭೂತಿನಾಥನೂ ಆಗಿ ಶ್ರೀವೈಕುಂಠ ದಿವ್ಯ ನಗರದಲ್ಲಿ ದಿವ್ಯ ಮಹಾಮಣಿ ಮಂಟಪದಲ್ಲಿ ಆದಿಶೇಷನ ಮೇಲೆ ಆಸೀನನಾಗಿರುವ ಅಚಿಂತ್ಯಾತ್ಮನಾದ ಶ್ರೀಮನ್ನಾರಾಯಣನನ್ನು ಅನವರತವೂ ಅನುಭವಿಸುತ್ತಾ ಅಮೃತ ಸಾಗರಾಂತರ್ನಿಮಗ್ನನಾಗಿ ಅಪರಿಚ್ಛಿನ್ನ ಬ್ರಹ್ಮಾನಂದದಿಂದ, ತದನುಭವ ಪರೀವಾಹ

ರೂಪವಾದ ತತ್ಕೈಂಕರ್ಯಗಳನ್ನು ಮಾಡಿಕೊಂಡು ಪರಮಪುರುಷ ಸಾಯುಜ್ಯದಿಂದ ಅತ್ಯುಜ್ಜ್ವಲನಾಗಿ ಬಾಳುತ್ತಾನೆ—ಎಂದಿದ್ದಾರೆ.

"ಅನಾವೃತ್ತಿಶ್ಶಬ್ದಾತ್, ಅನಾವೃತ್ತಿಶ್ಶಬ್ದಾತ್",—ಎಂದು ಎರಡು ಸಲ ಸೂತ್ರ ವನ್ನು ಆವೃತ್ತಿಮಾಡಿರುವುದು ಶಾಸ್ತ್ರ ಮುಗಿಯಿತೆಂದು ಸೂಚಿಸುತ್ತದೆ. ಈ ಸೂತ್ರ ತಾನು ಆವೃತ್ತವಾಗಿದ್ದುಕೊಂಡು ಮುಕ್ತನಿಗೆ ಶಾಶ್ವತವಾದ ಅನಾವೃತ್ತಿಯನ್ನೇ ಸಾರುತ್ತದೆ.

ಈ ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿ ಪ್ರತಿಪಾದಿತವಾದ ಕ್ರಮದಿಂದ, "ಯೇನಾ ಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಂ"—ಎಂಬಂತೆ, ಸದಾಚಾರ್ಯರಿಂದ ವೇದ್ಯಾರ್ಥಗಳೆಲ್ಲವನ್ನೂ ತಿಳಿದವನಾದ ಅಧಿಕಾರಿಯು ತಾಪತ್ರಯ ಭಯದಿಂದ, ಅದರ ಶಾಂತಿಗಾಗಿ ಬ್ರಹ್ಮ ಜಿಜ್ಞಾಸೆ ಯಾವಾಗ ಉದಿಸು ವುದೋ ಆಗಲೇ ಪರಾವರ ತತ್ತ್ವಗಳ ವಿವೇಚನೆಯಿಂದ, ಕರ್ಮ ಮೂಲಕ ಜನ್ಮ ಜರಾಮರಣಾದಿ ಚಕ್ರರೂಪ ಸಂಸಾರದಲ್ಲಿ ತೀವ್ರಭೀತಿಯುಳ್ಳವನಾಗಿಯೂ ಪರಮಾತ್ಮ ನನ್ನು ಸೇರುವುದರಲ್ಲಿ ಸುತೀವ್ರವಾದ ಅಭಿಲಾಷೆಯುಳ್ಳವನಾಗಿಯೂ, ಸ್ವವರ್ಣಾ ಶ್ರಮೋಚಿತವಾದ ವೈದಿಕ ಕರ್ಮಗಳನ್ನು ಫಲಾಭಿಸಂಧಿರಹಿತವಾಗಿಯೂ ಪರಮ ಪುರುಷನ ಆರಾಧನ ರೂಪವಾಗಿಯೂ ಆತ್ಮಯಾಥಾತ್ಮ್ಯಜ್ಞಾನ ಪೂರ್ವಕವಾಗಿ ನಿತ್ಯವೂ ಆಚರಿಸುತ್ತಾ ಶಮದಮಾದಿ ಪರಿಕರಯುಕ್ತನೂ ಆಗಿ ಈ ಶಾಸ್ತ್ರದಲ್ಲಿ ಹೇಳಿರುವ ಮೂವತ್ತೆರಡು ವಿಧವಾದ ಪರಬ್ರಹ್ಮೋಪಾಸನಗಳಲ್ಲಿ ಯಥಾರುಚಿ, ಒಂದನ್ನು ಅಂಗಿಯಾಗಿ ಅನುಷ್ಠಿಸಿ, ಸಮಸ್ತ ಪ್ರತಿಬನ್ಧಕ ವರ್ಗಗಳ ನಿವೃತ್ತಿಯನ್ನು ಹೊಂದಿ, ಪರಬ್ರಹ್ಮದ ಸಾಯುಜ್ಯವನ್ನು ಪಡೆದು, ವೈಕುಂಠ ವೈಮಾನಿಕರುಗಳಲ್ಲಿ ತಾನೂ ಒಬ್ಬನಾಗಿದ್ದುಕೊಂಡು ನಿರುಪಾಧಿಕ ಮಹಾನಂದ ಬ್ರಹ್ಮಾನಂದದ ಪರೀವಾಹ ರೂಪವಾಗಿ ಪರವಾಸುದೇವನ ಪಾದಾರವಿಂದ ಪರಿಚಾರಕನಾಗಿರುತ್ತಾನೆ.—ಎಂಬುದು ಈ ಶಾಸ್ತ್ರದ ನಾಲ್ಕು ಅಧ್ಯಾಯಗಳ ಸಾರಾರ್ಥ.

ಹೀಗೆ ನಿಸ್ಸಂದೇಹವಾಗಿಯೇ ಸಕಲ ಅರ್ಥಗಳನ್ನೂ ಹೇಳಿ, ಇದರ ಮೇಲೆಯೂ ಎಲ್ಲಿಯಾದರೂ ಸಂದೇಹ ಉಳಿದಿರುವಲ್ಲಿ, "ಅನ್ಯದೀಕ್ಷ್ಯಂ ವಿಮುಕ್ತೌ",—ಅಂದರೆ, ವಿಮುಕ್ತಿದಶೆಯಲ್ಲಿ ವಿಶದವಾಗಿ ಅದನ್ನು ನೋಡತಕ್ಕದ್ದೆಂದು ಶ್ರೀಮದಾಚಾರ್ಯರು ಹೃದಯಂಗಮವಾದ ತಮ್ಮ ಅಧಿಕರಣ ಸಾರಾವಳಿಯಲ್ಲಿ ಅನುಗ್ರಹಿಸಿ ಶಾಸ್ತ್ರವನ್ನು ನಿಗಮಿಸಿದ್ದಾರೆ.

ಶ್ರೀ ಭಾಷ್ಯಾಮೃತಸಾರ—ಸಂಪೂರ್ಣ

ನಮಃ ಪ್ರಣವಶೋಭಿತಂ ನವಕಷಾಯಖಂಡಾಂಬರಂ
ತ್ರಿದಂಡಪರಿಮಂಡಿತಂ ತ್ರಿವಿಧತತ್ತ್ವನಿರ್ವಾಹಕಂ ।
ದಯಾಂಚಿತದೃಗಂಚಲಂ ದಳಿತವಾದಿವಾಗ್ವೈಭವಂ
ಶಮಾದಿಗುಣಸಾಗರಂ ಶರಣಮೇಮಿ ರಾಮಾನುಜಂ ॥

ಇತಿ

**ಶಮ್**—

ಶ್ರೀ ಭಗವತೇಭಾಷ್ಯಕಾರಾಯ ಮಹಾದೇಶಿಕಾಯ ನಮಃ

—ಶ್ರೀ ಶ್ರೀನಿವಾಸಃ ಪ್ರೀಯತಾಮ್—

# ಶುದ್ಧಾಶುದ್ಧಗಳ ಪಟ್ಟಿ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 1 | 27 | ಮಾಶಾಃ | ಮಾಂ |
| 4 | 21 | ಸ್ಥಾನರೋ | ಸ್ಥಾವರೋ |
| 10 | 21 | ಲಕ್ಷ್ಮೀ | ಲಕ್ಷೀ |
| 43 | 8 | ಕೈವಲ್ಯಾಗಳ | ಕೈವಲ್ಯಾದಿಗಳ |
| 45 | 17 | ಮೇಧಾಯ | ವೇಧಾಯ |
| 55 | 18 | ಸನತ್ತ್ವೇ | ಸಂಧತ್ತೆ |
| 58 | 18 | ಬ್ರಹ್ಮಪಾವ್ಯತಿರಿಕ್ತ | ಬ್ರಹ್ಮವ್ಯತಿರಿಕ್ತ |
| 61 | 17 | ಎಬ | ಎಂಬ |
| 70 | 27 | ಕಾಕ್ಷೇಯ | ಕೌಕ್ಷೇಯ |
| 77 | 22 | ವಿಷ್ಣುತ್ಪತ್ತಿ | ವಿಷ್ಣೂತ್ಪತ್ತಿ |
| 78 | 3 | ಎದಂರ್ಥ | ಎಂದರ್ಥ |
| 78 | 21 | ಶ್ರುತಪಾ | ಶ್ರುತವಾಗಿಲ್ಲ |
| 90 | 20 | ತೇನೋಪಾದ್ಘಾತ | ತೇನೋಪೋದ್ಘಾತ |
| 95 | 9 | ಉಪಾಸ್ಟ್ವೇ | ಉಪಾಸ್ತೆ |
| 99 | 33 | ಂದು | ಎಂದು |
| 104 | 32 | ಸ್ವೇವ ಹಿಮ್ನಿ | ಸ್ವೇಮಹಿಮ್ನಿ |
| 113 | 30 | ದಡೆಯುವನು | ಪಡೆಯುವನು |
| 119 | 4 | ಶಕ್ತ್ಯೈ | ಶಕ್ತ್ಯೈಕ್ಯ |
| 131 | 15 | ಉಪಾಸ | ಉಪಾಸ್ಯ |
| 131 | 30 | ಆತ | ಆತ್ಮ |
| 140 | 13 | ಸವಮೂಹ | ಸಮೂಹ |
| 141 | 22 | ಭುಂಕ್ತೇಃ | ಭುಂಕ್ತೇಃ |
| 152 | 30 | ಸ್ಪೃಷ್ಟ್ವೋದ್ಗಾಯೇತ್ | ಸ್ಪೃಷ್ಟ್ವೋದ್ಗಾಯೇತ್ |
| 158 | 13 | ಕಾರ್ಯದಲ್ಲಿ | ಕಾರಣದಲ್ಲಿ |
| 158 | 23 | ಸೂತ್ರ-೨ | ಸೂತ್ರ-೬ |
| 158 | 33 | ಜಗದೂಪ್ರ | ಜಗದ್ರೂಪ |
| 159 | 15 | ಇರುವುದೇ | ಇರುವಿಕೆ |
| 162 | 11 | ಬ್ರಹ್ಮಕ್ಕೆ ರೂಪ | ಬ್ರಹ್ಮಕ್ಕೆ ಸ್ವರೂಪ |
| 169 | 20 | ಆಧಿಭಾತಿಕಾ | ಆಧಿಭೌತಿಕಾ |
| 179 | 28 | ಪಾದ ೩ | ಪಾದ ೨ |
| 213 | 22 | ಜನ್ಮದರ್ಶನಾತ್ | ಜನ್ಮಾದರ್ಶನಾತ್ |
| 272 | 17 | ಪರತತ್ವ | ಪರತ್ವ |
| 276 | 21 | ಮಂಡಕ | ಮುಂಡಕ |
| 321 | 18 | ಯಮೇನ | ನಿಯಮೇನ |
| 325 | 1 | ಪ್ರಫಲದ | ಫಲಪ್ರದ |
| 326 | 10 | ಬಾದರಾಯಣಸ್ಯೈವಂ | ಬಾದರಾಯಣಸ್ಯೈವಂ |

ಮೈಸೂರು ಜಿಲ್ಲೆ ಟಿ. ನರಸೀಪುರ ತಾಲ್ಲೂಕ್ ತಲಕಾಡು ಗ್ರಾಮದಲ್ಲಿ 1903ರಲ್ಲಿ ಜನಿಸಿದ ಕೋಟಿಕನ್ಯಾದಾನಂ ಶ್ರೀ ಕೃಷ್ಣತಾತಾಚಾರ್ಯರು ತಮ್ಮ ತಂದೆ ಶ್ರೀನಿವಾಸ ತಾತಾಚಾರ್ಯರವರಿಂದ ಬಾಲಪಾಠ, ವೇದಪಾಠ, ಪ್ರಬಂಧಗಳ ಸಂತೆ ಇವನ್ನು, ಸಾಂಪ್ರದಾಯಿಕವಾಗಿ ಕಲಿತು, ತಲಕಾಡಿನ ಕವಿ ಕುಲ ಶಿರೋಮಣಿ ಗೋಪಾಲದೇಶಿಕಾಚಾರ್ಯರವರಲ್ಲಿ ಸಂಸ್ಕೃತ ಕಾವ್ಯ ನಾಟಕ ಸಾಹಿತ್ಯಗಳನ್ನು ಕಲಿತು, 1928ರಲ್ಲಿ ಸಂಸ್ಕೃತ ಐಚ್ಛಿಕ ಬಿ.ಎ. ಪದವಿ ಪಡೆದರು. ಬೆಂಗಳೂರು ನ್ಯಾಷನಲ್ ಹೈಸ್ಕೂಲ್ ಮತ್ತು ಕಾಲೇಜುಗಳಲ್ಲಿ ಸಂಸ್ಕೃತ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು. ವೇದಾಂತವನ್ನು ಮೈಸೂರು ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ಕಲಿತು, ವಿದ್ವಾಂಸರಾಗಿ ದ್ವಾರಕಾ ಶಾರದಾ ಪೀಠಾಧಿಪತಿಗಳಿಂದ 1944ರಲ್ಲಿ ವೇದಾಂತ ಸಾರಜ್ಞ ಎಂಬ ಬಿರುದನ್ನೂ 1948ರಲ್ಲಿ ಕಾಂಚೀಪುರದ ಕೊಡಿಯಾಲಂ ಸ್ವಾಮಿಗಳಿಂದ 'ವಿದ್ವನ್ಮಣಿ' ಎಂಬ ಬಿರುದನ್ನೂ ಪಡೆದರು.

ಇವರ ಕನ್ನಡ ಕೃತಿಗಳು—ಭಗವದ್ರಾಮಾನುಜ ಕೃತ ಗೀತಾಭಾಷ್ಯದ ಅನುವಾದವಾದ ಶ್ರೀ ಗೀತಾರ್ಥ ದೀಪಿಕಾ, ಶ್ರೀ ತಿರುಪ್ಪಾವೈ ರಸಾಸ್ವಾದಿನೀ, ಶ್ರೀ ರಹಸ್ಯತ್ರಯ ಸಾರಸಂಗ್ರಹ, ಶ್ರೀ ಗೋಪಾಲವಿಂಶತಿ ಭಾವಪ್ರದೀಪಿಕಾ, ಶ್ರೀ ಶಠಕೋಪಸಂಭವರ ಆಜಾನಸಿದ್ಧ ಮಹಿಮೆ, ಶ್ರೀ ದಯಾ ಶತಕ ವಿಮರ್ಶೆ, ಶ್ರೀ ಗರುಡದಂಡಕ, ಶ್ರೀ ದಶಾವತಾರ ಸ್ತೋತ್ರ, ಶ್ರೀಪಾದುಕಾ ಸಹಸ್ರ, ಶ್ರೀ ಯತಿರಾಜ ಸಪ್ತತಿ, ಪೆರುಮಾಳ್ ತಿರುಮೊಳಿ, ನಾಚ್ಚಿಯಾರ್ ತಿರುಮೊಳಿ ಇವು. ಸಂಸ್ಕೃತ ಕೃತಿಗಳು—ಶ್ರೀ ಮಹಾ-ವೀರ ವೈಭವ, ಶ್ರೀ ಘಂಟಾಗುರುಸ್ತವ, ಶ್ರೀ ಆಂಡವಾಭ್ಯುದಯ, ಶ್ರೀ ಅವತಾರ ರಹಸ್ಯ, ಶ್ರೀ ಅರ್ಚಾ-ವತಾರ ಮಾಹಾತ್ಮ್ಯ—ಇವು. ಮತ್ತು ಆಂಗ್ಲಾನುವಾದ—ಶ್ರೀ ದೇಶಿಕರ್‌ರವರ ಯಾದವಾಭ್ಯುದಯ ಮಹಾಕಾವ್ಯ. ಇವುಗಳು ಇವರ ವಿಶಿಷ್ಟ ಕೃತಿಗಳು.

ಶ್ರೀ ಕೋಟಿಕನ್ಯಾದಾನಂ ಕೃಷ್ಣತಾತಾಚಾರ್ಯರು ತಮಗೆ ಲಭಿಸಿದ ಎಲ್ಲಾ ಆಧಾರಗಳನ್ನೂ, ಪ್ರಮಾಣಗಳನ್ನೂ, ದಿವ್ಯಪ್ರಬಂಧಗಳನ್ನೂ ಅಧ್ಯಯನ ಮಾಡಿ, ಬ್ರಹ್ಮಸೂತ್ರಗಳಿಗೆ ಭಗವದ್ ರಾಮಾನುಜರು ಮಾಡಿದ ಶ್ರೀಭಾಷ್ಯದ ಎಲ್ಲ ಅಧಿಕರಣಗಳ ಅರ್ಥವನ್ನೂ ವಿವರಿಸಿ, ಒಂದೊಂದಕ್ಕೂ ವಿಷಯವಾಕ್ಯ, ಪ್ರತಿಯೊಂದು ಸೂತ್ರಕ್ಕೂ ಪ್ರತಿಪದಾರ್ಥ ಮತ್ತು ವಿವರಣೆಗಳನ್ನು ನೀಡಿರುವ ಈ ಗ್ರಂಥವನ್ನು ಗ್ರಂಥಕರ್ತರು ಶಾಸ್ತ್ರಪ್ರೌಢಿಮೆಯಿಂದ ರಚಿಸಿರುತ್ತಾರೆ.

ಶ್ರೀಭಾಷ್ಯವನ್ನು ಪಠಿಸಿ ಆತ್ಮೋಜ್ಜೀವನ ಮಾಡಿಕೊಳ್ಳುವ ಉತ್ಕಟ ಅಭಿಲಾಷೆ ಇದ್ದು, ಆ ಮೂಲಗ್ರಂಥವನ್ನು ಗ್ರಹಿಸಲು ಬೇಕಾದ ಬುದ್ಧಿವೈಭವ, ಕಾಲಾವಕಾಶಗಳಿಲ್ಲದ ಜನಸಾಮಾನ್ಯರಿಗೆ ಈ ಗ್ರಂಥ ಅತ್ಯುಪಕಾರಿಯಾದದ್ದು.

*Copies can be had from the Author and the Editor*

ಸಂಪಾದಕರ ವಿಳಾಸ—ಶ್ರೀ ಎಂ. ಆರ್. ಸಂಪತ್ಕುಮಾರ ಭಟ್ಟಾಚಾರ್ಯ
ತುಳಸೀ ರಾಮದಾಸ ಮಠ, ಫ್ರೇಜರ್ ಟೌನ್
ಬೆಂಗಳೂರು